ಸ್ವಾಮಿ ವಿವೇಕಾನಂದರ ಸಮಗ್ರ ಜೀವನ ಚರಿತೆ

(ಮೂರು ಸಂಪುಟಗಳಲ್ಲಿ)

ಸಂಪುಟ ೧

# ವೀರಸಂನ್ಯಾಸಿ ವಿವೇಕಾನಂದ

ಸ್ವಾಮಿ ಪುರುಷೋತ್ತಮಾನಂದ



ಶ್ರೀರಾಮಕೃಷ್ಣಾಶ್ರಮ
ಬೆಂಗಳೂರು

'Veera Sannyasi Vivekananada'—the first of the three parts of a comprehensive biography of Swami Vivekananda in Kannada by Swami Purushottamananda. Published by Swami Harshananda, President, Sri Ramakrishna Ashrama, Bangalore–560 019.
Fourth (Revised) Edition: January, 1992; Pp. xii + 328

Price: Deluxe Rs. 50/- Ordinary Rs. 30/-



ಪ್ರಥಮ ಮುದ್ರಣ: ಜನವರಿ 1986, 5000 ಪ್ರತಿಗಳು
ದ್ವಿತೀಯ ಮುದ್ರಣ: ಏಪ್ರಿಲ್ 1986, 7000 ಪ್ರತಿಗಳು
ತೃತೀಯ ಮುದ್ರಣ: ಮಾರ್ಚ್ 1988, 2000 ಪ್ರತಿಗಳು
ಚತುರ್ಥ (ಪರಿಷ್ಕೃತ) ಮುದ್ರಣ: ಜನವರಿ 1992, 10000 ಪ್ರತಿಗಳು



ಸ್ವಾಮಿ ವಿವೇಕಾನಂದರ ಸಮಗ್ರ ಜೀವನ ಚರಿತೆಯು
ಮೂರು ಸಂಪುಟಗಳು

ಸಂ. ೧ ವೀರಸಂನ್ಯಾಸಿ ವಿವೇಕಾನಂದ
ಸಂ. ೨ ವಿಶ್ವವಿಜೇತ ವಿವೇಕಾನಂದ
ಸಂ. ೩ ವಿಶ್ವಮಾನವ ವಿವೇಕಾನಂದ

ಬೆಲೆ: ಸಾಧಾರಣ ಪ್ರತಿ : ರೂ. 30/-
ಉತ್ತಮ ಪ್ರತಿ : ರೂ. 50/-



ಮುದ್ರಣ
ಶ್ರೀ ನಿತ್ಯಾನಂದ ಕಾಂಪ್ಯೂಗ್ರಾಫಿಕ್ಸ್
ಬೆಂಗಳೂರು-50, ಫೋನ್: 626027

# ಚತುರ್ಥ ಮುದ್ರಣದ ಮುನ್ನುಡಿ

ವೀರಸಂನ್ಯಾಸಿ ವಿವೇಕಾನಂದರು ಮೊದಲು ತಮ್ಮ ಶ್ರೀಗುರು ಪರಮಹಂಸರ ಪದತಳದಲ್ಲಿ ಕುಳಿತು ಸನಾತನಧರ್ಮದ, ಹಿಂದೂಧರ್ಮದ, ಸಾರವನ್ನರಿತರು; ಅವರ ಮಾರ್ಗದರ್ಶನದಲ್ಲಿ ಅದನ್ನು ಸಾಕ್ಷಾತ್ಕರಿಸಿಕೊಂಡರು. ಅವರ ಆದೇಶದಂತೆ ಸನಾತನಧರ್ಮದ ಪ್ರಸಾರಕ್ಕಾಗಿ, ಭಾರತದೇಶದ ಪುನರುಜ್ಜೀವನಕ್ಕಾಗಿ, ತ್ರಿಲೋಕ ಸಂಚಾರಿಯಾಗಿ ಶ್ರಮಿಸಿದರು. "ಭಾರತದ ಜೀವ-ಜೀವಾಳವೇ ಧರ್ಮ; ಅದರ ಮೂಲಕ ಮಾತ್ರವೇ ಈ ಭಾರತದೇಶ ಉದ್ಧಾರವಾಗಬೇಕಾದರೆ"—ಎಂದು ಘಂಟಾ ಘೋಷವಾಗಿ ಸಾರಿದರು. ಜತೆಯಲ್ಲೇ ಪಾಶ್ಚಾತ್ಯದೇಶಗಳ ವಿಜ್ಞಾನ-ವೈಜ್ಞಾನಿಕವಮನೋ ಭಾವಗಳನ್ನು ನಾವೂ ರೂಢಿಸಿಕೊಳ್ಳಬೇಕೆಂಬುದನ್ನೂ ಒತ್ತಿಹೇಳಿದರು. ತಮ್ಮ ವಿಚಾರಗಳ ಪ್ರಸಾರಕ್ಕಾಗಿ ಶ್ರೀರಾಮಕೃಷ್ಣ ಮಹಾಸಂಘವನ್ನೂ ನಿರ್ಮಿಸಿದರು. ಅವರು ಅವತರಿಸದಿದ್ದರೆ ಹಿಂದೂಧರ್ಮವು ಉಳಿಯುತ್ತಿರಲಿಲ್ಲ, ಭಾರತಕ್ಕೆ ಸ್ವಾತಂತ್ರ್ಯವೂ ಸಿಗುತ್ತಿರಲಿಲ್ಲ. ಇದು ನಮ್ಮ ಮಾತಲ್ಲ, ಮಹಾಮುತ್ಸದ್ದಿ ರಾಜಾಜಿಯವರ ಮಾತು: 'ಸ್ವಾಮಿ ವಿವೇಕಾನಂದರು ಹಿಂದೂಧರ್ಮವನ್ನು ಕಾಪಾಡಿದರು, ಭಾರತವನ್ನು ಉಳಿಸಿದರು. ಅವರಿಲ್ಲದೆ ಹೋಗಿದ್ದರೆ ನಾವು ನಮ್ಮ ಧರ್ಮವನ್ನೂ ಕಳೆದುಕೊಳ್ಳುತ್ತಿದ್ದೆವು; ಸ್ವಾತಂತ್ರ್ಯವನ್ನೂ ಗಳಿಸಲು ಸಾಧ್ಯವಾಗುತ್ತಿರಲಿಲ್ಲ.'

ಇಂತಹ ವಿವೇಕಾನಂದ ಸ್ವಾಮಿಗಳ ಸಮಗ್ರ ಜೀವನಚರಿತ್ರೆಯನ್ನು ಸ್ವಾಮಿ ಪುರುಷೋತ್ತಮಾನಂದರು ಮೂರು ಬೃಹತ್ ಸಂಪುಟಗಳಲ್ಲಿ ರಚಿಸಿರುತ್ತಾರೆ: ಭಾಷೆ ಸರಳ, ಸುಲಲಿತ. ಶೈಲಿ ಮನಮುಟ್ಟುವಂಥದ್ದು.

ವರ್ಷದ ಅತ್ಯುತ್ತಮ ಜೀವನಚರಿತ್ರೆಗೆ ಮೈಸೂರಿನ 'ದೇಜಗೌ ಟ್ರಸ್ಟ್' ನೀಡುತ್ತಿರುವ 'ವಿಶ್ವಮಾನವ ಪ್ರಶಸ್ತಿ'ಯ ಪುರಸ್ಕಾರವನ್ನು ಈ ಗ್ರಂಥಮಾಲೆಯು (೧೯೮೭ ರಲ್ಲಿ) ಗಳಿಸಿ, ಕರ್ನಾಟಕ ಸಾರಸ್ವತ ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಪಡೆದಿದೆ.

ಇದರ ಮೊದಲ ಸಂಪುಟವು ('ವೀರಸಂನ್ಯಾಸಿ ವಿವೇಕಾನಂದ') ೧೯೮೬ ರಲ್ಲಿಯೇ ಪ್ರಕಟಿತವಾಗಿ ಎರಡು ಬಾರಿ ಪುನರ್ಮುದ್ರಣವನ್ನೂ ಕಂಡಿತ್ತು. ಈಗ ಮತ್ತೊಮ್ಮೆ ಮುದ್ರಿಸುತ್ತಿದ್ದೇವೆ.

ಮುಗಿಲಿಗೇರುತ್ತಿರುವ ಬೆಲೆಗಳ ನಡುವೆಯೂ ಗ್ರಂಥದ ಬೆಲೆಯನ್ನು ಕಡಮೆಯಿಡಲು ಅನೇಕ ಭಕ್ತರು ಸಹಕರಿಸಿದ್ದಾರೆ. ಅವರಿಗೂ ಮುದ್ರಣವನ್ನು ಸಕಾಲದಲ್ಲಿ ಸಮರ್ಪಕವಾಗಿ ಮಾಡಿಕೊಟ್ಟಿರುವ ಶ್ರೀ ನಿತ್ಯಾನಂದ ಕಾಂಪ್ಯೂಗ್ರಾಫಿಕ್ಸ್ ಅವರಿಗೂ ನಮ್ಮ ಕೃತಜ್ಞತೆಗಳು.

ಸ್ವಾಮಿ ಹರ್ಷಾನಂದ
ಅಧ್ಯಕ್ಷರು
ಶ್ರೀರಾಮಕೃಷ್ಣಾಶ್ರಮ, ಬೆಂಗಳೂರು

# ಪರಿವಿಡಿ

# ಮೊದಲ ಮಾತು

ಸ್ವಾಮಿ ವಿವೇಕಾನಂದರ ಸಮಗ್ರ ಜೀವನಚರಿತ್ರೆಯ ಮೊದಲ ಸಂಪುಟವಾದ ಈ ಗ್ರಂಥವನ್ನು "ವೀರಸಂನ್ಯಾಸಿ ವಿವೇಕಾನಂದ" ಎಂದು ಹೆಸರಿಸಲಾಗಿದೆ. ಆದರೆ ಈ ಹೆಸರನ್ನು ಸೂಚಿಸಿದಾಗ ನಮ್ಮಲ್ಲೊಬ್ಬರು ನನಗೆ ಹೇಳಿದರು: "ಆ 'ಸಂನ್ಯಾಸಿ' ಎನ್ನುವ ಪದಪ್ರಯೋಗ ಬೇಡ. ಏಕೆಂದರೆ ಹೊರಗಡೆ ಜನರಲ್ಲಿ ಸಂನ್ಯಾಸಿ ಎನ್ನುವ ಪದಕ್ಕೆ ಒಳ್ಳೆಯ ಅಭಿಪ್ರಾಯವಿಲ್ಲ. ಜನಗಳು ಈ ಸಂನ್ಯಾಸಿ ಎಂಬ ಪದವನ್ನು ಬೈಯಲು, ತಿರಸ್ಕರಿಸಿ ಮಾತನಾಡಲು ಬಳಸುತ್ತಾರೆ. ಆದ್ದರಿಂದ ಬೇರೇನಾದರೂ ಶಿರೋನಾಮೆ ಇಡಿ." ಆಗ ನಾನೆಂದೆ: "ಜನ ಕೆಡಿಸದೆ ಇರುವ ಶಬ್ದ ಯಾವುದಿದೆ ? 'ಮಂಗಳಾರತಿ' ಎನ್ನುವ ಶಬ್ದವನ್ನು ಕೆಡಿಸಲಿಲ್ಲವೆ ? 'ಸಹಸ್ರನಾಮ' ಎನ್ನುವ ಶಬ್ದವನ್ನು ಕೆಡಿಸಲಿಲ್ಲವೆ ? 'ಪುರಾಣ' 'ರಾಮಾಯಾಣ'ವೇ ಮೊದಲಾದ ಹಲವಾರು ಶಬ್ದಗಳನ್ನು ಅಪಪ್ರಯೋಗ ಮಾಡಿ ಕೆಡಿಸಲಿಲ್ಲವೆ ? ಹೀಗಿರುವಾಗ ಈ 'ಸಂನ್ಯಾಸಿ' ಎಂಬ ಶಬ್ದವೂ ಜನರ ಬಾಯಿಗೆ ಬಲಿಯಾದದ್ದರಲ್ಲಿ ಆಶ್ಚರ್ಯವೇನೂ ಇಲ್ಲ."

ಅಲ್ಲದೆ ಈ ಸಂನ್ಯಾಸಿ ಎಂಬ ಪದದ ದುರುಪಯೋಗಕ್ಕೆ ಇನ್ನೊಂದು ಕಾರಣವೂ ಇದೆ. ಏನೆಂದರೆ, ಈ ಸಂನ್ಯಾಸಿಗಳಲ್ಲೂ ಕೂಡ ಕೆಲವರು ಅಲ್ಲಲ್ಲಿ ಅರ್ಜುನಸಂನ್ಯಾಸಿಯಂತೆ, ರಾವಣಸಂನ್ಯಾಸಿಯಂತೆ ವರ್ತಿಸಿದ್ದನ್ನು ಜನ ಕಂಡಿರುತ್ತಾರೆ. ಆದ್ದರಿಂದ ಸಹಜವಾಗಿಯೇ ಈ 'ಸಂನ್ಯಾಸಿ' ಎಂಬ ಶಬ್ದವನ್ನೇ ತಿರಸ್ಕರಿಸಿ, ಅಪಪ್ರಯೋಗ ಮಾಡಿ ಬಳಸುವುದಕ್ಕೆ ಸಾಧ್ಯವಿದೆ. ಆದರೆ ಸಂನ್ಯಾಸದ ಘನ ಆದರ್ಶವನ್ನು ತಮ್ಮ ಜೀವನದಲ್ಲಿ ಜಾಜ್ವಲ್ಯಮಾನವಾಗಿ ಬೆಳಗಿದಂತಹ ಶ್ರೀ ಸ್ವಾಮಿ ವಿವೇಕಾನಂದರ ಜೀವನ-ಸಂದೇಶಗಳನ್ನು ನಾವು ಅಧ್ಯಯನ ಮಾಡಿದಾಗ 'ಸಂನ್ಯಾಸಿ' ಎನ್ನುವ ಈ ಪದದ ಕುರಿತಾದ ಕ್ಷುಲ್ಲಕ ಭಾವನೆ ತಾನೇತಾನಾಗಿ ದೂರವಾಗುತ್ತದೆ.

ನಿಜಕ್ಕೂ ಇದೊಂದು ವಿಚಿತ್ರ ಪರಿಸ್ಥಿತಿ ! ಸಂನ್ಯಾಸಿಗಳು ತಮ್ಮನ್ನು ಧೈರ್ಯವಾಗಿ 'ಸಂನ್ಯಾಸಿಗಳು' ಎಂದು ಕರೆದುಕೊಳ್ಳುವುದಕ್ಕೇ ಸಂಕೋಚಪಟ್ಟುಕೊಳ್ಳುವಂಥ ಪರಿಸ್ಥಿತಿ ! ಆದ್ದರಿಂದಲೇ ಸಂನ್ಯಾಸಿಗಳು ತಮ್ಮನ್ನು 'ಸಾಧುಗಳು' ಎಂದು ಕರೆದುಕೊಳ್ಳುವುದುಂಟು. ಆದರೆ 'ಸಾಧು' ಎನ್ನುವ ಪದಕ್ಕೂ 'ಸಂನ್ಯಾಸಿ' ಎನ್ನುವ ಪದಕ್ಕೂ ಬಹಳ ಅರ್ಥವ್ಯತ್ಯಾಸವಿದೆ. 'ಸಾಧು' ಎಂದರೆ ಒಳ್ಳೆಯವನು, ಸಜ್ಜನ ಎಂದರ್ಥ. 'ಸಂನ್ಯಾಸಿ' ಎಂದರೆ ಸರ್ವಸಂಗ ಪರಿತ್ಯಾಗ ಮಾಡಿದವನು ಎಂದರ್ಥ. ಆದ್ದರಿಂದ ಯಾರು ಬೇಕಾದರೂ ಸಾಧುಗಳಾಗಬಹುದು. ಆದರೆ ಯಾರೆಂದರವರು ಸಂನ್ಯಾಸಿಗಳೆನಿಸಲಾರರು. ಗೃಹಸ್ಥರೂ ಸಾಧುಗಳಾಗಿರಬಹುದು, ಎಂದರೆ ಸಜ್ಜನರಾಗಿರಬಹುದು. ಆದರೆ ಅವರು ಸರ್ವಸಂಗಪರಿತ್ಯಾಗ ಮಾಡಿದ ಸಂನ್ಯಾಸಿಗಳೆನಿಸಲು ಸಾಧ್ಯವಿಲ್ಲ. ಆದರೆ ಸಂನ್ಯಾಸಿಗಳನ್ನು ಸಾಧುಗಳೆಂದು ಕರೆಯಬಹುದು. ಏಕೆಂದರೆ ಇವರು ಸಜ್ಜನರಲ್ಲದೆ ಹೋದರೆ ಸಂನ್ಯಾಸಿಗಳು ಹೇಗಾದಾರು ? ಸ್ವಾಮಿ ವಿವೇಕಾನಂದರೇ ಹೇಳಿದಂತೆ, ಸಂನ್ಯಾಸಿಯಾಗಬೇಕೆಂದಿರುವವನು ಮೊದಲು ಸಜ್ಜನನಾಗಿರಲೇಬೇಕು. ಆದರೆ ತಮಾಷೆಯೇನೆಂದರೆ ಈ 'ಸಾಧು' ಎನ್ನುವ ಪದವನ್ನಾದರೂ ಜನ ಸುಮ್ಮನೆ ಬಿಟ್ಟಿದ್ದಾರೆಯೇ ? 'ಸಾಧು' ಎಂದರೆ ಕೈಲಾಗದವನು ಎಂಬ ಅರ್ಥವನ್ನು ಕೊಟ್ಟುಬಿಟ್ಟಿದ್ದಾರೆ. ಆದರೆ ಜನ

ಎಷ್ಟೇ ಅಪಾರ್ಥ ಮಾಡಿದರೂ ನಿಜಾರ್ಥ ಎಂದಿಗೂ ನಶಿಸಿಹೋಗುವುದಿಲ್ಲ.

ಇನ್ನು 'ವೀರಸಂನ್ಯಾಸಿ ವಿವೇಕಾನಂದ' ಎಂಬ ಈ ಶಿರೋನಾಮೆಯಲ್ಲಿ ವಿವೇಕಾನಂದರೆಂಬ ಸಂನ್ಯಾಸಿಗಳನ್ನು 'ವೀರಸಂನ್ಯಾಸಿ' ಎಂದು ಕರೆಯಲಾಗಿದೆ. ಹಾಗಾದರೆ ಮಿಕ್ಕ ಸಂನ್ಯಾಸಿಗಳು ವೀರರಲ್ಲವೆ ಎಂದು ಕೇಳಿದರೆ, ಸಂನ್ಯಾಸಿಗಳೆಲ್ಲರೂ ವೀರರೇ ಸರಿ. ಆದರೆ ವಿವೇಕಾನಂದರು ಮಾತ್ರ ವೀರಾಗ್ರಣಿಗಳು. ಈ ಸತ್ಯವನ್ನು ಅವರ ಜೀವನದಲ್ಲಿ ನಾವೇ ಕಂಡುಕೊಳ್ಳಬಹುದು. ಆದ್ದರಿಂದ ವೀರಸಂನ್ಯಾಸಿ ಎಂಬ ವಿಶೇಷಣ ನೇರವಾಗಿ ವಿವೇಕಾನಂದರಿಗೇ ಅನ್ವಯವಾಗುತ್ತದೆ.

ಈಗ ಇನ್ನೊಂದು ಅಂಶ. ಸಂನ್ಯಾಸಿಯು ಸರ್ವವನ್ನೂ ತ್ಯಜಿಸಿ ಅಹಿಂಸಾ ವ್ರತಧಾರಣೆ ಮಾಡಿದವನು. ಅಂದಮೇಲೆ ಅಲ್ಲಿ ವೀರತ್ವಕ್ಕೆ ಅವಕಾಶವೆಲ್ಲಿದೆ ? ಹಾಗಿರುವಾಗ ಅವನು ವೀರಸಂನ್ಯಾಸಿ ಹೇಗಾದಾನು ? ಅಥವಾ ಒಬ್ಬ ಸಂನ್ಯಾಸಿ 'ವೀರ' ಹೇಗಾದಾನು ? ಯಾವ ವೈರಿಗಳನ್ನೂ ನಾಶಮಾಡದ, ಯಾವ ರಾಜ್ಯವನ್ನೂ ಗೆಲ್ಲದ ಸಂನ್ಯಾಸಿಯು 'ವೀರ' ಹೇಗಾದಾನು ? ಇದಕ್ಕೆ ಉತ್ತರವಿಷ್ಟೆ—ಸಾವಿರಾರು ಯೋಧರನ್ನು ಗೆದ್ದವನಿಗಿಂತ ತನ್ನ ಇಂದ್ರಿಯಗಳನ್ನು ಗೆದ್ದವನೇ ನಿಜವಾದ ವೀರ ! ಪರರಾಜ್ಯವನ್ನು ಗೆದ್ದವನಿಗಿಂತ ಆತ್ಮರಾಜ್ಯವನ್ನು ಸ್ವಾಧೀನಪಡಿಸಿಕೊಂಡವನೇ ನಿಜವಾದ ಧೀರ—*ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್!* ಈ ಬಗೆಯ ವೀರಸಂನ್ಯಾಸಿಯ ವರ್ಣನೆ ಮಾಡುತ್ತಾರೆ, ಸ್ವಯಂ ವೀರಸಂನ್ಯಾಸಿಗಳಾದ ವಿವೇಕಾನಂದರು. ಅವರು ಇಂಗ್ಲಿಷಿನಲ್ಲಿ ರಚಿಸಿದ 'Song of the Sannyasin' ಎಂಬ ತಮ್ಮ ಕವನದಲ್ಲಿ ವೀರಸಂನ್ಯಾಸಿಯ ಸ್ಪಷ್ಟಚಿತ್ರಣ ಮೂಡಿಸಿದ್ದಾರೆ. ಆ ಕವನವನ್ನು ಸುಂದರ ಕನ್ನಡದಲ್ಲಿ ಪ್ರತಿಬಿಂಬಿಸಿದ್ದಾರೆ ರಾಷ್ಟ್ರಕವಿ ಕುವೆಂಪು ಅವರು. ಆ ಕವನದ ಕನ್ನಡ ರೂಪ ಎಷ್ಟು ನಿಖರ, ರಭಸಪೂರ್ಣ ಹಾಗೂ ತೇಜೋವಂತವಾಗಿದೆಯೆಂದರೆ ಸ್ವಾಮಿ ವಿವೇಕಾನಂದರು ಅದನ್ನು ಮೂಲತಃ ಕನ್ನಡದಲ್ಲೇ ಬರೆದರೋ ಎನ್ನುವಂತಿದೆ ! ಕನ್ನಡರೂಪದ ಈ ಕವನಕ್ಕೆ *ಸಂನ್ಯಾಸಿ ಗೀತೆ* ಎಂದು ಹೆಸರು. ಓದಿನೋಡಿ ಇದನ್ನು* —

*ಏಳು, ಮೇಲೇಳೇಳು ಸಾಧುವೆ, ಹಾಡು ಬಾಗಿಯ ಹಾಡನು;*
*ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!*
*ದೂರದಡವಿಯೊಳೆಲ್ಲಿ ಲೌಕಿಕವಿಷಯವಾಸನೆ ಮುಟ್ಟದೊ,*
*ಎಲ್ಲಿ ಗಿರಿಗುಹೆಕಂದರದ ಬಳಿ ಜಗದ ಗಲಿಬಿಲಿ ತಟ್ಟದೊ,*
*ಎಲ್ಲಿ ಕಾಮವು ಸುಳಿಯದೊ,—ಮೇಣ್*
*ಎಲ್ಲಿ ಜೀವವು ತಿಳಿಯದೊ*
*ಕೀರ್ತಿ ಕಾಂಚನವೆಂಬುವಾಸೆಗಳಿಂದ ಜನಿಸುವ ಭ್ರಾಂತಿಯ,*
*ಎಲ್ಲಿ ಆತ್ಮವು ಪಡೆದು ನಲಿವುದೊ ನಿಚ್ಚವಾಗಿಹ ಶಾಂತಿಯ,*
*ನನ್ನಿಯರಿವಾನಂದವಾಹಿನಿಯಲ್ಲಿ ಸಂತತ ಹರಿವುದೊ,*
*ಎಲ್ಲಿ ಎಡೆಬಿಡದಿರದ ತೃಪ್ತಿಯ ಝರಿ ನಿರಂತರ ಸುರಿವುದೊ,*
*ಅಲ್ಲಿ ಮೂಡಿದ ಹಾಡನುಲಿಯೈ, ವೀರ ಸಂನ್ಯಾಸಿ—*
*ಓಂ! ತತ್! ಸತ್! ಓಂ!*

---

* ಇದರ ತಾತ್ಪರ್ಯವನ್ನು ಅನುಬಂಧದಲ್ಲಿ (ಪುಟ ೩೨೪) ನೋಡಬಹುದು.

ಕುಟ್ಟಿ ಪುಡಿಪುಡಿಮಾಡು ಮಾಯೆಯು ಕಟ್ಟಿಬಿಗಿದಿಹ ಹಗ್ಗವ;
ಕಿತ್ತು ಬಿಸುಡ್ವೈ ಹೊಳೆವ ಹೊನ್ನಿನ ಹೆಣ್ಣುಮಣ್ಣಿನ ಕಗ್ಗವ!
ಮುದ್ದಿಸಲಿ ಪೀಡಿಸಲಿ ದಾಸನು ದಾಸನೆಂಬುದೆ ಸತ್ಯವು;
ಕಬ್ಬಿಣವೊ? ಕಾಂಚನವೊ? ಕಟ್ಟಿದ ಕಣ್ಣಿ ಕಣ್ಣಿಯೆ ನಿತ್ಯವು.
ಪಾಪ ಪುಣ್ಯಗಳೆಂಬವು, — ಮಾ-
ತ್ಸರ್ಯ ಪ್ರೇಮಗಳೆಂಬವು
ದ್ವಂದ್ವರಾಜ್ಯದ ಧೂರ್ತಚೋರರು; ಬಿಟ್ಟು ಕಳೆ, ಕಳೆಯವರನು!
ಮೋಹಗೊಳಿಪರು, ಬಿಗಿವರಿರಿವರು; ಎಚ್ಚರಿಕೆಯಿಂದವರನು
ತಳ್ಳು ದೂರಕೆ, ಓ ವಿರಕ್ತನೆ! ಹಾಡು ಚಾಗಿಯ ಹಾಡನು!
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಹಾಡು ಮುಕ್ತಿಯ ಗಾನವನು, ಓ ವೀರ ಸಂನ್ಯಾಸಿ—
ಓಂ! ತತ್! ಸತ್! ಓಂ!

ಕತ್ತಲಳಿಯಲಿ; ಮಬ್ಬುಕವಿಸುವ ಭವದ ತೃಷ್ಣೆಯು ಬತ್ತಲಿ;
ಬಾಳಮೋಹವು ಮರುಮರೀಚಿಕೆ; ಮಾಯೆ ಕೆತ್ತಿದ ಪುತ್ತಳಿ;
ಜನನದೆಡೆಯಿಂ ಮರಣದೆಡೆಗಾಗೆಳೆವುದೆಮ್ಮನು ದೇಹವು!
ಜನ್ಮಜನ್ಮದಿ ಮರಳಿ ಮರಳುವುದೆಮ್ಮ ಬಿಗಿಯಲು ಮೋಹವು!
ತನ್ನ ಜಯಿಸಿದ ಶಕ್ತನು— ಅವ
ನೆಲ್ಲ ಜಯಿಸಿದ ಮುಕ್ತನು
ಎಂಬುದನು ತಿಳಿ; ಹಿಂಜರಿಯದಿರು. ಸಂನ್ಯಾಸಿಯೇ, ನಡೆ ಮುಂದಕೆ.
ಗುರಿಯು ದೊರಕುವವರೆಗೆ ನಡೆ ನಡೆ; ನೋಡದಿರು ನೀ ಹಿಂದಕೆ.
ಏಳು ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು;
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಹಾಡು ಸಿದ್ಧನೆ, ಓ ಪ್ರಬುದ್ಧನೆ, ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

"ಬೆಳೆಯ ಕೊಯ್ವನು ಬಿತ್ತಿದಾತನು; ಪಾಪ ಪಾಪಕೆ ಕಾರಣ;
ವೃಕ್ಷಕಾರ್ಯಕೆ ಬೀಜ ಕಾರಣ; ಪುಣ್ಯ ಪುಣ್ಯಕೆ ಕಾರಣ;
ಹುಟ್ಟಿ ಮೈವಡೆದಾತ್ಮ ಬಾಳಿನ ಬಲೆಯ ತಪ್ಪದೆ ಹೊರುವುದು;
ಕಟ್ಟು ಮೀರಿಹನಾವನಿರುವನು? ಕಟ್ಟು ಕಟ್ಟನೆ ಹೆರುವುದು!"
ಎಂದು ಪಂಡಿತರೆಂಬರು — ಮೇಣ್
ತತ್ತ್ವದರ್ಶಿಗಳೆಂಬರು!
ಆದೊಡೇನಂತಾತ್ಮವೆಂಬುದು ನಾಮರೂಪಾತೀತವು;
ಮುಕ್ತಿಬಂಧಗಳಿಲ್ಲದಾತ್ಮವು ಸರ್ವನಿಯಮಾತೀತವು!
ತತ್ತ್ವಮಸಿ ಎಂದರಿತು, ಸಾಧುವೆ, ಹಾಡು ಚಾಗಿಯ ಹಾಡನು!
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಸಾರು ಸಿದ್ಧನೆ, ವಿಶ್ವವರಿಯಲಿ! ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

ತಂದೆ ತಾಯಿಯು ಸತಿಯು ಮಕ್ಕಳು ಗೆಳೆಯರೆಂಬುವರರಿಯರು;
ಕನಸು ಕಾಣುತಲವರು ಸೊನ್ನೆಯ ಸರ್ವವೆನ್ನುತ ಮೆರೆವರು.
ಲಿಂಗವರಿಯದ ಆತ್ಮವಾರಿಗೆ ಮಗುವು? ಆರಿಗೆ ತಾತನು?
ಆರ ಮಿತ್ರನು? ಆರ ಶತ್ರುವು? ಒಂದೆಯಾಗಿರುವಾತನು?
ಆತ್ಮವೆಲ್ಲಿಯು ಇರುವುದು;— ಮೇಣ್
ಆತ್ಮವೊಂದಾಗಿರುವುದು.
ಭೇದವೆಂಬುವ ತೋರಿಕೆಯು ನಮ್ಮಾತ್ಮನಾಶಕೆ ಹೇತುವು.
ಭೇದವನು ತೊರೆದೊಂದೆಯೆಂಬುದನರಿಯೆ ಮುಕ್ತಿಗೆ ಸೇತುವು.
ಧೈರ್ಯದಿಂದಿದನೆಲ್ಲರಾಲಿಸೆ ಹಾಡು ಬಾಗಿಯ ಹಾಡನು!
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಸಾರು, ಜೀವನ್ಮುಕ್ತ! ಸಾರೈ ಧೀರ ಸಂನ್ಯಾಸಿ—
ಓಂ! ತತ್! ಸತ್! ಓಂ!

ಇರುವುದೊಂದೇ! ನಿತ್ಯಮುಕ್ತನು, ಸರ್ವಜ್ಞಾನಿಯು ಆತ್ಮನು!
ನಾಮರೂಪಾತೀತನಾತನು; ಪಾಪಪುಣ್ಯಾತೀತನು!
ವಿಶ್ವಮಾಯಾಧೀಶನಾತನು; ಕನಸು ಕಾಣುವನಾತನು!
ಸಾಕ್ಷಿಯಾತನು; ಪ್ರಕೃತಿಜೀವರ ತೆರದಿ ತೋರುವನಾತನು!
ಎಲ್ಲಿ ಮುಕ್ತಿಯ ಹುಡುಕುವೆ?— ಏ-
ಕಿಂತು ಸುಮ್ಮನೆ ದುಡುಕುವೆ?
ಇಹವು ತೋರದು, ಪರವು ತೋರದು; ಗುಡಿಯೊಳದು ಮೈದೋರದು.
ವೇದ ತೋರದು, ಶಾಸ್ತ್ರ ತೋರದು; ಮತವು ಮುಕ್ತಿಯ ತೋರದು!
ನಿನ್ನ ಕೈಲಿದೆ ನಿನ್ನ ಬಿಗಿದಿಹ ಕಬ್ಬಿಣದ ಯಮಪಾಶವು;
ಬರಿದೆ ಶೋಕಿಪುದೇಕೆ? ಬಿಡು, ಬಿಡು! ನಿನಗೆ ನೀನೇ ಮೋಸವು!
ಬೇಡ, ಪಾಶವ ಕಡಿದು ಕೈಬಿಡು! ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

"ಶಾಂತಿ ಸರ್ವರಿಗಿರಲಿ" ಉಲಿಯೈ, "ಜೀವಜಂತುಗಳಾಳಿಗೆ
ಹಿಂಸೆಯಾಗದೆ ಇರಲಿ ಎನ್ನಿಂದೆಲ್ಲ ಸೊಗದಲಿ ಬಾಳುಗೆ!
ಬಾನೊಳಾಡುವ, ನೆಲದೊಳೋಡುವ ಸರ್ವರಾತ್ಮನು ನಾನಹೆ;
ನಾಕ ನರಕಗಳಾಸೆಭಯಗಳನೆಲ್ಲ ಮನದಿಂ ದೂಡುವೆ!"
ದೇಹ ಬಾಳಲಿ, ಬೀಳಲಿ;— ಅದು
ಕರ್ಮನದಿಯಲಿ ತೇಲಲಿ!
ಕೆಲರು ಹಾರಗಳಿಂದ ಸಿಂಗರಿಸದನು ಪೂಜಿಸಿ ಬಾಗಲಿ!
ಕೆಲರು ಕಾಲಿಂದೊದೆದು ನೂಕಲಿ! ಹುಡಿಯು ಹುಡಿಯೊಳೆ ಹೋಗಲಿ!
ಎಲ್ಲ ಒಂದಿರಲಾರು ಹೊಗಳುವರಾರು ಹೊಗಳಿಸಿಕೊಂಬರು?
ನಿಂದೆ ನಿಂದಿಪರೆಲ್ಲ ಕೂಡಲು ಯಾರು ನಿಂದೆಯನುಂಬರು?
ಪಾಶಗಳ ಕಡಿ! ಬಿಸುಡು, ಕಿತ್ತಡಿ! ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

ಎಲ್ಲಿ ಕಾಮಿನಿಯೆಲ್ಲಿ ಕಾಂಚನದಾಸೆ ನೆಲೆಯಾಗಿರುವುದೊ,
ಸತ್ಯವೆಂಬುವುದಲ್ಲಿ ಸುಳಿಯದು! ಎಲ್ಲಿ ಕಾಮವು ಇರುವುದೊ
ಅಲ್ಲಿ ಮುಕ್ತಿಯು ನಾಚಿ ತೋರದು! ಎಲ್ಲಿ ಸುಳಿವುದೊ ಭೋಗವು
ಅಲ್ಲಿ ತೆರೆಯದು ಮಾಯೆ ಬಾಗಿಲನಲ್ಲಿಹುದು ಭವರೋಗವು;
ಎಲ್ಲಿ ನೆಲಸದೊ ಬಾಗವು,—ದಿಟ
ವಲ್ಲಿ ಸೇರದು ಯೋಗವು!
ಗಗನವೇ ಮನೆ! ಹಸುರೆ ಹಾಸಿಗೆ! ಮನೆಯು ಸಾಲ್ವುದೆ ಬಾಗಿಗೆ?
ಹಸಿಯೊ, ಬಿಸಿಯೋ? ಬಿದಿಯು ಕೊಟ್ಟಾಹಾರವನ್ನವು ಯೋಗಿಗೆ!
ಏನು ತಿಂದರೆ, ಏನು ಕುಡಿದರೆ, ಏನು? ಆತ್ಮಗೆ ಕೊರತೆಯೆ?
ಸರ್ವಪಾಪವ ತಿಂದುತೇಗುವ ಗಂಗೆಗೇಂ ಕೊಳೆ-ಕೊರತೆಯೆ?
ನೀನು ಮಿಂಚೈ! ನೀನು ಸಿಡಿಲೈ! ಮೊಳಗು ಸಂನ್ಯಾಸಿ—
ಓಂ! ತತ್! ಸತ್! ಓಂ!

ನಿಜವನರಿತವರೆಲ್ಲೊ ಕೆಲವರು; ನಗುವರುಳಿದವರೆಲ್ಲರೂ
ನಿನ್ನ ಕಂಡರೆ, ಹೇ ಮಹಾತ್ಮನೆ! ಕುರುಡರೇನನು ಬಲ್ಲರು?
ಗಣಿಸದವರನು ಹೋಗು, ಮುಕ್ತನೆ, ನೀನು ಊರಿಂದೂರಿಗೆ
ಸೊಗವ ಬಯಸದೆ, ಅಳಲಿಗಳುಕದೆ! ಕತ್ತಲಲಿ ಸಂಚಾರಿಗೆ
ನಿನ್ನ ಬೆಳಕನು ನೀಡಲೈ;—ಸಂ
ಸಾರ ಮಾಯೆಯ ದೂಡಲೈ!
ಇಂತು ದಿನದಿನ ಕರ್ಮಶಕ್ತಿಯು ಮುಗಿವವರೆಗೂ ಸಾಗಲೈ!
ನಾನು ನೀನುಗಳಳಿದು ಆತ್ಮದೊಳಿಳಿದು ಕಡೆಯೊಳು ಹೋಗಲೈ!
ಏಳು, ಮೇಲೇಳೇಳು, ಸಾಧುವೆ, ಹಾಡು ಬಾಗಿಯ ಹಾಡನು!
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ತತ್ತ್ವಮಸಿ ಎಂದರಿತು ಹಾಡೈ, ಧೀರ ಸಂನ್ಯಾಸಿ—
ಓಂ! ತತ್! ಸತ್! ಓಂ!

ಇಂಥ ವೀರಸಂನ್ಯಾಸಿಗಳಾದ ವಿವೇಕಾನಂದರ ಧೀರ ಗಂಭೀರ ಜೀವನವನ್ನು ಅಧ್ಯಯನ ಮಾಡಿದರೆ ಎಂತಹ ಸಪ್ಪೆ ಮನುಷ್ಯನೂ ವೀರಾವೇಶದಿಂದ ಒಮ್ಮೆ ಮೈಕೊಡಹಿ ಏಳದಿರಲಾರ.

ಸ್ವಾಮಿ ಪುರುಷೋತ್ತಮಾನಂದ

# ಚಿತ್ರಗಳ ವಿವರಣೆ

1. ಭಗವಾನ್ ಶ್ರೀರಾಮಕೃಷ್ಣ.
2. ಶ್ರೀಮಾತೆ ಶಾರದಾದೇವಿ.
3. ಭುವನೇಶ್ವರೀ ದೇವಿ—ನರೇಂದ್ರನ ತಾಯಿ.
4. ನರೇಂದ್ರನ ಹಸ್ತ. ತನ್ನ ಕೈಯಲ್ಲಿ 'ಸಂನ್ಯಾಸದ ರೇಖೆ' ಇದೆಯೆಂದು ನರೇಂದ್ರ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ.
5. ವಿಶ್ವನಾಥದತ್ತನ ವಂಶಪರಂಪರಾಗತ ಮನೆ (ಮುಂಭಾಗದಲ್ಲಿರುವುದು).
6. ಕಾಶೀಪುರದ ಉದ್ಯಾನಗೃಹ—ಶ್ರೀರಾಮಕೃಷ್ಣರು ತಮ್ಮ ಕೊನೆಯ ದಿನಗಳನ್ನು ಕಳೆದ ಸ್ಥಳ.
7. ರಾಮಚಂದ್ರ ದತ್ತ—ನರೇಂದ್ರನ ತಂದೆಯ ಸಂಬಂಧಿ; ಶ್ರೀರಾಮಕೃಷ್ಣರನ್ನು ಕಾಣುವಂತೆ ನರೇಂದ್ರನಿಗೆ ಸಲಹೆ ನೀಡಿದವನು.
8. ಪ್ರೊ|| W.W.ಹೇಸ್ಟೀ—ನರೇಂದ್ರನ ಕಾಲೇಜಿನ ಪ್ರಿನ್ಸಿಪಾಲ್; ಸಮಾಧಿಸ್ಥಿತಿಯನ್ನು ವರ್ಣಿಸುತ್ತ ಶ್ರೀರಾಮಕೃಷ್ಣರ ಬಗ್ಗೆ ಪ್ರಸ್ತಾಪಿಸಿ, ನರೇಂದ್ರನ ಕುತೂಹಲವನ್ನು ಜಾಗೃತಗೊಳಿಸಿದವರು.
9. ಕಾಶೀಪುರದಲ್ಲಿ ನರೇಂದ್ರ (1886).
10. ಶ್ರೀರಾಮಕೃಷ್ಣರು ತಮ್ಮ ಮಹಾಸಮಾಧಿ ಸನ್ನಿಹಿತವಾದಾಗ ಒಂದು ದಿನ ನರೇಂದ್ರನನ್ನು ಕರೆಸಿ ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಾರೆ. ತಮಗೆ ಮಾತನಾಡಲೂ ಆಗದಿದ್ದಂತಹ ಆ ಸ್ಥಿತಿಯಲ್ಲಿ, ಒಂದು ಕಾಗದದಲ್ಲಿ ಈ ಚಿತ್ರವನ್ನು ಬರೆದು ತೋರಿಸುತ್ತಾರೆ. ಬಂಗಾಳೀ ಲಿಪಿಯಲ್ಲಿ ಬರೆದಿರುವುದೇನೆಂದರೆ—"ಜಯ್ ರಾಧೇ ಪ್ರೇಮಮಯಿ. ನರೇನ್ ಶಿಕ್ಷೇ ದಿಬೇ ಯಾಖನ್ ಘರೇ ಬಾಹಿರೇ ಹಾಕ್ ದಿಬೇ. ಜಯ್ ರಾಧೇ." ಇದರ ಅರ್ಥ—"ದಿವ್ಯ ಪ್ರೇಮಭರಿತಳಾದ ರಾಧೆಗೆ ಜಯವಾಗಲಿ. ನರೇಂದ್ರನು (ಭಾರತದ) ಒಳಗೂ ಹೊರಗೂ ಸಂಚರಿಸಿ ಬೋಧನೆ ಮಾಡುತ್ತಾನೆ. ಜಯ ರಾಧೇ." ಚಿತ್ರದಲ್ಲಿ ಕಾಣುವ ವ್ಯಕ್ತಿ ಸ್ವತಃ ಶ್ರೀರಾಮಕೃಷ್ಣರೇ (ಗಂಟಲಿನ ಹುಣ್ಣನ್ನು ಗಮನಿಸಿ); ನವಿಲೇ ನರೇಂದ್ರ. (ನೋಡಿ: ಪುಟ 219)
11. ಶ್ರೀರಾಮಕೃಷ್ಣರ ಮಹಾಸಮಾಧಿಯ ಬಳಿಕ—ಅವರ ಶಿಷ್ಯರು ಹಾಗೂ ಗೃಹೀಭಕ್ತರು. 26 ಎಂದು ಗುರುತಿಸಲಾಗಿರುವವನೇ ನರೇಂದ್ರ.
12. ಬಾರಾನಾಗೋರ್ ಮಠ—ಶ್ರೀರಾಮಕೃಷ್ಣರ ಮಹಾಸಂಘದ ಮೊದಲ ಕೇಂದ್ರ.
13. ಬಾರಾನಾಗೋರ್ ಮಠದಲ್ಲಿ (1887). ನಿಂತಿರುವವರು (ಎಡದಿಂದ): ಶಿವಾನಂದರು, ರಾಮಕೃಷ್ಣಾನಂದರು, ವಿವೇಕಾನಂದರು, ಪ್ರೇಮಾನಂದರು, ದೇವೇಂದ್ರನಾಥ ಮಜುಮ್ದಾರ, ಮಹೇಂದ್ರನಾಥ ಗುಪ್ತ, ತ್ರಿಗುಣಾತೀತಾನಂದರು, ಒಬ್ಬ ಗೃಹೀಭಕ್ತ,
ಕುಳಿತಿರುವವರು: ನಿರಂಜನಾನಂದ, ಶಾರದಾನಂದ, ಬ್ರಹ್ಮಾನಂದ, ಅಭೇದಾನಂದ.
14. 1897ರ ಚಿತ್ರ. (ಎಡದಿಂದ) ತ್ರಿಗುಣಾತೀತಾನಂದರು, ಶಿವಾನಂದರು, ವಿವೇಕಾನಂದರು, ತುರೀಯಾನಂದರು, ಬ್ರಹ್ಮಾನಂದರು. (ಕೆಳಗಡೆ) ವಿವೇಕಾನಂದರ ಪ್ರಥಮ ಸಂನ್ಯಾಸೀ ಶಿಷ್ಯರಾದ ಸದಾನಂದರು.
15. ಸುರೇಂದ್ರನಾಥ ಮಿತ್ರ, ಹಾಗೂ, 16. ಬಲರಾಮ ಬೋಸ್—ಬಾರಾನಾಗೋರ್ ಮಠದ ದಿನಗಳಲ್ಲಿ ಮಠದ ಆಧಾರಸ್ತಂಭಗಳಂತಿದ್ದ ಗೃಹೀಭಕ್ತರು.
17. ಪರಿವ್ರಾಜಕ ಸ್ವಾಮಿ ವಿವೇಕಾನಂದ.

## ಶ್ರೀವಿವೇಕಾನಂದ ಸ್ತೋತ್ರ

ಮೂರ್ತಮಹೇಶ್ವರಮುಜ್ಜ್ವಲ ಭಾಸ್ಕರ-
ಮಿಷ್ಟಮಮರ ನರವಂದ್ಯಮ್
ವಂದೇ ವೇದತನುಮುಜ್ಝಿತ ಗರ್ಹಿತ
ಕಾಮಕಾಂಚನ ಬಂಧಮ್

ಕೋಟಿಭಾನುಕರದೀಪ್ತ ಸಿಂಹಮಹೋ
ಕಟಿತಟಕೌಪೀನವಂತಮ್
ಅಭೀರಭೀಃ ಹುಂಕಾರ ನಾದಿತ ದಿಙ್ಮುಖ
ಪ್ರಚಂಡ ತಾಂಡವನೃತ್ಯಮ್

ಭುಕ್ತಿ ಮುಕ್ತಿ ಕೃಪಾಕಟಾಕ್ಷ ಪ್ರೇಕ್ಷಣ-
ಮಘದಲ ವಿದಲನ ದಕ್ಷಮ್
ಬಾಲಚಂದ್ರಧರಮಿಂದು ವಂದ್ಯಮಿಹ
ನೌಮಿ ಗುರು ವಿವೇಕಾನಂದಮ್

—ಶರಚ್ಚಂದ್ರ ದೇವಶರ್ಮಾ ('ಇಂದು')

ಮಹೇಶ್ವರನೇ ಅವತರಿಸಿದಂತಿರುವ, ಸೂರ್ಯ ನಂತೆ ಉಜ್ಜ್ವಲಿಸುತ್ತಿರುವ, ಸುರ-ನರರಿಂದ ವಂದ್ಯ ನಾದ, ವೇದಗಳೇ ದೇಹವನ್ನು ಧರಿಸಿ ಬಂದಂತಿರುವ, ಹೇಯವಾದ ಕಾಮ-ಕಾಂಚನಗಳನ್ನು ಪೂರ್ಣವಾಗಿ ಜಯಿಸಿದ, ಕೋಟಿಸೂರ್ಯಕಿರಣಕಾಂತಿಯಿಂದ ಜ್ವಲಿ ಸುವ ಕೌಪೀನಧಾರೀ ಪುರುಷಸಿಂಹನಾದ, 'ಹೆದರದಿರಿ ! ಹೆದರದಿರಿ !' ಎಂಬ ಭವ್ಯನಾದದಿಂದ ಪ್ರಚಂಡ ತಾಂಡವ ವನ್ನಾಡುತ್ತಿರುವ, ಕಡೆಗಣ್ಣಿನ ನೋಟಮಾತ್ರದಿಂದಲೇ ಭುಕ್ತಿ-ಮುಕ್ತಿಗಳನ್ನು ಕರುಣಿಸುವ ಮತ್ತು ಪಾಪರಾಶಿ ಯನ್ನು ನಾಶಮಾಡಬಲ್ಲ, ಬಾಲಚಂದ್ರನನ್ನು ಧರಿಸಿರುವ ಸಾಕ್ಷಾತ್ ಶಿವನೇ ಆದ ಮತ್ತು 'ಇಂದು' ವಂದ್ಯನಾದ ಗುರು ಶ್ರೀವಿವೇಕಾನಂದರಿಗೆ ನಮಸ್ಕರಿಸುತ್ತೇನೆ.

# ದತ್ತ ಮನೆತನ



ಹತ್ತೊಂಬತ್ತನೇ ಶತಮಾನದ ಪೂರ್ವಭಾಗ. ಭಾರತದ ಅಂದಿನ ರಾಜಧಾನಿ ಕಲ್ಕತ್ತಾ ಮಹಾನಗರ. ಕಲ್ಕತ್ತದಲ್ಲಿ ಸಿಮ್ಲಾ ಅಥವಾ ಸಿಮುಲಿಯಾ ಎನ್ನುವುದೊಂದು ಸ್ಥಳ; ಇಲ್ಲಿ 'ದತ್ತ' ಎಂಬುದೊಂದು ಕ್ಷತ್ರಿಯ ಮನೆತನ. ಈ ದತ್ತ ಮನೆತನದವರು ಶ್ರೀಮಂತರು, ವಿದ್ಯಾವಂತರು, ಘನತೆವೆತ್ತವರು. ದಾನಧರ್ಮಾದಿ ಕಾರ್ಯಗಳಲ್ಲಿ ಇವರು ತಲೆತಲಾಂತರದಿಂದಲೂ ಹೆಸರುವಾಸಿಯಾದವರು. ಇವರೆಲ್ಲ ಸ್ವತಂತ್ರ ಮನೋಭಾವದವರು, ಸ್ವಾತಂತ್ರ್ಯಪ್ರಿಯರು. ಈ ವಂಶದ ರಾಮಮೋಹನ ದತ್ತ ಎಂಬವನಿಗೆ ಇಬ್ಬರು ಮಕ್ಕಳು—ದುರ್ಗಾಪ್ರಸಾದ ಮತ್ತು ಕಾಳೀಪ್ರಸಾದ. ದುರ್ಗಾ ಪ್ರಸಾದ ತುಂಬ ಪ್ರತಿಭಾವಂತ; ಪಾರಸೀ-ಸಂಸ್ಕೃತ ಭಾಷೆಗಳಲ್ಲಿ ನುರಿತ ಪಂಡಿತ. ಇವನು ಕಾನೂನು ಪದವೀಧರ. ಆದ್ದರಿಂದ, ಸ್ವತಃ ವಕೀಲನಾದ ತಂದೆ ರಾಮ ಮೋಹನ ಇವನನ್ನು ತನ್ನೊಂದಿಗೆ ವಕೀಲಿ ವೃತ್ತಿಯಲ್ಲಿ ಮುಂದುವರಿಯುವಂತೆ ಪ್ರೋತ್ಸಾಹಿಸಿದ. ಆದರೆ ದುರ್ಗಾಪ್ರಸಾದನ ಮನೋಭಾವವೇ ಬೇರೆ. ಅವನ ಮನಸ್ಸೆಲ್ಲ ನಿವೃತ್ತಿಪರವಾದ ಸಂನ್ಯಾಸದ ಕಡೆಗೇ ವಾಲಿಕೊಂಡಿತ್ತು. ಅವನು ತನ್ನ ಇಪ್ಪತ್ತೈದನೆಯ ವಯಸ್ಸಿನವರೆಗೆ ಹೇಗೋ ಸಂಸಾರಜೀವನ ನಡೆಸಿದ. ಅವನಿಗೊಂದು ಗಂಡುಮಗುವೂ ಆಯಿತು. ಆದರೆ ಆ ವೇಳೆಗಾಗಲೇ ಅವನ ವೈರಾಗ್ಯ ತೀವ್ರವಾಗಿಬಿಟ್ಟಿತ್ತು. ೧೮೩೫ ರಲ್ಲೊಂದು ದಿನ, ಮನೆ ಮಡದಿ ಮಗು ಎಲ್ಲವನ್ನೂ ಬಿಟ್ಟು ಹೊರಟುಹೋಗಿ ಸಂನ್ಯಾಸಿಯಾದ. ಬಳಿಕ ಮನೆಯವರಿಗೆ ಅವನ ಸುದ್ದಿಯೇ ಸಿಗಲಿಲ್ಲ. ಪತಿ ಹೀಗೆ ಸಂನ್ಯಾಸಿಯಾದರೂ ಪತ್ನಿ ಶ್ಯಾಮಸುಂದರಿ ತನ್ನ ಪುಟ್ಟ ಮಗು ವಿಶ್ವನಾಥನನ್ನು ಪಾಲಿಸಿ ಪೋಷಿಸಿ ಮೇಲಕ್ಕೆ ತರಬೇಕಾಗಿದೆ. ಶ್ಯಾಮಸುಂದರಿ ಸ್ವಭಾವತಃ ಧೈರ್ಯಶಾಲಿನಿ, ದೈವಭಕ್ತೆ. ಈಗ ಈ ಪುಟ್ಟ ಮಗುವನ್ನು ಸಾಕಿಸಲಹಿ ದೊಡ್ಡದು ಮಾಡುವ ಗುರುತರ ಜವಾಬ್ದಾರಿಯನ್ನೂ ನಿಭಾಯಿಸಬಲ್ಲ ಸಾಮರ್ಥ್ಯ ಅವಳಲ್ಲಿತ್ತು.

ಮಗು ವಿಶ್ವನಾಥ ಇನ್ನೂ ಮೂರು ವರ್ಷದವನಿರುವಾಗ ಶ್ಯಾಮಸುಂದರಿ ತನ್ನ ಮಗುವಿನೊಂದಿಗೆ ಕಾಶೀಯಾತ್ರೆ ಹೊರಟಳು. ಆಗಿನ್ನೂ ರೈಲುದಾರಿ ಆಗಿರಲಿಲ್ಲ. ಆದ್ದ ರಿಂದ ಇವಳ ಯಾತ್ರಿಕ ತಂಡ ದೋಣಿಯಲ್ಲಿ ಪ್ರಯಾಣ ಹೊರಟಿತು. ಕಲ್ಕತ್ತದಿಂದ ಕಾಶಿಗೆ ಸುಮಾರು ಐನೂರು ಮೈಲಿ. ಉದ್ದಕ್ಕೂ ಜಲಮಾರ್ಗವಾಗಿಯೇ ಪ್ರಯಾಣ. ಇದೊಂದು ರೋಮಾಂಚಕಾರೀ ಪ್ರವಾಸ. ಗಂಭೀರವಾಹಿನಿಯಾದ ಗಂಗೆಯ ಪವಿತ್ರ ಸಲಿಲದ ಮೇಲೆ ದೋಣಿ ತೇಲುತ್ತ ಹೋದಂತೆ ಪ್ರಯಾಣಿಕರಿಗೆ ನದಿಯ ಇಕ್ಕೆಲ ಗಳಲ್ಲಿನ ನೂತನ ನಗರಗಳು, ನೂತನ ದೃಶ್ಯಗಳು, ಜನವರ್ಗಗಳು, ನೂತನ ಭಾಷೆ ಗಳು—ಇವೆಲ್ಲದರ ಅನುಭವವಾಗುತ್ತಿತ್ತು.

ಒಂದು ದಿನ ಬೆಳಗ್ಗೆ ಎಂದಿನಂತೆ ದೋಣಿ ಸಾಗುತ್ತಿದೆ; ಮಗು ವಿಶ್ವನಾಥ ದೋಣಿಯ ಅಂಚಿನಲ್ಲಿ ಆಟವಾಡುತ್ತಿದ್ದವನು ದೊಪ್ಪನೆ ನದಿಯೊಳಗೆ ಬಿದ್ದುಬಿಟ್ಟ! ತಾಯಿ ಶ್ಯಾಮಸುಂದರಿ ಹಿಂದೆಮುಂದೆ ನೋಡದೆ ತಾನೂ ನದಿಯೊಳಗೆ ಹಾರಿಯೇ ಬಿಟ್ಟಳು! ಅವಳಿಗೇನೂ ಈಜು ಬರುತ್ತಿರಲಿಲ್ಲ. ಸಾಲದ್ದಕ್ಕೆ ಮೈತುಂಬ ಬಟ್ಟೆ ಬೇರೆ.

ಆದರೆ ತನ್ನ ಮಗುವನ್ನು ರಕ್ಷಿಸಿಕೊಳ್ಳಬೇಕು ಎನ್ನುವ ಕಾತರದಲ್ಲಿ ಅವಳಿಗೆ ಆಗ ಅದೊಂದೂ ತೋಚಲಿಲ್ಲ. ಅದೃಷ್ಟವಶಾತ್ ಅವಳು ಸಕಾಲದಲ್ಲಿ ನೀರಿಗೆ ಧುಮುಕಿದ್ದರಿಂದ ಮಗುವಿನ ಕೈ ಸಿಕ್ಕಿತು; ಅದನ್ನೇ ಬಲವಾಗಿ ಹಿಡಿದುಕೊಂಡಳು. ಮಗುವನ್ನೇನೋ ಹಿಡಿದುಕೊಂಡಳು, ಆದರೆ ದೋಣಿಯನ್ನು ಸೇರುವ ಬಗೆ ಹೇಗೆ? ದೋಣಿ ಬೇರೆ ಮುಂದುಮುಂದಕ್ಕೆ ಸರಿಯುತ್ತಿದೆ! ಆದರೆ ಕುಶಲಿಗಳಾದ ಅಂಬಿಗರು ತಾಯಿ-ಮಗು ಇಬ್ಬರನ್ನೂ ರಕ್ಷಿಸಿ ಮೇಲೆ ತಂದರು. ಶ್ಯಾಮಸುಂದರಿ ಮಗುವನ್ನು ಎಷ್ಟೊಂದು ಬಲವಾಗಿ ಹಿಡಿದುಕೊಂಡಿದ್ದಳೆಂದರೆ, ಆ ಹಿಡಿತದಿಂದ ಮಗುವಿನ ಮೈಮೇಲೆ ಉಂಟಾದ ಗುರುತು ಹಲವಾರು ವರ್ಷಗಳವರೆಗೂ ಉಳಿದುಕೊಂಡಿತ್ತು.

ಅಂತೂ ತಾಯಿಮಕ್ಕಳು ವಾರಾಣಸಿಯನ್ನು ತಲುಪಿದರು. ಅಲ್ಲಿನ ಪವಿತ್ರ ವಾತಾವರಣದಿಂದ ಪುಳಕಿತಗೊಂಡ ಶ್ಯಾಮಸುಂದರಿ ಎಲ್ಲ ದೇವಾಲಯಗಳಿಗೂ ಹೋಗಿ ಪ್ರಣಾಮ ಸಲ್ಲಿಸಿದಳು. ಒಂದು ದಿನ ಅವಳು ಗಂಗಾನದಿಯಲ್ಲಿ ಸ್ನಾನ ಮುಗಿಸಿಕೊಂಡು ವಿಶ್ವನಾಥ ದೇವಾಲಯದ ಕಡೆಗೆ ಹೊರಟಿದ್ದಾಗ ದಾರಿಯಲ್ಲಿ ಕಾಲುಜಾರಿ ಬಿದ್ದುಬಿಟ್ಟಳು. ಬಿದ್ದ ರಭಸಕ್ಕೆ ಪ್ರಜ್ಞೆಯೇ ತಪ್ಪಿಹೋದಂತಾಯಿತು. ಅದೇ ಸಮಯಕ್ಕೆ ಎದುರಿನಿಂದ ಬರುತ್ತಿದ್ದ ಒಬ್ಬ ಸಂನ್ಯಾಸಿ ಆಕೆಯ ನೆರವಿಗೆ ಒದಗಿಬಂದ. ಮೆಲ್ಲನೆ ಅವಳನ್ನು ಎತ್ತಿ ತಂದು ದೇವಸ್ಥಾನದ ಮೆಟ್ಟಿಲ ಮೇಲೆ ಮಲಗಿಸಿದ. ಶ್ಯಾಮಸುಂದರಿ ನಿಧಾನವಾಗಿ ಕಣ್ತೆರೆದು ನೋಡುತ್ತಾಳೆ—ಎದುರಿಗೆ ಒಬ್ಬ ಸಂನ್ಯಾಸಿ. ಪುನಃ ಕಣ್ಣುಜ್ಜಿಕೊಂಡು ನೋಡುತ್ತಾಳೆ—ಆ ಸಂನ್ಯಾಸಿ ಇನ್ನಾರೂ ಅಲ್ಲ, ತನ್ನ ಪತಿ! ಆತನಿಗೂ ಪತ್ನಿಯ ಗುರುತು ಸಿಕ್ಕಿತು. ತಕ್ಷಣ ಇಬ್ಬರ ಮನಸ್ಸಿನಲ್ಲೂ ಪ್ರಚಂಡ ಭಾವೋದ್ವೇಗ ಸಂಚಾರವಾಯಿತು. ಆದರೆ ಇಬ್ಬರೂ ಪ್ರಾಪಂಚಿಕತೆಯನ್ನು ತೊರೆದವರು. ಕಣ್ಮುಚ್ಚಿ ತೆರೆಯುವಷ್ಟರಲ್ಲಿ ಆ ಸಂನ್ಯಾಸಿ, "ಓ ಮಾಯೆ! ಮಾಯೆ!" ಎಂದು ಮಟಗುಟ್ಟುತ್ತ ಕಣ್ಮರೆಯಾಗಿಬಿಟ್ಟ. ಇತ್ತ ಶ್ಯಾಮಸುಂದರಿ ಏನೂ ನಡೆಯಲೇ ಇಲ್ಲವೆಂಬಂತೆ, ಸುಧಾರಿಸಿಕೊಂಡೆದ್ದು ತನ್ನ ದಾರಿಯಲ್ಲಿ ಮುಂದುವರಿದಳು.

ದುರ್ಗಾಪ್ರಸಾದ ಸಂನ್ಯಾಸಿಯಾಗಿ ಹೋದಾಗಿನಿಂದ ಅವನ ಸೋದರನಾದ ಕಾಳೀಪ್ರಸಾದನೇ ಮನೆಯ ಯಜಮಾನನಾದ. ಆದರೆ ಇವನು ಹೆಸರಿಗೆ ಮಾತ್ರ ಯಜಮಾನ ಅಷ್ಟೆ; ದುಡಿದು ತರಬಲ್ಲ ಸಾಮರ್ಥ್ಯ ಇರಲಿಲ್ಲ. ತನ್ನ ಪೂರ್ವಜರು ಕೂಡಿಟ್ಟ ಹಣವನ್ನೇ ಖರ್ಚು ಮಾಡುತ್ತ ಬಂದ. 'ಕೂತುಂಬಗೆ ಕುಡಿಕೆ ಹಣವೂ ಸಾಲದು' ಎಂಬಂತೆ ಇವನ ಸಂಪತ್ತು ಕರಗುತ್ತ ಬಂತು. ಸಾಲದ್ದಕ್ಕೆ ಸಂಸಾರ ಬೇರೆ ದೊಡ್ಡದು. ಬರಬರುತ್ತ ಬಡವರಾದರು. ಕಾಳೀಪ್ರಸಾದ ತನ್ನ ಅಣ್ಣನ ಸಂಸಾರವನ್ನಂತೂ ಬಹಳಷ್ಟು ನಿರ್ಲಕ್ಷಿಸಿಬಿಟ್ಟ. ಶ್ಯಾಮಸುಂದರಿ ಬಹಳಷ್ಟು ಕಷ್ಟಪಟ್ಟು ಮಗನನ್ನು ಬೆಳೆಸಬೇಕಾಯಿತು. ಹೋಗಲಿ, ಅವನನ್ನು ಪ್ರಾಯಪ್ರಬುದ್ಧನಾಗುವವರೆಗಾದರೂ ನೋಡಿಕೊಳ್ಳಲು ಅವಳಿಗೆ ಸಾಧ್ಯವಾಯಿತೇ ಎಂದರೆ ಅದೂ ಇಲ್ಲ. ಅಷ್ಟರೊಳಗೇ ಅವಳು ತೀರಿಹೋದಳು. ಹೀಗೆ ತಂದೆ ಸಂನ್ಯಾಸಿಯಾದ, ತಾಯಿ ತೀರಿಕೊಂಡಳು, ಮಗ ತಬ್ಬಲಿಯಾದ. ವಿಶ್ವನಾಥನಿಗಿನ್ನೂ ಹತ್ತು ವರ್ಷ. ಈಗ ಅವನನ್ನು ನೋಡಿಕೊಳ್ಳಬೇಕಾದವನು ಚಿಕ್ಕಪ್ಪನಾದ ಕಾಳೀಪ್ರಸಾದ. ಆದರೆ ಅವನು ಮೊದಲೇ ಅಣ್ಣನ ಸಂಸಾರದ ಕಡೆಗೆ ಉದಾಸೀನ. ಈಗಂತೂ ಈ ಅಸಹಾಯಕನಾದ ತಬ್ಬಲಿ ಹುಡುಗನನ್ನು ಅವನ ಪಾಡಿಗೆ ಬಿಟ್ಟುಬಿಟ್ಟ. ಬೆಳೆದು ದೊಡ್ಡವನಾದಂತೆಲ್ಲ ವಿಶ್ವನಾಥ

ನಿಗೆ, ಆಸ್ತಿಪಾಸ್ತಿಯ ವಿಷಯದಲ್ಲಿ ಚಿಕ್ಕಪ್ಪ ತನಗೆ ಮೋಸ ಮಾಡುತ್ತಿರುವುದು ಚೆನ್ನಾಗಿ ಗೊತ್ತಾಯಿತು. ಆದರೂ ಅವನು ಮಾತ್ರ ತನ್ನ ಚಿಕ್ಕಪ್ಪನನ್ನು ಕೊನೆಯುವರೆಗೂ ಗೌರವ ದಿಂದಲೇ ನೋಡಿಕೊಂಡ.

ವಿಶ್ವನಾಥ ತಂದೆ-ತಾಯಿ ಇಲ್ಲದ ತಬ್ಬಲಿಯಾದರೂ ಅವನು ಬೆಳೆದುಬಂದದ್ದು ಅವಿಭಕ್ತ ಕುಟುಂಬದಲ್ಲಾದ್ದರಿಂದ ಅವನ ವಿದ್ಯಾಭ್ಯಾಸ ನಿರಾತಂಕವಾಗಿ ನಡೆಯಿತು. ಬುದ್ಧಿವಂತನಾದ ವಿಶ್ವನಾಥನಲ್ಲಿ ಮೂಡಿಬರುತ್ತಿರುವ ಪ್ರತಿಭೆಯನ್ನು ಕಂಡರೆ ದತ್ತ ಮನೆತನದವರೆಲ್ಲ ಹೆಮ್ಮೆ ಪಡುವಂತಿತ್ತು. ಅವನು ತನ್ನ ವಿದ್ಯಾಭ್ಯಾಸದ ಅವಧಿಯಲ್ಲಿ ಹಲವಾರು ಭಾಷೆಗಳನ್ನು ಕಲಿತ. ಬಂಗಾಳಿ, ಇಂಗ್ಲಿಷ್, ಪರ್ಷಿಯನ್, ಅರೇಬಿಕ್, ಉರ್ದು, ಹಿಂದಿ—ಈ ಎಲ್ಲ ಭಾಷೆಗಳಲ್ಲಿ ಪರಿಣತಿ ಪಡೆದ. ಸಂಸ್ಕೃತ ಪಾಠಶಾಲೆಗೆ ಹೋಗಿ ಸಂಪ್ರದಾಯದ ಪ್ರಕಾರವೇ ಸಂಸ್ಕೃತ ಕಲಿತ. ವಿಶ್ವನಾಥನಿಗೆ ಇತಿಹಾಸದ ವಿಷಯದಲ್ಲಿ ವಿಶೇಷ ಒಲವು. ಅವನು ಜ್ಯೋತಿಷವನ್ನೂ ಅಧ್ಯಯನ ಮಾಡಿದ್ದ. ಮುಂದೆ ತನ್ನ ಮಕ್ಕಳ ಜಾತಕವನ್ನು ಅವನೇ ಬರೆದ. ಅವನಿಗೆ ಸಂಗೀತದಲ್ಲೂ ವಿಶೇಷ ಆಸಕ್ತಿ. ತಂದೆ ದುರ್ಗಾಪ್ರಸಾದನ ಕಂಠದಂತೆ ಅವನ ಕಂಠವೂ ತುಂಬ ಮಧುರ. ಕೆಲವು ವರ್ಷ ಅವನು ಶಾಸ್ತ್ರೀಯ ಸಂಗೀತವನ್ನೂ ಅಭ್ಯಾಸ ಮಾಡಿದ್ದ. ಮುಂದೆ ಅವನು ಉದ್ಯೋಗಸ್ಥನಾಗಿ ಸ್ವತಂತ್ರನಾದ ಮೇಲೆ ಮನೆಯಲ್ಲಿ ಆಗಾಗ ಸಂಗೀತ ಕಛೇರಿ ಗಳನ್ನು ಏರ್ಪಡಿಸಿ ಆಹ್ವಾನಿತರಿಗೆಲ್ಲ ಪಲಾವಿನ ಊಟ ಮಾಡಿಸುತ್ತಿದ್ದ.

ವಿದ್ಯಾಭ್ಯಾಸ ಮುಗಿಸಿದ ಮೇಲೆ ವಿಶ್ವನಾಥ ಕೈಗೊಂಡ ಮೊದಲ ವೃತ್ತಿ ವ್ಯಾಪಾರೋದ್ಯಮ. ಆದರೆ ಅದು ಅವನಿಗೆ ಕೈಹತ್ತಲಿಲ್ಲ. ಬಳಿಕ ವಕೀಲಿ ವೃತ್ತಿ ಹಿಡಿದ. ನುರಿತ ಆಂಗ್ಲ ವಕೀಲರಿಂದ ತರಬೇತಿ ಪಡೆದ. ಕ್ರಮೇಣ ಇವನ ವಕಾಲತ್ತು ಜನಪ್ರಿಯ ವಾಯಿತು. ಕಡೆಗೆ ಕಲ್ಕತ್ತದ ಹೈಕೋರ್ಟಿನ ವಕೀಲನಾಗಿ ಪ್ರತಿಷ್ಠಿತನಾದ. ಇವನ ವಕೀಲಿ ವೃತ್ತಿ ಉತ್ತರ ಹಿಂದೂಸ್ಥಾನದಲ್ಲೆಲ್ಲ ಪ್ರಸಿದ್ಧಿಗೊಂಡು ವ್ಯಾಪಿಸಿಕೊಂಡಿತು. ಈ ವೃತ್ತಿ ಅವನನ್ನು ದೂರದೂರದ ಸ್ಥಳಗಳಾದ ಲಕ್ನೋ, ಲಾಹೋರ್, ದೆಹಲಿ, ರಜಪುತಾನ, ಬಿಲಾಸಪುರ, ರಾಯಪುರಗಳಿಗೆಲ್ಲ ಕರೆದೊಯ್ದಿತು.

ವಿಶ್ವನಾಥ ವಕೀಲಿ ವೃತ್ತಿಯ ಮೂಲಕ ಅಪಾರ ಹಣ ಸಂಪಾದನೆ ಮಾಡಿದ. ಆದರೆ ಅಷ್ಟೇ ಧಾರಾಳವಾಗಿ ಖರ್ಚೂ ಮಾಡಿದ. ಮನೆಯ ತುಂಬ ಬಂಧುಗಳು, ಸ್ನೇಹಿತರು. ಮನೆಗೆಲಸಕ್ಕೆ ಹಲವಾರು ಜನ ಆಳುಕಾಳುಗಳು. ಸಂಚಾರಕ್ಕೆ ಸ್ವಂತ ಕುದುರೆ ಸಾರೋಟು. ಹೀಗೆ ಅವನದು ಸಮೃದ್ಧಿಯ ಜೀವನ, ಧಾರಾಳದ ಜೀವನ. ತನ್ನ ಬಳಿಯಿರುವವರೆಲ್ಲರೂ ತೃಪ್ತಿಯಿಂದಿರಬೇಕು ಎಂಬ ತುಂಬುಹೃದಯದ ಉಲ್ಲಾಸ ಮಯ ಸ್ವಭಾವ ಅವನದು. ಆತ ಒಳ್ಳೇ ರಸಜ್ಞ; ಪಾಕಶಾಸ್ತ್ರದಲ್ಲಿ ನುರಿತವನು. ಮನೆಗೆ ಬಂದ ಅತಿಥಿಗಳಿಗೆ ತಾನೇ ಸ್ವತಃ ರಸಭರಿತವಾದ ಭಕ್ಷ್ಯಗಳನ್ನು ತಯಾರಿಸಿ ಬಡಿಸುತ್ತಿದ್ದ.

ಬೆಳೆಯುವ ಮಕ್ಕಳಿಗೆ ಯೋಗ್ಯ ರೀತಿಯಲ್ಲಿ ಚೆನ್ನಾಗಿ ತಿನ್ನಿಸಬೇಕು, ಇಲ್ಲದಿದ್ದರೆ ಮಕ್ಕಳ ಬುದ್ಧಿಶಕ್ತಿ ವೃದ್ಧಿಯಾಗುವುದಿಲ್ಲ ಎನ್ನುವುದು ವಿಶ್ವನಾಥನ ನಂಬಿಕೆ. ಆದ್ದರಿಂದ ಮಕ್ಕಳಿಗೆ ಒಳ್ಳೆಯ ಪೌಷ್ಟಿಕಾಹಾರವನ್ನು ಒದಗಿಸಿಕೊಡುವಲ್ಲಿ ಖರ್ಚಿಗೆ ಸ್ವಲ್ಪವೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಮಕ್ಕಳಿಗಾಗಿ ಅಪಾರವಾದ ಆಸ್ತಿ ಮಾಡಿಟ್ಟು ಹೋಗು ವುದು ಅಗತ್ಯವೂ ಅಲ್ಲ, ಯೋಗ್ಯವೂ ಅಲ್ಲ; ಬದಲಾಗಿ ಅವರಿಗೆ ಶ್ರೇಷ್ಠ ಜೀವನಕ್ರಮ

ವನ್ನು ಕಲಿಸಿಕೊಡಬೇಕು, ಒಳ್ಳೆಯ ವಿದ್ಯಾಭ್ಯಾಸ ಕೊಡಿಸಬೇಕು, ಅವರಲ್ಲಿ ಆರೋಗ್ಯ ಶಾಲಿಯಾದ ಶರೀರಸಂಪತ್ತನ್ನು ಬೆಳೆಸಬೇಕು; ಹೀಗೆ ಮಾಡಿ ಅವರನ್ನು ಅವರ ಪಾಡಿಗೆ ಬಿಟ್ಟುಬಿಟ್ಟರೆ ಮುಂದೆ ತಮ್ಮ ಜೀವನವನ್ನು ತಾವೇ ಚೆನ್ನಾಗಿ ನಿರ್ವಹಿಸಿಕೊಳ್ಳುತ್ತಾರೆ ಎನ್ನುವುದು ವಿಶ್ವನಾಥನ ಅಭಿಪ್ರಾಯ. ನಿಜಕ್ಕೂ ಇದೊಂದು ಗಮನಾರ್ಹವಾದ ಕ್ರಾಂತಿಕಾರೀ ಭಾವನೆಯೇ ಸರಿ. ಅವನು ಇಂತಹ ನಿರ್ಧಾರಕ್ಕೆ ಬರುವುದಕ್ಕೊಂದು ಪ್ರಬಲವಾದ ಕಾರಣವಿತ್ತು. ಹಿಂದೆ ಆ ದತ್ತ ಮನೆತನದ ಹಿರಿಯರು ಕೂಡಿಟ್ಟಿದ್ದ ಅಪಾರವಾದ ಸಂಪತ್ತನ್ನು ಮುಂದೆ ಹುಟ್ಟಿಬಂದ ಮಂದಿಯೆಲ್ಲ ಸುಮ್ಮನೆ ಕೂತುಂಡೇ ಕರಗಿಸಿಬಿಟ್ಟಿದ್ದರು. ಆದರೆ ವಿಶ್ವನಾಥ ಸ್ವತಃ ತಾನು ತಬ್ಬಲಿಯಾಗಿ ಕಷ್ಟದಲ್ಲೇ ಬೆಳೆದರೂ ಸ್ವಪ್ರಯತ್ನದಿಂದ ಶ್ರೀಮಂತನಾಗಿದ್ದ. ಇದನ್ನೆಲ್ಲ ಕಂಡೇ ಅವನು, ಸರಿಯಾದ ಶಿಕ್ಷಣ ಮತ್ತು ಒಳ್ಳೆಯ ಆಹಾರ ಹಾಗೂ ವ್ಯಾಯಾಮಗಳ ಮೂಲಕ ಮಕ್ಕಳಿಗೆ ಆರೋಗ್ಯ ಶಾಲಿಯಾದ ಶರೀರಸಂಪತ್ತನ್ನೂ ತೇಜಸ್ವಿಯಾದ ವಿದ್ಯಾಬುದ್ಧಿಯನ್ನೂ ಕೊಡಬೇಕೇ ಹೊರತು ಅವರ ಹೆಸರಿನಲ್ಲಿ ಆಸ್ತಿಮಾಡಿಟ್ಟುಹೋಗುವುದಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದ.

ವಿಶ್ವನಾಥ ತನ್ನ ಹಲವಾರು ಶ್ರೇಷ್ಠ ಗುಣಗಳಿಂದ ಬಹಳಷ್ಟು ಜನಪ್ರಿಯತೆ ಗಳಿಸಿದ್ದ. ಯಾವ ವ್ಯಕ್ತಿಗಳ ಜೊತೆಯಲ್ಲೇ ಇರಲಿ, ಎಂಥ ಪರಿಸ್ಥಿತಿಯಲ್ಲೇ ಆಗಲಿ ಅವನು ತನ್ನ ಉದಾತ್ತ-ಗಂಭೀರ ಭಾವವನ್ನು ಕಳೆದುಕೊಳ್ಳುತ್ತಿರಲಿಲ್ಲ. ಅವನದು ಸ್ವತಂತ್ರ ಮನೋಭಾವ, ಉದಾರ ಸ್ವಭಾವ. ಸ್ನೇಹಿತರೊಂದಿಗೆ ಅತ್ಯಂತ ಪ್ರಾಮಾಣಿಕ ಸ್ನೇಹ. ಅವನು ದೀನಬಂಧು. ದೀನದಲಿತರ ದೈನ್ಯದ ಕರೆಗೆ ಅವನ ಕಿವಿ ಯಾವಾಗಲೂ ತೆರೆದೇ ಇರುತ್ತಿತ್ತು. ಬಡವರ ಕಷ್ಟಕಾರ್ಪಣ್ಯಗಳನ್ನು ಕಂಡು ಅವನು ಕರಗಿಹೋಗು ತ್ತಿದ್ದ. ಅವರಿಗಾಗಿ ಸಹಾನುಭೂತಿ ತೋರಿಸುತ್ತಿದ್ದ. ಕೇವಲ ಕಣ್ಣೊರೆಸುವ ಸಹಾನು ಭೂತಿಯಲ್ಲ, ಅವರಿಗಾಗಿ ಎಷ್ಟಾದರೂ ಖರ್ಚು ಮಾಡಲು ಮುಂದಾಗುತ್ತಿದ್ದ. ಅವನ ಸಂಬಂಧಿಕರ ಮಕ್ಕಳೆಷ್ಟೋ ಜನ ಅವನ ಮನೆಯಲ್ಲೇ ವಾಸವಾಗಿದ್ದುಕೊಂಡು ಅವನ ಖರ್ಚಿನಲ್ಲೇ ವಿದ್ಯಾಭ್ಯಾಸ ಪಡೆದರು. ಮತ್ತು ಮುಂದೆ ಎಲ್ಲರೂ ಒಳ್ಳೊಳ್ಳೆಯ ಉದ್ಯೋಗ ಪಡೆದು ಯಶಸ್ವೀ ಜೀವನ ನಡೆಸುವಂತಾದರು. ಸಂಬಂಧಿಕರಿರಲಿ, ವಿಶ್ವ ನಾಥನ ನೆರೆಹೊರೆಯವರೂ ಕೂಡ ಅವನ ಸಹಾಯಹಸ್ತದಿಂದ ವಂಚಿತರಾಗಲಿಲ್ಲ. ಅವನಲ್ಲಿಗೆ ಸಹಾಯ ಬೇಡಿ ಬಂದವರು ಯಾರೂ ನಿರಾಶರಾಗಿ ಹಿಂದಿರುಗಲಿಲ್ಲ. ಆ ಪ್ರದೇಶದ ಜನರಲ್ಲಿ ಅವನು 'ದಾತಾ ವಿಶ್ವನಾಥ' ಎಂದೇ ಪ್ರಸಿದ್ಧನಾಗಿದ್ದ.

ಹೀಗೆ, ತಾನು ಹೇರಳವಾಗಿ ಸಂಪಾದಿಸಿದ್ದನ್ನು ಅವನು ಅಷ್ಟೇ ಧಾರಾಳವಾಗಿ ಖರ್ಚು ಮಾಡುತ್ತಿದ್ದ. ನಾಳೆಯ ಯೋಚನೆಯೇ ಇಲ್ಲದೆ ಕೇಳಿದವರಿಗೆಲ್ಲ ಕೊಡು ತ್ತಿದ್ದ. ಅವನ ಔದಾರ್ಯ ಎಷ್ಟರಮಟ್ಟಿಗಿತ್ತೆಂದರೆ ಅವನು ಸೋಮಾರಿಗಳಾದ ಕೆಲವು ಸಂಬಂಧಿಗಳಿಗೆ ಆಶ್ರಯ ಕೊಟ್ಟದ್ದಲ್ಲದೆ ಅವರ ಕುಡಿತಕ್ಕೂ ಹಣ ಕೊಡುತ್ತಿದ್ದ! ಇದನ್ನು ಕಂಡ ಅವನ ಹಿರಿಯ ಮಗ ನರೇಂದ್ರ—ಇವನೇ ಮುಂದೆ ವೀರಸಂನ್ಯಾಸಿ ವಿವೇಕಾನಂದ—ಈ ಅತಿರೇಕವನ್ನು ಟೀಕಿಸುತ್ತ ಒಮ್ಮೆ ಕೇಳುತ್ತಾನೆ: "ಅಪ್ಪಾ, ಇಂಥಾ ಸೋಂಬೇರಿಗಳನ್ನೆಲ್ಲ ಯಾಕೆ ಸಾಕುತ್ತಿದ್ದೀಯ ನೀನು?" ಎಂದು. ಆಗ ಲೋಕಾನು ಭವಿಯಾದ ಆ ತಂದೆ ಹೇಳುತ್ತಾನೆ: "ಮಗು, ಜನರು ಅನುಭವಿಸುವ ಕಷ್ಟಸಂಕಟ ಗಳನ್ನು ನೀನೇನು ಬಲ್ಲೆ ಹೇಳು? ಅದು ನಿನಗೆ ಅರ್ಥವಾದಾಗ ನೀನೂ ಅವರ

ಅಸಹಾಯಕ ಪರಿಸ್ಥಿತಿಗಾಗಿ ಮರುಗುತ್ತೀ. ಇವರೆಲ್ಲ ತಮ್ಮ ಅಸಹನೀಯ ಕಷ್ಟಗಳನ್ನು ಒಂದಿಷ್ಟು ಮದ್ಯಪಾನದ ಮತ್ತಿನಲ್ಲಿ ತಾತ್ಕಾಲಿಕವಾಗಿಯಾದರೂ ಮರೆಯುವ ಹಾಗಿದ್ದರೆ ಯಾಕಾಗಬಾರದು?" ಇದಕ್ಕೇನೂ ಪ್ರತ್ಯುತ್ತರ ಕೊಡಲು ತೋಚದೆ ನರೇಂದ್ರ ಸುಮ್ಮನಾಗಿಬಿಟ್ಟ.

ವಿಶ್ವನಾಥ ದತ್ತ ಬಂಧುಗಳೊಂದಿಗೆ, ದೀನರೊಂದಿಗೆ ಕರುಣೆಯಿಂದಿರುತ್ತಿದ್ದ, ವಿಶ್ವಾಸದಿಂದಿರುತ್ತಿದ್ದ ಎನ್ನುವುದೇನೋ ನಿಜ. ಆದರೆ ಮೂಲತಃ ಅವನದು ಗಂಭೀರ ಮನೋಧರ್ಮ. ಯಾರೇ ಆಗಲಿ, ಅಸಂಬದ್ಧದ, ಅನ್ಯಾಯದ ಮಾತುಗಳನ್ನಾಡಿದರೆ ಅವನು ಅವುಗಳನ್ನೆಲ್ಲ ಖಡಕ್ಕಾಗಿ ಖಂಡಿಸಿಬಿಡುತ್ತಿದ್ದ.

ಅವನ ದೃಷ್ಟಿಕೋನ ವಿಶಾಲ; ತಿಳಿವಳಿಕೆ ಅಪಾರ. ಅವನು ಉದಾರ ಮನೋಭಾವದವನಾದ್ದರಿಂದ ಇತರ ಮತಗಳ ತತ್ತ್ವ-ಸಂದೇಶಗಳನ್ನು ತಿಳಿದುಕೊಳ್ಳಲು ಇಷ್ಟಪಡುತ್ತಿದ್ದ. ಬೈಬಲ್, ದಿವಾನ್-ಇ-ಹಫೀಜ್ ಈ ಗ್ರಂಥಗಳನ್ನು ಅವನು ಆಳವಾಗಿ ಅಧ್ಯಯನ ಮಾಡಿದ್ದ. ಬೈಬಲಿನ ಬಗ್ಗೆ ಅವನಿಗೆ ವಿಶೇಷ ಗೌರವಭಾವವಿತ್ತು. ಅವನು ಎಷ್ಟೋ ವೇಳೆ ಮಾತಿನ ಸಂದರ್ಭದಲ್ಲಿ ಬೈಬಲಿನ ಬೋಧನೆಗಳನ್ನು ಉದಾಹರಿಸುವುದಿತ್ತು.

ವಿಶ್ವನಾಥ ದತ್ತನ ಮನೋಭಾವ ಪುರೋಗಾಮಿ, ಪ್ರಗತಿಪರ. ಉತ್ತರ ಹಿಂದೂಸ್ಥಾನದ ಹಲವಾರು ಪ್ರದೇಶಗಳಲ್ಲಿ ಸಂಚರಿಸುತ್ತಿದ್ದಾಗ ಅವನು ಅಲ್ಲಿನ ಜನರ ನಾನಾ ಬಗೆಯ ಮೂಢನಂಬಿಕೆಗಳನ್ನೂ ಕಂದಾಚಾರಗಳನ್ನೂ ಕಂಡಿದ್ದ. ಅವುಗಳಿಂದ ಜನ ಜೀವನದ ಮೇಲಾಗಿದ್ದ ದುಷ್ಪರಿಣಾಮಗಳನ್ನೂ ಮನಗಂಡಿದ್ದ. ಆದ್ದರಿಂದ ಸಾಮಾನ್ಯರಿಗೆ ಸರಿಯಾದ ಜೀವನಕ್ರಮದ ಸ್ಪಷ್ಟಕಲ್ಪನೆ ಕೊಡುವುದಕ್ಕೋಸ್ಕರ ಹಿಂದೀ ಮತ್ತು ಬಂಗಾಳೀ ಭಾಷೆಗಳಲ್ಲಿ 'ಶಿಷ್ಟಾಚಾರ ಪದ್ಧತಿ' ಎಂಬ ಒಂದು ಗ್ರಂಥವನ್ನೇ ಬರೆದು ಪ್ರಚಾರ ಮಾಡಿದ. ಆ ದಿನಗಳಲ್ಲಿ ಬಂಗಾಳದಲ್ಲಿ ಬಾಲ್ಯವಿವಾಹ ತುಂಬ ಪ್ರಚಲಿತವಿತ್ತು. ಈ ಬಾಲ್ಯವಿವಾಹ ಪದ್ಧತಿಯ ಒಂದು ಪ್ರಧಾನ ದೋಷವೆಂದರೆ ಹುಡುಗಿ ಬಾಲವಿಧವೆಯಾಗುವ ಸಂಭವ. ಈ ಬಾಲವಿಧವೆ ಜೀವನದುದ್ದಕ್ಕೂ ಹೇಳಲಾರದ ಬವಣೆಗಳನ್ನು ಅನುಭವಿಸುವಂತಾಗುತ್ತದೆ. ಆದ್ದರಿಂದ, ಬಾಲ್ಯವಿವಾಹದ ಈ ಕ್ರೂರ ಪದ್ಧತಿಯನ್ನು ವಿಶ್ವನಾಥ ವಿರೋಧಿಸುತ್ತಿದ್ದ. ಮತ್ತು ಈ ಅನಿಷ್ಟ ಪದ್ಧತಿಯ ನಿರ್ಮೂಲನಕ್ಕಾಗಿ ಹಾಗೂ ವಿಧವೆಯರ ಪುನರ್ವಿವಾಹವನ್ನು ರೂಢಿಗೊಳಿಸುವುದಕ್ಕಾಗಿ ಈಶ್ವರಚಂದ್ರ ವಿದ್ಯಾಸಾಗರರು ನಡೆಸುತ್ತಿದ್ದ ಚಳವಳಿಯನ್ನು ಅವನು ಬೆಂಬಲಿಸುತ್ತಿದ್ದ. ಒಮ್ಮೆ ವಿಶ್ವನಾಥನ ಮನೆಯ ಬಳಿಯಲ್ಲೇ ಎರಡು ವಿಧವಾ ವಿವಾಹಗಳು ಜರುಗಿದಾಗ ಹಲವಾರು ಜನ ಅದನ್ನು ತೀವ್ರವಾಗಿ ಪ್ರತಿಭಟಿಸಿ ಗಲಭೆಯೆಬ್ಬಿಸಿದರು. ಆಗ ವಿಶ್ವನಾಥನೂ ಅವನ ಪತ್ನಿ ಭುವನೇಶ್ವರಿಯೂ ವಿವಾಹವನ್ನು ಬಲವಾಗಿ ಸಮರ್ಥಿಸಿದರು. ಅವನು ಹಿಂದೂಸಂಪ್ರದಾಯಗಳಲ್ಲಿ ಸಂಪೂರ್ಣ ಗೌರವಾದರಗಳನ್ನಿಟ್ಟಿದ್ದ. ಆದರೆ ಅದೇ ಸಂಪ್ರದಾಯಗಳಲ್ಲಿ ಕಂಡುಬರುವ ಸಂಕುಚಿತ ಮಡಿವಂತಿಕೆಗಳನ್ನು ದೂರದಲ್ಲೇ ಇಟ್ಟಿದ್ದ.

ಅದು ಭಾರತದ ಇತಿಹಾಸದಲ್ಲೊಂದು ಪರ್ವಕಾಲ. ೧೯ನೇ ಶತಮಾನದ ವೇಳೆಗೆ, ನೂರಾರು ವರ್ಷಗಳ ಮುಸಲ್ಮಾನರ ಆಳ್ವಿಕೆಯ ಪರಿಣಾಮವಾಗಿ ಉತ್ತರ ಭಾರತದಲ್ಲಿ ಹಿಂದೂ-ಇಸ್ಲಾಂ ಸಂಸ್ಕೃತಿಗಳ ಮಿಶ್ರಣದಿಂದಾಗಿ ಹೊಸ ಬಗೆಯ

ಸಂಸ್ಕೃತಿಯೊಂದು ವೈದೋರಿತ್ತು. ಬಳಿಕ ಬಂದ ಬ್ರಿಟಿಷರ ಆಳ್ವಿಕೆಯ ಪರಿಣಾಮವಾಗಿ ಪಾಶ್ಚಾತ್ಯ ಸಂಸ್ಕೃತಿಯೂ ಹಿಂದೂ ಜನಜೀವನವನ್ನು ಪ್ರವೇಶಮಾಡಿತು. ಆಗಿನ ಕಾಲದ ವಿದ್ಯಾವಂತ ವರ್ಗದವರೆಲ್ಲ ಈ ಹೊಸ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು. ವಿಶ್ವನಾಥ ದತ್ತನೂ ಇದಕ್ಕೆ ಅಪವಾದವಾಗಿರಲಿಲ್ಲ. ಅವನ ಆಪ್ತವರ್ಗದಲ್ಲಿ ಮುಸಲ್ಮಾನರೂ ಆಂಗ್ಲರೂ ಅನೇಕರಿದ್ದರು. ಇವರೆಲ್ಲರ ನಿಕಟ ಸಂಪರ್ಕದಿಂದಾಗಿ ಅವನ ಸಾಮಾಜಿಕ ಹಾಗೂ ಕೌಟುಂಬಿಕ ಜೀವನದಲ್ಲಿ ಮುಸ್ಲಿಮರ ಮತ್ತು ಪಾಶ್ಚಾತ್ಯರ ಸಂಸ್ಕೃತಿ-ನಾಗರಿಕತೆಗಳು ಬಹಳಷ್ಟು ಪ್ರವೇಶ ಮಾಡಿದ್ದುವು. ಅವನ ಬಳಿಗೆ ಭಿಕ್ಷೆಗಾಗಿ ಹಿಂದೂ ಸಾಧುಗಳೂ ಬರುತ್ತಿದ್ದರು, ಮುಸಲ್ಮಾನ ಫಕೀರರೂ ಬರುತ್ತಿದ್ದರು. ಅವರೆಲ್ಲರ ಮೇಲೂ ವಿಶ್ವನಾಥ ಸಮಾನ ಮನ್ನಣೆ ತೋರುತ್ತಿದ್ದ. ದತ್ತ ವಂಶಸ್ಥರು ಶಾಕ್ತ ಸಂಪ್ರದಾಯದವರು; ಎಂದರೆ ದೇವಿಯ ಆರಾಧಕರು. ವಿಶ್ವನಾಥನು ಪರಮತಗಳ ವಿಷಯದಲ್ಲಿ ಉದಾರದೃಷ್ಟಿಯುವನಾದರೂ ತನ್ನ ಮನೆತನದ ಧಾರ್ಮಿಕ ಸಂಪ್ರದಾಯಗಳನ್ನು ಬದಲಾಯಿಸುವ ಗೋಜಿಗೆ ಹೋಗಲಿಲ್ಲ.

## ಧರೆಗಿಳಿದ ನರೇಂದ್ರ ೨

ಭುವನೇಶ್ವರೀ ದೇವಿ ಮದುವೆಯಾಗಿ ಪತಿಗೃಹ ಪ್ರವೇಶ ಮಾಡಿದಾಗ ಅವಳಿಗಿನ್ನೂ ಹತ್ತು ವರ್ಷವಷ್ಟೆ. ಪತಿ ವಿಶ್ವನಾಥ ದತ್ತ ಹದಿನಾರರ ತರುಣ. ಭುವನೇಶ್ವರಿ ತನ್ನ ತಾಯ್ತಂದೆಯರಿಗೆ ಒಬ್ಬಳೇ ಮಗಳು. ಆದ್ದರಿಂದ ಮುಂದೆ ಅವಳ ಪಿತ್ರಾರ್ಜಿತ ಆಸ್ತಿಯೆಲ್ಲ ಅವಳ ಪಾಲಿಗೇ ಬಂದು ಸೇರಿತು. ಹುಡುಗಿ ಭುವನೇಶ್ವರಿ ಬೆಳೆದು ದೊಡ್ಡವಳಾದಂತೆ ಮನೆವಾರ್ತೆಯ ಎಲ್ಲ ಕೆಲಸ ಕಾರ್ಯಗಳನ್ನೂ ತುಂಬ ದಕ್ಷತೆಯಿಂದ ನಿರ್ವಹಿಸಿಕೊಂಡು ಬಂದಳು. ಅದು ಅವಿಭಕ್ತ ಕುಟುಂಬವಾದುದರಿಂದ ಅವಳಿಗೆ ಕೈತುಂಬ ಕೆಲಸ. ಆದರೆ ಅವಳ ಸಾಮರ್ಥ್ಯದ ಮುಂದೆ ಅದೊಂದು ತೀರಾ ಸಣ್ಣ ವಿಷಯ. ಅವಳು ತುಂಬ ಚಾತುರ್ಯದಿಂದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದುದರಿಂದ ಸಾಕಷ್ಟು ಸಮಯ ಮಿಗುತ್ತಿತ್ತು. ಈ ಬಿಡುವಿನ ವೇಳೆಯಲ್ಲಿ ಅವಳು ಹೊಲಿಗೆಯ ಕೆಲಸ, ಸಂಗೀತಾಭ್ಯಾಸ, ರಾಮಾಯಣ-ಮಹಾಭಾರತಗಳ ಅಧ್ಯಯನ ಮಾಡುತ್ತಿದ್ದಳು. ಅವಳದು ಭವ್ಯ, ಪ್ರಸನ್ನ-ಗಂಭೀರ ವ್ಯಕ್ತಿತ್ವ. ಆದ್ದರಿಂದ ಜನ ಅವಳನ್ನು ಗೌರವಾದರಗಳಿಂದ ಕಾಣದಿರಲು ಸಾಧ್ಯವೇ ಇರಲಿಲ್ಲ. ಸುತ್ತಮುತ್ತಲ ಜನ ಹಲವಾರು ವಿಷಯಗಳಲ್ಲಿ ಅವಳ ಸಹಾಯವನ್ನು ಪಡೆಯುತ್ತಿದ್ದರು. ಇವೆಲ್ಲಕ್ಕಿಂತ ಹೆಚ್ಚಾಗಿ ಆಕೆ ತುಂಬ ಭಕ್ತಿಮತಿ. ತಪ್ಪದೆ ಪ್ರತಿದಿನ ಶಿವಪೂಜೆ ಮಾಡುತ್ತಿದ್ದಳು. ಅವಳು ಅತಿ ಮಾತಿನವಳಲ್ಲ; ಭಗವದಿಚ್ಛೆಗೆ ಮಣಿದು ಶಾಂತ-ಗಂಭೀರ ಜೀವನ ನಡೆಸುತ್ತಿದ್ದ ಉದಾತ್ತ ಮಹಿಳೆ. ಬಿಡುವಿನ ವೇಳೆಯಲ್ಲಿ ದೇವರನಾಮಗಳನ್ನು ಹಾಡಿಕೊಳ್ಳುತ್ತಿದ್ದಳು. ಪತಿ ವಿಶ್ವನಾಥನಂತೆಯೇ ಅವಳಿಗೂ ಮಧುರವಾದ ಕಂಠಶ್ರೀ ಇತ್ತು. ಅವಳ ನೆನಪಿನ ಶಕ್ತಿ ಅಗಾಧವಾದುದು. ರಾಮಾಯಣ-ಮಹಾಭಾರತಗಳ ನೂರಾರು ಶ್ಲೋಕಗಳನ್ನು ಕಂಠಸ್ಥ ಮಾಡಿಬಿಟ್ಟಿದ್ದಳು. ಅದಕ್ಕಿಂತ ಹೆಚ್ಚಾಗಿ, ಈ ಗ್ರಂಥಗಳ ಸಾರವನ್ನು ಚೆನ್ನಾಗಿ ಗ್ರಹಿಸಿದ್ದಳು. ಇವಳ ಇನ್ನೊಂದು ಗುಣವಿಶೇಷವೆಂದರೆ, ಪತಿ ವಿಶ್ವನಾಥನಂತೆಯೇ ಬಡಬಗ್ಗರ ಮೇಲಿನ ಸಹಾನುಭೂತಿ.

ಇವೆಲ್ಲ ಸರಿಯೆ. ಉತ್ತಮ ಪತಿ, ಹೇರಳ ಐಶ್ವರ್ಯ, ಉನ್ನತ ಗುಣನಡತೆ—ಈ ಎಲ್ಲ ಸೌಭಾಗ್ಯಗಳೂ ಭುವನೇಶ್ವರಿಯ ಪಾಲಿಗಿದ್ದುವು. ಆದರೆ ಒಂದೇ ಒಂದು ಚಿಂತೆ ಒಳಗೇ ಕೊರೆಯುತ್ತಿತ್ತು—ಒಂದಾದರೂ ಗಂಡು ಮಗುವಿಲ್ಲವೆಂಬ ಚಿಂತೆ. ಅವಳಿಗಾಗಲೇ ಮೂರು ಮಕ್ಕಳಾಗಿದ್ದುವು, ಆದರೆ ಮೂರೂ ಹೆಣ್ಣು—ಒಬ್ಬಳು ಹರಮೋಹಿನಿ, ಇನ್ನೊಬ್ಬಳು ಸ್ವರ್ಣಮಯಿ; ಮೂರನೆಯವಳು ಬಾಲ್ಯದಲ್ಲೇ ತೀರಿಹೋಗಿದ್ದಳು. ಭುವನೇಶ್ವರಿಗೆ ಹೆಣ್ಣುಮಕ್ಕಳೆಂದು ತಿರಸ್ಕಾರವೇನಿಲ್ಲ; ಆದರೆ ಒಂದು ಪುತ್ರಸಂತಾನ ಬೇಕು ಎನ್ನುವುದು ಬಹುತೇಕ ಮಾತೆಯರ ಹಂಬಲವಲ್ಲವೆ? ತಮ್ಮ ಬಯಕೆಗಳನ್ನು ಕುಲದೇವತೆಯ ಮುಂದಿಟ್ಟು, ಇಲ್ಲವೆ, ಆ ವಿಶೇಷ ಬಯಕೆಗಳನ್ನು ಸುಲಭವಾಗಿ ಈಡೇರಿಸಿಕೊಡಬಲ್ಲ ಇನ್ನಾವುದೇ ದೇವತೆಯ ಮುಂದಿಟ್ಟು ಪ್ರಾರ್ಥಿಸಿಕೊಳ್ಳುವುದು, ಅದಕ್ಕೆ ಸಂಬಂಧಪಟ್ಟ ವ್ರತಗಳನ್ನು ಆಚರಿಸುವುದು—ಇದು ಹಿಂದೂಗಳಲ್ಲಿ ಅನಾದಿಯಿಂದ ನಡೆದುಕೊಂಡು ಬಂದ ಪದ್ಧತಿ. ಅಂತೆಯೇ ಭುವನೇಶ್ವರೀ ದೇವಿಯೂ ಈಗ,

ತನ್ನ ಇಷ್ಟದೇವತೆಯಾದ ಶಿವನನ್ನು ಪ್ರಾರ್ಥಿಸಿಕೊಳ್ಳಲಾರಂಭಿಸಿದಳು. ಪೂಜೆಯ ವೇಳೆಯಲ್ಲಿ ಮಾತ್ರವಲ್ಲ, ಮನೆವಾರ್ತೆಯ ಕೆಲಸಕಾರ್ಯಗಳನ್ನು ಮಾಡುತ್ತಿರುವಾಗಲೂ ಮನಸ್ಸಿನಲ್ಲೇ, "ಹೇ ದೇವ, ನನಗೊಂದು ಗಂಡುಸಂತಾನವನ್ನು ದಯಪಾಲಿಸು" ಎಂದು ಪ್ರಾರ್ಥಿಸಿಕೊಳ್ಳುತ್ತಿದ್ದಳು. ಹೀಗಿರುವಾಗ, ಅವಳಿಗೆ ಕಾಶಿಯ ವೀರೇಶ್ವರ ಶಿವನ ನೆನಪಾಯಿತು. ಅವನಿಗೆ ಹರಕೆ ಹೊತ್ತು ಪೂಜೆ ಸಲ್ಲಿಸಿದರೆ ತನ್ನ ಮನೋರಥ ಈಡೇರಬಹುದೆಂಬ ಆಸೆ ಮೂಡಿತು. ಆದರೆ ವಾರಾಣಸಿಗೆ ಹೋಗುವುದೆಂದರೆ ಅಷ್ಟು ಸುಲಭವೆ ? ಆದರೆ ಆ ದಿನಗಳಲ್ಲಿ ಒಂದು ಸಂಪ್ರದಾಯ ಪ್ರಚಲಿತವಿತ್ತು. ಏನೆಂದರೆ, ದೂರದ ಊರುಗಳಲ್ಲಿರುವವರು ತಮ್ಮ ಸಂಕಲ್ಪಗಳನ್ನು ಸಿದ್ಧಿಸಿಕೊಳ್ಳಲು, ಕಾಶಿಯಲ್ಲಿ ತಮ್ಮ ಪರಿಚಿತರು ಯಾರಾದರೂ ಇದ್ದರೆ ಅವರ ಮೂಲಕ ಕಾಶೀವಿಶ್ವನಾಥನಿಗೆ ಹರಕೆ ಸಲ್ಲಿಸಿ ಪೂಜೆ ಕೊಡಿಸಬಹುದಾಗಿತ್ತು. ಕಾಶಿಯಲ್ಲಿ ಭುವನೇಶ್ವರಿಯ ಮುದಿ ಚಿಕ್ಕಮ್ಮ ಒಬ್ಬಳಿದ್ದಳು. ತನ್ನ ಪರವಾಗಿ ವೀರೇಶ್ವರ ಶಿವನಿಗೆ ಪೂಜೆ ಮಾಡಿಸಿ ಪ್ರಾರ್ಥನೆ ಸಲ್ಲಿಸಬೇಕು ಎಂದು ಕೇಳಿಕೊಂಡು ಭುವನೇಶ್ವರಿ ತನ್ನ ಚಿಕ್ಕಮ್ಮನಿಗೊಂದು ಪತ್ರ ಬರೆದಳು. ಅದಕ್ಕೆ ಅವಳ ಚಿಕ್ಕಮ್ಮ ಒಪ್ಪಿಕೊಂಡು, "ಒಂದು ವರ್ಷಕಾಲ ನಾನಿಲ್ಲಿ ಪ್ರತಿ ಸೋಮವಾರ ಶಿವನಿಗೆ ಪೂಜೆ ಸಲ್ಲಿಸುತ್ತೇನೆ. ನೀನೂ ಆ ಸಮಯಕ್ಕೆ ಸರಿಯಾಗಿ ಮನೆಯಲ್ಲೇ ವಿಶೇಷ ವ್ರತನಿಯಮಗಳನ್ನಾಚರಿಸಿ ಪ್ರಾರ್ಥನೆ ಮಾಡುತ್ತಿರು" ಎಂದು ಉತ್ತರ ಬರೆದಳು. ಭುವನೇಶ್ವರಿಯ ಆನಂದಕ್ಕೆ ಪಾರವೇ ಇಲ್ಲವಾಯಿತು. ಸೋಮವಾರ ಬಂದಿತೆಂದರೆ ತನ್ನ ಚಿಕ್ಕಮ್ಮ ಅಲ್ಲಿ ವಾರಾಣಸಿಯಲ್ಲಿ ವೀರೇಶ್ವರ ಶಿವನಿಗೆ ಪುಷ್ಪಾರ್ಚನೆ ಮಾಡಿಸಿ ಪ್ರಾರ್ಥನೆ ಸಲ್ಲಿಸುತ್ತಿರುವಾಗ ಇಲ್ಲಿ ಭುವನೇಶ್ವರಿಯೂ ಶಿವ ಪೂಜೆಯಲ್ಲಿ ನಿರತಳಾಗುತ್ತಿದ್ದಳು. ಅವಳ ಮನಸ್ಸೆಲ್ಲ ವಾರಾಣಸಿಗೆ ಹಾರಿಹೋಗಿ ಅಲ್ಲಿ ಚಿಕ್ಕಮ್ಮನ ಜೊತೆ ಸೇರಿ ವೀರೇಶ್ವರ ಶಿವನ ಪೂಜೆಯಲ್ಲಿ ಭಾಗಿಯಾಗುತ್ತಿತ್ತು. ಸೋಮವಾರಗಳಂದು ಮಾತ್ರವಲ್ಲದೆ ಅವಳು ಪ್ರತಿದಿನವೂ ಪೂಜೆ ಮಾಡುತ್ತಿದ್ದಳು. ಉಪವಾಸವ್ರತಗಳನ್ನು ಆಚರಿಸುತ್ತಿದ್ದಳು. ಹೀಗೆಯೇ ಕಳೆಯಿತು ಒಂದು ವರ್ಷ.

ಅಂದು ಆ ವರ್ಷದ ಕೊನೆಯ ದಿನ. ಆ ದಿನ ಬೆಳಗ್ಗೆ ಭುವನೇಶ್ವರಿ ಇನ್ನಷ್ಟು ವಿಶೇಷವಾಗಿ ವೀರೇಶ್ವರ ಶಿವನ ಧ್ಯಾನದಲ್ಲಿ ತಲ್ಲೀನಳಾದಳು. ಒಂದು ವರ್ಷದ ನಿರಂತರ ಭಕ್ತಿಸಾಧನೆಯ ಪರಿಣಾಮವಾಗಿ ಅವಳ ಮನಸ್ಸು ಶಿವಮಯವೇ ಆಗಿ ಧ್ಯಾನಲೀನವಾಗಿಬಿಟ್ಟಿತು. ಅನಂತ ಶಕ್ತಿಶಾಲಿಯಾದ ವೀರೇಶ್ವರ ಶಿವ ಅವಳ ಹೃದಯದಲ್ಲಿ ತಾನೇತಾನಾಗಿ ಬೆಳಗುತ್ತಿದ್ದ. ಅಂದು ಹಗಲೆಲ್ಲ ಶಿವಪೂಜೆ-ಶಿವಧ್ಯಾನಗಳಲ್ಲೇ ಕಳೆಯಿತು. ಹಗಲು ಕಳೆದು ರಾತ್ರಿಯಾಯಿತು. ಭುವನೇಶ್ವರಿಯ ಜೀವನದ ಅತ್ಯಂತ ಶುಭರಾತ್ರಿ ಅದು. ಅವಳು ಶಿವಸ್ಮರಣೆ ಮಾಡುತ್ತಲೇ ಮಲಗಿಕೊಂಡಳು; ನಿದ್ರೆಯ ಮೌನದಲ್ಲಿ ಮುಳುಗಿದಳು. ಆಗ ದೇವಲೋಕದಲ್ಲಿ ಒಂದು ದಿವ್ಯ ಶುಭ ಮುಹೂರ್ತ ಸಂಘಟಿಸಿತು. ಆಗಲೇ ಭುವನೇಶ್ವರಿ ಶಿವಕೃಪೆ ಹೊಂದುವ ಕಾಲವೂ ಪ್ರಾಪ್ತವಾಯಿತು. ಆಕೆಯ ಭಕ್ತಿಯುತ ಪೂಜೆಗೆ ಒಲಿದ ವೀರೇಶ್ವರ ಶಿವ ತನ್ನ ಅನಂತ ಧ್ಯಾನದಿಂದೆದ್ದು ಬಂದು ಅವಳಿಗೆ ದರ್ಶನ ನೀಡಿದ. ಅವಳು ಆ ಜ್ಯೋತಿರ್ಮಯ ಶಿವನ ಪಾದವನ್ನು ಮುಟ್ಟಿ ನಮಸ್ಕರಿಸಿದಳು. ತಕ್ಷಣ ಶಿವನ ಆ ಆಕೃತಿ ಒಂದು ಗಂಡು ಮಗುವಿನ ರೂಪಕ್ಕೆ ಪರಿವರ್ತಿತವಾಯಿತು. ತಾನು ಅವಳ ಮಗನಾಗಿ ಜನಿಸುತ್ತೇನೆ ಎಂಬುದರ ಸಂಕೇತವೇ ಇದು ! ತನ್ನ ಹೃತ್ಪೂರ್ವಕ ಪ್ರಾರ್ಥನೆಗೆ ಸ್ವಯಂ ವೀರೇಶ್ವರ ಶಿವನೇ ಈ ಸ್ವಪ್ನದರ್ಶನದ

ಮೂಲಕ ಉತ್ತರವನ್ನು ಪ್ರಕಟಪಡಿಸಿದ್ದಾನೆ ಎಂದು ಭುವನೇಶ್ವರಿಗೆ ನಂಬಿಕೆ ಯಾಯಿತು. ಅವಳ ಶ್ರದ್ಧೆ ಫಲಿಸಿತು. ಸಕಾಲದಲ್ಲಿ ಆಕೆ ಪುತ್ರಪ್ರಸವಕ್ಕೆ ಸಿದ್ಧಳಾದಳು.

೧೮೬೩ನೇ ಇಸವಿ ಜನವರಿ ತಿಂಗಳ ೧೨, ಸೋಮವಾರದಂದು ಭುವನೇಶ್ವರೀ ದೇವಿ ಸಮಸ್ತ ಭುವನವನ್ನೇ ಬೆಳಗಲಿರುವ ದಿವ್ಯಜ್ಯೋತಿಯನ್ನು ಧರೆಗೆ ನೀಡಿದಳು. ಸ್ವಾಮಿ ವಿವೇಕಾನಂದ ಎಂಬ ಪ್ರಖ್ಯಾತ ನಾಮದಿಂದ ಜ್ವಲಿಸಬೇಕಾದ ಆ ಜ್ಯೋತಿ, ಸೂರ್ಯೋದಯಕ್ಕೆ ಸ್ವಲ್ಪ ಮೊದಲು ಭುವಿಯನ್ನು ಸೋಂಕಿತು. ಸ್ವಯಂ ಜ್ಯೋತಿಷ ಬಲ್ಲ ವಿಶ್ವನಾಥ ಜಾತಕ ನೋಡಿದ—ಅತ್ಯಂತ ಶ್ರೇಷ್ಠ ತಾರಾಬಲ, ಗ್ರಹಬಲ. ಅಂದು ಮಕರಸಂಕ್ರಾಂತಿಯ ಶುಭದಿನ, ಹಿಂದುಗಳ ಪರ್ವದಿನ. ಕೋಟಿಗಟ್ಟಲೆ ಜನ ಅಂದು ಆ ಶುಭದಿನದಲ್ಲಿ ಪೂಜೆ-ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದರು. ನಿಜಕ್ಕೂ ತಮಗರಿವಿಲ್ಲ ದೆಯೇ ಅವರೆಲ್ಲ ತಮ್ಮ ಪೂಜೆ-ಪ್ರಾರ್ಥನೆಗಳ ಮೂಲಕ ಆ ನವಜಾತ ಶಿಶುವನ್ನು ಸ್ವಾಗತಿಸಿದರೆನ್ನಬಹುದು. ಹಾಗೆಯೇ ಇತ್ತಕಡೆ ಕಲ್ಕತ್ತದಿಂದ ಕೆಲವೇ ಮೈಲಿ ದೂರ ದಲ್ಲಿರುವ ದಕ್ಷಿಣೇಶ್ವರದ ಕಾಳೀದೇವಾಲಯದಲ್ಲಿ, ಭೂತ-ವರ್ತಮಾನ-ಭವಿಷ್ಯತ್ಕಾಲ ಗಳನ್ನೆಲ್ಲ ಏಕಕಾಲದಲ್ಲಿ ಕಾಣುತ್ತಿರುವ ಪರಮಋಷಿಯೊಬ್ಬನು, ತಾನು ಈ ಜಗತ್ತಿನಲ್ಲಿ ಮಾಡುತ್ತಿರುವ ಮಹಾಕಾರ್ಯವನ್ನು ಮುಂದುವರಿಸಿಕೊಂಡು ಹೋಗುವುದಕ್ಕಾಗಿ ಅವತರಿಸಿದ ಈ ನವಜಾತ ಶಿಶುವಿನ ಆಗಮನವನ್ನೇ ನಿರೀಕ್ಷಿಸಿಕೊಂಡು ಕುಳಿತಿದ್ದ.

ಮಗುವಿನ ರೂಪಲಾವಣ್ಯವನ್ನು, ಅದರ ಮೈಕಟ್ಟನ್ನು ನೋಡಿ ಮನೆಮಂದಿ ಯೆಲ್ಲ ವಿಸ್ಮಯಾನಂದಭರಿತರಾದರು. ಮಗು ಹಲವು ವಿಧದಲ್ಲಿ ತನ್ನ ತಾತನಾದ ದುರ್ಗಾಪ್ರಸಾದನನ್ನೇ ಹೋಲುತ್ತಿರುವುದನ್ನು ಕಂಡು ಅವನೇ ಈಗ ಮತ್ತೊಮ್ಮೆ ಜನ್ಮ ತಾಳಿ ಬಂದಿರಬಹುದೇ ಹೇಗೆ, ಎಂಬ ಆಶ್ಚರ್ಯ ಅವರಿಗೆಲ್ಲ. ನಾಮಕರಣದ ಸಂದರ್ಭ ಬಂದಾಗ ಮನೆಮಂದಿಯೊಳಗೆ ಒಂದು ದೊಡ್ಡ ಚರ್ಚೆಯೇ ನಡೆಯಿತು. ಮಗುವಿಗೆ 'ದುರ್ಗಾಪ್ರಸಾದ' ಎಂದು ಅದರ ತಾತನ ಹೆಸರನ್ನೇ ಇಡುವುದೆಂಬ ಅಭಿಪ್ರಾಯ ಮೂಡಿತು. ಆದರೆ ಭುವನೇಶ್ವರಿಗೆ ಇದು ಒಪ್ಪಿಗೆಯಾಗಲಿಲ್ಲ. ಅವಳು ಮಗುವಿನ ಮುಖವನ್ನೇ ನಿಟ್ಟಿಸಿದಳು; ಅದರ ಕಣ್ಣೊಳಗೆ ಕಣ್ಣಿಟ್ಟು ನೋಡಿದಳು. ಅವಳು ಆ ಮಗುವಿನ ಅಂತರಾಳವನ್ನೇ ಹೊಕ್ಕಿ ನೋಡುವಂತಿತ್ತು. ಕೊನೆಗೆ ಭುವನೇಶ್ವರಿ ಮುಖವೆತ್ತಿ ಇತರರ ಕಡೆಗೆ ತಿರುಗಿ ಗಂಭೀರ ಭಾವದಿಂದ ನುಡಿದಳು: "ಇವನು ವೀರೇಶ್ವರ ಶಿವನ ವರಪ್ರಸಾದವಲ್ಲವೇನು ? ಆದ್ದರಿಂದ ಇವನ ಹೆಸರು 'ವೀರೇಶ್ವರ' ಎಂದೇ ಆಗಬೇಕು." ಎಲ್ಲರಿಗೂ ಇದು ಒಪ್ಪಿಗೆಯಾಯಿತು. ವೀರೇಶ್ವರ ಎಂದು ನಾಮಕರಣವಾಯಿತು. ಮುದ್ದಿಗೆ ಈ ಹೆಸರು 'ಬಿಲೇ' ಎಂದಾಯಿತು. ಆದರೆ ಮುಂದೆ 'ನರೇಂದ್ರನಾಥ' ಎಂಬ ಹೆಸರು ರೂಢಿಗೆ ಬಂತು.

ಈ ಮುದ್ದಾದ, ಗುಂಡುಗುಂಡಾದ ಮಗುವನ್ನು ತೋಳಲ್ಲೆತ್ತಿಕೊಂಡಾಗ ತಾಯಿ ಭುವನೇಶ್ವರಿಯ ಎದೆ ಹೆಮ್ಮೆಯಿಂದ ಬೀಗುತ್ತಿತ್ತು; ಕಂಗಳು ತೇವವಾಗುತ್ತಿದ್ದುವು. ಸುದೀರ್ಘ ಪ್ರಾರ್ಥನಾದಿಗಳ ಫಲವಾಗಿ ಮಡಿಲಿಗೆ ಬಂದ ಮುದ್ದು ಮಗುವಲ್ಲವೇ ಅದು ! ಆದ್ದರಿಂದಲೇ ಆ ಹೆಮ್ಮೆ ಧನ್ಯತೆಯ ಆನಂದಾಶ್ರು. ಆದರೆ ಈತ ಸಾಮಾನ್ಯ ಮಗುವಲ್ಲ. ಒಳಗೆ ಅಸಾಧಾರಣ ಶಕ್ತಿ ತುಂಬಿಕೊಂಡಿದೆ. ಆದ್ದರಿಂದಲೇ ವಿಪರೀತ ಚೇಷ್ಟೆ. ಮನೆಯ ತುಂಬ ಅವನದೇ ಕಾರುಬಾರು. ಆ ದೊಡ್ಡ ಮನೆಯಲ್ಲಿ ಅವನು ಮುಟ್ಟದ ಮೂಲೆಗಳೇ ಇಲ್ಲ. ಒಟ್ಟಿನಲ್ಲಿ ಅವನು ಮನೆ ತುಂಬಿಬಿಟ್ಟಿದ್ದಾನೆ. ಅವನಿನ್ನೂ

ಮೂರು ವರ್ಷದ ಬಾಲನಾಗಿರುವಾಗಲೇ ಮನೆಯ ನಾರೀಕುಲದಿಂದ ಭುವನೇಶ್ವರಿಗೆ ದೂರುಗಳು ಬರಲಾರಂಭವಾಯಿತು. ನಿಜ, ಗಂಡು ಮಗು. ಕೇವಲ ಗಂಡಲ್ಲ, ಮುಂದೆ ಗಂಡುಗಲಿಯಾಗಲಿರುವ ಧೀರ ಗಂಡು! ಆದ್ದರಿಂದ ಬಾಲ್ಯದಲ್ಲಿ ಅವನ ತಂಟೆ ಕೂಡ ಅದೇ ಪರಿಮಾಣದಲ್ಲಿದ್ದರೆ ಆಶ್ಚರ್ಯವೇನಿದೆ?

ಆದರೆ ಅವನ ತಂಟೆಯು ಭರಾಟೆಯನ್ನು ನಿಭಾಯಿಸುವವರಿಗೆ ಮಾತ್ರ ಸಾಕು ಸಾಕಾಗುತ್ತಿತ್ತು. ಕೆಲವು ಸಲವಂತೂ ಅವನ ತಂಟೆ ಮಿತಿಮೀರುತ್ತಿತ್ತು. ಆಗ ಮನೆ ಮಂದಿಯೆಲ್ಲ ಸುಸ್ತಾಗಿಬಿಡುತ್ತಿದ್ದರು. ಅವನಿಗೆ ಬಗೆಬಗೆಯ ಆಟದ ಸಾಮಾನುಗಳನ್ನು ಕೊಟ್ಟು ಲೋಭಗೊಳಿಸಿ ನೋಡುತ್ತಿದ್ದರು, ಹೆದರಿಸಿಯೂ ನೋಡುತ್ತಿದ್ದರು. ಆದರೆ ಯಾವುದಕ್ಕೂ ಜಗ್ಗುವವನಲ್ಲ ನರೇಂದ್ರ. ಇಂತಹ ಮಗನನ್ನು ಪಡೆಯಲು ಭುವನೇಶ್ವರಿ ಎಷ್ಟು ತಪಸ್ಸು ಮಾಡಬೇಕಾಯಿತೋ ಈಗ ಅವನನ್ನು ಹತೋಟಿಗೆ ತರುವುದಕ್ಕೂ ಅಷ್ಟೇ ತಪಸ್ಸು ಮಾಡಬೇಕಾಯಿತು! ಕೊನೆಗೆ ಅವಳೊಂದು ಉಪಾಯ ಕಂಡುಕೊಂಡಳು. ನರೇಂದ್ರ ರಂಪಾಟ ಮಾಡಿದಾಗಲೆಲ್ಲ 'ಶಿವ, ಶಿವ!' ಎಂದು ಉಚ್ಚರಿಸುತ್ತ ಅವನ ತಲೆಯ ಮೇಲೊಂದು ಕೊಡ ತಣ್ಣೀರು ಸುರಿಯುತ್ತಿದ್ದಳು. ಆಶ್ಚರ್ಯ! ತಕ್ಷಣವೇ ಅವನ ರಂಪಾಟ ನಿಲ್ಲುತ್ತಿತ್ತು! ನಿಜ; ಅವನು ವೀರೇಶ್ವರ ಶಿವನಲ್ಲವೇ? ಆದ್ದರಿಂದ ಜಪ ಮಾಡುತ್ತ ಕುಂಭಾಭಿಷೇಕ ಮಾಡಿದಾಗಲೇ ಅವನು ಶಾಂತನಾಗುವುದು! ಇನ್ನು ಕೆಲವು ಸಲ ಅವಳು, "ನೋಡು, ನೀನು ಇದೇ ರೀತಿ ರಂಪ ಮಾಡುತ್ತಿದ್ದರೆ ಶಿವ ನಿನ್ನನ್ನು ಕೈಲಾಸಕ್ಕೆ ಸೇರಿಸುವುದಿಲ್ಲ!" ಎಂದು ಹೆದರಿಸುತ್ತಿದ್ದಳು. ಈ ಮಾತು ಮಂತ್ರದಂತೆ ಕೆಲಸ ಮಾಡುತ್ತಿತ್ತು; ಅವನು ಕೂಡಲೇ ತಣ್ಣಗಾಗಿಬಿಡುತ್ತಿದ್ದ. ಆದರೂ ಈ ತುಂಟ ನರೇಂದ್ರನನ್ನು ನೋಡಿಕೊಳ್ಳಲು ಭುವನೇಶ್ವರಿ ಒಬ್ಬರಲ್ಲ, ಇಬ್ಬರು ದಾದಿಯರನ್ನು ನೇಮಕ ಮಾಡಿಕೊಳ್ಳಬೇಕಾಯಿತಂತೆ! ಆದರೆ ಅವನು ಅಷ್ಟು ತುಂಟನಾದರೂ ಎಲ್ಲರಿಗೂ ಪ್ರಿಯನಾಗಿದ್ದ. ಅವನಲ್ಲೊಂದು ಮಾಧುರ್ಯವಿತ್ತು; ಆಕರ್ಷಣೆಯಿತ್ತು. ಹಳಬರು - ಹೊಸಬರು, ಪರಿಚಿತರು - ಅಪರಿಚಿತರು ಎಂಬ ಭೇದವೇ ಇಲ್ಲದೆ ಯಾರು ಕರೆದರೆ ಅವರ ಬಳಿಗೆ ಹೋಗಿರುತ್ತಿದ್ದ.

ಸಾಧುಗಳನ್ನು, ದಾಸಯ್ಯಗಳನ್ನು ಕಂಡರೆ ನರೇಂದ್ರನಿಗೆ ಅದೇನೋ ವಿಶೇಷ ಆಸಕ್ತಿ. ಮನೆಯ ಬಾಗಿಲಿಗೆ ಸಾಧುಗಳು ಬಂದರೆ ಸಾಕು, ಉತ್ಸಾಹದಿಂದ ಅವರ ಬಳಿಗೋಡುತ್ತಿದ್ದ; ಕೈಗೆ ಸಿಕ್ಕಿದ್ದನ್ನು ತೆಗೆದು ಕೊಟ್ಟುಬಿಡುತ್ತಿದ್ದ. ಒಂದು ದಿನ ಹೀಗೇ ಒಬ್ಬ ಸಾಧು ಬಂದು ಭಿಕ್ಷೆ ಕೇಳಿದ. ನರೇಂದ್ರ ನೋಡಿದ, ಆಗ ಅವನ ಹತ್ತಿರ ಇದ್ದುದೆಂದರೆ ಅವನು ಸುತ್ತಿಕೊಂಡಿದ್ದ ಪುಟ್ಟ ಧೋತಿ ಮಾತ್ರ (ಬಂಗಾಳದಲ್ಲಿ ಪುಟ್ಟ ಹುಡುಗರಿಗೂ ಧೋತಿ ಉಡಿಸುತ್ತಾರೆ). ಅದು ಕಸೂತಿ ಹಾಕಿದ್ದ ಒಳ್ಳೆಯ ಧೋತಿ. ಅವನಿಗೆ ಅದರ ಮೇಲೆ ತುಂಬ ಅಭಿಮಾನ; ಏಕೆಂದರೆ ಅವನು ಈಚೆಗೆ ಬಾಲ್ಯವನ್ನು ದಾಟಿ ಕೌಮಾರ್ಯಕ್ಕೆ ಕಾಲಿಟ್ಟಾಗ ಉಡಿಸಿದ್ದ ಧೋತಿ ಅದು. ಆದರೆ ಸಾಧು ಭಿಕ್ಷೆ ಕೇಳಿದಾಗ ಹಿಂದೆಮುಂದೆ ನೋಡದೆ, ಅದನ್ನೇ ಬಿಚ್ಚಿ ಕೊಟ್ಟುಬಿಟ್ಟ! ಸಾಧು ಸಂತೋಷದಿಂದ ಆ ಧೋತಿಯನ್ನು ತಲೆಗೆ ಸುತ್ತಿಕೊಂಡು ಹುಡುಗನನ್ನು ಆಶೀರ್ವದಿಸುತ್ತ ಹೊರಟು ಹೋದ. ಹುಡುಗ ಕೈಬೀಸಿಕೊಂಡು ತಾಯಿಯ ಹತ್ತಿರಕ್ಕೆ ಬಂದ—ಬರಿ ಮೈ! "ಬಿಲೇ, ಧೋತಿ ಎಲ್ಲಿ?" ತಾಯಿ ಕೇಳಿದಳು. ನರೇಂದ್ರ ಸಲೀಸಾಗಿ ಹೇಳಿಬಿಟ್ಟ: "ಸಾಧು ಬಂದು ಭಿಕ್ಷೆ ಕೇಳಿದ, ನಾನದನ್ನು ಕೊಟ್ಟುಬಿಟ್ಟೆ!" ಆಗ ಆ ತಾಯಿಯ ಮನಃಸ್ಥಿತಿ

ಏನಾಗಿರಬಹುದೆಂಬುದನ್ನು ನಾವೇ ಊಹಿಸಿ ನೋಡಬೇಕು.

ವಿಶ್ವನಾಥ ದತ್ತನ ಮನೆಗೆ ಎಷ್ಟೋ ಜನ ಸಾಧುಗಳು-ಭಿಕ್ಷುಕರು ಬರುತ್ತಿದ್ದರು. ಏಕೆಂದರೆ ವಿಶ್ವನಾಥ ತಮ್ಮನ್ನೆಂದಿಗೂ ಬರಿಗೈಯಲ್ಲಿ ಹಿಂದಿರುಗಿಸುವುದಿಲ್ಲ ಎಂದು ಅವರಿಗೆಲ್ಲ ಗೊತ್ತಾಗಿಬಿಟ್ಟಿತ್ತು. ವಿಶ್ವನಾಥ, ಭುವನೇಶ್ವರಿ ಇಬ್ಬರೂ ಉದಾರಿಗಳೇ. ಆದರೆ ಯಾವಾಗ ನರೇಂದ್ರ ಹೀಗೆ ಸಿಕ್ಕಿದ್ದನ್ನೆಲ್ಲ ಎತ್ತೆತ್ತಿ ಕೊಡುವುದಕ್ಕೆ ಶುರು ಮಾಡಿದನೋ ಆಗ ಅವನನ್ನು ಸ್ವಲ್ಪ ಎಚ್ಚರದಿಂದ ನೋಡಿಕೊಳ್ಳಲು ತಾಯಿ ಕಣ್ಣಿಟ್ಟಿರಬೇಕಾಯಿತು. ಯಾರಾದರೂ ಸಾಧು ಮನೆಬಾಗಿಲಿಗೆ ಬಂದರೆ ಭುವನೇಶ್ವರಿ ಮಾಡುತ್ತಿದ್ದ ಮೊದಲ ಕೆಲಸವೆಂದರೆ ನರೇಂದ್ರನನ್ನು ಕೋಣೆಯೊಳಗೆ ಕೂಡಿಟ್ಟು ಅಗಳಿ ಹಾಕುವುದು! ಆದರೆ ಅವನು ಮಾತ್ರ ತಾನು ಮಾಡುವುದನ್ನು ಬಿಡಲೇ ಇಲ್ಲ. ಒಂದು ದಿನ ಒಬ್ಬ ಬೈರಾಗಿ ಬಂದು ಭಿಕ್ಷೆ ಕೇಳಿದ. ಕೂಡಲೇ ನರೇಂದ್ರನನ್ನು ಅವನ ತಾಯಿ ಮಹಡಿಯ ಮೇಲೆ ಒಂದು ಕೊಠಡಿಯಲ್ಲಿ ಕೂಡಿಹಾಕಿದಳು. ನರೇಂದ್ರ ಚಡಪಡಿಸಿದ. ಬೈರಾಗಿಗೆ ಏನನ್ನಾದರೂ ಕೊಟ್ಟ ಹೊರತು ಅವನಿಗೆ ಸಮಾಧಾನವಿಲ್ಲ. ಅತ್ತಿತ್ತ ನೋಡಿದ. ತನ್ನ ತಾಯಿಯ ಸೀರೆಯೊಂದು ಕಂಡಿತು—ಅದೂ ಒಳ್ಳೇ ಬೆಲೆಬಾಳುವ ಸೀರೆ. ಸರಿ, ಅವನ್ನೇ ತೆಗೆದು ಕಿಟಕಿಯಿಂದ ಹೊರಕ್ಕೆ ಹಾಕಿಬಿಟ್ಟ ಮಹಾರಾಯ! ಬೈರಾಗಿ ಅದನ್ನು ತೆಗೆದುಕೊಂಡು ಹೊರಟ. ಇಂಥ ಘಟನೆಗಳು ಅದೆಷ್ಟೋ! ಆಗೆಲ್ಲ ಮನೆಯವರು ಯಾರಾದರೂ, ಆ ಭಿಕ್ಷುಕರನ್ನು ಹುಡುಕಿಕೊಂಡು ಹೋಗಿ ಅವರಿಗೆ ಇನ್ನೇನಾದರೂ ಭಿಕ್ಷೆ ಹಾಕಿ ಆ ವಸ್ತುವನ್ನು ಬಿಡಿಸಿಕೊಂಡು ಬರುತ್ತಿದ್ದರು.

ತುಂಟ ನರೇಂದ್ರನನ್ನು ಪಳಗಿಸುವ ಕೆಲಸ ಭುವನೇಶ್ವರಿಗೆ ಸುಲಭವಾಗಿರಲಿಲ್ಲ. ತನ್ನ ಅಕ್ಕಂದಿರನ್ನು ಗೋಳುಹೊಯ್ದುಕೊಳ್ಳುವುದೆಂದರೆ ಅವನಿಗೆ ಬಲು ಪ್ರೀತಿ. ಸಂದರ್ಭ ಸಿಕ್ಕಾಗಲೆಲ್ಲ ಅಕ್ಕಂದಿರನ್ನು ಛೇಡಿಸಿ ಛೇಡಿಸಿ ಇಡುತ್ತಿದ್ದ. ಅಕ್ಕಂದಿರು ರೇಗಿ ಅಟ್ಟಿಸಿಕೊಂಡು ಬಂದರೆ ಓಡಿಹೋಗಿ ರಸ್ತೆ ಪಕ್ಕದ ಮೋರಿಯೊಳಗೆ ನಿಂತುಬಿಡುತ್ತಿದ್ದ. ಆ ಮೈಲಿಗೆಯ ಜಾಗಕ್ಕೆ ಈ ಅಕ್ಕಂದಿರು ಹೋಗಲಾರರು. ನರೇಂದ್ರ ಅಲ್ಲಿಂದಲೇ ಹಲ್ಲು ಕಿರಿದು ಅಣಕಿಸುತ್ತ "ಎಲ್ಲಿ, ಹಿಡೀರಿ ನೋಡೋಣ ನನ್ನನ್ನು!" ಎನ್ನುತ್ತಿದ್ದ. ಇದರಿಂದ ಅವನ ಅಕ್ಕಂದಿರಿಗೆ ಇನ್ನಷ್ಟು ಕೋಪ ಬರುತ್ತಿತ್ತು. ಆದರೆ ಏನು ಮಾಡಲೂ ಸಾಧ್ಯವಾಗದೆ ಕೋಪವನ್ನು ನುಂಗಿಕೊಂಡು ಹಿಂದಿರುಗಬೇಕಾಗುತ್ತಿತ್ತು. ಹೀಗೆ ಕೊನೆಯಲ್ಲಿ ಯಾವಾಗಲೂ ನರೇಂದ್ರನೇ ಜಯಶಾಲಿ!

ಬಾಲಕ ನರೇಂದ್ರನ ಸ್ನೇಹಿತರಲ್ಲಿ ಕೆಲವು ಪ್ರಾಣಿ ಪಕ್ಷಿಗಳೂ ಇದ್ದುವು. ಒಂದು ಕೋತಿ, ಒಂದು ಆಡು, ಒಂದು ನವಿಲು, ಕೆಲವು ಪಾರಿವಾಳಗಳು, ಗಿಳಿಗಳು ಮತ್ತು ಒಂದೆರಡು ಬಿಳಿ ಇಲಿಗಳು—ಇವೆಲ್ಲ ಅವನ ಮುದ್ದಿನ ಸಂಗಾತಿಗಳು. ಬಿಳಿ ಇಲಿಗಳ ಕುತ್ತಿಗೆಗೆ ಅವನು ಪುಟ್ಟ ಗಂಟೆಗಳನ್ನು ಕಟ್ಟಿದ್ದ. ಅವನ ಮನೆಯಲ್ಲೊಂದು ಹಸುವಿತ್ತು. ಅದರ ಮೇಲೆ ಅವನಿಗೆ ವಿಶೇಷ ಪ್ರೀತಿ. ಅದನ್ನು ತನ್ನ ಪುಟ್ಟಪುಟ್ಟ ಕೈಗಳಿಂದ ಸವರಿ ಪ್ರೀತಿಯಿಂದ ಮಾತನಾಡಿಸುತ್ತಿದ್ದ. ಹಬ್ಬದ ದಿನಗಳಲ್ಲಿ ತನ್ನ ಅಕ್ಕಂದಿರು ಅದನ್ನು ಅಲಂಕರಿಸಿ ಅದಕ್ಕೆ ತಿಂಡಿ ಕೊಡುವಾಗ ತಾನೂ ಹೋಗಿ ಅದಕ್ಕೆ ಹಾರ ಹಾಕಿ ಹಣೆಗೆ ಅರಸಿನ-ಕುಂಕುಮ ಹಚ್ಚಿ, ಬಗ್ಗಿ ನಮಸ್ಕರಿಸುತ್ತಿದ್ದ.

ವಿಶ್ವನಾಥ ದತ್ತನ ಮನೆಯಲ್ಲಿ ಹಲವಾರು ಜನ ಆಳುಕಾಳುಗಳಿದ್ದರು. ಅವರಲ್ಲೊಬ್ಬ ಸಾರೋಟು ಸವಾರ. ಅವನೆಂದರೆ ನರೇಂದ್ರನಿಗೆ ತುಂಬ ಅಚ್ಚುಮೆಚ್ಚು. ಅವನು

ತಲೆಗೆ ಪೇಟ ಸುತ್ತಿಕೊಂಡು ಮೈತುಂಬ ಗರಿಮುರಿ ಬಟ್ಟೆ ತೊಟ್ಟುಕೊಂಡು, ಎತ್ತರದಲ್ಲಿ ಕುಳಿತು ಕೈಯಲ್ಲಿ ಚಾವಟಿ ಹಿಡಿದುಕೊಂಡು "ಹೇಯ್ ಹೇಯ್!" ಎನ್ನುತ್ತ ಠೀವಿಯಿಂದ ಕುದುರೆಗಳನ್ನು ಓಡಿಸಿಕೊಂಡು ಹೋಗುತ್ತಿದ್ದರೆ... ಹುಡುಗ ನರೇಂದ್ರನ ಕಣ್ಣಿಗೆ ಅವನೊಬ್ಬ ಮಹಾರಾಜನೇ ಸರಿ!

ಮಕ್ಕಳಿಗೆ ಮೊದಲ ವಿದ್ಯಾಭ್ಯಾಸ ಮಾತೆಯ ಮಡಿಲಲ್ಲಿ. ಭುವನೇಶ್ವರಿ ತನ್ನ ಮಗುವನ್ನು ಮಡಿಲಲ್ಲಿ ಕೂಡಿಸಿಕೊಂಡು, ದೇವದೇವಿಯರ ಕಥೆಗಳನ್ನು, ಮಹಿಮೆಗಳನ್ನು ಬಣ್ಣಿಸುತ್ತಿದ್ದಳು. ಭಾರತದ ಋಷಿಮುನಿಗಳ ಹಾಗೂ ದತ್ತ ವಂಶದ ಹಿರಿಯರ ಕತೆಗಳನ್ನು ಹೇಳುತ್ತಿದ್ದಳು. ಸಂನ್ಯಾಸಿಯಾಗಿ ಹೋದ ಅವನ ತಾತ ದುರ್ಗಾಪ್ರಸಾದನ ವಿಷಯವನ್ನೂ ಹೇಳುತ್ತಿದ್ದಳು. ತಾಯಿಯ ಮಡಿಲಲ್ಲಿ ಕುಳಿತೇ ನರೇಂದ್ರ ರಾಮಾಯಣ-ಮಹಾಭಾರತಗಳ ಕತೆಯನ್ನು ಆಲಿಸಿದ. ಪ್ರತಿದಿನವೂ ಮಧ್ಯಾಹ್ನ ಮನೆಯ ಮಹಿಳೆಯರೆಲ್ಲ ತಮ್ಮತಮ್ಮ ಕೆಲಸಕಾರ್ಯಗಳನ್ನು ಮುಗಿಸಿಕೊಂಡು ಒಟ್ಟಾಗಿ ಕುಳಿತು, ಅವರಲ್ಲೇ ಯಾರಾದರೊಬ್ಬರಿಂದ ಆ ಮಹಾಕಾವ್ಯಗಳನ್ನು ಓದಿಸಿ ಕೇಳುತ್ತಿದ್ದರು. ಈ ಗುಂಪಿನಲ್ಲಿ ನರೇಂದ್ರನೂ ತನ್ನ ತುಂಟಾಟ ಚೇಷ್ಟೆಗಳನ್ನೆಲ್ಲ ಬಿಟ್ಟು ಶಾಂತವಾಗಿ ಕುಳಿತುಕೊಂಡು ಕೊನೆಯವರೆಗೂ ಏಕಾಗ್ರತೆಯಿಂದ ಕೇಳುತ್ತಿದ್ದ. ಅಲ್ಲದೆ ಅವನ ಅಜ್ಜಿಯೂ ಮುತ್ತಜ್ಜಿಯೂ ಶ್ರೀಮದ್ಭಾಗವತವನ್ನು ಚೆನ್ನಾಗಿ ತಿಳಿದುಕೊಂಡವರು. ಇವರೂ ನರೇಂದ್ರನಿಗೆ ಭಾಗವತದ ಕತೆಗಳನ್ನು ಸ್ವಾರಸ್ಯವಾಗಿ ಹೇಳುತ್ತಿದ್ದರು. ಬಾಲ ನರೇಂದ್ರನ ಎಳೆಯ ಮನಸ್ಸಿನ ಮೇಲೆ ಈ ಎಲ್ಲ ಕತೆಗಳೂ ಅಚ್ಚಳಿಯದ ಸತ್ಪರಿಣಾಮವನ್ನುಂಟುಮಾಡಿದುವು.

ಬಂಗಾಳದ ಜನಪದ ಗೀತೆಗಳು ತುಂಬ ಅರ್ಥಗರ್ಭಿತ, ಭಾವಭರಿತ. ಅಲ್ಲಿನ ಒಂದು ಪಂಗಡದ ಭಿಕ್ಷುಕರು—ಇವರನ್ನು ಬಾವುಲ್‌ಗಳೆನ್ನುತ್ತಾರೆ—ಈ ಹಾಡುಗಳನ್ನು ಸುಮಧುರವಾಗಿ ಹಾಡಬಲ್ಲರು. ಇಂತಹ ಹಾಡುಗಳನ್ನು ನರೇಂದ್ರ ಅತ್ಯಾಸಕ್ತಿಯಿಂದ ಆಲಿಸುತ್ತಿದ್ದ. ಮತ್ತು ಅವುಗಳಿಂದ ಪ್ರಭಾವಿತನಾಗಿ ಅನೇಕಾನೇಕ ವಿಷಯಗಳನ್ನು ಕಲಿತಿದ್ದ. ಭುವನೇಶ್ವರಿ ಈ ಬಾವುಲ್ ಹಾಡುಗಾರರು ಬಂದರೆ ಆದರದಿಂದ ಸ್ವಾಗತಿಸುತ್ತಿದ್ದಳು. ತನ್ನ ಮಗ ಆ ನೀತಿಪರ ಹಾಗೂ ಭಕ್ತಿಪರ ಹಾಡುಗಳನ್ನು ಕೇಳಿ ರಾಷ್ಟ್ರೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವಂತಾಗಲಿ ಎನ್ನುವುದು ಅವಳ ಉದ್ದೇಶ.

ನಿಜಕ್ಕೂ ಈ ಸಂದರ್ಭಗಳಲ್ಲೇ ಬಾಲಕ ನರೇಂದ್ರನ ಹೃದಯದಲ್ಲಿ ಆಧ್ಯಾತ್ಮಿಕತೆಯ ಬೀಜ ಬಿತ್ತಿದಂತಾಯಿತು ಎನ್ನಬಹುದು. ತನ್ನ ತಾಯಿ ಹೇಳುತ್ತಿದ್ದ ರಾಮಾಯಣದ ಕಥೆಗಳ ಮೂಲಕ ಮತ್ತು ಬಾವುಲ್‌ಗಳು ಹಾಡುತ್ತಿದ್ದ ದೇವರನಾಮಗಳ ಮೂಲಕ ಮತ್ತೆಮತ್ತೆ ಕಿವಿಯ ಮೇಲೆ ಬೀಳುತ್ತಿದ್ದ ರಾಮ-ಸೀತೆಯರ ಹೆಸರುಗಳು ಅವನ ಮನಃಪಟಲದ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿದುವು. ಶ್ರೀರಾಮನ ಗುಣಮಾಧುರ್ಯ, ದಿವ್ಯ ಚಾರಿತ್ರ್ಯ, ಅದ್ಭುತ ಪರಾಕ್ರಮ ಇವೆಲ್ಲ ಆತನ ಮನಸೂರೆಗೊಂಡಿದ್ದುವು. ಅಲ್ಲದೆ, ಮನೆಯಲ್ಲಿ ಹಿರಿಯರು ಕ್ರಮಪ್ರಕಾರ ದೇವರಪೂಜೆ, ಜಪಧ್ಯಾನಗಳನ್ನು ಮಾಡುವುದನ್ನು ಅವನು ಗಮನಕೊಟ್ಟು ನೋಡುತ್ತಿದ್ದ. ತಾನೂ ಹಾಗೆಯೇ ದೇವರ ಪೂಜೆ ಜಪ ಧ್ಯಾನ ಮಾಡಬೇಕು ಎಂಬ ಇಚ್ಛೆ ಅವನಲ್ಲಿ ಬಲಿಯುತ್ತಿತ್ತು.

ಒಂದು ದಿನ ನರೇಂದ್ರ ಪಕ್ಕದ ಮನೆಯ ಸ್ನೇಹಿತ ಹರಿಯನ್ನು ಕರೆದುಕೊಂಡು ಅಂಗಡಿಗೆ ಹೋಗಿ ಜೇಡಿಮಣ್ಣಿನಿಂದ ತಯಾರಿಸಿದ ಸೀತಾರಾಮರ ವಿಗ್ರಹಗಳನ್ನು ಕೊಂಡು ತಂದ; ಮನೆಯವರಾರಿಗೂ ಕಾಣದಂತೆ ಸ್ನೇಹಿತನೊಂದಿಗೆ ಮಹಡಿಯನ್ನೇರಿ ಒಂದು ಕೋಣೆಯನ್ನು ಹೊಕ್ಕ. ಬಾಗಿಲು ಮುಚ್ಚಿ ಅಗಳಿ ಹಾಕಿಕೊಂಡ. ಅಲ್ಲಿ ಆ ವಿಗ್ರಹಗಳನ್ನು ಪ್ರತಿಷ್ಠಾಪಿಸಿಕೊಂಡು ಇಬ್ಬರೂ ಸೀತಾರಾಮರ 'ಧ್ಯಾನ'ದಲ್ಲಿ ತೊಡಗಿದರು. ಎಷ್ಟೋ ಹೊತ್ತಾಗಿಹೋಯಿತು. ಕಡೆಗೆ ಇಬ್ಬರು ಮಕ್ಕಳೂ ಬಹಳ ಹೊತ್ತಿನಿಂದ ಕಾಣದಿದ್ದುದರಿಂದ ಇಬ್ಬರ ಅಮ್ಮಂದಿರೂ ಆತಂಕಗೊಂಡರು. ಮತ್ತು ಎರಡು ಮನೆಯವರೂ ಅವರನ್ನು ಹುಡುಕತೊಡಗಿದರು. ಆದರೆ ಮನೆಯ ಮೂಲೆಮೂಲೆಯನ್ನೆಲ್ಲ ಹುಡುಕಾಡಿ ನೋಡಿದರೂ ಹುಡುಗರಿಲ್ಲ! ಕೊನೆಗೆ ಹಿರಿಯರು ಹಾಗೇ ಮೆಟ್ಟಿಲೇರಿ ತಾರಸಿಯ ಮೇಲೆ ಬಂದರು. ಕೋಣೆಯ ಬಾಗಿಲಿಗೆ ಒಳಗಿಂದ ಅಗಳಿ ಹಾಕಿತ್ತು. 'ಓಹೋ, ಹುಡುಗರು ಇಲ್ಲೇ ಇರಬೇಕು' ಎಂದು ಊಹಿಸಿದರು. ಆದರೆ ಬಾಗಿಲು ತಟ್ಟಿ ನೋಡಿದರು, ಕೂಗಿಕೊಂಡರು, ಉತ್ತರವೇ ಇಲ್ಲ! ಕೊನೆಗೆ ಬಾಗಿಲನ್ನು ಜೋರಾಗಿ ಒದ್ದಾಗ ಅಗಳಿ ಬಿಚ್ಚಿಕೊಂಡು ಬಾಗಿಲು ತೆರೆದುಕೊಂಡಿತು. ಹರಿಯೇನೋ ಮೊದಲ ಸಲ ಬಾಗಿಲು ತಟ್ಟಿದಾಗಲೇ 'ಧ್ಯಾನ'ಭಂಗವಾಗಿ ಎದ್ದು ನಿಂತಿದ್ದ. ಆದರೆ ಬಾಗಿಲು ತೆರೆಯಲು ಭಯವಾಗಿ ಸುಮ್ಮನೆ ಬೆಪ್ಪಾಗಿ ನಿಂತಿದ್ದ. ಈಗ ಬಾಗಿಲು ತೆರೆದುಕೊಂಡ ಕೂಡಲೇ ಅಲ್ಲಿಂದ ಓಟ ಕಿತ್ತ! ಆದರೆ ಪರಮಾಶ್ಚರ್ಯದ ಸಂಗತಿಯೆಂದರೆ, ಇಷ್ಟು ಗಲಾಟೆಯಾದರೂ ನರೇಂದ್ರನಿಗೆ ಮಾತ್ರ ಏನೂ ಕೇಳಿಸಿಯೇ ಇರಲಿಲ್ಲ. ಅವನು ಆ ಸೀತಾರಾಮರ ವಿಗ್ರಹದ ಮುಂದೆ ತಾನು ಇನ್ನೊಂದು ವಿಗ್ರಹವಾಗಿ ಕುಳಿತುಬಿಟ್ಟಿದ್ದ. ಭುವನೇಶ್ವರಿ, "ನರೇನ್! ಓ ನರೇನ್!" ಎಂದು ಕೂಗಿ ಕರೆದಳು. ಆದರೂ ಉತ್ತರವಿಲ್ಲ. ಕೊನೆಗೆ ಆಕೆ ಮಗನ ಮೈಯನ್ನು ಜೋರಾಗಿ ಅಲುಗಾಡಿಸಿದಳು. ಆಗ ಅವನು ತನ್ನ ಗಾಢ ಧ್ಯಾನದಿಂದ ಎಚ್ಚರಗೊಂಡ. ಆದರೆ ಅವನಿಗೆ ಧ್ಯಾನದಿಂದ ಏಳುವ ಮನಸ್ಸೇ ಇಲ್ಲ. "ನಾನು ಬರುವುದಿಲ್ಲ, ನನ್ನನ್ನು ಹೀಗೇ ಬಿಟ್ಟು ಬಿಡಿ" ಎಂದುಬಿಟ್ಟ! ಬೇರೆ ದಾರಿಗಾಣದೆ ಹಿರಿಯರು ಅವನನ್ನು ಅವನ ಪಾಡಿಗೆ ಬಿಡಬೇಕಾಯಿತು. ಇದನ್ನೆಲ್ಲ ಏನೆಂದು ಅರ್ಥಮಾಡಿಕೊಳ್ಳಬೇಕೆಂದೇ ತಿಳಿಯಲಿಲ್ಲ ಅವರಿಗೆ. 'ಈ ಎಳೆಯ ವಯಸ್ಸಿನಲ್ಲಿ ಇಷ್ಟೆಲ್ಲ ಗಾಢ ಧ್ಯಾನ ಸಾಧ್ಯವೆ? ಇದೆಂಥ ವಿಚಿತ್ರವಪ್ಪಾ!' ಎಂದು ಮಾತಾಡಿಕೊಂಡರು.

ನರೇಂದ್ರ ಸೀತಾ-ರಾಮರ ವಿಗ್ರಹಗಳೆದುರಿನಲ್ಲಿ ಧ್ಯಾನಲೀನನಾಗಿ ಕುಳಿತ ಆ ದೃಶ್ಯ ನಿಜಕ್ಕೂ ಅದ್ಭುತವಾದದ್ದೇ ಸರಿ. ಆದರೆ ಆ ದೃಶ್ಯ ಬಹಳ ಕಾಲ ಉಳಿಯಲಿಲ್ಲ. ಇದಕ್ಕೆ ಕಾರಣ ಆ ಮನೆಯ ಸಾರೋಟುವಾಲನೇ ಎನ್ನಬೇಕು. ನಾವಾಗಲೇ ನೋಡಿದಂತೆ ಬಾಲಕ ನರೇಂದ್ರನ ಮನಸ್ಸನ್ನು ಆಕರ್ಷಿಸಿದ ಮಹಾಪುರುಷರಲ್ಲಿ ಈ ಸಾರೋಟುವಾಲ ಬಹಳ ಪ್ರಮುಖನಾದವನು. ಹಿಂದೊಮ್ಮೆ ವಿಶ್ವನಾಥ ದತ್ತ ಹುಡುಗ ನರೇಂದ್ರನನ್ನು "ಏನಪ್ಪಾ, ಮುಂದೆ ದೊಡ್ಡವನಾದ ಮೇಲೆ ಏನಾಗಬೇಕು ಅಂತ ನಿನ್ನಿಷ್ಟ?" ಎಂದು ಕೇಳಿದಾಗ ಅವನು ತಕ್ಷಣ, "ನಾನು ಸಾರೋಟುವಾಲಾ ಆಗ್ತೀನಪ್ಪಾ" ಎಂದಿದ್ದ! ಅವನು ತನ್ನ ಬಿಡುವಿನ ವೇಳೆಯಲ್ಲೆಲ್ಲ ಇರುತ್ತಿದ್ದುದು ಆ ಸಾರೋಟುವಾಲನ ಜೊತೆಯಲ್ಲೇ. ಅವನಿಗೆ ಯಾವುದಾದರೂ ವಿಷಯದಲ್ಲಿ ಹೆಚ್ಚಿನ ಮಾಹಿತಿ ಬೇಕಿದ್ದರೆ ತಕ್ಷಣ ಓಡುತ್ತಿದ್ದುದು ಆ ಸಾರೋಟುವಾಲನ ಬಳಿಗೆ. ಅವನ

ಪಾಲಿಗೆ ಆ ಸಾರೋಟುವಾಲನೇ ಮಹಾಜ್ಞಾನಿ, ಸರ್ವಜ್ಞ. ಅಂದೂ ಕೂಡ ನರೇಂದ್ರ ಯಾವುದೋ ಒಂದು ವಿಷಯಕ್ಕಾಗಿ ಅವನ ಬಳಿಗೆ ಹೋದ. ಆ ವಿಷಯ ಮಾತಾಡಿ ಮುಗಿದ ಮೇಲೆ, ಮಾತು ಮದುವೆಯ ವಿಷಯಕ್ಕೆ ತಿರುಗಿಕೊಂಡಿತು. ಸಾರೋಟು ವಾಲ ಮದುವೆಯ ವಿಷಯವಾಗಿ ಮಾತನಾಡುತ್ತ ಮದುವೆಯನ್ನು ಒಂದೇ ಸಮನೆ ನಿಂದಿಸಿ ಟೀಕೆ ಮಾಡಲಾರಂಭಿಸಿದ. ಅದೇಕೆ ಅವನು ಆ ರೀತಿ ಮದುವೆಯನ್ನು ಹಳಿದನೋ ಗೊತ್ತಿಲ್ಲ. ಬಹುಶಃ ಅವನೂ ಒಂದು ಮದುವೆಮಾಡಿಕೊಂಡು ಕೈಸುಟ್ಟು ಕೊಂಡಿರಬಹುದು. ಅಂತೂ ಈ ಮದುವೆಯ ಅನಾಹುತದ ಸಂಬಂಧವಾಗಿ ಅತ್ಯಂತ ಕಟುವಾದ ಭಾಷೆಯಿಂದ ಒಂದು ಭಾಷಣವನ್ನೇ ಬಿಗಿದ: "ಅಯ್ಯೋ! ಮದುವೆ ಅಂದರೆ ಒಂದು ದೊಡ್ಡ ತಾಪತ್ರಯ ಕಣಪ್ಪಾ! ಹೆಂಡತಿಯಾಗಿ ಬರುವವಳ ಸ್ವಭಾವಕ್ಕೆ ಸರಿಯಾಗಿ ಸರ್ಕಸ್ ಮಾಡಬೇಕಾಗುತ್ತದೆ. ಆಮೇಲೆ ಒಂದಿಷ್ಟು ತರಲೆ ಮಕ್ಕಳನ್ನು ಕಟ್ಟಿಕೊಂಡು ಒದ್ದಾಡಬೇಕಾಗುತ್ತದೆ. ಅದೇನು ಗೋಳು ಅನ್ನುತ್ತಿ! ಸಾಕಪ್ಪ, ಈ ಮದು ವೆಯ ಮೋಜೂ ಸಾಕು, ಅದರ ತಾಪತ್ರಯವೂ ಸಾಕು." ಇಷ್ಟು ಹೇಳುವಷ್ಟರಲ್ಲಿ ಅವನ ಶಬ್ದಕೋಶವೆಲ್ಲ ಬರಿದಾಯಿತು. ಬಾಲಕ ನರೇಂದ್ರ ಆ ಉದ್ರೇಕಕಾರೀ ಭಾಷಣ ವನ್ನು ಉಸಿರು ಬಿಗಿಹಿಡಿದುಕೊಂಡು ಕೇಳಿದ. ಅವನ ಮುಖ ಗಂಭೀರವಾಗಿತ್ತು. ಮದುವೆಯಾಗುವುದರಿಂದ ಉಂಟಾಗುವ ಪಾಡನ್ನು ಭಾವಿಸಿನೋಡಿತು ಅವನ ಮನಸ್ಸು. ಹೆದರಿಕೆಯಾಯಿತು. ತನಗೇ ಈಗ ಮದುವೆ ನಿಶ್ಚಯವಾಗಿ ಆ ಮದುವೆಯ ದಿನ ಓಡೋಡಿ ಬರುತ್ತಿದೆಯೇನೋ ಎನ್ನುವಂತೆ ಬೆಚ್ಚಿಬಿದ್ದ. ಅವನ ಮನಸ್ಸಿನಲ್ಲಿ ಮದುವೆಯ ಸಂಬಂಧವಾಗಿ ಬಲವಾದ ಜುಗುಪ್ಸೆ ಹುಟ್ಟಿಬಿಟ್ಟಿತು. ಈ ಸಮಯದಲ್ಲಿ ಅವನ ಮನಃಪಟಲದ ಮೇಲೆ ಮೊದಲು ಕಾಣಿಸಿಕೊಂಡ ವ್ಯಕ್ತಿಗಳೆಂದರೆ ಸೀತಾ-ರಾಮರು. 'ಅರೆ! ಸೀತಾ-ರಾಮರು ಮದುವೆಯಾದವರಲ್ಲವೆ? . . . ಅಂತಹ ದೊಡ್ಡ ದೇವರಾದ ಶ್ರೀರಾಮನೂ ಮದುವೆಯ ಬಂಧನಕ್ಕೊಳಗಾದವನೇ ಅಲ್ಲವೆ? . . .' ಸೀತಾ-ರಾಮರ ವೈವಾಹಿಕ ಜೀವನದ ವೈಭವಪೂರ್ಣ ವರ್ಣನೆಯನ್ನು ಅವನು ಬಹಳಷ್ಟು ಕೇಳಿದ್ದ. ಅವರಿಬ್ಬರ ಕಾವ್ಯಮಯ ಪ್ರೇಮಸಂಬಂಧವನ್ನು, ಪರಸ್ಪರ ಪ್ರೇಮದ ಪ್ರಾಮಾಣಿಕ ನಿಷ್ಠೆಯನ್ನು ಕೇಳಿದ್ದ. ಆದರೆ ಈಗ ಆ ಕಾವ್ಯವೆಲ್ಲ ನೀರಸ ಗದ್ಯವಾಗಿ ತೋರಲಾರಂಭಿಸಿತು. ಏಕೆಂದರೆ ಸರ್ವಜ್ಞನಾದ ಸಾರೋಟುಸವಾರ ಈ ಮದುವೆಯ ಭಯಂಕರ ನಿಜಸ್ವರೂಪವನ್ನು ತಿಳಿಸಿಕೊಟ್ಟುಬಿಟ್ಟಿದ್ದಾನಲ್ಲ! ಇನ್ನು ಅವರನ್ನು ತಾನು ಹೇಗೆ ಧ್ಯಾನಿಸಲಿ? ಹೇಗೆ ಆರಾಧಿಸಲಿ? ಆದರೆ ತಾಯಿಯ ಬಾಯಿಂದ ಸೀತಾ-ರಾಮರ ವರ್ಣನೆಯನ್ನು ಕೇಳಿ ಕೇಳಿ ಅವರನ್ನು ತನ್ನ ಆರಾಧ್ಯ ದೇವತೆಗಳೆಂದು ಸ್ವೀಕರಿಸಿಯಾಗಿಬಿಟ್ಟಿದೆ. ಈಗ ಅವರನ್ನು ತನ್ನ ಮನಸ್ಸಿನಿಂದ ಹೊರ ದೂಡುವುದಾದರೂ ಹೇಗೆ? ನರೇಂದ್ರನ ಮನಸ್ಸು ಉಭಯಸಂಕಟದಿಂದ ಒದ್ದಾ ಡಿತು. ಏನು ಮಾಡುವುದಕ್ಕೂ ತೋಚದೆ ಒಂದೇ ಸಮನೆ ಅಳತೊಡಗಿದ. ದುಃಖ ದಿಂದ ತಾಯಿಯ ಬಳಿಗೋಡಿದ. ಭುವನೇಶ್ವರಿ ನೋಡುತ್ತಾಳೆ—ಮಗನ ಕಣ್ಣಲ್ಲಿ ನೀರು! ಎಂದೂ ಅಳದಿರುವವನು ಇಂದೇಕೆ ಹೀಗೆ ಕಣ್ಣೀರು ಸುರಿಸುತ್ತಿದ್ದಾನೆ! ವಾತ್ಸಲ್ಯದಿಂದ ಮಗನನ್ನು ತಬ್ಬಿಕೊಂಡು, "ಏನಾಯಿತಪ್ಪ, ಏಕೆ ಅಳುತ್ತಿದ್ದೀ?" ಎಂದು ಕೇಳಿದಳು. ಹುಡುಗ ಒಂದು ಕ್ಷಣ ಶಾಂತನಾದ. ಆದರೆ ಮತ್ತೆ ಗಟ್ಟಿಯಾಗಿ ಬಿಕ್ಕಿಬಿಕ್ಕಿ ಅಳಲಾರಂಭಿಸಿದ. ಅಳುತ್ತಳುತ್ತಲೇ ತಾಯಿಯನ್ನು ಕೇಳಿದ: "ಅಮ್ಮಾ

ನಾನಿನ್ನುಮೇಲೆ ಸೀತಾ-ರಾಮರನ್ನು ಹೇಗೆ ಪೂಜೆ ಮಾಡಲಿ ? ಸೀತೆ ರಾಮನ ಹೆಂಡತಿಯಲ್ಲವೆ ?'' ಬಳಿಕ ತಾನು ಸಾರೋಟುವಾಲನ ಹತ್ತಿರ ಕೇಳಿ ತಿಳಿದುಕೊಂಡ ಹೊಸ ವಿಚಾರಗಳನ್ನೆಲ್ಲ ತಾಯಿಗೆ ಹೇಳಿದ. ಭುವನೇಶ್ವರಿಗೆ ವಿಷಯ ಅರ್ಥವಾಯಿತು. ಓಹೋ, ಹೀಗೋ ಸಮಾಚಾರ ! ಆದರೆ ಈಗ ಮಗನನ್ನು ಸಮಾಧಾನ ಪಡಿಸುವ ಬಗೆ ಹೇಗೆ ? ಕ್ಷಣಕಾಲ ಆಲೋಚಿಸಿದ ಮೇಲೆ ಮಿಂಚಿನಂತೆ ಒಂದು ಉಪಾಯ ಹೊಳೆಯಿತು. ಹೇಳಿದಳು, "ನೋಡು, ನೀನು ಇನ್ನುಮೇಲೆ ರಾಮನನ್ನು ಬಿಟ್ಟು ಧ್ಯಾನಮಗ್ನನಾದ ಶಿವನನ್ನು (ಎಂದರೆ, ಅವಿವಾಹಿತನಾದ ತಾಪಸಿ ಶಿವನನ್ನು) ಪೂಜೆ ಮಾಡು, ಅಷ್ಟೆ !'' ಎಂದು. ಈ ಸಲಹೆ ನರೇಂದ್ರನಿಗೆ ಕೂಡಲೇ ಒಪ್ಪಿಗೆಯಾಯಿತು, ಸಮಾಧಾನ ತಂದಿತು. ಹಾಗೇ ಮಾಡಲು ಆ ಕ್ಷಣವೇ ನಿರ್ಧರಿಸಿಬಿಟ್ಟ.

ಅಂದು ಸಂಜೆಗತ್ತಲು ಕವಿಯುತ್ತಿದ್ದ ಸಮಯದಲ್ಲಿ ಅವನು ಯಾರ ಕಣ್ಣಿಗೂ ಬೀಳದಂತೆ ತಾರಸಿಯ ಮೇಲೇರಿದ. ತಾನು ಸೀತಾ-ರಾಮರ ವಿಗ್ರಹಗಳನ್ನಿಟ್ಟಿದ್ದ ಕೋಣೆಯ ಬಾಗಿಲುಗಳನ್ನು ತೆರೆದು ಒಳಗೆ ಹೋದ. ಆ ವಿಗ್ರಹಗಳನ್ನು ಕ್ಷಣಕಾಲ ದಿಟ್ಟಿಸಿದ. ಅವನು ಭಕ್ತಿಯಿಂದ ತಂದು ಪ್ರತಿಷ್ಠಾಪಿಸಿ ಧ್ಯಾನಿಸಿದ ವಿಗ್ರಹಗಳಲ್ಲವೆ ಅವು ? ಅವನೆದೆಯೊಳಗಿಂದ ಬಿಸಿ ನಿಟ್ಟುಸಿರೊಂದು ತಾನೇತಾನಾಗಿ ಹೊರಹೊಮ್ಮಿತು. ಮರುಕ್ಷಣವೇ ಮನಸ್ಸನ್ನು ಗಟ್ಟಿ ಮಾಡಿಕೊಂಡು ಆ ವಿಗ್ರಹಗಳನ್ನು ಕೈಗೆತ್ತಿಕೊಂಡ. ಬಳಿಕ ತಾರಸಿಯ ಅಂಚಿಗೆ ಬಂದು ಆ ವಿಗ್ರಹಗಳನ್ನು ರೊಯ್ಯನೆ ಕೆಳಕ್ಕೆಸೆದುಬಿಟ್ಟ ! ವಿಗ್ರಹಗಳು ರಸ್ತೆಯ ಮೇಲೆ ಬಿದ್ದು ಚೂರುಚೂರಾದುವು. ಜೊತೆಗೆ ನರೇಂದ್ರನ ಮನಸ್ಸಿನಲ್ಲಿದ್ದ ಮದುವೆಯ ಮೇಲಿನ ಆದರವೂ ಪುಡಿಪುಡಿಯಾಯಿತು.

ಮರುದಿನವೇ ಅವನು ಅಂಗಡಿಗೆ ಹೋಗಿ ಒಂದು ಧ್ಯಾನಮಗ್ನ ಶಿವನ ವಿಗ್ರಹವನ್ನು ಕೊಂಡು ತಂದ. ಅದನ್ನು ತಾನು ಹಿಂದೆ ಸೀತಾ-ರಾಮರನ್ನು ಪ್ರತಿಷ್ಠಾಪಿಸಿದ್ದ ಜಾಗದಲ್ಲಿ ಪ್ರತಿಷ್ಠಾಪಿಸಿದ. ಬಳಿಕ ಅದರ ಮುಂದೆ ಧ್ಯಾನಕ್ಕೆ ಕುಳಿತ. ಹೊರ ಪ್ರಪಂಚದ ಪರಿವೆ ಕಳಚಿತು. ಅಲ್ಲೀಗ ಇರುವುದು ಎರಡು ವಿಗ್ರಹಗಳು ಅಷ್ಟೆ; ಒಂದು—ಧ್ಯಾನಸ್ಥನಾದ ಭಗವಾನ್ ಶಿವ; ಇನ್ನೊಂದು—ಧ್ಯಾನಸ್ಥನಾದ ಬಾಲಕ ಶಿವ !

ನರೇಂದ್ರ ಹಾಗೆ ಸೀತಾರಾಮರ ವಿಗ್ರಹಗಳನ್ನು ಅಂದು ಗಟ್ಟಿ ಮನಸ್ಸಿನಿಂದ ಎಸೆದುಬಿಟ್ಟನಾದರೂ ಆಗ ಅವನ ಬಾಲಹೃದಯಕ್ಕೆ ಅದೆಷ್ಟು ದುಃಖವಾಯಿತೆಂಬುದನ್ನು ನಾವು ಭಾವಿಸಿಯೇ ತಿಳಿಯಬೇಕು. ಏಕೆಂದರೆ ಮಕ್ಕಳ ಹೊಂಗನಸು ಮುರಿದು ಬಿದ್ದಾಗ ಅವು ಸಕಲೈಶ್ವರ್ಯವನ್ನೂ ಕಳೆದುಕೊಂಡವನಿಗಿಂತ ಹೆಚ್ಚು ಬಡವಾಗುತ್ತವೆ. ಮಕ್ಕಳ ಹೊಂಗನಸಿಗೆ ಸರಿದೂಗುವ ಐಶ್ವರ್ಯವೇ ಇಲ್ಲ. ಆದರೆ ತನ್ನ ಹೊಂಗನಸು ಮುರಿದುಬಿದ್ದರೂ ತಾನು ಮೆಚ್ಚಿದ್ದ ಸೀತಾ-ರಾಮರ ವಿಗ್ರಹಗಳನ್ನು ಎಸೆಯುವಲ್ಲಿ ನರೇಂದ್ರ ತೋರಿದ ದಿಟ್ಟತನವನ್ನು ಗಮನಿಸಬೇಕು. ತನ್ನ ಜೀವನತತ್ತ್ವಕ್ಕೆ ಸರಿ ಹೊಂದದ ವಿಷಯವನ್ನು ತಕ್ಷಣ ತ್ಯಜಿಸಿಬಿಡುವ ಪ್ರಾಮಾಣಿಕತೆ ಕಂಡುಬರುತ್ತದೆ ಇಲ್ಲಿ. ಅಲ್ಲದೆ, ಮದುವೆಯ ಮೂಲಕ ಉಂಟಾಗುವ ಇಂದ್ರಿಯಜೀವನದ ಬಂಧನದಿಂದ ಬಿಡಿಸಿಕೊಂಡು ಮುಕ್ತನಾಗಿರಬೇಕೆಂಬ ಸ್ವತಂತ್ರ ಮನೋಭಾವ ಬಾಲಕ ನರೇಂದ್ರನ ಹೃದಯದಲ್ಲಾಗಲೇ ಜಾಗೃತವಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ.

ಆದರೆ ಇಷ್ಟಾದರೂ ಅವನಿಗೆ ರಾಮ-ಸೀತೆಯರ ಮೇಲಿನ ಭಕ್ತಿಯಾಗಲಿ, ರಾಮಾಯಣದ ಮೇಲಿನ ಶ್ರದ್ಧೆಯಾಗಲಿ ಅಳಿಸಿಹೋಗಿರಲಿಲ್ಲ; ಹೋಗುವುದು

ಸಾಧ್ಯವೂ ಇರಲಿಲ್ಲ. ರಾಮಾಯಣದ ಕಥೆ ಅವನನ್ನು ಅಷ್ಟು ಗಾಢವಾಗಿ ಆಕರ್ಷಿಸಿ ಪ್ರಭಾವ ಬೀರಿಬಿಟ್ಟಿತ್ತು. ಆದ್ದರಿಂದ ನೆರೆಕೆರೆಯಲ್ಲಿ ಯಾರಾದರೂ ರಾಮಾಯಣವನ್ನು ಓದುತ್ತಿದ್ದರೆ ತಪ್ಪದೆ ಅದನ್ನು ಕೇಳಲು ಹೋಗುತ್ತಿದ್ದ. ರಾಮನ ಅದ್ಭುತ ಕಥಾಪ್ರಸಂಗ ಗಳನ್ನು ಗಮನಕೊಟ್ಟು ಆಲಿಸುತ್ತಿದ್ದ. ಅದರಲ್ಲೂ ರಾಮಾಯಣ ಮಹಾಮಾಲೆಯ ಶ್ರೇಷ್ಠ ರತ್ನವಾದ ಭಕ್ತವರ ಹನುಮಂತನ ಮೇಲೆ ನರೇಂದ್ರನಿಗೆ ವಿಶೇಷ ಆಕರ್ಷಣೆ. ಒಮ್ಮೆ ಹನುಮಂತನು ಬಾಳೆಯ ತೋಟದಲ್ಲಿ ವಾಸವಾಗಿರುತ್ತಾನೆ ಎಂದು ರಾಮಾ ಯಣದ ಕಥನಕಾರರೊಬ್ಬರು ಹೇಳಿದ್ದನ್ನು ಅವನು ಕೇಳಿದ. ತಕ್ಷಣ ಅವನಿಗೆ ಆ ಕಪಿ ಶ್ರೇಷ್ಠನಾದ ಹನುಮಂತನನ್ನು ಕಾಣಲೇಬೇಕೆಂಬ ಉತ್ಸಾಹ ಕೆರಳಿತು. ಆದರೆ ತನ್ನಂತಹ ಹುಡುಗರು ಹೋದರೆ ಅವನು ಸಿಗುವನೋ ಇಲ್ಲವೋ ? ಕಥಾಕಾಲಕ್ಷೇಪ ಮುಗಿದ ಕೂಡಲೇ ಆ ಕಥನಕಾರರ ಹತ್ತಿರ ಹೋಗಿ ಕೇಳಿದ: "ಅಲ್ಲಿಗೆ ನಾನು ಹೋದರೆ ಅವನನ್ನು ನೋಡಬಹುದೆ ?" ಎಂದು. ಬಾಲಕ ನರೇಂದ್ರ ತುಂಬ ಮುಗ್ಧಭಾವದಿಂದ ಹಾಗೆ ಕೇಳಿದರೆ, ಆ ಕಥನಕಾರರು ಮುಗುಳ್ನಗುತ್ತ, "ಓ, ಬೇಕಾದರೆ ಹೋಗಿ ನೋಡು !" ಎಂದರು. ನರೇಂದ್ರ ಮನೆಯ ಕಡೆ ಹೊರಟ. ಮನೆಯ ಹತ್ತಿರವೇ ಒಂದು ಬಾಳೆಯ ತೋಟವಿತ್ತು. ನರೇಂದ್ರ ನೇರವಾಗಿ ಅದರೊಳಕ್ಕೆ ಹೋದ. ಒಂದು ಬಾಳೆಯ ಮರದ ಬುಡದಲ್ಲಿ ಕುಳಿತುಕೊಂಡು ಹನುಮಂತನ ಬರವನ್ನೇ ನಿರೀಕ್ಷಿಸುತ್ತಾ ಇದ್ದುಬಿಟ್ಟ. ಆದರೆ ಹನುಮಂತನೇಕೋ ಬರಲೇ ಇಲ್ಲ. ನರೇಂದ್ರ ಕಾದು ಕಾದು ಬಳಲಿದ. ನಿರಾಶೆಯಾಯಿತು. ಮನೆಗೆ ಬಂದು ವಿಷಯವನ್ನೆಲ್ಲ ಹೇಳಿದ. ಮನೆಯವರಿ ಗೆಲ್ಲ ನಗುವೋ ನಗು. ಆದರೆ ನಗೆಯನ್ನು ತೋರಗೊಡದೆ ಸಮಾಧಾನ ಹೇಳಿದರು: "ನೋಡು, ಹನುಮಂತ ರಾಮನ ಬಂಟ ಅಲ್ಲವೆ ? ರಾಮ ಅವನಿಗೇನೋ ತ್ವರಿತದ ಕೆಲಸ ಹೇಳಿರಬಹುದು. ಅವನದನ್ನು ಮಾಡಿಕೊಂಡು ಬರಲು ಹೋಗಿರಬಹುದು" ಎಂದು. ನರೇಂದ್ರನಿಗೆ ಈ ಮಾತು ಒಪ್ಪಿಗೆಯಾಯಿತು.

ಆದರೆ ಈಗ ಅವನ ಅಚ್ಚುಮೆಚ್ಚಿನ ದೇವರೆಂದರೆ ಶಿವ. ಅವನು ಪ್ರತಿದಿನ ಶಿವನ ಮುಂದೆ ಕುಳಿತುಕೊಂಡು ಧ್ಯಾನ ಮಾಡುತ್ತಿದ್ದ. ಶಿವ ಸಂನ್ಯಾಸಿಗಳ ರಾಜ—ಯತಿ ರಾಜ. ನರೇಂದ್ರನಿಗೂ ತಾನು ಸಂನ್ಯಾಸಿಯಾಗಬೇಕೆಂಬ ಬಾಲಕಲ್ಪನೆ. ಒಂದು ದಿನ ಅವನು ಸೊಂಟಕ್ಕೊಂದು ತುಂಡು ಕಾವಿಬಟ್ಟೆ ಸುತ್ತಿಕೊಂಡು ಮನೆಯ ತುಂಬೆಲ್ಲ ಓಡಾಡುತ್ತಿದ್ದ. ಆ ಕಾವಿಬಟ್ಟೆ ಬಿಟ್ಟರೆ ಮೈಮೇಲೆ ಇನ್ನೇನೂ ಇಲ್ಲ ! ತಾಯಿ ಭುವನೇ ಶ್ವರಿ ನೋಡಿದಳು ಈ ದೃಶ್ಯವನ್ನು. ಆಶ್ಚರ್ಯ ಕುತೂಹಲಗಳಿಂದ ಕೇಳಿದಳು, "ಇದೆಲ್ಲ ಏನಪ್ಪ ನರೇನ್ ? ಏನು ಮಾಡಬೇಕು ಅಂತ ಹೊರಟಿದ್ದೀ !" ಆಗ ಅವನು ತಾನೇನೋ ಅದ್ಭುತವನ್ನು ಸಾಧಿಸಿದವನ ಹಾಗೆ ಗಟ್ಟಿಯಾಗಿ ನುಡಿದ: "ಅಮ್ಮಾ ನಾನು ಶಿವ ಕಣಮ್ಮಾ! ನಾನು ಶಿವ !"

ಅವನು ಈ ರೀತಿ ಪ್ರತಿದಿನವೂ ಧ್ಯಾನ ಮಾಡುವುದನ್ನು ಕಂಡು ಮನೆಯ ಮಹಿಳೆಯರು, "ನೋಡು ನರೇನ್, ಧ್ಯಾನ ಮಾಡುತ್ತಿದ್ದರೆ ಋಷಿಮುನಿಗಳ ಹಾಗೆ ತಲೆಯ ಮೇಲೆ ಉದ್ದುದ್ದದ ಜಟೆಗಳು ಬೆಳೆಯುತ್ತವೆ. ಆಮೇಲೆ ಆ ಜಟೆಗಳೆಲ್ಲ ಆಲದ ಮರದ ಬೇರಿನಂತೆ ನೆಲದೊಳಗೆ ಇಳಿಯುತ್ತವೆ" ಎಂದು ತಮಾಷೆ ಮಾಡಿ ದರು. ಮುಗ್ಧ ಮನಸ್ಸಿನ ನರೇಂದ್ರ ಇದನ್ನು ಕೇಳಿಕೊಂಡು ತಕ್ಷಣ ಹೋಗಿ ಧ್ಯಾನಕ್ಕೆ ಕುಳಿತ. ಧ್ಯಾನ ಮಾಡುತ್ತ ಮಧ್ಯೆಮಧ್ಯೆ ಕಣ್ಣು ಬಿಟ್ಟು ನೋಡುತ್ತಿದ್ದ—ತನ್ನ ಕೂದಲು

ಬೆಳೆದು ಜಟೆಯಾಗಿದೆಯೋ ಹೇಗೆ ಎಂದು. ಆದರೆ ಎಷ್ಟು ಹೊತ್ತಾದರೂ ಕೂದಲು ಬೆಳೆಯುಲೂ ಇಲ್ಲ, ಜಟೆಯಾಗಲೂ ಇಲ್ಲ. ತುಂಬ ನಿರಾಶೆಯಾಯಿತು. ತಾಯಿಯ ಬಳಿಗೋಡಿ ತನ್ನ ದೊಡ್ಡ ಕಣ್ಣುಗಳನ್ನು ಅರಳಿಸಿಕೊಂಡು ಕೇಳಿದ, "ಅಮ್ಮಾ ನಾನು ಎಷ್ಟೋ ಹೊತ್ತು ಧ್ಯಾನ ಮಾಡಿದೆ. ಆದರೂ ನನ್ನ ಕೂದಲು ಜಟೆಗಟ್ಟಲೇ ಇಲ್ಲವಲ್ಲ ಯಾಕೆ ?" ಆಗ ಭುವನೇಶ್ವರಿ ಸಮಾಧಾನ ಹೇಳಿದಳು: "ಮಗು, ಅದು ಹಾಗೆ ಒಂದು ಗಂಟೆ, ಒಂದು ದಿನದೊಳಗೆಲ್ಲ ಬೆಳೆಯುವುದಿಲ್ಲಪ್ಪ. ಅಷ್ಟುದ್ದದ ಜಟೆಗಟ್ಟಬೇಕಾದರೆ ಎಷ್ಟೋ ತಿಂಗಳುಗಳು ವರ್ಷಗಳೇ ಬೇಕಾಗುತ್ತವೆ."

ಸರಿ; ಆ ವಿಷಯ ಅಲ್ಲಿಗೆ ನಿಂತಿತು. ಈಗ ಇನ್ನೊಂದು ವಿಷಯ ಎದ್ದಿತು. ಆ ದಿನ ಬೆಳಗ್ಗೆ ಧ್ಯಾನ ಮಾಡುವಾಗ ಅವನಿಗೆ, ತನ್ನ ಅಮ್ಮ ಈ ಹಿಂದೆ, "ನರೇನ್, ನೀನು ಇದೇ ರೀತಿ ರಂಪ ಮಾಡುತ್ತಿದ್ದರೆ ಶಿವ ನಿನ್ನನ್ನು ಕೈಲಾಸಕ್ಕೆ ಸೇರಿಸುವುದಿಲ್ಲ" ಎಂದು ಹೇಳಿದ್ದು ನೆನಪಾಯಿತಂತೆ. ಆದ್ದರಿಂದ ಕೇಳಿದ, "ಅಮ್ಮಾ ನಾನು ಹಿಂದೆ ಸಾಧುವಾಗಿದ್ದೆ ಅಂತ ನನಗನಿಸುತ್ತಿದೆ. ನಾನು ಒಳ್ಳೆಯವನಾದರೆ ಶಿವ ನನ್ನನ್ನು ಕೈಲಾಸಕ್ಕೆ ಮತ್ತೆ ಸೇರಿಸುತ್ತಾನೇನಮ್ಮಾ?" ಭುವನೇಶ್ವರಿ, "ಹ್ಞೂ ಕಣಪ್ಪಾ" ಎಂದಳು. ಆದರೆ ಮರುಕ್ಷಣದಲ್ಲೇ ಅವಳೆದೆ ಬೆಚ್ಚಿತು, ಎಲ್ಲಿ ಇವನೂ ತನ್ನ ತಾತನಂತೆ ಸಂನ್ಯಾಸಿಯಾಗಿ ಶಿವಧಾಮವನ್ನು ಸೇರಿಬಿಡುತ್ತಾನೋ ಎಂದು. ಆದರೆ ಬಳಿಕ ತನಗೆ ತಾನೇ ಸಮಾಧಾನ ತಂದುಕೊಂಡಳು. ಅವನಿನ್ನೂ ಬೆಳೆದು ದೊಡ್ಡವನಾಗಿ, ವಿವೇಕ ಪ್ರಜ್ಞೆ ಬೆಳೆದು, ಸರ್ವಸಂಗ ಪರಿತ್ಯಾಗ ಮಾಡಬೇಕಾದರೆ ಇನ್ನೂ ಎಷ್ಟೋ ವರ್ಷಗಳು ಕಳೆಯಬೇಕು; ಈಗಲೇ ಈ ವಿಷಯವನ್ನೆಲ್ಲ ತಲೆಗೆ ಹಚ್ಚಿಕೊಂಡು ಚಿಂತಿಸುತ್ತ ಕುಳಿತುಕೊಳ್ಳುವುದೇಕೆ ಎಂದುಕೊಳ್ಳುತ್ತ ಆ ಆಲೋಚನೆಗಳನ್ನೆಲ್ಲ ಬದಿಗೊತ್ತಿದಳು.

ಆದರೆ ಈಚೀಚೆಗಂತೂ ನರೇಂದ್ರ ಆಟದ ಹೆಸರಿನಲ್ಲಿ ಬಹಳವಾಗಿ ಧ್ಯಾನ ಮಾಡುತ್ತ ಕುಳಿತಿರುವುದನ್ನು ಮನೆಮಂದಿ ಕಾಣುತ್ತಿದ್ದರು. ಅವನು ಸ್ಥಿರವಾಗಿ ಕುಳಿತಿರುತ್ತಿದ್ದ ಕ್ರಮವನ್ನು ನೋಡಿ ಅವನೇನು ಧ್ಯಾನದ ಆಟವಾಡುತ್ತಿದ್ದಾನೆಯೋ ಅಥವಾ ನಿಜವಾದ ಧ್ಯಾನದಲ್ಲೇ ಮಗ್ನನಾಗಿಬಿಟ್ಟಿದ್ದಾನೆಯೋ ಎಂದು ಬೆರಗಾಗಿ ನಿಲ್ಲುತ್ತಿದ್ದರು. ಆ ಧ್ಯಾನ ಅದೆಷ್ಟು ಗಾಢವಾಗಿರುತ್ತಿತ್ತೆಂದರೆ ಕೆಲವೊಮ್ಮೆ ಅವನ ಮೈಯನ್ನು ಕುಲುಕಿ ಅಲ್ಲಾಡಿಸಿ ಎಬ್ಬಿಸಬೇಕಾಗುತ್ತಿತ್ತು. ಇನ್ನು ಕೆಲವು ಸಲವಂತೂ ಮೈ ಕುಲುಕಿದರೂ ಎಬ್ಬಿಸಲು ಸಾಧ್ಯವಾಗುತ್ತಿರಲಿಲ್ಲ. ಒಂದು ದಿನ ಅವನು ಈ ಧ್ಯಾನದ ಆಟದಲ್ಲಿ ತನ್ನ ಪಕ್ಕದ ಮನೆಯ ಹುಡುಗರನ್ನೂ ಸೇರಿಸಿಕೊಂಡಿದ್ದ. ಸಂಜೆಗತ್ತಲು; ಹುಡುಗರೆಲ್ಲ ಮನೆಯ ಪ್ರಾರ್ಥನಾ ಮಂದಿರದಲ್ಲಿ ಧ್ಯಾನನಿರತರಾಗಿದ್ದರು. ಆದರೆ ಕೆಲವು ಹುಡುಗರು ಮಧ್ಯೆಮಧ್ಯೆ ಅರೆಗಣ್ಣು ತೆರೆದು ಇತರರೆಲ್ಲ ಹೇಗೆ ಧ್ಯಾನ ಮಾಡುತ್ತಿದ್ದಾರೆ ಎನ್ನುವುದನ್ನು ಕದ್ದು ನೋಡುತ್ತಿದ್ದರು. ಆ ಹೊತ್ತಿಗೆ ಅಲ್ಲೊಂದು ದೊಡ್ಡ ಸರ್ಪ ಆ ಕಲ್ಲುಚಪ್ಪಡಿ ಹಾಸಿದ ನೆಲದ ಮೇಲೆ ಹರಿದಾಡಿಕೊಂಡು ಬಂತು. ಒಬ್ಬ ಹುಡುಗ ಅದನ್ನು ನೋಡಿಬಿಟ್ಟ. ನೋಡಿದವನೇ, "ಅಯ್ಯೋ, ಹಾವು, ಹಾವು!" ಎಂದು ಗಟ್ಟಿಯಾಗಿ ಕಿರುಚಿಕೊಂಡ. ಮರುಕ್ಷಣವೇ ಹುಡುಗರೆಲ್ಲ ದಡಬಡ ಎದ್ದು ಪರಾರಿ. ಆದರೆ ನರೇಂದ್ರ ಮಾತ್ರ ಗಾಢ ಧ್ಯಾನದಲ್ಲಿ ಕುಳಿತೇ ಇದ್ದ. ಹುಡುಗರೆಲ್ಲ ನರೇಂದ್ರನನ್ನು ದೂರದಿಂದಲೇ ಗಟ್ಟಿಯಾಗಿ ಕೂಗಿ ಕರೆದರು. ಆದರೆ ಅವನು ಮಿಸುಕಲೇ ಇಲ್ಲ. ಹುಡುಗರು ಓಡಿಹೋಗಿ ನರೇಂದ್ರನ ತಾಯ್ತಂದೆಯರಿಗೆ ಸುದ್ದಿ ತಿಳಿಸಿದರು. ಅವರು

ಗಾಬರಿಯಾಗಿ ಓಡಿಬಂದು ನೋಡುತ್ತಾರೆ—ಎದೆ ನಡುಗಿಸುವ ದೃಶ್ಯ! ಆ ಸರ್ಪ ತನ್ನ ಹೆಡೆ ಬಿಚ್ಚಿಕೊಂಡು ಒಳ್ಳೇ ಠೀವಿಯಿಂದ ನೋಡುತ್ತಿದೆ! ಏನು ಮಾಡುವುದೀಗ? ಆ ಕಡೆ ನರೇಂದ್ರನಿಗೋ ಬಾಹ್ಯಪ್ರಜ್ಞೆಯೇ ಇದ್ದಂತಿಲ್ಲ. ಈ ಕಡೆ ಸರ್ಪವೋ ಹೆಡೆಬಿಚ್ಚಿಕೊಂಡು ನಿಂತಿದೆ! ಅದನ್ನು ಹೆದರಿಸಿ ಓಡಿಸೋಣವೆಂದರೆ ಇವರೇ ಭಯದಿಂದ ತಲ್ಲಣಿಸುತ್ತಿದ್ದಾರೆ. ಆದರೆ ಅದೃಷ್ಟವಶಾತ್ ಅದು ತಾನಾಗಿಯೇ ಹೊರಟುಹೋಯಿತು. ಆಮೇಲೆ ಹುಡುಕಿನೋಡಿದರೂ ಅದು ಸಿಗಬೇಕಲ್ಲ! ಬಳಿಕ ತಾಯ್ತಂದೆಯರು ನರೇಂದ್ರನನ್ನು ಕೇಳಿದರು, "ಅಲ್ಲವೋ, ಹಾವು ಬಂತು ಅಂತ ಹುಡುಗರೆಲ್ಲ ಅಷ್ಟು ಗಟ್ಟಿಯಾಗಿ ಕೂಗಿದರೂ ನೀನೇಕೆ ಎದ್ದು ಬರದೆ ಅಲ್ಲೇ ಕುಳಿತಿದ್ದೆ?" ಅದಕ್ಕೆ ಅವನೆಂದ, "ಏನು! ಹಾವು ಬಂದಿತ್ತೆ? ನನಗೆ ಹಾವು ಬಂದದ್ದೂ ಗೊತ್ತಾಗಲಿಲ್ಲ, ಏನಾಯಿತು ಅಂತಲೂ ಗೊತ್ತಾಗಲಿಲ್ಲ. ನನ್ನಷ್ಟಕ್ಕೆ ನಾನು ತುಂಬ ಆನಂದದಿಂದಿದ್ದೆ."

ನರೇಂದ್ರನ ಧ್ಯಾನಾನಂದದ ಕುರಿತಾಗಿ ಅವನ ಹೆತ್ತವರಿಗೆ ಅದೆಷ್ಟು ಅರ್ಥವಾಯಿತೋ ಗೊತ್ತಿಲ್ಲ. ಆದರೆ ಅವನಂತೂ ಆನಂದವನ್ನು ಅನುಭವಿಸುತ್ತಿದ್ದುದು ನಿಜವೇ. ಅವನಿಗೆ ಪ್ರತಿ ರಾತ್ರಿಯೂ ಒಂದು ದರ್ಶನಾನುಭವವಾಗುತ್ತಿತ್ತು. ಅವನು ಮಲಗಿ ನಿದ್ರೆಹೋಗುತ್ತಿದ್ದ ಕ್ರಮವೇ ಒಂದು ವಿಶೇಷ. ರಾತ್ರಿ ಮಲಗಿ ಕಣ್ಣುಮುಚ್ಚಿಕೊಳ್ಳುವ ಹೊತ್ತಿಗೆ ಸರಿಯಾಗಿ ಅವನಿಗೆ ಭ್ರೂಮಧ್ಯದಲ್ಲಿ ಒಂದು ಅದ್ಭುತವಾದ ಜ್ಯೋತಿಯ ಕಿಡಿ ಕಾಣುತ್ತಿತ್ತು. ಆ ಜ್ಯೋತಿಯ ವರ್ಣ ಆಗಾಗ ಬದಲಾಗುತ್ತಿತ್ತು. ಅದು ಕ್ರಮೇಣ ಬೆಳೆಯುತ್ತ ಬೆಳೆಯುತ್ತ ಕೊನೆಗೆ ಸ್ಫೋಟಗೊಳ್ಳುತ್ತಿತ್ತು. ಆಗ ವಿಶಾಲವಾಗಿ ಹರಡಿದ ಆ ಶುಭ್ರ ಜ್ಯೋತಿಯ ಅಲೆಗಳು ಇಡೀ ಶರೀರವನ್ನು ಆವರಿಸಿಬಿಡುತ್ತಿದ್ದುವು. ಹೀಗೆ ಅವನ ಮನಸ್ಸು ಈ ದಿವ್ಯಾನುಭವದಲ್ಲಿ ಮಗ್ನವಾಗಿದ್ದರೆ, ಶರೀರ ನಿದ್ರೆಯಲ್ಲಿ ಮಗ್ನವಾಗುತ್ತಿತ್ತು. ಇದು ಅವನ ಪಾಲಿಗೆ ದಿನಂಪ್ರತಿಯ ಘಟನೆಯಾಯಿತು. ಕೆಲವೊಮ್ಮೆ ಅವನು ಆ ಜ್ಯೋತಿಯ ಕಡೆಗೆ ಮನಸ್ಸನ್ನು ಏಕಾಗ್ರಗೊಳಿಸಿ ಇನ್ನಷ್ಟು ಸ್ಪಷ್ಟವಾಗಿ ಅದರ ಅನುಭವ ಪಡೆಯಲು ಬೋರಲಾಗಿ ಮಲಗಿಕೊಳ್ಳುತ್ತಿದ್ದ. ತನಗೆ ಈ ಅನುಭವ ಇಷ್ಟೊಂದು ಸಹಜವಾಗಿ ಆಗುತ್ತಿದ್ದುದರಿಂದ, ಬಹುದಿನಗಳವರೆಗೆ ಅವನು, ಇದು ಎಲ್ಲರಿಗೂ ಆಗುವ ಸರ್ವೇಸಾಮಾನ್ಯ ಅನುಭವ ಎಂದೇ ಭಾವಿಸಿದ್ದ. ಆದ್ದರಿಂದಲೇ ಅವನು ಈ ವಿಷಯವಾಗಿ ಯಾರ ಹತ್ತಿರವೂ ಹೇಳಹೋಗಿರಲಿಲ್ಲ. ಆದರೆ ಮುಂದೊಮ್ಮೆ ಅವನು ತನ್ನ ಸಂಗಡಿಗನೊಬ್ಬನನ್ನು ಸಾಂದರ್ಭಿಕವಾಗಿ "ರಾತ್ರಿ ಮಲಗಿಕೊಂಡಾಗ ನಿನಗೆ ನಿನ್ನ ಹುಬ್ಬುಗಳ ಮಧ್ಯದಲ್ಲಿ ಒಂದು ಬೆಳಕು ಕಾಣಿಸುತ್ತದೆಯೆ?" ಎಂದು ಕೇಳಿದಾಗ ಸ್ನೇಹಿತ "ಇಲ್ಲವಲ್ಲ!" ಎಂದ. ಆಗ ನರೇಂದ್ರ ನುಡಿದ, "ಮತ್ತೆ, ನನಗೆ ಕಾಣಿಸುತ್ತದೆಯಲ್ಲಾ?... ನೋಡು, ಇವತ್ತು ನೀನು ಮಲಗಿಕೊಂಡ ತಕ್ಷಣ ನಿದ್ರೆ ಮಾಡಬೇಡ. ಸ್ವಲ್ಪ ಹೊತ್ತು ಹಾಗೇ ಎಚ್ಚರವಾಗಿಯೇ ಇರು; ಆಗ ನಿನಗೇ ಕಾಣಿಸುತ್ತದೆ ಬೆಳಕು." ಆದರೆ ಹಾಗೆ ಎಚ್ಚತ್ತಿದ್ದರೂ ಇತರರಿಗೆ ಜ್ಯೋತಿ ಕಾಣಿಸಲು ಸಾಧ್ಯವೆ? ನರೇಂದ್ರನ ಸಂಸ್ಕಾರವೇ ಬೇರೆ. ಅನೇಕ ಜನ್ಮಗಳ ಸಾಧನೆಯ ಹಿನ್ನೆಲೆ ಇದ್ದವರಿಗೆ ಮಾತ್ರ ಈ ಬಗೆಯ ದಿವ್ಯಾನುಭವಗಳಾದಾವು.

ನರೇಂದ್ರನನ್ನು ಆರನೆಯ ವಯಸ್ಸಿಗೆ ಗುರುಕುಲದಂತಹ ಪಾಠಶಾಲೆಗೆ ಸೇರಿಸಲಾಯಿತು. ಶಾಲೆಗೆ ಸೇರಿಸುವ ದಿನ ಅವನಿಗೆ ಹೊಸ ಧೋತಿ ಉಡಿಸಿದ್ದರು. ಒಂದು ಪುಟ್ಟ ಚಾಪೆಯನ್ನು ಸುರುಳಿ ಸುತ್ತಿ ಬಗಲಲ್ಲಿಟ್ಟಿದ್ದರು. ಏಕೆಂದರೆ ವಿದ್ಯಾರ್ಥಿಗಳು ತಂತಮ್ಮ ಆಸನಗಳನ್ನು ತಾವುತಾವೇ ತರಬೇಕಾಗಿತ್ತು. ಬಳಪದ ಕಡ್ಡಿಯನ್ನು ಒಂದು ದಾರದ ಸಹಾಯದಿಂದ ಅವನ ಸೊಂಟಕ್ಕೆ ಕಟ್ಟಲಾಗಿತ್ತು. ಕೈಯಲ್ಲಿ ಸ್ಲೇಟನ್ನು ಹಿಡಿದುಕೊಂಡು, ಬಗಲಲ್ಲಿ ಚಾಪೆ ಇಟ್ಟುಕೊಂಡು, ಸೊಂಟದಲ್ಲಿ ಕಡ್ಡಿಯನ್ನು ಜೋತಾಡಿಸಿಕೊಂಡು ಜಂಬದಿಂದ ಶಾಲೆಗೆ ಹೊರಟ ನರೇಂದ್ರ.

ಅದು ನರೇಂದ್ರನ ಬಾಲ್ಯದಲ್ಲಿ ಒಂದು ಮುಖ್ಯವಾದ ದಿನ. ಅಂದು ಬೆಳಗ್ಗೆ (ಶಾಲೆಗೆ ಹೊರಡುವ ಮೊದಲು) ಅವನಿಗೆ ಅಕ್ಷರಾಭ್ಯಾಸ ಮಾಡಿಸಲು ಕುಲಪುರೋಹಿತರು ಬಂದರು. ಮನೆಯುವರೆಲ್ಲರೂ ಒಟ್ಟಿಗೆ ಸೇರಿದರು. ಪುರೋಹಿತರು ಕೆಲವು ಪ್ರಾರ್ಥನಾಶ್ಲೋಕಗಳನ್ನು ಹೇಳಿ, ಬಾಲಕ ನರೇಂದ್ರನಿಂದ ವಿದ್ಯಾಧಿದೇವತೆಯಾದ ಸರಸ್ವತಿಗೆ ನಮಸ್ಕಾರ ಮಾಡಿಸಿದರು. ಬಳಿಕ ಒಂದು ನಸುಗೆಂಪಿನ ಕಡ್ಡಿಯನ್ನು—ಅದರ ಹೆಸರು ರಾಮ್‌ಖಾಡಿ—ನರೇಂದ್ರನ ಬಲಗೈಯಲ್ಲಿ ಹಿಡಿಸಿ, ಆ ಕೈಯನ್ನು ತಾವು ಹಿಡಿದುಕೊಂಡು ನೆಲದ ಮೇಲೆ ಬಂಗಾಳೀ ಅಕ್ಷರಗಳನ್ನು ತಿದ್ದಿಸಿದರು. ತಿದ್ದಿಸುವಾಗ, "ಇದು 'ಕ', ಇದು 'ಖ' " ಎಂದು ಹೇಳಿಕೊಟ್ಟರು. ಅವನೂ ಅದರಂತೆಯೇ ಹೇಳಿದ.

ನರೇಂದ್ರ ಶಾಲೆಗೆ ಹೋಗಲಾರಂಭಿಸಿದ. ಶಾಲೆ ಎನ್ನುವುದೊಂದು ವಿಚಿತ್ರ ಕ್ಷೇತ್ರ. ಇಲ್ಲಿಗೆ ಬೇರೆಬೇರೆ ಮನೆಗಳಿಂದ ನಾನಾ ಸಂಸ್ಕಾರಗಳ ಮಕ್ಕಳೆಲ್ಲ ಬರುತ್ತಾರಲ್ಲವೆ? ಕೆಲದಿನಗಳಲ್ಲೇ ನರೇಂದ್ರ ಈ ಶಾಲೆಯಲ್ಲಿ ಉಪಾಧ್ಯಾಯರಿಂದ ಪಾಠಗಳನ್ನು ಕಲಿತದ್ದಲ್ಲದೆ ತನ್ನ ಸಹವಿದ್ಯಾರ್ಥಿಗಳಿಂದಲೂ ಒಂದಷ್ಟು ಕಲಿತ—ಕೆಲವು ಕೆಟ್ಟ ಶಬ್ದಗಳನ್ನು! ಕಲಿತದ್ದಲ್ಲದೆ ಮನೆಗೆ ಬಂದು ಪ್ರಯೋಗಿಸಿಯೂಬಿಟ್ಟ. ಅದನ್ನು ಕೇಳಿದ ಮನೆಮಂದಿಯೆಲ್ಲ, "ಇದೇನಿದು? ಹುಡುಗ ಶಾಲೆಗೆ ಹೋಗಿ ಕುಲದ ಮರ್ಯಾದೆಯನ್ನೇ ಕಳೆಯುವ ಶಬ್ದಗಳನ್ನು ಕಲಿತುಕೊಂಡು ಬಂದುಬಿಟ್ಟಿದ್ದಾನಲ್ಲ!" ಎಂದು ತಬ್ಬಿಬ್ಬಾದರು. ಬಳಿಕ ಒಂದು ನಿಶ್ಚಯಕ್ಕೆ ಬಂದರು—ನರೇಂದ್ರನನ್ನು ಇನ್ನು ಮೇಲೆ ಪಾಠಶಾಲೆಗೆ ಕಳಿಸುವುದು ಬೇಡ; ಉಪಾಧ್ಯಾಯರನ್ನು ಮನೆಗೇ ಬರಮಾಡಿಕೊಂಡು ಮನೆಯಲ್ಲೇ ಹುಡುಗನಿಗೆ ವಿದ್ಯಾಭ್ಯಾಸ ಕೊಡಿಸೋಣ ಎಂದು. ಸರಿ; ನರೇಂದ್ರನಿಗೆ ಶಾಲೆಗೆ ಹೋಗುವ ಕೆಲಸ ತಪ್ಪಿಹೋಯಿತು. ಆದರೆ ತಾನು ಶಾಲೆಯ ಹುಡುಗರಿಂದ ಕಲಿತದ್ದು ಉಚ್ಚರಿಸಬಾರದಂಥ ಕೆಟ್ಟ ಶಬ್ದಗಳು ಎನ್ನುವುದು ಅವನಿಗೇನು ಗೊತ್ತು? ಆದ್ದರಿಂದ ಅವನಿಗೆ ತನ್ನನ್ನು ಶಾಲೆಯಿಂದ ಏಕೆ ಬಿಡಿಸಿದರು ಎನ್ನುವುದು ಅರ್ಥವಾಗಲೇ ಇಲ್ಲ. ಆಗ ತಂದೆ ವಿಶ್ವನಾಥ ಅವನು ಮಾಡಿದ ತಪ್ಪನ್ನು ತಿಳಿಸಿಕೊಟ್ಟ. ಆದರೆ ಅಷ್ಟು ಹೊತ್ತಿಗಾಗಲೇ ಅವನು ಆ ಘಟನೆಗಳನ್ನೆಲ್ಲ ಮರೆತಾಗಿತ್ತು.

ಮನೆಯ ಪ್ರಾರ್ಥನಾಮಂದಿರದಲ್ಲಿ ನರೇಂದ್ರನಿಗಾಗಿ ತರಗತಿ ಆರಂಭವಾಯಿತು. ಇವನ ಜೊತೆಗೆ ಮನೆಯ ಇತರ ಮಕ್ಕಳೂ ವಿಶ್ವನಾಥನ ಸ್ನೇಹಿತರ ಮಕ್ಕಳೂ ಈ

ತರಗತಿಗೇ ಸೇರಿಕೊಂಡರು.

ದಿನೇದಿನೇ ವಿದ್ಯಾಭ್ಯಾಸದಲ್ಲಿ ನರೇಂದ್ರನ ಪ್ರಚಂಡ ಬುದ್ಧಿಶಕ್ತಿ ವ್ಯಕ್ತವಾಗತೊಡಗಿತು. ಅವನ ಸಹಪಾಠಿಗಳೆಲ್ಲ ಇನ್ನೂ ಕಾಗುಣಿತದೊಂದಿಗೇ ಕುಸ್ತಿಯಾಡುತ್ತಿದ್ದರೆ ಅವನು ಮಾತ್ರ ಚೆನ್ನಾಗಿ ಓದಲೂ ಕಲಿತಾಯಿತು, ಬರೆಯಲೂ ಕಲಿತಾಯಿತು! ತರಗತಿಯಲ್ಲಿ ಅವನು ಕುಳಿತಿರುತ್ತಿದ್ದ ರೀತಿಯೇ ವಿಚಿತ್ರ. ಒಂದೋ ಕಣ್ಣು ಮುಚ್ಚಿಕೊಂಡು ಸ್ತಬ್ಧವಾಗಿ ಕುಳಿತಿರುತ್ತಿದ್ದ, ಇಲ್ಲವೆ ನೆಲದ ಮೇಲೆ ಒರಗಿಕೊಂಡಿರುತ್ತಿದ್ದ. ಅವನ ಈ ವಿಚಿತ್ರ ವರ್ತನೆ ಮೊದಮೊದಲು ಮಾಸ್ತರಿಗೆ ಅರ್ಥವಾಗಲಿಲ್ಲ. ಏನೋ, ಹುಡುಗ ನಾಳೆ ಸರಿಹೋದಾನು, ನಾಡಿದ್ದು ಸರಿಹೋದಾನು ಎಂದುಕೊಂಡಿದ್ದರೆ ಪ್ರತಿದಿನ ಅದೇ ವಿಚಿತ್ರ ವರ್ತನೆ! ಕೊನೆಗೆ ಇದನ್ನು ಕಂಡು ಮಾಸ್ತರರ ಕೋಪ ಕೆರಳಿತು. ಒಂದು ದಿನ ನರೇಂದ್ರ ಹಾಗೇ ಒರಗಿಕೊಂಡು ಕಣ್ಣುಮುಚ್ಚಿಕೊಂಡಿದ್ದಾನೆ; ಮಾಸ್ತರು ಕಣ್ಣುಕೆಂಪಗೆ ಮಾಡಿಕೊಂಡು ಬಂದು ಅವನನ್ನು ಹಿಡಿದು ಒರಟೊರಟಾಗಿ ಅಲುಗಾಡಿಸಿಬಿಟ್ಟರು. ನರೇಂದ್ರ ಬೆಚ್ಚಿಬಿದ್ದು ಎದ್ದು ಕುಳಿತ. ಅವನ ಅಭಿಮಾನಕ್ಕೆ ಧಕ್ಕೆಯಾಯಿತು. ಪಾಠ ಕೇಳುವುದನ್ನು ಬಿಟ್ಟು 'ನಿದ್ರೆ'ಮಾಡುತ್ತಿದ್ದುದಕ್ಕಾಗಿ ಮಾಸ್ತರು ಚೆನ್ನಾಗಿ ಬೈದರು. ಆದರೆ ಅವರಿಗಿನ್ನೂ ಅವನ ಬುದ್ಧಿಸಾಮರ್ಥ್ಯದ ಪರಿಚಯ ಸಾಕಷ್ಟು ಆಗಿರಲಿಲ್ಲ. ಈಗ ನರೇಂದ್ರ, ಅಂದು ಆ ತರಗತಿಯಲ್ಲಿ ಅವರು ಏನೇನು ಹೇಳಿದ್ದರೋ ಅವೆಲ್ಲವನ್ನೂ ಒಂದು ಶಬ್ದವನ್ನೂ ಬಿಡದೆ ಒಪ್ಪಿಸಿಬಿಟ್ಟ. ಉಪಾಧ್ಯಾಯರು ಬೆಕ್ಕಸಬೆರಗಾಗಿ ನಿಂತರು. ಆ ಬಗೆಯ ನೆನಪಿನ ಶಕ್ತಿಯಿರುವವರನ್ನು ಅವರೆಂದೂ ಕಂಡಿರಲಿಲ್ಲ. ಅಂದಿನಿಂದ ಅವರು ಅವನನ್ನು ವಿಶೇಷ ಪ್ರೀತಿ ವಿಶ್ವಾಸದಿಂದ ನೋಡಲಾರಂಭಿಸಿದರು.

ನರೇಂದ್ರ ಶಾಲಾ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರೂ ಅವನು ತನ್ನ ತಾಯಿಯ ಆಶ್ರಯದಲ್ಲಿ ಕಲಿಯುವಂಥದು ನಿಂತಿರಲಿಲ್ಲ. ಭುವನೇಶ್ವರಿ ತಾನೇ ಮಗನಿಗೆ ಬಂಗಾಳೀ ಮತ್ತು ಇಂಗ್ಲಿಷ್ ವರ್ಣಮಾಲೆಯನ್ನು ಅಭ್ಯಾಸಮಾಡಿಸಿದಳು; ಹಲವಾರು ನೀತಿಕತೆಗಳನ್ನು ಹೇಳುತ್ತ ಅವನ ನೈತಿಕ ಜೀವನವನ್ನು ರೂಪಿಸಿದಳು; ಭಗವಂತನಿಗೆ ಶರಣಾಗಿದ್ದುಕೊಂಡು, ಜೀವನದಲ್ಲಿ ಎದುರಾಗುವ ಎಲ್ಲ ಕಷ್ಟಕಾರ್ಪಣ್ಯಗಳನ್ನು ಹೇಗೆ ಎದುರಿಸಬೇಕು ಎನ್ನುವುದನ್ನು ಬಾಲಭಾಷೆಯಲ್ಲಿ ತಿಳಿಸಿಕೊಡುತ್ತಿದ್ದಳು. ಅಲ್ಲದೆ ಆಗಾಗ ಹೇಳುತ್ತಿದ್ದಳು: "ಮಗೂ, ನೀನು ನಿನ್ನ ಜೀವನದುದ್ದಕ್ಕೂ ಪರಿಶುದ್ಧನಾಗಿರಬೇಕು, ಪವಿತ್ರನಾಗಿರಬೇಕು. ನಿನ್ನ ಆತ್ಮಗೌರವವನ್ನು ಯಾವಾಗಲೂ ಕಾಪಾಡಿಕೊ; ಹಾಗೆಯೇ ಇತರರ ಗೌರವಕ್ಕೂ ಧಕ್ಕೆ ತರದಂತೆ ನೋಡಿಕೊ. ಯಾವಾಗಲೂ ಸಮಾಧಾನದಿಂದಿರುವುದನ್ನು ಅಭ್ಯಾಸಮಾಡು. ಆದರೆ ಸಮಯ ಬಂದರೆ ಕಲ್ಲೆದೆಯುವನಾಗಿರುವುದಕ್ಕೂ ಸಿದ್ಧನಾಗಿರು." ತನ್ನನ್ನು ಹೀಗೆ ಸರ್ವಾಂಗಸುಂದರವಾಗಿ ರೂಪಿಸಲು ತನ್ನ ತಾಯಿ ಮಾಡಿದ ಪ್ರಯತ್ನವನ್ನು ನರೇಂದ್ರ ಚೆನ್ನಾಗಿ ಅರಿತುಕೊಂಡ; ಅವಳ ಆದೇಶಗಳನ್ನು ಯಥಾವತ್ತಾಗಿ ಪಾಲಿಸಿದ. ಮುಂದೆ ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು: "ಯಾವನು ತನ್ನ ತಾಯಿಯನ್ನು ಅಕ್ಷರಶಃ ಪೂಜಿಸಿ ಗೌರವಿಸುವುದಿಲ್ಲವೋ ಅವನು ಖಂಡಿತವಾಗಿಯೂ ದೊಡ್ಡ ವ್ಯಕ್ತಿಯಾಗಲಾರ." ಅಲ್ಲದೆ, "ನನ್ನ ವಿವೇಕಬುದ್ಧಿಯನ್ನು ಪರಿಪೂರ್ಣವಾಗಿ ಅರಳಿಸಿದ ನನ್ನ ತಾಯಿಗೆ ನಾನು ಸದಾ ಋಣಿ" ಎನ್ನುತ್ತಿದ್ದರು ಅವರು.

ನರೇಂದ್ರ ತನ್ನ ತಾಯಿಯಿಂದ ರಾಮಾಯಣದ ಬಹುಭಾಗವನ್ನು ಕಲಿತ ವಿಷಯವನ್ನು ನಾವು ನೋಡಿದ್ದೇವೆ. ಅವನು ಅದನ್ನು ಎಷ್ಟು ನಿಖರವಾಗಿ ಕಲಿತಿದ್ದ ನೆಂದರೆ, ಕೆಲವು ಕೀರ್ತನಕಾರರು ರಾಮಾಯಣವನ್ನು ಹಾಡಿಕೊಂಡು ಮನೆಯ ಮುಂದೆ ಬಂದಾಗ ಅದನ್ನು ಗಮನವಿತ್ತು ಕೇಳುತ್ತಿದ್ದ; ಅವರು ಶ್ಲೋಕಗಳನ್ನು ಉಚ್ಚರಿಸುವಾಗ ಮಾಡುತ್ತಿದ್ದ ತಪ್ಪುಗಳನ್ನು ಅವರಿಗೆ ತೋರಿಸಿಕೊಡುತ್ತಿದ್ದ. ಆ ಕೀರ್ತನಕಾರರು ಹುಡುಗನ ಸಾಮರ್ಥ್ಯವನ್ನು ಕಂಡು ಬೆರಗಾಗುತ್ತಿದ್ದರು.

ಬಾಲಕ ನರೇಂದ್ರನ ವ್ಯಕ್ತಿತ್ವ ನಿರ್ಮಾಣದಲ್ಲಿ ಅವನ ತಂದೆ ವಿಶ್ವನಾಥ ದತ್ತನ ಕೊಡುಗೆಯೂ ಕಡಮೆಯದೇನಲ್ಲ. ಅವನು ನರೇಂದ್ರನಿಗೆ ಬಾಲ್ಯದಿಂದಲೇ ಸಂಗೀತ ಕಲಿಸುವ ವ್ಯವಸ್ಥೆ ಮಾಡಿದ. ಆ ಕಾಲದಲ್ಲಿ ಶಾಸ್ತ್ರೀಯ ಸಂಗೀತಕ್ಕೆ ಅಷ್ಟಾಗಿ ಮನ್ನಣೆಯಿರಲಿಲ್ಲ. ಆದರೆ ಸಂಗೀತವೆನ್ನುವುದು ಸರಳ-ಶುದ್ಧ ಆನಂದವನ್ನು ಕೊಡುವ ವಿದ್ಯೆ ಎಂಬುದು ವಿಶ್ವನಾಥನ ಅಭಿಮತವಾಗಿತ್ತು. ಆದ್ದರಿಂದ ಸಂಗೀತವನ್ನು ಬಹು ವಾಗಿ ಪ್ರೋತ್ಸಾಹಿಸುತ್ತಿದ್ದ. ಮನೆಯಲ್ಲಿ ಸಂಗೀತದ ವಾತಾವರಣವಿದ್ದುದರಿಂದ ನರೇಂದ್ರ ಶ್ರೇಷ್ಠ ಹಾಡುಗಾರನಾಗಿ ನಿರ್ಮಾಣಗೊಳ್ಳುವುದು ಸುಲಭವಾಯಿತು.

ವಿಶ್ವನಾಥ ದತ್ತ ತನ್ನ ಮಕ್ಕಳನ್ನು ತಿದ್ದುವುದರಲ್ಲೊಂದು ವಿಶೇಷತೆಯಿತ್ತು. ಉದಾಹರಣೆಗೆ, ಮಕ್ಕಳು ಯಾರಾದರೂ ತಪ್ಪು ಮಾಡಿದರೆ ವಿಶ್ವನಾಥ ಬೈದು ಕೂಗಾಡುತ್ತಿರಲಿಲ್ಲ, ಬದಲಾಗಿ ಅವನ ಆ ತಪ್ಪು ಅವನ ಸ್ನೇಹಿತರಿಗೆ ತಿಳಿಯುವಂತೆ ಮಾಡುತ್ತಿದ್ದ. ಒಂದು ದಿನ ನರೇಂದ್ರ ತನ್ನ ತಾಯಿಯ ಮೇಲೆ ಕಟುಶಬ್ದಗಳನ್ನು ಪ್ರಯೋಗಿಸಿಬಿಟ್ಟ. ಇದು ವಿಶ್ವನಾಥನ ಕಿವಿಗೆ ಬಿತ್ತು. ಆದರೆ ಅವನು ಮಗನನ್ನು ಕರೆದು ಬೈಯಲಿಲ್ಲ. ಬದಲಾಗಿ ಅವನ ಕೋಣೆಯ ಬಾಗಿಲ ಮೇಲೆ, 'ನರೇಂದ್ರ ಇಂದು ತನ್ನ ತಾಯಿಯನ್ನು ಇಂತಿಂಥ ಶಬ್ದಗಳಿಂದ ಬೈದಿದ್ದಾನೆ' ಎಂದು ಬರೆದುಬಿಟ್ಟ. ಅದು ತಿಳಿಯದೆ ನರೇಂದ್ರ ತನ್ನ ಸ್ನೇಹಿತರೊಂದಿಗೆ ಬಂದ. ಬಾಗಿಲ ಮೇಲೆ ಬರೆದಿದ್ದನ್ನು ಎಲ್ಲರೂ ಓದಿಬಿಟ್ಟರು. ಆಗ ನರೇಂದ್ರನಿಗಾದ ನಾಚಿಕೆ, ಅಪಮಾನ ಅಷ್ಟಿಷ್ಟಲ್ಲ. ಮತ್ತೆಂದೂ ಅವನು ಅಂತಹ ತಪ್ಪು ಮಾಡಲಿಲ್ಲ.

ನರೇಂದ್ರನಿಗೆ ತನ್ನಲ್ಲಿ ಅಪಾರ ಆತ್ಮವಿಶ್ವಾಸವಿತ್ತು. ತನ್ನ ಬುದ್ಧಿಶಕ್ತಿಯಲ್ಲಿ ಅವನಿಗೆ ಬಲವಾದ ನಂಬಿಕೆ. ಆದ್ದರಿಂದ ತಾನೇ ತನ್ನ ಸಂಗಾತಿಗಳೆಲ್ಲರ ಮುಖಂಡನಂತೆ ವರ್ತಿಸುತ್ತಿದ್ದ. ಏನಾದರೂ ಕೆಲಸಕಾರ್ಯ ಮಾಡಬೇಕಾದರೆ ಅವನೇ ಅಲ್ಲಿ ಮುಂದಾಳು. ತಿರುಗಾಟಕ್ಕೆ ಹೊರಟರೆ ಅವನೇ ಮುಖಂಡ. ಆಡುವಾಗಲೂ ಅವನೇ ನಾಯಕ. ಅವನು 'ರಾಜನ ಆಟ' ಆಡುವುದನ್ನು ನೋಡಬೇಕು. ಸ್ನೇಹಿತರೊಂದಿಗೆ ಮನೆಯ ಮೆಟ್ಟಿಲುಗಳನ್ನು ಏರಿಕೊಂಡು ಹೋಗುತ್ತ "ನಾನು ರಾಜಾಧಿರಾಜ, ಸಾರ್ವಭೌಮ !" ಎಂದು ಗಟ್ಟಿಯಾಗಿ ಕೂಗಿಹೇಳುತ್ತಿದ್ದ. ಬಳಿಕ ಮೇಲಿನ ಮೆಟ್ಟಿಲ ಮೇಲೆ ಚಕ್ರವರ್ತಿಯ ಠೀವಿಯಿಂದ ಕುಳಿತುಬಿಡುತ್ತಿದ್ದ. ಅನಂತರ ಇಬ್ಬರು ಹುಡುಗ ರಿಗೆ ಅಲ್ಲೇ ಕೆಳಗಿನ ಮೆಟ್ಟಿಲ ಮೇಲೆ ತನ್ನ ಅಕ್ಕಪಕ್ಕದಲ್ಲಿ ನಿಂತುಕೊಳ್ಳುವಂತೆ ಹೇಳುತ್ತಿದ್ದ. ಅವರಲ್ಲಿ ಒಬ್ಬ ಪ್ರಧಾನಮಂತ್ರಿಯಂತೆ, ಇನ್ನೊಬ್ಬ ಸೇನಾಧಿಪತಿಯಂತೆ. ಬಳಿಕ ಅದಕ್ಕಿಂತ ಕೆಳಗಿನ ಮೆಟ್ಟಿಲ ಮೇಲೆ ಇನ್ನೈದು ಹುಡುಗರನ್ನು ನಿಲ್ಲಿಸುತ್ತಿದ್ದ. ಇವರು ಅವನಿಗೆ ಕಪ್ಪವನ್ನು ತರುವ ಸಾಮಂತ ರಾಜರು. ಇದಕ್ಕೂ ಕೆಳಗಿನ ಮೆಟ್ಟಿಲುಗಳ ಮೇಲೆ ಇತರ ಆಸ್ಥಾನಿಕರನ್ನು ಕೂಡಿಸಿ ನರೇಂದ್ರ ಕ್ರಮಪ್ರಕಾರ

ದರ್ಬಾರನ್ನು ಪ್ರಾರಂಭಿಸುತ್ತಿದ್ದ. ಆ ಬಳಿಕ ಸಾಮಂತ ರಾಜರು, ಉನ್ನತಾಧಿಕಾರಿಗಳು, ಪ್ರಜೆಗಳು ಎಲ್ಲರೂ ಒಬ್ಬೊಬ್ಬರಾಗಿ ಬಂದು ಚಕ್ರವರ್ತಿಗೆ ಕ್ರಮಪ್ರಕಾರವಾಗಿಯೇ ನಮಸ್ಕಾರ ಮಾಡಿ ಗೌರವ ಸಲ್ಲಿಸುತ್ತಿದ್ದರು. ಹಾಗೆ ಮಾಡುವಾಗ, "ಸೂರ್ಯವಂಶ ಪ್ರಸೂತ, ಧರ್ಮರಕ್ಷಣಕೋವಿದ, ರಾಜಾಧಿರಾಜನಿಗೆ ಜಯವಾಗಲಿ!" ಎಂದು ಹೇಳುತ್ತಿದ್ದರು. ಈ ಕಾರ್ಯಕ್ರಮವೆಲ್ಲ ಸಾಂಗವಾಗಿ ಮುಗಿದ ಮೇಲೆ ನರೇಂದ್ರ ಚಕ್ರವರ್ತಿ ತನ್ನ ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿದ್ದ. ಆಗ ಯಾರು ಬೇಕಾದರೂ ತಂತಮ್ಮ ಕಷ್ಟಗಳನ್ನು ಹೇಳಿಕೊಳ್ಳಬಹುದಾಗಿತ್ತು. ಕೆಲವೊಮ್ಮೆ ಒಬ್ಬ ಕೊಲೆಗಡುಕನನ್ನು ತಂದು ದರ್ಬಾರಿನಲ್ಲಿ ನಿಲ್ಲಿಸಲಾಗುತ್ತಿತ್ತು. ತಳವಾರ, ಪ್ರಧಾನ ಮಂತ್ರಿಗಳು ಎಲ್ಲರೂ ಸೇರಿ ಅವನು ಮಾಡಿದ ಭಯಂಕರ ಅಪರಾಧಗಳನ್ನು ಸನ್ನಿಧಿಯಲ್ಲಿ ಸಾಬೀತುಪಡಿಸುತ್ತಿದ್ದರು. ಆಗ, ನರೇಂದ್ರಚಕ್ರವರ್ತಿ ಅಧಿಕಾರವಾಣಿಯಿಂದ ಆಜ್ಞೆ ಮಾಡುತ್ತಿದ್ದ: "ಯಾರಲ್ಲಿ, ಭಟರು! ಇವನನ್ನು ಕರೆದುಕೊಂಡು ಹೋಗಿ ಇವನ ಶಿರಚ್ಛೇದನ ಮಾಡಿಬಿಡಿ!" ಎಂದು. ತಕ್ಷಣ ಹತ್ತು ಮಂದಿ ಭಟರು ನುಗ್ಗಿ ಕೊಲೆಗಡುಕನನ್ನು ಕರೆದೊಯ್ಯುತ್ತಿದ್ದರು. ಹೀಗೆ ಅವನು ಚಕ್ರವರ್ತಿಯಾಗಿ ತುಂಬ ಗಾಂಭೀರ್ಯದಿಂದ ನ್ಯಾಯವಿತರಣೆ ಮಾಡುತ್ತಿದ್ದ. ಸಭೆಯಲ್ಲಿ ಯಾರಾದರೂ ಸ್ವಲ್ಪ ಅವಿಧೇಯರಾಗಿ ನಡೆದುಕೊಂಡರೆ, ನರೇಂದ್ರ ತನ್ನ ಹುಬ್ಬುಗಳನ್ನು ಸ್ವಲ್ಪಮಾತ್ರ ಗಂಟಿಕ್ಕುವುದರ ಮೂಲಕವೇ ಆ ಅವಿಧೇಯತೆಯನ್ನು ಹತೋಟಿಗೆ ತರುತ್ತಿದ್ದ! ಅಂತೂ ಒಳ್ಳೇ ರೀತಿಯಿಂದ ನಡೆಯುತ್ತಿತ್ತು ಅವನ 'ದರ್ಬಾರು'.

ವಿಶ್ವನಾಥ ದತ್ತ ವಕೀಲನಾದ್ದರಿಂದ ಅವನ ಮನೆಗೆ ಹಲವಾರು ಕಕ್ಷಿದಾರರು ಬರುತ್ತಿದ್ದರು. ಅವರೆಲ್ಲ ಬೇರೆಬೇರೆ ಜಾತಿಯವರೆಂದು ಹೇಳಲೇಬೇಕಾಗಿಲ್ಲ. ಇವರಿಗಾಗಿ ಮನೆಯ ಹಜಾರದಲ್ಲಿ ಹಲವಾರು ಹುಕ್ಕಾ ಕೊಳವೆ*ಗಳನ್ನು ಇರಿಸಲಾಗಿತ್ತು. ಒಂದೊಂದು ಜಾತಿಯವರಿಗೆ ಒಂದೊಂದು ಕೊಳವೆ. ಕಕ್ಷಿದಾರರು ತಮತಮಗೆ ಮೀಸಲಾದ ಕೊಳವೆಗಳಿಂದ ಸೇದಿ ಹೊಗೆ ಉಗುಳುತ್ತ ಸಲ್ಲಾಪದಲ್ಲಿ ನಿರತರಾಗಿರುತ್ತಿದ್ದರು. ಅವರಲ್ಲೊಬ್ಬ ಮುಸಲ್ಮಾನನೂ ಇದ್ದ. ಇವನು ಅಲ್ಲಿಗೆ ಬಂದಾಗಲೆಲ್ಲ ದಿಂಬುಗಳನ್ನು ಪೇರಿಸಿಕೊಂಡು ಒಳ್ಳೆ ನವಾಬನಂತೆ ಕುಳಿತುಕೊಳ್ಳುತ್ತಿದ್ದ. ಈತ ಹುಕ್ಕಾ ಎಳೆಯುತ್ತ ಮಧ್ಯಮಧ್ಯ "ಅಲ್ಲಾ ಹೋ ಅಕ್ಬರ್!" ಎಂದು ಉದ್ಗರಿಸಿ ಬಳಿಕ ಮತ್ತೆ "ಗುಳುಗುಳುಗುಳು" ಎಂದು ಹುಕ್ಕಾ ಎಳೆಯುತ್ತಿದ್ದ. ಒಮ್ಮೆ ಈ ವೇಳೆಗೆ ಸರಿಯಾಗಿ ನರೇಂದ್ರ ಒಳಗೆ ಬಂದ. ಸೊಂಟಕ್ಕೆ ಸುತ್ತಿದ ಪುಟ್ಟ ಧೋತಿ ಬಿಟ್ಟರೆ ಮೈಮೇಲೇನೂ ಇಲ್ಲ. ಅವನು ಒಳಗೆ ಬಂದ ಕೂಡಲೇ ಅವರೆಲ್ಲ "ಓ! ನರೇನ್ ನರೇನ್!" ಎಂದು ಅವನನ್ನು ಕರೆದರು. ಆ ಮುಸಲ್ಮಾನ ಕಕ್ಷಿದಾರ, "ಯಾ ಅಲ್ಲಾ! ಬಾ ಮಗೂ, ಇಲ್ಲಿ ಬಾ" ಎಂದ. ನರೇಂದ್ರ ಸೀದಾ ಅವನ ಬಳಿಗೆ ಹೋದ. ಆ ಕಕ್ಷಿದಾರರಿಗೆಲ್ಲ ನರೇಂದ್ರ ಬಹಳ ಪ್ರಿಯ. ಅದರಲ್ಲೂ ಈ ಮುಸಲ್ಮಾನ ಕಕ್ಷಿದಾರನಿಗೆ ಅವನನ್ನು ಕಂಡರೆ ಬಹಳ

---

*ಬಂಗಾಳದಲ್ಲಿ ಧೂಮಪಾನ ಬಹಳ ವ್ಯಾಪಕವಾದದ್ದು. ಮನೆಗಳಲ್ಲಿ ಹುಕ್ಕಾ (ಗುಡುಗುಡಿ) ಇಟ್ಟಿರುವುದು ಸಾಮಾನ್ಯ ದೃಶ್ಯ. ಈ ಹುಕ್ಕಾದಲ್ಲಿ ತಂಬಾಕಿನ ಹೊಗೆಯನ್ನು ನೀರುತುಂಬಿದ ಪಾತ್ರೆಯ ಮೂಲಕ ಎಳೆದುಕೊಂಡು ಸೇದಲಾಗುವಂತೆ ವ್ಯವಸ್ಥೆಯಿರುತ್ತದೆ. ಹೀಗೆ ಎಳೆದುಕೊಳ್ಳುವಾಗ 'ಗುಳುಗುಳು' ಎಂಬ ಶಬ್ದವುಂಟಾಗುತ್ತದೆ. ಅತಿಥಿಗಳಿಗೆ ಹುಕ್ಕಾ ನೀಡಿ ಉಪಚರಿಸುವುದು ಅತಿಥಿಸತ್ಕಾರದ ಒಂದು ಅಂಗವೇ ಆದೆ.

ಇಷ್ಟ. ನರೇಂದ್ರ ಅವನನ್ನು ಸಲಿಗೆಯಿಂದ, 'ಮುಸಲ್ಮಾನ ಮಾಮ' ಎಂದು ಕರೆಯು ತ್ತಿದ್ದ. ಅವನು ನರೇಂದ್ರನಿಗೆ ಒಳ್ಳೊಳ್ಳೆಯ ಕೆರವಾನ್ ಕಥೆಗಳನ್ನು ಹೇಳುತ್ತಿದ್ದ. ಅರಬರು ಒಂಟೆಗಳ ಮೇಲೆ ಸರಕು ಹೇರಿಕೊಂಡು ಪಂಜಾಬಿನಿಂದ ಅಫಘಾನಿಸ್ತಾನದ ವರೆಗೆ ವಿಶಾಲವಾದ ಮೈದಾನ ಪ್ರದೇಶಗಳಲ್ಲಿ ಪ್ರಯಾಣ ಮಾಡುತ್ತ ಹೋಗುವ ರೋಮಾಂಚಕಾರಿ ಕಥೆಗಳನ್ನು ರಂಗುರಂಗಾಗಿ ಹೇಳುತ್ತಿದ್ದ. ಆ ದಾರಿ ಎಷ್ಟು ಉದ್ದವೋ ಮುಸಲ್ಮಾನ ಮಾಮನ ಕಥೆಗಳೂ ಅಷ್ಟೇ ಉದ್ದ! ಈ ಕಥೆಗಳನ್ನೆಲ್ಲ ನರೇಂದ್ರ ಕಣ್ಣರಳಿಸಿಕೊಂಡು ಕೇಳುತ್ತಿದ್ದ. "ಮಾಮಾ, ನನ್ನನ್ನೂ ಅಲ್ಲಿಗೆಲ್ಲ ಕರೆದುಕೊಂಡು ಹೋಗು" ಎಂದು ಕಾಡುತ್ತಿದ್ದ. ಆಗ ಮುಸಲ್ಮಾನ ಮಾಮ, "ಖಂಡಿತವಾಗಿ! ನೀನು ಇನ್ನು ಒಂದಿಂಚು ಬೆಳೆದ ಕೂಡಲೇ ಕರೆದುಕೊಂಡು ಹೋಗುತ್ತೇನೆ!" ಎನ್ನುತ್ತಿದ್ದ. ಒಮ್ಮೆ ಈ ಮುಸಲ್ಮಾನ ಮಾಮ ನರೇಂದ್ರನಿಗೆ ಒಂದು ಮಿಠಾಯಿ ತಂದುಕೊಟ್ಟ. ಇವನು ಅದನ್ನು ತಿಂದೇಬಿಟ್ಟ. ಇದನ್ನು ನೋಡಿ ಅಲ್ಲಿದ್ದವರೆಲ್ಲ "ಇದೇನಪ್ಪ ಇದೂ! ಛೀಛೀಛೀಛೀ!" ಎಂದುದ್ಗರಿಸುತ್ತ ಆವೇಶಭರಿತರಾಗಿ ಹುಕ್ಕಾವನ್ನು "ಗುಳುಗುಳು ಗುಳುಗುಳು" ಎಂದು ಇನ್ನಷ್ಟು ಜೋರಾಗಿ ಸೇದಿದರು. ಆ ವೇಳೆಗೆ ವಿಶ್ವನಾಥ ಅಲ್ಲಿಗೆ ಬಂದ. ನೋಡುತ್ತಾನೆ, ಕಕ್ಷಿದಾರರೆಲ್ಲ ಮುಖ ಸಿಂಡರಿಸಿಕೊಂಡು ಒಮ್ಮೆ ಆ ಮುಸಲ್ಮಾನ ನನ್ನು, ಇನ್ನೊಮ್ಮೆ ಜಾತಿನಿಯಮವನ್ನು ಮುರಿದ ನರೇಂದ್ರನನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಾರೆ. ವಿಶ್ವನಾಥ ಈ ದೃಶ್ಯವನ್ನು ನೋಡಿ ಸುಮ್ಮನೆ ನಸುನಕ್ಕ. ಮಗನಿ ಗೇನೂ ಹೇಳಲಿಲ್ಲ.

ಆದರೆ ಈ ಘಟನೆಯಿಂದಾಗಿ ನರೇಂದ್ರನ ತಲೆಯೊಳಗೊಂದು ಪ್ರಶ್ನೆ ಹುಟ್ಟಿ ಕೊಂಡಿತು. ತಾನು ಮುಸಲ್ಮಾನ ಮಾಮನ ಕೈಯಿಂದ ಒಂದು ತುಂಡು ಮಿಠಾಯಿ ತೆಗೆದುಕೊಂಡು ತಿಂದದ್ದಕ್ಕೇ ಇವರೆಲ್ಲ ಹೌಹಾರಿಬಿಟ್ಟರಲ್ಲ, ಅಂಥಾ ತಪ್ಪು ಏನಾಯಿತು ತನ್ನಿಂದ? ಅಲ್ಲದೆ, ಬೇರೆಬೇರೆ ಜಾತಿಯವರಿಗೆ ಅಂತ ಇಲ್ಲಿ ಬೇರೆಬೇರೆ ಹುಕ್ಕದ ವ್ಯವಸ್ಥೆ ಮಾಡಿದ್ದಾರಲ್ಲ ಯಾಕೆ?...'ಅವನಿಗೆ ಈ ಜಾತಿಯೆನ್ನುವುದೊಂದು ವಿಚಿತ್ರ ರಹಸ್ಯವಾಗಿ ಕಾಣತೊಡಗಿತು. 'ಒಂದು ಜಾತಿಯವರು ಇನ್ನೊಂದು ಜಾತಿಯವರ ಕೈಯಿಂದ ತಿಂದರೆ, ಅಥವಾ ಇನ್ನೊಂದು ಜಾತಿಯವರ ಹುಕ್ಕಾ ಸೇದಿದರೆ ಆಗುವು ದೇನು? ಮನೆ ಮುರಿದುಕೊಂಡು ತಲೆಮೇಲೆ ಬೀಳುತ್ತದೆಯೇ? ಅಥವಾ ಸೇದಿ ದವರು ತಕ್ಷಣ ಸಾಯುತ್ತಾರೆಯೇ?' ಎಂದು ಆಲೋಚಿಸತೊಡಗಿದ. ಕೊನೆಗೆ, ಇದನ್ನು ಪರೀಕ್ಷೆ ಮಾಡಿ ನೋಡೇಬಿಡುವುದು ಎಂಬ ತೀರ್ಮಾನಕ್ಕೆ ಬಂದ. ಸರಿ; ವ್ಯವಹಾರವನ್ನೆಲ್ಲ ಮುಗಿಸಿ ತಂದೆ ತನ್ನ ಕಕ್ಷಿದಾರರನ್ನು ಬೀಳ್ಕೊಳ್ಳಲು ರಸ್ತೆಯವರೆಗೆ ಹೋದಾಗ ಇವನು ಒಳಗೆ ಬಂದ; ಅಲ್ಲಿದ್ದ ಎಲ್ಲ ಹುಕ್ಕಾಕೊಳವೆಗಳನ್ನೂ ಒಂದೊಂ ದಾಗಿ ತನ್ನ ಮರಿತುಟಿಗಿಟ್ಟುಕೊಂಡು ಸೇದಿನೋಡಿದ. ಇಲ್ಲ! ತಾನು ಸಾಯಲಿಲ್ಲ. ಮನೆಯ ಮಾಡು ಮುರಿದುಕೊಂಡು ಬೀಳಲಿಲ್ಲ! ಎಲ್ಲ ಹೇಗಿತ್ತೋ ಹಾಗೆಯೇ ಇದೆ. ಅವನು ಹೀಗೆ ಪರೀಕ್ಷೆ ಮಾಡುತ್ತಿರುವ ಹೊತ್ತಿಗೆ ತಂದೆ ಹಿಂದಿರುಗಿ ಬಂದ; ಮಗನ ಕಾರುಬಾರನ್ನು ನೋಡಿ ಆಶ್ಚರ್ಯದಿಂದ ಕೇಳಿದ, "ಏನಪ್ಪಾ, ಏನು ಮಾಡು ತ್ತಿದ್ದೀಯಾ?" ನರೇಂದ್ರ ಹೇಳುತ್ತಾನೆ, "ಏನಿಲ್ಲ ಅಪ್ಪ, ಜಾತಿಭೇದವನ್ನು ಮುರಿದರೆ ಏನಾಗುತ್ತೆ ಅಂತ ನೋಡುತ್ತಿದ್ದೇನೆ!" ಇದನ್ನು ಕೇಳಿ ವಿಶ್ವನಾಥ ಹೊಟ್ಟೆತುಂಬ ನಕ್ಕು ತನ್ನ ಕೋಣೆಗೆ ಹೊರಟುಹೋದ.

ನರೇಂದ್ರನ ಶರೀರದಲ್ಲೂ ಮನಸ್ಸಿನಲ್ಲೂ ಅಪರಿಮಿತ ಶಕ್ತಿ ತುಂಬಿಕೊಂಡಿತ್ತು. ಈ ಶಕ್ತಿ ನಾನಾ ಬಗೆಯಾಗಿ ವ್ಯಕ್ತವಾಗಲು ದಾರಿಯನ್ನು ನೋಡುತ್ತಿತ್ತು. ಇದರಿಂದಾಗಿ ಆತನ ಹುಡುಗಾಟಿಕೆ-ತುಂಟತನಗಳ ತೀವ್ರತೆಯೂ ಹೆಚ್ಚಿತು. ಒಂದು ದಿನ ಅವನು ಮನೆಯಲ್ಲಿ ತನ್ನ ಸ್ನೇಹಿತರ ಜೊತೆಯಲ್ಲಿ ಕಣ್ಣಾಮುಚ್ಚಾಲೆ ಆಡುತ್ತಿದ್ದಾಗ, ವೇಗವಾಗಿ ಓಡುವ ರಭಸದಲ್ಲಿ ಜಗಲಿಯಿಂದ ಕೆಳಗೆ ಕಲ್ಲಿನ ಮೇಲೆ ಬಿದ್ದುಬಿಟ್ಟ. ಹಣೆ ಜಜ್ಜಿ ರಕ್ತ ಸೋರಿತು. ಅವನ ಬಲಹುಬ್ಬಿನ ಮೇಲ್ಭಾಗದಲ್ಲಿ ಒಂದು ದೊಡ್ಡ ಗಾಯವೇ ಆಯಿತು. ಈ ಗಾಯದ ಗುರುತು ಹಾಗೆಯೇ ಉಳಿದುಕೊಂಡುಬಿಟ್ಟಿತು. ಮುಂದೆ ಈ ಘಟನೆಯ ಕುರಿತಾಗಿ ತಿಳಿದಾಗ ಶ್ರೀರಾಮಕೃಷ್ಣರು ಹೇಳುತ್ತಾರೆ, "ಒಂದು ವೇಳೆ ಈ ಅಪಘಾತ ದಿಂದಾಗಿ ನರೇಂದ್ರನ ಅಮಿತ ಶಕ್ತಿ ಹತೋಟಿಗೆ ಬರದೇ ಹೋಗಿದ್ದರೆ ಅವನು ಇಡೀ ಜಗತ್ತನ್ನೇ ನುಚ್ಚುನೂರು ಮಾಡಿಬಿಡುತ್ತಿದ್ದ!" ಎಂದು.

ತನ್ನ ಓರಗೆಯವರಿಗೆಲ್ಲ ನರೇಂದ್ರನೇ ನಾಯಕನಾಗಿದ್ದ ಎನ್ನುವುದನ್ನು ಈಗಾಗಲೇ ನೋಡಿದ್ದೇವೆ. ನಾಯಕತ್ವ ಎನ್ನುವುದು ಅವನ ಹುಟ್ಟುಗುಣವೇ ಆಗಿತ್ತು. ನಾಯಕನಾಗುವುದೆಂದರೆ ರಾಜನಾಗಿ ದರ್ಬಾರು ಮಾಡುವುದು ಮಾತ್ರವಲ್ಲ, ಸಮಯ ಬಂದರೆ ತ್ಯಾಗಕ್ಕೂ ಸಿದ್ಧನಾಗಿರಬೇಕಾಗುತ್ತದೆ. ಈ ಬಗೆಯ ತ್ಯಾಗಬುದ್ಧಿ ಯನ್ನು ನರೇಂದ್ರ ತನ್ನ ಬಾಲ್ಯದಿಂದಲೇ ಪ್ರಕಟಿಸುವುದನ್ನು ಕಾಣಬಹುದಾಗಿತ್ತು. ಅವನಿಗೆ ಆಗ ಸುಮಾರು ಆರು ವರ್ಷ ವಯಸ್ಸು; ಒಮ್ಮೆ ತನ್ನ ಸಂಬಂಧಿಯಾದ ಹುಡುಗನನ್ನು ಕರೆದುಕೊಂಡು ಹತ್ತಿರದ ಜಾತ್ರೆಗೆ ಹೋಗಿದ್ದ. ಜಾತ್ರೆಯಲ್ಲಿ ಅವನು ಶಿವನ ಬೇರೆಬೇರೆ ನಮೂನೆಯ ಗೊಂಬೆಗಳನ್ನು ಕೊಂಡುಕೊಂಡ. ಬಳಿಕ ಇಬ್ಬರೂ ಮನೆಕಡೆ ನಡೆದರು. ಸಂಜೆಗತ್ತಲಾಗುತ್ತಿತ್ತು. ಅವರು ನಡೆದುಕೊಂಡು ಬರುತ್ತಿರುವಾಗ ಹುಡುಗ ಜನಸಂದಣಿಯಲ್ಲೆಲ್ಲೋ ತಪ್ಪಿಸಿಕೊಂಡು ಸ್ವಲ್ಪ ಹಿಂದುಳಿದ. ನರೇಂದ್ರ ಭಾವಿಸಿದ್ದ, ಅವನು ಹಿಂದೆಯೇ ಇದ್ದಾನೆ ಎಂದು. ಹೀಗಿರುವಾಗ, ಒಂದು ಸಾರೋಟು ವೇಗವಾಗಿ ಬರುತ್ತಿರುವ ಶಬ್ದ ಕೇಳಿಸಿತು ಅವನಿಗೆ. ಆ ಶಬ್ದ ಕೇಳಿ ಅಕಸ್ಮಾತ್ತಾಗಿ ಹಿಂದಿರುಗಿ ನೋಡುತ್ತಾನೆ, ಎದೆ ತಲ್ಲಣಿಸುವಂತಹ ದೃಶ್ಯ. ತನ್ನ ಸಂಗಡಿಗ ನಡುರಸ್ತೆ ಯಲ್ಲಿ ಬೆಪ್ಪುಗಟ್ಟಿ ನಿಂತಿದ್ದಾನೆ, ಸಾರೋಟು ಇನ್ನೇನು ಅವನ ಮೈಮೇಲೆ ಹರಿಯು ವುದರಲ್ಲಿದೆ! ತಕ್ಷಣ ನರೇಂದ್ರ ಬೊಂಬೆಗಳನ್ನು ಎಡದ ಬಗಲಿನಲ್ಲಿ ಇರಿಸಿಕೊಂಡು, ತನ್ನ ಜೀವದ ಹಂಗನ್ನೇ ತೊರೆದು ಮುನ್ನುಗ್ಗಿದ; ಸರ್ರನೆ ಹೋಗಿ ಕಣ್ಣೆವೆಯಿಕ್ಕುವಷ್ಟ ರಲ್ಲಿ ಆ ಹುಡುಗನನ್ನು ಈ ಕಡೆಗೆ ಎಳೆದುಕೊಂಡುಬಿಟ್ಟ. ಬಾಲಕ ನರೇಂದ್ರನ ಈ ಸಾಹಸಕೃತ್ಯವನ್ನು ಕಂಡು ಸುತ್ತಲಿನ ಜನ ಬಿಲ್ಲಂಬೆರಗಾದರು. ಈ ಗಂಡಾಂತರ ಇದ್ದ ಕ್ಕಿದ್ದಂತೆ ಸಂಭವಿಸಿದ್ದರಿಂದ ಅದನ್ನು ಗಮನಿಸಿ ಸಹಾಯಕ್ಕೆ ಮುನ್ನುಗ್ಗಲು ಬೇರೆ ಯಾರಿಗೂ ವ್ಯವಧಾನವೇ ಇರಲಿಲ್ಲ. ಆದರೆ ಇವನು ಮಾತ್ರ ಮಿಂಚಿನ ವೇಗದಲ್ಲಿ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಆ ಹುಡುಗನನ್ನು ಮೃತ್ಯುಮುಖದಿಂದ ಬಿಡಿಸಿ ತಂದುಬಿಟ್ಟಿದ್ದ. ಇದನ್ನು ನೋಡಿದ ಕೆಲವರು ನರೇಂದ್ರನ ಬೆನ್ನು ತಟ್ಟಿದರು; ಕೆಲವರು ತಲೆಮುಟ್ಟಿ ಹರಸಿದರು. ಹುಡುಗರಿಬ್ಬರೂ ಮನೆಗೆ ಹಿಂದಿರುಗಿದರು. ಭುವನೇಶ್ವರಿಗೆ ಈ ವಿಷಯ ತಿಳಿದಾಗ ಹೆಮ್ಮೆ ಸಂತೋಷಗಳಿಂದ ಕಣ್ಣುಗಳಲ್ಲಿ ಕಂಬನಿದುಂಬಿತು. "ಮಗೂ, ಯಾವಾಗಲೂ ಹೀಗೆಯೇ ಧೀರನಾಗಿರು" ಎಂದು ಮಗನನ್ನು ಆಶೀರ್ವದಿ ಸಿದಳು.

ನರೇಂದ್ರನ ಬಾಲ್ಯದಲ್ಲೇ ಅವನ ಭವಿಷ್ಯಜೀವನದ ಉಜ್ವಲತೆಯನ್ನು ಗುರುತಿಸಿದವರುಂಟು. ಅವರಲ್ಲಿ ವಿಶ್ವನಾಥನ ಚಿಕ್ಕಪ್ಪನಾದ ಕಾಳೀಪ್ರಸಾದನೂ ಒಬ್ಬ. ಈಗ ಆತ ಮರಣಶಯ್ಯೆಯಲ್ಲಿದ್ದಾನೆ. ಒಂದು ದಿನ ತನ್ನ ಕೊನೆಗಾಲ ಸಮೀಪಿಸಿದೆ ಎನ್ನುವುದು ಅವನಿಗೆ ಗೊತ್ತಾಯಿತು. ಆದ್ದರಿಂದ ಮನೆಮಂದಿಯನ್ನೆಲ್ಲ ತನ್ನ ಬಳಿಗೆ ಕರೆಯಿಸಿಕೊಂಡು, "ಯಾರಾದರೊಬ್ಬರು ಮಹಾಭಾರತದ ಶ್ಲೋಕಗಳನ್ನು ಗಟ್ಟಿಯಾಗಿ ಓದಿ; ಅದನ್ನು ಕೇಳುತ್ತ ಕೇಳುತ್ತ ಪ್ರಾಣ ಬಿಡುತ್ತೇನೆ" ಎಂದು ಕೇಳಿಕೊಂಡ. ಆದರೆ ಆ ಸಾವಿನ ಬೀಭತ್ಸ ವಾತಾವರಣದಲ್ಲಿ ಏನನ್ನಾದರೂ ಓದುತ್ತ ಕುಳಿತುಕೊಳ್ಳುವ ಸ್ಥಿರತೆ ಯಾರಿಗಿರುತ್ತದೆ ? ಇದನ್ನು ನರೇಂದ್ರ ನೋಡಿದ. ಯಾರೂ ಓದಲು ಮುಂದಾಗದಿದ್ದುದನ್ನು ಕಂಡು ತಾನೇ ಹೋಗಿ ಮಹಾಭಾರತವನ್ನು ತಂದು ತೆರೆದಿಟ್ಟುಕೊಂಡ. ಪುಟಗಳ ಮೇಲೆ ಪುಟಗಳನ್ನು ತಿರುವುತ್ತ ತನ್ನ ಸ್ಪಷ್ಟ ಉಚ್ಚಕಂಠದಿಂದ ಪಾಂಡವರ ಹಾಗೂ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸುವ ಶ್ಲೋಕಗಳನ್ನು ಓದುತ್ತ ಬಂದ. ಕಡೆಗೆ, ಗರುಡ ತನ್ನ ತಾಯಿಯಾದ ವಿನತೆಯನ್ನು ಬೆನ್ನಮೇಲೆ ಕೂರಿಸಿಕೊಂಡು ಹಾರಿ ಹೋಗುವ ವರ್ಣನೆ ಬಂತು. ಅದನ್ನು ಕೇಳುತ್ತಿದ್ದಂತೆ ಮುದುಕ ಕಾಳೀಪ್ರಸಾದನ ಶ್ವಾಸೋಚ್ಛ್ವಾಸ ನಿಧಾನವಾಗುತ್ತ ಬಂದಿತು. ಆಗ ಅವನು ಮೆಲುದನಿಯಲ್ಲಿ, ಆದರೆ ಸ್ಪಷ್ಟವಾಗಿ, ಒಂದು ಮಾತನ್ನು ಹೇಳುತ್ತಾನೆ: "ಮಗು, ನರೇಂದ್ರ, ನಿನ್ನ ಭವಿಷ್ಯ ಅತ್ಯಂತ ಉಜ್ವಲವಾಗಿದೆ!" ಕೆಲವರಿಗೆ ಮರಣಕಾಲದಲ್ಲಿ ಕೆಲವು ಸತ್ಯಾಂಶಗಳು ಗೋಚರಿಸುವುದುಂಟು. ಈಗ ಕಾಳೀಪ್ರಸಾದನೂ ನರೇಂದ್ರನ ಉಜ್ವಲ ಜೀವನದ ಮುಂಬೆಳಕನ್ನು ಸ್ಪಷ್ಟವಾಗಿ ಕಂಡಿರಬೇಕು. ಈ ಮಾತನ್ನು ಹೇಳಿದವನೇ ಅವನು ತನ್ನ ಜಡಶರೀರವನ್ನು ಬಿಟ್ಟು ಅತೀಂದ್ರಿಯ ಲೋಕಕ್ಕೆ ಹೊರಟುಬಿಟ್ಟ.

"ಬೆಳೆಯ ಗುಣ ಮೊಳಕೆಯಲ್ಲಿ" ಎಂಬ ಮಾತಿದೆ. ನಿಜಕ್ಕೂ ನರೇಂದ್ರನ ಬಾಲ್ಯವೆಂಬ ಮೊಳಕೆ ಅತ್ಯಂತ ದಷ್ಟಪುಷ್ಟವಾಗಿತ್ತು. ಅವನ ಸರ್ವಾಂಗಸುಂದರ ಶರೀರ, ತೇಜಸ್ವಿಯಾದ ಮೈಕಾಂತಿ, ಹೊಳೆಹೊಳೆಯುವ ವಿಶಾಲ ನಯನಗಳು, ಅರಳುತ್ತಿರುವ ಪ್ರತಿಭೆಯನ್ನು ಸೂಚಿಸುವ ಮುಖಮುದ್ರೆ—ಇವು ಎಲ್ಲರ ಗಮನ ಸೆಳೆಯುತ್ತಿದ್ದುವು. ಮನದಲ್ಲಿ ನೂರಾರು ಉನ್ನತ ಉದಾತ್ತ ಕಲ್ಪನೆಗಳು, ಹೃದಯದಲ್ಲಿ ಸದಾ ಜಿನುಗುವ ಪ್ರೇಮ, ಬುದ್ಧಿಯಲ್ಲಿ ಕತ್ತಿಯಲಗಿನ ಹರಿತ, ಸರಿಸಾಟಿಯಿಲ್ಲದ ಎದೆಗಾರಿಕೆ, ದಂಗುಬಡಿಸುವಂಥ ಸಂಶೋಧನಾ ಪ್ರತಿಭೆ, ದಣಿವೆನ್ನದೆ ದುಡಿಯಬಲ್ಲ ಕಾರ್ಯಶೀಲತೆ, ಮತ್ತು ಒತ್ತಿದಷ್ಟೂ ಎತ್ತರಕ್ಕೆ ಪುಟಿಯಬಲ್ಲ ಉತ್ಸಾಹ ಅವನದು. ಬಾಲ್ಯದಿಂದಲೂ ಅವನಿಗೆ ಯಾರೂ ಸರಿಸಮರಿಲ್ಲ. ಇಷ್ಟಲ್ಲದೆ ಭಗವಂತನ ಕಡೆಗೆ ಹರಿಯುತ್ತಿದ್ದ ಅವನ ಭಕ್ತಿ ಎಂಥದು! ಕುಳಿತರೆ ಗಂಟೆಗಟ್ಟಲೆ ಧ್ಯಾನ ಮಾಡಬಲ್ಲ ಸಾಮರ್ಥ್ಯವೆಂಥದು! ಪೂಜೆ ಪ್ರಾರ್ಥನೆಗಳ ಸಂಬಂಧವಾದ ಅವನ ಅಭಿರುಚಿ ಎಂಥದು! ಇಂಥ ನರೇಂದ್ರನ ಇಡಿಯ ಜೀವನವನ್ನು ನಾವು ಆಳವಾಗಿ, ಆಮೂಲಾಗ್ರವಾಗಿ ಅಧ್ಯಯನ ಮಾಡಿದಾಗ ಈ ಬಣ್ಣನೆಯೆಲ್ಲ ಕೇವಲ ಉತ್ಪ್ರೇಕ್ಷೆಯಲ್ಲವೆಂಬ ಅರಿವು ನಮಗಾದೀತು. ಅಷ್ಟೇ ಅಲ್ಲ, ಅವನ ವ್ಯಕ್ತಿತ್ವದ ಪೂರ್ಣ ಪರಿಚಯ ಮಾಡಿಕೊಳ್ಳುವುದು ಇತರರಿಂದ ಸಾಧ್ಯವಿಲ್ಲ ಎಂಬ ಅರಿವೂ ನಮಗಾದೀತು. ಆದರೆ ಭವಿಷ್ಯದ ವಿಷಯ ಹಾಗಿರಲಿ, ಈಗ ನಾವು ಅವನ ಶಾಲಾ ದಿನಗಳನ್ನು ನೋಡಬೇಕು.

ಹಿಂದೆ ನರೇಂದ್ರ ಪಾಠಶಾಲೆಯಲ್ಲಿ ಇತರ ಮಕ್ಕಳಿಂದ ಕೆಟ್ಟ ಶಬ್ದಗಳನ್ನು

ಕಲಿತುಕೊಂಡು ಬಂದದ್ದರಿಂದ ಅವನನ್ನು ಶಾಲೆಯಿಂದ ಬಿಡಿಸಿ, ಮನೆಯಲ್ಲೇ ಪಾಠ ಹೇಳಿಸುವ ವ್ಯವಸ್ಥೆ ಮಾಡಿದ್ದು ನಮಗೆ ನೆನಪಿದೆ. ಆದರೆ ಈಗ ಅವನಿಗೆ ಮನೆಯಲ್ಲೇ ಹೇಳಿಸಿಕೊಳ್ಳುವ ವಯಸ್ಸು ದಾಟಿದೆ. ಆದ್ದರಿಂದ ಅವನನ್ನು ಈಶ್ವರಚಂದ್ರ ವಿದ್ಯಾ ಸಾಗರರಿಂದ ಸ್ಥಾಪಿತವಾದ 'ಮೆಟ್ರೋಪಾಲಿಟನ್ ಶಾಲೆ'ಗೆ ಸೇರಿಸಲಾಯಿತು. ನರೇಂದ್ರ ಶಾಲೆಗೆ ಚಡ್ಡಿ ತೊಟ್ಟುಕೊಂಡು ಹೋಗುತ್ತಿದ್ದ, ಧೋತಿಯನ್ನಲ್ಲ. ಆದರೆ ಶಾಲೆ ಮುಗಿಸಿಕೊಂಡು ಮನೆಗೆ ಬರುವಾಗ ಪ್ರತಿದಿನವೂ ಅವನ ಚಡ್ಡಿ ಹರಿದಿರುತ್ತಿತ್ತು. ಏಕೆ ? ಅಷ್ಟೊಂದು ತುಂಟತನ, ಅಷ್ಟೊಂದು ಚೇಷ್ಟೆ ! ಅವನ ಚೇಷ್ಟೆಯನ್ನು ಮೀರಿ ಸುವ ಚೇಷ್ಟೆಯನ್ನು ಯಾರೂ ಕಂಡಿರಲಿಕ್ಕಿಲ್ಲ ! ತರಗತಿಯಲ್ಲಿ ಬೆಂಚಿನ ಮೇಲೆ ಒಂದು ದಿನವಾದರೂ ಶಾಂತವಾಗಿ ಕುಳಿತುಕೊಂಡವನೇ ಅಲ್ಲ ಅವನು. ಒಮ್ಮೆ ಆ ಕಡೆ ತಿರುಗಿ ಕುಳಿತರೆ ಇನ್ನೊಮ್ಮೆ ಈ ಕಡೆ ತಿರುಗಿ ಕುಳಿತ ! ಅಲ್ಲದೆ, ಸ್ವಲ್ಪ ಹೊತ್ತು ಕುಳಿತಿದ್ದರೆ ಇನ್ನೆಷ್ಟೋ ಹೊತ್ತು ನಿಂತಿರುತ್ತಿದ್ದ. ಅಷ್ಟೊಂದು ಶಕ್ತಿ ಪುಟಿಯುತ್ತಿತ್ತು ಅವನಲ್ಲಿ ! ಅದು ಅವನನ್ನು ಸುಮ್ಮನಿರಲು ಬಿಟ್ಟರೆ ತಾನೆ ! ಆಟಕ್ಕಿಳಿದರೆ ತುಂಬ ಬಿರುಸಿನಿಂದ ಆಟವಾಡುತ್ತಿದ್ದ. ಅವನ ಆಟಗಳಲ್ಲಿ ಹಾರುವುದು, ನೆಗೆಯುವುದು, ಕುಸ್ತಿ, ಕ್ರಿಕೆಟ್, ಗೋಲಿಯಾಟ—ಎಲ್ಲವೂ ಸೇರಿತ್ತು. ಕ್ರಿಕೆಟ್‌ನಲ್ಲಿ ಅವನು ಪ್ರವೀಣ. ಪ್ರತಿದಿನವೂ ಅದರ ಮರುದಿನ ಯಾವಯಾವ ಆಟಗಳನ್ನಾಡಬೇಕೆಂಬ ಪಟ್ಟಿ ತಯಾರಿಸುವವನು ಅವನೇ. ಕೆಲವೊಮ್ಮೆ ಹುಡುಗರಲ್ಲಿ ವಿರಸ ಹುಟ್ಟಿಕೊಳ್ಳುತ್ತಿತ್ತು. ಇದು ಮೊದಲು ಮಾತಿನಿಂದ ಪ್ರಾರಂಭವಾಗಿ ಬಳಿಕ ಮುಷ್ಟಾಮುಷ್ಟಿ ಕೇಶಾಕೇಶಿಗಳಿಗೆ ತಿರುಗಿಕೊಳ್ಳು ತ್ತಿತ್ತು. ನರೇಂದ್ರನಿಗೆ ಇವನ್ನೆಲ್ಲ ಕಂಡರಾಗದು. ಹುಡುಗರ ನಡುವೆ ಜಗಳ ಹತ್ತಿ ಕೊಂಡರೆ ಅದನ್ನು ಬಿಡಿಸಲು ತಾನು ಮಧ್ಯೆ ನುಗ್ಗುತ್ತಿದ್ದ. ಆಗ ಆ ಎರಡು ಕಡೆ ಯವರಿಂದಲೂ ಅವನಿಗೆ ಗುದ್ದು ಬೀಳುವ ಸಂಭವವಿತ್ತು. ಆದರೆ ಅವನು ಅದಕ್ಕೂ ಸಿದ್ಧ. ಅವನೂ ಅದರಲ್ಲಿ ಪಳಗಿದವನೇ ಆದ್ದರಿಂದ ಅವರ ಗುದ್ದನ್ನೂ ತಡೆದುಕೊಂಡು, ಪ್ರತಿಯಾಗಿ ನಾಲ್ಕು ಗುದ್ದು ಕೊಟ್ಟು ಅವರನ್ನು ಬಿಡಿಸುತ್ತಿದ್ದ.

ನರೇಂದ್ರ ತನ್ನ ಸ್ನೇಹಿತರನ್ನು ತುಂಬ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದ. ಆಗಾಗ ಅವರನ್ನೆಲ್ಲ ಕರೆದುಕೊಂಡು ಹತ್ತಿರದ ಸ್ಥಳಗಳಿಗೆ ವನಭೋಜನಕ್ಕೆ ಹೊರಟುಬಿಡುತ್ತಿದ್ದ. ಒಂದು ದಿನ ಹೀಗೆ ಸುಮಾರು ಇಪ್ಪತ್ತು ಹುಡುಗರು ಸೇರಿಕೊಂಡು ಕಲ್ಕತ್ತದ ಐತಿಹಾಸಿಕ ಕೋಟೆಯನ್ನು ನೋಡಿಕೊಂಡುಬರಲು ಹೊರಟರು. ದಾರಿಯಲ್ಲಿ ಒಬ್ಬ ಹುಡುಗ ಇದ್ದಕ್ಕಿದ್ದಂತೆ 'ಆಯಾಸ, ಸಂಕಟ' ಎನ್ನುತ್ತ ಕುಳಿತುಬಿಟ್ಟ. ಇದನ್ನು ಕೇಳಿದ ಸಂಗಡಿಗರೆಲ್ಲ ಸುಮ್ಮನೆ ಅವನನ್ನು ಗೇಲಿಮಾಡುತ್ತ ಮುಂದೆ ನಡೆದೇಬಿಟ್ಟರು. ಬಹುಶಃ ಅವನು ಹೇಗಾದರೂ ಮಾಡಿ ಬಂದೇ ಬರುತ್ತಾನೆ ಎಂದು ಅವರೆಲ್ಲ ಭಾವಿಸಿರಬೇಕು. ಅದೂ ಅಲ್ಲದೆ ವಿಹಾರಕ್ಕೆ ಹೊರಟವರು ಒಬ್ಬನಿಗಾಗಿ ನಿಂತಾರೆಯೆ ? ಆದರೆ ಅವರ ಜೊತೆಯಲ್ಲೇ ಸ್ವಲ್ಪ ದೂರ ಮುನ್ನಡೆದ ನರೇಂದ್ರ ಇದ್ದಕ್ಕಿದ್ದಂತೆ ನಿಂತುಬಿಟ್ಟ. "ಪಾಪ ! ಅವನಿಗೆ ನಿಜವಾಗಿಯೂ ಏನೋ ತೊಂದರೆಯಾಗಿರಬೇಕು ಕಣ್ರೊ. ನೀವೆಲ್ಲ ಮುಂದೆ ನಡೆಯಿರಿ. ಆದರೆ ಅವನನ್ನು ನೋಡಿಕೊಳ್ಳಲು ಯಾರಾದರೂ ಹೋಗಲೇಬೇಕಲ್ಲವೆ ? ಅದಕ್ಕೆ ನಾನೇ ಹೋಗುತ್ತೇನೆ" ಎಂದು ಸ್ನೇಹಿತರಿಗೆ ಹೇಳಿ ಆ ಹುಡುಗನ ಬಳಿಗೆ ಓಡಿದ. ಅಷ್ಟೊತ್ತಿಗೆ ಆ ಹುಡುಗನಿಗೆ ಜ್ವರ ಕೂಡ ಬಂದುಬಿಟ್ಟಿತ್ತು. ನರೇಂದ್ರ ಅವನನ್ನು ಮೇಲಕ್ಕೆತ್ತಿ, ಮೆಲ್ಲಗೆ ನಡೆಸಿಕೊಂಡು ಹತ್ತಿರವೇ ಇದ್ದ ಒಂದು ಜಟಕಾದಲ್ಲಿ ಅವನ

ಮನೆಗೆ ಕರೆದುಕೊಂಡು ಹೋದ. ನರೇಂದ್ರನಿಗೆ ಅಂದಿನ ಪ್ರವಾಸದ ಖುಷಿ, ತಮಾಷೆ ಎಲ್ಲ ತಪ್ಪಿಹೋಯಿತು. ಆದರೆ ಅವನು ಈ ಬಗೆಯ ತ್ಯಾಗಕ್ಕೆ ಸದಾ ಸಿದ್ಧ. ಆದ್ದರಿಂದಲೇ ಆತ ತನ್ನ ಸ್ನೇಹಿತರಿಗೆ ಅಷ್ಟೊಂದು ಅಚ್ಚುಮೆಚ್ಚು.

ಸುಮಾರು ಇದೇ ಸಮಯದಲ್ಲಿ ಅವನು ಒಬ್ಬಳು ಹೆಂಗಸು ಹಾಗೂ ಆಕೆಯ ಮಗುವಿನ ಪ್ರಾಣಗಳನ್ನು ಉಳಿಸಿದ. ಆ ತಾಯಿ-ಮಕ್ಕಳು ಒಂದು ಸಾರೋಟಿಗೆ ಸಿಕ್ಕಿ ಅಪಾಯಕ್ಕೆ ಗುರಿಯಾಗುವುದರಲ್ಲಿದ್ದರು. ಅದೃಷ್ಟಕ್ಕೆ ನರೇಂದ್ರ ಅದನ್ನು ಕಂಡ; ಕೂಡಲೇ ಓಡಿಹೋಗಿ ಆ ಮಗುವನ್ನು ಒಂದು ಕೈಯಲ್ಲಿ ಹಿಡಿದುಕೊಂಡು, ಇನ್ನೊಂದು ಕೈಯಿಂದ ಅದರ ತಾಯಿಯನ್ನು ಎಳೆದು, ಅಪಾಯದಿಂದ ಪಾರು ಮಾಡಿದ. ಹೀಗೆ ತನ್ನ ಪ್ರಾಣದ ಹಂಗನ್ನೂ ತೊರೆದು ಇತರರನ್ನು ಅಪಾಯದ ಸುಳಿಯಿಂದ ತಪ್ಪಿಸುವ ಪರಹಿತದೃಷ್ಟಿಯನ್ನು ಅವನಲ್ಲಿ ಬಾಲ್ಯದಿಂದಲೇ ಕಾಣಬಹುದಾಗಿತ್ತು.

ನರೇಂದ್ರನಲ್ಲಿ ಎರಡು ವಿಶೇಷ ಸ್ವಭಾವಗಳು ಬೆಳೆದುಕೊಂಡು ಬರುತ್ತಿರುವುದನ್ನು ಗಮನಿಸಬಹುದು. ಒಂದು—ತುಂಟತನ, ಚಟುವಟಿಕೆ. ಇನ್ನೊಂದು—ಕರುಣೆ. ಅವನ ಕರುಣೆಯ ಸ್ವಭಾವವೆನ್ನುವುದು ಬೆಳೆಯುತ್ತ ಬೆಳೆಯುತ್ತ ಪರಹಿತ, ಸಮಾಜ ಹಿತ, ರಾಷ್ಟ್ರಹಿತ, ಕೊನೆಗೆ ಲೋಕಹಿತ ಇವುಗಳನ್ನು ಸಾಧಿಸಲು ಕಾರಣವಾದರೆ, ಅವನ ತುಂಟತನದ ಸ್ವಭಾವವೆನ್ನುವುದು ಪ್ರಬಲ ಕ್ರಿಯಾತ್ಮಕ ಸಾಹಸವಾಗಿ ಪರಿಣಮಿಸಿ, ಬೃಹತ್ಕಾರ್ಯಗಳನ್ನು ಸಾಧಿಸಲು ಕಾರಣವಾಯಿತು. ಇವುಗಳ ವೈಭವವನ್ನು ನಾವು ಮುಂದೆ ನೋಡಲಿದ್ದೇವೆ.

ಮೆಟ್ರೋಪಾಲಿಟನ್ ಶಾಲೆಗೆ ಸೇರಿದ ನರೇಂದ್ರನಿಗೆ, ತಾನು ಇಂಗ್ಲಿಷ್ ಭಾಷೆಯನ್ನು ಕಲಿಯಬೇಕಾಗುತ್ತದೆ ಎನ್ನುವುದು ತಿಳಿಯಿತು. ಇಂಗ್ಲಿಷು ಕಲಿಯುವುದೆಂದರೆ ಹೆಮ್ಮೆಯ ವಿಷಯವಲ್ಲವೆ? ಆದರೆ ಆಶ್ಚರ್ಯದ ಸಂಗತಿಯೆಂದರೆ, ಅದನ್ನು ಕಲಿಯಲು ಅವನಿಗೆ ಮಾತ್ರ ಇಷ್ಟವೇ ಇಲ್ಲ! "ಅದು ಪರಕೀಯರ ಭಾಷೆ, ನಾವೇಕೆ ಕಲಿಯಬೇಕು ಅದನ್ನು? ನಾವು ನಮ್ಮ ಮಾತೃಭಾಷೆಯನ್ನು ಮೊದಲು ಚೆನ್ನಾಗಿ ಕಲಿಯಬೇಡವೆ?" ಎನ್ನುತ್ತಾನವನು! ಹುಡುಗ ನರೇಂದ್ರ ಅಂದು ಆಡಿದ ಮಾತು ಎಷ್ಟು ನಿಜ, ಎಷ್ಟು ಅರ್ಥಪೂರ್ಣ! ಆದರೆ ಪಾಠಪಟ್ಟಿಯಲ್ಲಿರುವ ವಿಷಯವನ್ನು ತಾನೊಬ್ಬ ಕಲಿಯಲಾರೆ ಎಂದರೆ ನಡೆಯುತ್ತದೆಯೆ? ನರೇಂದ್ರ ಉಭಯಸಂಕಟಕ್ಕೆ ಸಿಲುಕಿದ. ಒಂದು ದಿನ ಅಳುತ್ತಾ ಮನೆಗೆ ಬಂದು, ತಾಯಿತಂದೆಯರ ಹತ್ತಿರ "ನನಗೆ ಇಂಗ್ಲಿಷ್ ಬೇಡ; ನಾನದನ್ನು ಕಲಿಯಲಾರೆ" ಎಂದ. ಅವರು, "ಇದೇನಪ್ಪ, ಹೀಗೆನ್ನುತ್ತಿದ್ದೀ? ಇಂಗ್ಲಿಷ್ ಕಲಿಯದಿದ್ದರೆ ಹೇಗೆ? ಮುಂದೆ ಕಾಲೇಜಿಗೆ ಹೋಗುವುದು ಬೇಡವೆ?" ಎಂದು ಬಗೆಬಗೆಯಾಗಿ ಹೇಳಿ ಪ್ರೋತ್ಸಾಹಿಸಿದರು. ಆದರೂ ಅವನು ಒಪ್ಪಲೇ ಇಲ್ಲ. ಈ ವಿಷಯವೆಲ್ಲ ಅವರ ವೃದ್ಧ ಸಂಬಂಧಿ ನೃಸಿಂಹದತ್ತನಿಗೆ ತಿಳಿಯಿತು. ಇವನಿಗೆ ನರೇಂದ್ರನ ಮೇಲೆ ವಿಶೇಷ ಮಮತೆ. ಇವನು ಹುಡುಗನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು, ವಿಶ್ವಾಸದಿಂದ ಮನವೊಲಿಸಿಕೊಳ್ಳುವ ಪ್ರಯತ್ನ ಮಾಡಿದ. ಆದರೆ ಅವನ ಮಾತೂ ಉಪಯೋಗವಾಗಲಿಲ್ಲ. ಇಷ್ಟಾದರೂ ಆತ ಬಿಡಲಿಲ್ಲ. ಹಲವಾರು ತಿಂಗಳವರೆಗೂ ಸಮಾಧಾನದಿಂದಲೇ ಹೇಳುತ್ತ ಬಂದ. ಕೊನೆಗೆ ಅವನನ್ನು ಗೆದ್ದುಕೊಂಡೇಬಿಟ್ಟ ಮುದುಕ! ನರೇಂದ್ರ ಇಂಗ್ಲಿಷ್ ಕಲಿಯಲಾರಂಭಿಸಿದ. ಒಂದು

ಗಮನಾರ್ಹ ಅಂಶವೇನೆಂದರೆ ಮೊದಲು ಅವನು ಅಷ್ಟು ಹಠ ಮಾಡಿದ್ದರೂ ಒಮ್ಮೆ ಒಪ್ಪಿಕೊಂಡು ಕಲಿಯತೊಡಗಿದ ಮೇಲೆ ಮಾತ್ರ ಅಲ್ಲಿ ಅರೆಮನಸ್ಸಿನ ಜಗ್ಗಾಟವಿರಲಿಲ್ಲ. ಪೂರ್ಣಶ್ರದ್ಧೆಯಿಂದ ಕಲಿತ. ಇದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಗದಿರಲಿಲ್ಲ. ಆದರೆ ಅವನು ಎಷ್ಟೇ ಹಠ ಮಾಡಿದರೂ ಇಂಗ್ಲಿಷನ್ನು ಕಲಿಯಲೇಬೇಕಾಗಿತ್ತು. ಏಕೆಂದರೆ ಮುಂದೆ ಅವನು ಅದೇ ಭಾಷೆಯಲ್ಲಿ ವಿಶ್ವವ್ಯಾಪಕವಾಗಿ ದಿವ್ಯಸಂದೇಶವನ್ನು ಮೊಳಗಬೇಕಾಗಿದೆಯಲ್ಲವೆ! ಇಡೀ ವಿಶ್ವದ ಆಧ್ಯಾತ್ಮಿಕ ಶಕ್ತಿಕೇಂದ್ರವೇ ತಾನಾಗಿ, ಘನ ತತ್ತ್ವಗಳನ್ನು ಧ್ವನಿಸಬೇಕಾಗಿರುವುದು ಆ ಪಾಶ್ಚಾತ್ಯ ಭಾಷೆಯಲ್ಲೇ ಅಲ್ಲವೆ?

ನರೇಂದ್ರ ಅಷ್ಟು ತುಂಟನಾದರೂ, ಸಾಧುಸಂನ್ಯಾಸಿಗಳನ್ನು ಕಂಡರೆ ಅವನಿಗೆ ಅಪಾರ ಭಕ್ತಿ, ಗೌರವ. ಅವರನ್ನು ನೋಡುವುದೆಂದರೇ ಅವನಿಗೊಂದು ವಿಶೇಷ ಆನಂದ. ಸಂನ್ಯಾಸಿಗಳೇನಾದರೂ ಮನೆಗೆ ಅತಿಥಿಗಳಾಗಿ ಬಂದರೆ ಅವರಿಗೇನು ಬೇಕೆಂಬುದನ್ನು ತಾನೇ ಕಂಡುಕೊಂಡು ಅಥವಾ ಕೇಳಿ ತಿಳಿದುಕೊಂಡು, ಅದನ್ನು ಒದಗಿಸಿಕೊಡುತ್ತಿದ್ದ. ಆ ಸಾಧುಗಳು ತುಂಬ ಸಂತುಷ್ಟರಾಗಿ ಅವನನ್ನು ಮನಸಾರೆ ಹರಸುತ್ತಿದ್ದರು. ಅವನ ತೇಜಸ್ವಿಯಾದ ಕಣ್ಣುಗಳೇ ಅವರಿಗೆ ಎಷ್ಟೋ ವಿಷಯಗಳನ್ನು ತಿಳಿಸಿಕೊಡುತ್ತಿದ್ದುವು. ಅವನಲ್ಲೊಬ್ಬ ಮಹಾತ್ಮನನ್ನೇ ಕಾಣುತ್ತಿದ್ದರು ಅವರು. ತಾನೂ ಸಂನ್ಯಾಸಿಯಾಗಬೇಕೆಂಬ ಆಸೆ ನರೇಂದ್ರನಲ್ಲಿ ಯಾವಾಗಲೂ ಇದ್ದೇ ಇತ್ತು. ಎಂದಿಗೆ ತಾನೂ ಸ್ವತಂತ್ರನಾಗಿ ಸಂನ್ಯಾಸಜೀವನವನ್ನು ಕೈಗೊಂಡೇನೋ ಎಂಬ ಆಲೋಚನೆ ಅವನ ಮನಸ್ಸಿನಲ್ಲಿ ಆಗಾಗ ಏಳುತ್ತಲೇ ಇತ್ತು. ತನ್ನ ಶಾಲೆಗೆ ಯಾರಾದರೊಬ್ಬ ಹೊಸ ಹುಡುಗ ಬಂದು ಸೇರಿಕೊಂಡರೆ ನರೇಂದ್ರ ಅವನ ಬಳಿಗೆ ಹೋಗಿ ಮಾತನಾಡಿಸುತ್ತ "ನಿಮ್ಮ ಮನೆಯಲ್ಲಿ ಯಾರಾದರೂ ಸಂನ್ಯಾಸಿಗಳಾಗಿ ಹೋದವರಿದ್ದಾರೆಯೆ? ನಿಮ್ಮ ತಾತನೇನಾದರೂ ಸಂನ್ಯಾಸಿಯಾಗಿದ್ದರೆ?" ಎಂದು ಕೇಳುತ್ತಿದ್ದ. ಅದಕ್ಕೆ ಆ ಹುಡುಗ ಒಂದು ವೇಳೆ "ಹೌದು" ಎಂದುಬಿಟ್ಟರೆ ನರೇಂದ್ರನಿಗೆ ಅವನ ಮೇಲೆ ಒಂದು ವಿಶೇಷ ಆದರ, ಅಭಿಮಾನ! ಕೆಲವೊಮ್ಮೆ ಹುಡುಗರೆಲ್ಲ ಸುತ್ತುಗಟ್ಟಿ ಕುಳಿತುಕೊಂಡು, ಪರಸ್ಪರ ಹಸ್ತಸಾಮುದ್ರಿಕ ನೋಡುವ ಆಟವನ್ನು ಆಡುತ್ತಿದ್ದರು—ಇವನ ಕೈನೋಡಿ ಅವನು, ಅವನ ಕೈನೋಡಿ ಇವನು ಭವಿಷ್ಯ ಹೇಳುವುದು. ಇಲ್ಲಿಯೂ ನರೇಂದ್ರನೇ ಮುಖಂಡ. ಅವನು ತನ್ನ ಕೈಯನ್ನೇ ತೋರಿಸುತ್ತ ಹೇಳುತ್ತಿದ್ದ: "ಇಲ್ಲಿ ನೋಡಿ, ನನ್ನ ಕೈಯಲ್ಲಿ ಸಂನ್ಯಾಸರೇಖೆ ಇದೆ ಗೊತ್ತಾ! ಇಲ್ಲಿ ಕಾಣುತ್ತಲ್ಲ, ಇದೇ ಸಂನ್ಯಾಸರೇಖೆ. ನಾನು ಮುಂದೆ ಸಂನ್ಯಾಸಿಯಾಗುವುದರಲ್ಲಿ ಸಂಶಯವೇ ಇಲ್ಲ." ಅವನ ಕೈಯಲ್ಲಿರುವ ಯಾವುದೋ ಒಂದು ರೇಖೆ ಸಂನ್ಯಾಸರೇಖೆಯಂತೆ! ಯಾವನೋ ಒಬ್ಬ ಮುದುಕಪ್ಪ ಅವನಿಗೆ ಅದನ್ನು ತೋರಿಸಿಕೊಟ್ಟನಂತೆ. ಯಾವಾಗ ನರೇಂದ್ರನ ಕೈಯಲ್ಲಿ ಸಂನ್ಯಾಸ ರೇಖೆ ಇದೆಯೆಂದು ಗೊತ್ತಾಯಿತೋ, ಇತರ ಹುಡುಗರು ತಮ್ಮ ಕೈಯಲ್ಲೂ ಅಂಥ ದೇನಾದರೂ ಇದೆಯೋ ಹೇಗೆ ಎಂದು ನೋಡಿಕೊಳ್ಳಲು ಹೊರಟರು. ಈಗ ಅವರಿಗೆಲ್ಲ ತಾವೂ ಸಂನ್ಯಾಸಿಗಳಾಗಬೇಕೆಂದು ಆಸೆಯಾಗಿಬಿಟ್ಟಿದೆ. ಏಕೆಂದರೆ ನರೇಂದ್ರ ಸಂನ್ಯಾಸಿಯಾಗುತ್ತಾನಂತಲ್ಲ! ಆದರೆ ಆ ಯೋಗ ಅವರ ಕೈಯಲ್ಲೂ ಬರೆದಿಲ್ಲ, ಹಣೆಯಲ್ಲೂ ಬರೆದಿಲ್ಲ.

ನರೇಂದ್ರ ಬಾಲ್ಯದಿಂದಲೂ ಧೀರತೆಯ ಮೂರ್ತಿ. ಇದಕ್ಕೊಂದು ನಿದರ್ಶನ ಈ ಮುಂದಿನ ಘಟನೆ. ಬೇಸರವಾದಾಗಲೆಲ್ಲ ಅವನು ಪಕ್ಕದಲ್ಲಿರುವ ತನ್ನ ಸ್ನೇಹಿತನ

ಮನೆಗೆ ಆಡಲು ಹೋಗುತ್ತಿದ್ದ. ಈ ಮನೆಯ ಕಾಂಪೌಂಡಿನಲ್ಲಿ ಒಂದು ದೊಡ್ಡ ಸಂಪಿಗೆ ಮರವಿತ್ತು. ಈ ಮರವೆಂದರೆ ನರೇಂದ್ರನಿಗೆ ತುಂಬ ಇಷ್ಟ. ಏಕೆಂದರೆ ಅದರ ಮೇಲೆ ಹತ್ತಿ, ಕೊಂಬೆಯಿಂದ ಕೊಂಬೆಗೆ ಜಿಗಿಯಬಹುದು; ಮರದ ಕೆಳಗೆ ದಟ್ಟವಾದ ನೆರಳಿರುವುದರಿಂದ ಮಧ್ಯಾಹ್ನದ ಬಿಸಿಲಿನಲ್ಲೂ ಅಲ್ಲಿ ಆಡಬಹುದು; ಇದೆಲ್ಲಕ್ಕಿಂತ ಹೆಚ್ಚಾಗಿ ಮರದ ಕೊಂಬೆಗೆ ಕಾಲು ತಗುಲಿಸಿಕೊಂಡು ತಲೆಕೆಳಗಾಗಿ ಜೋತಾಡ ಬಹುದು! ಈ ಆಟ ನರೇಂದ್ರನಿಗೆ ಅಚ್ಚುಮೆಚ್ಚು. ಅಲ್ಲದೆ ಚಂಪಕಪುಷ್ಪ ಶಿವನಿಗೆ ಪ್ರಿಯವಲ್ಲವೆ? ನರೇಂದ್ರನಿಗೂ ಅಷ್ಟೆ! ಅವನೂ ಅವನ ಸ್ನೇಹಿತರೂ ಆಗಾಗ ಇಲ್ಲಿ ಮರಕೋತಿಯಾಟ ಆಡುತ್ತಿದ್ದರು. ಆ ಮನೆಯಲ್ಲೊಬ್ಬ ತಾತಯ್ಯ. ಅವನಿಗೆ ಈ ಹುಡುಗರ ಗಲಾಟೆಯೆಲ್ಲ ಅಷ್ಟೇನೂ ಪ್ರಿಯವಲ್ಲ. ಆದರೇನು ಮಾಡುವುದು? ಅವರನ್ನು ಪಳಗಿಸುವ ಕೆಲಸ ಅಷ್ಟು ಸುಲಭವೆ? ಒಂದು ದಿನ ಹೀಗೇ ಹುಡುಗರೆಲ್ಲ ಸೇರಿದ್ದರು. ನರೇಂದ್ರ ಕೊಂಬೆಗೆ ಕಾಲು ತಗುಲಿಸಿಕೊಂಡು ಜೋತಾಡುತ್ತಿದ್ದ. ಆಗ ತಾತಯ್ಯ ಆಚೆಗೆ ಬಂದ. ಅವನದು ಮುದಿಕಣ್ಣು; ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಆದರೂ ಚೆನ್ನಾಗಿ ಆರಳಿಸಿಕೊಂಡು ನೋಡಿದ. ನೋಡಿದರೇಽಽ ಅಷ್ಟೆತ್ತರದ ಕೊಂಬೆಯಲ್ಲಿ ನರೇಂದ್ರ ತಲೆಕೆಳಗಾಗಿ ಜೋತಾಡುತ್ತಿದ್ದಾನೆ! ಅವನಿಗೆ ಗಾಬರಿಯಾಯಿತು. ಈ ಹುಡುಗರು ಅಲ್ಲಿಂದ ಕೆಳಗೆ ಬಿದ್ದು ತಲೆಗಿಲೆ ಒಡೆದುಕೊಂಡರೇನಪ್ಪ ಗತಿ! ಅಲ್ಲದೆ ಇವರು ಹೂವುಗಳನ್ನೆಲ್ಲ ಉದುರಿಸಿಬಿಡುತ್ತಾರೆ... ತಾತಯ್ಯ ಕ್ಷಣಕಾಲ ಯೋಚಿಸಿದ. ಆಗ ಆತನ ತಲೆಗೆ ಹೊಳೆಯಿತು—ಮಕ್ಕಳನ್ನು ಓಡಿಸಲು ಒಳ್ಳೆಯ ಉಪಾಯ. ಮೆಲ್ಲಗೆ ಮರದ ಬಳಿಗೆ ಬಂದು, ನಡುಗುವ ಧ್ವನಿಯಲ್ಲಿ ಗಟ್ಟಿಯಾಗಿ ನುಡಿದ:

"ಅಯ್ಯಯ್ಯೋ! ಏ ಹುಡುಗ್ರಾ! ಈ ಮರವನ್ನು ಹತ್ತಬೇಡ್ರಪ್ಪ!"

"ಯಾಕೆ ತಾತ, ಈ ಮರವನ್ನು ಯಾಕೆ ಹತ್ತಬಾರದು?"—ನರೇಂದ್ರ ಕೇಳಿದ.

"ಯಾಕೆ ಅಂತ ಕೇಳ್ತೀಯೋ? ಈ ಮರದ ಮೇಲೊಂದು ದೊಡ್ಡ ಬ್ರಹ್ಮ ರಾಕ್ಷಸವಿದೆಯಪ್ಪ! ಅದು ಬಹಳ ಭಯಂಕರವಾದ್ದು. ಬಿಳೀ ಬಟ್ಟೆ ತೊಟ್ಟುಕೊಂಡು ರಾತ್ರಿಯಿಡೀ ಇಲ್ಲೆಲ್ಲ ಓಡಾಡ್ತಿರುತ್ತೆ!"

ನಿಜಕ್ಕೂ ಇದೊಂದು ವಿಚಿತ್ರ ಸಮಾಚಾರ! ನರೇಂದ್ರ ಇದನ್ನೆಲ್ಲ ಈ ಹಿಂದೆ ಕೇಳಿಯೇ ಇರಲಿಲ್ಲ. ಅವನಿಗೆ ಕುತೂಹಲ ಕೆರಳಿತು.

"ಹೌದಾ ತಾತಾ? ಇನ್ನೇನ್ಮಾಡತ್ತೆ ತಾತ ಆ ಬ್ರಹ್ಮರಾಕ್ಷಸ?"

"ಏನ್ ಮಾಡತ್ತೆ ಗೊತ್ತಾ...? ಆ ಬ್ರಹ್ಮರಾಕ್ಷಸ ಈ ಮರ ಹತ್ತಿದವರ ಕತ್ತನ್ನ ಹೀಗ್ ಹಿಡಕೊಂಡು... ಹೀಗ್ ಹಿಡಕೊಂಡು...ಹೀಗ್ ಹಿಸುಕಿಹಾಕಿಬಿಡತ್ತೆ!"

ಹುಡುಗರೆಲ್ಲ ತಾತಯ್ಯನ ಮಾತನ್ನು ಕಣ್ಣು ಕಿವಿ ತೆರೆದುಕೊಂಡು ಕೇಳುತ್ತಿದ್ದರು. ಯಾವಾಗ ಆತ, ಹೀಗೆ ಆ ಬ್ರಹ್ಮರಾಕ್ಷಸ ಮರ ಹತ್ತಿದವರ ಕತ್ತನ್ನು ಹಿಸುಕಿಹಾಕಿಬಿಡು ತ್ತದೆ ಎಂದನೋ, ಎಲ್ಲರೂ ಅಲ್ಲಿಂದ ಪರಾರಿ! ನರೇಂದ್ರನೂ ದೂರಕ್ಕೆ ಹೊರಟು ಹೋದ. ತನ್ನ ಉಪಾಯ ಇಷ್ಟು ಸುಲಭವಾಗಿ ಫಲಿಸಿದ್ದನ್ನು ಕಂಡು ತಾತಯ್ಯ ವಿಜಯೋತ್ಸಾಹದಿಂದ ಬೊಚ್ಚುಬಾಯಿ ತೆರೆದುಕೊಂಡು ನಗುತ್ತ ಒಳಕ್ಕೆ ಹೋದ. ಆದರೆ ಅವನು ಆ ಕಡೆ ಹೋದನೋ ಇಲ್ಲವೋ, ಈ ಕಡೆ ನರೇಂದ್ರ ಮತ್ತೆ ಬಂದು ಮರ ಹತ್ತಿದ. ಅದನ್ನು ನೋಡಿ ಅವನ ಸ್ನೇಹಿತರು ದೂರದಿಂದಲೇ ಕೂಗಿಕೊಂಡರು: "ಏ ನರೇನ್! ಮರ ಹತ್ತಬೇಡವೋ! ಬ್ರಹ್ಮರಾಕ್ಷಸ ಹಿಡಿದುಕೊಳ್ಳುತ್ತೆ! ನಿನ್ನ ಕತ್ತನ್ನು

ಹಿಸುಕಿಹಾಕಿಬಿಡುತ್ತೆ!" ನರೇಂದ್ರ ಅವರ ಅವಸ್ಥೆಯನ್ನು ಕಂಡು ಬಾಯ್ತುಂಬ ನಕ್ಕು ಹೇಳಿದ: "ಎಂಥಾ ಪುಕ್ಕಲ್ರಯ್ಯ ನೀವೆಲ್ಲ! ಯಾರೋ ಏನೋ ಹೇಳಿಬಿಟ್ಟರು ಅಂತ ನಂಬಿಬಿಡೋಣವೇ ? ಆ ಬ್ರಹ್ಮರಾಕ್ಷಸ ಇಲ್ಲಿರುವುದು ನಿಜವಾಗಿದ್ದರೆ ನನ್ನ ಕತ್ತು ಹಾರಿ ಹೋಗಿ ಎಷ್ಟೋ ದಿನಗಳಾಗಬೇಕಿತ್ತು. ಆದರೆ ಇನ್ನೂ ಗಟ್ಟಿಯಾಗೇ ಇದೆ ನೋಡಿ!" ಆದರೆ ಹುಡುಗರಿಗೆಲ್ಲ ಮತ್ತೆ ಧೈರ್ಯ ಬರಬೇಕಾದರೆ ಎಷ್ಟೋ ಹೊತ್ತಾಯಿತೆನ್ನಿ.

ಮಕ್ಕಳನ್ನು ಹೆದರಿಸಲು ಈ ಬಗೆಯ ದೆವ್ವದ ಕಥೆಗಳನ್ನು ಹೇಳುವ ಪರಿಪಾಠ ಎದೆ. ಅದನ್ನು ಕೇಳಿ ಮಕ್ಕಳು ಜೀವನದುದ್ದಕ್ಕೂ ಹೆದರಿಕೊಳ್ಳುವುದೂ ಇದೆ. ಆದರೆ ಇಲ್ಲಿ ಬಾಲಕ ನರೇಂದ್ರ ಕೊಟ್ಟ ಉತ್ತರ ಮಾತ್ರ ತುಂಬ ಅಪರೂಪದ್ದು. ನರೇಂದ್ರ ಹುಡುಗನಾಗಿರಬಹುದು; ಆದರೆ ಅವನಾಡಿದ ಮಾತಿನಲ್ಲಿ ಹುಡುಗುತನವಿಲ್ಲ. ಅಲ್ಲದೆ ತಾನು ಮುಂದೆ ಲೋಕವಿಖ್ಯಾತ ವಿವೇಕಾನಂದರಾಗಿ ಗುಡುಗಲಿರುವ ವಾಣಿಯನ್ನು ಅವನು ಇಂದೇ ಇಲ್ಲಿ ಮೊಳಗಿದ್ದಾನೆ ಎಂದರೂ ಆಶ್ಚರ್ಯವಿಲ್ಲ. ಮುಂದೆ ಸ್ವಾಮಿ ವಿವೇಕಾನಂದರು ಹೇಳುತ್ತಾರೆ: "ಒಂದು ವಿಷಯವನ್ನು ಯಾವುದೋ ಒಂದು ಪುಸ್ತಕ ದಲ್ಲಿ ಬರೆದಿದೆ, ಇಲ್ಲವೆ ಯಾವನೋ ಒಬ್ಬ ಮನುಷ್ಯ ಹಾಗೆಂದು ಹೇಳಿದ ಎಂಬಷ್ಟೇ ಕಾರಣಕ್ಕಾಗಿ ನಂಬಬೇಡಿ. ಅದರ ನಿಜತ್ವವನ್ನು ನೀವೇ ಕಂಡುಕೊಳ್ಳಿ. ಸತ್ಯಸಾಕ್ಷಾತ್ಕಾರ ವೆಂದರೆ ಅದೇ."

ಅಂದು ನರೇಂದ್ರನನ್ನು ಹಾಗೆ ಹೆದರಿಸಿದರೂ ತಾತಯ್ಯನಿಗೆ ಅವನ ಮೇಲೆ ವಿಶೇಷ ಪ್ರೀತಿ. ಅಲ್ಲದೆ ನರೇಂದ್ರನಿಗೆ ಒಂದು ಒಳ್ಳೆಯ ಭವಿಷ್ಯವಿದೆ ಎಂಬುದನ್ನು ಅವನೂ ಕಂಡುಕೊಂಡಿದ್ದ. ಇನ್ನೊಂದು ದಿನ ನರೇಂದ್ರ ಅದೇ "ದೆವ್ವದ ಮರ"ದ ಮೇಲೆ ಹತ್ತಿ ಕೊಂಬೆಯಲ್ಲಿ ಜೋತಾಡುತ್ತಿದ್ದಾಗ, ತಾತಯ್ಯ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಕುಳ್ಳಿರಿಸಿಕೊಂಡು ಕೇಳಿದ:

"ಏನಪ್ಪಾ, ನೀನೇನು ಹೀಗೇ ದಿನವಿಡೀ ಮನೆಯಿಂದ ಮನೆಗೆ ಹೋಗುತ್ತ ಆಟ ವಾಡಿಕೊಂಡಿರುತ್ತೀಯೋ ಅಥವಾ ಓದುಗೀದಿನ ಕಡೆಗೂ ಗಮನ ಕೊಡುತ್ತೀಯೋ ?"

"ನಾನು ಆಟವನ್ನೂ ಆಡುತ್ತೇನೆ; ಪಾಠವನ್ನೂ ಓದುತ್ತೇನೆ"—ನರೇಂದ್ರನೆಂದ.

ಆದರೆ ತಾತಯ್ಯ ಅಷ್ಟಕ್ಕೇ ಬಿಡಲಿಲ್ಲ. ಭೂಗೋಳದಲ್ಲಿ, ಗಣಿತದಲ್ಲಿ ಕೆಲವು ಪ್ರಶ್ನೆಗಳನ್ನು ಕೇಳಿದ. ನರೇಂದ್ರ ಸಲೀಸಾಗಿ ಉತ್ತರಿಸಿದ. ಅನಂತರ ತಾತಯ್ಯ ಪಾಠದ ಕೆಲವು ಪದ್ಯಗಳನ್ನು ಹೇಳುವಂತೆ ಕೇಳಿದ. ಅವನ್ನೂ ನರೇಂದ್ರ ಹಾಡಿ ತೋರಿಸಿದ. ಎಷ್ಟು ಕಷ್ಟದ ಪ್ರಶ್ನೆಗಳನ್ನು ಕೇಳಿದರೂ ಅವನು ಉತ್ತರಿಸಿದಾಗ ತಾತಯ್ಯನಿಗೆ ಬಹಳ ಆಶ್ಚರ್ಯವೂ ಆಯಿತು, ಸಂತೋಷವೂ ಆಯಿತು. ಅವನ ಉತ್ತರ, ಮುಖಭಾವ ಇವನ್ನೆಲ್ಲ ಗಮನಿಸಿದ ತಾತಯ್ಯ ಅವನಲ್ಲಿ ಏನೋ ಒಂದು ಬೆಳಕನ್ನು ಕಂಡ. ಮತ್ತು "ಮಗು, ನೀನೊಬ್ಬ ಧೀರನಾಗುವುದು ಖಂಡಿತ. ನಿನಗೆ ನನ್ನ ಸಂಪೂರ್ಣ ಆಶೀರ್ವಾದ ಇದೆ" ಎಂದು ಹೃತ್ಪೂರ್ವಕವಾಗಿ ಹರಸಿದ. ಮತ್ತು ಮುಂದೆ ಆ ಹಾರೈಕೆ ಫಲಿಸಿದ್ದನ್ನು ಕಣ್ಣಾರೆ ಕಾಣುವ ಭಾಗ್ಯವೂ ಅವನದಾಯಿತು.

ನರೇಂದ್ರನ ಧೈರ್ಯದೊಂದಿಗೆ ಅವನ ಬುದ್ಧಿಸಾಮರ್ಥ್ಯವನ್ನು ತೋರಿಸು ವಂತಹ ಇನ್ನೊಂದು ಘಟನೆಯಿದೆ. ಅವನಿಗಾಗ ಹತ್ತು-ಹನ್ನೊಂದು ವರ್ಷ ವಯಸ್ಸು. ಆ ದಿನಗಳಲ್ಲಿ ಇಂಗ್ಲೆಂಡಿನ ಚಕ್ರವರ್ತಿಯಾದ ಏಳನೇ ಎಡ್ವರ್ಡ್ ಭಾರತಕ್ಕೆ ಬಂದಿದ್ದ. ಅವನು ತಂದಿದ್ದ 'ಸಿರಾಪಿಸ್' ಎಂಬ ಭಾರೀ ಯುದ್ಧದ ಹಡಗು ಕಲ್ಕತ್ತದ ಬಂದರಿನಲ್ಲಿ

ನಿಂತಿತ್ತು. ಅದನ್ನು ನೋಡಿಕೊಂಡು ಬರಬೇಕೆಂದು ನರೇಂದ್ರನ ಗೆಳೆಯರ ಆಸೆ. ಆದರೆ ಬಂದರಿಗೆ ಹೋಗಬೇಕಾದರೆ ಅನುಮತಿಪತ್ರ ಬೇಕು. ಅದಕ್ಕಾಗಿ ಹುಡುಗರೆಲ್ಲ ನರೇಂದ್ರನನ್ನು ಒತ್ತಾಯಪಡಿಸಿದರು. ಇಂಥ ಕೆಲಸಕ್ಕೆ ಅವನೇ ಸರಿ. ನರೇಂದ್ರ ಒಪ್ಪಿ ಕೊಂಡ. ಈ ಅನುಮತಿ ಪತ್ರವನ್ನು ಆಫೀಸಿನಲ್ಲಿ 'ಬಡಾಸಾಹೇಬ'ರನ್ನು ಕಂಡೇ ಪಡೆಯಬೇಕಾಗಿತ್ತು. ಅಲ್ಲದೆ, ನಗರದ ಗಣ್ಯ ವ್ಯಕ್ತಿಗಳಿಗೆ ಮಾತ್ರ ಅನುಮತಿಪತ್ರಗಳು ಲಭ್ಯವಿದ್ದುವು—ಯಾರೆಂದರವರಿಗಲ್ಲ. ಆದರೂ ನರೇಂದ್ರ ತನ್ನ ಹಾಗೂ ಸ್ನೇಹಿತರ ಅರ್ಜಿಗಳನ್ನು ತೆಗೆದುಕೊಂಡು ಆಫೀಸಿಗೆ ಹೋದ. ಆದರೆ ಬಾಗಿಲಲ್ಲಿ ಭರ್ಜರಿ ಸಮವಸ್ತ್ರ ಧರಿಸಿದ್ದ ದ್ವಾರಪಾಲಕನೊಬ್ಬ ನಿಂತಿದ್ದ. ನರೇಂದ್ರನನ್ನು ಕಂಡು ಅವನು, "ಏಯ್, ಚೋಟುದ್ದ ಇದ್ದೀಯ, ನಿನಗ್ಯಾರೋ ಕೊಡ್ತಾರೆ ಅನುಮತಿಯನ್ನು? ನಡಿ ನಡಿ ಇಲ್ಲಿಂದ" ಎಂದು ಗದರಿ ಅಟ್ಟಿಬಿಟ್ಟ. ನರೇಂದ್ರನಿಗೆ ತುಂಬ ದುಃಖವಾಯಿತು. ಆದರೂ ಎದೆಗುಂದಲಿಲ್ಲ. ಆ ಕಟ್ಟಡವನ್ನೊಮ್ಮೆ ಪೂರ್ತಿ ಸುತ್ತುಹಾಕಿ ನೋಡಿದ. ಹಿಂಭಾಗದಲ್ಲಿ ಒಂದು ಕಿರಿದಾದ ಮೆಟ್ಟಿಲ ಸಾಲಿರುವುದು ಗೋಚರವಾಯಿತು. ಅವು ಜವಾನರು ಮಾತ್ರ ಉಪಯೋಗಿಸುತ್ತಿದ್ದ ಮೆಟ್ಟಿಲುಗಳು. ಆ ಮಾರ್ಗವಾಗಿ ಹೋದರೆ ಬಡಾ ಸಾಹೇಬರ ಆಫೀಸಿಗೆ ಹೋಗಬಹುದೆಂದು ತೋರಿತು. ಸಿಕ್ಕಿಹಾಕಿಕೊಂಡರೆ ಮಾತ್ರ ತುಂಬ ಅವಮಾನ! ಆದರೂ ಧೈರ್ಯ ಮಾಡಿ ಮೆಲ್ಲನೆ ಮೆಟ್ಟಿಲೇರಿದ. ಅಲ್ಲಿ ಒಂದು ಬಾಗಿಲ ಮುಂದಿನ ಪರದೆ ಸರಿಸಿ ನೋಡುತ್ತಾನೆ, ಅದೇ ಆಫೀಸು. ಬಡಾ ಸಾಹೇಬರು ಕುಳಿತಿದ್ದರು. ನರೇಂದ್ರ ಜನರ ಸಾಲಿನಲ್ಲಿ ಸೇರಿಕೊಂಡ. ತನ್ನ ಸರದಿ ಬಂದಾಗ ತನ್ನ ಹಾಗೂ ಸ್ನೇಹಿತರ ಅರ್ಜಿಗಳನ್ನು ಸಾಹೇಬರ ಮುಂದಿಟ್ಟ. ಅವನ ಅದೃಷ್ಟ. ಸಾಹೇಬರು ತಲೆಯೆತ್ತಿ ನೋಡದೆ ಎಲ್ಲಕ್ಕೂ ರುಜು ಹಾಕಿಕೊಟ್ಟರು. ಹಿಂದಿರುಗುವಾಗ ನರೇಂದ್ರ ಆ ಪತ್ರವನ್ನು ಕೈಯಲ್ಲಿ ಹಿಡಿದು ಒಳ್ಳೇ ಜಂಬದಿಂದ ಅದೇ ದ್ವಾರಪಾಲಕನ ಮುಂದಿನಿಂದ ಬಂದ. ಅವನನ್ನು ಕಂಡು ದ್ವಾರಪಾಲಕ ಕಣ್ಣಣ್ಣು ಬಿಡುತ್ತ, "ನಿನಗೆ ಹೇಗೆ ಸಿಕ್ಕಿತೋ ಅನುಮತಿ ಪತ್ರ?" ಎಂದು ಕೇಳಿದ. ಅದಕ್ಕೆ ನರೇಂದ್ರ ತುಂಟನಗೆ ಬೀರುತ್ತ "ನಾನೊಬ್ಬ ಜಾದೂಗಾರ ಗೊತ್ತಾ!" ಎಂದು ಹೇಳಿ ಠೀವಿಯಿಂದ ಮುನ್ನಡೆದ.

ನರೇಂದ್ರ ಆಟದಲ್ಲೂ ಮುಂದು, ಪಾಠದಲ್ಲೂ ಮುಂದು. ಅವನು ತನ್ನ ಪ್ರತಿ ದಿನದ ಪಾಠಗಳನ್ನು ತುಂಬ ಉತ್ಸಾಹದಿಂದ ಅಭ್ಯಾಸ ಮಾಡುತ್ತಿದ್ದ. ಕೇವಲ ಒಂದು ಗಂಟೆ ಸಾಕವನಿಗೆ, ಪುಸ್ತಕದ ಪಾಠಗಳನ್ನೆಲ್ಲ ಮಸ್ತಕಕ್ಕಿಳಿಸಿಬಿಡುತ್ತಿದ್ದ. ಆದ್ದರಿಂದಲೇ ತನ್ನ ಪಾಠಗಳನ್ನು ಅಧ್ಯಯನ ಮಾಡಿದ ಮೇಲೂ ಅವನಿಗೆ ಚೇಷ್ಟೆ ತಮಾಷೆ ತುಂಟ ತನಗಳಿಗೆ ತುಂಬ ಸಮಯ ಮಿಗುತ್ತಿತ್ತು. ಆಗಿನಿಂದಲೂ ಅವನಿಗೆ ಇಂಗ್ಲಿಷ್ ಭಾಷೆ ಯಲ್ಲಿ, ಇತಿಹಾಸದಲ್ಲಿ ಹಾಗೂ ಸಂಸ್ಕೃತದಲ್ಲಿ ವಿಶೇಷ ಆಸಕ್ತಿ. ಆದರೆ ಅವನಿಗೆ ಲೆಕ್ಕವೆಂದರಾಗದು. ಈ ವಿಷಯದಲ್ಲಿ ಅವನು ತನ್ನ ತಂದೆಯಂತೆ.

ಸಾಮಾನ್ಯವಾಗಿ ನರೇಂದ್ರನ ದೇಹಾರೋಗ್ಯ ಚೆನ್ನಾಗಿಯೇ ಇತ್ತಾದರೂ ಈ ಕೆಲವು ವರ್ಷಗಳಲ್ಲಿ ಅವನು ಅಗ್ನಿಮಾಂದ್ಯದಿಂದಾಗಿ-ಎಂದರೆ ಅಜೀರ್ಣ ರೋಗ ದಿಂದಾಗಿ ತುಂಬ ಸಣ್ಣಗಾಗಿಬಿಟ್ಟ. ಆದರೆ ತನ್ನ ಮೈಗೆ ಯಾವ ತಿಂಡಿ ಒಗ್ಗುವುದಿಲ್ಲವೋ ಅದನ್ನೇ ತಿನ್ನಬೇಕೆಂದು ಆಸೆಯಾಗುತ್ತಿತ್ತು—ಎಲ್ಲ ಹುಡುಗರಂತೆ! ಆದ್ದರಿಂದ ಅವನ ತಾಯಿಗೆ ಈಗೊಂದು ಹೆಚ್ಚಿನ ಕೆಲಸ—ಆ ತಿಂಡಿಗಳನ್ನು ಅವನ ಕೈಗೆ ಎಟುಕದಂತೆ

ಇಟ್ಟಿರುವುದು ! ಆದರೆ ಹೀಗೆ ಅಜೀರ್ಣದಿಂದಾಗಿ ಸೊರಗಿದರೂ ಅವನೆಂದೂ ಜೋಲು ಮೋರೆ ಹಾಕಿಕೊಂಡಿರುತ್ತಿರಲಿಲ್ಲ. ಯಾವಾಗಲೂ ಗೆಲುವಾಗಿರುತ್ತಿದ್ದ. ಅದೇ ಶಕ್ತಿ, ಅದೇ ಉತ್ಸಾಹ, ಅದೇ ತಮಾಷೆ, ಅದೇ ಎದೆಗಾರಿಕೆ—ಯಾವುದೂ ಕಡಮೆಯಾಗಿರಲಿಲ್ಲ.

ನರೇಂದ್ರ ತುಂಬ ಚೆನ್ನಾಗಿ ಚಿತ್ರ ಬರೆಯಬಲ್ಲವನಾಗಿದ್ದ. ಮತ್ತು ಅತ್ಯಂತ ಮಧುರವಾಗಿ ಹಾಡಬಲ್ಲವನಾಗಿದ್ದ. ಸಂಗೀತ ಕಛೇರಿಯಲ್ಲಿ ಹಾಡುಗಳನ್ನು ಒಂದು ಸಲ ಕೇಳಿದರೆ ಸಾಕು, ಎರಡನೆಯ ಸಲ ಅದು ಅವನ ಬಾಯಲ್ಲಿರುತ್ತಿತ್ತು.

ಅವನು ತನ್ನ ತರಗತಿಯ ಹುಡುಗರೊಂದಿಗೆ ತುಂಬ ಆತ್ಮೀಯವಾಗಿ ಬೆರೆಯುತ್ತಿದ್ದ. ಒಳ್ಳೊಳ್ಳೆಯ ಕಥೆಗಳನ್ನು ಹೇಳುತ್ತ ಅವರನ್ನು ರಮಿಸುತ್ತಿದ್ದ; ಹಾಡುಗಳನ್ನು ಹೇಳಿ ಸಂತೋಷಪಡಿಸುತ್ತಿದ್ದ; ತರತರದ ಅಣಕುಚೇಷ್ಟೆಗಳನ್ನು ಮಾಡಿ ಹೊಟ್ಟೆ ಹುಣ್ಣಾಗುವಷ್ಟು ನಗಿಸುತ್ತಿದ್ದ. ಎಷ್ಟೋ ಸಲ ಅವನು ಕೀಟಲೆ ಮಾಡಿ ಹುಡುಗರನ್ನು ರೇಗಿಸುತ್ತಿದ್ದುದೂ ಉಂಟು. ಆದರೆ ಯಾರ ಮನಸ್ಸಿಗೂ ನೋವಾಗುವಂತೆ ಮಾತನಾಡುತ್ತಿರಲಿಲ್ಲ. ಹೀಗೆ ಅವನು ತನ್ನ ಸಂಗಡಿಗರನ್ನೆಲ್ಲ ತನ್ನೆಡೆಗೆ ಆಕರ್ಷಿಸಿಬಿಟ್ಟಿದ್ದ. ಎಂಥವರನ್ನೇ ಆಗಲಿ ಕೇವಲ ಐದೇ ನಿಮಿಷಗಳಲ್ಲಿ ಗೆದ್ದು ತನ್ನವರನ್ನಾಗಿಸಿಕೊಳ್ಳುವ ಸಾಮರ್ಥ್ಯ ಅವನಿಗಿತ್ತು. ಮಾತಿನಲ್ಲಿ ಅವನನ್ನು ಮೀರಿಸುವವರು ಯಾರೂ ಇರಲಿಲ್ಲ. ಅವನು ಒಳ್ಳೇ ಪ್ರತ್ಯುತ್ಪನ್ನಮತಿ; ಆಯಾ ಸನ್ನಿವೇಶಕ್ಕೆ ತಕ್ಕಂತೆ ಸೂಕ್ತವಾಗಿ ಮಾತನಾಡಬಲ್ಲ ಚತುರ. ಒಂದು ದಿನವಾದರೂ ಸಪ್ಪೆಮೋರೆ ಹಾಕಿಕೊಂಡು ಕುಳಿತವನಲ್ಲ. ತಾನೂ ನಕ್ಕು ಇತರರನ್ನೂ ನಗಿಸುತ್ತಿರುವ ನಿತ್ಯಾನಂದಮೂರ್ತಿ ಅವನು. ಅವನಲ್ಲಿ ಅಪರಿಮಿತ ಶಕ್ತಿ ತೇಜಸ್ಸು ಬಲ ಅಡಗಿಕೊಂಡಿತ್ತು. ಈ ವಿಷಯವಾಗಿ ಮುಂದೆ ಸ್ವಾಮಿ ವಿವೇಕಾನಂದರೇ ತಮ್ಮೊಬ್ಬ ಶಿಷ್ಯನ ಮುಂದೆ ಹೇಳುತ್ತಾರೆ: "ನೋಡು, ನನ್ನ ಬಾಲ್ಯದಲ್ಲಿ ನನ್ನೊಳಗೆ ಒಂದು ಅಪ್ರತಿಹತವಾದ ಶಕ್ತಿ ಉಕ್ಕುತ್ತಿರುವುದನ್ನು ನಾನು ಗಮನಿಸುತ್ತಿದ್ದೆ. ಆ ಶಕ್ತಿ ನನ್ನ ಶರೀರವನ್ನೆಲ್ಲ ತುಂಬಿ ಉಕ್ಕಿ ಹರಿಯುವಂತಿರುತ್ತಿತ್ತು. ಇದರಿಂದಾಗಿ ನಾನು ಸುಮ್ಮನೆ ಚಡಪಡಿಸುತ್ತಿದ್ದೆ. ಮತ್ತು ಸುಮ್ಮನೆ ಕುಳಿತಿರಲು ನನ್ನಿಂದ ಸಾಧ್ಯವೇ ಆಗುತ್ತಿರಲಿಲ್ಲ. ಆದ್ದರಿಂದ ನಾನು ಒಂದಲ್ಲ ಒಂದು ಚೇಷ್ಟೆ ಮಾಡುತ್ತಲೇ ಇರುತ್ತಿದ್ದೆ. ಓದಿಬರೆಯುವ ಕೆಲಸವೇನೂ ಇಲ್ಲದೆಹೋದರೆ, ತುಂಟತನ ಮಾಡಲು ಹೊರಟುಬಿಡುತ್ತಿದ್ದೆ. ನನ್ನ ಅಂತರಂಗ ಸದಾ ಸ್ಪಂದಿಸುತ್ತ, ನಾನು ಏನನ್ನಾದರೂ ಮಾಡುತ್ತಿರುವಂತೆ ನನ್ನಲ್ಲಿ ಚಡಪಡಿಕೆಯನ್ನುಂಟುಮಾಡುತ್ತಿತ್ತು. ನನ್ನನ್ನೇನಾದರೂ ಒಂದು ಮೂರ್‍ನಾಲ್ಕು ದಿನ ಸುಮ್ಮನೆ ಕೂಡಿಸಿಬಿಟ್ಟರೆ ಒಂದೋ ನನಗೆ ಕಾಯಿಲೆಯಾಗಿಬಿಡುತ್ತಿತ್ತು, ಇಲ್ಲವೆ ಬುದ್ಧಿ ಕೆಟ್ಟಂತಾಗಿಬಿಡುತ್ತಿತ್ತು."

ನರೇಂದ್ರ ಯಾವಾಗಲೂ ಇಷ್ಟೊಂದು ಚಟುವಟಿಕೆಯಿಂದಿರುತ್ತಿದ್ದುದೇನೋ ನಿಜ. ಆದರೆ ಯಾವಾಗಲಾದರೊಮ್ಮೆ ಅವನಲ್ಲಿ ಯಾವುದೋ ಒಂದು ವಿಚಿತ್ರ ಭಾವ ಎದ್ದೇಳುತ್ತಿತ್ತು, ಆಗ ಅವನ ಮನಸ್ಸು ಎಲ್ಲಿಗೋ ಬಹುದೂರ ಹೋಗಿದ್ದಂತೆ ಕಂಡುಬರುತ್ತಿತ್ತು, ಸುಮ್ಮನೆ ಆಕಾಶವನ್ನು ನೆಟ್ಟನೋಟದಿಂದ ನಿಟ್ಟಿಸುತ್ತ ಕುಳಿತುಬಿಡುತ್ತಿದ್ದ. ಅವನ ಮನಸ್ಸು ತುಂಬ ಗಂಭೀರವಾಗಿರುತ್ತಿತ್ತು, ಅವನ ನಗು ತಮಾಷೆಗಳೆಲ್ಲ ಮಾಯವಾಗಿಬಿಟ್ಟಿರುತ್ತಿದ್ದುವು. ಕೆಲವೊಮ್ಮೆ ಈ ಬಗೆಯ ಸ್ಥಿತಿಯಿಂದ ಮೈತಿಳಿದು, "ನಾನು ರಾಜನಾಗುತ್ತೇನೆ; ನಾನು ಇದನ್ನು ಮಾಡುತ್ತೇನೆ, ನಾನು ಅದನ್ನು ಮಾಡುತ್ತೇನೆ"

ಎಂದು ಏನೇನೋ ಹೇಳುತ್ತಿದ್ದ. ಇನ್ನು ಕೆಲವೊಮ್ಮೆ "ಇದನ್ನು ಹಾಗೆ ಮಾಡಬೇಕು, ಈ ಸಲ ಇದನ್ನು ಮಾಡಿಬಿಡಬೇಕು" ಎನ್ನುತ್ತಿದ್ದ. ಅವನ ಆ ಮಾತಿನ ಅಭಿಪ್ರಾಯ ವೇನೆಂಬುದು ಮಾತ್ರ ಯಾರಿಗೂ ಅರ್ಥವಾಗುತ್ತಿರಲಿಲ್ಲ. ಏಕೆಂದರೆ ಅವನ ಈ ಮಾತಿಗೂ, ಸ್ವಲ್ಪಹೊತ್ತಿನ ಹಿಂದೆ ಅವನು ಸಹಜ ಸ್ಥಿತಿಯಲ್ಲಿದ್ದಾಗ ಆಡುತ್ತಿದ್ದ ಮಾತು ಗಳಿಗೂ ಸಂಬಂಧವೇ ಇರುತ್ತಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಅವನು ತನ್ನಷ್ಟಕ್ಕೆ ತಾನು ಗಟ್ಟಿಯಾಗಿ ಮಾತನಾಡಿಕೊಳ್ಳುವುದೂ ಇತ್ತು. ಆಗ ಅವನೊಬ್ಬ ಬೇರೆಯೇ ಹುಡುಗನೋ ಎಂಬಂತೆ ಕಂಡುಬರುತ್ತಿದ್ದ. ಅವನ ಈ ಬಗೆಯ ಭಾವ ಕಳೆದು ಎಂದಿ ನಂತಾದಾಗ, "ನನಗೀಗ ಏನಾಗಿತ್ತು!" ಎಂಬಂತೆ ಕಣ್ಣುಣ್ಣು ಬಿಡುತ್ತಿದ್ದ; ಪೇಚಿಗೆ ಸಿಕ್ಕಿ ಕೊಂಡವರಂತೆ ಮುಖ ಮಾಡಿಕೊಳ್ಳುತ್ತಿದ್ದ. ಆದರೆ ಇವೆಲ್ಲ ಮುಗಿದ ಬಳಿಕ ಅವನು ಎಂದಿನ ತುಂಟ ನರೇಂದ್ರನೇ ಆಗಿಬಿಡುತ್ತಿದ್ದ. ಇವನ್ನೆಲ್ಲ ಕಂಡು ಅವನ ಸ್ನೇಹಿತರು ಹೇಳುತ್ತಿದ್ದರು, "ನರೇನ್ ತುಂಬ ಒಳ್ಳೆಯವನು; ನಗುತ್ತಾನೆ, ನಗಿಸುತ್ತಾನೆ, ತಮಾಷೆ ಮಾಡುತ್ತಾನೆ—ಎಲ್ಲ ಸರಿ. ಆದರೆ ಕೆಲವು ಸಲ ಈ ತರಹ ಹುಚ್ಚುಚ್ಚಾಗಾಡುತ್ತಾನೆ. ಒಂದೊಂದು ಸಲವಂತೂ ಅವನು ಏನು ಮಾತನಾಡಿಯಾನು ಅಂತಲೇ ಹೇಳ ಲಾಗುವುದಿಲ್ಲ!" ನಿಜ, ನರೇಂದ್ರನ ಭಾವದಂತರಂಗವನ್ನು ಯಾರುತಾನೆ ಬಲ್ಲರು?

ನರೇಂದ್ರ ಯಾವಾಗಲೂ ನಗುನಗುತ್ತ ಇರುತ್ತಿದ್ದವನು ಎನ್ನುವುದು ನಿಜವೇ. ಆದರೆ ಅವನಿಗೂ ಕಷ್ಟದ ಪರಿಸ್ಥಿತಿಗಳು ಬರಲಿಲ್ಲವೆಂದೇನಲ್ಲ. ಒಂದು ದಿನ ಅವನ ಶಾಲೆಯಲ್ಲೇ ಅವನಿಗೊಂದು ಕಷ್ಟ ಒದಗಿಬಂತು. ಆಗಿನ ಕಾಲದಲ್ಲಿ ಅಧ್ಯಾಪಕರು, ತಪ್ಪು ಮಾಡಿದ ಹುಡುಗರಿಗೆ ಬೆತ್ತದೇಟು ಕೊಡುವುದು, ಕಿವಿ ಹಿಂಡುವುದು, ಒಳ ಶುಂಠಿ ಕೊಡುವುದು ಇತ್ಯಾದಿ ಶಿಕ್ಷೆಗಳನ್ನು ವಿಧಿಸುವ ಪರಿಪಾಠ ಹೆಚ್ಚಾಗಿಯೇ ಇತ್ತು. ನರೇಂದ್ರನ ತರಗತಿಯಲ್ಲಿ ಒಬ್ಬ ಹುಡುಗನಿದ್ದ. ಅವನ ಮುಖ, ಚಹರೆ, ನಡಿಗೆ, ಸ್ವಭಾವ ಎಲ್ಲ ಸ್ವಲ್ಪ ವಿಚಿತ್ರ. ಆದ್ದರಿಂದ ಎಲ್ಲರ ಹಾಸ್ಯಕ್ಕೊಂದು ವಸ್ತುವಾಗಿದ್ದ. ಅವನು ಆ ದಿನ ಏನೋ ತಂಟೆ ಮಾಡಿರಬೇಕು; ಅಧ್ಯಾಪಕರಿಗೆ ರೇಗಿತು. ಅವರೋ ಮೊದಲೇ ಕೆಟ್ಟ ಕೋಪಿಷ್ಠರು. ಸರಿ, ಆ ಹುಡುಗನನ್ನು ಒಂದೇ ಸಮನೆ ಬೆತ್ತದಿಂದ ಥಳಿಸತೊಡಗಿದರು. ಆ ದೃಶ್ಯ ಭಯಂಕರವಾಗಿತ್ತು, ಆದರೆ ಅಷ್ಟೇ ತಮಾಷೆಯೂ ಆಗಿತ್ತು. ಯಾರನ್ನಾದರೂ ಹಾಗೆ ಹೊಡೆಯುತ್ತಿದ್ದರೆ ಹುಡುಗರಿಗೆ ಭಯವಾಗದಿರುತ್ತ ದೆಯೆ? ಆದರೆ ಆ ತಂಟೆಮಾರಿ ಹುಡುಗನ ರೂಪ ಈ ಉಪಾಧ್ಯಾಯರ ಕೋಪ ಎರಡೂ ಸೇರಿ ಅಲ್ಲೊಂದು ತಮಾಷೆಯ ದೃಶ್ಯವನ್ನು ನಿರ್ಮಿಸಿದ್ದುವು. ಅದನ್ನು ಕಂಡು ನರೇಂದ್ರನಿಗೆ ನಗು ಉಕ್ಕಿಬಂತು. ಅವನು ನಗುವುದನ್ನು ಕಂಡಾಗ ಇತರ ಹುಡುಗರೂ ನಗು ತಡೆದುಕೊಳ್ಳಲಾರದೆ ಹೋದರು. ಈಗ ಉಪಾಧ್ಯಾಯರ ಕೋಪ ಈ ಹುಡುಗರ ಕಡೆಗೆ ತಿರುಗಿಬಿಟ್ಟಿತು. ನರೇಂದ್ರ ಮುಂದಿನ ಬೆಂಚಿನಲ್ಲೇ ಕುಳಿತಿದ್ದ. ಕೈಗೆ ಸುಲಭವಾಗಿ ಸಿಕ್ಕಿದ. ಉಪಾಧ್ಯಾಯರು ಅವನನ್ನು ಹಿಡಿದುಕೊಂಡು ರಪರಪನೆ ಬಾರಿಸತೊಡಗಿ ದರು. ಹಾಗೆ ಬಾರಿಸುತ್ತಲೇ, "ಎಲ್ಲಿ, ನನಗೆ ಮಾತು ಕೊಡು, ಇನ್ನು ಮೇಲೆ ನನ್ನನ್ನು ಕಂಡು ನಗುವುದಿಲ್ಲ ಅಂತ" ಎಂದರು. ಆದರೆ ನರೇಂದ್ರ ಅದಕ್ಕೊಪ್ಪಲಿಲ್ಲ. ಏಕೆಂದರೆ ಅವನು ಆ ಉಪಾಧ್ಯಾಯರನ್ನು ಕಂಡು ನಕ್ಕದ್ದಲ್ಲ. ಅವನು ನಕ್ಕದ್ದು ಆ ಇಡೀ ಸನ್ನಿವೇಶವನ್ನು ಕಂಡು. ಈಗ ಉಪಾಧ್ಯಾಯರ ಕೋಪ ಎಲ್ಲೆ ಮೀರಿತು. ನರೇಂದ್ರ ನನ್ನು ಮತ್ತಷ್ಟು ಬಡಿದದ್ದಲ್ಲದೆ ಅವನ ಕಿವಿಗಳನ್ನು ಹಿಡಿದು ಬೆಂಚಿನಿಂದ ಮೇಲಕ್ಕೆತ್ತಿ

ಬಿಟ್ಟರು ! ಅವನ ಒಂದು ಕಿವಿಯಲ್ಲಿ ಗಾಯವಾಗಿ ರಕ್ತ ಸುರಿಯತೊಡಗಿತು. ಇಷ್ಟಾದರೂ ಅವನು ಉಪಾಧ್ಯಾಯರ ಷರತ್ತಿಗೆ ಒಪ್ಪಲೇ ಇಲ್ಲ. ಬದಲಾಗಿ ಕೋಪದಿಂದ ಕಣ್ಣೀರಿಳಿಸುತ್ತ, "ಬಿಡಿ ನನ್ನ ಕಿವಿಯನ್ನು. ನನ್ನನ್ನು ಹೊಡೆಯಲು ನೀವು ಯಾರು ? ಇನ್ನೊಂದು ಸಲ ನನ್ನ ಮೈಮುಟ್ಟದಿರೋ ನೋಡಿಕೊಳ್ಳಿ !" ಎಂದ. ಅವನ ಮೈಗೂ ನೋವಾಯಿತು, ಅಭಿಮಾನಕ್ಕೂ ಧಕ್ಕೆಯಾಯಿತು. ಆ ವೇಳೆಗೆ ಸರಿಯಾಗಿ ಶಾಲೆಯ ಸ್ಥಾಪಕರಾದ ಈಶ್ವರಚಂದ್ರ ವಿದ್ಯಾಸಾಗರರು ಅಲ್ಲಿಗೆ ಬಂದರು. ನೋಡುತ್ತಾರೆ, ಹುಡುಗನ ಕಿವಿಯಿಂದ ರಕ್ತ ಇಳಿಯುತ್ತಿದೆ ! ನರೇಂದ್ರ ಗಟ್ಟಿಯಾಗಿ ಅಳುತ್ತ ನಡೆದುದನ್ನೆಲ್ಲ ಬಿಡದೆ ಅವರೆದುರು ಹೇಳಿದ. ಬಳಿಕ, "ನಾನಿನ್ನು ನಿಮ್ಮ ಶಾಲೆಗೆ ಬರುವುದಿಲ್ಲ. ಈಗಿಂದಲೇ ನಿಮ್ಮ ಶಾಲೆಯನ್ನು ಬಿಟ್ಟುಬಿಟ್ಟೆ" ಎನ್ನುತ್ತ ಹೊರಟೇಬಿಟ್ಟ. ಆದರೆ ವಿದ್ಯಾಸಾಗರರು ಅವನ ಕೈಹಿಡಿದು ಆಫೀಸಿಗೆ ಕರೆದುಕೊಂಡು ಹೋಗಿ ಸಮಾಧಾನಪಡಿಸಿದರು. ಬಳಿಕ ಶಾಲೆಯ ಉಪಾಧ್ಯಾಯರನ್ನೆಲ್ಲ ಕರೆದು ವಿಚಾರಣೆ ನಡೆಸಿ, "ಇನ್ನು ಮುಂದೆ ಈ ಬಗೆಯ ಕ್ರೂರತನ ನಡೆಯಬಾರದು" ಎಂದು ಆಜ್ಞಾಪಿಸಿದರು. ನರೇಂದ್ರ ಮನೆಗೆ ಬಂದು ಈ ಘಟನೆಯನ್ನು ತಾಯಿಯ ಹತ್ತಿರ ಹೇಳಿದ. ಭುವನೇಶ್ವರಿಯ ಹೆತ್ತ ಕರುಳಿಗೆ ಉರಿಯಿಟ್ಟಂತಾಯಿತು. ಅವಳು "ನರೇನ್, ಇನ್ನು ಮೇಲೆ ಆ ಶಾಲೆಗೆ ಹೋಗಲೇಬೇಡ" ಎಂದು ಎಷ್ಟೋ ಹೇಳಿದಳು. ಆದರೆ ಅವನು ಆ ದುರ್ಘಟನೆಯನ್ನು ಮರೆತು ಮರುದಿನದಿಂದಲೇ ಶಾಲೆಗೆ ಹೋದ. ಕಿವಿಯ ಗಾಯ ವಾಸಿಯಾಗಲು ಮಾತ್ರ ಹಲವಾರು ದಿನಗಳೇ ಬೇಕಾದುವು.

ನರೇಂದ್ರನಿಗೆ ಇದು ಅಂತಹ ಮೊದಲ ಅನುಭವವೇನೂ ಅಲ್ಲ. ಹಿಂದೊಂದು ದಿನ ಭೂಗೋಳದ ಉಪಾಧ್ಯಾಯರು ಅವನಿಗೊಂದು ಪ್ರಶ್ನೆ ಹಾಕಿದ್ದರು. ಅದಕ್ಕೆ ಅವನು ಸರಿಯಾದ ಉತ್ತರವನ್ನೇ ಹೇಳಿದ. ಆದರೆ ಅದು ಸರಿಯಲ್ಲ ಎಂದು ಉಪಾಧ್ಯಾಯರು; ಇಲ್ಲ, ತಾನು ಹೇಳಿದ್ದು ಸರಿಯಾಗಿಯೇ ಇದೆ ಎಂದು ನರೇಂದ್ರ. "ತಪ್ಪು ಉತ್ತರವನ್ನು ಕೊಟ್ಟದ್ದೂ ಅಲ್ಲದೆ ಅದೇ ಸರಿ ಅಂತ ಮೊಂಡಾಟ ಬೇರೆ ಮಾಡುತ್ತೀಯ ?" ಎನ್ನುತ್ತ ಉಪಾಧ್ಯಾಯರು ಬೆತ್ತ ತೆಗೆದುಕೊಂಡು ಅವನ ಎಳೆಯ ಅಂಗೈ ಮೇಲೆ ರಪರಪನೆ ಹೊಡೆದರು. ಅವನು ಆ ನೋವನ್ನು ಸಹಿಸಿಕೊಂಡು ತುಟಿಪಿಟಕ್ಕೆನ್ನದೆ ಸುಮ್ಮನಿದ್ದುಬಿಟ್ಟ. ಉಪಾಧ್ಯಾಯರು ಮತ್ತೆ ಪಾಠ ಮಾಡಲಾರಂಭಿಸಿದರು. ಈ ಹೊತ್ತಿಗೆ ಅವರಿಗೆ ಅರಿವಾಯಿತು, ನರೇಂದ್ರ ಕೊಟ್ಟ ಉತ್ತರವೇ ಸರಿ ಎಂದು. ಅವರು ಪಶ್ಚಾತ್ತಾಪಗೊಂಡು ಕೂಡಲೇ ಆತನ ಕ್ಷಮೆ ಬೇಡಿದರು. ಮತ್ತು ಅಂದಿನಿಂದ ಅವನನ್ನು ತುಂಬ ಗೌರವಾದರಗಳಿಂದ ನೋಡಿಕೊಳ್ಳತೊಡಗಿದರು.

ಈ ಘಟನೆಯನ್ನೂ ನರೇಂದ್ರ ತಾಯಿಯ ಮುಂದೆ ಹೇಳಿದ. ಇಂಥ ಸಂದರ್ಭಗಳಲ್ಲೆಲ್ಲ ಹೇಳುತ್ತಿದ್ದಂತೆ ಆಕೆ ಮಗನನ್ನು ಸಮಾಧಾನಪಡಿಸುತ್ತ, "ಮಗು, ನಿನ್ನ ಕಡೆಯಿಂದ ನೀನು ಸರಿಯಾಗಿರುವಾಗ ಇನ್ನೇನು ಚಿಂತೆ ? ನೋಡು, ನಿನಗೆ ಅನ್ಯಾಯವಾಗಬಹುದು, ಪರಿಸ್ಥಿತಿ ನಿನಗೆ ವಿರುದ್ಧವಾಗಬಹುದು; ಏನೇ ಆದರೂ ನೀನು ಮಾತ್ರ ಸರಿಯಾದದ್ದನ್ನೇ ಮಾಡುತ್ತ ಬಾ" ಎಂದಳು. ಈ ಬೋಧನೆ ನಿಜಕ್ಕೂ ಅವನ ಮೇಲೆ ತುಂಬ ಪ್ರಭಾವ ಬೀರಿತು. ಮುಂದೆ ಎಷ್ಟೋ ಸಲ ನರೇಂದ್ರನ ಕಾರ್ಯವಿಧಾನಗಳನ್ನು ಕಂಡು ಅವನ ಆಪ್ತರೇ ಅವನನ್ನು ಅಪಾರ್ಥಮಾಡಿಕೊಂಡು ಟೀಕಿಸಿದ್ದುಂಟು. ಆದರೆ ಅವನು ಮಾತ್ರ ಆ ಯಾವ ಮಾತಿಗೂ ಗಮನಕೊಡದೆ ತನಗೆ ಸೂಕ್ತವಾಗಿ ಕಂಡದ್ದನ್ನೇ

ಮಾಡುತ್ತಿದ್ದ.

ನರೇಂದ್ರನಲ್ಲಿ ಬಾಲ್ಯದಿಂದಲೇ ಇನ್ನೊಂದು ಶ್ರೇಷ್ಠ ಗುಣ ಬೆಳೆದುಬರುತ್ತಿತ್ತು. ಅದು ಸತ್ಯ ಹೇಳುವ ಗುಣ. ಕಷ್ಟಗಳಿಂದ ತಪ್ಪಿಸಿಕೊಳ್ಳಲೇ ಆಗಲಿ, ಅಪ್ರಿಯ ಸನ್ನಿವೇಶಗಳಿಂದ ಪಾರಾಗಲೇ ಆಗಲಿ, ಸುಳ್ಳಿನ ಕಂತೆಯನ್ನು ಹೊಸೆಯುವ ದುರ್ಗುಣ ಅವನಿಗೆಂದೂ ಬರಲಿಲ್ಲ.

ಬೆಳೆದು ದೊಡ್ಡವನಾದಂತೆಲ್ಲ ನರೇಂದ್ರನಲ್ಲಿ ಧ್ಯಾನ ಮಾಡುವ ಅಭಿಲಾಷೆ ಇನ್ನಷ್ಟು ತೀವ್ರವಾಯಿತು. ರಾತ್ರಿ ಮಲಗಿಕೊಳ್ಳಲು ಕಣ್ಮುಚ್ಚಿದನೆಂದರೆ ಒಡನೆಯೇ ಜ್ಯೋತಿದರ್ಶನ! ಆದರೆ ಇವೆಲ್ಲ ಹೀಗಿದ್ದರೂ ಹಗಲಿನಲ್ಲಿ ಅವನ ತುಂಟಾಟ-ಚಟುವಟಿಕೆಗಳು ಎಂದಿನಂತೆಯೇ ನಡೆದುಕೊಂಡು ಬರುತ್ತಿದ್ದುವು. ಮಾತ್ರವಲ್ಲದೆ, ತನ್ನ ವಯಸ್ಸಿಗೆ ತಕ್ಕಂತೆ ಅವನು ಹೊಸಹೊಸ ಕಾರ್ಯಕಲಾಪಗಳನ್ನು ಹಾಕಿಕೊಳ್ಳುತ್ತಿದ್ದ. ಉದಾಹರಣೆಗೆ, ಒಮ್ಮೆ ಅವನೊಂದು ನಾಟಕದ ತಂಡ ಕಟ್ಟಿದ. ತನ್ನ ಸ್ನೇಹಿತರಲ್ಲೇ ಕೆಲವರನ್ನು ಸೇರಿಸಿಕೊಂಡು ನಾಟಕಾಭ್ಯಾಸ ಮಾಡತೊಡಗಿದ. ಮನೆಯ ಭಜನ ಮಂದಿರದ ಒಂದು ಭಾಗ ರಂಗಮಂಟಪವಾಯಿತು. ಅಲ್ಲಿ ಈ ಹುಡುಗರು ಎಲ್ಲೋ ಕೆಲವೇ ನಾಟಕಗಳನ್ನು ಆಡಿರಬಹುದು. ಅಷ್ಟರಲ್ಲಿ ನರೇಂದ್ರನ ಸೋದರಮಾವ ಬಂದು ಪರದೆಗಿರದೆಗಳನ್ನೆಲ್ಲ ಕಿತ್ತೆಸೆದುಬಿಟ್ಟ. ಎಲ್ಲೋ ಹುಡುಗರ ಗಲಾಟೆ ಅತಿಯಾಗಿರಬೇಕು. ಬೇರೆ ಉಪಾಯಗಾಣದೆ ನರೇಂದ್ರ, ನಾಟಕದ ಹವ್ಯಾಸವನ್ನು ಅಲ್ಲಿಗೇ ಬಿಟ್ಟ. ಈಗ ಮನೆಯ ಅಂಗಳದಲ್ಲೇ ಒಂದು ವ್ಯಾಯಾಮಶಾಲೆ ಸ್ಥಾಪಿಸಿದ. ಸ್ನೇಹಿತರೆಲ್ಲ ಸೇರಿ ಅಂಗಸಾಧನೆ ಶುರುಮಾಡಿದರು. ಇದು ಎಷ್ಟೋ ದಿನ ಚೆನ್ನಾಗಿಯೇ ನಡೆದುಕೊಂಡು ಬಂತು. ಹುಡುಗರ ಗಲಾಟೆ ಮನೆಯ ಹೊರಗಡೆಯೇ ಆದ್ದರಿಂದ ಸೋದರಮಾವ ಸುಮ್ಮನಿದ್ದ. ಆದರೆ ಈ ಮಧ್ಯೆ ಒಂದು ಅಪಘಾತ ಸಂಭವಿಸಿ ಒಬ್ಬ ಹುಡುಗ ಕೈಮೂಳೆ ಮುರಿದುಕೊಂಡ. ಇದನ್ನೇ ಕಾಯುತ್ತಿದ್ದವನಂತೆ ನರೇಂದ್ರನ ಸೋದರಮಾವ ಮತ್ತೆ ಬಂದ; ಉಪಕರಣಗಳನ್ನೆಲ್ಲ ಹೊರಗೆಸೆದು ವ್ಯಾಯಾಮಶಾಲೆಯನ್ನು ನಿರ್ನಾಮ ಮಾಡಿದ. ಇವಾದ ಮೇಲೆ ನರೇಂದ್ರ ತನ್ನ ಗೆಳೆಯರೊಂದಿಗೆ ಸಮೀಪದಲ್ಲೇ ಇದ್ದ ನವಗೋಪಾಲ ಮಿತ್ರ ಎನ್ನುವವನ ಗರಡಿಮನೆಗೆ ಸೇರಿಕೊಂಡ. ಈ ಹೊಸ ಸ್ಥಳ ತುಂಬ ಅನುಕೂಲಕರವಾಗಿತ್ತು. ನರೇಂದ್ರನೂ ಅವನ ಸ್ನೇಹಿತರೂ ಉತ್ಸಾಹ ಶ್ರದ್ಧೆಗಳಿಂದ ಅಂಗಸಾಧನೆಯಲ್ಲಿ ತೊಡಗಿದರು. ಕ್ರಮೇಣ ನರೇಂದ್ರ ಲಾಠಿ ಬೀಸುವುದರಲ್ಲಿ, ಮಲ್ಲಯುದ್ಧಗಳಲ್ಲಿ, ದೋಣಿ ನಡೆಸುವುದರಲ್ಲಿ, ಈಜುವುದರಲ್ಲಿ ಮತ್ತು ಇನ್ನೂ ಅನೇಕ ಕ್ರೀಡೆಗಳಲ್ಲಿ ಪ್ರವೀಣನಾದ. ಒಮ್ಮೆ ಪ್ರದರ್ಶನ ಪಂದ್ಯಾವಳಿಯೊಂದರಲ್ಲಿ ಅವನಿಗೆ ಮುಷ್ಟಿಯುದ್ಧದಲ್ಲಿ ಮೊದಲ ಬಹುಮಾನವಾಗಿ ಸುಂದರವಾದ ಬೆಳ್ಳಿಯ ಚಿಟ್ಟೆ ದೊರಕಿತ್ತು.

ಲಾಠಿ ಬೀಸುವುದರಲ್ಲಿ ನರೇಂದ್ರನಿಗೆ ವಿಶೇಷ ಉತ್ಸಾಹ, ಆಸಕ್ತಿ. ಇದನ್ನು ಅವನು ಹಲವಾರು ಮುಸಲ್ಮಾನ ಪೈಲ್ವಾನರಿಂದ ಕಲಿತು ಚೆನ್ನಾಗಿ ಸ್ವಾಧೀನಪಡಿಸಿಕೊಂಡಿದ್ದ. ಅವನು ಮೆಟ್ರೊಪಾಲಿಟನ್ ಶಾಲೆಯಲ್ಲೇ ವಿದ್ಯಾಭ್ಯಾಸ ಮಾಡುತ್ತಿದ್ದ ಸಮಯ. ಒಂದು ದಿನ ಶಾಲೆಯಲ್ಲಿ ಬಗೆಬಗೆಯ ಕಸರತ್ತು ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಪ್ರೇಕ್ಷಕರಲ್ಲಿ ನರೇಂದ್ರನೂ ಒಬ್ಬ. ಒಂದಾದಮೇಲೊಂದು ಪಂದ್ಯಗಳು ನಡೆದುವು. ಈಗ ಲಾಠಿ ಬೀಸುವ ಪಂದ್ಯಗಳು ಪ್ರಾರಂಭವಾದುವು. ಪಂದ್ಯಗಳೇನೋ ನಡೆಯು

ತ್ತಲೇ ಇದ್ದರೂ ಅದರಲ್ಲಿ ಬಿರುಸೇ ಇರಲಿಲ್ಲ. ಇದನ್ನು ಕಂಡು ನರೇಂದ್ರನಿಗೆ ರೇಗಿತು. ಅವರೆಲ್ಲರಿಗಿಂತಲೂ ತಾನು ಎಷ್ಟೋ ಪಾಲು ಚೆನ್ನಾಗಿ ಲಾಠಿ ಬೀಸಬಲ್ಲೆ ಎಂದು ಅವನಿ ಗನ್ನಿಸಿತು. ಇದ್ದಕ್ಕಿದ್ದಂತೆ ಎದ್ದುಬಂದು ಆಖಾಡವನ್ನು ಪ್ರವೇಶಿಸಿ "ಈಗ ನನ್ನ ಜೊತೆ ಯಲ್ಲಿ ಲಾಠಿ ಬೀಸುವುದಕ್ಕೆ ಯಾರು ಬರುತ್ತೀರೋ ಬನ್ನಿ!" ಎಂದು ಕೂಗಿದ. ಆ ರಭಸಕ್ಕೆ ಹೆದರಿ ಅವನ ವಯಸ್ಸಿನ ಹುಡುಗರೆಲ್ಲ ಅಲ್ಲಲ್ಲೇ ಸುಮ್ಮನೆ ಕುಳಿತುಬಿಟ್ಟರು. ಆದರೆ ವಯಸ್ಸಿನಲ್ಲಿ ಅವನಿಗಿಂತ ಹಿರಿಯನಾದ ಒಬ್ಬ ಹುಡುಗ ಎದ್ದುಬಂದ. ಇವನೇ ಅಲ್ಲಿದ್ದವರಲ್ಲೆಲ್ಲ ಧಾಂಡಿಗ. ಸರಿ, ಈಗ ಇಬ್ಬರ ಲಾಠಿಗಳೂ ತಿರುಗಿದುವು, ಒಂದ ಕ್ಕೊಂದು ಬಡಿದುವು. ಬರಬರುತ್ತ ಹೋರಾಟ ರೋಮಾಂಚಕಾರಿಯಾಯಿತು, ಪ್ರೇಕ್ಷ ಕರ ರಕ್ತ ಬಿಸಿಯೇರಿತು. ಆದರೆ ಏನೇ ಆದರೂ ಗೆಲ್ಲುವುದಂತೂ ಆ ಧಾಂಡಿಗನೇ ಎಂದು ಪ್ರೇಕ್ಷಕರೆಲ್ಲ ತೀರ್ಮಾನಿಸಿಬಿಟ್ಟಿದ್ದರು. ಆದರೂ ನರೇಂದ್ರ ಚುರುಕಾಗಿ ಲಾಠಿ ಬೀಸುತ್ತ, ವೀರಾವೇಶದಿಂದ ಹೋರಾಡುವುದನ್ನು ಕಂಡು ಪ್ರೇಕ್ಷಕರೆಲ್ಲ ನರೇಂದ್ರನ ಪರವಾದರು! ಗಟ್ಟಿಯಾಗಿ ಚಪ್ಪಾಳೆ ತಟ್ಟುತ್ತ ಹುರಿದುಂಬಿಸಿದರು. ನರೇಂದ್ರ ಮಾತ್ರ ಇದಾವುದಕ್ಕೂ ಗಮನಕೊಡದೆ ಪರಾಕ್ರಮದಿಂದ ಹೋರಾಡುತ್ತಿದ್ದಾನೆ—ಇದ್ದಕ್ಕಿದ್ದಂತೆ ಹಿಂದಕ್ಕೆ ಸರಿಯುತ್ತಾನೆ, ತಕ್ಷಣ ಮುಂದಕ್ಕೆ ನುಗ್ಗುತ್ತಾನೆ, ಮರುಕ್ಷಣ ಪಕ್ಕಕ್ಕೆ ಜಿಗಿಯುತ್ತಾನೆ—ಹೀಗೆ ತುಂಬ ಚಾಕಚಕ್ಯತೆಯಿಂದ ಲಾಠಿ ಬೀಸುತ್ತಿದ್ದಾನೆ. ಎದುರಾ ಳಿಯ ಸಾಮರ್ಥ್ಯ ಕೂಡ ಕಡಿಮೆಯೇನಿರಲಿಲ್ಲ. ಬಹುಶಃ ಆತ ಸ್ವಲ್ಪ ಹೆಚ್ಚಿನ ಕೌಶಲ ದಿಂದಲೇ ಲಾಠಿ ಬೀಸುತ್ತಿದ್ದಾನೆ. ಆದರೆ ಈಗ ನರೇಂದ್ರ ತನ್ನ ಲಾಠಿಯನ್ನು ಎಷ್ಟು ಚೆನ್ನಾಗಿ ಮತ್ತು ಜೋರಾಗಿ ಬೀಸಿದನೆಂದರೆ ಎದುರಾಳಿಯ ಲಾಠಿ 'ಠಣಲ್' ಎಂದು ಎರಡು ತುಂಡಾಗಿ ಬಿತ್ತು. ನರೇಂದ್ರ ಗೆದ್ದ, ಧಾಂಡಿಗನೇ ಸೋತ! ಪ್ರೇಕ್ಷಕರೆಲ್ಲ ಸಂತೋಷದಿಂದ ಹುಚ್ಚೆದ್ದುಬಿಟ್ಟಿದ್ದಾರೆ!

ನಾವು ಮೊದಲಿನಿಂದಲೂ ನೋಡಿದಂತೆ, ಸುಮ್ಮನೆ ಕುಳಿತಿರುವುದು ಎಂದ ರಾಗದು ನರೇಂದ್ರನಿಗೆ; ಏನನ್ನಾದರೂ ಮಾಡುತ್ತಲೇ ಇರಬೇಕು. ಆದ್ದರಿಂದಲೇ ತನ್ನ ಸಮಯುವನ್ನು ಸದಾ ಚಟುವಟಿಕೆಯಿಂದ ಕಳೆಯಲು ಹಲವಾರು ವಿದ್ಯೆಗಳನ್ನು ಕಲಿ ತಿದ್ದ. ಅವನಿಗೆ ಮಾಯಾಲಾಂಧ್ರದ (ಸ್ಲೈಡ್ ಪ್ರೊಜೆಕ್ಟರ್) ಮೂಲಕ ಗೋಡೆಯ ಮೇಲೆ ಚಿತ್ರಗಳನ್ನು ಬಿಡುವುದಕ್ಕೂ ಬರುತ್ತಿತ್ತು. ಅಲ್ಲದೆ ಅವನ ತಂದೆ ಆತನಿಗೆ ಸಣ್ಣ ಕುದುರೆಯೊಂದನ್ನು ತೆಗೆಸಿಕೊಟ್ಟಿದ್ದ. ಇದರ ಮೇಲೆ ಸವಾರಿ ಮಾಡುವುದೆಂದರೆ ಅವನಿಗೆ ಬಹಳ ಪ್ರಿಯವಾದ ಮನರಂಜನೆ. ಇದರಲ್ಲಿ ಸಾಹಸ ಬೇರೆ ಇದೆಯಲ್ಲವೆ? ಕ್ರಮೇಣ ಆತ ಕುದುರೆಸವಾರಿಯಲ್ಲೂ ನಿಸ್ಸೀಮನಾದ.

ಇಷ್ಟೇ ಅಲ್ಲ ನರೇಂದ್ರನ ಸಾಹಸಗಳು. ಆ ದಿನಗಳಲ್ಲಿ ಕಲ್ಕತ್ತದ ರಸ್ತೆಗಳಲ್ಲಿ ಅನಿಲದ ದೀಪಗಳನ್ನು ಉರಿಸುತ್ತಿದ್ದರು. ಈ ಅನಿಲದ ಉತ್ಪಾದನೆಗಾಗಿ ದೊಡ್ಡ ಸ್ಥಾವರ ಗಳಿದ್ದುವು. ತಾನೂ ಇಂತಹ ಆಟದ ಸ್ಥಾವರವೊಂದನ್ನು ನಿರ್ಮಿಸಿದ್ದ ನರೇಂದ್ರ. ಅದರಲ್ಲಿ ಒಣಹುಲ್ಲು, ಕಸಕಡ್ಡಿಗಳನ್ನು ಉರಿಸಿ ವಿಚಿತ್ರ ಬಣ್ಣದ ಹೊಗೆ ಬರಿಸುತ್ತಿದ್ದ. ಇದಲ್ಲದೆ ಆಟದ ರೈಲುಬಂಡಿ ಮತ್ತು ಇನ್ನೆಷ್ಟೆಷ್ಟೋ ತರಹದ ಯಂತ್ರೋಪಕರಣ ಗಳನ್ನೆಲ್ಲ ಮಾಡಿ ಸ್ನೇಹಿತರನ್ನು ರಂಜಿಸುತ್ತಿದ್ದ.

ಈಗ ನರೇಂದ್ರನಿಗೆ ಇನ್ನೊಂದು ಆಲೋಚನೆ ಬಂದುಬಿಟ್ಟಿದೆ—ಚೆನ್ನಾಗಿ ಅಡಿಗೆ ಮಾಡುವುದನ್ನು ಕಲಿಯಬೇಕು ಎಂದು. ಆದರೆ ಅಡಿಗೆಮನೆಯೊಳಗೆ ಇವನ

ಗಲಾಟೆಗೆಲ್ಲ ಪ್ರವೇಶವಿಲ್ಲ. ಆದ್ದರಿಂದ ಹೊರಗಡೆಯೇ ಒಂದು ಜಾಗ ಮಾಡಿಕೊಂಡು, ಒಲೆ-ಗುಂಡುಕಲ್ಲು ಹೂಡಬೇಕು, ಅಡಿಗೆ ಮಾಡಬೇಕು. ಅಕ್ಕಿ ಬೇಳೆಯಿಂದ ಹಿಡಿದು ತರಕಾರಿ ಸಾಸಿವೆ ಉಪ್ಪು ಎಣ್ಣೆ ಮೊದಲಾದ ಎಲ್ಲ ಸಾಮಾನುಗಳೂ ಸ್ವಂತದ್ದೇ ಆಗಬೇಕು ಎನ್ನುವುದು ಅವನಿಚ್ಛೆ. ಸ್ನೇಹಿತರನ್ನೆಲ್ಲ ಸೇರಿಸಿ ತನ್ನ ಆಲೋಚನೆಯನ್ನು ತಿಳಿಸಿದ. ಎಲ್ಲರೂ ಸಂತೋಷದಿಂದ ಒಪ್ಪಿಕೊಂಡರು. ರುಚಿಕರವಾದ ಅಡಿಗೆ ಮಾಡಿ 'ಊಟ ಮಾಡುವ ಆಟ' ಆಡುವುದೆಂದರೆ ಯಾರಿಗೆ ತಾನೆ ಇಷ್ಟವಿಲ್ಲ? ಆಗ ನರೇಂದ್ರ ಹೇಳಿದ: "ನೋಡ್ರಪ್ಪ, ಎಲ್ಲರೂ ಸ್ವಲ್ಪಸ್ವಲ್ಪ ವಂತಿಗೆ ಹಾಕಬೇಕಾಗುತ್ತೆ. ಆದರೆ ಹೆಚ್ಚಿನ ಭಾರವನ್ನೆಲ್ಲ ನಾನೇ ವಹಿಸಿಕೊಳ್ಳುತ್ತೇನೆ." ಹುಡುಗರು ಅದಕ್ಕೂ ಒಪ್ಪಿದರು. ವಂತಿಗೆ ಸಂಗ್ರಹವಾಯಿತು. ಒಲೆ ಹೂಡಿಯೂ ಆಯಿತು. ಸಾಮಾನುಗಳನ್ನು ತಂದದ್ದೂ ಆಯಿತು. ಈಗ ಅಡಿಗೆ ಮಾಡಬೇಕು. ಆದರೆ ಏನಡಿಗೆ ಮಾಡುವುದು? ಖಿಚಡಿ (ಒಂದು ಬಗೆಯ ತೊವ್ವೆ-ಅನ್ನ) ಹಾಗೂ ಒಂದೆರಡು ಪಲ್ಯಗಳನ್ನು ಮಾಡುವುದು ಎಂದು ತೀರ್ಮಾನಿಸಿದರು. ನರೇಂದ್ರ ಇದನ್ನೆಲ್ಲ ಮಾಡುವ ವಿಧಾನವನ್ನು ಈಗಾಗಲೇ ತಾಯಿಯಿಂದ ಕಲಿತುಕೊಂಡಿದ್ದ. ಈಗ ಎಲ್ಲರೂ ಸೇರಿ ಅಡಿಗೆಗೆ ಕೈಹಚ್ಚಿದರು. ನರೇಂದ್ರನೇ ಮುಖ್ಯ ಬಾಣಸಿಗ. ಉಳಿದವರೆಲ್ಲ ಅವನಿಗೆ ತೈನಾತಿಗಳು. ಅಂತೂ ಅಡಿಗೆ ತಯಾರಾಯಿತು. ಎಲ್ಲರೂ ಅತ್ಯುತ್ಸಾಹದಿಂದ ಎಲೆಗೆ ಬಡಿಸಿಕೊಂಡರು. ಆದರೆ ಬಾಯಿಗಿಟ್ಟುಕೊಂಡರೆ ಖಾರವೋ ಖಾರ! ನರೇಂದ್ರನ ಕೈ ಖಾರಮುಂದು; ಪಲ್ಯಗಳಿಗೆ ಹಸಿರು ಮೆಣಸಿನಕಾಯಿಯನ್ನು ಧಾರಾಳವಾಗಿಯೇ ಹಾಕಿಬಿಟ್ಟಿದ್ದ. ಖಿಚಡಿಗೆ ಕೂಡ ಖಾರ ಹೆಚ್ಚೇ. ಆದರೂ ಅಡಿಗೆ ತುಂಬ ರುಚಿಯಾಗಿಯೇ ಇತ್ತು. ನರೇಂದ್ರನಿಗೇನೋ ಖಾರವೇ ಇಷ್ಟ; ಸರಿಯಾಗಿಯೇ ಊಟ ಮಾಡಿದ. ಆದರೆ ಉಳಿದವರೆಲ್ಲ ಕಣ್ಣು-ಮೂಗುಗಳನ್ನು ಆಗಾಗ ಒರೆಸಿಕೊಳ್ಳುತ್ತ ಊಟ ಮಾಡಿದರು; ಆದರೂ 'ಚೆನ್ನಾಗಿದೆ' ಅಂತಲೇ ಹೇಳಿದರು. ಕೆಲವೇ ದಿನಗಳಲ್ಲಿ ಎಲ್ಲರೂ ಅಡಿಗೆ ಮಾಡುವುದನ್ನು ಕಲಿತರು. ಈ ಪಾಕಶಾಸ್ತ್ರನಿಪುಣರೆಲ್ಲ ಸೇರಿ ಬಹಳ ದಿನಗಳವರೆಗೆ ಈ ಆಟವನ್ನು ಮುಂದುವರಿಸಿ ಕೊಂಡು ಬಂದರು. ಎಷ್ಟಾದರೂ ರುಚಿಕರವಾದ ಆಟವಲ್ಲವೆ?

ನರೇಂದ್ರ ತನ್ನ ಸುತ್ತಮುತ್ತಲ ಮನೆಯವರೊಂದಿಗೆ ಒಂದಲ್ಲ ಒಂದು ರೀತಿಯ ಸಂಪರ್ಕವಿಟ್ಟುಕೊಂಡಿದ್ದ. ಅವರು ಬಡವರಾಗಿರಬಹುದು, ಶ್ರೀಮಂತರಾಗಿರಬಹುದು, ಯಾವ ಜಾತಿಯವರಾದರೂ ಆಗಿರಬಹುದು—ಅವರೆಲ್ಲರ ಜೊತೆಯಲ್ಲೂ ಇವನು ಸ್ನೇಹ ಬೆಳೆಸಿದ್ದ. ಅವರೂ ಕೂಡ ನರೇಂದ್ರನನ್ನು ತಮ್ಮವನು ಎಂದೇ ಭಾವಿಸಿ ವಿಶ್ವಾಸ ವಿಟ್ಟಿದ್ದರು. ತನ್ನ ಸ್ನೇಹಿತರಲ್ಲಿ ಯಾರಾದರೂ ಕಷ್ಟದಲ್ಲಿರುವುದನ್ನು ಕಂಡರೆ ತಕ್ಷಣ ಅವನ ಹತ್ತಿರ ಓಡುತ್ತಿದ್ದ, ಅವನಿಗೆ ಸಹಾಯ ಮಾಡುತ್ತಿದ್ದ, ಸಮಾಧಾನ ಹೇಳುತ್ತಿದ್ದ. ಎಲ್ಲರೂ ಯಾವಾಗಲೂ ಖುಷಿಯಿಂದಿರಬೇಕು ಎನ್ನುವುದೇ ನರೇಂದ್ರನ ಆಸೆ. ನೆರೆ ಹೊರೆಯ ಮನೆಯವರನ್ನೆಲ್ಲ ದೊಡ್ಡವರು-ಚಿಕ್ಕವರು ಎನ್ನದೆ ತನ್ನ ಬಗೆಬಗೆಯ ತಮಾಷೆಗಳಿಂದ ನಗಿಸಿ ಖುಷಿಯಾಗಿಡುತ್ತಿದ್ದ. ತನ್ನ ಮುದ್ದಾದ ರೂಪ, ಮಧುರವಾದ ಕಂಠಸ್ವರ, ಹಾಸ್ಯಮಯ ಸ್ವಭಾವ, ಹಿತವಾದ ನಡವಳಿಕೆ—ಇವುಗಳಿಂದಾಗಿ ಅವನು ಪ್ರತಿಯೊಬ್ಬರಿಗೂ ಪ್ರಿಯನಾಗಿದ್ದ. ಎಲ್ಲರಿಗೂ ಅವನು ಬೇಕು. ಅವನ ಉತ್ಸಾಹ ಪೂರ್ಣ ವ್ಯಕ್ತಿತ್ವ ಸುತ್ತಮುತ್ತಲ ಜನರಿಗೆಲ್ಲ ನಿರಂತರ ನವಚೇತನವನ್ನು ನೀಡುತ್ತಿತ್ತು ಎಂದರೆ ಅತಿಶಯೋಕ್ತಿಯಲ್ಲ. ಅಂತೆಯೇ ಅವನ ಮನೆಮಂದಿಯೂ ಕೂಡ ಅವನನ್ನು

ವಿಶೇಷವಾಗಿ ಪ್ರೀತಿಸುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ನರೇಂದ್ರ ಕಥೆ ಹೇಳುವುದರಲ್ಲೂ ನಿಸ್ಸೀಮ. ಆದ್ದರಿಂದ ರಾತ್ರಿ ಊಟವಾದ ಬಳಿಕ ಅವನ ಇಬ್ಬರು ತಮ್ಮಂದಿರು ಅವನನ್ನು "ಕಥೆ ಹೇಳು" ಎಂದು ಕಾಡುತ್ತಿದ್ದರು. ನರೇಂದ್ರನ ನೆನಪಿನ ಚೀಲದಲ್ಲಿ ತುಂಬ ಕಥೆಗಳಿದ್ದುವು—ಅವನ ತಾಯಿತಂದೆ ಅಜ್ಜಿ ತಾತ ಇವರೆಲ್ಲ ಹೇಳಿದ್ದ ಕಥೆಗಳು. ಈ ಮಕ್ಕಳು ಪೀಡಿಸಿದಾಗಲೆಲ್ಲ ಒಂದೊಂದೇ ಕಥೆಯನ್ನು ಹೊರತೆಗೆದು ತುಂಬ ರಸವತ್ತಾಗಿ ಹೇಳುತ್ತಿದ್ದ.

ನರೇಂದ್ರನಿಗೆ ಬೆರಳ ನೆರಳಾಟ (Hand shadow play) ಕೂಡ ಗೊತ್ತಿತ್ತು. ಅದನ್ನು ಮಾಡಿ ತೋರಿಸುವಂತೆ ತಮ್ಮಂದಿರು ಆಗಾಗ ಅವನನ್ನು ಪೀಡಿಸುವುದಿತ್ತು. ನರೇಂದ್ರ ಅದಕ್ಕೊಪ್ಪಿ ಒಂದು ಎತ್ತರದ ಪೀಠದ ಮೇಲೆ ದೀಪ ಹಚ್ಚಿ ಇಟ್ಟುಕೊಳ್ಳುತ್ತಿದ್ದ. ಆ ದೀಪದ ಮುಂದೆ ತನ್ನ ಹತ್ತೂ ಬೆರಳುಗಳನ್ನು ತಿರಿಚಿ-ಮುರುಚಿ, ಮಡಿಸಿ-ಬಿಡಿಸಿ ಗೋಡೆಯ ಮೇಲೆ ನಾನಾ ಆಕೃತಿಗಳು ಬೀಳುವಂತೆ ಮಾಡುತ್ತಿದ್ದ. ಹಾರುತ್ತಿರುವ ಬಾವಲಿ, ಓಡುತ್ತಿರುವ ಕುದುರೆ—ಇವನ್ನೆಲ್ಲ ತೋರಿಸುತ್ತಿದ್ದ. ಹಾಗೆಯೇ ದುರ್ಗೆ ಲಕ್ಷ್ಮಿ ಸರಸ್ವತಿ ಕಾರ್ತಿಕ ಗಣೇಶ ಇವರುಗಳನ್ನೂ ತೋರಿಸುತ್ತಿದ್ದ. ನರೇಂದ್ರನ ಕೈಚಳಕ ಅದ್ಭುತವಾದದ್ದೇ ಸರಿ. ಆದರೆ ನೋಡುತ್ತ ಕುಳಿತ ಚಿಕ್ಕಚಿಕ್ಕ ಮಕ್ಕಳು ಮಾತ್ರ ಆ ಆಕೃತಿಗಳನ್ನು ಗುರುತು ಹಿಡಿಯಲು ತಮ್ಮ ಊಹಾಶಕ್ತಿಯನ್ನು ಸ್ವಲ್ಪ ಹೆಚ್ಚಾಗಿಯೇ ಉಪಯೋಗಿಸಿಕೊಳ್ಳಬೇಕಾಗಿತ್ತು!

ನರೇಂದ್ರ ತನ್ನ ಸ್ನೇಹಿತರನ್ನು ಖುಷಿಪಡಿಸಲು ಅವರನ್ನು ಆಗಾಗ ಕಲ್ಕತ್ತದ ಉದ್ಯಾನಗಳಿಗೋ ಪ್ರದರ್ಶನಾಲಯಗಳಿಗೋ ಕರೆದೊಯ್ಯುತ್ತಿದ್ದ. ಒಂದು ಸಲ ಅವನು ಅವರನ್ನೆಲ್ಲ ಗಂಗಾನದಿಯ ಮೂಲಕ ದೋಣಿಯ ಮೇಲೆ ಪ್ರಾಣಿವನವೊಂದಕ್ಕೆ ಕರೆದುಕೊಂಡು ಹೋಗಿದ್ದ. ಅದೊಂದು ಅತ್ಯಂತ ವೈವಿಧ್ಯಪೂರ್ಣವಾದ ವಿಶಾಲ ಉದ್ಯಾನ. ಅದನ್ನು ನೋಡಿಕೊಂಡು ಹಿಂದಿರುಗುವಾಗ ಒಬ್ಬ ಹುಡುಗನಿಗೆ ಹೊಟ್ಟೆ ತೊಳಸಿಬಂದು, ದೋಣಿಯಲ್ಲೇ ವಾಂತಿ ಮಾಡಿಕೊಂಡುಬಿಟ್ಟ. ದೋಣಿಯವರು ಕೋಪಗೊಂಡು, ತಕ್ಷಣ ಅವನ್ನೆಲ್ಲ ತೆಗೆದು ಶುಚಿ ಮಾಡುವಂತೆ ಹುಡುಗರಿಗೆ ಹೇಳಿದರು. ಆದರೆ ಹುಡುಗರು "ನಾವೆಲ್ಲ ಆ ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲ. ಬದಲಾಗಿ ನಿಮಗೆ ಎರಡರಷ್ಟು ಹಣ ಕೊಡುತ್ತೇವೆ. ನೀವೇ ಯಾರ ಕೈಲಾದರೂ ಮಾಡಿಸಿಕೊಳ್ಳಿ" ಎಂದರು. ಎಷ್ಟಾದರೂ ಚಿಕ್ಕ ಹುಡುಗರಲ್ಲವೆ ಎಂಬ ಕನಿಕರದಿಂದ, ಅಥವಾ ಅವರು ಎರಡರಷ್ಟು ಬಾಡಿಗೆ ಕೊಡಲು ಮುಂದಾದುದರಿಂದಲಾದರೂ ದೋಣಿಯವರು ಇದಕ್ಕೆ ಒಪ್ಪಿಕೊಳ್ಳಬಹುದಾಗಿತ್ತು. ಆದರೆ ಅವರು ಒಪ್ಪಲೇ ಇಲ್ಲ. ಅಂತೂ ಅದೇ ಸ್ಥಿತಿಯಲ್ಲಿ ದೋಣಿ ದಡದ ಹತ್ತಿರ ಬಂದು ನಿಂತಿತು. ಆದರೆ ಅಂಬಿಗರು ಹುಡುಗರನ್ನು ದಡಕ್ಕೆ ಇಳಿಯಲು ಬಿಡದೆ, "ಮೊದಲು ದೋಣಿಯನ್ನು ಶುಚಿಮಾಡಿ, ಆಮೇಲೆ ಇಳಿಯಿರಿ" ಎಂದು ಗದರಿಸುತ್ತ ಅಡ್ಡಗಟ್ಟಿ ನಿಂತರು. ಹುಡುಗರು ಕೂಡ ತಮ್ಮಿಂದ ಅದೆಲ್ಲ ಸಾಧ್ಯವೇ ಇಲ್ಲ ಎಂದು ವಾದಿಸುತ್ತಿದ್ದರು. ಇತ್ತ ನರೇಂದ್ರ ಯೋಚಿಸುತ್ತಿದ್ದ, ಏನು ಮಾಡುವುದೀಗ—ಎಂದು. ಹಾಗೆ ನೋಡಿದರೆ ಅವನೇ ಎಲ್ಲರಿಗಿಂತ ಚಿಕ್ಕವನು. ಆದರೂ ಅವನು ಕಂಗಾಲಾಗದೆ ಒಂದು ಉಪಾಯ ಹುಡುಕುತ್ತಿದ್ದ. ಅಷ್ಟೊತ್ತಿಗೆ ಇಬ್ಬರು ಆಂಗ್ಲ ಸೈನಿಕರು ದಡದ ಮೇಲೆ ಅಡ್ಡಾಡುತ್ತಿರುವುದು ಅವನ ಕಣ್ಣಿಗೆ ಬಿತ್ತು. ತಕ್ಷಣ ಅವನಿಗೊಂದು ಆಲೋಚನೆ ಹೊಳೆಯಿತು—'ಈ ಸೈನಿಕರ

ಸಹಾಯವನ್ನೇಕೆ ಪಡೆಯಬಾರದು ?' ಎಂದು. ಈಗ, ಹುಡುಗರೆಲ್ಲ ಓಡಿಹೋಗದಿರ ಲೆಂದು ಅಂಬಿಗರು ದೋಣಿಯನ್ನು ದಡದಿಂದ ದೂರಕ್ಕೆ ತೆಗೆದುಕೊಂಡು ಹೋಗ ಲಾರಂಭಿಸಿದ್ದರು. ನರೇಂದ್ರ ಈಗ ಸೈನಿಕರನ್ನು ಮಾತನಾಡಿಸಲೇ ಬೇಕಾಗಿದೆ. ಆದ್ದರಿಂದ ಅವನೀಗ ಕ್ಷಣಕಾಲವೂ ತಡಮಾಡದೆ ದೋಣಿಯಿಂದ ದಡಕ್ಕೆ ಜೋರಾಗಿ ಜಿಗಿದ. ಸ್ವಲ್ಪ ಹೆಚ್ಚುಕಡಿಮೆಯಾಗಿಬಿಟ್ಟಿದ್ದರೂ ಅವನು ನೀರೊಳಗೆ ಬಿದ್ದುಬಿಡುತ್ತಿದ್ದ. ಆದರೆ ಅವನಲ್ಲಿ ಹಟ ಹುಟ್ಟಿಬಿಟ್ಟಿತ್ತು, ಈ ದೋಣಿಯವರಿಗೆ ಪಾಠ ಕಲಿಸಲೇಬೇಕು ಎಂದು. ಆದ್ದರಿಂದ ಹಾರಿದ ರಭಸಕ್ಕೆ ಅವನು ದಡದ ಮೇಲೇ ಬಿದ್ದ. ಕೂಡಲೇ ಎದ್ದು ಆ ಸೈನಿಕರ ಬಳಿಗೆ ಓಡಿದ; ತನ್ನ ಮುರುಕಲು ಇಂಗ್ಲಿಷಿನಲ್ಲೇ ನಡೆದ ವಿಷಯವನ್ನೆಲ್ಲ ಹೇಳಿದ. ಅವನು ಹೇಳಿದ್ದನ್ನು ಆ ಸಿಪಾಯಿಗಳು ಇನ್ನೂ ಅರ್ಥಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿರುವಾಗಲೇ ತನ್ನ ಪುಟ್ಟ ಕೈಯಿಂದ ಅವರಲ್ಲೊಬ್ಬನ ಕೈಯನ್ನು ಹಿಡಿದುಕೊಂಡು ಇತ್ತ ಕರೆದುಕೊಂಡು ಬಂದ. ಅವರಿಗೆ ಅರ್ಥವಾಯಿತು—ಹುಡುಗ ರಿಗೆ ಆ ಅಂಬಿಗರಿಂದ ಏನೋ ಕಷ್ಟವಾಗಿರಬೇಕು ಎಂದು. ಆದ್ದರಿಂದ ಅವರು ನರೇಂದ್ರ ನಿಗೆ, "ಆಗಲಪ್ಪ ಆಗಲಿ, ಏನೂ ಹೆದರಿಕೊಳ್ಳಬೇಡ" ಎಂದು ಧೈರ್ಯ ಹೇಳಿದರು. ಬಳಿಕ ಇನ್ನಷ್ಟು ಹತ್ತಿರ ಬಂದು, ತಮ್ಮ ಸೈನಿಕಸಹಜವಾದ ಗಡಸುದನಿಯಲ್ಲಿ ಗುಡುಗಿ ದರು: "ಏಯ್! ಯಾರೋ ಅದು ? ಆ ಹುಡುಗರನ್ನು ಈಗಲೇ ಬಿಟ್ಟರೆ ಸರಿ ಹೋಯಿತು; ಇಲ್ಲದೆ ಹೋದರೆ ನಿಮ್ಮನ್ನು ಶೂಟ್ ಮಾಡಿಬಿಡುತ್ತೇವೆ ನೋಡಿ ಕೊಳ್ಳಿ!" ಆ ಅಂಬಿಗರಿಗೋ ಬಿಳಿಯರನ್ನು ಕಂಡರೇ ಭಯ. ಅದರಲ್ಲೂ ಇವರು ಸಿಪಾಯಿಗಳು. ಅಲ್ಲದೆ ಅವರು ಅರ್ಧ ಇಂಗ್ಲಿಷ್ ಅರ್ಧ ಹಿಂದಿ ಬೆರೆಸಿ ಗಡಸುದನಿ ಯಲ್ಲಿ ಕೂಗಿದಾಗ ಅದು ಇನ್ನಷ್ಟು ಭಯಂಕರವಾಗಿತ್ತು. ಅಂಬಿಗರು ಹೆದರಿ, ಹಲ್ಲು ಕಿರಿಯುತ್ತ "ಆ... ಆಗಲಿ ಸಾರ್, ಈಗಲೇ ಬಂದ್‌ಬಿಟ್ವಿ ಸಾರ್" ಎಂದರು. ಸರಿ, ಒಂದೇ ನಿಮಿಷದಲ್ಲಿ ದೋಣಿ ದಡಸೇರಿತು. ಸೈನಿಕರು ತಮ್ಮ ಕೆಂಗಣ್ಣು ತೋರಿಸುತ್ತ ಅಂಬಿಗರನ್ನೇ ದುರುಗುಟ್ಟಿಕೊಂಡು ನೋಡಿದಾಗ ಅವರ ಅವಸ್ಥೆ ಬೇಡ! ಅಂತೂ ಹುಡುಗರೆಲ್ಲ ಸುರಕ್ಷಿತವಾಗಿ ದಡ ಸೇರಿದರು. ಅಂಬಿಗರಿಗೆ ಮಾತ್ರ ಎರಡರಷ್ಟು ಬಾಡಿಗೆ ಬರುವುದೂ ತಪ್ಪಿಹೋಯಿತು, ವಾಂತಿಯನ್ನು ತೆಗೆಯುವ ಕೆಲಸವೂ ಅಂಟಿ ಕೊಂಡಿತು.

ಆ ಸೈನಿಕರು ನರೇಂದ್ರನ ವ್ಯಕ್ತಿತ್ವದಿಂದ ತುಂಬ ಆಕರ್ಷಿತರಾಗಿಬಿಟ್ಟಿದ್ದರು. "ನಡೆ, ನಮ್ಮ ಜೊತೆ ನಾಟಕಕ್ಕೆ ಬಾ" ಎಂದು ಅವನನ್ನು ಕರೆದರು. ಆದರೆ ಅವನು ಸ್ನೇಹಿತರನ್ನು ಬಿಟ್ಟುಹೋಗಲು ಇಷ್ಟಪಡಲಿಲ್ಲ. ಸೈನಿಕರಿಗೆ ಧನ್ಯವಾದಗಳನ್ನರ್ಪಿಸಿ ಅವರನ್ನು ಬೀಳ್ಕೊಂಡ. ಈ ಕಡೆ ಬಂದಮೇಲೆ ಸ್ನೇಹಿತರೆಲ್ಲ ವಿಸ್ಮಯಮೂಕರಾಗಿ ಅವನನ್ನೇ ಕಣ್ಣಗಲಿಸಿಕೊಂಡು ನೋಡಲಾರಂಭಿಸಿದರು. ಅವರು ಆ ಕಡೆ ಅಂಬಿಗ ರಿಂದಲೂ ಹೆದರಿಬಿಟ್ಟಿದ್ದರು, ಈ ಕಡೆ ಸೈನಿಕರಿಂದಲೂ ಭಯಗೊಂಡಿದ್ದರು. ನರೇಂದ್ರ ಅಂತಹ ಸೈನಿಕರನ್ನೇ ಕರೆತಂದು ತಮ್ಮನ್ನು ಕಷ್ಟದ ಪರಿಸ್ಥಿತಿಯಿಂದ ಪಾರುಮಾಡಿಬಿಟ್ಟ ನಲ್ಲ! ಆ ಹುಡುಗರು ತನ್ನನ್ನೇ ಬೆಪ್ಪಾಗಿ ನೋಡುವುದನ್ನು ಕಂಡು ನರೇಂದ್ರ ಕೇಳಿದ: "ಏನು, ಏನಾಯಿತು ನಿಮಗೆಲ್ಲ!" ಆಗ ಒಬ್ಬ ಹುಡುಗ ಮೆಲ್ಲಗೆ ಚೇತರಿಸಿಕೊಂಡವ ನಂತೆ, "ಏನೋ ನರೇನ್, ಆ ಸಿಪಾಯಿಗಳ ಹತ್ತಿರ ಮಾತನಾಡುವುದಕ್ಕೆ ನಿನಗೆ ಹೇಗೆ ಸಾಧ್ಯವಾಯಿತೋ! ನೀನು ಹಾಗೆಲ್ಲ ಮಾತನಾಡಬಲ್ಲೆ ಅಂತ ಊಹಿಸುವುದಕ್ಕೂ

ಸಾಧ್ಯವಿಲ್ಲ. ಒಂದು ವೇಳೆ ಅವರು ನಮ್ಮ ಮೇಲೇ ಹಾಗೆ ಕಣ್ಣು ಬಿಟ್ಟಿದ್ದರೆ ನಮ್ಮ ಗತಿ ಏನಾಗುತ್ತಿತ್ತೋ!" ಎಂದ. ನರೇಂದ್ರ ಸುಮ್ಮನೆ ನಕ್ಕುಬಿಟ್ಟ.

ನಿಜಕ್ಕೂ ಈ ಘಟನೆಯ ಸ್ವಾರಸ್ಯವನ್ನು ನಾವು ಪೂರ್ಣವಾಗಿ ಅರಿತು ಆನಂದಿಸ ಬೇಕಾದರೆ, ಅಂದಿನ ಕಾಲದಲ್ಲಿ ಭಾರತದ ಜನಸಾಮಾನ್ಯರು ಆ ಬಿಳಿಯರನ್ನು ಅದೆಷ್ಟು ಭಯಗೌರವಗಳಿಂದ ನೋಡುತ್ತಿದ್ದರು ಎನ್ನುವುದನ್ನು ನೆನಪಿಸಿಕೊಳ್ಳಬೇಕು. ಆಗ ಮಾತ್ರ ನರೇಂದ್ರ ತೋರಿದ ಎದೆಗಾರಿಕೆಯನ್ನು ನಾವು ಮೆಚ್ಚಿ ಪ್ರಶಂಸಿಸಲು ಸಾಧ್ಯ. ಹಾಗೆಯೇ ಆ ಹುಡುಗರೆಲ್ಲ ನರೇಂದ್ರನನ್ನು ತಮ್ಮ ನಾಯಕನನ್ನಾಗಿ ಪರಿಭಾವಿಸಿದ್ದ ರಲ್ಲೂ ಆಶ್ಚರ್ಯವಿಲ್ಲ ಎನ್ನುವುದು ಅರ್ಥವಾಗುತ್ತದೆ.

ನರೇಂದ್ರನೂ ಅವನ ಸ್ನೇಹಿತರೂ ನವಗೋಪಾಲ ಮಿತ್ರನ ವ್ಯಾಯಾಮಶಾಲೆಗೆ ಸೇರಿ ಅಂಗಸಾಧನೆಯನ್ನು ಆರಂಭಿಸಿದ್ದನ್ನು ನೋಡಿದೆವು. ಅವರೆಲ್ಲ ಇನ್ನೂ ಹನ್ನೆರಡು-ಹದಿನಾಲ್ಕು ವರ್ಷದ ಹುಡುಗರಷ್ಟೆ. ಆದರೂ ಅವರ ಉತ್ಸಾಹ ಶ್ರದ್ಧೆಗಳನ್ನು ಮೆಚ್ಚಿ ಕೊಂಡ ನವಗೋಪಾಲ ತನ್ನ ವ್ಯಾಯಾಮಶಾಲೆಯ ಪಾರುಪತ್ಯವನ್ನು ಅವರ ಕೈಗೇ ಬಿಟ್ಟುಬಿಟ್ಟ. ಒಂದು ದಿನ ಈ ಹುಡುಗರೆಲ್ಲ ಸೇರಿ ಆ ವ್ಯಾಯಾಮಶಾಲೆಯ ಎದುರಿ ನಲ್ಲಿ ಒಂದು ಉಯ್ಯಾಲೆಯ ವ್ಯವಸ್ಥೆ ಮಾಡುವುದಕ್ಕಾಗಿ ಭಾರವಾದ ತೊಲೆ ಯೊಂದನ್ನು ಹಗ್ಗ-ರಾಟೆಗಳ ಸಹಾಯದಿಂದ ಎತ್ತುತ್ತಿದ್ದರು. ಇಷ್ಟು ಪುಟ್ಟ ತರಳರು ಅಂಥಾ ದೊಡ್ಡ ತೊಲೆಯನ್ನು ಎತ್ತುವ ಸಾಹಸ ಮಾಡುತ್ತಿರುವುದನ್ನು ಕಂಡು ಅಲ್ಲಿ ಜನ ಸೇರಿಬಿಟ್ಟರು. ಆ ಗುಂಪಿನಲ್ಲಿ ಒಬ್ಬ ಬ್ರಿಟಿಷ್ ನಾವಿಕನೂ ಇದ್ದ. ನರೇಂದ್ರ ಆ ನಾವಿಕನನ್ನು ನೋಡಿದ. ಆತ ಒಳ್ಳೆ ಕಟ್ಟುಮಸ್ತಾಗಿರುವುದನ್ನು ಕಂಡು ಈ ತೊಲೆ ಯನ್ನು ಎತ್ತಲು ಅವನ ಸಹಾಯವನ್ನು ಕೋರಿದ. ಅದಕ್ಕೆ ನಾವಿಕ ಸಂತೋಷದಿಂದ ಒಪ್ಪಿಕೊಂಡು ಬಂದು ಕೈಹಾಕಿದ. ಆದರೆ ದುರದೃಷ್ಟಕ್ಕೆ, ಆ ಭಾರವಾದ ತೊಲೆಯನ್ನು ಎತ್ತುವಾಗ ಒಂದು ಹಗ್ಗ ಕಿತ್ತುಹೋಗಿ ಆ ತೊಲೆ ನಾವಿಕನ ತಲೆಗೆ ಜೋರಾಗಿ ತಗು ಲಿತು. ಆತ ಪ್ರಜ್ಞೆ ತಪ್ಪಿ ಬಿದ್ದುಬಿಟ್ಟ. ಅವನು ಸತ್ತೇಹೋದನೆಂದು ಭಾವಿಸಿ ಹುಡುಗ ರೆಲ್ಲ ಹೆದರಿ ಪರಾರಿಯಾದರು. ಸುತ್ತ ನೆರೆದಿದ್ದ ಜನರೂ ಮಂಗಮಾಯ! ಕಡೆಗೆ ಅಲ್ಲಿ ಉಳಿದುಕೊಂಡಿದ್ದವರು ನರೇಂದ್ರ ಹಾಗೂ ಅವನ ಒಂದಿಬ್ಬರು ಸ್ನೇಹಿತರು ಮಾತ್ರ. ನರೇಂದ್ರ ಸ್ವಲ್ಪವೂ ತಡಮಾಡದೆ ತನ್ನ ಧೋತಿಯನ್ನೇ ಹರಿದು, ಒಂದು ತುಂಡನ್ನು ನಾವಿಕನ ಗಾಯಕ್ಕೆ ಕಟ್ಟಿದ. ಬಳಿಕ ಮುಖದ ಮೇಲೆ ತಣ್ಣೀರನ್ನು ಸಿಂಪಡಿಸಿ, ಮೆಲ್ಲನೆ ಗಾಳಿ ಬೀಸಿದ. ಮತ್ತು ವೈದ್ಯರಿಗೂ ವ್ಯಾಯಾಮಶಾಲೆಯ ಮಾಲಿಕನಾದ ನವಗೋಪಾಲ ಮಿತ್ರನಿಗೂ ಹೇಳಿಕಳಿಸಿದ. ನಾವಿಕ ಸ್ವಲ್ಪ ಚೇತರಿಸಿಕೊಂಡು ಎದ್ದು ಕುಳಿತಾಗ, ನರೇಂದ್ರ ತನ್ನ ಸ್ನೇಹಿತರ ಸಹಾಯದಿಂದ ಅವನನ್ನು ಹತ್ತಿರದಲ್ಲೇ ಇದ್ದ ಒಂದು ಶಾಲೆಯ ಕಟ್ಟಡಕ್ಕೆ ಕರೆತಂದ. ಒಂದು ವಾರದ ಕಾಲ ಸೇವೆ-ಶುಶ್ರೂಷೆಗಳನ್ನು ಮಾಡಿದಮೇಲೆ ಆತ ಎಂದಿನಂತಾದ. ಅನಂತರ ನರೇಂದ್ರ ತನ್ನ ಎಲ್ಲ ಸ್ನೇಹಿತರಿಂದಲೂ ವಂತಿಗೆ ವಸೂಲು ಮಾಡಿ ಒಂದಿಷ್ಟು ಹಣವನ್ನು ಸೇರಿಸಿ, ನಾವಿಕನಿಗೆ ಕೊಟ್ಟು ಆತನ ಸಹಾಯ-ಸಹಕಾರಗಳಿಗಾಗಿ ಕೃತಜ್ಞತೆಯನ್ನರ್ಪಿಸಿ ಕಳಿಸಿಕೊಟ್ಟ.

ಇಲ್ಲಿ, ತನ್ನ ಸಹಾಯಕ್ಕೆ ಒದಗಿಬಂದ ಆ ಮನುಷ್ಯ ಕಷ್ಟಕ್ಕೆ ಗುರಿಯಾದಾಗ ಅವನ ಕಷ್ಟ ಪರಿಹಾರವಾಗುವವರೆಗೂ ಅವನ ಜೊತೆಯಲ್ಲೇ ಇದ್ದು ಉಪಚರಿಸಿದ ನರೇಂದ್ರನ ಸೇವಾಪರತೆ ಹಾಗೂ ತ್ಯಾಗಬುದ್ಧಿ, ಧೈರ್ಯ-ಔದಾರ್ಯಗಳು ಭಾವೀ

ಮಹಾಪುರುಷನ ಪೂರ್ವಸೂಚಿಗಳು.

ಇನ್ನೊಂದು ಸಂದರ್ಭ. ಒಂದು ನಾಟಕ ನಡೆಯುತ್ತಿದೆ; ಬಹಳ ಜನ ಕುಳಿತು ಕೊಂಡು ತುಂಬ ಆಸಕ್ತಿಯಿಂದ ನೋಡುತ್ತಿದ್ದಾರೆ. ನರೇಂದ್ರನೂ ಪ್ರೇಕ್ಷಕರಲ್ಲೊಬ್ಬ. ನಾಟಕ ಭರದಿಂದ ಸಾಗಿದೆ. ಈ ಹೊತ್ತಿಗೆ ಇದ್ದಕ್ಕಿದ್ದಂತೆ ನ್ಯಾಯಾಲಯದ ಒಬ್ಬ ಅಮೀನ ನಾಟಕದ ಮುಖ್ಯ ಪಾತ್ರಧಾರಿಯನ್ನು ದಸ್ತಗಿರಿ ಮಾಡಲು ವಾರಂಟು ಹಿಡಿದುಕೊಂಡು ಬಂದ. ಆ ವ್ಯಕ್ತಿ ರಂಗಮಂಟಪದಲ್ಲಿರುವುದನ್ನು ಕಂಡು ನೇರವಾಗಿ ಅಲ್ಲಿಗೇ ನುಗ್ಗಿಬಿಟ್ಟ! ಬಹುಶಃ ಆತ ಏನೋ ಅಪರಾಧ ಮಾಡಿರಬೇಕು; ಆದ್ದರಿಂದ ಅವನನ್ನು ದಸ್ತಗಿರಿ ಮಾಡಬೇಕಾಗಿ ಬಂದಿರಬಹುದು. ಆದರೆ ನಾಟಕ ಅಷ್ಟು ರಸವತ್ತಾಗಿ ನಡೆಯುತ್ತಿರುವಾಗ ಇವನು ಹಿಂದುಮುಂದು ನೋಡದೆ ಒಳಗೆ ನುಗ್ಗಿದ ನಲ್ಲದೆ, ಆ ಪಾತ್ರಧಾರಿಗೆ "ನಿನ್ನನ್ನು ದಸ್ತಗಿರಿ ಮಾಡಲಾಗಿದೆ" ಎಂದು ತಿಳಿಸಿದ. ಈಗ ತಾವೇನು ಮಾಡುವುದೆಂದು ತಿಳಿಯದೆ ಜನರೆಲ್ಲ ತಬ್ಬಿಬ್ಬಾದರು. ಆದರೆ ಇದ್ದಕ್ಕಿದ್ದಂತೆ ಸಭೆಯ ಮಧ್ಯದಿಂದ ಒಂದು ಧ್ವನಿ ಮೊಳಗಿತು: "ಹೋಯ್! ಬಾರಯ್ಯ ಈ ಕಡೆ! ನಾಟಕ ಮುಗಿಯುವ ತನಕ ಕಾಯುತ್ತಿರು. ಮಧ್ಯೆ ಬಂದು ಇಡೀ ಸಭೆಗೆ ತೊಂದರೆ ಕೊಡುವುದು ಯಾವ ನ್ಯಾಯ ಇದು!" ಅದೊಂದು ಕೀರಲು ಧ್ವನಿ; ಆದರೆ ಅದರ ಲ್ಲೊಂದು ಆಜ್ಞಾಪನೆ ಮಾಡುವ ಗತ್ತು ಇತ್ತು. ಯಾರದ್ದಪ್ಪಾ ಆ ಧ್ವನಿ? ಇನ್ನಾರದೂ ಅಲ್ಲ, ನಮ್ಮ ನರೇಂದ್ರನದೇ! ತಕ್ಷಣವೇ ಸಭೆಯಲ್ಲಿ ಹಲವಾರು ಧ್ವನಿಗಳು ಕೂಗಿ ಕೊಂಡುವು—"ಏಯ್! ಹೋಗಾಕಡೆ. ಯಾವನೋ ನೀನು ಸ್ಟೇಜಿನ ಮಧ್ಯೆ ಬಂದು? ಹೋಗಾಕಡೆ!" ಅಮೀನ ಕಣ್ಕಣ್ಣು ಬಿಡುತ್ತ ಕೆಳಗೆ ಬಂದ. ನಾಟಕ ಈಗ ಮುಂದುವರಿಯಿತು. ಆಗ ನರೇಂದ್ರನ ಸುತ್ತ ಕುಳಿತಿದ್ದವರೆಲ್ಲ ಅವನ ಬೆನ್ನು ತಟ್ಟಿ, "ಭೇಷ್ ಭೇಷ್! ಬಹಳ ಒಳ್ಳೆಯ ಕೆಲಸ ಮಾಡಿದೆ ಕಣೊ. ನೀನು ಹಾಗೆ ಕೂಗದೇ ಇದ್ದಿದ್ದರೆ ಎಲ್ಲ ಹಾಳಾಗಿಹೋಗುತ್ತಿತ್ತು" ಎಂದು ಅಭಿನಂದಿಸಿದರು. ನಿಜ, ಯಾರಾದ ರೊಬ್ಬರು ಧೈರ್ಯಮಾಡಿ ಪರಿಸ್ಥಿತಿಯನ್ನು ಕೈಗೆ ತೆಗೆದುಕೊಳ್ಳದೆ ಹೋದರೆ ಎಲ್ಲವೂ ಹಾಳಾಗುವ ಸಂಭವ.

ನರೇಂದ್ರನಲ್ಲಿ ಧೈರ್ಯ, ಧೈರ್ಯದೊಂದಿಗೆ ಔದಾರ್ಯ, ಔದಾರ್ಯದೊಂದಿಗೆ ಕಾರುಣ್ಯ, ಇವುಗಳ ಜೊತೆಗೆ ಸಮಯಸ್ಫೂರ್ತಿ, ದಣಿವರಿಯದ ಶಕ್ತಿ, ಹಾಸ್ಯಪ್ರವೃತ್ತಿ, ಸಾಹಸಪ್ರವೃತ್ತಿ—ಇವೆಲ್ಲ ಅವನ ಬಾಲ್ಯ-ಕೌಮಾರ್ಯಗಳಿಂದಲೇ ಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದುವು. ಇವುಗಳಿಂದಾಗಿಯೇ ಆತ ಯಾವಾಗಲೂ ತನ್ನ ಸಹಪಾಠಿಗಳ-ಸಂಗಾತಿಗಳ ಮುಂದಾಳಾಗಿಯೇ ಇರುತ್ತಿದ್ದ.

ಆದರೆ ಬೆಳೆದು ದೊಡ್ಡವನಾದಂತೆಲ್ಲ ಅವನ ಸ್ವಭಾವದಲ್ಲಿ ಒಂದು ನಿಶ್ಚಿತವಾದ ಬದಲಾವಣೆಯಾಗುತ್ತಿರುವುದನ್ನು ಕಾಣಬಹುದಾಗಿತ್ತು. ಅವನಿಗೀಗ ಸುಮಾರು ಹದಿಮೂರು-ಹದಿನಾಲ್ಕು ವರ್ಷ. ಆಗಲೇ ಅವನಿಗೆ ಬೌದ್ಧಿಕ ವಿಷಯಗಳಲ್ಲಿ, ವಿಚಾರಪರ ವಿಷಯಗಳಲ್ಲಿ ವಿಶೇಷ ಒಲವು ಮೂಡಿಬರತೊಡಗಿತ್ತು. ಈಗ ಅವನಲ್ಲಿ ಒಳ್ಳೆಯ ಪುಸ್ತಕಗಳನ್ನು, ವೃತ್ತಪತ್ರಿಕೆಗಳನ್ನು ಓದುವ ಮತ್ತು ಸಾರ್ವಜನಿಕ ಉಪನ್ಯಾಸಗಳನ್ನು ಕೇಳುವ ಇಚ್ಛೆಯುಂಟಾಗಿತ್ತು. ಅಲ್ಲದೆ ಆ ಪುಸ್ತಕಗಳ ಮತ್ತು ಉಪನ್ಯಾಸಗಳ ವಿಷಯಗಳನ್ನೆಲ್ಲ ನೆನಪಿನಲ್ಲಿಟ್ಟುಕೊಂಡು, ತನ್ನ ಸ್ನೇಹಿತರಿಗೆ ಅವುಗಳ ಸಾರಾಂಶವನ್ನು ವಿವರಿಸುತ್ತಿದ್ದ. ಜೊತೆಗೆ, ಅವನು ತನ್ನ ವಿಚಾರಶಕ್ತಿಯಿಂದ ಆ ವಿಷಯಗಳನ್ನೆಲ್ಲ ತುಲನೆ ಮಾಡಿ, ತನ್ನ ಸ್ವಂತ ವಿಮರ್ಶೆಯನ್ನು ಹೇಳುವುದನ್ನು ಕಂಡು ಅವನ ಸ್ನೇಹಿತರು ವಿಸ್ಮಯಭರಿತರಾಗುತ್ತಿದ್ದರು. ಈ ವೇಳೆಗೆ ಅವನಲ್ಲಿ ಚೆನ್ನಾಗಿ ವಾದ ಮಾಡುವ ಸಾಮರ್ಥ್ಯ ಕೂಡ ಬೆಳೆದುಬಂದಿತ್ತು. ಅವನಿಗೆ ಇದಿರಾಗಿ ವಾದಕ್ಕೆ ನಿಂತು ಗೆಲ್ಲಲು ಯಾರಿಂದಲೂ ಸಾಧ್ಯವಿರಲಿಲ್ಲ.

ಒಂದು ದಿನ, ಅವನ ಸ್ನೇಹಿತನೊಬ್ಬ ಒಳ್ಳೇ ಗವಾಯಿಗಳ ತರಹ ಹಾಡುತ್ತಿದ್ದ. ಅವನ ಹಾಡುಗಾರಿಕೆಯನ್ನು ಕೇಳಿದ ನರೇಂದ್ರ, ಅದರ ಕುರಿತಾಗಿ, ತುಂಬ ಸ್ವಾರಸ್ಯಕರವಾಗಿ ತನ್ನ ವಿಮರ್ಶೆಯನ್ನು ಹೇಳುತ್ತಾನೆ: "ಕೇವಲ ಲಯಬದ್ಧವಾಗಿ, ಶ್ರುತಿಬದ್ಧವಾಗಿ ಹಾಡಿದ ಮಾತ್ರಕ್ಕೆ ಅದು ಸಂಗೀತವೆನಿಸಲಾರದು. ಸಂಗೀತವೆನ್ನುವುದು ಒಂದು ನಿರ್ದಿಷ್ಟವಾದ ಭಾವವನ್ನು ಹೊಮ್ಮಿಸುವಂತಿರಬೇಕು. ಹಾಡನ್ನು ಸುಮ್ಮನೆ ಎಳೆದೆಳೆದು ಹಾಡುತ್ತಿದ್ದರೆ, ಅದನ್ನು ಯಾರಾದರೂ ಮೆಚ್ಚಿಕೊಂಡಾರೇನು ? ಹಾಡಿನ ಅರ್ಥ-ಭಾವಗಳು ಸ್ವಯಂ ಆ ಹಾಡುಗಾರನ ಭಾವವನ್ನು ಪ್ರಚೋದಿಸಿರಬೇಕು. ಹಾಡುಗಾರ ಪ್ರತಿಯೊಂದು ಶಬ್ದವನ್ನೂ ಸ್ಪಷ್ಟವಾಗಿ ಉಚ್ಚರಿಸಬೇಕು. ಮತ್ತು ಇವುಗಳ ಜೊತೆಗೆ, ತಾಳ ಹಾಗೂ ಶ್ರುತಿಯ ಕಡೆಗೂ ಗಮನಕೊಟ್ಟಿರಬೇಕು. ಹಾಡಿನಲ್ಲಿ ಶ್ರುತಿ-ಲಯ ಇವೆರಡೂ ಸರಿಯಾಗಿದ್ದುಬಿಟ್ಟ ಮಾತ್ರಕ್ಕೆ ಅದು ಸಂಗೀತವೆನಿಸಲಾರದು. ಗಾಯಕನಲ್ಲೇ ಹಾಡಿನ ಭಾವ ಸ್ಫುರಣೆಯಾಗದಿದ್ದಲ್ಲಿ ಅದು ಸಂಗೀತವೇ ಅಲ್ಲ." ನರೇಂದ್ರ ಇನ್ನೂ ಹುಡುಗನಾದರೂ ಅವನ ವಿಮರ್ಶಾತ್ಮಕ ಬುದ್ಧಿ ಅದೆಷ್ಟು ತೀಕ್ಷ್ಣ!

ಹಿಂದೆಯೇ ನೋಡಿದಂತೆ, ವಿಶ್ವನಾಥ ದತ್ತ ತನ್ನ ವಕೀಲಿ ವೃತ್ತಿಯ ಸಂಬಂಧವಾಗಿ ಮಧ್ಯಭಾರತ ಹಾಗೂ ಉತ್ತರಭಾರತದ ಬೇರೆಬೇರೆ ಸ್ಥಳಗಳಿಗೆ ಹೋಗಬೇಕಾಗುತ್ತಿತ್ತು. ೧೮೭೭ರಲ್ಲಿ, ಎಂದರೆ ನರೇಂದ್ರನ ಹದಿನಾಲ್ಕನೇ ವಯಸ್ಸಿನಲ್ಲಿ, ಅವನು

ಮಧ್ಯಪ್ರದೇಶದ ರಾಯಪುರಕ್ಕೆ ಹೋಗಬೇಕಾಯಿತು. ಆದರೆ ಅಲ್ಲೇ ಬಹಳ ಕಾಲ ಇರಬೇಕಾಗಿತ್ತಾದ್ದರಿಂದ ತಾನು ಹೋದ ಮೇಲೆ ಅವನು ತನ್ನ ಹೆಂಡತಿ-ಮಕ್ಕಳನ್ನೂ ಅಲ್ಲಿಗೇ ಕರೆಯಿಸಿಕೊಳ್ಳಲು ವ್ಯವಸ್ಥೆಮಾಡಿದ. ಕಲ್ಕತ್ತದಿಂದ ರಾಯಪುರ ಬಹಳ ದೂರ. ಆಗಿನ್ನೂ ಅಲ್ಲಿಯವರೆಗೆ ರೈಲುದಾರಿ ಇರಲಿಲ್ಲ. ಆದ್ದರಿಂದ ಎತ್ತಿನಗಾಡಿಯಲ್ಲೇ ಪ್ರಯಾಣ ಸಾಗಬೇಕಾಗಿತ್ತು—ಹದಿನೈದು ದಿನಗಳ ಸುದೀರ್ಘ ಪ್ರಯಾಣ! ರಸ್ತೆಯಾದರೂ ಸುಗಮವಾದದ್ದೇನಲ್ಲ; ಕ್ರೂರ ಪ್ರಾಣಿಗಳಿಂದ ಕೂಡಿದ ಕಾಡುದಾರಿ. ಭುವನೇಶ್ವರೀ ದೇವಿ ಮಕ್ಕಳನ್ನೆಲ್ಲ ಕರೆದುಕೊಂಡು ರಾಯಪುರಕ್ಕೆ ಹೊರಟಳು. ನರೇಂದ್ರನೇ ಹಿರಿಯ ಗಂಡಾಳು, ಆದ್ದರಿಂದ ಅವನೇ ಅವರೆಲ್ಲರ ಮುಂದಾಳು. ಪ್ರಯಾಣದ ಜವಾಬ್ದಾರಿಯೆಲ್ಲ ಅವನದೇ. ದಾರಿಯಲ್ಲಿ ಅವನು ಬಗೆಬಗೆಯ ಕಷ್ಟಗಳಿಗೆ ಈಡಾದರೂ, ದಾರಿಯುದ್ದಕ್ಕೂ ಕಾಣಸಿಗುವ ನಯನಮನೋಹರ ವನರಾಜಿಗಳ ಸೌಂದರ್ಯವನ್ನು ನೋಡುತ್ತ ತನ್ನ ಕಷ್ಟಗಳನ್ನು ಮರೆಯುತ್ತಿದ್ದ. ಭಗವಂತ ತನ್ನ ಅಪಾರ ಶಕ್ತಿಯಿಂದ, ಅನುಪಮ ಪ್ರೇಮದಿಂದ, ಹೇಗೆ ಈ ಭೂದೇವಿಯನ್ನು ಅತ್ಯಪೂರ್ವ ವಸ್ತ್ರಾಭರಣಗಳಿಂದ ಅಲಂಕರಿಸಿ ಶೋಭೆಗೊಳಿಸಿದ್ದಾನೆ ಎನ್ನುವುದನ್ನು ಭಾವಿಸುತ್ತ ಅವನ ಹೃದಯ ಭಾವಪರವಶವಾಗಿಬಿಡುತ್ತಿತ್ತು. ಈ ಸಂದರ್ಭದಲ್ಲಿನ ಒಂದು ದಿವ್ಯ ಮಧುರ ಅನುಭವವನ್ನು ಮುಂದೆ ಅವನೇ ಬಣ್ಣಿಸುತ್ತಾನೆ:

"ನಾನು ಅಂದು ಆ ಕಾನನದ ದಾರಿಯಲ್ಲಿ ಹೋಗುತ್ತಿದ್ದಾಗ ಏನೇನು ಕಂಡೆನೋ, ಏನೇನು ಅನುಭವಿಸಿದೆನೋ ಅವೆಲ್ಲವೂ ನನ್ನ ಮನಸ್ಸಿನಲ್ಲಿ ಚಿರಮುದ್ರಿತವಾಗಿ ಉಳಿದುಕೊಂಡಿವೆ. ಒಂದು ದಿನ ನಾವು ವಿಂಧ್ಯಪರ್ವತದ ಕಣಿವೆಯೊಂದರ ಮೂಲಕ ಪ್ರಯಾಣ ಮಾಡುತ್ತಿದ್ದೆವು. ದಾರಿಯ ಅಕ್ಕಪಕ್ಕದಲ್ಲಿ ಉನ್ನತ ಪರ್ವತಶಿಖರಗಳು ಆಗಸದೆತ್ತರಕ್ಕೆ ನಿಮಿರಿ ನಿಂತಿದ್ದುವು. ಬಗೆಬಗೆಯ ಮರಗಿಡಬಳ್ಳಿಗಳು ಫಲಪುಷ್ಪಗಳ ಭಾರದಿಂದ ಬಾಗಿ ನಿಂತು ಪರ್ವತ ಶ್ರೇಣಿಯನ್ನು ಸೊಬಗುಗೊಳಿಸಿದ್ದುವು. ಚಿತ್ರವಿಚಿತ್ರ ವರ್ಣದ ಪಕ್ಷಿಗಳು ಮರದಿಂದ ಮರಕ್ಕೆ ಹಾರಾಡುತ್ತ ತಮ್ಮ ಮಧುರ ಇಂಚರಗಳಿಂದ ತುಂಬಿಬಿಟ್ಟಿದ್ದುವು. ಇವುಗಳನ್ನೆಲ್ಲ ನೋಡುತ್ತ ನೋಡುತ್ತ ನನ್ನ ಮನಸ್ಸು ಒಂದು ಅಪೂರ್ವ ಶಾಂತಿಯನ್ನು ಅನುಭವಿಸಿತು. ಮೆಲ್ಲನೆ ಸಾಗುತ್ತಿದ್ದ ನಮ್ಮ ಎತ್ತಿನ ಗಾಡಿ ಈಗ, ರಸ್ತೆಯ ಮೇಲ್ಗಡೆ ಬಹುಎತ್ತರದಲ್ಲಿ ಎರಡು ಪರ್ವತ ಶಿಖರಗಳು ಕೂಡಿಕೊಳ್ಳುವಂತಿದ್ದ ಸ್ಥಳಕ್ಕೆ ಬಂದು ತಲುಪಿತು. ಶಿಖರಗಳು ಪರಸ್ಪರ ಪ್ರೀತಿಯಿಂದಲೋ ಎಂಬಂತೆ ಒಂದು ಇನ್ನೊಂದರತ್ತ ವಾಲಿಕೊಂಡಿರುವಂತೆ ಕಾಣುತ್ತಿತ್ತು. ಆ ಶೃಂಗಾಗ್ರಗಳ ಕೆಳಭಾಗವನ್ನು ಗಮನಿಸಿದೆ—ಒಂದು ಶಿಖರದಲ್ಲಿ ಮೇಲಿನಿಂದ ಕೆಳಗಿನವರೆಗೂ ಒಂದು ದೊಡ್ಡ ಬಿರುಕು; ಆ ಬಿರುಕನ್ನೇ ಮುಚ್ಚುವಂತಹ ಒಂದು ಬೃಹದಾಕಾರದ ಜೇನುಗೂಡು ಅಲ್ಲಿ ತೂಗಾಡುತ್ತಿದೆ. ಅಸಂಖ್ಯಾತ ಜೇನ್ನೊಣಗಳ ಅದೆಷ್ಟು ವರ್ಷಗಳ ಪರಿಶ್ರಮದ ಫಲವೋ ಆ ಜೇನುಗೂಡು! ಜೇನ್ನೊಣಗಳ ರಾಜ್ಯದ ಆದಿ-ಅಂತ್ಯಗಳ ಕುರಿತಾಗಿ ಯೋಚಿಸುತ್ತಿದ್ದಂತೆ ನನ್ನ ಮನಸ್ಸು ತ್ರಿಭುವನಗಳ ಒಡೆಯನಾದ ಭಗವಂತನ ಅದ್ಭುತ ಸೃಷ್ಟಿರಚನಾ ಕೌಶಲವನ್ನು ಭಾವಿಸುತ್ತ ಪರವಶವಾಯಿತು; ನಾನು ಬಾಹ್ಯಪ್ರಜ್ಞೆ ತಪ್ಪಿ ಹಾಗೆಯೇ ಕುಳಿತುಬಿಟ್ಟೆ. ಆ ಸ್ಥಿತಿಯಲ್ಲಿ ನಾನು ಎಷ್ಟು ಹೊತ್ತು ಇದ್ದೆನೋ ನನಗೆ ತಿಳಿಯದು. ನಾನು ಪ್ರಜ್ಞೆ ತಿಳಿದೆದ್ದಾಗ ನಾವು ಆ ಜಾಗದಿಂದ ಎಷ್ಟೋ ದೂರ ಮುಂದಕ್ಕೆ ಹೊರಟುಹೋಗಿದ್ದೆವು." ನರೇಂದ್ರ ಇಷ್ಟು ಗಾಢವಾಗಿ ಭಾವದಲ್ಲಿ

ಮುಳುಗಿ ಮೈಮರೆತದ್ದು ಬಹುಶಃ ಇದೇ ಮೊದಲ ಸಲ.

ಆ ದಿನಗಳಲ್ಲಿ ರಾಯಪುರದಲ್ಲಿ ಶಾಲೆ ಇರಲಿಲ್ಲ; ಆದ್ದರಿಂದ ನರೇಂದ್ರನಿಗೆ ಇಲ್ಲಿ ಶಾಲಾವಿದ್ಯಾಭ್ಯಾಸಕ್ಕೆ ಅವಕಾಶವಾಗಲಿಲ್ಲ. ಆದರೆ ಅವನಿಗೆ ಬೌದ್ಧಿಕ ಸ್ತರದಲ್ಲಿ ತನ್ನ ತಂದೆಯೊಂದಿಗೆ ನಿಕಟ ಸಂಪರ್ಕವನ್ನು ಬೆಳೆಸಿಕೊಳ್ಳುವ ಸದವಕಾಶ ಲಭ್ಯವಾಯಿತು. ಕಲ್ಕತ್ತದಲ್ಲಿದ್ದಾಗ ಅವನು ತನ್ನ ಹೆಚ್ಚಿನ ಸಮಯವನ್ನೆಲ್ಲ ಶಾಲೆ ಅಧ್ಯಯನ ಸ್ನೇಹಿತರು ವ್ಯಾಯಾಮ ವಿಹಾರ—ಇವುಗಳಲ್ಲೇ ಕಳೆಯುತ್ತಿದ್ದ. ಆದರೆ ಈಗ ರಾಯಪುರದಲ್ಲಿ ತಂದೆಗೂ ಸಾಕಷ್ಟು ಬಿಡುವಿದೆ; ಮಗನಿಗಂತೂ ಶಾಲೆಯೂ ಇಲ್ಲ, ಸ್ನೇಹಿತರೂ ಇಲ್ಲ. ಆದ್ದರಿಂದ ತಂದೆಯ ಆತ್ಮೀಯ ಸಂಪರ್ಕಕ್ಕೆ ಬರುವುದಕ್ಕೊಂದು ಸದವಕಾಶವಾಯಿತು. ಅಲ್ಲದೆ, ವಿಶ್ವನಾಥನೇನೂ ಸಾಮಾನ್ಯನಲ್ಲ. ಆತ ಉದಾತ್ತ ಚರಿತ. ಮತ್ತು ಹಲವಾರು ವಿಷಯಗಳಲ್ಲಿ ಅವನಿಗೆ ವಿಸ್ತಾರವಾದ ಪರಿಜ್ಞಾನವಿತ್ತು. ಈಗ ಅವನು ತಾರುಣ್ಯಕ್ಕೆ ಕಾಲಿಡುತ್ತಿದ್ದ ಮಗನ ಬುದ್ಧಿಯನ್ನು ಪ್ರಚೋದಿಸುವ, ವಿಚಾರಶಕ್ತಿಯನ್ನು ಸ್ಫುರಿಸುವ ಕಾರ್ಯದಲ್ಲಿ ತೊಡಗಿದ. ಮಗನೊಂದಿಗೆ ಅವನು ಹಲವಾರು ಉನ್ನತ ವಿಚಾರಗಳ ಕುರಿತಾಗಿ ದೀರ್ಘ ಸಂಭಾಷಣೆಗಳನ್ನು ನಡೆಸುತ್ತಿದ್ದ; ವಾದವಿವಾದಗಳನ್ನು ಮಾಡುತ್ತಿದ್ದ. ಅವನು ಮಗನಿಗೆ ಸಂಪೂರ್ಣ ವಿಚಾರಸ್ವಾತಂತ್ರ್ಯವನ್ನಿತ್ತಿದ್ದ. ತನ್ನ ಅನಿಸಿಕೆ-ಭಾವನೆಗಳನ್ನೆಲ್ಲ ನಿರಾತಂಕವಾಗಿ ಮಂಡಿಸುವ ಸ್ವಾತಂತ್ರ್ಯ ಕೊಟ್ಟಿದ್ದ. ಏಕೆಂದರೆ, ವಿದ್ಯಾಭ್ಯಾಸ ಕ್ರಮದಲ್ಲಿ ಸ್ವತಂತ್ರ ಆಲೋಚನೆಗೆ, ವಿಚಾರ ಸ್ಫುರಣೆಗೆ ಅವಕಾಶ ಇರಬೇಕು, ಒಬ್ಬರ ಆಲೋಚನೆಯನ್ನು ಇನ್ನೊಬ್ಬರ ಮೇಲೆ ಹೇರುವುದು ತರವಲ್ಲ ಎನ್ನುವುದು ಆತನ ನಿಶ್ಚಿತಾಭಿಪ್ರಾಯ. ತನ್ನ ತಂದೆಯಿಂದ ನರೇಂದ್ರ ಅತ್ಯಮೂಲ್ಯವಾದ ಹಲವಾರು ವಿಚಾರಗಳನ್ನು ಕಲಿತುಕೊಂಡ. ಉದಾಹರಣೆಗೆ, ಯಾವುದೇ ವಿಷಯದಲ್ಲಾದರೂ ಅದರ ಪ್ರಾಮುಖ್ಯವಾದ ಅಂಶಗಳನ್ನು ಗ್ರಹಿಸುವ ಸಾಮರ್ಥ್ಯವನ್ನೂ, ಸತ್ಯಸಂಗತಿಯನ್ನು ವಿಶಾಲದೃಷ್ಟಿಯಿಂದ ಹಾಗೂ ಸಮಗ್ರದೃಷ್ಟಿಯಿಂದ ಕಾಣುವ ಶಕ್ತಿಯನ್ನೂ, ಯಾವುದಾದರೊಂದು ವಿಷಯದ ಕುರಿತಾಗಿ ಚರ್ಚೆ ನಡೆಸುವಾಗ ಅದರ ಮುಖ್ಯಾಂಶವನ್ನು ಬಿಟ್ಟು ಕದಲದಿರುವಂತಹ ದೃಢಚಿತ್ತತೆಯನ್ನೂ ನರೇಂದ್ರ ತನ್ನ ತಂದೆಯಿಂದ ಪಡೆದುಕೊಂಡ.

ರಾಯಪುರದಲ್ಲಿ ವಿಶ್ವನಾಥನ ಮನೆಗೆ ಎಷ್ಟೋ ಜನ ವಿದ್ವಾಂಸರು ಬರುತ್ತಿದ್ದರು. ಆಗ ಹಲವಾರು ವಿಷಯಗಳ ಮೇಲೆ ಚರ್ಚೆ ನಡೆಯುತ್ತಿತ್ತು. ನರೇಂದ್ರ ಬದಿಯಲ್ಲೇ ಕುಳಿತು ಆ ಚರ್ಚೆಗಳನ್ನು ಗಮನವಿಟ್ಟು ಕೇಳುತ್ತಿದ್ದ; ಕೆಲವೊಮ್ಮೆ ಅವನು ತನ್ನ ಸ್ವಂತ ಅಭಿಪ್ರಾಯವನ್ನೂ ವ್ಯಕ್ತಗೊಳಿಸುತ್ತಿದ್ದ. ಆಗ ಅವನ ಬುದ್ಧಿಶಕ್ತಿಯನ್ನು ಕಂಡ ಹಿರಿಯರು ಬಹಳ ಆಶ್ಚರ್ಯಪಡುತ್ತಿದ್ದರು. ಅಷ್ಟೇ ಅಲ್ಲ, ಬೌದ್ಧಿಕವಾಗಿ ಅವನನ್ನು ತಮ್ಮ ಸಮಾನಸ್ಕಂಧನೆಂಬಂತೆ ನಡೆಸಿಕೊಳ್ಳುತ್ತಿದ್ದರು. ಅದನ್ನು ಕಂಡಾಗ ವಿಶ್ವನಾಥನ ಹೃದಯ ಒಳಗೊಳಗೇ ಹಿಗ್ಗುತ್ತಿತ್ತು. ಒಮ್ಮೆ ನರೇಂದ್ರ, ಬಂಗಾಳೀ ಸಾಹಿತ್ಯದ ದೊಡ್ಡ ವಿದ್ವಾಂಸರೊಬ್ಬರೊಂದಿಗೆ ಮಾತನಾಡುತ್ತಿದ್ದ. ಆಗ ಅವನು ಸಾಂದರ್ಭಿಕವಾಗಿ ಅನೇಕ ಶ್ರೇಷ್ಠ ಬಂಗಾಳೀ ಗ್ರಂಥಗಳ ವಾಕ್ಯವಾಕ್ಯಗಳನ್ನೇ ಪುಟಪುಟಗಳನ್ನೇ ಉದ್ಧರಿಸಿ ಹೇಳಿಬಿಟ್ಟ! ಅದನ್ನು ಕಂಡು ಆ ಹಿರಿಯರು ಬೆಕ್ಕಸಬೆರಗಾಗಿ ಉದ್ಗರಿಸಿದರು, "ಮಗು, ಒಂದಲ್ಲ ಒಂದು ದಿನ ನಿನ್ನ ಕೀರ್ತಿಯನ್ನು ನಾವು ಕೇಳಲಿಕ್ಕಿದೆ." ಆ ಭವಿಷ್ಯವಾಣಿ ಮುಂದೆ

ನಿಜವಾಗುವುದನ್ನು ನಾವು ನೋಡಲಿದ್ದೇವೆ.*

ನರೇಂದ್ರನಿಗೆ ತನ್ನ ಬುದ್ಧಿಶಕ್ತಿಯ ಮೇಲೆ ವಿಶೇಷವಾದ ವಿಶ್ವಾಸ. ಇತರರೂ ತನ್ನ ಬುದ್ಧಿಮತ್ತೆಯನ್ನು ಗುರುತಿಸಿ, ತನ್ನನ್ನು ಅದಕ್ಕೆ ತಕ್ಕಂತೆ ನಡೆಸಿಕೊಳ್ಳಬೇಕೆಂಬುದು ಅವನ ನಿರೀಕ್ಷೆ. ಈ ವಿಷಯದಲ್ಲಿ ಅವನ ಆಕಾಂಕ್ಷೆ ನಿಜಕ್ಕೂ ಬಹಳ ದೊಡ್ಡದು. ತನ್ನ ಬುದ್ಧಿಶಕ್ತಿಗೆ ಸರಿಯಾದ ಮನ್ನಣೆ ಕೊಡದಿದ್ದರೆ ಆತ ಯಾರನ್ನೂ ಬಿಡುವವನಲ್ಲ. ಒಮ್ಮೆ ಅವನು ತನ್ನ ಬೌದ್ಧಿಕ ಪ್ರತಿಭೆಗೆ ತಕ್ಕ ಮನ್ನಣೆ ಕೊಡಲಿಲ್ಲವೆಂದು ತನ್ನ ತಂದೆಯ ಒಬ್ಬ ಸ್ನೇಹಿತರನ್ನೇ ತರಾಟೆಗೆ ತೆಗೆದುಕೊಂಡುಬಿಟ್ಟಿದ್ದ! ಕೊನೆಗೂ ಅವರು ತಮ್ಮ ತಪ್ಪನ್ನು ಒಪ್ಪಿಕೊಳ್ಳುವವರೆಗೆ ಬಿಡಲೇ ಇಲ್ಲ. ಆದರೆ ಅವನು ಹೀಗೆ ಹಿರಿಯರ ಮೇಲೆಲ್ಲ ರೇಗಾಡುವುದನ್ನು ವಿಶ್ವನಾಥನಂತಹ ತಂದೆ ಸಹಿಸಿಯಾನೆ? ನರೇಂದ್ರ ಹಾಗೆ ನಡೆದುಕೊಂಡಾಗಲೆಲ್ಲ ಅವನು ಕಟುವಾಗಿ ಛೀಮಾರಿ ಹಾಕುತ್ತಿದ್ದ. ಆದರೂ ತನ್ನ ಮಗನ ಸ್ವಾಭಿಮಾನದ ಕಾವನ್ನು ಕಂಡು ಮನದೊಳಗೇ ಹೆಮ್ಮೆಪಟ್ಟುಕೊಳ್ಳುತ್ತಿದ್ದ.

ನಿಜಕ್ಕೂ ರಾಯಪುರದಲ್ಲಿದ್ದ ಎರಡು ವರ್ಷಗಳ ಅವಧಿಯಲ್ಲಿ ನರೇಂದ್ರನ ಸ್ವಾಭಿಮಾನಪ್ರಜ್ಞೆ ವಿಶೇಷವಾಗಿ ಜಾಗೃತವಾಗಿಬಿಟ್ಟಿತ್ತು. ಕಲ್ಕತ್ತಕ್ಕೆ ಹಿಂದಿರುಗುವುದ ರೊಳಗೆ ಅವನು ಬೇರೆಯೇ ವ್ಯಕ್ತಿಯಾಗಿಬಿಟ್ಟಿದ್ದ. ಅವನ ಶರೀರರಚನೆಯೂ ಈಗ ಧೀರಗಂಭೀರವಾಗಿ ಕಾಣುತ್ತಿತ್ತು. ಮೊದಲಿನಿಂದಲೂ ಅವನ ಶರೀರ ಸರ್ವಾಂಗ ಸುಂದರವಾಗಿಯೇ ಇತ್ತು; ಆದರೆ ಈಗ ಅವನಿಗೆ ರಾಜಕುಮಾರನ ಕಳೆ ಬಂದುಬಿಟ್ಟಿದೆ. ಎಲ್ಲರ ಗಮನವನ್ನೂ ಸೆಳೆಯುವಂತಿತ್ತು ಅವನ ನಡಿಗೆಯ ಠೀವಿ. ಅಲ್ಲದೆ ಈಗ ಅವನು ತನ್ನ ಬುದ್ಧಿಮತ್ತೆಗೆ ಸರಿದೂಗುವಂಥವರನ್ನು ಮಾತ್ರ ಸ್ನೇಹಿತರನ್ನಾಗಿ ಸ್ವೀಕರಿಸ ಲಾರಂಭಿಸಿದ. ಆದರೆ ಅವನು ಅಹಂಕಾರಿಯಾಗಿಬಿಟ್ಟಿದ್ದನೆಂದು ಅರ್ಥವಲ್ಲ; ಅವನಲ್ಲಿ ರಕ್ತಗತವಾಗಿ ಬಂದಿದ್ದ ಔದಾರ್ಯ-ಸೌಜನ್ಯಗಳು ಹಾಗೆಯೇ ಇದ್ದುವು.

ರಾಯಪುರದಲ್ಲಿ ನರೇಂದ್ರ, ಪುರಾತನ ಭಾರತದ ಪ್ರಸಿದ್ಧ ಆಟವಾದ ಚದು ರಂಗವನ್ನು ಕರಗತ ಮಾಡಿಕೊಂಡ. ಎಂತಹ ಕಷ್ಟದ ಪಂದ್ಯಗಳಲ್ಲೂ ಅವನು ಜಯ ಶಾಲಿಯಾಗುತ್ತಿದ್ದ. ಈ ದಿನಗಳಲ್ಲೇ ಅವನು ತನ್ನ ತಂದೆಯಿಂದ ಪಾಕಶಾಸ್ತ್ರದ ರೀತಿ-ರಹಸ್ಯಗಳನ್ನೂ ಕಲಿತು ಸ್ವಾಧೀನಪಡಿಸಿಕೊಂಡ. ಮುಂದೆ ಅವನು ಸ್ವಾಮಿ ವಿವೇಕಾ ನಂದರಾದ ಮೇಲೆ ಕೆಲವು ಪಾಶ್ಚಾತ್ಯ ಶಿಷ್ಯರಿಗೂ ಆ ಅಡಿಗೆಯ ರುಚಿಯನ್ನು ತೋರಿಸಿ ದ್ದುಂಟು—ಆದರೆ ಆಗಲೂ ಸ್ವಲ್ಪ ಖಾರ ಮುಂದು. ವಿವೇಕಾನಂದರು ಯಾವಾಗಲೂ ಸ್ವಲ್ಪ ಖಾರವೇ!

ಹಿಂದೆಯೇ ನೋಡಿದಂತೆ, ವಿಶ್ವನಾಥ ದತ್ತನಿಗೆ ಸಂಗೀತದಲ್ಲಿ ವಿಶೇಷ ಅಭಿರುಚಿ; ಸ್ವತಃ ಅವನೂ ಚೆನ್ನಾಗಿ ಹಾಡಬಲ್ಲವನಾಗಿದ್ದ. ಸಹಜವಾಗಿಯೇ ಅವನ ಮನೆಯಲ್ಲಿ ಸಂಗೀತದ ಒಂದು ವಿಶೇಷ ವಾತಾವರಣ ಏರ್ಪಟ್ಟಿತ್ತು. ಇದು ಮನೆಯ ಇತರರೂ ಸಂಗೀತಾಭ್ಯಾಸ ಮಾಡಿಕೊಳ್ಳಲು ಸಹಾಯಕವಾಗಿತ್ತು. ನರೇಂದ್ರನ ಸಂಗೀತಪ್ರೇಮ ವನ್ನೂ ಗಾಯನಪ್ರತಿಭೆಗಳನ್ನೂ ಅವನ ಬಾಲ್ಯದಲ್ಲೇ ವಿಶ್ವನಾಥ ಗುರುತಿಸಿದ್ದ. ನುರಿತ ಸಂಗೀತಗಾರರಿಂದ ಶಾಸ್ತ್ರೀಯವಾಗಿ ಶಿಕ್ಷಣ ಪಡೆದ ಹೊರತು ಯಾರೂ ಆ ಕಲೆಯಲ್ಲಿ

---

*ಸ್ವಾಮಿ ವಿವೇಕಾನಂದರಿಂದ ಆಂಗ್ಲ ಹಾಗೂ ವಂಗ ಭಾಷೆಗಳಲ್ಲಿ ರಚಿತವಾದ ಹಲವಾರು ಗದ್ಯ-ಪದ್ಯ ಕೃತಿಗಳು ಸಾಹಿತ್ಯಾತ್ಮಕ ದೃಷ್ಟಿಯಿಂದಲೂ ಶ್ರೇಷ್ಠವೆನಿಸಿವೆ.

ಪ್ರವೀಣರಾಗಲು ಸಾಧ್ಯವಿಲ್ಲ ಎಂದೂ ಅವನು ಅರಿತಿದ್ದ. ಆವನೇ ಹಿಂದೆ ನರೇಂದ್ರನಿಗೆ ಸಂಗೀತದ ಪ್ರಾಥಮಿಕ ಪಾಠಗಳನ್ನು ಕಲಿಸಿದ್ದ. ಅವನು ಮಗನಿಗೆ ನಾನಾ ಬಗೆಯ ಹಾಡುಗಳನ್ನು ಹೇಳಿಕೊಟ್ಟ. ಮುಂದೆ ಕಲ್ಕತ್ತಕ್ಕೆ ಹಿಂದಿರುಗಿದಮೇಲೆ, ಆಗಿನ ಪ್ರಸಿದ್ಧ ಸಂಗೀತಗಾರರಾದ ವೇಣೀ ವಸ್ತಾದ, ಬಳಿಕ ಈತನ ಗುರು ಅಹಮದ್ ಖಾನ್—ಇವರಿಂದಲೂ ಶಾಸ್ತ್ರೀಯ ಸಂಗೀತವನ್ನು ಕಲಿಸಿದ. ಅಹಮದ್ ಖಾನನಿಂದ ನರೇಂದ್ರ ಹಲವಾರು ಹಿಂದಿ, ಉರ್ದು ಹಾಗೂ ಪಾರಸೀ ಹಾಡುಗಳನ್ನು ಕಲಿತುಕೊಂಡ. ಇವುಗಳಲ್ಲಿ ಹೆಚ್ಚಿನವು ಭಕ್ತಿಗೀತೆಗಳು. ಅಲ್ಲದೆ, ಉಜಿರ್ ಖಾನ್, ದುನ್ನಿ ಖಾನ್, ಕನ್ಯೈ ಲಾಲ್ ಢೇಂಡಿ, ಜಗನ್ನಾಥ ಮಿಶ್ರ ಎಂಬ ವಿದ್ವಾಂಸರಿಂದಲೂ ಅವನಿಗೆ ಬೇರೆಬೇರೆ ಸಮಯಗಳಲ್ಲಿ ಸಂಗೀತಪಾಠವಾಗಿತ್ತು. ಹಾಡುಗಾರಿಕೆಯಲ್ಲಲ್ಲದೆ ಅವನು ವಾದ್ಯ ಸಂಗೀತದಲ್ಲೂ ಪ್ರವೀಣನಾಗಿದ್ದ. ಪಖವಾಜ್-ತಬಲಾಗಳನ್ನೂ, ಸಿತಾರ್ ಮತ್ತು ಎಸ್ರಾಜ್ ಎನ್ನುವ ತಂತಿವಾದ್ಯಗಳನ್ನೂ ಅವನು ನುಡಿಸಬಲ್ಲವನಾಗಿದ್ದ. ಆದರೆ ಅವನ ವಿಶೇಷ ಒಲವೂ ಬಲವೂ ಹಾಡುಗಾರಿಕೆಯಲ್ಲೇ. ಆದರಲ್ಲಿ ಅವನು ತನ್ನ ಗುರುಗಳನ್ನೇ ಮೀರಿಸಿಬಿಟ್ಟ. ದೈವದತ್ತ ಕಂಠಮಾಧುರ್ಯವಿದ್ದ ಅವನನ್ನು ಆ ಗುರುಗಳು ಶ್ರೇಷ್ಠ ಮಟ್ಟದ ಗಾಯಕನನ್ನಾಗಿ ರೂಪಿಸಿದರು. ಅವನೂ ಅಷ್ಟೇ ಶ್ರದ್ಧೆಯಿಂದ ಸಂಗೀತವನ್ನು ಅಭ್ಯಾಸಮಾಡಿದ್ದ. ಗಂಟೆಗಟ್ಟಲೆ ಕಾಲ ಮೈಮರೆತು ಅಭ್ಯಾಸ ಮಾಡುತ್ತಿದ್ದ. ಆದನ್ನು ಕೇಳುವುದಕ್ಕೆಂದೇ ಅವನ ಸ್ನೇಹಿತರು ಅಲ್ಲಿ ಬಂದು ಕುಳಿತಿರುತ್ತಿದ್ದರು. ಇತರರ ವಿಷಯ ಹಾಗಿರಲಿ, ಅವನ ಮನೆಮಂದಿಗೂ ಆ ಕಂಠಮಾಧುರ್ಯವನ್ನು ಸವಿಯಲು ಅದೆಷ್ಟು ಆಸೆ! ಕೆಲವೊಮ್ಮೆ ಅವನು ತನ್ನ ತಂದೆಯ ಸಂತೋಷಕ್ಕಾಗಿ ಹಾಡುತ್ತಿದ್ದ—ಒಮ್ಮೊಮ್ಮೆ ಗಂಭೀರಭಾವದಿಂದ; ಮತ್ತೆ ಕೆಲವೊಮ್ಮೆ ಉಲ್ಲಾಸಭಾವದಿಂದ. ಬಾಲಕ ನರೇಂದ್ರ ಹಲವಾರು ವಿಷಯಗಳಲ್ಲಿ ಹಲವಾರು ವಿದ್ಯೆಗಳಲ್ಲಿ ಪ್ರವೀಣನಾಗಿದ್ದರೂ ಅವುಗಳಲ್ಲೆಲ್ಲ ಹಾಡುಗಾರಿಕೆಯೇ ಅತ್ಯಂತ ಪ್ರಮುಖವಾದದ್ದು ಎನ್ನಬಹುದು. ಏಕೆಂದರೆ ಅವನ ಗಾಯನಪ್ರತಿಭೆಯೆನ್ನುವುದು ಇತರೆಲ್ಲ ಪ್ರತಿಭೆಗಳನ್ನೂ ಮೀರಿ ಎದ್ದುಕಾಣುತ್ತಿತ್ತು.

ನಿಜಕ್ಕೂ ಆತನ ಕಂಠ ಎಷ್ಟು ಮಧುರವಾಗಿತ್ತು, ಎಷ್ಟು ಚೇತೋಹಾರಿಯಾಗಿತ್ತು ಎಂದರೆ, ಅವನು ಹಾಡೊಂದನ್ನು ಹಾಡತೊಡಗಿದನೆಂದರೆ ಆ ರಾಗದ ಅಧಿದೇವತೆಯೇ ಅಲ್ಲಿ ಮೈದಳೆದು ನಿಂತಂತೆ ಭಾಸವಾಗುತ್ತಿತ್ತು. ಅವನಿಗೆ ಭಗವಂತನನ್ನು ಆರಾಧಿಸಿ ಒಲಿಸಿಕೊಳ್ಳಲು ಸಂಗೀತವೇ ಒಂದು ಪ್ರಧಾನ ಸಾಧನವಾಯಿತು ಎನ್ನಬಹುದು. ಮುಂದೆ ದಿವ್ಯಗುರು ಶ್ರೀರಾಮಕೃಷ್ಣರೊಂದಿಗೆ ಆತನ ಪ್ರಥಮ ಸಮಾಗಮವಾದದ್ದು ಸಂಗೀತದ ಮೂಲಕವೇ.

ಸಂಗೀತದ ಜೊತೆಗೆ ನರೇಂದ್ರ ನೃತ್ಯಕಲೆಯನ್ನೂ ಅಭ್ಯಸಿಸಿದ. ಭಾರತೀಯರಾದ ನಮಗೆ ಈ ನರ್ತನಕಲೆ ಪ್ರಾಪ್ತವಾದದ್ದು ಬ್ರಹ್ಮಾದಿ ದೇವತೆಗಳಿಂದಲೇ. ಶ್ರೀಕೃಷ್ಣನೂ ನಾಟ್ಯನಿಪುಣ. ಶಿವನ ಹೆಸರೇ ನಟರಾಜ—ನಾಟ್ಯವಾಡುವವರೆಲ್ಲರ ರಾಜ! ಇಂತಹ ಈ ದೈವಿಕ ನೃತ್ಯವನ್ನು ನರೇಂದ್ರ ಕಲಿತುಕೊಂಡ. ಅಲ್ಲದೆ, ನರ್ತಿಸಿ ತೋರಿಸುತ್ತಲೂ ಇದ್ದ. ಆದನ್ನು ಕಂಡವರು ವಿಶೇಷ ಆನಂದವನ್ನನುಭವಿಸುತ್ತಿದ್ದರು. ತನ್ನ ದೃಢವಾದ ಸುಪುಷ್ಟವಾದ ಸುಂದರ ಶರೀರ, ಮತ್ತು ಅದಕ್ಕಿಂತ ಹೆಚ್ಚಾಗಿ ತನ್ನಲ್ಲಿ ಆಳವಾಗಿ ಬೆಳೆದು ಬಂದ ಕಲಾತ್ಮಕ ಮನೋಭಾವ—ಇವುಗಳಿಂದ ಕೂಡಿ ಅವನು ನರ್ತನ ಮಾಡುತ್ತಿದ್ದರೆ ಪ್ರೇಕ್ಷಕರು ತಲ್ಲೀನರಾಗಿ ನೋಡುತ್ತಿದ್ದರು. ಅವನು ತನ್ನ ಜೇನುಕಂಠದಿಂದ ಹಾಡುತ್ತ

ಆ ಹಾಡಿನ ಭಾವಕ್ಕೆ ತಕ್ಕಂತೆ ತನ್ನ ದುಂಡಗಿನ ಬಾಹುಗಳನ್ನು, ಶರೀರದ ಅಂಗಾಂಗಗಳನ್ನು ಚಲಿಸುತ್ತ ನೃತ್ಯ ಮಾಡುತ್ತಿದ್ದರೆ ಒಂದು ದಿವ್ಯ ಸೌಂದರ್ಯ ಅಲ್ಲಿ ಹೊರಸೂಸುತ್ತಿತ್ತು. ಅದನ್ನು ನೋಡುತ್ತಿದ್ದ ಪ್ರೇಕ್ಷಕರ ಕಣ್ಣುಗಳಿಗೆ, ಅವನ ಗಾನವನ್ನು ಕೇಳುತ್ತಿದ್ದ ಕಿವಿಗಳಿಗೆ ದಿವ್ಯಾನುಭವದ ರಸದೌತಣವಾಗುತ್ತಿತ್ತು.

ಮಗ ನರೇಂದ್ರನನ್ನು ವಿಶ್ವನಾಥ ಬಗೆಬಗೆಯ ವಿದ್ಯೆಗಳಲ್ಲಿ ಪರಿಣತನನ್ನಾಗಿ ಮಾಡಿದ್ದಲ್ಲದೆ ಧೀರತೆಯ ಪಾಠವನ್ನೂ ಹೇಳಿಕೊಟ್ಟ.

ತಂದೆಯ ಅತಿಧಾರಾಳತನವನ್ನು ನೋಡುತ್ತಿದ್ದ ನರೇಂದ್ರ ಒಂದು ದಿನ ನೇರವಾಗಿ ತಂದೆಯನ್ನು ಕೇಳಿದ, "ಅಪ್ಪಾ, ನನಗಾಗಿ ಏನು ಮಾಡಿದ್ದೀ ನೀನು ?" ಮರುಕ್ಷಣದಲ್ಲೇ ಚಿಮ್ಮಿತು ಉತ್ತರ—"ಹೋಗು, ಆ ಕನ್ನಡಿಯ ಮುಂದೆ ನಿಂತು ನೋಡಿಕೊ."

ಏನರ್ಥ ಮಗನ ಆ ಪ್ರಶ್ನೆಗೆ !. . .

ಏನರ್ಥ ತಂದೆಯ ಈ ಉತ್ತರಕ್ಕೆ !. . .

ನಾವು ನೋಡಿದಂತೆ ವಿಶ್ವನಾಥ ತನ್ನ ಸಾಮರ್ಥ್ಯದಿಂದ ಬೇಕೆಂಬಷ್ಟು ಹಣವನ್ನು ಗಳಿಸುತ್ತಿದ್ದ. ಆದರೆ ಅವನು ಅತಿ ಧಾರಾಳಿ; ತನ್ನ ಸೋಮಾರಿ ಬಂಧುಗಳಿಗೆ ಮದ್ಯಪಾನ ಮಾಡಲು ಹಣ ಕೊಡುವಷ್ಟು ಉದಾರಿ ! ಅವನ ಇಂತಹ ಅತಿ ಔದಾರ್ಯವನ್ನು ಕಂಡೇ ನರೇಂದ್ರ ಈಗ 'ಅಪ್ಪಾ, ನನಗಾಗಿ ಏನು ಮಾಡಿದ್ದೀ ನೀನು ?' ಎಂದು ಕೇಳುತ್ತಿದ್ದಾನೆ. ಆದರೆ ವಿಶ್ವನಾಥನಿಗೆ ತನ್ನ ಮಕ್ಕಳಿಗಾಗಿ ಹಣ ಕೂಡಿಡುವುದರಲ್ಲಿ ನಂಬಿಕೆಯಿಲ್ಲ. ಅವನ ಪ್ರಕಾರ, ತಂದೆಯಾದವನು ಮಕ್ಕಳನ್ನು ಗುಣವಂತರನ್ನಾಗಿ ಮಾಡಬೇಕೇ ಹೊರತು ಧನವಂತರನ್ನಾಗಲ್ಲ. ಆದ್ದರಿಂದಲೇ ಮಗ ಆ ಪ್ರಶ್ನೆಯನ್ನು ಕೇಳಿದಾಗ ತಕ್ಷಣ ಹೇಳುತ್ತಿದ್ದಾನೆ: 'ಹೋಗು, ಆ ಕನ್ನಡಿಯ ಮುಂದೆ ನಿಂತು ನೋಡಿಕೊ.' ಕನ್ನಡಿಯ ಮುಂದೆ ನಿಂತು ನೋಡಿಕೊಂಡರೆ ಏನು ಕಾಣುತ್ತದೆ—ಶರೀರ, ಅಷ್ಟೆ ! ಆದರೆ ಅಷ್ಟಲ್ಲದೆ ಮತ್ತಿನ್ನೇನು ಬೇಕು ? ನರೇಂದ್ರ ಕನ್ನಡಿಯ ಮುಂದೆ ನಿಂತು ನೋಡಿಕೊಂಡರೆ ಏನು ಕಾಣುತ್ತದೆ ?—ತೇಜಃಪುಂಜವಾದ ಕಣ್ಣುಗಳು, ಓಜೋಮಯವಾದ ಶರೀರ ! ಅವನ ಕಣ್ಣುಗಳ ಮೂಲಕ ಹೊರಸೂಸುತ್ತಿದೆ—ಅವನು ಕಲಿತ ವಿದ್ಯೆ, ಸೌಜನ್ಯಾದಿ ಸದ್ಗುಣಗಳು. ಅವನ ಶರೀರದಿಂದ ಚಿಮ್ಮುತ್ತಿದೆ—ಓಜಸ್ಸು, ತೇಜಸ್ಸು, ಶಕ್ತಿ ಶೌರ್ಯ ! ಇಷ್ಟಿದ್ದರೆ ಸಾಲದೆ ? ಇಷ್ಟಿದ್ದುಬಿಟ್ಟರೆ ಇನ್ನೇನು ಬೇಕು ? ಇನ್ನೇನೇನು ಬೇಕೋ ಅವನ್ನೆಲ್ಲ ಸ್ವತಃ ಸಂಪಾದಿಸಿಕೊಳ್ಳಲು ಇಷ್ಟಿದ್ದರೆ ಸಾಲದೆ ? ನರೇಂದ್ರನ ಸೂಕ್ಷ್ಮಬುದ್ಧಿಗೆ ತಂದೆಯ ಇಂಗಿತ ಅರ್ಥವಾಯಿತು; ಸುಮ್ಮನಾದ.

ಇನ್ನೊಂದು ದಿನ ಅವನು ತನ್ನ ತಂದೆಯನ್ನು ಕೇಳುತ್ತಾನೆ, "ಅಪ್ಪ, ಉತ್ತಮ ನಡವಳಿಕೆಯ ಲಕ್ಷಣವೇನು ?" ಇದಕ್ಕೆ ತಂದೆ ವಿಶ್ವನಾಥ ಉತ್ತರಿಸುತ್ತಾನೆ, "ಯಾವುದಕ್ಕೂ ಆಶ್ಚರ್ಯವನ್ನು ತೋರಿಸಬೇಡ." ನರೇಂದ್ರ ಕೇಳಿದ ಪ್ರಶ್ನೆಯೂ ಅಪೂರ್ವವಾದದ್ದು, ವಿಶ್ವನಾಥ ನೀಡಿದ ಉತ್ತರವೂ ಅಪೂರ್ವವಾದದ್ದು. ಈ ಪುಟ್ಟ ಹಿತನುಡಿಯ ಕುರಿತಾಗಿ ಆಲೋಚನೆ ಮಾಡಿದಷ್ಟೂ ಅದರ ಮಹತ್ವ ಚೆನ್ನಾಗಿ ಮನವರಿಕೆಯಾಗುತ್ತ ಬರುತ್ತದೆ. ಈ ಮಾತನ್ನು ನರೇಂದ್ರ ಆಳವಾಗಿ ಅರ್ಥಮಾಡಿಕೊಂಡು ಅರಗಿಸಿಕೊಂಡದ್ದರಿಂದಲೇ ಅವನು ಮುಂದೆ ಸ್ವಾಮಿ ವಿವೇಕಾನಂದರಾಗಿ ಜಗತ್ತಿ

ನಾದ್ಯಂತ ಸಂಚರಿಸುವಾಗ ಹಲವಾರು ರಾಜಮಹಾರಾಜರುಗಳನ್ನೂ ದೇಶವಿದೇಶಗಳ ಸುಪ್ರಸಿದ್ಧ ವ್ಯಕ್ತಿಗಳನ್ನೂ ಕೋಟ್ಯಧೀಶರನ್ನೂ ಸಂಧಿಸಿದಾಗಲೂ ಬೆರಗಾಗದೆ, ಬೆಚ್ಚಿ ಬೀಳದೆ ಅವರೊಂದಿಗೆಲ್ಲ ಸಮಾನ ಗಾಂಭೀರ್ಯದಿಂದ ನಡೆದುಕೊಳ್ಳಲು ಸಾಧ್ಯ ವಾಯಿತು ಎನ್ನಬಹುದು. ಅಂತೂ ನರೇಂದ್ರ ತನ್ನ ತಂದೆಯಿಂದ ಕಲಿತ ಪಾಠಗಳೆಲ್ಲವೂ ರತ್ನದಂಥವು.

ವಿಶ್ವನಾಥ ರಾಯಪುರದಲ್ಲಿ ಎರಡು ವರ್ಷಗಳ ಕಾಲ ಇದ್ದು ೧೮೭೯ ರಲ್ಲಿ ಸಂಸಾರಸಮೇತನಾಗಿ ಕಲ್ಕತ್ತಕ್ಕೆ ಮರಳಿದ. ಈಗ ನರೇಂದ್ರನನ್ನು ಪುನಃ ಶಾಲೆಗೆ ಸೇರಿಸುವುದು ಸ್ವಲ್ಪ ಕಷ್ಟವಾಯಿತು. ಏಕೆಂದರೆ ಅಷ್ಟು ದೀರ್ಘಕಾಲ ಆತ ಗೈರುಹಾಜ ರಾಗಿದ್ದಾನೆ. ಆದರೆ ಆ ಶಾಲೆಯ ಅಧ್ಯಾಪಕರೆಲ್ಲ ಅವನ ಬುದ್ಧಿಶಕ್ತಿ-ಸಾಮರ್ಥ್ಯಗಳನ್ನು ಚೆನ್ನಾಗಿ ಕಂಡುಕೊಂಡಿದ್ದರು. ಅಲ್ಲದೆ ಅವನು ಅವರ ವಿಶೇಷ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದ. ಆದ್ದರಿಂದ ಅವನ ವಿಷಯದಲ್ಲಿ ವಿಶೇಷ ರಿಯಾಯಿತಿ ತೋರಿಸಿ ಮತ್ತೆ ಶಾಲೆಗೆ ಸೇರಿಸಿಕೊಂಡರು. ಅವನ ಹಿಂದಿನ ಸಹಪಾಠಿಗಳೆಲ್ಲ ಈಗ ಎಂಟ್ರೆನ್ಸ್ ತರಗತಿಯಲ್ಲಿದ್ದರು. ಅವನೂ ಈ ವರ್ಷ ಎಂಟ್ರೆನ್ಸ್ ಪರೀಕ್ಷೆಗೆ ಕುಳಿತುಕೊಳ್ಳಬೇಕಾದರೆ ಮೂರು ವರ್ಷಗಳ ಪಾಠಗಳನ್ನು ಒಟ್ಟಿಗೆ ಅಭ್ಯಾಸ ಮಾಡಬೇಕಾಗಿತ್ತು. ಅವನೇನೋ ಇದಕ್ಕೆ ಸಿದ್ಧನಾಗಿಯೇ ಇದ್ದ. ಅದನ್ನು ತಾನು ಸಾಧಿಸಬಲ್ಲೆನೆಂಬ ವಿಶ್ವಾಸ ಅವನಿಗಿತ್ತು.

ನರೇಂದ್ರ ಈಗ ಮತ್ತೊಮ್ಮೆ ಮೆಟ್ರೊಪಾಲಿಟನ್ ಶಾಲೆಯ ವಿದ್ಯಾರ್ಥಿಯಾಗಿ ದ್ದಾನೆ. ಆ ವರ್ಷ ಶಾಲೆಯ ಹಿರಿಯ ಉಪಾಧ್ಯಾಯರೊಬ್ಬರು ನಿವೃತ್ತಿ ಹೊಂದಲಿದ್ದರು. ಅವರನ್ನು ಸೂಕ್ತ ರೀತಿಯಲ್ಲಿ ಗೌರವಿಸಿ ಬೀಳ್ಕೊಡಲು ಶಾಲೆಯಲ್ಲಿ ಸಮಾರಂಭ ವೊಂದನ್ನು ಏರ್ಪಡಿಸಲಾಯಿತು. ಆ ಕಾಲದ ಅಗ್ರಗಣ್ಯ ರಾಷ್ಟ್ರೀಯ ಧುರೀಣರೂ ಶ್ರೇಷ್ಠ ವಾಗ್ಮಿಗಳೂ ಆದ ಸುರೇಂದ್ರನಾಥ ಬ್ಯಾನರ್ಜಿಯವರನ್ನು ಕಾರ್ಯಕ್ರಮದ ಅಧ್ಯಕ್ಷರನ್ನಾಗಿ ಆಹ್ವಾನಿಸಲಾಯಿತು. ಅಂತಹ ವಿಖ್ಯಾತರೊಬ್ಬರು ಬರಲು ಒಪ್ಪಿದ್ದು ದೊಡ್ಡ ವಿಷಯವೇ ಸರಿ. ಆದರೆ ಕಾರ್ಯಕ್ರಮದಲ್ಲಿ ನಿವೃತ್ತ ಅಧ್ಯಾಪಕರ ಗುಣಗಾನ ರೂಪವಾದ ಭಾಷಣವನ್ನು ಹುಡುಗರಲ್ಲೇ ಯಾರಾದರೂ ಮಾಡಬೇಕಲ್ಲ! ಅಂಥ ಸುಪ್ರಸಿದ್ಧ ವಾಗ್ಮಿಯ ಮುಂದೆ ನಿಂತು ಮಾತನಾಡಬೇಕು ಎನ್ನುವುದನ್ನು ನೆನೆಸಿ ಕೊಂಡು ಹುಡುಗರೆಲ್ಲ ದಿಗಿಲುಬಿದ್ದರು. ಒಬ್ಬನೂ ಮಾತನಾಡಲು ಮುಂದಾಗಲಿಲ್ಲ. ಆಗ ಹುಡುಗರೆಲ್ಲ ನರೇಂದ್ರನ ಬಳಿಗೆ ಬಂದು, "ನರೇನ್, ಈ ಕೆಲಸಕ್ಕೆ ನೀನೇ ಸರಿ ಕಣೊ" ಎಂದರು. ನರೇಂದ್ರ ಒಪ್ಪಿಕೊಂಡ. ಕಾರ್ಯಕ್ರಮದ ದಿನ ಬಂದಿತು; ಸಭೆ ಸೇರಿದೆ; ಬ್ಯಾನರ್ಜಿಯವರು ಅಧ್ಯಕ್ಷಸ್ಥಾನದಲ್ಲಿ ಕುಳಿತಿದ್ದಾರೆ. ತನ್ನ ಸರದಿ ಬಂದಾಗ ನರೇಂದ್ರ ಸಭೆಯ ಮಧ್ಯದಿಂದ ಎದ್ದು ಬಂದು ಭಾಷಣವನ್ನು ಪ್ರಾರಂಭಿಸಿದ—ಈಗ ನಿವೃತ್ತಿ ಹೊಂದುತ್ತಿರುವ ತಮ್ಮ ಅಧ್ಯಾಪಕರ ಮೇಲೆ ವಿದ್ಯಾರ್ಥಿಗಳೆಲ್ಲ ಎಷ್ಟೊಂದು ಅಭಿಮಾನವಿಟ್ಟಿದ್ದಾರೆ, ಈಗ ಅವರನ್ನು ಶಾಲೆಯಿಂದ ಬೀಳ್ಕೊಡಬೇಕಾಗಿರುವುದರಿಂದ ಹುಡುಗರೆಲ್ಲರಿಗೂ ಅದೆಷ್ಟು ದುಃಖವಾಗಿದೆ ಎಂಬಿತ್ಯಾದಿಯಾಗಿ ಸುಮಾರು ಅರ್ಧ ಗಂಟೆಯ ಕಾಲ ನಿರರ್ಗಳವಾಗಿ ಭಾಷಣ ಮಾಡಿದ. ತರುವಾಯ, ಅಧ್ಯಕ್ಷಮಹೋ ದಯರಾದ ಸುರೇಂದ್ರನಾಥ ಬ್ಯಾನರ್ಜಿಯವರ ಭಾಷಣ. ಅದರಲ್ಲಿ ಅವರು ಎಳೆಯ ಭಾಷಣಕಾರನಾದ ನರೇಂದ್ರನ ಬಗ್ಗೆ ಪ್ರಸ್ತಾಪಿಸಿ, ಅವನನ್ನು ಬಹಳ ಹೊಗಳಿದರು. ಹುಡುಗರೆಲ್ಲ ತಮಗೇ ಸನ್ಮಾನವಾದಷ್ಟು ಸಂತೋಷಪಟ್ಟರು.

ನರೇಂದ್ರ ಈ ವರ್ಷ ಎಂಟ್ರೆನ್ಸ್ ಪರೀಕ್ಷೆಗೆ ಕುಳಿತಿದ್ದಾನೆ. ಅದಕ್ಕಾಗಿ ಇಡೀ ಮೂರು ವರ್ಷಗಳ ಪಾಠವನ್ನು ಓದಿ ಮನನ ಮಾಡಬೇಕಾಗಿದೆ. ಆದರೆ ಅವನ ಗಮನವೆಲ್ಲ ಪಠ್ಯೇತರ ಪುಸ್ತಕಗಳ ಕಡೆಗೇ! ಈ ಅವಧಿಯಲ್ಲಿ ಅವನು ಇಂಗ್ಲಿಷ್ ಹಾಗೂ ಬಂಗಾಳೀ ಭಾಷೆಗಳ ಹಲವಾರು ಉತ್ತಮ ಗ್ರಂಥಗಳನ್ನು ಓದಿ ಹೃದ್ಗತ ಮಾಡಿಕೊಂಡ. ಸಂಸ್ಕೃತ ಸಾಹಿತ್ಯದಲ್ಲಿ ತನ್ನ ವಯಸ್ಸಿಗೆ ಮೀರಿದ ಅಧ್ಯಯನ ನಡೆಸಿ ವಿಶೇಷ ಮಾಹಿತಿ ಪಡೆದುಕೊಂಡ. ಭಾರತದ ಇತಿಹಾಸವನ್ನು ಆಳವಾಗಿ ಅಧ್ಯಯನ ಮಾಡಿದ. ರಾಷ್ಟ್ರಪ್ರೇಮಿಯಾಗಬೇಕಾದವನು ತನ್ನ ರಾಷ್ಟ್ರದ ಇತಿಹಾಸದ ಬಗ್ಗೆ, ಸಂಸ್ಕೃತಿ ಪರಂಪರೆಯ ಬಗ್ಗೆ ನಿಖರವಾದ ತಿಳಿವಳಿಕೆ ಹೊಂದಿರಬೇಕು. ಮುಂದೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ತನ್ನ ಮಾತೃಭೂಮಿಯ ಭವ್ಯತೆಯನ್ನು ಘೋಷಿಸುವುದಕ್ಕಾಗಿಯೇ ಎಂಬಂತಿತ್ತು—ನರೇಂದ್ರನ ಭಾರತೀಯ ಇತಿಹಾಸದ ಅಧ್ಯಯನ. ಹೀಗೆ, ಇಂತಹ ಸಾಹಿತ್ಯಕೃತಿಗಳ ಅಧ್ಯಯನದಲ್ಲಿ ಕಳೆದುವು ದಿನಗಳು.

ಆದರೆ ಈಗ ಎಂಟ್ರೆನ್ಸ್ ಪರೀಕ್ಷೆ ಸಮೀಪಿಸುತ್ತಿದೆ. ನರೇಂದ್ರ ಪರೀಕ್ಷೆಗಾಗಿ ಅಧ್ಯಯನ ಪ್ರಾರಂಭಿಸಿದ. ಎಷ್ಟೇ ಬುದ್ಧಿಶಕ್ತಿಸಂಪನ್ನನಾದರೂ ಓದಬೇಕಾದ ವಿಷಯಗಳೆಲ್ಲ ಪೇರಿಕೊಂಡುಬಿಟ್ಟಿದ್ದರೆ ಏನು ಮಾಡಲಾದೀತು? ಆದರೆ ಅವನು ಹಟತೊಟ್ಟು, ಕಷ್ಟಪಟ್ಟು ಓದಿದ. ಉದಾಹರಣೆಗೆ, ರೇಖಾಗಣಿತವನ್ನು ತಾನು ಯಾವ ರೀತಿಯಲ್ಲಿ ಅಧ್ಯಯನ ಮಾಡಿದೆ ಎಂಬುದನ್ನು ಅವನೇ ವಿವರಿಸುತ್ತಾನೆ: "ಪರೀಕ್ಷೆಗೆ ಇನ್ನು ಕೇವಲ ಎರಡು-ಮೂರು ದಿನಗಳಿವೆ ಎನ್ನುವಾಗ ನೋಡುತ್ತೇನೆ, ನಾನು ರೇಖಾಗಣಿತದ ವಿಷಯದಲ್ಲಿ ಏನೇನೂ ಅಭ್ಯಾಸ ಮಾಡಿಲ್ಲ! ಆಗ ನಾನು ಪಟ್ಟಾಗಿ ರಾತ್ರಿಯೆಲ್ಲ ಕುಳಿತು ಅದನ್ನು ಅಭ್ಯಾಸ ಮಾಡಲಾರಂಭಿಸಿದೆ. ಮತ್ತು ಇಪ್ಪತ್ತನಾಲ್ಕು ಗಂಟೆಗಳ ಕಾಲದಲ್ಲಿ ರೇಖಾಗಣಿತದ ನಾಲ್ಕು ಪುಸ್ತಕಗಳನ್ನು ಅಧ್ಯಯನ ಮಾಡಿ ಮುಗಿಸಿದೆ." ಹೀಗೆ ಅವನು ಕಷ್ಟಪಟ್ಟು ಓದಿದ್ದೇ ಅಲ್ಲದೆ, ಪರೀಕ್ಷೆಯಲ್ಲಿ ಶಾಲೆಗೇ ಮೊದಲಿಗನಾಗಿ ಉನ್ನತಶ್ರೇಣಿಯಲ್ಲಿ ಉತ್ತೀರ್ಣನಾದ. ಆ ವರ್ಷ ಅವನ ಶಾಲೆಯಲ್ಲಿ ಅಷ್ಟು ಉನ್ನತ ಶ್ರೇಣಿಯಲ್ಲಿ ತೇರ್ಗಡೆಯಾದವನು ಅವನೊಬ್ಬನೇ! ವಿಶ್ವನಾಥ ಮಗನಿಗೆ ಒಂದು ಒಳ್ಳೆಯ ಕೈಗಡಿಯಾರವನ್ನು ಬಹುಮಾನವಾಗಿ ಕೊಟ್ಟ.

ನರೇಂದ್ರ ಈ ವೇಳೆಗೆ ಪಠ್ಯೇತರ ಪುಸ್ತಕಗಳನ್ನು ಅದೆಷ್ಟು ಓದಿಬಿಟ್ಟಿದ್ದನೆಂದರೆ ಅವನಲ್ಲೊಂದು ಆಶ್ಚರ್ಯಕರ ಸಾಮರ್ಥ್ಯ ಬೆಳೆದುಬಂದಿತ್ತು. ಆ ಕುರಿತು ಅವನೇ ಹೇಳುತ್ತಾನೆ: "ನಾನು ಲೇಖಕನ ಅಭಿಪ್ರಾಯಗಳನ್ನು ತಿಳಿಯಲು ಅವನ ಪುಸ್ತಕವನ್ನು ಆಮೂಲಾಗ್ರವಾಗಿ ಓದಲೇಬೇಕಾಗಿರಲಿಲ್ಲ. ಒಂದು ಪ್ಯಾರಾದ ಮೊದಲನೆಯ ಹಾಗೂ ಕೊನೆಯ ವಾಕ್ಯಗಳನ್ನು ಓದಿದರೆ ಸಾಕಾಗಿತ್ತು—ಇಡೀ ಪ್ಯಾರಾದ ಸಾರಾಂಶ ಅರ್ಥವಾಗುತ್ತಿತ್ತು. ಕ್ರಮೇಣ ನನ್ನ ಈ ಶಕ್ತಿ ಇನ್ನೂ ಬೆಳೆಯಿತು; ಆಗ ಪುಟದ ಮೊದಲ ಹಾಗೂ ಕೊನೆಯ ವಾಕ್ಯಗಳನ್ನು ಓದಿಬಿಟ್ಟರೆ ಸಾಕು, ಇಡೀ ಪುಟದ ವಿಷಯವೆಲ್ಲ ನನಗೆ ತಿಳಿದುಬಿಡುತ್ತಿತ್ತು. ಬರಬರುತ್ತ ಈ ಶಕ್ತಿ ಇನ್ನೂ ವೃದ್ಧಿಗೊಂಡಿತು, ಎಷ್ಟರಮಟ್ಟಿಗೆಂದರೆ ಲೇಖಕನು ಒಂದು ವಿಷಯವನ್ನು ಅರ್ಥಪಡಿಸಲು ನಾಲ್ಕೈದು ಪುಟಕ್ಕಿಂತ ಹೆಚ್ಚಾಗಿ ಬರೆಯಬೇಕಾಗಿ ಬಂದಿದ್ದರೆ, ನನಗೆ ಆ ಇಡೀ ವಿಷಯವನ್ನು ಗ್ರಹಿಸಲು ಅದರ ಮೊದಲಿನ ಕೆಲವು ವಾಕ್ಯಗಳನ್ನು ಓದಿಬಿಟ್ಟರೆ ಸಾಕಾಗಿತ್ತು."

 

ಎಂಟ್ರೆನ್ಸ್ ಪರೀಕ್ಷೆ ಮುಗಿಯುವ ಹೊತ್ತಿಗೆ ನರೇಂದ್ರನ ಬಾಲ್ಯದ ಆಟ-ಓಡಾಟಗಳು, ತಂಟೆ-ತಮಾಷೆಗಳು ಎಲ್ಲ ಮುಗಿದುಹೋಗಿದ್ದುವು. ಈಗ ಅವನು ಯೌವನದ ಮೆಟ್ಟಿಲೇರಿದ್ದಾನೆ. ಅವನ ವಿಚಾರಧಾರೆ ಹೆಚ್ಚು ಗಂಭೀರವಾಗುತ್ತ ಬರುತ್ತಿದೆ. ಈಗ ತನ್ನ ಹದಿನೇಳನೆಯ ವಯಸ್ಸಿನಲ್ಲಿ ಅವನು ಕಲ್ಕತ್ತದ ಪ್ರೆಸಿಡೆನ್ಸಿ ಕಾಲೇಜಿಗೆ ಸೇರಿದ. ಇನ್ನು ಮುಂದೆ ನಾವು ಅವನನ್ನು ತೀವ್ರ ಚಿಂತನಶೀಲನಾದ ವಿದ್ಯಾರ್ಥಿಯಾಗಿ ಕಾಣಲಿದ್ದೇವೆ. ಅವನೀಗ ಬಾಲಜಗತ್ತನ್ನು ದಾಟಿ ಯುವಪ್ರಪಂಚದಲ್ಲಿ ವಿಹರಿಸುತ್ತಿದ್ದಾನೆ. ಈಗ ಅವನ ಕಲ್ಪನೆಗಳ ವಿನ್ಯಾಸವೇ ಬೇರೆ, ಅನಿಸಿಕೆಗಳೇ ಬೇರೆ, ಅನುಭವಗಳೇ ಬೇರೆ. ಅವನಿನ್ನೂ ಹದಿನೇಳರ ತರುಣನಾದರೂ ಅವನದು ಕಟ್ಟುಮಸ್ತಾದ ಮಾಂಸಲವಾದ ಮೈಕಟ್ಟು; ನೋಡಲು ಸ್ವಲ್ಪ ಸ್ಥೂಲವಾಗಿ ಕಂಡರೂ ತುಂಬ ಚಟುವಟಿಕೆಯಿಂದಿರುವ ಶರೀರ. ಅವನು ಸೇರಿದ್ದ ಪ್ರೆಸಿಡೆನ್ಸಿ ಕಾಲೇಜಿನ ವಿದ್ಯಾರ್ಥಿಗಳು ಒಂದೋ ಐರೋಪ್ಯ ಉಡಿಗೆಯಲ್ಲಿ, ಇಲ್ಲವೆ ಭಾರತೀಯ ಉಡಿಗೆಯಾದ ಪೈಜಾಮು-ಜುಬ್ಬಗಳಲ್ಲಿ ಬರಬೇಕಾಗಿತ್ತು. ಜೊತೆಗೆ, ಎಲ್ಲರೂ ಕೈಗಡಿಯಾರವನ್ನು ಕಟ್ಟಿಕೊಂಡಿರಬೇಕಾಗಿತ್ತು. ನರೇಂದ್ರ ಭಾರತೀಯ ಸಂಪ್ರದಾಯಪ್ರಿಯ; ಆದ್ದರಿಂದ ಅವನು ಭಾರತೀಯ ಉಡಿಗೆಯಾದ ಪೈಜಾಮು-ಜುಬ್ಬವನ್ನೇ ಆರಿಸಿಕೊಂಡ.

ನರೇಂದ್ರನಿಗೆ ಮೊದಲನೆಯ ವರ್ಷವೇನೋ ಕಾಲೇಜಿಗೆ ಪ್ರತಿದಿನ ತಪ್ಪದೆ ಹೋಗಲು ಸಾಧ್ಯವಾಯಿತು. ಆದರೆ ಎರಡನೆಯ ವರ್ಷ ಮಲೇರಿಯಾ ಜ್ವರ ಹಿಡಿದು, ಸರಿಯಾಗಿ ಹೋಗಲು ಸಾಧ್ಯವಾಗದೆ, ಹಾಜರಿ ಕಡಿಮೆಯಾಯಿತು. ಆದ್ದರಿಂದ ಪರೀಕ್ಷೆಗೆ ಕುಳಿತುಕೊಳ್ಳಲು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ನರೇಂದ್ರನಿಗೆ ಅನುಮತಿ ಸಿಗಲಿಲ್ಲ. ಆದರೆ ಅವನ ಅದೃಷ್ಟಕ್ಕೆ, 'ಸ್ಕಾಟಿಷ್ ಜನರಲ್ ಮಿಷನರಿ ಬೋರ್ಡ್' ಎಂಬ ಮತ್ತೊಂದು ವಿದ್ಯಾಸಂಸ್ಥೆ ನಡೆಸುತ್ತಿದ್ದ 'ಸ್ಕಾಟಿಷ್ ಚರ್ಚ್ ಕಾಲೇಜು' ಅವನಿಗೆ ಪರೀಕ್ಷೆಗೆ ಕುಳಿತುಕೊಳ್ಳಲು ಅವಕಾಶ ನೀಡಿತು. ನರೇಂದ್ರ ಎಫ್.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾದ; ಆದರೆ ಅನಾರೋಗ್ಯ-ನಿಶ್ಶಕ್ತಿಗಳ ದೆಸೆಯಿಂದ ದ್ವಿತೀಯ ದರ್ಜೆ ಗಳಿಸಿದ. ಮುಂದೆ ಅವನು ಇದೇ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರಿಸಿ, ಬಿ.ಎ. ವರೆಗೆ ಓದಿ ಉತ್ತೀರ್ಣನಾದ. ಈ ಸಂದರ್ಭದಲ್ಲಿ, ಇದೇ ಕಾಲೇಜಿಗೆ ಸಂಬಂಧಪಟ್ಟಂತೆ ಇನ್ನೊಂದು ವಿಷಯವನ್ನು ಸ್ಮರಿಸಬಹುದಾಗಿದೆ. ನರೇಂದ್ರ ಮುಂದೆ ಲೋಕವಿಖ್ಯಾತ ಸ್ವಾಮಿ ವಿವೇಕಾನಂದರಾಗಿ ಪಾಶ್ಚಾತ್ಯ ಜಗತ್ತಿನಲ್ಲಿ ಜಯಭೇರಿ ಮೊಳಗಿಸಿ ಕಲ್ಕತ್ತಕ್ಕೆ ಹಿಂದಿರುಗಿದಾಗ ಸಾರೋಟಿನಲ್ಲಿ ಅವರನ್ನು ಮೆರವಣಿಗೆಯಲ್ಲಿ ಕರೆತರಲಾಯಿತು. ಆಗ ಆ ಸಾರೋಟಿನ ಕುದುರೆಗಳನ್ನು ಬಿಚ್ಚಿ, ಇದೇ 'ಸ್ಕಾಟಿಷ್ ಚರ್ಚ್ ಕಾಲೇಜಿ'ನ ಯುವಕರು ಸ್ವತಃ ತಮ್ಮ ಕೈಯಿಂದಲೇ ಎಳೆದು, ತಮ್ಮ ಗೌರವಾದರ ಅಭಿನಂದನೆಗಳನ್ನು ಅರ್ಪಿಸಿದರು.

ನರೇಂದ್ರನ ಕಾಲೇಜು ವಿದ್ಯಾಭ್ಯಾಸ ಈಗ ಭರದಿಂದ ಸಾಗತೊಡಗಿತು. ಈ ಅವಧಿಯಲ್ಲೇ ಅವನ ಜ್ಞಾನದಾಹವೂ ಆಧ್ಯಾತ್ಮಿಕ ಪಿಪಾಸೆಯೂ ಅತಿಶಯವಾಗಿ

ಜಾಗೃತವಾಗಿಬಿಟ್ಟುವು. ಇನ್ನು ಮುಂದಿನ ವರ್ಷಗಳಲ್ಲಿ ಆ ಬಗ್ಗೆ ಇನ್ನೂ ವಿವರವಾಗಿ ನೋಡಲಿದ್ದೇವೆ. ಎಫ್.ಎ. ತರಗತಿಯಲ್ಲಿ ಅವನು ಆಯ್ದುಕೊಂಡಿದ್ದ ಮುಖ್ಯ ವಿಷಯುಗಳೆಂದರೆ ಇಂಗ್ಲಿಷು, ಬಂಗಾಳಿ, ಇತಿಹಾಸ, ಗಣಿತ, ತರ್ಕಶಾಸ್ತ್ರ ಹಾಗೂ ಮನಶ್ಶಾಸ್ತ್ರ. ಇವು ಅವನು ಎಂಟ್ರೆನ್ಸ್ ಪರೀಕ್ಷೆಗಾಗಿ ಆರಿಸಿಕೊಂಡಿದ್ದ ವಿಷಯುಗಳ ಮುಂದುವರಿಕೆಯೇ ಎನ್ನಬಹುದು. ಮುಂದೆ ಅವನು ಬಿ.ಎ. ತರಗತಿಯಲ್ಲಿ ವಿಶೇಷ ಅಧ್ಯಯನಕ್ಕಾಗಿ ಆಯ್ದುಕೊಂಡ ವಿಷಯವೆಂದರೆ, ತರ್ಕಶಾಸ್ತ್ರ ಮನಶ್ಶಾಸ್ತ್ರಗಳಿಗೆ ಬದಲಾಗಿ ತತ್ತ್ವಶಾಸ್ತ್ರ; ಉಳಿದಂತೆ ಯಾವುದೇ ಬದಲಾವಣೆ ಇರಲಿಲ್ಲ. ಅವನು ಈ ವಿಷಯುಗಳನ್ನು ಆರಿಸಿಕೊಂಡದ್ದು ತಂದೆ ವಿಶ್ವನಾಥನ ನಿರ್ದೇಶನದ ಮೇರೆಗೆ. ತರ್ಕ ಶಾಸ್ತ್ರ ಮನಶ್ಶಾಸ್ತ್ರ ತತ್ತ್ವಶಾಸ್ತ್ರಗಳು ಬುದ್ಧಿಯ ಸಂಸ್ಕರಣಕ್ಕೆ ಹಾಗೂ ವಿವೇಕಪ್ರಜ್ಞೆಯ ವಿಕಸನಕ್ಕೆ ಬಹಳ ಸಹಾಯಕಾರಿ ಎಂದು ನಂಬಿದ್ದರಿಂದಲೇ ಅವನು ಅವುಗಳನ್ನು ವಿಶೇಷವಾಗಿ ಆರಿಸಿಕೊಂಡ. ಜೊತೆಗೆ ಸಾಹಿತ್ಯದಲ್ಲಿ ಹೆಚ್ಚಾಗಿ ಅಧ್ಯಯನ ಮಾಡಿದ. ಅಲ್ಲದೆ ಲೇಖನ-ಭಾಷಣಗಳ ಕಲೆಯಲ್ಲೂ ಪ್ರವೀಣನಾದ. ಇಂಗ್ಲಿಷ್ ಭಾಷೆಯನ್ನು, ಅದರಲ್ಲೂ ವಿಶೇಷವಾಗಿ ಸಂಭಾಷಣೆಯ ಹಾಗೂ ಚರ್ಚೆಯ ಕಲೆಯನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಾಗಿ ತೀವ್ರ ಅಧ್ಯಯನ ಪ್ರಯತ್ನ ಮಾಡಿದ. ಮತ್ತು ಅದರಲ್ಲಿ ಯಶಸ್ವಿಯೂ ಆಗಿ ಆ ವಿಷಯದಲ್ಲಿ ಕಾಲೇಜಿಗೇ ಮೊದಲಿಗನಾದ. ಅವನು ತನ್ನ ಅಧ್ಯಯನವನ್ನು ಪಾಠಪಟ್ಟಿಗಷ್ಟೇ ಸೀಮಿತಗೊಳಿಸಿದವನಲ್ಲ. ಕಾಲೇಜಿನ ಮೊದಲ ಎರಡು ವರ್ಷಗಳಲ್ಲಿ ಅವನು ಪಾಶ್ಚಾತ್ಯ ತರ್ಕಶಾಸ್ತ್ರಜ್ಞರ ಕೃತಿಗಳನ್ನು ಓದಿ ಅರಗಿಸಿ ಕೊಂಡ. ಮೂರನೇ ಹಾಗೂ ನಾಲ್ಕನೇ ವರ್ಷಗಳಲ್ಲಿ ಪಾಶ್ಚಾತ್ಯ ತತ್ತ್ವಶಾಸ್ತ್ರವನ್ನೂ ಪ್ರಾಚೀನ-ಅರ್ವಾಚೀನ ಐರೋಪ್ಯ ಇತಿಹಾಸವನ್ನೂ ವಿಶದವಾಗಿ ಅಧ್ಯಯನ ಮಾಡಿ ಕರತಲಾಮಲಕವಾಗಿಸಿಕೊಂಡ.

ನರೇಂದ್ರನ ಎಫ್.ಎ. ತರಗತಿಯ ಎರಡನೇ ವರ್ಷವನ್ನು ಬಹಳ ಮಹತ್ವ ಪೂರ್ಣ ಎನ್ನಬಹುದು. ಏಕೆಂದರೆ ಅವನ ಜೀವನವನ್ನೇ ಪರಿವರ್ತಿಸಿ ಹೊಸ ರೂಪ ಕೊಟ್ಟು ಅವನನ್ನು ವೀರಸಂನ್ಯಾಸಿ ವಿವೇಕಾನಂದರನ್ನಾಗಿ ಮಾಡಿ ಜಗತ್ತಿನ ಜ್ಞಾನಪೀಠದ ಮೇಲೆ ನೆಲೆಗೊಳಿಸಿದ ಶ್ರೀರಾಮಕೃಷ್ಣರ ವಿಷಯವಾಗಿ ಅವನು ಮೊತ್ತಮೊದಲನೆಯ ದಾಗಿ ಕೇಳಿದ್ದು ಈ ತರಗತಿಯಲ್ಲಿದ್ದಾಗಲೇ. ಪ್ರತಿಯೊಂದು ಮಹಾಕಾರ್ಯಕ್ಕೂ ಒಂದು ಸ್ವಾರಸ್ಯಕರ ಪ್ರಾರಂಭವಿರುತ್ತದೆ. ಯಾವುದೋ ಒಂದು ಪುಟ್ಟ ಮಾತೋ ಅಥವಾ ಘಟನೆಯೋ ಮುಂದಿನ ಯಾವುದೋ ಒಂದು ಮಹಾಕಾರ್ಯಕ್ಕೆ ನಾಂದಿಯಾಗಿ ಬಿಟ್ಟಿರುತ್ತದೆ. ನರೇಂದ್ರ ಓದುತ್ತಿದ್ದ ಸ್ಕಾಟಿಷ್ ಚರ್ಚ್ ಕಾಲೇಜಿನ ಪ್ರಿನ್ಸಿಪಾಲರ ಹೆಸರು ಪ್ರೊಫೆಸರ್ ವಿಲಿಯಂ ಹೇಸ್ಟೀ ಎಂದು. ಒಂದು ದಿನ ನರೇಂದ್ರನ ತರಗತಿಯನ್ನು ತೆಗೆದುಕೊಳ್ಳಬೇಕಾಗಿದ್ದ ಪ್ರಾಧ್ಯಾಪಕರು ಕಾಲೇಜಿಗೆ ಬಂದಿರಲಿಲ್ಲ. ಆದ್ದರಿಂದ ಅವರ ಬದಲಿಗೆ ಸ್ವತಃ ಪ್ರಿನ್ಸಿಪಾಲರೇ ಅಂದು ಇಂಗ್ಲಿಷ್ ಸಾಹಿತ್ಯದ ವಿಷಯವಾಗಿ ಪಾಠ ಮಾಡತೊಡಗಿದರು. ಅವರು ವರ್ಡ್ಸ್‌ವರ್ತ್ ಕವಿಯ 'Excursion' ಎನ್ನುವ ಕಾವ್ಯ ವನ್ನು ವಿವರಿಸುವಾಗ ಅದರಲ್ಲಿ ಭಾವಸಮಾಧಿಯ ಅಥವಾ ಆನಂದಸಮಾಧಿಯ ಕುರಿತಾಗಿ ಒಂದು ಅಂಶ ಬಂದಿತು; ಅಲ್ಲಿ, ಪ್ರಕೃತಿ ಸೌಂದರ್ಯವನ್ನು ವರ್ಣಿಸುತ್ತ, ಸ್ವತಃ ವರ್ಡ್ಸ್‌ವರ್ತ್ ಕವಿಯೇ ಭಾವಪರವಶನಾದಂತೆ ಕಂಡುಬರುತ್ತದೆ. ಈ ಭಾವ ಸಮಾಧಿಯ ಕುರಿತಂತೆ ವಿಲಿಯಂ ಹೇಸ್ಟೀ ವಿವರಿಸಿದ್ದು ಹುಡುಗರಿಗೆ ಸರಿಯಾಗಿ

ಅರ್ಥವಾಗಲಿಲ್ಲ. ಅಲ್ಲದೆ ಭಾವಸಮಾಧಿಯಂತಹ ವಿಷಯವನ್ನು ಮಾತಿನಿಂದ ವಿವರಿಸಿ ಅರ್ಥಪಡಿಸಲು ಸಾಧ್ಯವೂ ಇಲ್ಲ. ಆದನ್ನು ಮನಗಂಡ ಹೇಸ್ಟೀ ಹೇಳುತ್ತಾರೆ: "ಇದೊಂದು ವಿಶೇಷವಾದ ಅನುಭವ. ಶುದ್ಧವಾದ ಹಾಗೂ ಏಕಾಗ್ರಗೊಂಡ ಮನಸ್ಸಿಗೆ ಮಾತ್ರ ಈ ಬಗೆಯ ಅನುಭವ ಸಾಧ್ಯ. ಈಗಿನ ಕಾಲದಲ್ಲಿ ಇದು ಬಹಳ ಅಪರೂಪ. ಆದರೆ ಒಬ್ಬ ವ್ಯಕ್ತಿಗೆ ಮಾತ್ರ ಈ ಬಗೆಯ ಅನುಭವವಾಗುವುದನ್ನು ನಾನೇ ಕಂಡಿದ್ದೇನೆ—ಅವರೇ ದಕ್ಷಿಣೇಶ್ವರದ ರಾಮಕೃಷ್ಣ ಪರಮಹಂಸರು. ಅಲ್ಲಿಗೆ ಹೋದರೆ ನೀವೇ ಅದನ್ನು ಕಂಡು ಅರ್ಥಮಾಡಿಕೊಳ್ಳಬಹುದು." ನರೇಂದ್ರನಿಗೆ ತನ್ನ ಗುರುವಿನ ಮೊದಲ ಪರಿಚಯವಾದ ಬಗೆ ಹೀಗೆ.

ಈ ದಿನಗಳಲ್ಲಿ ತನ್ನ ಸ್ನೇಹಿತರ ಹಾಗೂ ಇತರ ಪರಿಚಯಸ್ಥರ ದೃಷ್ಟಿಗೆ ನರೇಂದ್ರ ಒಬ್ಬ ರಾಜಕುಮಾರನಂತೆ ಕಾಣುತ್ತಿದ್ದ—ಅವನ ವ್ಯಕ್ತಿತ್ವದಲ್ಲಿ ಅಂಥಾ ಘನತೆ, ಗಾಂಭೀರ್ಯ, ತೇಜಸ್ಸು. ಅವನ ಕಾಲೇಜಿನ ಭಾರತೀಯ ಹಾಗೂ ಆಂಗ್ಲ—ಈ ಎರಡೂ ವರ್ಗದ ಪ್ರಾಧ್ಯಾಪಕರು ಅವನಿಂದ ವಿಶೇಷವಾಗಿ ಆಕರ್ಷಿತರಾಗಿದ್ದರು. ಅವನ ಅಪಾರ ಬುದ್ಧಿಸಾಮರ್ಥ್ಯವನ್ನೂ ಅವನ ಅದ್ಭುತ ಅಂತಶ್ಶಕ್ತಿಯನ್ನೂ ಅವರು ಸ್ಪಷ್ಟವಾಗಿ ಕಂಡುಕೊಂಡಿದ್ದರು. ನರೇಂದ್ರನ ವಿಷಯವಾಗಿ ಪ್ರಿನ್ಸಿಪಾಲ್ ವಿಲಿಯಂ ಹೇಸ್ಟೀ ಅವರಂತೂ, "ನರೇಂದ್ರನಾಥ ನಿಜಕ್ಕೂ ಒಬ್ಬ ಅಸಾಧಾರಣ ಪ್ರತಿಭಾವಂತ. ನಾನು ವ್ಯಾಪಕವಾಗಿ ಸಂಚರಿಸಿ ನೋಡಿದ್ದೇನೆ—ಆದರೆ ಅವನಂತಹ ಮೇಧಾವೀ ಹಾಗೂ ಸಾಮರ್ಥ್ಯಶಾಲೀ ಹುಡುಗನನ್ನು ನಾನೆಲ್ಲೂ ಕಂಡಿಲ್ಲ. ಅವನು ಈ ಜಗತ್ತಿನಲ್ಲಿ ತನ್ನ ಪ್ರಭಾವ ಬೀರುವುದು ಖಂಡಿತ!" ಎಂದು ಕೊಂಡಾಡುತ್ತಾರೆ.

ಎಫ್.ಎ. ಅಧ್ಯಯನ ಮುಗಿಯುವುದರೊಳಗೆ ನರೇಂದ್ರನ ಆಲೋಚನಾ ವಿಧಾನದಲ್ಲಿ ಒಂದು ಅದ್ಭುತವಾದ ಕ್ರಾಂತಿಕೆ ಬೆಳೆದುಬಂದಿತ್ತು. ಯಾವ ಹೊಸ ವಿಚಾರವನ್ನು ಕಾಣಲಿ, ಕೇಳಲಿ, ಅದನ್ನು ತನ್ನ ವಿಚಾರದ ಒರೆಗಲ್ಲಿಗೆ ಹಚ್ಚಿನೋಡದೆ ಬಿಡುತ್ತಿರಲಿಲ್ಲ. ಸ್ನೇಹಿತರೆಲ್ಲ ಸೇರಿ ಅಧ್ಯಯನ ಮಾಡುತ್ತಿರುವಾಗ ಹುಟ್ಟಿಕೊಂಡ ಯಾವುದಾದರೊಂದು ವಿಷಯದ ಮೇಲಿನ ಚರ್ಚೆ ಇತ್ಯರ್ಥವಾಗದಿದ್ದರೆ, ನರೇಂದ್ರ ವಿರಾಮದ ವೇಳೆಯಲ್ಲೂ ಆ ಚರ್ಚೆಯನ್ನು ಮುಂದುವರಿಸುತ್ತಿದ್ದ. ಅವನ ಅಭಿಪ್ರಾಯವನ್ನು ವಿರೋಧಿಸುವ ಕೆಲಸಕ್ಕೆ ಕೈಹಾಕಿದವರು ಸಿಂಹದ ಬಾಯಿಗೆ ಕೈಹಾಕಿದಂತೆಯೇ! ತನ್ನ ಪ್ರಖರ ಪ್ರತಿವಾದದಿಂದ ಅವನು ಎದುರಾಳಿಯ ಬಾಯಿ ಮುಚ್ಚಿಸಿ ಬಿಡುತ್ತಿದ್ದ. ತನ್ನ ಸಹಪಾಠಿಗಳ ನಡುವೆ ಅವನೊಂದು ಸಿಂಹದಂತೆ. ಸಾಂಪ್ರದಾಯಿಕ ಆಲೋಚನೆ-ನಂಬಿಕೆಗಳಿಗೆ ಬದ್ಧ ವಿರೋಧಿ ಅವನು; ಯಾವುದನ್ನೂ ಕಣ್ಮುಚ್ಚಿಕೊಂಡು ಒಪ್ಪಿಕೊಳ್ಳುವವನಲ್ಲ. ಗೆಳೆಯರೊಂದಿಗಿನ ಅವನ ಚರ್ಚೆಯ ವಿಷಯಗಳಂತೂ ಅಸಂಖ್ಯಾತ.

ನಿಜಕ್ಕೂ ಈ ದಿನಗಳಲ್ಲಿ ನರೇಂದ್ರನಲ್ಲೊಂದು ಅದ್ಭುತ ಮಾನಸಿಕ ಪರಿವರ್ತನೆಯುಂಟಾಯಿತು. ಅವನಲ್ಲಿ ಕಟುವಾದ ವಿಮರ್ಶಾತ್ಮಕ ಮನೋಭಾವ ಬೆಳೆದುಬಿಟ್ಟಿತು. ಸಾಮಾನ್ಯವಾಗಿ ಯುವಜನರು ಭಾವುಕ ಸ್ವಭಾವದವರಾಗಿರುತ್ತಾರೆ. ಆದರೆ ನರೇಂದ್ರನಲ್ಲಿ ವಿಚಾರಶಕ್ತಿಯೆನ್ನುವುದು ಭಾವುಕತೆಯನ್ನು ಮೆಟ್ಟಿನಿಂತಿತು. ಜೀವನ ರಂಗಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನೂ ವಿಮರ್ಶೆ ಮಾಡಿ ನೋಡಿ, ಅದರ ಒಳಹೊರಗನ್ನು ಜಾಲಾಡಿ, ಅದರಲ್ಲಿ ತಥ್ಯಾಂಶವಿದ್ದರೆ ಮಾತ್ರ ಸ್ವೀಕರಿಸುವ

ದನ್ನು ಅವನು ರೂಢಿಸಿಕೊಂಡ. ತನ್ನ ಧರ್ಮವಾದ ಹಿಂದೂ ಧರ್ಮದ ಒಳಹೊರಗು ಗಳನ್ನೂ ಅವನು ವಿಶ್ಲೇಷಿಸಿ ನೋಡಲಾರಂಭಿಸಿದ. ಧರ್ಮ ಎನ್ನುವುದೊಂದು ಬೃಹತ್ತಾದ ವಿಷಯ. ಈ ಧರ್ಮದ ಮರ್ಮ ಏನು ? ಇದರ ಸಾಧಕ-ಬಾಧಕಗಳೇನು ? ತನ್ನ ಜೀವನದಲ್ಲಿ ಈ ಧರ್ಮದ ಪಾತ್ರವೇನು ? ಇದರಲ್ಲೇನಾದರೂ ಸತ್ವವಿದೆಯೆ ? ಈ ವಿಷಯಗಳನ್ನು ಕಟುತರ ವಿಮರ್ಶೆಗೆ ಗುರಿಪಡಿಸಿ ನೋಡಿದ. ಹಾಗೆಯೇ ತನ್ನ ಸಮಕಾಲೀನ ಭಾರತದ ಸಾಮಾಜಿಕ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಗಾಢಚಿಂತನೆ ನಡೆಸಿದ. ಅವನು ಯಾವಾಗಲೂ ತನ್ನದೇ ಆದ ನಿರ್ಧಾರಕ್ಕೆ ಬರುವ ಸ್ವಾತಂತ್ರ್ಯವನ್ನು ಬಯಸುವವನು. ಅವನ ಆ ನಿರ್ಧಾರ ಯಾವ ಬಗೆಯದೇ ಆಗಲಿ, ಅದನ್ನು ಯಾರೂ ಸುಲಭದಲ್ಲಿ ತಳ್ಳಿಹಾಕುವಂತಿರಲಿಲ್ಲ. ಆದರೆ ಅವನ ಈ ನಂಬಿಕೆ ಎನ್ನುವುದು ಓದರಿಯದವರ ಮೊಂಡುವಾದವಲ್ಲ, ಕುರುಡು ನಂಬಿಕೆಯಲ್ಲ. ಅವನು ಅಸಂಖ್ಯಾತ ಗ್ರಂಥಗಳನ್ನು ಅಧ್ಯಯಿಸಿ ಅಮೂಲ್ಯ ವಿಷಯಸಂಗ್ರಹಣೆ ಮಾಡಿಕೊಂಡಿದ್ದ ಯುವಕ ! ಅಲ್ಲದೆ ಅವನೊಬ್ಬ ಆದರ್ಶವಾದಿ, ಸತ್ಯಶೋಧಕ !—ಕೇವಲ ಲೌಕಿಕ ವಿಲಾಸಗಳಿಂದ ತೃಪ್ತಿಪಟ್ಟುಕೊಳ್ಳುವ ಸಾಮಾನ್ಯ ಯುವಕರಂತಲ್ಲ. ಪ್ರಕೃತಿಯ ದಟ್ಟವಾದ ತೆರೆಯನ್ನು ಹರಿದು, ಒಳಗೇನಿದೆಯೆಂದು ಕಾಣಬಯಸುವವನು. ಅವನ ಅಂತರಾಳದಲ್ಲಿ ಸತ್ಯ ಸಾಕ್ಷಾತ್ಕಾರದ ಹಂಬಲ ಪ್ರವಾಹದಂತೆ ಭೋರ್ಗರೆಯುತ್ತಿತ್ತು. ಈ ಹಂಬಲದ ಮಿಡಿತವೆನ್ನುವುದು ಮೊದಲಿನಿಂದಲೂ ಬಡಿಬಡಿದು ಅವನಿಗೊಂದು ಅಂಶವನ್ನು ಸೂಚಿಸುತ್ತಿತ್ತು—'ತಾನು ಲೋಕದ ಎಲ್ಲ ವ್ಯಕ್ತಿಗಳಂತಲ್ಲ, ತನ್ನ ಜೀವನ ಇತರರ ಜೀವನದಂತಲ್ಲ' ಎಂದು.

ಆದರೆ ನರೇಂದ್ರ ಹೀಗೆ ಗಂಭೀರ ವಿಚಾರಧಾರೆಯಲ್ಲಿ ಮುಳುಗಿದ್ದರೂ ಅವನ ಹಾಸ್ಯಪ್ರವೃತ್ತಿಯೇನೂ ಬತ್ತಿಹೋಗಿರಲಿಲ್ಲ; ಅವನ ಸಾಹಸಪ್ರವೃತ್ತಿ ಕಡಮೆಯಾಗಿರಲಿಲ್ಲ. ಸ್ನೇಹಿತರ ಗುಂಪಿನಲ್ಲಿ ಅತ್ಯಂತ ಹಾಸ್ಯಪ್ರಿಯನೆಂದರೆ ಅವನೇ. ಯಾವುದೇ ಸನ್ನಿವೇಶದಲ್ಲಿ ಅಡಕವಾಗಿರಬಹುದಾದ ತಮಾಷೆಯನ್ನು ಗುರುತಿಸುವಲ್ಲಿ ಅವನೇ ಮೊದಲಿಗ. ಅವನು ಹಾಸ್ಯದ ಚಟಾಕಿಗಳನ್ನು ಹಾರಿಸಿ ಸ್ನೇಹಿತರನ್ನೆಲ್ಲ ನಗೆಗಡಲಿನಲ್ಲಿ ಮುಳುಗಿಸಿಬಿಡುತ್ತಿದ್ದ. ಕಾಲೇಜು ಹುಡುಗರೆಲ್ಲ ಸೇರಿ ಪ್ರವಾಸ ಹೊರಟರೆ ಅವರಲ್ಲಿ ಇವನೇ ಎಲ್ಲರಿಗಿಂತ ಉಲ್ಲಾಸಿ. ಕೆಲವೊಮ್ಮೆ ಈ ಹುಡುಗರೆಲ್ಲ ಸಾರೋಟುಗಳಲ್ಲಿ ತುಂಬಿಕೊಂಡು ರಸ್ತೆಯುದ್ದಕ್ಕೂ ಹಾಡಿಕೊಂಡು ಹೊರಟುಬಿಡುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಸ್ನೇಹಿತರೆಲ್ಲ ಸೇರಿ, ಗಂಗಾನದಿಗೆ ಹೋಗಿ ಮನದಣಿಯೆ ಈಜಾಡಿಕೊಂಡು ಬರುತ್ತಿದ್ದರು—ಇದರಿಂದ ಪವಿತ್ರ ಗಂಗಾಸ್ನಾನವೂ ಆದಂತಾಯಿತು, ಮನಸ್ಸಿಗೆ ಉಲ್ಲಾಸವೂ ದೊರೆತಂತಾಯಿತು. ಇನ್ನು ದುರ್ಗಾಪೂಜೆ ದೀಪಾವಳಿಗಳಂತಹ ಹಬ್ಬದ ದಿನಗಳಲ್ಲಿ ಬೇರೆ ಬೇರೆ ಬೀದಿಗಳಲ್ಲಿ ಏರ್ಪಡಿಸಿದ ಉತ್ಸವಗಳನ್ನು ವೀಕ್ಷಿಸಿ ಆನಂದಿಸಲು ಹೋಗುತ್ತಿದ್ದರು. ಈ ಎಲ್ಲ ಸಂದರ್ಭಗಳಲ್ಲೂ ನರೇಂದ್ರನೇ ಅವರೆಲ್ಲರ ನಾಯಕ. ಈ ಎಲ್ಲ ಹಬ್ಬ ಹರಿದಿನ ಉತ್ಸವಗಳಲ್ಲಿ ಎಲ್ಲರೂ ಅತಿ ಹೆಚ್ಚಿನ ಸಂತೋಷವನ್ನು ಅನುಭವಿಸುವಂತೆ ಅವನು ನೋಡಿಕೊಳ್ಳುತ್ತಿದ್ದ. ಆದರೆ ಇಲ್ಲಿನ ಒಂದು ಬಹುಮುಖ್ಯವಾದ ಅಂಶವೇನೆಂದರೆ ಈ ತಮಾಷೆಗಳಲ್ಲಿ ಚೆಲ್ಲುತನವಿರಲಿಲ್ಲ; ಗಾಂಭೀರ್ಯವಿತ್ತು. ನರೇಂದ್ರ ಈ ರೀತಿ ತನ್ನ ಸಹಪಾಠಿಗಳೊಂದಿಗೆ ಸರಸವಾಗಿ, ಆತ್ಮೀಯವಾಗಿ ಒಡನಾಡುತ್ತ ತನಗರಿವಿಲ್ಲದಂತೆಯೇ ಅನೇಕ ವಿಶ್ವಾಸಪಾತ್ರ ಸ್ನೇಹಿತರನ್ನು ಗಳಿಸಿದ. ಇವರು

ಕೊನೆಯವರೆಗೂ ಇವನ ಆಪ್ತರಾಗಿಯೇ ಉಳಿದುಕೊಂಡರು.

ನರೇಂದ್ರನಲ್ಲಿ ಬೆಳೆದ ಇನ್ನೊಂದು ಮನೋವೃತ್ತಿಯೆಂದರೆ ಶೋಕಿಯ ಕುರಿತಾದ ತಿರಸ್ಕಾರ. ಶೋಕಿ ಎಂದರೆ ಚಿತ್ರವಿಚಿತ್ರವಾಗಿ ಬಟ್ಟೆಗಳನ್ನು ಧರಿಸುವುದು, ಚಿತ್ರವಿಚಿತ್ರವಾಗಿ ತಲೆಕೂದಲನ್ನು ಬಾಚಿಕೊಳ್ಳುವುದು ಇತ್ಯಾದಿ. ನರೇಂದ್ರನಿಗೆ ಈ ಬಗೆಯ ಶೋಕಿಲಾಲರನ್ನು ಕಂಡರೆ ಆಗುತ್ತಿರಲಿಲ್ಲ. ಅಂಥವರಿಗೆ ಎದುರಿಗೇ ಹೇಳಿಬಿಡುತ್ತಿದ್ದ, ಸಭ್ಯರಂತೆ ಬಟ್ಟೆ ಧರಿಸಬೇಕಾದ್ದು ಅವರ ಕರ್ತವ್ಯ ಎಂದು. ಹುಡುಗರು ವರ್ತನೆಯಲ್ಲಾಗಲಿ ವೇಷಭೂಷಣದಲ್ಲಾಗಲಿ ಸ್ತ್ರೀಯರ ಅನುಕರಣೆ ಮಾಡುವುದನ್ನು ಅವನು ತಿರಸ್ಕರಿಸುತ್ತಿದ್ದ. ಹುಡುಗರು ಗಂಡುಗಲಿಗಳಂತಿರಬೇಕೆಂಬುದು ಅವನ ಅಭಿಮತ.

ಆಪತ್ತಿಗೆ ಗುರಿಯಾದವರ ಸಹಾಯಕ್ಕೆ ಮುನ್ನುಗ್ಗುವುದು ನರೇಂದ್ರನ ಇನ್ನೊಂದು ವಿಶೇಷ ಗುಣ. ಅದಕ್ಕೆ ದೃಷ್ಟಾಂತವಾಗಿ ಒಂದು ರಂಜನೀಯ ಘಟನೆಯನ್ನು ನೋಡಬಹುದು. ಅವನು ಓದುತ್ತಿದ್ದ ಕಾಲೇಜಿನಲ್ಲಿ ಶುಲ್ಕ ಕೊಡಲು ಸಾಧ್ಯವಾಗದ ಬಡ ವಿದ್ಯಾರ್ಥಿಗಳಿಗೆ ಅದರಿಂದ ವಿನಾಯಿತಿ ದೊರೆಯುತ್ತಿತ್ತು. ಕೆಲವು ವಿಶೇಷ ಸಂದರ್ಭಗಳಲ್ಲಿ ಧನಸಹಾಯದ ಸವಲತ್ತೂ ಇತ್ತು. ಆದರೆ ಶುಲ್ಕ ವಿನಾಯಿತಿಯನ್ನೇ ಆಗಲಿ ಧನಸಹಾಯವನ್ನೇ ಆಗಲಿ ಬಯಸುವ ವಿದ್ಯಾರ್ಥಿಗಳು ತಮ್ಮ ಅರ್ಜಿಯನ್ನು ಸಕಾಲದಲ್ಲಿ ಅಧಿಕಾರಿಗಳ ಕೈಗೆ ತಲುಪಿಸಬೇಕಾಗಿತ್ತು. ರಾಜ್‌ಕುಮಾರ್ ಎಂಬವನು ಆ ಕಾಲೇಜಿನ ಹಿರಿಯ ಗುಮಾಸ್ತೆ. ಬಡ ವಿದ್ಯಾರ್ಥಿಗಳ ಅರ್ಜಿಗಳನ್ನು ನೋಡಿ ತದನುಸಾರವಾಗಿ ಶುಲ್ಕ ವಿನಾಯಿತಿಯನ್ನೋ ಧನಸಹಾಯವನ್ನೋ ಮಂಜೂರು ಮಾಡುವ ವಿಷಯದಲ್ಲಿ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಈತನದಾಗಿತ್ತು. ಒಮ್ಮೆ ನರೇಂದ್ರನ ಸಹಪಾಠಿಯಾದ ಹರಿದಾಸ ಚಟರ್ಜಿ ಎಂಬ ಒಬ್ಬ ಬಡ ವಿದ್ಯಾರ್ಥಿ ವರ್ಷವಿಡೀ ಫೀಸು ಕಟ್ಟಿಯೇ ಇರಲಿಲ್ಲ. ಈಗ ವರ್ಷಾಂತ್ಯದಲ್ಲಿ ಅವನು ನರೇಂದ್ರನ ಬಳಿ ತನ್ನ ಕಷ್ಟವನ್ನು ತೋಡಿಕೊಂಡ. ವಾರ್ಷಿಕ ಪರೀಕ್ಷೆ ಸಮೀಪಿಸುತ್ತಿದೆ; ಆದರೆ ಪರೀಕ್ಷಾ ಶುಲ್ಕ ಕಟ್ಟಲೂ ಅವನಿಗೆ ಶಕ್ತಿ ಇರಲಿಲ್ಲ. ಆಗ ನರೇಂದ್ರ, "ತಾಳು, ಈ ವಿಷಯದಲ್ಲಿ ಏನಾದರೂ ಮಾಡಲು ಸಾಧ್ಯವಾಗುತ್ತದೆಯೋ ನೋಡೋಣ" ಎಂದು ಧೈರ್ಯ ತುಂಬಿದ.

ಸರಿ, ಒಂದೆರಡು ದಿನಗಳಾದುವು; ವಿದ್ಯಾರ್ಥಿಗಳೆಲ್ಲ ಫೀಸು ಕಟ್ಟಲು ಮುಖ್ಯ ಗುಮಾಸ್ತೆಯ ಆಫೀಸಿನ ಮುಂದೆ ಸಾಲಾಗಿ ನಿಂತಿದ್ದರು. ನಡುವೆ ಹರಿದಾಸ ಮತ್ತು ನರೇಂದ್ರರೂ ಇದ್ದಾರೆ. ತನ್ನ ಸರದಿ ಬಂದಾಗ ನರೇಂದ್ರ ಮುಖ್ಯ ಗುಮಾಸ್ತೆಯ ಹತ್ತಿರ, "ಸರ್, ನಮ್ಮ ಹರಿದಾಸ್ ತುಂಬ ಬಡವ; ಫೀಸ್ ಕಟ್ಟುವಷ್ಟು ಅನುಕೂಲವಿಲ್ಲ. ದಯವಿಟ್ಟು ಅವನಿಗೆ ವಿನಾಯಿತಿ ಕೊಡಿಸಬೇಕು. ನೀವು ವಿನಾಯಿತಿ ಕೊಡಿಸಿ ಪರೀಕ್ಷೆಗೆ ಕುಳಿತುಕೊಳ್ಳಲು ಅನುಕೂಲ ಮಾಡಿಕೊಟ್ಟರೆ ಅವನು ಖಂಡಿತವಾಗಿಯೂ ಉನ್ನತ ಶ್ರೇಣಿಯಲ್ಲಿ ಪಾಸಾಗುತ್ತಾನೆ. ಇಲ್ಲದೆಹೋದರೆ ಅವನ ಕಥೆ ಮುಗಿದಹಾಗೆಯೇ. . ." ಎಂದು ವಿನಯದಿಂದ ಕೇಳಿಕೊಂಡ. ಆದರೆ ಆ ಗುಮಾಸ್ತೆ ಗಂಟುಮೋರೆ ಹಾಕಿಕೊಂಡು, "ಸರಿಸರಿ ! ನಿನ್ನ ವಕಾಲತ್ತೇನೂ ಬೇಕಾಗಿಲ್ಲ. ನಿನ್ನ ಕೆಲಸ ನೀನು ನೋಡಿಕೋ ಹೋಗು. ಹಣ ಕಟ್ಟದಿದ್ದರೆ ಅವನನ್ನು ಪರೀಕ್ಷೆಗೆ ಕೂಡಿಸಲು ಸಾಧ್ಯವೇ ಇಲ್ಲ" ಎಂದುಬಿಟ್ಟ. ಇದನ್ನು ಕೇಳಿ ನರೇಂದ್ರನಿಗೆ ಸಿಟ್ಟು ಉಕ್ಕೇರಿದರೂ, ಅಷ್ಟು ಜನ ವಿದ್ಯಾರ್ಥಿಗಳ ಮುಂದೆ ಪ್ರತಿಮಾತಾಡದೆ ಬಂದುಬಿಟ್ಟ. ಹರಿದಾಸನಿಗೆ ತುಂಬ ನಿರಾಶೆಯಾಯಿತು.

ಆದರೆ ನರೇಂದ್ರನೇನೂ ಹತಾಶನಾಗಿರಲಿಲ್ಲ. ಅವನು ಗೆಳೆಯನನ್ನು ಸಮಾಧಾನಪಡಿಸುತ್ತ ಹೇಳಿದ, "ಅಷ್ಟೇಕೆ ನಿರಾಶನಾಗುತ್ತೀಯೋ? ಹಾಗೆ ಮಾತನಾಡುವುದೇ ಆ ಮುದುಕನ ಸ್ವಭಾವ. ನಾನು ನಿನಗೆ ಏನಾದರೊಂದು ವ್ಯವಸ್ಥೆ ಮಾಡಿಯೇ ತೀರುತ್ತೇನೆ ತಾಳು. ನೀನೇನೂ ಚಿಂತಿಸಬೇಡ." ನರೇಂದ್ರ ಒಂದು ಕೆಲಸವನ್ನು ಕೈಗೆ ತೆಗೆದುಕೊಂಡನೆಂದರೆ ಅದನ್ನು ಸಾಧಿಸಿಯೇ ಸಿದ್ಧ. ಅವನಿನ್ನೂ ಹುಡುಗನಾಗಿದ್ದಾಗಲೇ ಸ್ನೇಹಿತರೊಂದಿಗೆ ಯುದ್ಧನೌಕೆಯನ್ನು ನೋಡಲು ಆಸೆಪಟ್ಟು ಹೋದಾಗ ಆ ದರ್ವಾನ 'ಹುಡುಗರಿಗೆಲ್ಲ ಪ್ರವೇಶವಿಲ್ಲ' ಎಂದು ಗದರಿದರೂ ಉಪಾಯವಾಗಿ 'ಬಡಾಸಾಹೇಬರ' ಬಳಿಗೇ ಹೋಗಿ, ಅನುಮತಿ ಪತ್ರ ತಂದ ಧೀರನಲ್ಲವೆ ಅವನು? ಮತ್ತು ಆ ಅಂಬಿಗರು ಗದರಿಸಿದಾಗ, ಸಿಪಾಯಿಗಳಿಂದ ಅವರನ್ನೇ ಹೆದರಿಸಿ ತನ್ನ ಕಾರ್ಯ ಸಾಧಿಸಿಕೊಂಡ ಪರಾಕ್ರಮಿಯಲ್ಲವೆ ಅವನು? ಈಗ ಈ ಗುಮಾಸ್ತೆಯನ್ನು ಹೇಗೆ ಬಗ್ಗಿಸಬೇಕು ಎನ್ನುವುದು ತಿಳಿಯದೆ ಅವನಿಗೆ! ಕಾರ್ಯಸಾಧನೆಗೆ ಧೈರ್ಯ ಬೇಕು, ಜೊತೆಗೆ ಯುಕ್ತಿ ಬೇಕು. ಈ ಎರಡೂ ತುಂಬಿಕೊಂಡಿವೆ ಅವನಲ್ಲಿ. ಹೀಗಿದ್ದ ಮೇಲೆ ಅವನು ತನ್ನ ಕಾರ್ಯವನ್ನು ಸಾಧಿಸದೆ ಬಿಡುತ್ತಾನೆಯೆ?

ಸಂಜೆಯು ವೇಳೆಗೆ ಕಾಲೇಜು ಮುಗಿಯಿತು; ಆದರೆ ನರೇಂದ್ರ ಎಂದಿನಂತೆ ಮನೆಯ ಕಡೆಗೆ ಹೆಜ್ಜೆ ಹಾಕಲಿಲ್ಲ. ಬದಲಾಗಿ, ಬೇರೆ ಯಾವುದೋ ಒಂದು ಗಲ್ಲಿಯ ಕಡೆಗೆ ನಡೆದ. ಅಲ್ಲೇನಪ್ಪ ಕೆಲಸ ಇವನಿಗೆ...? ಅಲ್ಲಿ ಒಂದು ಅಫೀಮಿನ ಅಂಗಡಿ ಇದೆ! ಮಾತ್ರವಲ್ಲ, ಅದು ಮುಖ್ಯಗುಮಾಸ್ತೆ ರಾಜ್‌ಕುಮಾರ ದಿನಾಲೂ ಸಾಯಂಕಾಲ ಭೇಟಿ ನೀಡುವಂಥ ಅಂಗಡಿ! ಇದನ್ನು ನರೇಂದ್ರ ಹೇಗೋ ಪತ್ತೆಹಚ್ಚಿಬಿಟ್ಟಿದ್ದಾನೆ. ರಾಜ್‌ಕುಮಾರನ ಬರವನ್ನೇ ಎದುರುನೋಡುತ್ತ ಅವನು ಮರೆಯಲ್ಲಿ ನಿಂತ. ಸೂರ್ಯ ಮುಳುಗಿ ನಸುಗತ್ತಲಾಗುತ್ತಲೇ ಅಲ್ಲಿ ನುಸುಳಿದ ರಾಜ್‌ಕುಮಾರ. ಕೂಡಲೇ ನರೇಂದ್ರ ಸೀದಾ ಅವನೆದುರಿಗೆ ಬಂದು ನಿಂತುಬಿಟ್ಟ. ರಾಜ್‌ಕುಮಾರನಿಗೆ ಗಾಬರಿಯಾಯಿತು. ಆದರೂ ಸಾಧ್ಯವಾದಷ್ಟು ಸಾವರಿಸಿಕೊಂಡು, "ಏ. . .ಏನು ದತ್ತ! ಇಲ್ಲಿದ್ದೀಯ!! ಇಲ್ಲಿಗೇಕೆ ಬಂದುಬಿಟ್ಟೆ?" ಎಂದು ತೊದಲಿದ. ಆಗ ನರೇಂದ್ರ ಶಾಂತವಾಗಿ ನುಡಿದ: "ಸರ್, ದಯವಿಟ್ಟು ನೀವು ಹರಿದಾಸನಿಗೆ ಶುಲ್ಕವಿನಾಯಿತಿ ಕೊಡಿಸಿ ಪರೀಕ್ಷೆಗೆ ಕುಳಿತುಕೊಳ್ಳಲು ಅವಕಾಶ ಕೊಡಬೇಕು. ಒಂದು ವೇಳೆ ನೀವು ಇದಕ್ಕೆ ಒಪ್ಪಿಕೊಳ್ಳದೆಹೋದರೆ ನಿಮ್ಮ ಗುಟ್ಟು ಬಯಲಾಗುತ್ತದೆ!" ಗುಮಾಸ್ತೆ ಬೆವತುಹೋದ. ಅವನು ಅಫೀಮಿನ ಚಟ ಅಂಟಿಸಿಕೊಂಡಿದ್ದರೂ ಕಾಲೇಜಿನಲ್ಲಿ, ಸಮಾಜದಲ್ಲಿ ಸಭ್ಯಸ್ಥನ ಮುಖವಾಡ ಹಾಕಿಕೊಂಡಿದ್ದ. ಈಗ ನರೇಂದ್ರ ಹೀಗೆಂದಾಗ ಅವನು ಪೂರ್ತಿ ಇಳಿದುಹೋಗಿ ನಯವಾದ ದನಿಯಲ್ಲಿ ನುಡಿದ: "ಏನಪ್ಪಾ ನರೇಂದ್ರ! ಅದಕ್ಕೆಲ್ಲ ಕೋಪಿಸಿಕೊಂಡುಬಿಟ್ಟೆಯಾ! ನಿನ್ನಿಷ್ಟದಂತೆಯೇ ಮಾಡೋಣ. ನೀನು ಕೇಳಿದಮೇಲೆ 'ಇಲ್ಲ' ಎನ್ನುವುದಕ್ಕಾಗುತ್ತದೆಯೆ. . . ಆದರೆ ನೋಡಪ್ಪ, ಅವನು ಕೊಡಬೇಕಾದ ಕಾಲೇಜು ಫೀಸನ್ನೇನೋ ಮಾಫಿ ಮಾಡಬಹುದು; ಪರೀಕ್ಷಾ ಶುಲ್ಕವನ್ನು ಮಾತ್ರ ಕಟ್ಟಬೇಕಾಗುತ್ತದಪ್ಪ." ನರೇಂದ್ರ ಇದಕ್ಕೊಪ್ಪಿ ಅವನ ಪಾಡಿಗೆ ಅವನನ್ನು ಬಿಟ್ಟು ಹೊರಟುಹೋದ.

ಮರುದಿನ ಮುಂಜಾವಿನಲ್ಲೇ ಅವನು ಹರಿದಾಸನ ಮನೆಗೆ ಹೋಗಿ ಉಲ್ಲಾಸದಿಂದ ಒಂದು ಹಾಡು ಹೇಳಲಾರಂಭಿಸಿದ. ಅದರ ಅರ್ಥ ಹೀಗಿದೆ:

'ಓ ಗೆಳೆಯ, ಈ ಮಧುರ ಮುಂಜಾನೆಯಲ್ಲಿ ಎದ್ದು ಪರಮಾತ್ಮನ ಅಪಾರ ವೈಭವದ ಮೇಲೆ ಧ್ಯಾನಮಾಡು. ಅದೋ ನೋಡು, ಆ ದೂರದ ಪರ್ವತಶಿಖರಗಳ ಮಧ್ಯದಲ್ಲಿ ಅರುಣಕಿರಣಧಾರಿಯಾದ ಸುಂದರ ಸೂರ್ಯ ಮೆಲ್ಲನೆ ಮೇಲೇರಿ ಬರುತ್ತಿದ್ದಾನೆ! ಇಂದಿನ ಈ ಮಂಗಲಕರ ದಿನದಂದು ಎಂಥ ಮಂಜುಳ ಮಂದ ಮಾರುತ ಬೀಸುತ್ತಿದೆ ನೋಡು! ಈ ಮಂದಮಾರುತವೂ ಕೂಡ ಭಗವಂತನ ವೈಭವ ವನ್ನು ಮಧುರವಾಗಿ ಹಾಡುತ್ತ, ಮಧುವನ್ನೇ ಸೂಸುತ್ತಿದೆ ನೋಡು! ನಾವೆಲ್ಲ ನಮ್ಮ ಹೃದಯುದಲ್ಲಿ ಪ್ರೇಮಭಕ್ತಿಯ ಕಾಣಿಕೆಯುನ್ನು ತುಂಬಿಕೊಂಡು, ಆ ಭಗವಂತನ ಧಾಮಕ್ಕೆ ಹೋಗೋಣ!'

ಬಳಿಕ, ನರೇಂದ್ರ ತನ್ನ ಗೆಳೆಯನಿಗೆ ಸಂತೋಷದ ಸುದ್ದಿಯನ್ನು ತಿಳಿಸಿ, ಹಿಂದಿನ ಸಂಜೆ ನಡೆದ ಘಟನೆಯನ್ನು ರಸವತ್ತಾಗಿ, ನಾಟಕೀಯವಾಗಿ ಬಣ್ಣಿಸಿದ. ಅದನ್ನು ಕೇಳಿದ ಹರಿದಾಸ ಹೊಟ್ಟೆಹುಣ್ಣಾಗುವಷ್ಟು ನಕ್ಕ. ನರೇಂದ್ರನೂ ಆ ನಗುವಿನಲ್ಲಿ ಸೇರಿಕೊಂಡ.

ಯುವಕ ನರೇಂದ್ರನ ಸ್ವಭಾವವೆಂಥದು, ಹೃದಯದ ಭಾವಸೂಕ್ಷ್ಮ ಎಂಥದು, ಇಡೀ ವ್ಯಕ್ತಿತ್ವವೆಂಥದು ಎನ್ನುವುದು ಆತನ ಒಡನಾಡಿಗಳು ಅವನ ಮೇಲಿಟ್ಟಿದ್ದ ಭಾವನೆಗಳ ಮೂಲಕ ತಿಳಿದುಬರುತ್ತದೆ. ಮುಂದೆ ಅವನ ಒಬ್ಬ ಸ್ನೇಹಿತ ಹೇಳುತ್ತಾನೆ:

"ನರೇಂದ್ರನ ಮಾತು ಕೇಳುವುದಕ್ಕೆ ಅದೆಷ್ಟು ಸೊಗಸು! ಅವನ ಕಂಠಸ್ವರವೇ ಕಿವಿಗಳಿಗೆ ಸಂಗೀತ. ಸುಮ್ಮನೆ ಅವನ ಮಾತುಗಳನ್ನು ಕೇಳಿ ಆನಂದಿಸುವುದಕ್ಕಾಗಿಯೇ ನಾವು ಏನಾದರೊಂದು ಚರ್ಚೆಯ ವಿಷಯುವನ್ನು ಎತ್ತುತ್ತಿದ್ದೆವು. ಅವನ ವಿಚಾರಧಾರೆ ತುಂಬ ಕುತೂಹಲಕಾರಿಯಾಗಿರುತ್ತಿತ್ತು. ಅಲ್ಲದೆ, ಸಂಪೂರ್ಣ ಸ್ವಂತಿಕೆಯಿಂದ ಕೂಡಿ ದ್ದಾಗಿರುತ್ತಿತ್ತು. ಅವನಿಂದ ಕೇಳಿಕೇಳಿಯೇ ನಾವು ಎಷ್ಟೋ ಕಲಿತುಕೊಳ್ಳುತ್ತಿದ್ದೆವು. ಆದರೆ ತನ್ನ ಮಾತನ್ನು ಯಾರಾದರೂ ಪ್ರತಿಭಟಿಸಿದರೋ, ತಕ್ಷಣ ತನ್ನ ಪ್ರಖರ ವಿಚಾರಧಾರೆಯಿಂದ ಮತ್ತು ಶಕ್ತಿಯುತ ಭಾಷಾಶೈಲಿಯಿಂದ ಪ್ರತಿವಾದಿಯ ಮೇಲೆರಗಿ ನಿಮಿಷಾರ್ಧದಲ್ಲಿ ಅವನ ಬಾಯಿ ಮುಚ್ಚಿಸಿಬಿಡುತ್ತಿದ್ದ! ದುರ್ಬಲತೆಯನ್ನು ಕಂಡರೇ ಆಗುತ್ತಿರಲಿಲ್ಲ ಅವನಿಗೆ. ನೆಪೋಲಿಯನ್ನನ ಮೇಲೆ ಅವನಿಗೆ ತುಂಬ ಮೆಚ್ಚುಗೆ. ಅವನು ಯಾವಾಗಲೂ ಒಂದು ವಿಷಯುವನ್ನು ಒತ್ತಿ ಹೇಳುತ್ತಿದ್ದ, ಏನೆಂದರೆ—ಯಾವುದೇ ಒಂದು ಮಹತ್ಕಾರ್ಯ ಸಾಧ್ಯವಾಗಬೇಕಾದರೆ ಕಾರ್ಯಕರ್ತರೆಲ್ಲರೂ ತಮ್ಮ ನಾಯಕ ನಲ್ಲಿ ಮರುಮಾತಿಲ್ಲದ ವಿಧೇಯತೆಯಿಂದಿರಬೇಕಾಗುತ್ತದೆ, ಅಂತ. ನಮ್ಮ ಪಾಲಿಗೆ ನರೇಂದ್ರ ಕರುಣೆಯ ಮೂರ್ತಿಯೇ ಆಗಿದ್ದ. ಒಮ್ಮೆ ಅವನು ಜ್ವರದಿಂದ ಹಾಸಿಗೆ ಹಿಡಿದಿದ್ದ. ನಾನು ಅವನನ್ನು ನೋಡಿಕೊಂಡುಬರಲು ಹೋದೆ. ಅವನು ಸಂಪೂರ್ಣ ನಿತ್ರಾಣನಾಗಿ ಮಲಗಿದ್ದ. ಆದರೆ ನನ್ನನ್ನು ನೋಡಿದ ಕೂಡಲೇ ಎದ್ದುನಿಂತು ನನ್ನನ್ನು ಸ್ವಾಗತಿಸಿ ಉಪಚರಿಸಲು ಮುಂದಾದ! ನಾನು ಅವನನ್ನು ತಡೆಯಲು ನೋಡಿದೆ, ಆದರೆ ಆತ ಕೇಳಲೇ ಇಲ್ಲ. ನಾನು ಅವನ ಅತಿಥಿಯಂತೆ, ಆದ್ದರಿಂದ ಅವನು ನನ್ನನ್ನು ಸತ್ಕರಿಸಲೇಬೇಕಂತೆ! ತನ್ನ ಕೈಯಿಂದಲೇ ನನಗಾಗಿ ಹುಕ್ಕಾ ತಯಾರಿಸಲು ತೊಡಗಿದ. ಮನೆಯ ಆಳು ಬಂದು ಈ ದೃಶ್ಯವನ್ನು ನೋಡಿ ದಿಗ್ಭ್ರಾಂತನಾಗಿ ನಿಂತ. ಆತನಿಗೆ ನರೇಂದ್ರನನ್ನು ಕಂಡರೆ ಭಕ್ತನಿಗೆ ಸಾಧುವೊಬ್ಬನ ಮೇಲಿರುವಂತಹ ಭಕ್ತಿ-ಪ್ರೇಮ. ನರೇಂದ್ರನೇ ಅವನಿಗೆ ಸರ್ವಸ್ವ. ಆದ್ದರಿಂದ ಆ ಸೇವಕ ನರೇಂದ್ರನನ್ನು ಬೈದು, ಒತ್ತಾಯಪಡಿಸಿ, ಸುಮ್ಮನಿರುವಂತೆ ಕೇಳಿಕೊಂಡ. . ."

ಸುಪ್ರಸಿದ್ಧ ಶಿಕ್ಷಣತಜ್ಞರೂ ಪಂಡಿತರೂ ಆದ ಡಾ. ವ್ರಜೇಂದ್ರನಾಥ ಸೀಲರು ತರುಣ ನರೇಂದ್ರನನ್ನು ನಿಕಟವಾಗಿ ಬಲ್ಲವರು; ಕಾಲೇಜಿನಲ್ಲಿ ಅವನಿಗಿಂತ ಒಂದು ವರ್ಷ ಹಿರಿಯರು. ನರೇಂದ್ರನ ಆಗಿನ ವ್ಯಕ್ತಿತ್ವದ ವೈಭವವನ್ನು ಬಣ್ಣಿಸುತ್ತ ಮುಂದೆ ಇವರು ಹೀಗೆನ್ನುತ್ತಾರೆ:

"ನಿಸ್ಸಂದೇಹವಾಗಿ ಅವನೊಬ್ಬ ಪ್ರತಿಭಾ ಸಂಪನ್ನನಾದ ತರುಣ; ಜನರೊಂದಿಗೆ ಸಹಜ ಸುಲಭವಾಗಿ ಬೆರೆಯಬಲ್ಲ ಸರಳ; ಶ್ರೇಷ್ಠ ದರ್ಜೆಯ ಹಾಡುಗಾರ; ಗೆಳೆಯರ ಗೋಷ್ಠಿಗಳಿಗೆ ಅವನಿದ್ದರೇ ಜೀವಕಳೆ! ಸಂಭಾಷಣ ಕಲೆಯಲ್ಲಿ ಮಹಾಪ್ರಚಂಡ, —ಆದರೆ ಮಾತು ಸ್ವಲ್ಪ ಖಾರ; ವ್ಯಂಗ್ಯದ ಮೊನೆಯುಳ್ಳ ತನ್ನ ಚಾಟೂಕ್ತಿಗಳಿಂದ ಸಾಮಾಜಿಕರ ಬಾಹ್ಯಾಡಂಬರದ, ತೋರಾಣಿಕೆಯ ಮುಸುಕನ್ನು ಇರಿದು ಈಡಾಡುತ್ತಿದ್ದ. ಮೇಲ್ನೋಟಕ್ಕೆ ವಕ್ರೋಕ್ತಿಯ ನಿಂದಕ; ಆದರೆ ಆ ಸರ್ವತಿರಸ್ಕಾರದ ಮುಸುಕಿನಲ್ಲಿ ಅಡಗಿದ್ದುದು ಮೃದುಲತರ ಹೃದಯ. ನೋಡುವವರ ಕಣ್ಣಿಗೆ ಲಂಗು ಲಗಾಮಿಲ್ಲದ ಸ್ವೇಚ್ಛಾಚಾರಿ; ಆದರೆ ಅವನೊಳಗಿತ್ತು—ಉಕ್ಕಿನಂಥ ಇಚ್ಛಾಶಕ್ತಿ. ಮಹಾ ಖಂಡಿತವಾದಿ; ಕಡ್ಡಿ ಮುರಿದಂತೆ ಮಾತು; ಆದರಲ್ಲಿ ಅಧಿಕಾರವಾಣಿಯ ಕಿಮ್ಮತ್ತು ತಾನೇತಾನಾಗಿತ್ತು. ಆದರೊಂದಿಗೆ, ಮಾತನಾಡುವಾಗ ಅವನ ಕಣ್ಣಿಂದ ಒಂದು ವಿಚಿತ್ರ ಶಕ್ತಿ ಹೊಮ್ಮುತ್ತಿತ್ತು; ಕೇಳುಗರನ್ನದು ಸರ್ಪಾಸ್ತ್ರದಂತೆ ಕಟ್ಟಿಹಾಕಿಬಿಡುತ್ತಿತ್ತು!. . . ಆತನಲ್ಲಿ ಪ್ರಖರ ಬುದ್ಧಿ ಸೂಕ್ಷ್ಮತೆಯಿಂದ ಬೆಳಗುತ್ತಿರುವ ಉದಾತ್ತ-ಪರಿಶುದ್ಧ ಚಾರಿತ್ರ್ಯವನ್ನು ನಾನು ಕಂಡುಕೊಂಡೆ. ಆದರೆ, ಅವನು ಮೊಂಡುಬುದ್ಧಿಯ ಸೋಗಿನ ಮಡಿವಂತನೆಂದು ಇದರ ಅರ್ಥವಲ್ಲ. . . ಸಂಪ್ರದಾಯಶರಣರನ್ನು, ದೊಡ್ಡಸ್ತಿಕೆಯವರನ್ನು ಅವರ ಸೌಧಗಳಲ್ಲೇ ಭೇದಿಸಿ ತಬ್ಬಿಬ್ಬು ಮಾಡುವುದೆಂದರೆ ಅವನಿಗೆ ಅದೇನು ಖುಷಿಯೊ! ಅವನು ತನ್ನ ಈ ವರ್ತನೆಯಿಂದ ನಿಕಟ ಗೆಳೆಯರನ್ನು ಬಿಟ್ಟು ಉಳಿದವರ ಪಾಲಿಗೆ ಬಿಡಿಸಲಾರದ ಒಗಟಾಗಿ ತೋರುತ್ತಿದ್ದ."

ಇದು ತರುಣ ನರೇಂದ್ರನ ವ್ಯಕ್ತಿಚಿತ್ರಣದ ಒಂದು ಭಾಗ ಮಾತ್ರ. ನಿಜಕ್ಕೂ ಅವನ ವ್ಯಕ್ತಿತ್ವ ಅದೆಷ್ಟು ಗಹನವಾದದ್ದು, ಬಹುಮುಖವಾದದ್ದು ಎಂದರೆ ಯಾರಿಗೂ ಅದನ್ನು ಅಳೆಯಲು ಸಾಧ್ಯವಿರಲಿಲ್ಲ.

ಈಗ ನರೇಂದ್ರನ ವಾರ್ಷಿಕ ಪರೀಕ್ಷೆಗಳು ಸಮೀಪಿಸುತ್ತಿವೆ. ಪರೀಕ್ಷೆಯೆಂದರೆ ಎಲ್ಲ ಕಾಲದಲ್ಲೂ ವಿದ್ಯಾರ್ಥಿಗಳಿಗೆ ಅಗ್ನಿಪರೀಕ್ಷೆಯೇ ಸರಿ. ಏಕೆಂದರೆ ಅವರ ಭವಿಷ್ಯ ಈ ಪರೀಕ್ಷೆಯನ್ನೇ ಅವಲಂಬಿಸಿಕೊಂಡಿರುತ್ತದೆ. ಹೆಚ್ಚು ಹಣ ತರುವ ಉದ್ಯೋಗ ಸಿಗಬೇಕಾದರೂ ಸನ್ಮಾನ ತರುವ ಪದವಿ-ಪ್ರಶಸ್ತಿ ಪಡೆಯಬೇಕಾದರೂ ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತೀರ್ಣರಾಗಲೇಬೇಕು. ಸಹಜವಾಗಿಯೇ ಅವರು ಇದಕ್ಕಾಗಿ ಬಹಳಷ್ಟು ಶಕ್ತಿಯನ್ನು ವಿನಿಯೋಗಿಸಬೇಕಾಗುತ್ತದೆ. ಭಗೀರಥ ಪ್ರಯತ್ನವನ್ನೇ ಮಾಡಬೇಕಾಗುತ್ತದೆ. ನರೇಂದ್ರ ಮಾತ್ರ ಈ ವಿಷಯದಲ್ಲಿ ಇತರರಂತಲ್ಲ. ಉಳಿದ ವಿದ್ಯಾರ್ಥಿಗಳಂತೆ ಅವನು ವರ್ಷವಿಡೀ ಕಷ್ಟಪಟ್ಟು ಓದುತ್ತಿರಲಿಲ್ಲ. ಕಾಲೇಜು ಅಧ್ಯಯನಕ್ಕಾಗಿ ಅವನು ಕನಿಷ್ಠ ಶ್ರಮವನ್ನಷ್ಟೇ ವಿನಿಯೋಗಿಸುತ್ತಿದ್ದ. ಉಳಿದ ಸಮಯ ಹಾಗೂ ಶಕ್ತಿಯನ್ನೆಲ್ಲ ಪಠ್ಯೇತರ ವಿಷಯಗಳ ಅಧ್ಯಯನ, ಧ್ಯಾನ, ಸಂಗೀತ, ವ್ಯಾಯಾಮ, ಚರ್ಚೆ—ಇವುಗಳಿಗೆ ಉಪಯೋಗಿಸುತ್ತಿದ್ದ. ಇವೆಲ್ಲಕ್ಕಿಂತ ಮುಖ್ಯವಾಗಿ, ಅವನ ಆಧ್ಯಾತ್ಮಿಕ ಪಿಪಾಸೆ ಅವನನ್ನು ಲೌಕಿಕ ವಿದ್ಯೆಯ ಕಡೆಗೆ ಹೆಚ್ಚಾಗಿ ಗಮನ ಕೊಡಲು ಬಿಡುತ್ತಿರಲಿಲ್ಲ.

ವಿಶ್ವವಿದ್ಯಾಲಯಗಳು ನೀಡುವ ಪದವಿಯಂತಹ ಲೌಕಿಕ ಸಂಪತ್ತಿಗಿಂತ ಆಧ್ಯಾತ್ಮಿಕ ಸಂಪತ್ತು ಎನ್ನುವುದು ಎಷ್ಟೋ ಪಾಲು ಘನತರವಾದದ್ದು ಎಂಬ ನಂಬಿಕೆ ಅವನಲ್ಲುಂಟಾಗಿತ್ತು. ಆದ್ದರಿಂದ, ಇಂತಹ ಲೌಕಿಕ ವಿದ್ಯೆಯಲ್ಲಿ ತಾನು ಅತ್ಯುತ್ತಮ ಶ್ರೇಣಿಯಲ್ಲಿ ಉತ್ತೀರ್ಣನಾಗಬೇಕು, ಸ್ವರ್ಣಪದಕ ಗಳಿಸಬೇಕು ಎಂಬ ಉತ್ಸಾಹವೇನೂ ಅವನಿಗಿರಲಿಲ್ಲ. ಪರೀಕ್ಷೆ ತೀರ ಹತ್ತಿರ ಬಂದಾಗ, ತೇರ್ಗಡೆಯಾಗಲು ಎಷ್ಟು ಬೇಕೋ ಅಷ್ಟು ಮಾತ್ರ ಓದುತ್ತಿದ್ದ, ಅಷ್ಟೆ. ನಿಜಕ್ಕೂ ಅವನು ತಯಾರಿಯನ್ನು ಪ್ರಾರಂಭಿಸುತ್ತಿದ್ದುದು ಪರೀಕ್ಷೆಗೆ ಕೆಲವೇ ದಿನಗಳ ಮೊದಲು. ಆದರೆ ಅವನ ಗ್ರಹಣಸಾಮರ್ಥ್ಯ, ನೆನಪಿನ ಶಕ್ತಿ ಎರಡೂ ಅದ್ಭುತವಾದದ್ದು. ಆದ್ದರಿಂದ ಅವನು ಹಾಗೆ ಮಾಡಿದರೂ ನಡೆದುಹೋಗುತ್ತಿತ್ತು.

ಈಗ ನರೇಂದ್ರನ ಬಿ.ಎ. ಪರೀಕ್ಷೆಗೆ ಒಂದೇ ತಿಂಗಳು ಉಳಿದಿದೆ. ಆದರೆ ಪರೀಕ್ಷೆಗೆ ಸೂಚಿತವಾಗಿದ್ದ ಒಂದು ಇತಿಹಾಸಗ್ರಂಥವನ್ನು ಅವನು ಏನೇನೂ ಓದಿರಲಿಲ್ಲ. ಅಲ್ಲದೆ ಅವನ ಹತ್ತಿರ ಆ ಪುಸ್ತಕ ಕೂಡ ಇರಲಿಲ್ಲ. ಆಗ ಹೋಗಿ ಎಲ್ಲಿಂದಲೋ ಒಂದು ಪ್ರತಿಯನ್ನು ತಂದ. ತಂದವನೇ, ಅದನ್ನು ಅಧ್ಯಯನ ಮಾಡಿ ವಿಷಯವನ್ನು ಸ್ವಾಧೀನಪಡಿಸಿಕೊಳ್ಳುವವರೆಗೆ ಹೊರಗೆ ಹೋಗುವುದೇ ಇಲ್ಲ ಎಂದು ವ್ರತಧಾರಿಯಾಗಿ ಕುಳಿತುಬಿಟ್ಟ. ಮತ್ತು ಮೂರೇ ದಿನಗಳಲ್ಲಿ ಆ ಪುಸ್ತಕವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಮುಗಿಸಿಯೂಬಿಟ್ಟ! ಆದರೆ ಅವನ ಮನೆಯಲ್ಲಿ ಜನ ಹೆಚ್ಚು, ಗಲಾಟೆಯೂ ಹೆಚ್ಚು. ಆದ್ದರಿಂದ ಅವನು ಉಳಿದ ಪುಸ್ತಕಗಳ ಅಧ್ಯಯನವನ್ನು ಮುಗಿಸಲು, ಸಮೀಪದಲ್ಲೇ ಇದ್ದ ತನ್ನ ಅಜ್ಜಿಯ ಮನೆಗೆ ಹೋದ. ಅಲ್ಲಿ ಒಂದೆಡೆ ಸ್ಥಿರವಾಗಿ ಕುಳಿತು ಹಗಲೂರಾತ್ರಿ ಅಧ್ಯಯನ ಆರಂಭಿಸಿದ. ಆಯಾ ದಿನ ಎಷ್ಟೆಷ್ಟು ಓದಿ ಮುಗಿಸಬೇಕು ಎಂದು ಗುರುತು ಹಾಕಿಕೊಂಡು, ಅಷ್ಟನ್ನೂ ಓದಿ ಮುಗಿಸದೆ ಅಲ್ಲಿಂದ ಕದಲುವುದಿಲ್ಲ ಎಂದು ತನಗೆ ತಾನೇ ಕಟ್ಟುಪಾಡು ಹಾಕಿಕೊಂಡು, ಕುಳಿತುಬಿಡುತ್ತಿದ್ದ. ಆಗ ತಾವು ಪರೀಕ್ಷೆಗಾಗಿ ಓದಿದ ಕ್ರಮವನ್ನು ಮುಂದೆ ಸ್ವಾಮಿ ವಿವೇಕಾನಂದರು ತಿಳಿಸುತ್ತಾರೆ: "ನಾನು ಪುಸ್ತಕ ಹಿಡಿದುಕೊಂಡು ಕೋಣೆಯಲ್ಲಿ ಕುಳಿತುಬಿಡುತ್ತಿದ್ದೆ. ಓದಿಓದಿ ಮೆದುಳಿಗೆ ದಣಿವಾದಾಗ ಅದನ್ನು ಸ್ವಲ್ಪ ತಣಿಸಲು ಹತ್ತಿರದಲ್ಲೇ ಒಳ್ಳೇ ಸ್ಟ್ರಾಂಗ್ ಚಹಾ ಅಥವಾ ಕಾಫಿಯನ್ನು ಇಟ್ಟುಕೊಂಡಿರುತ್ತಿದ್ದೆ. ರಾತ್ರಿ ಕಣ್ಣಿಗೆ ಮಂಪರು ಕವಿಯುವಂತಾದಾಗ ಕಾಲಿಗೆ ಒಂದು ಹಗ್ಗ ಕಟ್ಟಿಕೊಳ್ಳುತ್ತಿದ್ದೆ. ಓದುತ್ತಿರುವಂತೆಯೇ ನಿದ್ರೆ ಬಂದು ಹಿಂದಕ್ಕೆ ಒರಗಿಕೊಂಡರೆ ಆ ಹಗ್ಗ ತಕ್ಷಣ ನನ್ನನ್ನು ಜಗ್ಗಿ ಎಳೆದಂತಾಗಿ ಎಚ್ಚರಗೊಳ್ಳುತ್ತಿದ್ದೆ, ಮತ್ತೆ ಓದಲು ಆರಂಭಿಸುತ್ತಿದ್ದೆ."

ಅಜ್ಜಿಯ ಮನೆಯ ತನ್ನ ಕೋಣೆಯಲ್ಲಿ ಓದಿಕೊಳ್ಳುತ್ತಿದ್ದಾಗ ನರೇಂದ್ರ ಮಧ್ಯೆ ಮಧ್ಯೆ ಬಿಡುವಿನ ವೇಳೆಯಲ್ಲಿ ತನ್ನಷ್ಟಕ್ಕೆ ತಾನೇ ಹಾಡಿಕೊಳ್ಳುತ್ತಿದ್ದ. ಆ ಮನೆಯ ಎದುರುಸಾಲಿನಲ್ಲೇ ಇನ್ನೊಂದು ಮನೆಯಲ್ಲಿ ಒಬ್ಬಳು ಬಾಲವಿಧವೆಯಿದ್ದಳು; ಇನ್ನೂ ಚಿಕ್ಕ ವಯಸ್ಸು. ಈಕೆ ತನ್ನ ಕೋಣೆಯ ಕಿಟಕಿಯ ಬಳಿ ನಿಂತು ನರೇಂದ್ರನ ಮಧುರ ಗಾಯನವನ್ನು ಆಲಿಸುತ್ತಿದ್ದಳು. ಎಷ್ಟೋ ದಿನಗಳಿಂದ ಹೀಗೆಯೇ ನಡೆಯುತ್ತಿತ್ತು. ಅವಳು ನರೇಂದ್ರನನ್ನು ಅವನಿಗೆ ತಿಳಿಯದಂತೆಯೇ ಹಲವಾರು ಸಲ ನೋಡಿದ್ದಳು. ಅವನ ರೂಪ ಕಣ್ಣಿಗೆ ಒಪ್ಪಿತ್ತು; ಅವನ ವ್ಯಕ್ತಿತ್ವ ಮನಸ್ಸಿಗೆ ಬಂದಿತ್ತು. ಒಂದು ದಿನ ಮಾತ್ರ ಅವಳು ತನ್ನ ಮನೆಯಿಂದ ಹೊರಟುಬಂದು ನರೇಂದ್ರನ ಕೋಣೆಯ

ಬಾಗಿಲಲ್ಲೇ ನಿಂತುಬಿಟ್ಟಿದ್ದಾಳೆ! ಸಂಜೆಯಾದ್ದರಿಂದ ಅರೆಗತ್ತಲು. ನರೇಂದ್ರ ನೋಡುತ್ತಾನೆ—ಅಪರಿಚಿತ ಯುವತಿ ನಿಂತಿದ್ದಾಳೆ; ಅವಳ ಮುಖದಲ್ಲಿ ಶೃಂಗಾರಭಾವ ಮೂಡಿ ಬರುತ್ತಿದೆ. . . ನರೇಂದ್ರನಿಗೆ ತಬ್ಬಿಬ್ಬಾಯಿತು. ಅವನು ಈ ಮೊದಲು ಅವಳನ್ನೆಂದೂ ಕಂಡವನಲ್ಲ. ಕೂಡಲೇ ಅವನು "ತಾಯೀ, ತಾಯೀ!" ಎಂದು ಉದ್ಗರಿಸುತ್ತ ಅವಳ ಪಾದಕ್ಕೆ ಬಿದ್ದುಬಿಟ್ಟ! ಮತ್ತೆ ಗಟ್ಟಿಯಾಗಿ ನುಡಿದ, "ತಾಯಿ! ಯಾಕಿಲ್ಲಿಗೆ ಬಂದಿರುವೆ? ನೀನು ನನ್ನ ಹೆತ್ತತಾಯಿಗೆ ಸಮ!" ಹುಡುಗಿಗೆ ಅರ್ಥವಾಯಿತು. ಮರುಕ್ಷಣವೇ ಅವಳು ಅಲ್ಲಿಂದ ಕಣ್ಮರೆಯಾದಳು. ನರೇಂದ್ರ ತನ್ನ ಜೀವನದ ಒಂದು ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಅಪರಂಜಿಯಂತೆ ಹೊರಬಂದಿದ್ದ. ಮರುದಿನವೇ ಅವನು ಆ ಮನೆಯನ್ನು ಬಿಟ್ಟುಬಿಟ್ಟ. ಮತ್ತೆ ಆ ಕೋಣೆಗೆ ಅವನು ಕಾಲುಹಾಕಲೇ ಇಲ್ಲ.

ಬಿ.ಎ. ಪರೀಕ್ಷೆಗೆ ನರೇಂದ್ರನ ತಯಾರಿಯೆಲ್ಲ ಮುಗಿಯಿತು. ಆದರೆ ಪರೀಕ್ಷೆಯ ಹಿಂದಿನ ದಿನ ಬೆಳಗ್ಗೆ ಅವನೊಂದು ವಿಚಿತ್ರ ಮನಸ್ಥಿತಿಯಲ್ಲಿದ್ದ. 'ಈ ಪುಸ್ತಕಗಳನ್ನೆಲ್ಲ ಎಸೆದುಬಿಡೋಣ; ಈ ವಿದ್ಯೆಯಿಂದ ಏನು ಪ್ರಯೋಜನ?' ಎನ್ನುವ ಈ ಭಾವನೆ ಅವನಲ್ಲುಂಟಾಗಿಬಿಟ್ಟಿತ್ತು. ಇದು ಕೆಲವು ವಿದ್ಯಾರ್ಥಿಗಳಿಗೆ ಪರೀಕ್ಷೆಯ ಸಮಯದಲ್ಲಿ ಉದ್ಭವಿಸುವ ವೈರಾಗ್ಯದಂತಲ್ಲ. ಅವನಲ್ಲಿ ಅಧ್ಯಾತ್ಮಭಾವ ಜಾಗೃತವಾಗಿಬಿಟ್ಟಿದೆ. ಅವನ ಮುಖ ತೇಜಃಪುಂಜವಾಗಿ ಬೆಳಗುತ್ತಿದೆ. ತನ್ನ ಸಹಪಾಠಿಗಳ ಮುಂದೆ ಆತ ಭಾವ ಭರಿತನಾಗಿ, ಆನಂದಪರವಶನಾಗಿ ಹಾಡುತ್ತಾನೆ:

*ಬರಿಯ ಮಕ್ಕಳು ನಾವು, ತಿಳಿವು ಸಾಲದು ನಮಗೆ*
*ಜ್ಞಾನ ಸಾಗರನಿಹನು ಶರಣಾಗು ಅವಗೆ॥*

ಮತ್ತೆ ಭಗವಂತನನ್ನು ಗುಣಗಾನ ಮಾಡುವ ಹಾಡೊಂದನ್ನು ಹಾಡುತ್ತಾನೆ:

*ಓ ಪರ್ವತಶಿಖರಗಳೇ ನೀವು ಹಾಡಿರಿ*
*ಓಲಾಡುವ ಮೋಡಗಳೇ ನೀವು ಹಾಡಿರಿ*
*ಬೀಸುವ ಮರುತ್ತುಗಳೇ ನೀವು ಹಾಡಿರಿ*
*ಹಾಡಿ ಹಾಡಿ ದಣಿಯಿರೈ ಅವನ ಮಹಿಮೆಯ॥*

*ಓ ಸೂರ್ಯಚಂದ್ರರೇ, ಹೊಳೆವ ತಾರೆಗಳೇ,*
*ಹಾಡಿ ಹಾಡಿ ಕುಣಿಯಿರೈ ಅವನ ಮಹಿಮೆಯ॥*

ಹೀಗೆ ಆ ದಿನ ಬೆಳಗ್ಗೆ ಸುಮಾರು ಒಂಬತ್ತು ಗಂಟೆಯುವರೆಗೂ ಆನಂದದಿಂದ ಹಾಡುತ್ತಲೇ ಇದ್ದ; ಸಹಪಾಠಿಗಳ ಜೊತೆಗೆ ಮಾತನಾಡುತ್ತಲೇ ಇದ್ದ. ಆದರೆ ಇತರರು ಅಂತಹ ಸ್ಥಿತಿಗೇರಲು ಸಾಧ್ಯವೆ? ಅದನ್ನು ಅರ್ಥಮಾಡಿಕೊಳ್ಳಲಾದರೂ ಸಾಧ್ಯವೆ? ಕೊನೆಗೆ ಒಬ್ಬ ಸ್ನೇಹಿತ ಮಧ್ಯೆ ಪ್ರವೇಶಿಸಿ, "ನಾಳೆ ಪರೀಕ್ಷೆ ಇದೆ, ನರೇನ್!" ಎಂದು ಹೇಳಿಯೇಬಿಟ್ಟ. ಆದರೆ ನರೇಂದ್ರ ಅದರ ಕಡೆ ಗಮನ ಕೊಡಬೇಕಲ್ಲ! ಮರುದಿನದ ಪರೀಕ್ಷೆಯಲ್ಲಿ ಅವನು ಬರೆದದ್ದೂ ಆಯಿತು, ಉತ್ತೀರ್ಣನೂ ಆದ. ಅವನಂತಹ ಅಸಾಮಾನ್ಯ ಬುದ್ಧಿಶಾಲಿಗೆ ಇಂತಹ ಪರೀಕ್ಷೆಗಳೆಲ್ಲ ಯಾವ ಲೆಕ್ಕ.

ಭಾರತದಾದ್ಯಂತ ರಾಜಕೀಯ ಆಂದೋಳನಗಳು ಪ್ರಾರಂಭವಾಗಿದ್ದ ಸಮಯ ಅದು. ಜನರಲ್ಲೆಲ್ಲ ರಾಷ್ಟ್ರಪ್ರಜ್ಞೆ ಜಾಗೃತವಾಗುತ್ತಿತ್ತು, ಸ್ವತಂತ್ರ ಭಾರತದ ಕಲ್ಪನೆಯೊಂದು ಮೂಡಿಬರುತ್ತಿತ್ತು. ಅನೇಕ ಧುರೀಣರು ಯುವಜನರ ಮನಸ್ಸಿನಲ್ಲಿ ರಾಷ್ಟ್ರಭಕ್ತಿಯ ಸ್ಫುರಣೆ ಮಾಡತೊಡಗಿದ್ದರು. ಅಂಗಸಾಧನೆ ಕೈಗೊಂಡು, ಶರೀರವನ್ನು ವಜ್ರಸಮವಾಗಿ ಬೆಳೆಸುವುದು ರಾಷ್ಟ್ರಪ್ರೇಮದ ಹೆಗ್ಗುರುತು ಎಂಬ ಅಭಿಪ್ರಾಯ ಪ್ರಚಲಿತವಾಗತೊಡಗಿತು. ಸುರೇಂದ್ರನಾಥ ಬ್ಯಾನರ್ಜಿ ಮತ್ತು ಆನಂದಮೋಹನ ಬಸು ಎಂಬ ಮುಖಂಡರು, ಬಂಗಾಳದ ಪ್ರತಿಯೊಬ್ಬ ಯುವಕನೂ ಶಾರೀರಿಕವಾಗಿ ಅತ್ಯಂತ ಬಲಶಾಲಿಯಾಗಿರಬೇಕು ಮತ್ತು ತೀವ್ರಗಾಮಿಯಾಗಬೇಕು ಎಂದು ಘೋಷಿಸುತ್ತಿದ್ದರು. ನರೇಂದ್ರನಿಗೆ ಈ ಅಭಿಪ್ರಾಯ ಸಂಪೂರ್ಣ ಒಪ್ಪಿಗೆಯಾಯಿತು. ಆಯಾ ಕಾಲಸ್ಥಿತಿಗೆ, ಆವಶ್ಯಕತೆಗೆ ಸೂಕ್ತವಾದುದನ್ನು ಗ್ರಹಿಸಿ ನೆರವೇರಿಸುವಲ್ಲಿ ಅವನು ಯಾವಾಗಲೂ ಮುಂದು. ಸರಿ, ಸ್ವಲ್ಪವೂ ಕಾಲವಿಳಂಬ ಮಾಡದೆ ಅಂಬು ಗುಹ ಎಂಬವನ ವ್ಯಾಯಾಮಶಾಲೆಗೆ ಸೇರಿಕೊಂಡು, ಹೊಸ ಹುರುಪಿನಿಂದ ವ್ಯಾಯಾಮ-ಮಲ್ಲಯುದ್ಧಾದಿಗಳ ಅಭ್ಯಾಸದಲ್ಲಿ ನಿರತನಾದ. ಅದೇ ವ್ಯಾಯಾಮಶಾಲೆಗೆ ಅವನಂತೆಯೇ ಇನ್ನೂ ಎಷ್ಟೋ ಯುವಕರು ಧಾವಿಸಿಬಂದರು. ಅವರಲ್ಲಿ ಮುಂದೆ ಶ್ರೀರಾಮಕೃಷ್ಣರ ಆಶ್ರಯಕ್ಕೆ ಬಂದು ನರೇಂದ್ರನ ಸಹಶಿಷ್ಯನಾದ ರಾಖಾಲನೂ ಒಬ್ಬ.

ನರೇಂದ್ರನೀಗ ಅಂದಿನ ಕಾಲದ ಕ್ರಾಂತಿಕಾರೀ ವಿಚಾರಧಾರೆಯಲ್ಲಿ ವಿಶೇಷ ಆಸಕ್ತಿ ತಳೆದ. ಆ ದಿನಗಳಲ್ಲಿ ಬ್ರಾಹ್ಮಸಮಾಜ ಎಂಬ ಒಂದು ಹೊಸ ಧಾರ್ಮಿಕ ಪಂಥ ಬಂಗಾಳದ ಜನರ ಮೇಲೆ ಶಕ್ತಿಯುತವಾಗಿ ಪ್ರಭಾವ ಬೀರುತ್ತಿತ್ತು. ಇದು ತನ್ನದೇ ಆದ ನಿರ್ದಿಷ್ಟ ಸಿದ್ಧಾಂತಗಳನ್ನು ಹೊಂದಿದ್ದು, ತಾನು ಹಿಂದೂಧರ್ಮದಿಂದ ಪ್ರತ್ಯೇಕ ಎಂದು ಘೋಷಿಸಿಕೊಂಡಿತ್ತು. ಅತ್ತ ಸಾಂಪ್ರದಾಯಿಕ ಹಿಂದೂಸಮಾಜವು ಸೊರಗಿ ಮೃತಪ್ರಾಯವಾಗಿದ್ದರೆ, ಅದಕ್ಕೆ ಸರಿವಿರುದ್ಧವಾಗಿ ಬ್ರಾಹ್ಮಸಮಾಜ ಅತ್ಯಂತ ತೇಜಸ್ವಿಯಾಗಿ, ಕ್ರಿಯಾಶೀಲವಾಗಿ ಬೆಳೆಯುತ್ತಿತ್ತು. ಕೇಶವಚಂದ್ರ ಸೇನ ಎಂಬವನು ಬ್ರಾಹ್ಮಸಮಾಜದ ಮುಖಂಡನಾಗಿದ್ದ. ಅವನು ನೂರಾರು ವೇದಿಕೆಗಳ ವಾಗ್ಮಿವೀರ. ಹರಿತ ವಿಚಾರಗಳಿಂದ ಕೂಡಿದ ಅವನ ಪ್ರಚಂಡ ವಾಕ್ಪಟುತ್ವಕ್ಕೆ ಅಂದಿನ ವಿದ್ಯಾವಂತ ಜನಾಂಗ ಮಾರುಹೋಗಿತ್ತು. ಯುವಬಂಗಾಳದ ಆರಾಧ್ಯದೇವತೆಯೇ ಆಗಿಬಿಟ್ಟಿದ್ದ ಅವನು.

ಅನೇಕ ಶತಮಾನಗಳ ಬ್ರಿಟಿಷರ ದಬ್ಬಾಳಿಕೆ, ಕ್ರೈಸ್ತ ಮತೀಯರ ಆಕ್ರಮಣಶೀಲ ಮನೋಭಾವ, ಮುಸಲ್ಮಾನ ಸಂಸ್ಕೃತಿಯ ಸಂಮಿಶ್ರಣ ಮತ್ತು ಸ್ವತಃ ಹಿಂದೂಧರ್ಮದ ಲೋಪದೋಷಗಳು—ಈ ಎಲ್ಲವುಗಳ ಒಟ್ಟು ಪರಿಣಾಮದಿಂದಾಗಿ ಹದಿನೆಂಟು-ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ಹಿಂದೂಧರ್ಮ ಅತ್ಯಂತ ಹೀನ ಸ್ಥಿತಿಯನ್ನು ತಲುಪಿದಂತೆ ಕಂಡುಬಂದಿತು. ಈ ಸಮಯದಲ್ಲಿ ಎಚ್ಚತ್ತುಕೊಂಡ ಕೆಲವು ವಿದ್ಯಾವಂತರು ಸೇರಿ, ಹೊಸದೊಂದು ಪಂಥವನ್ನು ಆವಿಷ್ಕರಿಸಿದರು. ಅದೇ ಬ್ರಾಹ್ಮಸಮಾಜ. ಸನಾತನ ಹಿಂದೂಧರ್ಮ ತನ್ನ ಸಂಪ್ರದಾಯಗಳನ್ನೆಲ್ಲ ಹಾಗೆಹಾಗೆಯೇ

ಉಳಿಸಿಕೊಂಡು ಜೀವಿಸುವ ದುರ್ಬಲ ಪ್ರಯತ್ನ ಮಾಡುತ್ತಿದ್ದರೆ, ಈ ನೂತನ ಪಂಥವು ಹಿಂದೂಧರ್ಮಕ್ಕೆ ಬದಲಾಗಿ ನಿಲ್ಲುವ ಸನ್ನಾಹದಲ್ಲಿತ್ತು. ಆದರೆ ತತ್ತ್ವಶಃ ಇದು ಹಿಂದೂಧರ್ಮಕ್ಕೆ ವ್ಯತಿರಿಕ್ತವಾದ, ವಿಭಿನ್ನವಾದ ಪಂಥವೇನಾಗಿರಲಿಲ್ಲ. ಹಿಂದೂ ಧರ್ಮದ ಯಾವ ಅಂಶಗಳನ್ನು ಬ್ರಾಹ್ಮಸಮಾಜೀಯರು ಸಂಕುಚಿತವಾದವುಗಳು, ಕಂದಾಚಾರಗಳು, ಮೂಢನಂಬಿಕೆಗಳು ಎಂದು ತೀರ್ಮಾನಿಸಿದ್ದರೋ ಅಂಥವುಗಳನ್ನೆಲ್ಲ ಕತ್ತರಿಸಿ ತೆಗೆದು, ಅದರ ಕೆಲವು ಶ್ರೇಷ್ಠವಾದ-ವಿಚಾರಸಮ್ಮತವಾದ ಅಂಶಗಳನ್ನು ಮಾತ್ರ ಉಳಿಸಿಕೊಂಡರು. ಜೊತೆಗೆ, ಇತರ ಧರ್ಮಗಳಿಂದಲೂ ಅನೇಕ ಉತ್ತಮ ಅಂಶಗಳನ್ನು ಸೇರಿಸಿಕೊಂಡರು. ಈ ಸಂಸ್ಥೆಯ ಜನಕ ರಾಮಮೋಹನ ರಾಯ್. ಇವನ ಬುದ್ಧಿಶಕ್ತಿ ಅಪ್ರತಿಮ, ಇಚ್ಛಾಶಕ್ತಿ ಅದಮ್ಯ. ಇವನು ಕೆಚ್ಚೆದೆಯ ವೀರ, ಬಹುಜನ ಸಮ್ಮಾನಿತ, ಸಜ್ಜನ. ಹಿಂದೂಧರ್ಮದಲ್ಲಿ ಕಾಲಕ್ರಮದಿಂದ ಬೆಳೆದುಬಂದಿದ್ದ ಹಲವಾರು ಲೋಪದೋಷಗಳನ್ನೂ ರಾಷ್ಟ್ರಕ್ಕೇ ಮೃತ್ಯುಸ್ವರೂಪವಾದ ದುಷ್ಟಸಂಪ್ರದಾಯಗಳನ್ನೂ ನಿರ್ಮೂಲ ಮಾಡುವ, ರಾಷ್ಟ್ರನಾಡಿಯಲ್ಲಿ ಹೊಸ ರಕ್ತವನ್ನು ಹರಿಸುವ ಧೀರಪ್ರಯತ್ನ ಮಾಡಿದ ಈತ. ಇವನ ಕಾಲಾನಂತರ ಮಹರ್ಷಿ ದೇವೇಂದ್ರನಾಥ ಟಾಗೋರ್ ಹಾಗೂ ಕೆಲಕಾಲದ ಮೇಲೆ ಕೇಶವಚಂದ್ರ ಸೇನ—ಇವರು ಬ್ರಾಹ್ಮ ಸಮಾಜವನ್ನು ನಡೆಸಿಕೊಂಡು ಬಂದರು. ಬ್ರಾಹ್ಮಸಮಾಜವು ತೇಜಸ್ವಿಯಾಗಿ ಬೆಳಗಿ, ಚರಿತ್ರೆಯಲ್ಲಿ ಒಂದು ಪ್ರಮುಖ ಸ್ಥಾನವನ್ನು ಗಳಿಸಲು ಇವರಿಬ್ಬರ ನಾಯಕತ್ವವೇ ಕಾರಣ ಎನ್ನಬೇಕು.

ಬ್ರಾಹ್ಮಸಮಾಜವು ಹಿಂದೂಧರ್ಮದಲ್ಲಿ ಪ್ರಚಲಿತವಿದ್ದ ಹಲವಾರು ಸಿದ್ಧಾಂತಗಳನ್ನು ಬಲವಾಗಿ ವಿರೋಧಿಸುತ್ತಿತ್ತು. ಬಹುದೇವತಾ ವಾದವನ್ನು, ಎಂದರೆ ಹಲವು ದೇವ-ದೇವತೆಗಳ ಅಸ್ತಿತ್ವವನ್ನೂ ಆರಾಧನೆಯನ್ನೂ ಅದು ಒಪ್ಪುತ್ತಿರಲಿಲ್ಲ; ದೇವರು ನಾನಾ ರೂಪಗಳನ್ನು ತಾಳಬಲ್ಲನೆಂದೂ ಒಪ್ಪುತ್ತಿರಲಿಲ್ಲ. ಆದ್ದರಿಂದ ಮೂರ್ತಿಪೂಜೆಯನ್ನು ಮೌಢ್ಯವೆಂದು ಹೀಗಳೆಯುತ್ತಿತ್ತು. ಅವತಾರತತ್ತ್ವವನ್ನೂ ಅದು ಮನ್ನಿಸುತ್ತಿರಲಿಲ್ಲ. ಆಧ್ಯಾತ್ಮಿಕ ಜೀವನ ನಡೆಸಲು ಒಬ್ಬ ಗುರುವಿನ ಆವಶ್ಯಕತೆ ಇದೆ ಎಂಬ ವಾದವನ್ನೂ ಅದು ತಿರಸ್ಕರಿಸುತ್ತಿತ್ತು. ಆದರೆ ಅದು ದೇವರ ಅಸ್ತಿತ್ವವನ್ನೇ ನಿರಾಕರಿಸಿತ್ತೆಂದಲ್ಲ; ಬದಲಾಗಿ ಏಕದೇವತಾ ವಾದವನ್ನು, ಎಂದರೆ ಇರುವವನೊಬ್ಬನೇ ದೇವರು ಎಂಬ ತತ್ತ್ವವನ್ನು ಪ್ರತಿಪಾದಿಸುತ್ತಿತ್ತು. ಅಲ್ಲದೆ ಬ್ರಾಹ್ಮಸಮಾಜವು ಸಮಾಜಸುಧಾರಣೆಯ ಕಡೆಗೆ ವಿಶೇಷ ಗಮನ ಕೊಟ್ಟಿತ್ತು. ಮೊದಲನೆಯದಾಗಿ ಜಾತಿಪದ್ಧತಿಯನ್ನು ನಿರ್ಮೂಲಗೊಳಿಸಲು ಅದು ಪ್ರಯತ್ನಿಸುತ್ತಿತ್ತು; ಪ್ರತಿಯೊಬ್ಬ ಮಾನವನ ಮೂಲಭೂತ ಹಕ್ಕುಗಳಿಗಾಗಿ ಅದು ಹೋರಾಡುತ್ತಿತ್ತು; ಸ್ತ್ರೀಯರ ವಿದ್ಯಾಭ್ಯಾಸ ಹಾಗೂ ಸರ್ವತೋಮುಖ ಅಭಿವೃದ್ಧಿಗಾಗಿ ಅದು ಪ್ರಯತ್ನ ನಡೆಸುತ್ತಿತ್ತು; ಇದರೊಂದಿಗೆ ಬಾಲ್ಯ ವಿವಾಹವೇ ಮೊದಲಾದ ಅನಿಷ್ಟ ಪದ್ಧತಿಗಳನ್ನು ತೊಡೆದುಹಾಕುವ ಹಾಗೂ ಸ್ತ್ರೀಯರ ವಿವಾಹದ ಕನಿಷ್ಠ ವಯೋಮಿತಿಯನ್ನು ಏರಿಸುವ ಪ್ರಯತ್ನ ಮಾಡುತ್ತಿತ್ತು. ಹೀಗೆ ಅದು ಮಹತ್ತರವಾದ ಕಾರ್ಯಪ್ರಣಾಳಿಯನ್ನೇನೋ ಹಾಕಿಕೊಂಡಿತ್ತು. ಆದರೆ ನಿರೀಕ್ಷಿಸಿದ ಯಶಸ್ಸು ಅದಕ್ಕೆ ಲಭಿಸಲಿಲ್ಲ. ಅಲ್ಲದೆ ಈ ಬ್ರಾಹ್ಮಸಮಾಜದವರು ಒಂದು ಪ್ರಮುಖವಾದ ಅಂಶವನ್ನು ಕಡೆಗಣಿಸಿಬಿಟ್ಟಿದ್ದರು—ಈ ಸುಧಾರಣೆಗಳೆಲ್ಲ ಸಮಾಜದ ಅಂತರಂಗದಿಂದ ಮೂಡಿಬರಬೇಕೇ ಹೊರತು, ಹೊರಗಿನಿಂದ ಹೇರುವುದರ ಮೂಲಕ

ಅಥವಾ ಕೇವಲ ಕಾನೂನಿನ ಮೂಲಕ ಏನನ್ನೂ ಸಾಧಿಸಲಾಗುವುದಿಲ್ಲ; ಒಂದು ವೇಳೆ ಸುಧಾರಣೆ ಕಂಡುಬಂದರೂ ಅದು ಬಹುಕಾಲ ಉಳಿಯುವುದಿಲ್ಲ ಎಂಬ ಸತ್ಯವನ್ನು ಬ್ರಾಹ್ಮಸಮಾಜದ ಧುರೀಣರು ಅರಿತುಕೊಳ್ಳಲಿಲ್ಲ. ಆ ಪ್ರಣಾಳಿಗಳನ್ನು ಕಾರ್ಯಗತ ಗೊಳಿಸಲು ಬೇಕಾದ ಸಂಪನ್ಮೂಲಗಳಾಗಲಿ ಜನರ ಸಹಕಾರವಾಗಲಿ ಅಗತ್ಯವಿದ್ದಷ್ಟು ದೊರೆಯಲಿಲ್ಲ. ಜೊತೆಗೆ ನಾನಾ ಕಾರಣಗಳಿಂದ ಅದರ ಒಳಗೊಳಗೇ ಒಡಕು ಗಳುಂಟಾಗುತ್ತಿದ್ದುವು.

ಈ ಲೋಪದೋಷಗಳೇನೇ ಇದ್ದರೂ ಆ ಕಾಲಕ್ಕೆ ಬ್ರಾಹ್ಮಸಮಾಜದ ವಿಚಾರ ಧಾರೆ ಹೊಚ್ಚಹೊಸದಾಗಿತ್ತು. ಅಲ್ಲದೆ, ವಿಚಾರವಂತರ ದೃಷ್ಟಿಗೆ ಅದು ತುಂಬ ಸೂಕ್ತವಾಗಿ ಕಂಡುಬರುತ್ತಿತ್ತು. ಆದ್ದರಿಂದ ಬಂಗಾಳದ ಎಷ್ಟೋ ಮಂದಿ ಬಿಸಿರಕ್ತದ ವಿದ್ಯಾವಂತ ಯುವಕರು ಈ ಸಮಾಜದ ಧ್ಯೇಯ ಧೋರಣೆಗಳಿಂದ ಆಕರ್ಷಿತರಾಗಿ ಅದರ ಸದಸ್ಯರಾಗಿದ್ದರು. ಹಾಗೆಯೇ, ಕಾಲೇಜು ಮೆಟ್ಟಿಲು ಹತ್ತಿದ ನರೇಂದ್ರನ ಮೇಲೂ ಅದರ ಸಿದ್ಧಾಂತಗಳು ತುಂಬ ಪ್ರಭಾವ ಬೀರಿದುವು. ಆದ್ದರಿಂದ ಅವನು ಅದರ ಸಭೆಗಳಲ್ಲಿ ಭಾಗವಹಿಸಲಾರಂಭಿಸಿದ. ಅದರ ಮುಖಂಡರ ಭಾವನೆಗಳೆಲ್ಲ ಅವನಿಗೆ ಒಪ್ಪಿಗೆಯಾದುವು. ಜಾತಿಭೇದದಿಂದ ರಾಷ್ಟ್ರದ ಭಾವೈಕ್ಯಕ್ಕೆ ಹೇಗೆ ಹಾನಿಯುಂ ಟಾಗಿದೆ, ಜನ ಹೇಗೆ ನೊಂದಿದ್ದಾರೆ ಎನ್ನುವುದನ್ನು ಮನಗಂಡಿದ್ದ ನರೇಂದ್ರನಿಗೆ ಆ ದಿಸೆಯಲ್ಲಿ ಬ್ರಾಹ್ಮಸಮಾಜದ ಧೋರಣೆ-ಪ್ರಯತ್ನಗಳು ಬಹಳ ಮೆಚ್ಚುಗೆಯಾದುವು. ಹಾಗೆಯೇ, ರಾಷ್ಟ್ರದ ಅವನತಿಗೆ ಬಹುಮಟ್ಟಿಗೆ ಕಾರಣವಾಗಿದ್ದ ಅನಕ್ಷರತೆಯ ನಿರ್ಮೂ ಲನ ಮಾಡಲು ಅದು ಸ್ತ್ರೀವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸುತ್ತಿದ್ದುದು ಅವನಿಗೆ ಇಷ್ಟ ವಾಯಿತು. ಜನರ ವೈಯಕ್ತಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು, ಮಾತ್ರವಲ್ಲ, ರಾಷ್ಟ್ರೀಯ ಸಮಸ್ಯೆಗಳನ್ನು ಕೂಡ ಪರಿಹರಿಸಬಲ್ಲ ಆದರ್ಶ ಸಂಸ್ಥೆಯಿದು ಎಂಬ ಭರವಸೆ ಅವನಲ್ಲಿ ಮೂಡಿತು. ಹಲವಾರು ಪಾಶ್ಚಾತ್ಯ ಹಾಗೂ ಭಾರತೀಯ ತತ್ತ್ವ ಶಾಸ್ತ್ರಜ್ಞರ ಸಿದ್ಧಾಂತಗಳನ್ನು ಓದಿಕೊಂಡು ಮನನ ಮಾಡಿದ್ದ ಅವನಿಗೆ, ದೇವರ ಕುರಿ ತಂತೆ ಬ್ರಾಹ್ಮಸಮಾಜದ 'ಸಗುಣ ನಿರಾಕಾರ' ಸಿದ್ಧಾಂತ ಬಹಳ ಒಪ್ಪಿಗೆಯಾಯಿತು. ಅಲ್ಲದೆ, ಬ್ರಾಹ್ಮಧುರೀಣನಾದ ಕೇಶವಚಂದ್ರ ಸೇನನಂಥವನ ಅಯಸ್ಕಾಂತೀಯ ವ್ಯಕ್ತಿತ್ವ, ಅದಮ್ಯ ಉತ್ಸಾಹ, ಪ್ರಖರ ವಿಚಾರಧಾರೆ—ಇವುಗಳನ್ನು ತಾನೂ ಮೈಗೂಡಿಸಿಕೊಳ್ಳ ಬೇಕು ಎಂಬ ತೀವ್ರ ಆಕಾಂಕ್ಷೆ ಅವನಲ್ಲುದಿಸಿತು.

೧೮೭೮ ರಲ್ಲಿ ಬ್ರಾಹ್ಮಸಮಾಜದಲ್ಲಿ ಅಭಿಪ್ರಾಯಭೇದವೇರ್ಪಟ್ಟು ಅದು ಒಡೆದು ಇಬ್ಭಾಗವಾಯಿತು. ಪಂಡಿತ ಶಿವನಾಥ ಶಾಸ್ತ್ರಿ ಹಾಗೂ ವಿಜಯಕೃಷ್ಣ ಗೋಸ್ವಾಮಿ ಎಂಬಿಬ್ಬರು ಮುಖಂಡರು ಕೇಶವಸೇನನಿಂದ ಬೇರೆಯಾಗಿ, ಇನ್ನೂ ಅನೇಕ ಸದಸ್ಯ ರನ್ನು ಸೇರಿಸಿಕೊಂಡು, 'ಸಾಧಾರಣ ಬ್ರಾಹ್ಮಸಮಾಜ' ಎಂಬ ಇನ್ನೊಂದು ಸಂಸ್ಥೆಯನ್ನು ಕಟ್ಟಿದರು. ಆಗ ನರೇಂದ್ರನೂ ಚೆನ್ನಾಗಿ ಆಲೋಚಿಸಿ ನೋಡಿ, ಈ ಹೊಸ ಸಂಸ್ಥೆಯನ್ನು ಸೇರಿದ. ಇದೇ ಸಮಯದಲ್ಲಿ ಬಂಗಾಳದಲ್ಲಿ ಇನ್ನೊಂದು ಆಂದೋಲನ ಹುಟ್ಟಿ ಕೊಂಡಿತ್ತು. ಜಾತಿ-ಕುಲ-ಗೋತ್ರ ಭೇದವಿಲ್ಲದೆ ಸರ್ವರಿಗೂ ವಿದ್ಯಾಭ್ಯಾಸ ದೊರಕು ವಂತಾಗಬೇಕು ಎನ್ನುವುದು ಇದರ ಘೋಷಣೆಯಾಗಿತ್ತು. ನರೇಂದ್ರ ಈ ಸಂಚಲನಕ್ಕೂ ಸೇರಿಕೊಂಡ. ಜನತೆಯನ್ನು ಸತ್ವರಹಿತ ಕಂದಾಚಾರಗಳಿಂದ ಬಿಡಿಸಿ ಪ್ರಗತಿಪರ ಮಾರ್ಗ ದಲ್ಲಿ ಮುನ್ನಡೆಸುವ ಯಾವುದೇ ಸಂಸ್ಥೆಯಾಗಲಿ, ಚಳವಳಿಯಾಗಲಿ, ಅದಕ್ಕೆ ಸೇರಿ

ಕೊಂಡು ಆ ಪ್ರಯತ್ನದಲ್ಲಿ ನೆರವಾಗಬೇಕು ಎನ್ನುವುದು ನರೇಂದ್ರನ ಅಭಿಲಾಷೆ. ರಾಷ್ಟ್ರದ ಪರಿಸ್ಥಿತಿ ಹೇಗಿದ್ದರೆ ತನಗೇನು ಎಂಬ ನಿರಾಸಕ್ತ-ಸಪ್ಪೆ ಮನೋಭಾವ ಅವನದಲ್ಲ. ಲೌಕಿಕ ವಿಷಯವೇ ಆಗಲಿ ಆಧ್ಯಾತ್ಮಕ್ಕೆ ಸಂಬಂಧಿಸಿದ್ದೇ ಆಗಲಿ, ತನ್ನೊಳಗೆ ಒಂದು ಸಮಸ್ಯೆಯೆದ್ದರೆ, ಅದಕ್ಕೆ ಸೂಕ್ತ ಪರಿಹಾರವನ್ನು ಕಂಡುಕೊಂಡ ಹೊರತು ಅವನಿಗೆ ಸಮಾಧಾನವಿಲ್ಲ. ಈ ದಿನಗಳಲ್ಲಿ ಅವನು 'ಹಿಂದೂ ಮಹಾಮೇಳ' ಎಂಬ ಇನ್ನೂ ಒಂದು ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಆಗಾಗ ಭಾಗವಹಿಸುತ್ತಿದ್ದ. ಇದನ್ನು ಸ್ಥಾಪಿಸಿದ್ದವನು ನವಗೋಪಾಲ ಮಿತ್ರ. (ಈತನ ವ್ಯಾಯಾಮಶಾಲೆಗೇ ನರೇಂದ್ರ ಹಿಂದೆ ಹೋಗುತ್ತಿದ್ದುದು.) ಹಿಂದೂಗಳ ಜೀವನಕ್ರಮದ ಸುಧಾರಣೆ ಹಾಗೂ ಹಿಂದೂರಾಷ್ಟ್ರದ ಹಿತಸಾಧನೆ ಈ ಸಂಸ್ಥೆಯ ಮೂಲೋದ್ದೇಶ. ನರೇಂದ್ರ ಹೀಗೆ ಅನೇಕ ಸಂಘಸಂಸ್ಥೆಗಳನ್ನು ಸೇರಿಕೊಂಡ ಕ್ರಮವನ್ನು ವಿಶ್ಲೇಷಿಸಿ ನೋಡಿದಾಗ, ಅವನಲ್ಲಿ ತನ್ನ ಮಾತೃಭೂಮಿ, ಧರ್ಮ ಮತ್ತು ಸಂಸ್ಕೃತಿ ಇವುಗಳ ಶ್ರೇಯಸ್ಸಿಗಾಗಿ ಶ್ರಮಿಸಬೇಕೆನ್ನುವ ಮಹದಭಿಲಾಷೆ ತುಂಬಿರುವುದು ಕಂಡುಬರುತ್ತದೆ.

ಈಗ ನಾವು ಕಾಣುವಂತಹ ಯುವಕ ನರೇಂದ್ರನ ವ್ಯಕ್ತಿತ್ವ ಎಂಥದು ?... ಹೂವಿನ ಮೊಗ್ಗೇ ಚಂದ; ಅದು ಅರಳಲು ಪ್ರಾರಂಭವಾದಾಗ ಇನ್ನೂ ಚಂದ; ಅರಳಿ ಸುಗಂಧವನ್ನು ಹೊರಸೂಸಲಾರಂಭಿಸಿದಾಗ ಚಂದವೋ ಚಂದ. ಅಂತೆಯೇ ನರೇಂದ್ರನ ಬಾಲ್ಯವೇ ಚಂದ; ಅವನ ಕೌಮಾರ್ಯ ಇನ್ನೂ ಚಂದ; ಈಗ ಯೌವನ ಮತ್ತೂ ಚಂದ. ಜೊತೆಗೆ ಶೀಲವೆಂಬ ಸುವಾಸನೆ ಕೂಡ ಸೇರಿಕೊಂಡಿದೆ ! ನರೇಂದ್ರನ ವ್ಯಕ್ತಿತ್ವದ ಅತ್ಯಂತ ಪ್ರಾಮುಖ್ಯವಾದ ಅಂಶ ಯಾವುದೆಂದರೆ ಪವಿತ್ರತೆ-ಪರಿಶುದ್ಧತೆ. ಈ ಪವಿತ್ರತೆಯ ವಿಷಯದಲ್ಲಿ ನರೇಂದ್ರ ತುಂಬ ಕಠೋರ. ಸಾಮಾನ್ಯವಾಗಿ ಯುವಕ-ಯುವತಿಯರು ತಮ್ಮನ್ನು ತಪ್ಪುದಾರಿಗೆಳೆಯುವ ಹಲವಾರು ಪ್ರಭಾವಗಳಿಗೆ ಒಳಗಾಗುತ್ತಾರೆ. ಅಶ್ಲೀಲ ಸಾಹಸಗಳಲ್ಲಿ ತೊಡಗಿ ತಮ್ಮ ಪವಿತ್ರತೆಯನ್ನು ಕಳೆದುಕೊಳ್ಳಲು ಅವರಿಗೆ ನಾನಾ ಮಾರ್ಗಗಳು ಎದುರಾಗುತ್ತವೆ. ಆದರೆ ಭುವನೇಶ್ವರಿ ದೇವಿ ಮಗನಿಗೆ ಬಾಲ್ಯದಿಂದಲೂ ಸೂಕ್ತಮಾರ್ಗದರ್ಶನ ನೀಡಿದ್ದಳು. ಅವನೊಬ್ಬ ಸಜ್ಜನ-ಸುಚರಿತ್ರ ನೆನಿಸಿಕೊಳ್ಳಬೇಕಾದರೆ, ಅವನನ್ನು ಹೆತ್ತವಳಾದ ತನಗೂ ಅವನ ಕುಲಕ್ಕೂ ಅಪಖ್ಯಾತಿ ಬಾರದಂತೆ ನಡೆದುಕೊಳ್ಳಬೇಕು ಎನ್ನುವ ವಿಷಯವನ್ನು ಅವನಿಗೆ ಮನದಟ್ಟು ಮಾಡಿಸಿದ್ದಳು. ಅಲ್ಲದೆ, ಯಾವುದೇ ಅಶ್ಲೀಲ ಅನೈತಿಕ ಕಾರ್ಯದಲ್ಲಿ ತೊಡಗದಂತೆ ಯಾವುದೋ ಒಂದು ಅಗೋಚರ ಶಕ್ತಿ ತನ್ನನ್ನು ತಡೆಹಿಡಿಯುತ್ತಿತ್ತು ಎಂದು ಮುಂದೆ ಸ್ವಾಮಿ ವಿವೇಕಾನಂದರೇ ಹೇಳುತ್ತಾರೆ. ಯುವಕರಲ್ಲಿ ಸಾಹಸಪ್ರವೃತ್ತಿಯೆನ್ನುವುದು ಸಹಜವಾಗಿಯೇ ಇರುತ್ತದೆ. ಆದರೆ ಪ್ರಾಪಂಚಿಕ ಮನೋಭಾವದ ಸಾಮಾನ್ಯ ಯುವಕರು ಆ ಪ್ರವೃತ್ತಿಯನ್ನು ಯಾವ ರೀತಿಯಲ್ಲಿ ಮೆರೆಸಿಯಾರು ಎಂದು ಹೇಳಬರುವಂತಿಲ್ಲ. ಆದರೆ ನರೇಂದ್ರ ತನ್ನ ಸಾಹಸವನ್ನು ವ್ಯಕ್ತಪಡಿಸುವಾಗ ಅಥವಾ ತನ್ನ ವಯೋಗುಣಕ್ಕೆ ಸಹಜವಾದ ಆಮೋದಪ್ರಮೋದಗಳಲ್ಲಿ ತೊಡಗಿರುವಾಗ ಕೂಡ ಅದರಲ್ಲಿ ಒಂದು ಬಗೆಯ ಅಲೌಕಿಕತೆಯಿರುತ್ತಿತ್ತು. ಅಡ್ಡದಾರಿಗೆಳೆಯುವಂತಹ ಪ್ರಲೋಭನೆಗಳು ಎದುರಾದಾಗ ಅವನು ಕಿಂಚಿತ್ತೂ ವಿಚಲಿತನಾಗುತ್ತಿರಲಿಲ್ಲ. ಅವನ ಪವಿತ್ರತೆಯ ಸಂಬಂಧವಾಗಿ ಅವನ ಒಬ್ಬ ಸಹಪಾಠಿಯ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಸ್ವತಃ ಆ ಯುವಕನೂ ನೈತಿಕ ಜೀವನವನ್ನು ಅಷ್ಟು ಗಂಭೀರ

ವಾಗಿ ಪರಿಗಣಿಸಿದವನೇನಲ್ಲ. ಆದರೆ ಅವನು ಮುಂದೆ ತನ್ನ ಜೀವನಕ್ರಮವನ್ನು ತಿದ್ದಿಕೊಂಡು ಸ್ವಾಮಿ ವಿವೇಕಾನಂದರ ಶಿಷ್ಯನಾಗುತ್ತಾನೆ. ಈತ ತನ್ನ ಕಾಲೇಜು ದಿನಗಳನ್ನು ನೆನಪಿಸಿಕೊಂಡು ಹೇಳುತ್ತಾನೆ: "ಆಗಲೂ ನರೇಂದ್ರ ಆಧ್ಯಾತ್ಮಿಕತೆಯ ಅಗ್ನಿಜ್ವಾಲೆಯಂತಿದ್ದ. ಅವನೆಂದೂ ನೀತಿಯ ಚೌಕಟ್ಟನ್ನು ಮೀರದಿರುವುದನ್ನು ಕಂಡು ಅವನನ್ನು 'ಮಡಿ ಮನುಷ್ಯ' ಎಂದು ತಮಾಷೆ ಮಾಡುತ್ತಿದ್ದೆ. ಆದರೆ ಅವನ ಜೊತೆಯಲ್ಲಿರುವಾಗ ಮಾತ್ರ ನನ್ನ ಮನಸ್ಸು ಅಳುಕಿ ಮುದುಡಿಹೋಗುತ್ತಿತ್ತು. ಏಕೆಂದರೆ ಅವನ ಮುಂದೆ ನನ್ನ ನೈತಿಕತೆಯ ಅಭಾವವೆನ್ನುವುದು ನನ್ನ ಕಣ್ಣನ್ನೇ ಕುಕ್ಕುತ್ತಿತ್ತು. ನೈತಿಕ-ಆಧ್ಯಾತ್ಮಿಕ ತೇಜಸ್ಸು ಅವನಿಂದ ಅಕ್ಷರಶಃ ಹೊರಸೂಸುತ್ತಿತ್ತು. ಅದು ಇತರರ ಮೇಲೂ ಪ್ರಭಾವ ಬೀರುವಷ್ಟು ಪ್ರಖರವಾಗಿತ್ತು."

ನರೇಂದ್ರನ ಎಲ್ಲ ಸಂಗಾತಿಗಳು ಅವನ ಪವಿತ್ರತೆಯ ಪ್ರಕಾಶದಿಂದ ಹೀಗೆಯೇ ಪ್ರಭಾವಿತರಾಗಿದ್ದರು. ಅವನೀಗ ಒಬ್ಬ ಆದರ್ಶವಾದಿ; ತನ್ನ ಮನೋಸಾಮ್ರಾಜ್ಯದಲ್ಲಿ ಆದರ್ಶದ ಅರಮನೆ ಕಟ್ಟಿಕೊಂಡು ಆದರ್ಶದ ದೃಶ್ಯಗಳ ನಡುವೆ ವಿಹರಿಸುತ್ತಿದ್ದಾನೆ. ನಿರಾಶೆಯ ಕಹಿಯನ್ನು ಅವನು ಕಂಡವನೇ ಅಲ್ಲ. ಆದರೆ ಮುಂದೆ ಜೀವನರಂಗಕ್ಕೆ ಇಳಿದಾಗ ತನ್ನ ಕಲ್ಪನೆಯ ಗೋಪುರಗಳೆಲ್ಲ ಕುಸಿದು ಬೀಳಬಹುದೆಂಬುದು ಅವನ ಊಹೆಗೆ ಇನ್ನೂ ಸಿಕ್ಕಿಲ್ಲ. ಭವಿಷ್ಯವೆಲ್ಲ ಸುಖದ ಸುಷುಪ್ತಿಗೆಯಂತೆ ಕಂಡುಬರುತ್ತಿದೆ. ಯೌವನದಲ್ಲಿ ಇದು ತೀರಾ ಸಾಮಾನ್ಯ. ಈ ಆದರ್ಶ ಎನ್ನುವುದು ಕನಸಿನ ಲೋಕದಿಂದ ಪ್ರತ್ಯಕ್ಷ ಜೀವನಕ್ಕಿಳಿದು, ಆದರ ಸತ್ಯದರ್ಶನ ಮಾಡಿಕೊಳ್ಳುವಂತಾಗಬೇಕಾದರೆ ವ್ಯಕ್ತಿಯು ಹಲವಾರು ವಿಷಮ ಪರಿಸ್ಥಿತಿಗಳನ್ನು ಎದುರಿಸಬೇಕಾಗುತ್ತದೆ; ಹಲವು ಬಾರಿ ಕಾಲು ಜಾರಿ ಸೋಲುಗಳನ್ನು ಎದುರಿಸಿಯೇ ಮೇಲೇರಿ ಬರಬೇಕಾಗುತ್ತದೆ. ಬಹಳಷ್ಟು ಆಲೋಚಿಸಿ-ವಿಮರ್ಶಿಸಿ ಮುಂದುವರಿಯಬೇಕಾಗುತ್ತದೆ.

ನರೇಂದ್ರನಲ್ಲಿ ಆಧ್ಯಾತ್ಮಿಕ ಪ್ರವೃತ್ತಿ ಕ್ರಮೇಣ ಬಲಗೊಂಡು ಅದು ಅವನ ವ್ಯಕ್ತಿತ್ವದ ಮೇಲೆ ಒತ್ತಡ ಬೀರಲಾರಂಭಿಸಿತ್ತು. ಯುವಕ ನರೇಂದ್ರನೀಗ ಎರಡು ವಿಭಿನ್ನ ಆದರ್ಶಗಳನ್ನು ಕಾಣುತ್ತಿದ್ದಾನೆ. ಪ್ರತಿರಾತ್ರಿಯೂ ಮಲಗಿಕೊಳ್ಳುವಾಗ ಅವನ ಬಗೆ-ಗಣ್ಣಿನ ಮುಂದೆ ಪರಸ್ಪರ ವಿರುದ್ಧ ಸ್ವಭಾವದ ಎರಡು ಅದ್ಭುತ ದೃಶ್ಯಗಳು ಮೂಡಿ ನಿಲ್ಲುತ್ತವೆ. ಒಂದು ದೃಶ್ಯದಲ್ಲಿ ಅವನು ಕಾಣುತ್ತಿದ್ದುದು ವಿಲಾಸಪೂರ್ಣವಾದ ಭೋಗ ಜೀವನ; ಹೇರಳವಾಗಿ ಹಣ ಸಂಪಾದಿಸಿ, ಹೆಸರು-ಕೀರ್ತಿಗಳನ್ನು ಮೆರೆದಾಡುತ್ತ ಅಧಿಕಾರವನ್ನು ಚಲಾಯಿಸುತ್ತ, ಆ ಮೂಲಕ ನಡೆಸುವ ವೈಭೋಗದ ಬಾಳ್ವೆ; ಇವುಗಳ ಜೊತೆಗೆ ಮನವೊಪ್ಪುವ ಮಡದಿ, ಮುದ್ದಿನ ಮಕ್ಕಳು—ಇವುಗಳಿಂದ ಕೂಡಿದ ಸುಖ ಸಂಸಾರದ ಜೀವನ! ಅಥವಾ ಒಂದೇ ಮಾತಿನಲ್ಲಿ ಹೇಳುವುದಾದರೆ, 'ಪ್ರಾಪಂಚಿಕ ಜೀವನ'. ಎರಡನೆಯ ದೃಶ್ಯದಲ್ಲಿ ಅವನು ಕಾಣುವುದು ಸರ್ವಸಂಗ ಪರಿತ್ಯಾಗಿಯಾದ ಸಂನ್ಯಾಸಿಯ ಆದರ್ಶವನ್ನು. ಯಾವುದೇ ಬಗೆಯ ಸ್ವಂತದ ಸೊತ್ತೂ ಇಲ್ಲದ, ತನ್ನವರೆನ್ನುವ ಯಾರೂ ಇಲ್ಲದ, ಭಗವಂತನ ಇಚ್ಛೆಗೆ ಸರ್ವಸಮರ್ಪಣೆ ಮಾಡಿಕೊಂಡು ಭಗವದ್ಭಾವದಲ್ಲೇ ತನ್ಮಯನಾಗಿದ್ದುಕೊಂಡು, ಊರಿಂದೂರಿಗೆ ಸಂಚರಿಸುತ್ತ, ಭಗವಂತನ ಕೃಪೆಯಿಂದ ತಾನಾಗಿಯೇ ಬಂದ ಭಿಕ್ಷೆಯಿಂದ ಜೀವಿಸುತ್ತ, ಮರದ ಕೆಳಗೋ ಬೆಟ್ಟದ ತಪ್ಪಲಲ್ಲೋ ಎಲ್ಲೋ ಒಂದು ಕಡೆ ರಾತ್ರಿಯನ್ನು ಕಳೆಯುತ್ತ ಪರಿವ್ರಾಜಕ ಜೀವನ ನಡೆಸುವ ವಿರಾಗಿಯ ಆದರ್ಶ! ಎಂತಹ ವಿಭಿನ್ನ ಆದರ್ಶಗಳು! ಆದರೆ

ನರೇಂದ್ರನಿಗೆ ದೃಢನಂಬಿಕೆಯಿದೆ; ಏನೆಂದರೆ ಈ ಎರಡರಲ್ಲಿ ತಾನು ಯಾವುದೇ ದಾರಿಯನ್ನು ಆರಿಸಿಕೊಂಡರೂ ಅದರಲ್ಲೇ ಯಶಸ್ವಿಯಾಗಿ ಮುನ್ನಡೆದು ಆ ಆದರ್ಶ ವನ್ನು ಸಿದ್ಧಿಸಿಕೊಳ್ಳಬಲ್ಲೆ ಎಂದು. ಆದ್ದರಿಂದ ಅವನು ಕೆಲವು ಸಲ ತನ್ನನ್ನು ಒಬ್ಬ ಗೃಹಸ್ಥನಂತೆ ಭಾವಿಸಿ ನೋಡುತ್ತಿದ್ದ. ಇನ್ನು ಕೆಲವು ಸಲ ಒಬ್ಬ ಪರಿವ್ರಾಜಕ ಸಂನ್ಯಾಸಿ ಯಾಗಿ ಭಾವಿಸಿಕೊಳ್ಳುತ್ತಿದ್ದ. ಅವನೊಳಗೆ ಇಬ್ಬರು ಕಲಾವಿದರು ಸೇರಿಕೊಂಡು ತಮ್ಮ ಕುಂಚಗಳಿಂದ ಎರಡು ಬಗೆಯ ಚಿತ್ರಗಳನ್ನು ರಚಿಸುತ್ತಿದ್ದಂತಿತ್ತು—ಒಬ್ಬ ಕಲಾವಿದ ಭೋಗಜೀವನದ ಸುಂದರ ದೃಶ್ಯವನ್ನು ಚಿತ್ರಿಸಿದರೆ ಇನ್ನೊಬ್ಬನು ತ್ಯಾಗಜೀವನದ ವೈಭವವನ್ನು ರಚಿಸುತ್ತಾನೆ. ಆದರೆ ತನ್ನ ಮನಸ್ಸಿನ ಆಳಕ್ಕಿಳಿದು ನೋಡಿದಂತೆ, ಅವನಿಗೆ ತ್ಯಾಗಜೀವನದ ಚಿತ್ರವೇ ಹೆಚ್ಚು ಆಕರ್ಷಕವಾಗಿ, ಸ್ಪಷ್ಟವಾಗಿ ಕಾಣಲಾರಂಭಿಸಿತು. ನೋಡನೋಡುತ್ತಿದ್ದಂತೆ ಭೋಗಜೀವನದ ಚಿತ್ರ ಮಾಸಲಾಯಿತು; ಕೊನೆಗೆ ಸಂಪೂರ್ಣ ವಾಗಿ ಅಳಿಸಿಯೇ ಹೋಯಿತು! ಈ ಸಂಘರ್ಷ ಕೆಲಕಾಲ ನಡೆಯಿತು. ಕೊನೆಗೆ ನರೇಂದ್ರನ ಆಧ್ಯಾತ್ಮಿಕ ವ್ಯಕ್ತಿತ್ವ ಅವನ ಲೌಕಿಕ ವ್ಯಕ್ತಿತ್ವವನ್ನು ಮೆಟ್ಟಿನಿಂತು ಸಂಪೂರ್ಣ ಜಯಶಾಲಿಯಾಯಿತು. ಅವನು ಭಗವಂತನ ನೇರ ಸಾಕ್ಷಾತ್ಕಾರಕ್ಕೆ ನೆರವಾಗುವಂತಹ ತ್ಯಾಗಜೀವನವನ್ನೇ ಆರಿಸಿಕೊಂಡ.

ಈ ನಡುವೆ ಅವನು ಬ್ರಾಹ್ಮಸಮಾಜದ ನಿಕಟ ಸಂಪರ್ಕಕ್ಕೆ ಬಂದಿದ್ದ. ಅಲ್ಲಿನ ಬೌದ್ಧಿಕ ವಾತಾವರಣ ಅವನ ವಿಚಾರವಂತಿಕೆಗೆ ಬಹಳಷ್ಟು ತೃಪ್ತಿ ನೀಡುತ್ತಿತ್ತು. ಪ್ರಾರ್ಥನೆ-ಭಜನೆಯ ಕಾರ್ಯಕ್ರಮಗಳು, ಧಾರ್ಮಿಕ ಪ್ರವಚನಗಳು ಅಲ್ಲೊಂದು ಆಧ್ಯಾತ್ಮಿಕ ವಾತಾವರಣವನ್ನು ನಿರ್ಮಾಣ ಮಾಡಿದ್ದುವು. ಇದರಿಂದ ಅವನ ಆಧ್ಯಾತ್ಮಿಕ ತೃಷೆಗೂ ಒಂದಿಷ್ಟು ಸಮಾಧಾನ ಸಿಗುತ್ತಿತ್ತು.

ಸದಸ್ಯರು ಮಾಂಸಾಹಾರ ವರ್ಜಿಸಬೇಕೆಂಬುದು ಬ್ರಾಹ್ಮಸಮಾಜದ ನಿಯಮ ಗಳಲ್ಲೊಂದು. ಆದರೆ ನರೇಂದ್ರ ಹುಟ್ಟನಿಂದ ಕ್ಷತ್ರಿಯ; ಅವನಿಗೆ ಮಾಂಸಾಹಾರ ರೂಢಿಯಾಗಿತ್ತು. ಈಗ ಬ್ರಾಹ್ಮಸಮಾಜದ ನಿಯಮದ ಪ್ರಕಾರ ಅವನು ಮಾಂಸಾಹಾರ ವನ್ನು ವರ್ಜಿಸಬೇಕಾಯಿತು. ಆದರೆ ಆತ ಆದರ್ಶಪರಿಪಾಲನೆಗಾಗಿ ಏನನ್ನು ಬೇಕಾ ದರೂ ಮಾಡಬಲ್ಲ, ಯಾವುದನ್ನಾದರೂ ಬಿಡಬಲ್ಲ. ಆದ್ದರಿಂದ ಈಗ ಅವನು ಸಂಪೂರ್ಣವಾಗಿ ಸಸ್ಯಾಹಾರಿಯೇ ಆದ. ಈ ಸಂದರ್ಭದಲ್ಲಿ ಒಂದು ಸ್ವಾರಸ್ಯಕರ ಘಟನೆ ನಡೆಯಿತು. ನರೇಂದ್ರನ ಮನೆಯಲ್ಲಿ ಮೀನು-ಮಾಂಸ ಸರ್ವೇಸಾಮಾನ್ಯ. ಆದರೀಗ ಇದ್ದಕ್ಕಿದ್ದಂತೆ ಅವನೊಬ್ಬ ಸಸ್ಯಾಹಾರಿಯಾಗಿಬಿಟ್ಟಿದ್ದಾನೆ! ಈಗ ಅವನಿಗೋಸ್ಕರವೇ ಬೇರೆ ಅಡಿಗೆ ಮಾಡಬೇಕಾಯಿತು. ಮನೆಯಲ್ಲಿ ಒಂದು ಅಡಿಗೆ ಮಾಡಿ ಹಾಕುವುದಕ್ಕೇ ಎಷ್ಟು ಕಷ್ಟ! ಹೀಗಿರುವಾಗ ಎರಡೆರಡು ಅಡಿಗೆ ಮಾಡಲು ಯಾರಿಗೆ ತಾನೆ ತಾಳ್ಮೆ ಯಿರುತ್ತದೆ? ಒಂದು ದಿನ ನರೇಂದ್ರನ ಅಕ್ಕ ಸ್ವರ್ಣಮುಖಿ, ತರಕಾರಿ-ಮೀನು ಸೇರಿಸಿ ಪಲ್ಯ ಮಾಡಿ ಅದರಲ್ಲಿದ್ದ ಮೀನಿನ ಹೋಳುಗಳನ್ನು ತೆಗೆದು ತರಕಾರಿಯನ್ನು ಮಾತ್ರ ತಮ್ಮನಿಗೆ ಬಡಿಸಿದಳು. ನರೇಂದ್ರನಿಗೆ ಮೀನು ಇಲ್ಲದಿದ್ದರಾಯಿತು ತಾನೆ? ಪಲ್ಯ ದಲ್ಲಿರುವ ಮೀನಿನ ಹೋಳುಗಳನ್ನು ತೆಗೆದುಬಿಟ್ಟರೆ ಉಳಿದುದೆಲ್ಲ ಸಸ್ಯಾಹಾರವೇ ಎಂಬುದು ಅವಳ ಅಭಿಪ್ರಾಯ. ಆದರೆ ನರೇಂದ್ರನಿಗೆ ಕೋಪ ಬಂತು. ಏಕೆಂದರೆ ಪಲ್ಯದಿಂದ ಮೀನಿನ ಹೋಳುಗಳನ್ನು ತೆಗೆದರೂ ಅದರ ರಸ ತರಕಾರಿಯೊಂದಿಗೆ ಸೇರಿ ಕೊಂಡಿರುವುದಿಲ್ಲವೆ? ಅವನ ವ್ರತಕ್ಕೀಗ ಭಂಗ ಬಂದಿತಲ್ಲ! ಆದ್ದರಿಂದಲೇ ಕೋಪ.

ಸೋದರ-ಸೋದರಿಯರಲ್ಲಿ ಬಿರುಸಾದ ವಾಗ್ವಾದ ನಡೆಯಿತು. ಅಲ್ಲಿಯೇ ಹೊರಗೆ ನಿಂತಿದ್ದ ತಂದೆ ವಿಶ್ವನಾಥ ಎಲ್ಲವನ್ನೂ ಕೇಳಿಸಿಕೊಂಡ. ಅವನು ಮಗನ ಮೇಲೆಯೇ ಕೋಪಿಸಿಕೊಂಡು, ಅಲ್ಲಿಂದಲೇ ಗಟ್ಟಿಯಾಗಿ ಹೇಳಿದ, "ಇವನ ತಾತ ಮುತ್ತಾತರಾದಿಯಾಗಿ ಹದಿನಾಲ್ಕು ಪೀಳಿಗೆಯವರೆಲ್ಲ ಮೀನು ತಿಂದೇ ಬದುಕಿದರು. ಆದರೆ ಇವನೀಗ ಬ್ರಹ್ಮದೈತ್ಯನಾಗಿಬಿಟ್ಟಿದ್ದಾನೆ!" ಇಲ್ಲಿ 'ಬ್ರಹ್ಮದೈತ್ಯ' ಎನ್ನುವ ಶಬ್ದಕ್ಕೆ ಎರಡರ್ಥ—ಒಂದನೆಯದಾಗಿ ಬ್ರಾಹ್ಮಣ ಪ್ರೇತ ಎನ್ನುವ ಅರ್ಥ; ಪ್ರೇತವಾದರೂ 'ಬ್ರಾಹ್ಮಣ ಪ್ರೇತ'ವಾದ್ದರಿಂದ ಮೀನುಮಾಂಸ ತಿನ್ನುವುದಿಲ್ಲ. ಎರಡನೆಯದಾಗಿ ನರೇಂದ್ರ ಈಗ ಬ್ರಾಹ್ಮಸಮಾಜಕ್ಕೆ ಸೇರಿದವನಾದ್ದರಿಂದ 'ಬ್ರಹ್ಮದೈತ್ಯ'. ಆದರೆ ವಿಶ್ವನಾಥ ಹೀಗೆಲ್ಲ ಅಂದರೂ ಮಗನ ಸ್ವಾತಂತ್ರ್ಯಕ್ಕೆ ಅಡ್ಡ ಬರುತ್ತಿರಲಿಲ್ಲ. ಅಲ್ಲದೆ ಮಹರ್ಷಿ ದೇವೇಂದ್ರನಾಥ ಟಾಗೋರ್, ಶಿವನಾಥ ಶಾಸ್ತ್ರಿಯಂತಹ ಬ್ರಾಹ್ಮಸಮಾಜದ ಅನೇಕ ಮುಖಂಡರು ವಿಶ್ವನಾಥನ ಮನೆಗೆ ಆಗಾಗ ಬಂದುಹೋಗುವುದಿತ್ತು.

ಆಹಾರದ ವಿಷಯ ಹಾಗಿರಲಿ; ಸಿದ್ಧಾಂತ ಹಾಗೂ ಸಾಧನೆಯ ವಿಚಾರದಲ್ಲಿ ಹೇಳುವುದಾದರೆ, ಬ್ರಾಹ್ಮಸಮಾಜದವರು 'ಸಗುಣ-ನಿರಾಕಾರಬ್ರಹ್ಮ'ದ ಉಪಾಸಕರು. ಒಂದೊಂದು ಮತಧರ್ಮವೂ ದೇವರನ್ನು ಒಂದೊಂದು ಬಗೆಯಾಗಿ ಭಾವಿಸಿ ಬಣ್ಣಿಸುತ್ತದೆ. ಕೆಲವರು ಪರಮಾತ್ಮನನ್ನು ಸಗುಣ-ಸಾಕಾರನೆಂದು ಭಾವಿಸಿದರೆ ಇನ್ನು ಕೆಲವರು ಅವನನ್ನು ನಿರ್ಗುಣ-ನಿರಾಕಾರನೆಂದು ನಂಬುತ್ತಾರೆ. ಸಗುಣ-ಸಾಕಾರನೆಂದು ಬಣ್ಣಿಸುವವರು ಆತನನ್ನು ತಮ್ಮತಮ್ಮ ವಿಶಿಷ್ಟ ದೃಷ್ಟಿಕೋನಗಳಿಂದ ಕಂಡು ಅಸಂಖ್ಯಾತ ಗುಣವಿಶೇಷಗಳನ್ನು ಆರೋಪಿಸುತ್ತಾರೆ. ಆದರೆ ಈ ಬ್ರಾಹ್ಮಸಮಾಜದವರು ತಮ್ಮದೇ ಆದ ಒಂದು ಸಿದ್ಧಾಂತವನ್ನು ರೂಪಿಸಿಕೊಂಡಿದ್ದರು. ಭಗವಂತನು ಸಗುಣ ಹಾಗೂ ನಿರಾಕಾರ ಎನ್ನುವುದು ಅವರ ಸಿದ್ಧಾಂತ. ಎಂದರೆ, ಭಗವಂತನಲ್ಲಿ ಅನಂತ ಕಲ್ಯಾಣ ಗುಣಗಳಿವೆ, ಆದ್ದರಿಂದ ಅವನು 'ಸಗುಣ'; ಆದರೆ ಅವನು ಆಕಾಶದಂತೆ ಆಕಾರರಹಿತ, ಆದ್ದರಿಂದ ಅವನು 'ನಿರಾಕಾರ'—ಇದು ಬ್ರಾಹ್ಮಸಮಾಜದ ಸಿದ್ಧಾಂತ. ಈ ಸಿದ್ಧಾಂತವನ್ನು ನರೇಂದ್ರ ಹೃತ್ಪೂರ್ವಕವಾಗಿ ಒಪ್ಪಿಕೊಂಡು ಸ್ವೀಕರಿಸಿದ. ಆದರೆ ಅವನಿಗೂ ಇತರ ಬ್ರಾಹ್ಮಸದಸ್ಯರಿಗೂ ಒಂದು ಬಹುಮುಖ್ಯವಾದ ವ್ಯತ್ಯಾಸವಿತ್ತು. ಏನೆಂದರೆ, ಉಳಿದವರೆಲ್ಲ ಈ ಸಿದ್ಧಾಂತವನ್ನು ಅಂಗೀಕರಿಸಿ ಅದಕ್ಕನುಗುಣವಾಗಿಯೇ ಭಜನೆ-ಪ್ರಾರ್ಥನೆ-ಧ್ಯಾನಾದಿಗಳನ್ನು ಮಾಡಿದರು; ಆಮೇಲೆ ತಮ್ಮತಮ್ಮ ನಿತ್ಯದ ವ್ಯವಹಾರದಲ್ಲಿ ನಿರತರಾಗಿಬಿಟ್ಟರು. ಆ ಭಗವಂತನನ್ನು ನಿಜಕ್ಕೂ ಕಾಣಬಹುದು, ಸಾಕ್ಷಾತ್ಕರಿಸಿಕೊಳ್ಳಲೂಬಹುದು ಎಂಬ ನಂಬಿಕೆ ಯಾರಿಗೂ ಇದ್ದಂತಿರಲಿಲ್ಲ! ಆದರೆ ನರೇಂದ್ರ ಮಾತ್ರ ಇವುಗಳನ್ನೆಲ್ಲ ಮಾಡಿದ ಮೇಲೆ ಅಷ್ಟಕ್ಕೇ ಸುಮ್ಮನಾಗಿಬಿಡಲಿಲ್ಲ. ಏತಕ್ಕೋಸ್ಕರ ಭಜನೆ-ಪ್ರಾರ್ಥನೆ-ಧ್ಯಾನಗಳನ್ನು ಮಾಡಿದ್ದು? ಭಗವದ್ದರ್ಶನಕ್ಕಾಗಿಯೇ ಅಲ್ಲವೆ? ಆದರೆ ಭಗವಂತನ ದರ್ಶನ ಕೊಟ್ಟನೆ? ಆತ ಇರುವುದೇ ನಿಜವಾದಲ್ಲಿ ಭಕ್ತನಾದವನು ಪ್ರಾಮಾಣಿಕ ಹೃದಯದಿಂದ ಪ್ರಾರ್ಥನೆ ಸಲ್ಲಿಸಿದಾಗ ಅವನು ಬಂದು ದರ್ಶನ ಕೊಡಲೇಬೇಕು ಎನ್ನುವುದು ನರೇಂದ್ರನ ದೃಢವಾದ ನಂಬಿಕೆ. ಭಗವಂತ ದರ್ಶನ ಕೊಡದೇ ಇದ್ದರೆ ಈ ಭಜನೆ-ಪ್ರಾರ್ಥನೆ-ಧ್ಯಾನ ಇವುಗಳನ್ನೆಲ್ಲ ಮಾಡಿ ಪ್ರಯೋಜನವಾದರೂ ಏನು! ಅಲ್ಲದೆ, ಆತನ ದರ್ಶನಲಾಭವಾಗದಿದ್ದ ಮೇಲೆ ಈ ಜೀವನವೇ ವ್ಯರ್ಥ—ಇದು ನರೇಂದ್ರನ ಭಾವನೆ. ಈಗೀಗ ಅವನಿಗೆ ಅನ್ನಿಸತೊಡಗಿದೆ—

ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ವಿಷಯದಲ್ಲಿ ಬ್ರಾಹ್ಮಸಮಾಜದಿಂದ ತನಗೇನೂ ಪ್ರಯೋಜನವಾಗಲಿಲ್ಲ, ತಾನು ಬ್ರಾಹ್ಮಸಮಾಜವನ್ನು ಸೇರುವ ಮೊದಲು ಯಾವ ಸ್ಥಿತಿಯಲ್ಲಿದ್ದೇನೋ ಈಗಲೂ ಹಾಗೆಯೇ ಇದ್ದೇನೆ, ಎಂದು.

ನರೇಂದ್ರನಲ್ಲಿ ಈಗ ಭಗವಂತನ ಸಾಕ್ಷಾತ್ಕಾರಕ್ಕಾಗಿ ಉತ್ಕಟ ವ್ಯಾಕುಲತೆಯುಂಟಾಗಿದೆ. ಅವನಿಗೆ ಈಗ ಪ್ರಾರ್ಥನೆ ಭಜನೆಗಳಷ್ಟರಿಂದಲೇ ಸಮಾಧಾನವಾಗುತ್ತಿಲ್ಲ. ಅವನಿಗೀಗ ಭಗವಂತನ ಸಾಕ್ಷಾತ್ಕಾರವೇ ಬೇಕು. ಆಹಾ! ಭಗವಂತನನ್ನು ತೋರಿಸಿಕೊಡುವವರಿದ್ದಿದ್ದರೆ! ಭಗವಂತನನ್ನು ತಮ್ಮ ಸಾಧನೆಗಳ ಮೂಲಕ ಈಗಾಗಲೇ ಕಂಡವರಿರಬಹುದಲ್ಲವೆ? ಅವರನ್ನು ಕೇಳಿದರೆ ಅವರು ತನಗೆ ಭಗವಂತನನ್ನು ತೋರಿಸಿಕೊಡಬಹುದಲ್ಲವೆ? ಆದರೆ, ಅವನು ದೇವಸ್ಥಾನಕ್ಕೆ ಹೋಗಿ ದೇವರನ್ನು ಕಾಣುವಂತಿಲ್ಲ, ಸಾಕ್ಷಾತ್ಕಾರ ನೀಡುವಂತೆ ಕೇಳುವಂತೆಯೂ ಇಲ್ಲ; ಏಕೆಂದರೆ ಅವನಿಗೆ ಮೂರ್ತಿಪೂಜೆಯಲ್ಲಿ ನಂಬಿಕೆಯಿಲ್ಲವಲ್ಲ! ಹಾಗಾದರೆ, ಅವನೀಗ ಬ್ರಾಹ್ಮಸಮಾಜಕ್ಕೆ ಸೇರಿಕೊಂಡು ಸಗುಣ ನಿರಾಕಾರ ಬ್ರಹ್ಮವನ್ನು ಉಪಾಸನೆ ಮಾಡುತ್ತಿದ್ದಾನಲ್ಲ, ಆ ನಿರಾಕಾರ ಬ್ರಹ್ಮವನ್ನೇ ತನಗೆ ಸಾಕ್ಷಾತ್ಕಾರ ಕೊಡುವಂತೆ ಕೇಳಿಕೊಳ್ಳಲಿ? ಇಲ್ಲ, ಅದೂ ಸಾಧ್ಯವಿಲ್ಲ. ಆಕಾರವೇ ಇಲ್ಲದ ದೇವರ ಹತ್ತಿರ ಹೇಗೆ ತಾನೆ ಮಾತನಾಡಿಯಾನು? ಆದ್ದರಿಂದ ಅವನಿಗೀಗ ದೇವರನ್ನು ತೋರಿಸಿಕೊಡಬಲ್ಲವರೊಬ್ಬರು ಬೇಕಾಗಿದ್ದಾರೆ. ನೆನಪು ಮಾಡಿಕೊಂಡ—ಯಾರಿದ್ದಾರೆ ದೇವರನ್ನು ತೋರಿಸಿಕೊಡಬಲ್ಲವರು? ಆಗ ಅವನಿಗೆ ಒಬ್ಬ ವ್ಯಕ್ತಿಯು ನೆನಪಾಯಿತು. ಅವರೇ ಮಹರ್ಷಿ ದೇವೇಂದ್ರನಾಥ ಟಾಗೋರರು. ಅವರು ಬ್ರಾಹ್ಮಸಮಾಜದ ಒಬ್ಬ ಪ್ರಧಾನ ಆಚಾರ್ಯರು; ಅಲ್ಲದೆ, ಅಂದಿನ ಕಾಲದ ಶ್ರೇಷ್ಠ ಆಧ್ಯಾತ್ಮಿಕ ವ್ಯಕ್ತಿ ಎಂದು ಜನರ ಮನ್ನಣೆಗೆ ಪಾತ್ರರಾಗಿದ್ದವರು. ಹಿಂದೊಮ್ಮೆ ನರೇಂದ್ರ ತನ್ನ ಸ್ನೇಹಿತರೊಡನೆ ಅವರನ್ನು ಭೇಟಿ ಮಾಡಿದ್ದ. ಟಾಗೋರರು ಆ ತರುಣರಿಗೆಲ್ಲ ತೀವ್ರವಾಗಿ ಧ್ಯಾನವನ್ನು ಅಭ್ಯಾಸ ಮಾಡುವಂತೆ ಹೇಳಿದ್ದರು. ಈಗ ಅವರು ಗಂಗಾ ನದಿಯ ಮೇಲೆ ಒಂದು ದೋಣಿಮನೆಯ ಏಕಾಂತದಲ್ಲಿ ವಾಸವಾಗಿದ್ದಾರೆ ಎಂದು ತಿಳಿದು ನರೇಂದ್ರ ಅವರ ಬಳಿಗೆ ಒಬ್ಬನೇ ಹೋದ; ಹೃದಯದಲ್ಲಿ ಭಗವತ್ಸಾಕ್ಷಾತ್ಕಾರದ ತೀವ್ರ ಹಂಬಲವನ್ನು ತುಂಬಿಕೊಂಡು ಹೋದ. ಅವನ ಆಕಸ್ಮಿಕ ಆಗಮನವನ್ನು ಕಂಡು ವೃದ್ಧ ಮಹರ್ಷಿಗಳು ಬೆರಗಾದರು. ಆದರೆ ಅವರಿನ್ನೂ "ಏನಪ್ಪಾ, ಏಕೆ ಬಂದೆ?" ಎಂದು ಕೇಳಲು ಬಾಯಿ ತೆರೆಯುವ ಮೊದಲೇ ನರೇಂದ್ರ ತಾನು ತಂದಿದ್ದ ಪ್ರಶ್ನೆಯನ್ನು ಮುಂದಿಟ್ಟ:

"ಸ್ವಾಮಿ, ನೀವು ದೇವರನ್ನು ಕಂಡಿದ್ದೀರಾ?"

ಆ ಪ್ರಶ್ನೆಗೆ ಉತ್ತರಿಸಲು ಮಹರ್ಷಿಗಳಿಗೆ ಸಾಧ್ಯವಾಗಲಿಲ್ಲ. ಕ್ಷಣಕಾಲ ವಿಚಲಿತರಾದರು. ಬಳಿಕ ಸುಧಾರಿಸಿಕೊಂಡು, ಅವನನ್ನೇ ದಿಟ್ಟಿಸುತ್ತ ಹೇಳಿದರು:

"ಮಗೂ, ನಿನಗೆ ಯೋಗಿಯ ಕಣ್ಣುಗಳಿವೆ."

ಛೆ! ನರೇಂದ್ರ ಹೇಳಿದ ಪ್ರಶ್ನೆಯೇನು, ಅವನಿಗೆ ಸಿಕ್ಕಿದ ಉತ್ತರವೇನು? ಹಸಿವಿನಿಂದ ತೊಳಲುತ್ತಿರುವವನೊಬ್ಬ ಬಂದು, "ಹಸಿವು ಸ್ವಾಮೀ! ಅನ್ನ ಹಾಕಿ" ಎಂದು ಬೇಡಿದರೆ, "ನೋಡು, ನಿನ್ನಲ್ಲಿ ಉತ್ತಮ ಕೃಷಿಕನ ಲಕ್ಷಣಗಳಿವೆ" ಎಂದು ಯಾರಾದರೂ ಉತ್ತರಿಸಿಯಾರೇನು? ನರೇಂದ್ರನಿಗೆ ಸಿಕ್ಕ ಉತ್ತರ ಈ ಬಗೆಯದು. ಅವನಿಗೆ ತುಂಬ ನಿರಾಶೆಯಾಯಿತು. ಅಲ್ಲಿಂದ ಹೊರಟುಬಂದ. ಆದರೆ ಸುಮ್ಮನೆ ಕುಳಿತು

ಕೊಳ್ಳಲು ಅವನಿಂದ ಸಾಧ್ಯವಿಲ್ಲ. ತಾನು ಭಗವಂತನನ್ನು ಕಾಣಲೇಬೇಕು ಎಂಬ ತವಕ, ವ್ಯಾಕುಲತೆ ಅವನ ಹೃದಯವನ್ನು ಆಕ್ರಮಿಸಿಬಿಟ್ಟಿದೆ. ಹೃದಯದಲ್ಲಿ ಆ ಪ್ರಶ್ನೆಯನ್ನು ಹೊತ್ತುಕೊಂಡು ಇನ್ನೊಬ್ಬ ಧರ್ಮಗುರುವಿನ ಬಳಿಗೆ ಬಂದು ಕೇಳುತ್ತಾನೆ: "ಮಹಾಶಯರೆ, ನೀವು ಕಂಡಿದ್ದೀರಾ ದೇವರನ್ನು ?" ಉತ್ತರವಿಲ್ಲ! ಆದರೆ ಅವನು ಅಷ್ಟಕ್ಕೇ ಬಿಡುವವನಲ್ಲ. ಇನ್ನೂ ಹಲವಾರು ಧರ್ಮಗುರುಗಳ ಬಳಿಗೆ, ಆಧ್ಯಾತ್ಮಿಕ ವ್ಯಕ್ತಿಗಳ ಬಳಿಗೆ ಹೋಗಿ ತನ್ನ ಪ್ರಶ್ನೆಯನ್ನು ಮುಂದಿಟ್ಟ. ಆದರೆ ಯಾರೊಬ್ಬರೂ ಆ ಪ್ರಶ್ನೆಗೆ ಸಮಾಧಾನಕರ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ನರೇಂದ್ರನಿಗೂ ಈ ವೇಳೆಗೆ ಆಶ್ಚರ್ಯವಾಗಿರಬೇಕು. "ಎಲಾ! ಏನಿದು ವಿಚಿತ್ರ! ಇವರೆಲ್ಲ ಧರ್ಮಗುರುಗಳಂತೆ, ಆಧ್ಯಾತ್ಮಿಕ ವ್ಯಕ್ತಿಗಳಂತೆ. ಆದರೆ 'ದೇವರನ್ನು ಕಂಡಿದ್ದೀರಾ ?' ಎಂದು ಕೇಳಿದರೆ, 'ಹೌದು!' ಎಂದು ಎದೆಮುಟ್ಟಿ ಉತ್ತರ ಹೇಳುವವರಿಲ್ಲವಲ್ಲ! ಹಾಗಾದರೆ ಇವರೆಲ್ಲ ಸಾಧನೆಯನ್ನೇ ಮಾಡಿಲ್ಲವೋ, ಅಥವಾ ದೇವರೇ ಇಲ್ಲವೋ ? ಉಪನಿಷತ್ತು-ಪುರಾಣಗಳೇನೋ ಹೇಳುತ್ತಿದೆ, 'ದೇವರಿದ್ದಾನೆ' ಎಂದು. ಆದರೆ ಕಂಡವರಾರು ? ಕಾಣಿಸಿಕೊಡಬಲ್ಲವರಾರು ?" ಅವನಿಗೀಗ ದಕ್ಷಿಣೇಶ್ವರದ ಶ್ರೀರಾಮಕೃಷ್ಣರ ನೆನಪಾಯಿತು. ಅವರನ್ನೂ ಈ ಕುರಿತಾಗಿ ಒಂದು ಮಾತನ್ನು ಏಕೆ ಕೇಳಿನೋಡಬಾರದು ?. . .

ಕೆಲತಿಂಗಳ ಹಿಂದೆಯಷ್ಟೆ, ಎಂದರೆ ೧೮೮೧ರ ನವೆಂಬರಿನಲ್ಲಿ, ಅವನಿಗೆ ತನ್ನ ನಂಟನಾದ ಸುರೇಂದ್ರನಾಥ ಮಿತ್ರ ಎಂಬಾತನ ಮನೆಯಲ್ಲಿ ಶ್ರೀರಾಮಕೃಷ್ಣರ ಪ್ರಥಮ ದರ್ಶನವಾಗಿತ್ತು. ಶ್ರೀರಾಮಕೃಷ್ಣರ ಭಕ್ತನಾದ ಸುರೇಂದ್ರ, ಅವರನ್ನು ತನ್ನ ಮನೆಗೆ ಬರಮಾಡಿಕೊಂಡಿದ್ದ. ಆ ಸಂದರ್ಭದಲ್ಲಿ ಅಭ್ಯಾಗತರ ಸಂತೋಷಕ್ಕಾಗಿ ಹಾಡಲು ಅವನು ನರೇಂದ್ರನನ್ನು ಕರೆಸಿಕೊಂಡಿದ್ದ. ಅಂದು ನರೇಂದ್ರನ ದಿವ್ಯ ಮಧುರ ಗಾನವನ್ನು ಕೇಳಿ ಶ್ರೀರಾಮಕೃಷ್ಣರು ಬಹಳ ಸಂತಸಪಟ್ಟರಲ್ಲದೆ ಅವನೆಡೆಗೆ ಆಕರ್ಷಿತರಾದರು. ಅವನು ಯಾರು, ಅವನ ತಂದೆತಾಯಿಗಳು ಯಾರು, ಅವನ ಮನೆ ಎಲ್ಲಿ ಎನ್ನುವುದನ್ನೆಲ್ಲ ವಿವರವಾಗಿ ಕೇಳಿ ತಿಳಿದುಕೊಂಡರು. ಬಳಿಕ ತುಂಬ ವಿಶ್ವಾಸದಿಂದ, "ದಕ್ಷಿಣೇಶ್ವರಕ್ಕೊಮ್ಮೆ ಬಂದುಹೋಗು" ಎಂದು ಆಮಂತ್ರಣವಿತ್ತಿದ್ದರು.

ಆದರೆ, ನರೇಂದ್ರ ಇಷ್ಟೊಂದು ಆಧ್ಯಾತ್ಮಿಕ ಒಲವು ತೋರಿಸುತ್ತಿರುವಾಗ ಅವನ ನಡೆ ನುಡಿ ಭಾವನೆಗಳಲ್ಲೆಲ್ಲ ಆಧ್ಯಾತ್ಮಿಕ ಜೀವನದ ಹಂಬಲ ಕಂಡುಬರುತ್ತಿರುವಾಗ, ಅದು ಅವನ ತಂದೆತಾಯಂದಿರ ಗಮನಕ್ಕೆ ಬಾರದೆ ಹೋಗುತ್ತದೆಯೇ ? ಬೆಳೆದುನಿಂತ ಮಗ ಎಲ್ಲರಂತೆ ಭೋಗವಿಲಾಸಗಳ ಹಿಂದೆ ಓಡಾಡಿಕೊಂಡಿದ್ದರೆ ಅವರೂ ಸುಮ್ಮನಿರುತ್ತಿದ್ದರು. ಆದರೆ ಅವನು ದೇವರು, ಆಧ್ಯಾತ್ಮಿಕ ಸಾಧನೆ, ಸಾಕ್ಷಾತ್ಕಾರ ಎನ್ನತೊಡಗಿದಾಗ ಅವನ ತಂದೆತಾಯಂದಿರು ಅವನನ್ನು 'ಸ್ವಸ್ಥ' ಸ್ಥಿತಿಗೆ ತರುವುದಕ್ಕಾಗಿ ಮದುವೆ ಮಾಡಿಬಿಡಲು ಆಲೋಚಿಸಿದರು. ಆದರೆ ನರೇಂದ್ರ ತನ್ನ ದೃಢನಿರ್ಧಾರವನ್ನು ಹೇಳಿಬಿಟ್ಟ—ತಾನು ಮದುವೆಯಾಗುವುದಿಲ್ಲ ಎಂದು. ಬೆಳೆದುನಿಂತ ಮಗ ತಾನು ಮದುವೆಯಾಗುವುದಿಲ್ಲ ಎಂದು ಮುಕ್ತಕಂಠದಿಂದ ಹೇಳಿಬಿಟ್ಟಾಗ ದೊಡ್ಡ ಗಲಾಟೆಗಿಟ್ಟುಕೊಂಡಿತು. ಈಗ ಅವನಿಗೆ ಬಂಧುಗಳು ಸ್ನೇಹಿತರು ಹಿತೈಷಿಗಳು ಎಲ್ಲರೂ ಬಂದು ಬುದ್ಧಿ ಹೇಳಲಾರಂಭಿಸಿದರು—'ಸಕಾಲದಲ್ಲಿ ಮದುವೆ ಮಾಡಿಕೊಂಡು ಸುಖವಾಗಿರುವುದೇ ಜಾಣತನವಪ್ಪ' ಎಂದು. ವಿಶ್ವನಾಥ ದತ್ತನ ಸಂಬಂಧಿಯಾದ ರಾಮಚಂದ್ರ ದತ್ತನೂ ನರೇಂದ್ರನಿಗೆ ಮದುವೆ ಮಾಡಿಕೊಳ್ಳುವಂತೆ ಉಪದೇಶಿಸಿದ. ಆದರೆ ಅವನು ತನ್ನ

ನಿರ್ಧಾರವನ್ನು ಬಿಡಲಿಲ್ಲ. ಆಗ ರಾಮಚಂದ್ರನಿಗೆ ಅವನ ಭಾವನೆ ಅರ್ಥವಾಯಿತು. ಏಕೆಂದರೆ ಸ್ವತಃ ಅವನೂ ಶ್ರೀರಾಮಕೃಷ್ಣರ ಶಿಷ್ಯ. ತ್ಯಾಗದ ಮೂಲಕ ಭಗವಂತನ ಸಾಕ್ಷಾತ್ಕಾರ ಗಳಿಸುವುದೇ ಜೀವನದ ಪರಮೋದ್ದೇಶ ಎಂಬ ಅವರ ಬೋಧನೆಯನ್ನು ಆತ ಬಹಳಷ್ಟು ಕೇಳಿದ್ದ. ಆದ್ದರಿಂದ, ಯಾವಾಗ ನರೇಂದ್ರ ತಾನು ತನ್ನ ಜೀವನವನ್ನು ಭಗವಂತನ ಸಾಕ್ಷಾತ್ಕಾರಕ್ಕಾಗಿ ಮುಡಿಪಾಗಿಟ್ಟಿರುವುದರಿಂದ ಖಂಡಿತ ಮದುವೆಯಾಗುವುದಿಲ್ಲವೆಂಬ ನಿರ್ಧಾರವನ್ನು ತಿಳಿಸಿಬಿಟ್ಟನೋ ಆಗ ರಾಮಚಂದ್ರ ಹೇಳಿದ: "ಹಾಗಾದರೆ ನೋಡಪ್ಪ, ಭಗವಂತನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಲೇಬೇಕು ಎನ್ನುವ ಆಕಾಂಕ್ಷೆ ಇರುವುದಾದರೆ ಸುಮ್ಮನೆ ಬ್ರಾಹ್ಮಸಮಾಜ, ಅಲ್ಲಿ-ಇಲ್ಲಿ ಅಂತ ಅಲೆಯಬೇಡ. ಸೀದಾ ದಕ್ಷಿಣೇಶ್ವರಕ್ಕೆ ಹೋಗು, ಅಲ್ಲಿ ಶ್ರೀರಾಮಕೃಷ್ಣರನ್ನು ನೋಡು." ಈ ವೇಳೆಗೆ ನರೇಂದ್ರನೂ ಹಾಗೆಯೇ ಯೋಚಿಸಿದ್ದ. ದಕ್ಷಿಣೇಶ್ವರಕ್ಕೆ ಹೋಗಬೇಕು, 'ನೀವು ದೇವರನ್ನು ಕಂಡಿದ್ದೀರಾ ?' ಎಂದು ಶ್ರೀರಾಮಕೃಷ್ಣರನ್ನು ಕೇಳಬೇಕು ಎಂದು ತೀರ್ಮಾನಿಸಿದ್ದ. ಭಗವಂತನನ್ನು ಕಾಣಬೇಕೆನ್ನುವ ನಿಜವಾದ ಕಾತರತೆ, ವ್ಯಾಕುಲತೆ ಇವು ಒಬ್ಬನ ಹೃದಯದಲ್ಲಿ ಉತ್ಪನ್ನವಾದಾಗ ಅವನ ಸ್ಥಿತಿ ಹೇಗಿರುತ್ತದೆಂದು ತಿಳಿಯಲು ನರೇಂದ್ರನನ್ನು ನೋಡಬೇಕು. ಅಂಥವನಿಗೆ ಭಗವತ್ಸಾಕ್ಷಾತ್ಕಾರದ ವಿಷಯವೊಂದನ್ನು ಬಿಟ್ಟು ಬೇರಾವ ವಿಷಯವೂ ಬೇಕಾಗುವುದಿಲ್ಲ. ಹಸಿವೆಯಿಂದ ಕಂಗಾಲಾದ ಮನುಷ್ಯ ಹೇಗೆ ಅನ್ನ ಹಾಕಬಲ್ಲವರನ್ನು ಅರಸುತ್ತ ಹೋಗುತ್ತಾನೋ ಹಾಗೆಯೇ ಭಗವಂತನನ್ನು ಕಾಣಬೇಕೆಂಬವನು ತನಗೆ ಆತನ ಸಾಕ್ಷಾತ್ಕಾರವನ್ನು ಮಾಡಿಸಿಕೊಡಬಲ್ಲವರನ್ನು ಹುಡುಕಿಕೊಂಡು ಹೊರಟುಬಿಡುತ್ತಾನೆ. ಹಾಗೆಯೇ ಈಗ ನರೇಂದ್ರ ದಕ್ಷಿಣೇಶ್ವರದ ಕಡೆಗೆ ಹೊರಟುಬಿಟ್ಟಿದ್ದಾನೆ. ನರೇಂದ್ರನೆಂಬ ಮರಿಸಿಂಹ ಶ್ರೀರಾಮಕೃಷ್ಣರೆಂಬ ಮಹಾಸಿಂಹದೆಡೆಗೆ ಹೊರಟುಬಿಟ್ಟಿದೆ ! . . .

ಯಾವುದು ಈ ಮಹಾಸಿಂಹ ?

ಯಾರು ಈ ರಾಮಕೃಷ್ಣರು ?

## ಶ್ರೀರಾಮಕೃಷ್ಣ



ಬಂಗಾಳದಲ್ಲಿ ಕಲ್ಕತ್ತದಿಂದ ಸುಮಾರು ಅರವತ್ತು ಮೈಲಿ ದೂರಕ್ಕೆ ಕಾಮಾರ ಪುಕುರ ಎನ್ನುವ ಒಂದು ಹಳ್ಳಿ. ಅಲ್ಲಿ ಚಂದ್ರಮಣೀ ದೇವಿ, ಕ್ಷುದಿರಾಮ ಚಟ್ಟೋಪಾಧ್ಯಾಯರೆಂಬ ಬಡ ಬ್ರಾಹ್ಮಣ ದಂಪತಿಗಳು. ಬಡವರಾದರೂ ಅವರ ಸಾಧುತ್ವವನ್ನು ಗುರುತಿಸಿದ ಹಳ್ಳಿಯ ಜನರೆಲ್ಲ ಅವರನ್ನು ತುಂಬ ಗೌರವದಿಂದ ನೋಡುತ್ತಿದ್ದರು. ಅವರ ಕಿರಿಮಗನಾಗಿ ಜನಿಸಿದವನು ಗದಾಧರ. ಅವನು ಬೆಳೆದುಬಂದದ್ದು ಹಳ್ಳಿಯ ಸರಳ ವಾತಾವರಣದಲ್ಲಿ. ಆದರೆ, ಅವನಲ್ಲಿ ಬಾಲ್ಯದಿಂದಲೇ ಅನೇಕ ಅದ್ಭುತ ಲಕ್ಷಣಗಳು ಕಾಣತೊಡಗಿದ್ದುವು. ಭಗವನ್ನಾಮ ಸಂಕೀರ್ತನೆಯನ್ನು ಕೇಳಿದರೆ ಅವನು ಭಾವ ಪರವಶನಾಗುತ್ತಿದ್ದ; ಶ್ಯಾಮಲ ಮೇಘಗಳಿಗೆ ಇದಿರಾಗಿ ಬೆಳ್ಳಕ್ಕಿಗಳು ಹಾರುವ ರಮ್ಯ ದೃಶ್ಯವನ್ನು ಕಂಡೇ ಮೈಮರೆಯುತ್ತಿದ್ದ. ಹುಡುಗ ಸಣ್ಣ ವಯಸ್ಸಿನವನಾಗಿರುವಾಗಲೇ ತಂದೆ ತೀರಿಕೊಂಡ. ಮೊದಲೇ ಬಡ ಸಂಸಾರ, ಈಗ ಇನ್ನಷ್ಟು ಕಷ್ಟಗಳಿಗೆ ಗುರಿಯಾಯಿತು. ಗದಾಧರನ ಹಿರಿಯಣ್ಣ ರಾಮಕುಮಾರ ಕಲ್ಕತ್ತಕ್ಕೆ ಬಂದು ಸಂಸ್ಕೃತ ಪಾಠಶಾಲೆಯೊಂದನ್ನು ಆರಂಭಿಸಿದ. ಉದರನಿಮಿತ್ತವಾಗಿ ತರುಣ ಗದಾಧರನೂ ಅಣ್ಣನ ಜೊತೆಗೆ ಬರಬೇಕಾಯಿತು. ಇಲ್ಲಿ ರಾಮಕುಮಾರ ತಮ್ಮನನ್ನು ವಿದ್ಯಾಭ್ಯಾಸಕ್ಕೆ ಹಾಕಿದ. ಆದರೆ ಗದಾಧರ ತನ್ನ ಜೀವನದ ಗುರಿಯ ಬಗ್ಗೆ, ದಾರಿಯ ಬಗ್ಗೆ ಬಹಳಷ್ಟು ಆಲೋಚಿಸಿ ಒಂದು ಇತ್ಯರ್ಥಕ್ಕೆ ಬರಲಾರಂಭಿಸಿದ. ಅವನು ತನ್ನನ್ನೇ ಕೇಳಿಕೊಳ್ಳುತ್ತಲಿದ್ದ: "ಈ ಲೌಕಿಕ ವಿದ್ಯಾಭ್ಯಾಸದಿಂದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲಾಗುವುದೆ ? ಅದಕ್ಕೆ ಅಗತ್ಯವಾದ ಜ್ಞಾನವನ್ನು-ಭಕ್ತಿಯನ್ನು ಬೆಳೆಸಿಕೊಳ್ಳಬಹುದೆ ?" 'ಇಲ್ಲ, ಸಾಧ್ಯವಿಲ್ಲ!' ಎಂದು ಅವನ ಮನಸ್ಸೇ ಸ್ಪಷ್ಟವಾಗಿ ಹೇಳುತ್ತಿತ್ತು. 'ಈ ಶಿಕ್ಷಣವನ್ನು ಪಡೆಯುವುದರ ಮೂಲಕ ನಾನು ಜೀವನಸಾರ್ಥಕ್ಯವನ್ನು ಹೊಂದಬಲ್ಲೆನೆ ? ಅಜ್ಞಾನದ ಕತ್ತಲಿನಿಂದ ಪಾರಾಗಬಲ್ಲೆನೆ ? ಭೋಗಾಸಕ್ತಿಯಿಂದ ಮುಕ್ತನಾಗಬಲ್ಲೆನೆ ?' 'ಇಲ್ಲ, ಸಾಧ್ಯವಿಲ್ಲ !' ಎನ್ನುವ ಅದೇ ಉತ್ತರ ಪ್ರತಿಧ್ವನಿಸುತ್ತಿತ್ತು ಅವನ ಹೃದಯದಾಳದಿಂದ. 'ಹಾಗಾದರೆ ಈ ವಿದ್ಯೆಯಿಂದ ನನಗೇನಾಗಬೇಕಾಗಿದೆ ? ಯಾವ ವಿದ್ಯೆ ಭಗವಂತನ ಸಾಕ್ಷಾತ್ಕಾರವನ್ನು ದೊರಕಿಸಿಕೊಡಲಾರದೋ, ಲೋಕದ ದುಃಖಪರಂಪರೆಯಿಂದ ಪಾರುಮಾಡಲಾರದೋ ಆ ವಿದ್ಯೆಯಿಂದ ಏನು ಪ್ರಯೋಜನ ? ಆ ವಿದ್ಯೆಯನ್ನು ಪಡೆಯುವುದರ ಬದಲು ನಾನು ಅನಕ್ಷರಸ್ಥನಾಗಿಯೇ ಉಳಿದುಕೊಂಡು ನೇರವಾಗಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸುತ್ತ ಮುಂದುವರಿಯುತ್ತೇನೆ' ಎಂದೆನ್ನುವ ತೀರ್ಮಾನಕ್ಕೆ ಬಂದ ಗದಾಧರ. ಅಣ್ಣ ತನ್ನನ್ನು ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡುವಂತೆ ಪ್ರೀತಿಯಿಂದ ಬಲವಂತಪಡಿಸಿದಾಗ ಗದಾಧರ ತನ್ನ ತೀರ್ಮಾನವನ್ನು ಹೇಳಿಬಿಟ್ಟ: "ಅಣ್ಣ, ಈ ಹೊಟ್ಟೆಪಾಡಿನ ವಿದ್ಯೆಯನ್ನು ಕಟ್ಟಿಕೊಂಡು ನಾನೇನು ಮಾಡಲಿ ? ಇದರ ಬದಲಿಗೆ ಯಾವ ಜ್ಞಾನವನ್ನು ಪಡೆಯುವುದರ ಮೂಲಕ ಹೃದಯ ಬೆಳಗುತ್ತದೆಯೋ ಮತ್ತು ನಿತ್ಯತೃಪ್ತಿ ಸಿಗುತ್ತದೆಯೋ ಅಂತಹ ಜ್ಞಾನವನ್ನು ಪಡೆಯುತ್ತೇನೆ." ಕಿಶೋರನ ಬಾಯಲ್ಲಿ ಎಂತಹ ಅದ್ಭುತ ಮಾತಿದು !

ಇದೇ ಸಮಯದಲ್ಲಿ ಕಲ್ಕತ್ತಕ್ಕೆ ಅನತಿದೂರದ ದಕ್ಷಿಣೇಶ್ವರದಲ್ಲಿ ಒಂದು ಭವ್ಯ ಕಾಳೀ ದೇವಾಲಯದ ನಿರ್ಮಾಣವಾಯಿತು. ಇದನ್ನು ಕಟ್ಟಿಸಿದವಳು ರಾಣಿ ರಾಸಮಣಿ ಎಂಬವಳು. ಈ ದೇವಾಲಯದ ಅರ್ಚಕನಾಗಿ ಬಂದು ಅನುಗ್ರಹಿಸುವಂತೆ, ವಿಪ್ರ ಶ್ರೇಷ್ಠನೂ ವಿಶಾಲಬುದ್ಧಿಯವನೂ ಆದ ರಾಮಕುಮಾರನನ್ನು ರಾಸಮಣಿ ಕೇಳಿ ಕೊಂಡಳು. ತನಗೆ ಅದರಲ್ಲಿ ವಿಶೇಷ ಆಸಕ್ತಿಯೇನಿಲ್ಲದಿದ್ದರೂ, ಅದೇ ದೈವೇಚ್ಛೆ ಯೆಂದರಿತು ರಾಮಕುಮಾರ ಒಪ್ಪಿಕೊಂಡ; ತಮ್ಮ ಗದಾಧರನನ್ನು ಕರೆದುಕೊಂಡು ದಕ್ಷಿಣೇಶ್ವರಕ್ಕೆ ಬಂದುಬಿಟ್ಟ. ಕಾಳೀದೇವಾಲಯದ ಅರ್ಚಕನಾಗಿ ಕಾರ್ಯಾರಂಭ ಮಾಡಿದ. ಈ ದೇವಾಲಯವಿರುವುದು ಪರಮಪಾವನಕರ ಗಂಗಾತೀರದಲ್ಲಿ. ಸುತ್ತ ಮುತ್ತೆಲ್ಲ ದಟ್ಟವಾದ ವನರಾಶಿ. ಪರಮ ಪ್ರಶಾಂತ ವಾತಾವರಣ, ಕಾಳಿಕಾದೇವಿಯ ಸನ್ನಿಧಿ—ಇವೆಲ್ಲವುಗಳಿಂದಾಗಿ ಗದಾಧರನ ಮನಸ್ಸಿನಲ್ಲಿ ಉನ್ನತ ಭಾವ ಜಾಗ್ರತವಾಗಿ ಬಿಟ್ಟಿತು. ಮೊದಲೇ ಅವನಲ್ಲಿ ಕಿಡಿಯ ರೂಪದಲ್ಲಿದ್ದ ಭಗವತ್ಸಾಕ್ಷಾತ್ಕಾರದ ಹಂಬಲ ಈಗ ಭುಗಿಲೆದ್ದಿತು. ಆಸ್ಥೆ ವಹಿಸಿ ಅಣ್ಣನಿಂದ ಪೂಜಾಕಾರ್ಯಗಳನ್ನು ಕಲಿತು ಆತನಿಗೆ ನೆರವಾಗತೊಡಗಿದ. ಮತ್ತು, ತಾನು ಸಾಕ್ಷಾತ್ ದೇವತೆಯ ಎದುರು ಕುಳಿತು ಪೂಜೆ ನೈವೇದ್ಯಾದಿಗಳನ್ನು ಸಲ್ಲಿಸುತ್ತಿರುವಂತೆ ಭಾವಿಸುತ್ತಿದ್ದ. ಕ್ರಮೇಣ ಅರ್ಚಕಕಾರ್ಯದ ಹೊಣೆಗಾರಿಕೆ ಅವನ ಮೇಲೆಯೇ ಬಂದಿತು. ಇದೇ ವೇಳೆಗೆ ರಾಮಕುಮಾರ ತನ್ನ ಕರ್ತವ್ಯವನ್ನು ಈಡೇರಿಸಿದ ಸಂತೃಪ್ತಿಯಿಂದಲೋ ಎಂಬಂತೆ, ಇದ್ದಕ್ಕಿದ್ದಂತೆ ಇಹಲೋಕ ಯಾತ್ರೆಯನ್ನು ಮುಗಿಸಿದ.

ಈಗ ಗದಾಧರ ಶ್ರೀರಾಮಕೃಷ್ಣರೆಂಬ ಹೆಸರಿನಿಂದ ಭವತಾರಿಣೀ ಕಾಳಿಯ ಅರ್ಚಕ ನಾದ, ಭಕ್ತವರೇಣ್ಯನಾದ, ಸಾಧಕನಾದ, ಸಿದ್ಧನಾದ, ಪ್ರಸಿದ್ಧನಾದ—ಪರಮಹಂಸ ನಾದ. ಅದು ಹನ್ನೆರಡು ವರ್ಷಗಳ ಅವಿರತ, ಅಭೂತಪೂರ್ವ, ಪರಮಾದ್ಭುತ ಸಾಧ ನೆಯ ಫಲ. ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಸಾಧನೆಯನ್ನು, ಅವರ ಭಗವತ್ಸಾಕ್ಷಾತ್ಕಾರದ ಹಂಬಲವನ್ನು, ತ್ಯಾಗವನ್ನು, ಸತ್ಯಸಂಧತೆಯನ್ನು, ಏಕನಿಷ್ಠೆಯ ಭಕ್ತಿಯನ್ನು, ಅವರಿಗೆ ದೊರಕಿದ ಆನಂದಾನುಭವವನ್ನು ಮಾತುಗಳ ಮೂಲಕ ವರ್ಣಿಸಲಸಾಧ್ಯ. ಶ್ರೀರಾಮ ಕೃಷ್ಣರಿಗೆ ಶಾಸ್ತ್ರಗಳ ಪರಿಚಯವೇ ಇರಲಿಲ್ಲ. ಆದ್ದರಿಂದ ಜಟಿಲ ಯೋಗಾಭ್ಯಾಸಗಳ ಸೂಕ್ಷ್ಮವೂ ತಿಳಿದಿರಲಿಲ್ಲ. ಅವರು ತಮ್ಮ ಸಾಧನೆಯ ಕಾಲದಲ್ಲಿ ಪಡೆದ ಗುರು ಸಹಾಯ, ಗುರುಮಾರ್ಗದರ್ಶನ ಅತ್ಯಲ್ಪ. ಸಾಧನೆಯ ಪ್ರಾರಂಭದಲ್ಲಿ ಅವರಲ್ಲಿದ್ದುದು ಮಗು ತನ್ನ ತಾಯಿಗಾಗಿ ಹಂಬಲಿಸುವಂತಹ ವ್ಯಾಕುಲತೆ ಮತ್ತು ಇಂದ್ರಿಯ ಸುಖದ ವಿಚಾರದಲ್ಲಿ ಸಂಪೂರ್ಣ ವೈರಾಗ್ಯ ಮಾತ್ರ. ಹಗಲೆಲ್ಲ ಕಾಳಿಕಾದೇವಿಯ ಪೂಜೆ-ಪ್ರಾರ್ಥನೆ-ಕೀರ್ತನೆಗಳಲ್ಲಿ ಕಳೆದರೆ, ಪ್ರಾತಃಕಾಲ-ಸಾಯಂಕಾಲಗಳು ಗಂಗೆಯ ತೀರ ದಲ್ಲಿ ಕಾಳಿಯ ಸ್ಮರಣ-ಮನನದಲ್ಲಿ ಕಳೆಯುತ್ತಿದ್ದುವು; ಇನ್ನು ರಾತ್ರಿಯೆಲ್ಲ ಆಕೆಯ ಧ್ಯಾನ. ನಿಜಕ್ಕೂ ಆ ಕಾಳೀಮಾತೆ—ತಮ್ಮ ಆರಾಧ್ಯದೈವ—ಇರುವಳೆ? ಇರುವ ಳಾದರೆ ಅವಳೆಲ್ಲಿ? ಆಕೆ ಕಣ್ಣಿಗೇಕೆ ಕಾಣದಿದ್ದಾಳೆ? ಇಷ್ಟು ಕರೆದರೂ ಮೈದೋರ ದಿದ್ದಾಳೆ?... ನಿರಂತರವೂ ಇದೊಂದೇ ತುಡಿತ. ಈ ವೇಳೆಗೆ ಅವರ ನೆಂಟನಾದ ಹೃದಯರಾಮ ಎಂಬ ತರುಣನೊಬ್ಬ ಅವರ ಸಹಾಯಕನಾಗಿ ಕೆಲಸಕ್ಕೆ ಸೇರಿದ್ದ. ಈತ ಅವರಲ್ಲಿ ತುಂಬ ವಿಶ್ವಾಸದಿಂದಿದ್ದು ಅವರ ದೈಹಿಕ ಯೋಗಕ್ಷೇಮವನ್ನು ನೋಡಿ ಕೊಳ್ಳುತ್ತಿದ್ದ.

ಶ್ರೀರಾಮಕೃಷ್ಣರು ಹಗಲಿರುಳೂ ಕಾಳೀದೇವಿಯ ಸಾಕ್ಷಾತ್ಕಾರಕ್ಕಾಗಿ ಕಾತರರಾಗಿರುತ್ತಿದ್ದರು. ಅವರ ಮನಸ್ಸಿನ ಒಂದೇ ಒಂದು ಮಹಾತ್ವಾಕಾಂಕ್ಷೆಯೆಂದರೆ ಕಾಳಿಕಾದೇವಿಯ ಸಾಕ್ಷಾತ್ಕಾರ. ದಿವಸಗಳು ಕಳೆದುವು, ಮಾಸಗಳು ಉರುಳಿದುವು. ಆದರೆ ಇನ್ನೂ ಅವಳ ದರ್ಶನವಾಗುವ ಸೂಚನೆಯೇ ಇಲ್ಲ! ಇಷ್ಟಾದರೂ ರಾಮಕೃಷ್ಣರ ಉತ್ಸಾಹ ಕಡಿಮೆಯಾಗಲಿಲ್ಲ; ಬದಲಿಗೆ 'ಇನ್ನೂ ಸಾಕ್ಷಾತ್ಕಾರವಾಗಲಿಲ್ಲವಲ್ಲಾ' ಎನ್ನುವ ಹೃದಯದ ಬೇಗೆ ಅಧಿಕವಾಗುತ್ತ ಬಂದಿತು. ಸಂಜೆಯ ಹೊತ್ತು ಗಂಗೆಯ ದಡದಲ್ಲಿ ನಿಂತು ಗಟ್ಟಿಯಾಗಿ ಅಳುತ್ತ ಜಗನ್ಮಾತೆಯಲ್ಲಿ ಮೊರೆಯಿಡುತ್ತಾರೆ: "ಅಮ್ಮ ಇನ್ನೂ ಒಂದು ದಿನ ವ್ಯರ್ಥವಾಗಿ ಹೋಯಿತು. ಆದರೆ ನಿನ್ನ ದರ್ಶನ ಮಾತ್ರ ಆಗಲಿಲ್ಲವಲ್ಲ! ಅಯ್ಯೋ! ಈ ಕ್ಷಣಿಕ ಜೀವನದ ಇನ್ನೂ ಒಂದು ದಿನ ಕಳೆದುಹೋಯಿತಲ್ಲಮ್ಮಾ!" ಕೆಲವೊಮ್ಮೆ ಅವರ ಮನಸ್ಸಿನಲ್ಲಿ ಸಂಶಯ ಸುಳಿಯುವುದೂ ಉಂಟು. ಆಗ ಜಗನ್ಮಾತೆಯನ್ನು ಕೇಳುತ್ತಾರೆ: "ಅಮ್ಮಾ ನೀನು ನಿಜವಾಗಿಯೂ ಇರುವುದು ಹೌದೇನಮ್ಮ? ಅಥವಾ ಎಲ್ಲವೂ ಕಟ್ಟುಕತೆಯೇ? ಪುರಾಣದ ಕಂತೆಯೇ? ಅಮ್ಮಾ ನೀನು ಇರುವುದೇ ಹೌದಾದಲ್ಲಿ, ನನಗೇಕೆ ನೀನು ಕಾಣಿಸುತ್ತಿಲ್ಲ? ಈ ಅಧ್ಯಾತ್ಮವೆನ್ನುವುದೆಲ್ಲ ಕೇವಲ ಭ್ರಾಂತಿಯೇ ಹಾಗಾದರೆ? ಆಕಾಶಗೋಪುರ ಮಾತ್ರವೆ?" ಆದರೆ ಅವರ ಮನದಲ್ಲೆದ್ದ ಈ ಬಗೆಯ ಸಂಶಯ-ನಾಸ್ತಿಕತೆಯೆಲ್ಲ ಕೇವಲ ಕ್ಷಣಕಾಲದವರೆಗೆ ಮಾತ್ರ. ಮರುಕ್ಷಣವೇ, ಹಿಂದೆ ಸಾಕ್ಷಾತ್ಕಾರ ಮಾಡಿಕೊಂಡವರೆಲ್ಲ ಅವರ ನೆನಪಿಗೆ ಬರುತ್ತಾರೆ. ಆಗ ಅವರ ವ್ಯಾಕುಲತೆ ದ್ವಿಗುಣವಾಗುತ್ತದೆ, ಇನ್ನಷ್ಟು ತೀವ್ರವಾದ ಸಾಧನೆಯಲ್ಲಿ ನಿರತರಾಗಿಬಿಡುತ್ತಾರೆ.

ಒಂದು ದಿನವಂತೂ ಅವರ ದುಃಖ ಅಸಹನೀಯವಾಯಿತು. ಹೃದಯದಲ್ಲಿ ತಾಳಲಾರದ ವೇದನೆ. ಭಗವತಿಯ ಸಾಕ್ಷಾತ್ಕಾರವಾಗದಿದ್ದ ಮೇಲೆ ಬದುಕಿಯಾದರೂ ಏನು ಪ್ರಯೋಜನ ಎನ್ನುವ ಭಾವನೆಯಿಂದ ಅವರು ತಮ್ಮ ಜೀವನವನ್ನೇ ಕೊನೆಗೊಳಿಸಿಕೊಂಡುಬಿಡುವ ನಿರ್ಧಾರ ಮಾಡಿದರು. ಕಾಳಿಕಾದೇವಿಯ ಪಕ್ಕದಲ್ಲಿಯೇ ಗೋಡೆಗೆ ತೂಗುಹಾಕಿದ್ದ ಖಡ್ಗ ಕಂಡಿತು. ಮುನ್ನುಗ್ಗಿ ಅದನ್ನು ಕೈಗೆತ್ತಿಕೊಂಡರು. ಇನ್ನೇನು ಅವರ ಶಿರ ಉರುಳಿಬೀಳಬೇಕು... ಅದ್ಭುತ! ಆ ಕ್ಷಣದಲ್ಲೇ ಕಾಳಿಕಾದೇವಿ ಕೋಟಿಸೂರ್ಯಪ್ರಕಾಶದಿಂದ ಪ್ರತ್ಯಕ್ಷಳಾದಳು! ಶ್ರೀರಾಮಕೃಷ್ಣರು ಬಾಹ್ಯಪ್ರಜ್ಞೆ ತಪ್ಪಿ ಬಿದ್ದುಬಿಟ್ಟರು. ಆ ಬಳಿಕ ಏನಾಯಿತೆಂಬುದು ಅವರಿಗೆ ತಿಳಿಯಲಿಲ್ಲ. ಆದರೆ ಅವರ ಹೃದಯದೊಳಗೆ ಈಗ ಅಪಾರವಾದ ಅಲೌಕಿಕ ಆನಂದ ನಿರಂತರವಾಗಿ ಹರಿಯುತ್ತಿತ್ತು. ಅಂತಹ ದಿವ್ಯಾನಂದವನ್ನು ಅವರು ಹಿಂದೆಂದೂ ಅನುಭವಿಸಿರಲಿಲ್ಲ—ಅಂತಹ ಅವರ್ಣನೀಯ ಆನಂದ!

ಇದಾದ ನಂತರವೂ ಅವರಿಗೆ ಹಲವಾರು ಅದ್ಭುತ ದರ್ಶನಗಳಾಗುತ್ತಲೇ ಇದ್ದುವು. ತಾವು ಯಾವುದೋ ಬೇರೆಯೇ ಲೋಕದಲ್ಲಿರುವಂತೆ ಭಾಸವಾಗುತ್ತಿತ್ತು. ಸಮಾಧಿಸ್ಥಿತಿಯಲ್ಲೂ ತೆರೆಗಣ್ಣಿಗೂ ನಾನಾ ಬಗೆಯ ಹಲವು ದರ್ಶನಗಳಾದುವು. ಆದರೆ ಅವರ ವರ್ತನೆಯನ್ನು ಮಾತುಕತೆಯನ್ನು ಜನ ಹುಚ್ಚು ಎಂದು ಅರ್ಥಮಾಡಿಕೊಂಡರು.

ಹೀಗೆ ಜಗನ್ಮಾತೆಯ ದರ್ಶನವೇ ಮೊದಲಾದ ದಿವ್ಯಾನುಭವಗಳೆಲ್ಲ ಆದರೂ ಶ್ರೀರಾಮಕೃಷ್ಣರಿಗೆ ಮಾತ್ರ ಸಮಾಧಾನವಿಲ್ಲ. ಏಕೆಂದರೆ, ಜಗನ್ಮಾತೆಯನ್ನು ಸದಾ

ಸರ್ವದಾ ಕಾಣುತ್ತಿರಲು ಸಾಧ್ಯವಾಗಿಲ್ಲವಲ್ಲ! ಆಕೆ ಹೀಗೆ ಒಮ್ಮೆ ದರ್ಶನ ಕೊಟ್ಟು ಓಡಿಹೋಗಲು ಬಿಡುವವರಲ್ಲ ಅವರು. ಈಗ ಮತ್ತೊಮ್ಮೆ ಸಾಧನೆಯಲ್ಲಿ ತೊಡಗಿದರು. ಈ ಸಲ ಇನ್ನಷ್ಟು ತೀವ್ರವಾದ ಸಾಧನೆ; ಇನ್ನಷ್ಟು ವ್ಯಾಕುಲ ಹೃದಯದ ಪ್ರಾರ್ಥನೆ! ಇದರ ಪರಿಣಾಮವಾಗಿ ಅವರ ಆಧ್ಯಾತ್ಮಿಕ ಅರಿವು ಇನ್ನೂ ಆಳವಾಗುತ್ತ ಬಂದಿತು; ನಿರಂತರವೂ ಜಗನ್ಮಾತೆಯ ದರ್ಶನ ದೊರಕುವಂತಾಯಿತು. ಈಗ ಅವರ ಪಾಲಿಗೆ ದೇವಾಲಯದ ಗರ್ಭಗುಡಿಯಲ್ಲಿ ಕಾಳಿಯ ಪ್ರತಿಮೆ ಇಲ್ಲವಾಗಿಬಿಟ್ಟಿದೆ; ಅಲ್ಲಿ ಈಗ ಸಾಕ್ಷಾತ್ ಚಿನ್ಮಯೀ ಕಾಳಿಯೇ ನಿಂತಿದ್ದಾಳೆ! ಅವರನ್ನು ಸದಾ ಆಶೀರ್ವದಿಸುತ್ತ ಮಂದಸ್ಮಿತಳಾಗಿ ತಾಯಿ ಕಾಳಿಯೇ ಅಲ್ಲಿ ನಿಂತಿದ್ದಾಳೆ! ಅವಳು ಅಲ್ಲಿ ಎಷ್ಟು ಜೀವಂತಳಾಗಿ ನಿಂತಿರುವಳೆಂದರೆ ಶ್ರೀರಾಮಕೃಷ್ಣರಿಗೆ ಅವಳ ಉಸಿರಾಟವೂ ಸ್ಪಷ್ಟವಾಗಿ ಗೋಚರಿಸುತ್ತಿದೆ. ಅವಳ ಕಾಲಂದುಗೆಯ ಝಣತ್ಕಾರ ಕೇಳಿಸುತ್ತಿದೆ. ತಾನು ಜಗನ್ಮಾತೆಯಿಂದ ದೂರದಲ್ಲಿದ್ದೇನೆ ಎನ್ನುವ ಭಾವನೆಯೇ ಅವರ ಮನಸ್ಸಿನಿಂದ ಹೊರಟುಹೋಗಿದೆ.

ಈ ಬಗೆಯ ನಿರಂತರ ಆನಂದಾನುಭವದಿಂದ ಶ್ರೀರಾಮಕೃಷ್ಣರ ಶರೀರವೆಲ್ಲ ತೀರ ಸೂಕ್ಷ್ಮವಾಗಿ, ಅದು ಕೇವಲ ಆಧ್ಯಾತ್ಮಿಕ ಸುಖಾನುಭವಕ್ಕೆ ಮಾತ್ರ ಹೊಂದಿಕೊಳ್ಳುವಂತಾಗಿಬಿಟ್ಟಿತ್ತು. ಲೈಂಗಿಕ ಸುಖಾಭಿಲಾಷೆಯನ್ನೊಳಗೊಂಡಂತೆ ಇಂದ್ರಿಯ ಭೋಗಾಸಕ್ತಿ ಅವರ ಮನಸ್ಸಿನಿಂದ ಸಂಪೂರ್ಣ ಅಳಿಸಿಹೋಗಿಬಿಟ್ಟಿತ್ತು. ಆದರೆ, ಅದೊಂದು ಅಸಹಜ-ಅನಿಷ್ಟ ಸ್ಥಿತಿಯೆಂದು ಭಾವಿಸಿದ ರಾಸಮಣಿಯ ಅಳಿಯ ಮಥುರಾನಾಥ ಅವರ ಮನಸ್ಸನ್ನು ವಿಷಯಸುಖದ ಕಡೆಗೆ ಸೆಳೆದು, ಅವರ ದೇಹ-ಮನಸ್ಸುಗಳನ್ನು ಸುಸ್ಥಿತಿಗೆ ತರುವೆನೆಂಬ ಭ್ರಮೆಯಿಂದ ಗುಟ್ಟಾಗಿ ವೇಶ್ಯಾಸಂಪರ್ಕಕ್ಕೆ ವ್ಯವಸ್ಥೆ ಮಾಡಿಸಿದ. ಪವಿತ್ರತೆಯ, ಆತ್ಮಸಂಯಮದ ಮೂರ್ತಿಯಾದ ಶ್ರೀರಾಮಕೃಷ್ಣರು ಈ ಪರೀಕ್ಷೆಯಲ್ಲಿ ಉತ್ತೀರ್ಣರಾದರೆಂದು ಹೇಳಬೇಕಾಗಿಯೇ ಇಲ್ಲ. ಅವರು ಕನಸಿನಲ್ಲೂ ಕೂಡ ಸ್ತ್ರೀಯನ್ನು ಸಾಕ್ಷಾತ್ ಜಗನ್ಮಾತೆಯೆಂದೇ ತಿಳಿದವರೇ ಹೊರತು ಅನ್ಯಥಾ ಅಲ್ಲ.

ಅತ್ಯಂತ ತೀವ್ರವಾದ ಬಗೆಬಗೆಯ ಸಾಧನೆಗಳ ಪರಿಣಾಮವಾಗಿ ಶ್ರೀರಾಮಕೃಷ್ಣರ ಶರೀರ ಬಳಲಿತ್ತು; ಅಲ್ಲದೆ ಅವರ ವಿಚಿತ್ರ ಸಾಧನೆ, ವಿಚಿತ್ರ ನಡವಳಿಕೆಗಳನ್ನು ಕಂಡ ಜನ ಅವರಿಗೆ ಹುಚ್ಚು ಹಿಡಿದಿದೆಯೆಂದೇ ನಂಬಿದರು. ತಾಯಿ ಚಂದ್ರಮಣಿದೇವಿಗೂ ಈ ಸುದ್ದಿ ತಲುಪಿತು. ಅವಳು ಕಳವಳಗೊಂಡು ಮಗನನ್ನು ಊರಿಗೆ ಕರೆಸಿಕೊಂಡಳು. ಮತ್ತು ಅವರನ್ನು 'ಸ್ವಾಸ್ಥ್ಯ'ಕ್ಕೆ ತರಲು ಮದುವೆ ಮಾಡಿಬಿಡುವ ಪ್ರಯತ್ನದಲ್ಲಿ ತೊಡಗಿದಳು. ಶ್ರೀರಾಮಕೃಷ್ಣರು ಇದಕ್ಕೆ ತಮ್ಮ ಅನುಮತಿಯನ್ನು ಕೊಟ್ಟದ್ದಲ್ಲದೆ ತಮಗೆ ಮಡದಿಯಾಗಿ ಬರಬೇಕಾದ ಹುಡುಗಿ ಯಾರು ಎನ್ನುವುದನ್ನು ತಾವೇ ಸೂಚಿಸಿದರು. ಹುಡುಗಿ, ಸಮೀಪದ ಜಯರಾಂಬಾಟಿ ಎಂಬ ಹಳ್ಳಿಯ ರಾಮಚಂದ್ರ ಮುಖರ್ಜಿ ಮತ್ತು ಶ್ಯಾಮಸುಂದರೀ ದೇವಿ ಎಂಬ ದಂಪತಿಗಳ ಮಗಳು—ಶಾರದೆ. ಶ್ರೀರಾಮಕೃಷ್ಣರ ವಯಸ್ಸು ೨೩ ವರ್ಷವಾದರೆ, ಆ ಹುಡುಗಿಗಿನ್ನೂ ಐದು ವರ್ಷ! ಆದರೂ ಮದುವೆ ನಡೆದೇಹೋಯಿತು. ಶ್ರೀರಾಮಕೃಷ್ಣರು ಕೆಲಕಾಲ ಕಾಮಾರಪುಕುರದಲ್ಲಿದ್ದು ಆರೋಗ್ಯ ಸುಧಾರಿಸಿಕೊಂಡು ಮತ್ತೆ ದಕ್ಷಿಣೇಶ್ವರಕ್ಕೆ ಹೊರಟರು. ಶಾರದೆ ತನ್ನ ತವರಿಗೆ ಮರಳಿದಳು.

ಈಗ ಶ್ರೀರಾಮಕೃಷ್ಣರಲ್ಲಿ ಇನ್ನೂ ತೀವ್ರವಾದ ಆಧ್ಯಾತ್ಮಿಕ ತೃಷೆ ಉತ್ಪನ್ನ

ವಾಯಿತು. ಆಧ್ಯಾತ್ಮಿಕತೆಯೆನ್ನುವುದು ಅನಂತ. ಆ ಅನಂತತೆಯ ಸ್ಪಷ್ಟ ಅನುಭವ ಮಾಡಿಕೊಳ್ಳಬೇಕೆಂಬ ಹಂಬಲ ಶ್ರೀರಾಮಕೃಷ್ಣರಿಗೆ. ಸರಿ, ಮತ್ತೊಮ್ಮೆ ತಾಯಿ, ಮಡದಿ, ಬಂಧುಗಳು ಇವರನ್ನೆಲ್ಲ ಮರೆತು ತೀವ್ರ ಸಾಧನೆಯಲ್ಲಿ ತೊಡಗಿದರು. ಈ ಸಂದರ್ಭ ದಲ್ಲಿ ದಕ್ಷಿಣೇಶ್ವರಕ್ಕೆ ಭೈರವಿ ಬ್ರಾಹ್ಮಣಿ ಎಂಬ ವೈಷ್ಣವ ಸಾಧಕಿ ಬಂದಳು. ಇವಳು ಭಕ್ತಿಶಾಸ್ತ್ರ, ತಂತ್ರಶಾಸ್ತ್ರಗಳಲ್ಲಿ ಚೆನ್ನಾಗಿ ನುರಿತವಳು. ಈಕೆ ಶ್ರೀರಾಮಕೃಷ್ಣರ ಶರೀರ ಲಕ್ಷಣಗಳನ್ನೂ ಮನಃಸ್ಥಿತಿಯನ್ನೂ ಚೆನ್ನಾಗಿ ಪರೀಕ್ಷಿಸಿ, "ಇದು ವೈಷ್ಣವ ಶಾಸ್ತ್ರದಲ್ಲಿ ಬಣ್ಣಿಸಲ್ಪಟ್ಟಿರುವ 'ಮಹಾಭಾವ' ಎಂಬ ಅದ್ಭುತ ಸ್ಥಿತಿ" ಎಂದು ಸಾರಿದಳು. ಮಹಾ ಭಾವ ಎನ್ನುವುದು ಭಕ್ತಿಭಾವದ ಅತ್ಯುನ್ನತ ಸ್ಥಿತಿ; ಈಶ್ವರಕೋಟಿಗಳಿಗೆ ಮಾತ್ರ ಲಭ್ಯ ವಾಗುವಂತಹದು. ಸಾಮಾನ್ಯ ಜನರೆಲ್ಲ ಶ್ರೀರಾಮಕೃಷ್ಣರ ಭಾವವನ್ನು ಕಂಡು ಅದೊಂದು ಬಗೆಯ ಹುಚ್ಚು ಎಂದು ತಿಳಿದರೆ, ಭೈರವಿ ಬ್ರಾಹ್ಮಣಿ ಅದನ್ನು 'ಮಹಾ ಭಾವ' ಎಂದು ಕರೆಯುತ್ತಿದ್ದಾಳೆ ! ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಅನುಭವದ ಉತ್ತುಂಗ ಸ್ಥಿತಿಗೇರಿದವರು ಎನ್ನುವುದನ್ನು ಅವಳು ಕಂಡುಕೊಂಡಳು. ಮಾತ್ರವಲ್ಲ, ಶಾಸ್ತ್ರೋಕ್ತಿ ಗಳನ್ನು ಆಳವಾಗಿ ಅಧ್ಯಯಿಸಿ, ದೀರ್ಘಾಲೋಚನೆ ನಡೆಸಿ ಕಡೆಗೆ ಶ್ರೀರಾಮಕೃಷ್ಣರು ಸಾಕ್ಷಾತ್ ಭಗವಂತನ ಅವತಾರ ಎಂಬುದನ್ನು ಆಕೆ ಸ್ಪಷ್ಟವಾಗಿ ಗುರುತಿಸಿದಳು. ಅಷ್ಟೇ ಅಲ್ಲ, ಆ ಕಾಲದ ಅತಿ ಪ್ರಸಿದ್ಧ ಪಂಡಿತರನ್ನೆಲ್ಲ ಕರೆಸಿ ಸಭೆ ಸೇರಿಸಿ, ಅವರ ಮುಂದೆ ಆಧಾರಗಳನ್ನು ತೋರಿಸಿಕೊಟ್ಟು, ಶ್ರೀರಾಮಕೃಷ್ಣರು ಅವತಾರಪುರುಷರು ಎಂಬುದನ್ನು ಸಾಬೀತುಪಡಿಸಿದಳು. ಪಂಡಿತರೆಲ್ಲರೂ ಅದನ್ನು ಮರುಮಾತಿಲ್ಲದೆ ಸರ್ವಾನುಮತ ದಿಂದ ಒಪ್ಪಿಕೊಳ್ಳಬೇಕಾಯಿತು.

ಶ್ರೀರಾಮಕೃಷ್ಣರು ಭೈರವಿ ಬ್ರಾಹ್ಮಣಿಯನ್ನು ಗುರುವಾಗಿ ಸ್ವೀಕರಿಸಿ, ವೈಷ್ಣವಶಾಸ್ತ್ರ ಗಳಿಗೆ ಅನುಸಾರವಾದ ತಂತ್ರಸಾಧನೆಯನ್ನು ಕೈಗೊಂಡರು. ಮತ್ತು ಅತ್ಯಲ್ಪ ಕಾಲದಲ್ಲಿ ಅನೇಕ ಬಗೆಯ ಸಾಧನೆಗಳಲ್ಲಿ ಸಿದ್ಧರಾದರು.

ಇದಾದ ಮೇಲೆ ದಕ್ಷಿಣೇಶ್ವರಕ್ಕೆ ವೈಷ್ಣವ ಸಾಧುವೊಬ್ಬನು ಬಂದ. ಇವನು ರಾಮಭಕ್ತ. ಸುದೀರ್ಘ ಸಾಧನೆಯಿಂದ ತನ್ನ ಇಷ್ಟದೇವತೆಯಾದ ರಾಮಲಾಲನ ಸಾಕ್ಷಾತ್ಕಾರ ಮಾಡಿಕೊಂಡವನು. ಇವನ ಹತ್ತಿರ ಬಾಲರಾಮನ ಒಂದು ಪುಟ್ಟ ಪ್ರತಿಮೆ ಇತ್ತು, ಅದರಲ್ಲಿ ಅವನು ಜೀವಂತ ರಾಮನನ್ನು ಕಣ್ಣಾರೆ ಕಾಣುತ್ತಿದ್ದ. ಆ ಹಸುಳೆ ರಾಮನನ್ನು ತನ್ನ ಕಂದನೆಂಬಂತೆ ಲಾಲಿಸಿ ಪಾಲಿಸುತ್ತಿದ್ದ. ಯಾವಾಗ ಶ್ರೀರಾಮಕೃಷ್ಣರು ಆ ಪ್ರತಿಮೆಯನ್ನು ಕಂಡರೋ, ಒಡನೆಯೇ ಅದರಲ್ಲಿ ಬಾಲರಾಮನನ್ನು ಗುರುತಿಸಿ ಬಿಟ್ಟರು ! ಅವರಿಗೂ ರಾಮಲಾಲನಿಗೂ ಬಹುಬೇಗ ಗಾಢ ಸ್ನೇಹಬಾಂಧವ್ಯ ಬೆಳೆಯಿತು. ಅವರೀಗ ಇತರರನ್ನು ಕಾಣುವಷ್ಟೇ ಸ್ಪಷ್ಟವಾಗಿ ರಾಮಲಾಲನನ್ನು ಕಾಣತೊಡಗಿದರು. ರಾಮಲಾಲ ನರ್ತನ ಮಾಡುತ್ತಾನೆ; ಅವರ ಬೆನ್ನೇರಿ ಕುಣಿದು ಕುಪ್ಪಳಿಸುತ್ತಾನೆ; ತೋಳಿನಲ್ಲೆತ್ತಿಕೊಳ್ಳುವಂತೆ ಕಾಡುತ್ತಾನೆ ! ಆ ದಿವ್ಯಬಾಲಕನು ಶ್ರೀರಾಮಕೃಷ್ಣರ ಜೊತೆಗೆ ಎಷ್ಟು ಆತ್ಮೀಯವಾಗಿ ಹೊಂದಿಕೊಂಡುಬಿಟ್ಟನೆಂದರೆ ತನ್ನನ್ನು ಕರೆತಂದಿದ್ದ ವೈಷ್ಣವ ಸಾಧುವಿನೊಂದಿಗೆ ತಾನು ಹೋಗಲೊಲ್ಲೆ ಎಂದುಬಿಟ್ಟ ! ರಾಮಲಾಲ ಹೇಗಿದ್ದರೂ ಶ್ರೀರಾಮಕೃಷ್ಣರ ಜೊತೆಗೆ ಆನಂದದಿಂದ ಇರುವುದನ್ನು ಕಂಡು, ಮತ್ತು ತಾನು ತನ್ನ ಸಾಧನೆಯ ಚರಮಾವಸ್ಥೆಯನ್ನು ಮುಟ್ಟಿದ್ದೇನೆಂದರಿತು, ಆ ಸಾಧು ಅವನನ್ನು— ರಾಮಲಾಲ ವಿಗ್ರಹವನ್ನು—ಅಲ್ಲೇ ಬಿಟ್ಟು ಹೊರಟುಹೋದ.

ಈಗ ಶ್ರೀರಾಮಕೃಷ್ಣರು ವೈಷ್ಣವ ಶಾಸ್ತ್ರಕ್ಕೆ ಅನುಸಾರವಾದ ಇನ್ನೊಂದು ವಿಶಿಷ್ಟ ಸಾಧನೆಯನ್ನು ಕೈಗೊಳ್ಳುತ್ತಾರೆ. ಇದೇ ಮಧುರಭಾವ ಸಾಧನೆ. ಪ್ರಿಯೆಯು ತನ್ನ ಪ್ರಿಯತಮನ ಮೇಲಿಡುವ ಭಾವವೇ ಮಧುರಭಾವ. ಭಗವಂತನನ್ನೇ ಈ ಭಾವದಿಂದ ಕಂಡು ಆರಾಧಿಸಿದಾಗ ಅದು ಸಾಕ್ಷಾತ್ಕಾರಕ್ಕೆ ಸಾಧಕವಾಗುತ್ತದೆ. ವೈಷ್ಣವ ಸಾಧನೆಗಳಲ್ಲಿ ಭಕ್ತಿಗೆ ಪ್ರಾಧಾನ್ಯ. ಅದರಲ್ಲೂ ಈ ಮಧುರಭಾವ ಸಾಧನೆಯಲ್ಲಿ ಭಕ್ತ-ಭಗವಂತರಲ್ಲಿ ಉಂಟಾಗುವ ತಾದಾತ್ಮ್ಯಭಾವವು ಅತ್ಯುನ್ನತ ಮಟ್ಟದ್ದು. ಭಗವಂತನೊಂದಿಗಿನ ಮಧುರತರ ನಿಕಟ ಸಂಬಂಧವೇ ಈ ಸಾಧನೆಯ ವೈಶಿಷ್ಟ್ಯ. ಇದಕ್ಕೊಂದು ಶ್ರೇಷ್ಠ ಉದಾಹರಣೆ ರಾಧೆಯ ಜೀವನ. ಈ ಭಾವದ ಅನುಸಾರ ಸಾಧನೆ ಮಾಡುವ ಭಕ್ತ ತನ್ನ ವೈಯಕ್ತಿಕ ಸುಖ ಸಂತೋಷ ಅನುಕೂಲಗಳನ್ನು ಕಿಂಚಿತ್ತೂ ಲೆಕ್ಕಿಸದೆ, ತನ್ನ ಪ್ರೀತಿ ಪಾತ್ರನಾದ ಭಗವಂತನನ್ನು ಸಂತುಷ್ಟಿಪಡಿಸುವುದರ ಕಡೆಗಷ್ಟೇ ಗಮನ ಕೊಡುತ್ತಾನೆ. ಮಧುರಭಾವ ಸಾಧನೆಯ ಒಂದು ಪ್ರಮುಖ ಅಂಶವೆಂದರೆ, ಸಾಧನೆಯನ್ನು ಕೈಗೊಂಡ ವ್ಯಕ್ತಿ ಸ್ತ್ರೀಯಾಗಲಿ ಪುರುಷನಾಗಲಿ, ತನ್ನ ಲೈಂಗಿಕ ಪ್ರವೃತ್ತಿಯನ್ನು ಸಂಪೂರ್ಣವಾಗಿ ಅತಿಕ್ರಮಿಸಿದ ಮೇಲಷ್ಟೇ ಮುಂದುವರಿಯಬಹುದಾದ ಸಾಧನಾವಿಧಾನ ಅದು. ಇಂತಹ ಸಾಧನೆಯನ್ನು ಶ್ರೀರಾಮಕೃಷ್ಣರು ತಮ್ಮ ಸ್ವಭಾವಸಹಜ ಉತ್ಸಾಹದಿಂದ ಪ್ರಾರಂಭಿಸಿದರು. ತಮ್ಮನ್ನು ಒಬ್ಬಳು ಸ್ತ್ರೀಯೆಂದೇ ಭಾವಿಸಿಕೊಂಡರು; ಸ್ತ್ರೀಯು ರಂತೆಯೇ ಉಡಿಗೆತೊಡಿಗೆ ಧರಿಸುತ್ತಿದ್ದರು; ಸ್ತ್ರೀಯರಂತೆಯೇ ಮಾತನಾಡುತ್ತಿದ್ದರು. ತಮ್ಮ ಭಕ್ತನಾದ ಮಥುರಾನಾಥನ ಮನೆಯ ಮಹಿಳೆಯರ ಸಂಗಡವೇ ಇರುತ್ತಿದ್ದರು. ಅವರ ಭಾವನೆ ಮಾತುಕತೆ ನಡಿಗೆ ಎಲ್ಲವೂ ಹೇಗೆ ಸ್ತ್ರೀಯರಂತೆಯೇ ಆಗಿಬಿಟ್ಟಿತ್ತೆಂದರೆ, ಮಥುರಾನಾಥನ ಮನೆಯ ಮಹಿಳೆಯರಿಗೆ ಇವರೊಬ್ಬ ಪುರುಷ ಎನ್ನುವ ಭಾವ ನೆಯೇ ಬರುತ್ತಿರಲಿಲ್ಲ. ಹೀಗೆ ತಮ್ಮನ್ನು ಭಗವಂತನ ಪ್ರಿಯೆಯೆಂಬಂತೆ ಭಾವಿಸಿ ಕೊಂಡು ಮಾಡಿದ ಈ ಮಧುರಭಾವ ಸಾಧನೆಯ ಮೂಲಕ ಶ್ರೀರಾಮಕೃಷ್ಣರು ಅದೇ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡರು. ಪುರುಷನೊಬ್ಬ ಸ್ತ್ರೀಭಾವದಿಂದಲೂ ಭಗವಂ ತನ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು ಎಂಬ ಸತ್ಯವನ್ನು ಈ ಮೂಲಕ ಅವರು ಕಂಡುಕೊಂಡರು.

ಈ ಸಮಯಕ್ಕೆ ದಕ್ಷಿಣೇಶ್ವರಕ್ಕೆ ಅದ್ವೈತವೇದಾಂತದ ಸಾಧಕಶ್ರೇಷ್ಠನೊಬ್ಬ ಆಗಮಿ ಸಿದ. ಇವನೇ ನಗ್ನಸಂನ್ಯಾಸಿ ತೋತಾಪುರಿ. ಪ್ರಥಮ ನೋಟದಲ್ಲೇ ಈತ ಶ್ರೀರಾಮ ಕೃಷ್ಣರ ವರ್ಚಸ್ಸನ್ನು ಕಂಡು, ಅವರಿಗೆ ಅದ್ವೈತ ತತ್ತ್ವದ ರಹಸ್ಯವನ್ನು ಬೋಧಿಸಲು ಮುಂದಾದ. ಶ್ರೀರಾಮಕೃಷ್ಣರು ಒಪ್ಪಿಕೊಂಡರು. ಆತನ ಆದೇಶದಂತೆ ಸಂನ್ಯಾಸವನ್ನು ಸ್ವೀಕರಿಸಿದರು. ಅವನ ಮಾರ್ಗದರ್ಶನದಲ್ಲಿ ಮುಂದುವರಿದು, ಅತ್ಯಲ್ಪ ಅವಧಿಯಲ್ಲಿ ಅದ್ವೈತ ಸಾಕ್ಷಾತ್ಕಾರವನ್ನು ಪಡೆದುಕೊಂಡರು. ಅದ್ವೈತ ಸಾಕ್ಷಾತ್ಕಾರವೆಂದರೆ ನಿರ್ವಿಕಲ್ಪ ಸಮಾಧಿಸ್ಥಿತಿಯಲ್ಲಿ, ಆತ್ಯಂತಿಕ ಸತ್ಯಸ್ವರೂಪನಾದ ಪರಬ್ರಹ್ಮನೊಂದಿಗೆ ಸಾಧಕನ ಆತ್ಮವು ಐಕ್ಯಹೊಂದುವಂತಹ ತುರೀಯ ಸ್ಥಿತಿ. ಈ ಅನುಭವವನ್ನು ಪಡೆದುಕೊಳ್ಳಲು ತೋತಾಪುರಿಗೆ ನಲವತ್ತು ವರ್ಷಗಳ ಸಾಧನೆ ಬೇಕಾಗಿತ್ತು. ಆದರೆ ಇದೇ ಅನುಭವ ವನ್ನು ಹೊಂದಲು ಶ್ರೀರಾಮಕೃಷ್ಣರಿಗೆ ಕೇವಲ ಒಂದೇ ಒಂದು ದಿನ ಸಾಕಾಯಿತು! ಈ ಅನುಭವದ ಕುರಿತಾಗಿ ಮುಂದೆ ಅವರು ಹೇಳುತ್ತಾರೆ: "ಈ ನಿರ್ವಿಕಲ್ಪ ಸಮಾಧಿ ಸ್ಥಿತಿಯಲ್ಲಿ ನಾನು, (ಗುರು ತೋತಾಪುರಿ ಇಲ್ಲಿಂದ ನಿರ್ಗಮಿಸಿದ ಮೇಲೆ) ಆರು

ತಿಂಗಳ ಕಾಲ ಇದ್ದೆ. ಈ ಸ್ಥಿತಿಯನ್ನು ಮುಟ್ಟಿದ ಸಾಮಾನ್ಯ ಜೀವರಾದರೆ ಅಲ್ಲಿಂದ ಹಿಂದಿರುಗಿ ಬರಲಾರರು. ಇಪ್ಪತ್ತೊಂದು ದಿನಗಳ ಬಳಿಕ ಅವರ ಶರೀರವು ಒಣಗಿದ ಎಲೆಯಂತೆ ಬಿದ್ದುಹೋಗುತ್ತದೆ. ಮತ್ತು ಅವರ ಆತ್ಮ ಪರಬ್ರಹ್ಮವಸ್ತುವಿನಲ್ಲಿ ಸೇರಿಹೋಗಿಬಿಡುತ್ತದೆ."

ಆ ಪರಿವ್ರಾಜಕ ಸಂನ್ಯಾಸಿಯಾದ ತೋತಾಪುರಿ ಯಾವ ಸ್ಥಳದಲ್ಲೂ ಮೂರು ದಿನಗಳಿಗಿಂತ ಹೆಚ್ಚು ಇದ್ದವನೇ ಅಲ್ಲ. ಅಂಥವನು ಶ್ರೀರಾಮಕೃಷ್ಣರ ಪರಮಾದ್ಭುತ ವ್ಯಕ್ತಿತ್ವದಿಂದ ಆಕರ್ಷಿತನಾಗಿ ಹನ್ನೊಂದು ತಿಂಗಳ ಕಾಲ ಅವರೊಂದಿಗೆ ಇದ್ದುಬಿಟ್ಟ. ಈ ಅವಧಿಯಲ್ಲಿ ಅವನು ತನ್ನ ಶಿಷ್ಯನಿಂದಲೇ ಒಂದು ಹೊಸ ಪಾಠವನ್ನು ಕಲಿತು ಕೊಂಡ. ಆತ ಕಟ್ಟಾ ಅದ್ವೈತಿ. ದ್ವೈತತತ್ತ್ವವನ್ನು ಒಪ್ಪದೆ, ಅದನ್ನು ಮೌಢ್ಯವೆಂದು ಹೀಗಳೆಯುತ್ತಿದ್ದವನು. ಇಂಥವನಿಗೆ ಶ್ರೀರಾಮಕೃಷ್ಣರು ಪರಮಾತ್ಮನ ಸಗುಣ-ಸಾಕಾರ ರೂಪವನ್ನು ಅತ್ಯಂತ ವಿಶಿಷ್ಟವಾದ ರೀತಿಯಲ್ಲಿ ತೋರಿಸಿಕೊಟ್ಟರು.

ಈಗ ಶ್ರೀರಾಮಕೃಷ್ಣರು ಇತರ ಧರ್ಮಗಳ ತತ್ತ್ವಸಾಕ್ಷಾತ್ಕಾರ ಮಾಡಿಕೊಳ್ಳಲು ಕಂಕಣಬದ್ಧರಾದರು. ಆಗ ಕ್ರೈಸ್ತ, ಇಸ್ಲಾಂ ಮೊದಲಾದ ಧರ್ಮಗಳ ಅನುಯಾಯಿಗಳು ಅವರ ಮಾರ್ಗದರ್ಶಕರಾಗಿ ತಾವಾಗಿಯೇ ಒದಗಿಬಂದರು. ಇವರ ನೆರವಿನಿಂದ ಇತರ ಧರ್ಮಗಳನ್ನು ಅತ್ಯಂತ ಪ್ರಾಮಾಣಿಕ ಭಾವದಿಂದ ಅಭ್ಯಾಸ ಮಾಡಿದ ಶ್ರೀರಾಮ ಕೃಷ್ಣರು ಸ್ವತಃ ಕಂಡುಕೊಂಡರು—ಹಿಂದೂ ಧರ್ಮವು ನಮ್ಮನ್ನು ಯಾವ ಗುರಿಗೆ ಕೊಂಡೊಯ್ಯುತ್ತದೆಯೋ, ಅದೇ ಗುರಿಗೆ ಇತರ ಧರ್ಮಗಳೂ ಕೊಂಡೊಯ್ಯುತ್ತವೆ ಎಂದು. ಬೇರೆಬೇರೆ ಮತಧರ್ಮಗಳ ಸಾಧಕರೊಂದಿಗೆ ತಮ್ಮ ಅನುಭವವನ್ನು ಹೋಲಿಸಿ ನೋಡಿಕೊಂಡಾಗ ಅವುಗಳೆಲ್ಲ ತಾಳೆಯಾಗುವುದು ಅವರಿಗೆ ಸ್ಪಷ್ಟವಾಗಿ ಕಂಡುಬಂದಿತು. ಆಗ ಅವರು ಎಲ್ಲ ಧರ್ಮದವರೂ ಒಬ್ಬ ಭಗವಂತನನ್ನೇ ಬೇರೆಬೇರೆ ರೂಪಗಳಿಂದ ದರ್ಶನ ಮಾಡುತ್ತಾರೆ ಎಂಬ ನಿಶ್ಚಿತ ತೀರ್ಮಾನಕ್ಕೆ ಬಂದರು.

ಈ ಹೊತ್ತಿಗೆ ಅತ್ತ ಜಯರಾಂಬಾಟಿಯಲ್ಲಿ, ಶ್ರೀರಾಮಕೃಷ್ಣರಿಗೆ ಸಂಪೂರ್ಣ ಹುಚ್ಚು ಹಿಡಿದುಬಿಟ್ಟಿದೆ ಎಂದು ಪ್ರಚಾರವಾಗಿಬಿಟ್ಟಿತ್ತು. ಪತ್ನಿ ಶಾರದಾದೇವಿಯವರು (ಆಗ ಅವರು ಹದಿನೆಂಟು-ಹತ್ತೊಂಬತ್ತು ವರ್ಷದ ಯುವತಿ) ಪತಿಯನ್ನು ಕಣ್ಣಾರೆ ಕಾಣುವ ಉದ್ದೇಶದಿಂದ ದಕ್ಷಿಣೇಶ್ವರಕ್ಕೆ ಧಾವಿಸಿದರು. ಆದರೆ ಇಲ್ಲಿ ಅವರು ಕಂಡದ್ದೇನು ? ಹುಚ್ಚನನ್ನಲ್ಲ, ಭಗವತ್ಸ್ವರೂಪಿಯಾಗಿ ಕಂಗೊಳಿಸುವ ಪರಮಪ್ರೀತಿಯ ಪತಿಯನ್ನು ! ಶ್ರೀರಾಮಕೃಷ್ಣರು ಪತ್ನಿಯನ್ನು ಅತ್ಯಾದರದಿಂದ ಬರಮಾಡಿಕೊಂಡರು. ಆಕೆಯ ವಸತಿಗೂ ಊಟೋಪಚಾರಕ್ಕೂ ವ್ಯವಸ್ಥೆ ಮಾಡಿದರು. ಹೀಗೆ ತಮ್ಮನ್ನು ಅತ್ಯಂತ ಪ್ರೀತಿಯಿಂದ ನೋಡಿಕೊಂಡ ಪತಿದೇವರನ್ನು ಕಂಡಾಗ ಶಾರದಾದೇವಿಯವರ ಮನಸ್ಸಿನ ಆತಂಕ ಮಾಯವಾಗಿ ಶಾಂತಿ-ಸಂತೋಷ ತುಂಬಿತು.

ಈಗ ಶ್ರೀರಾಮಕೃಷ್ಣರು ಒಬ್ಬ ಆದರ್ಶ ಪತಿಯಂತೆ ತಮ್ಮ ಸರಳ ಸ್ವಭಾವದ ಪತ್ನಿಗೆ ಹಲವಾರು ವಿಷಯಗಳಲ್ಲಿ ಶಿಕ್ಷಣ ನೀಡಲಾರಂಭಿಸಿದರು. ಮನೆವಾರ್ತೆಯ ಸಣ್ಣಪುಟ್ಟ ವಿಚಾರಗಳಿಂದ ಹಿಡಿದು, ಬ್ರಹ್ಮಜ್ಞಾನದವರೆಗಿನ ಸಮಸ್ತ ವಿಷಯಗಳನ್ನೂ ಪ್ರೀತಿಯಿಂದ ತಿಳಿಸಿಕೊಟ್ಟರು. ಒಂದು ದಿನ ಮಡದಿಯನ್ನು ಕುಳ್ಳಿರಿಸಿಕೊಂಡು ಹೇಳು ತ್ತಾರೆ: "ನೋಡು, ಚಂದಮಾಮ ಲೋಕದ ಎಲ್ಲ ಮಕ್ಕಳಿಗೂ ಮಾಮ; ಹಾಗೆಯೇ ಭಗವಂತ ಕೂಡ ಎಲ್ಲರಿಗೂ ಸೇರಿದವನು. ಯಾರು ಆತನನ್ನು ಕೂಗಿ ಕರೆಯುತ್ತಾರೋ

ಅವರಿಗೆ ಅವನು ದರ್ಶನ ಕೊಡುತ್ತಾನೆ. ನೀನು ಅವನನ್ನು ಕರೆ, ನಿನಗೂ ಅವನು ದರ್ಶನ ಕೊಡುತ್ತಾನೆ." ಇನ್ನೊಮ್ಮೆ ತಮ್ಮ ಪತ್ನಿಯ ಮನೋಭಾವವನ್ನು ತಿಳಿದು ಕೊಳ್ಳಲು ಕೇಳುತ್ತಾರೆ: "ನೀನು ಇಲ್ಲಿಗೆ ಬಂದಿದ್ದೀಯಲ್ಲ, ನನ್ನನ್ನು ಪ್ರಪಂಚಕ್ಕೆ ಎಳೆಯ ಬೇಕು ಅಂತಲೆ?" ಪರಮಪವಿತ್ರ ಹೃದಯದ ಶಾರದಾದೇವಿಯವರು ಪತಿಯ ಇಂಗಿತವನ್ನು ಅರ್ಥಮಾಡಿಕೊಂಡು ತಕ್ಷಣ ಹೇಳುತ್ತಾರೆ: "ಇಲ್ಲ ಇಲ್ಲ; ನಾನೇಕೆ ನಿಮ್ಮನ್ನು ಪ್ರಪಂಚಕ್ಕೆ ಎಳೆಯಲಿ? ನಾನು ಬಂದಿರುವುದು ನಿಮ್ಮ ಆಧ್ಯಾತ್ಮಿಕ ಜೀವನ ದಲ್ಲಿ ನೆರವಾಗುವುದಕ್ಕೋಸ್ಕರ." ಇನ್ನೊಂದು ದಿನ ಪತಿಯ ಕಾಲೊತ್ತುತ್ತ ಕುಳಿತಿದ್ದ ಆತ್ಮೀಯ ಘಳಿಗೆಯಲ್ಲಿ ಶಾರದಾದೇವಿಯವರು ಪತಿಯನ್ನು ಕೇಳುತ್ತಾರೆ, "ನೀವು ನನ್ನನ್ನು ಯಾವ ದೃಷ್ಟಿಯಿಂದ ಕಾಣುತ್ತಿದ್ದೀರಿ?" ಒಡನೆಯೇ ಶ್ರೀರಾಮಕೃಷ್ಣರೆನ್ನು ತ್ತಾರೆ: "ಮಂದಿರದಲ್ಲಿ ಪೂಜಿಸಲ್ಪಡುತ್ತಿರುವ ಜಗನ್ಮಾತೆ, ನಹಬತ್ ಖಾನೆಯಲ್ಲಿ ವಾಸಿಸುತ್ತಿರುವ ನನ್ನ ಜನ್ಮದಾತೆ—ಅವಳೇ ಈಗ ಇಲ್ಲಿ ನನ್ನ ಕಾಲುಗಳನ್ನು ಒತ್ತುತ್ತ ಕುಳಿತಿದ್ದಾಳೆ ಎಂಬುದೇ ನನ್ನ ಭಾವನೆ. ಸತ್ಯವಾಗಿಯೂ ನಾನು ನಿನ್ನಲ್ಲಿ ಯಾವಾಗಲೂ ಆನಂದಮಯಿಯಾದ ಜಗನ್ಮಾತೆಯೇ ಮೈದಳೆದು ಬಂದಿರುವಂತೆ ಕಾಣುತ್ತಿದ್ದೇನೆ." ಮತ್ತೊಂದು ದಿನ ತಮ್ಮ ಮಗ್ಗುಲಲ್ಲಿ ಮಲಗಿರುವ ಹರೆಯದ ಪತ್ನಿಯನ್ನು ಕಂಡು ಶ್ರೀರಾಮಕೃಷ್ಣರು ತಮ್ಮಲ್ಲಿಯೇ ವಿವೇಚಿಸುತ್ತ ತಮ್ಮ ಮನಸ್ಸಿಗೆ ಹೇಳುತ್ತಾರೆ: "ಓ ಮನಸ್ಸೇ, ಹೆಣ್ಣಿನ ದೇಹ ಎಂದೆನ್ನುವುದು ಇದಕ್ಕೇ. ಜಗದ ಜನರೆಲ್ಲ ಪರಮಭೋಗದ ವಸ್ತುವೆಂದು ಭಾವಿಸಿ ಚಪಲಚಿತ್ತರಾಗಿ ಧಾವಿಸುವುದು ಈ ದೇಹದ ಹಿಂದೆಯೇ. ಆದರೆ ಇದನ್ನು ಅಂಗೀಕರಿಸಿದರೆ ದೇಹಬುದ್ಧಿಯ ಬಲೆಯಲ್ಲಿ ಸದಾ ನಿಬದ್ಧರಾಗಿರ ಬೇಕಾಗುತ್ತದೆ. ಸತ್ಯಜ್ಞಾನಾನಂದಸ್ವರೂಪನಾದ ಪರಮಾತ್ಮನನ್ನು ಎಂದಿಗೂ ಪಡೆ ಯುವುದಕ್ಕಾಗುವುದಿಲ್ಲ. ಈಗ ನೀ ಹೇಳು, ಓ ಮನಸ್ಸೇ, ವಂಚಕನಾಗಬೇಡ. ಒಳ ಗೊಂದೆಣಿಸಿ ಹೊರಗಿನ್ನೊಂದೆನಬೇಡ. ಸತ್ಯವಾಗಿ ಹೇಳು, ನಿನಗೆ ಈ ಹೆಣ್ಣಿನ ದೇಹ ಬೇಕೋ, ಅಥವಾ ದೇವರು ಬೇಕೋ? ನಿನಗೆ ಈ ಸ್ತ್ರೀಶರೀರವೇ ಬೇಕಿದ್ದರೆ, ಇಗೋ ನೋಡು, ಅದು ನಿನ್ನೆದುರಿಗೇ ಇದೆ. ನೀನದನ್ನು ಅನುಭವಿಸಲು ಸ್ವತಂತ್ರ." ಹೀಗೆ ವಿವೇಚಿಸುತ್ತ ತಮ್ಮ ಮಡದಿಯ ಮೈಯನ್ನು ಮುಟ್ಟಲು ಕೈಚಾಚಿದರು; ಅಷ್ಟರಲ್ಲಿ ಅವರ ಮನಸ್ಸು-ದೇಹಗಳು ಎಷ್ಟೊಂದು ರಭಸದಿಂದ ಹಿಮ್ಮೆಟ್ಟಿದುವೆಂದರೆ ಅವರು ಇದ್ದಕ್ಕಿದ್ದಂತೆ ಗಾಢಸಮಾಧಿಯಲ್ಲಿ ಲೀನವಾಗಿಬಿಟ್ಟರು. ಅವರ ಮನಸ್ಸು ಇಡೀ ರಾತ್ರಿಯೆಲ್ಲ ವ್ಯಾವಹಾರಿಕ ಜಗತ್ತಿಗೆ ಇಳಿಯಲೇ ಇಲ್ಲ. ಮರುದಿನ ಬೆಳಗ್ಗೆ ಅವರ ಮನಸ್ಸನ್ನು ಸಮಾಧಿಸ್ಥಿತಿಯಿಂದ ಇಳಿಸಿ ಬಾಹ್ಯಪ್ರಪಂಚಕ್ಕೆ ತರಬೇಕಾದರೆ ಬಹಳ ಹೊತ್ತು ಅವರ ಕಿವಿಯಲ್ಲಿ ಭಗವನ್ನಾಮವನ್ನು ಉಚ್ಚರಿಸಬೇಕಾಯಿತು.

ಮುಂದೊಮ್ಮೆ ಶ್ರೀರಾಮಕೃಷ್ಣರು ತಮ್ಮ ಪತ್ನಿಯ ಬಗ್ಗೆ ಹೇಳುತ್ತಾರೆ: "ಅವಳು ಅಷ್ಟು ಪವಿತ್ರಳಾಗಿಲ್ಲದೆಹೋಗಿದ್ದರೆ ನಾನು ಅವಳ ಆಕರ್ಷಣೆಗೆ ಒಳಗಾಗಿ ನನ್ನ ಆತ್ಮ ಸಂಯಮವನ್ನು ಕಳೆದುಕೊಂಡುಬಿಡುತ್ತಿದ್ದೆನೋ ಏನೋ, ನನ್ನ ದೇಹಬುದ್ಧಿ ಕೆರಳು ತ್ತಿತ್ತೋ ಏನೋ ಯಾರಿಗೆ ಗೊತ್ತು! ನನಗೆ ಮದುವೆಯಾದಾಗ ನಾನು ಜಗನ್ಮಾತೆ ಯನ್ನು ಅತ್ತುಕರೆದು ಪ್ರಾರ್ಥಿಸಿಕೊಂಡೆ: 'ನನ್ನ ಹೆಂಡತಿಯ ಮನಸ್ಸಿನಲ್ಲಿ ಕಿಂಚಿತ್ತೂ ಕಾಮಭಾವನೆ ಇಲ್ಲದಹಾಗೆ ಮಾಡಿಬಿಡು' ಅಂತ. ಬಳಿಕ ಅವಳೊಂದಿಗೆ ಜೀವನ ನಡೆಸಿ ದಾಗ ನಾನು ಅರಿತೆ—ಜಗನ್ಮಾತೆ ನನ್ನ ಪ್ರಾರ್ಥನೆಯನ್ನು ಈಡೇರಿಸಿದ್ದಾಳೆ ಅಂತ."

ಶಾರದಾದೇವಿಯವರು ದಕ್ಷಿಣೇಶ್ವರಕ್ಕೆ ಬಂದ ಕೆಲವು ತಿಂಗಳ ಮೇಲೆ, ಶ್ರೀರಾಮಕೃಷ್ಣರಿಗೆ ತಮ್ಮ ಪತ್ನಿಯನ್ನೇ ಕುಳ್ಳಿರಿಸಿ, ಅವಳಲ್ಲಿ ಜಗನ್ಮಾತೆಯನ್ನು ಆವಾಹನೆ ಮಾಡಿ, 'ಷೋಡಶೀ ಪೂಜೆ' ಮಾಡಬೇಕೆಂಬ ಪ್ರೇರೇಪಣೆಯುಂಟಾಯಿತು. ಈ ಮೂಲಕ ತಮ್ಮ ಸಮಸ್ತ ಸಾಧನೆ ಹಾಗೂ ಸಿದ್ಧಿಗಳೊಂದಿಗೆ ತಮ್ಮನ್ನೇ ಸಮರ್ಪಿಸಿಕೊಂಡು ಬಿಡುವುದೆಂದು ನಿಶ್ಚಯಿಸಿದರು. ಅಂತೆಯೇ ಫಲಹಾರಿಣೀ ಕಾಳೀಪೂಜೆಯ ದಿನ ವಿಧಿಯುಕ್ತವಾಗಿ ಆ ಪೂಜೆಯನ್ನು ನೆರವೇರಿಸಿದರು. ಪೂಜೆಯ ವೇಳೆಗಾಗಲೇ ಶಾರದಾ ದೇವಿಯವರು ಸಮಾಧಿಸ್ಥರಾಗಿಬಿಟ್ಟಿದ್ದರು. ಪೂಜೆ ಮುಗಿಯುವ ಹೊತ್ತಿಗೆ ಶ್ರೀರಾಮಕೃಷ್ಣರೂ ಸಮಾಧಿಸ್ಥಿತಿಗೇರಿದರು. ಹೀಗೆ ಪೂಜ್ಯ-ಪೂಜಕರಿಬ್ಬರೂ ಇಂದ್ರಿಯರಾಜ್ಯವನ್ನು ಅತಿಕ್ರಮಿಸಿ ಆತ್ಮಭಾವದಲ್ಲಿ ಲೀನರಾದರು; ಸತ್-ಚಿತ್-ಆನಂದ ಸ್ವರೂಪದಲ್ಲಿ ತಾದಾತ್ಮ್ಯ ಹೊಂದಿದರು. ಅರ್ಧರಾತ್ರಿ ಕಳೆದಮೇಲಷ್ಟೇ ಶ್ರೀರಾಮಕೃಷ್ಣರಿಗೆ ಸ್ವಲ್ಪ ಬಾಹ್ಯಪ್ರಜ್ಞೆ ಬಂದಿತು. ಆಗ ಅವರು ತಮ್ಮ ಮುಂದೆ ವಿರಾಜಿಸುತ್ತಿದ್ದ ಜಗನ್ಮಾತೆಗೆ ಅನನ್ಯ ಶರಣಾಗತಿಭಾವದಿಂದ ತಮ್ಮನ್ನೂ ತಮ್ಮ ಸಕಲ ಸಾಧನೆಗಳ ಫಲವನ್ನೂ ಸಮರ್ಪಣೆ ಮಾಡಿಕೊಂಡರು. ಈಗ ಶ್ರೀರಾಮಕೃಷ್ಣರಿಗೆ ವಿಶ್ವದ ಪ್ರತಿಯೊಂದು ವಸ್ತುವೂ ಜಗನ್ಮಾತೆಯ ಪ್ರತೀಕವಾಯಿತು.

ಯೋಗಶಾಸ್ತ್ರಗಳು ಉದ್ಘೋಷಿಸುವ ಅತ್ಯುನ್ನತ ಸ್ಥಿತಿ, ನಿರ್ವಿಕಲ್ಪ ಸಮಾಧಿ. ಶ್ರೀರಾಮಕೃಷ್ಣರು ಸದಾ ಈ ಸ್ಥಿತಿಯಲ್ಲೇ ಇರುವಂತಾಗಿಬಿಟ್ಟಿತ್ತು. ಆದರೆ ಅವರು ಯಾವಾಗಲೂ ಈ ಸ್ಥಿತಿಯಲ್ಲೇ ಇರುವಂತಾದರೆ, ತಮ್ಮ ಅವತರಣದ ಉದ್ದೇಶವಾದ ಲೋಕಕಲ್ಯಾಣ ಕಾರ್ಯವನ್ನು ನೆರವೇರಿಸಲು, ಸಾಧ್ಯವಾಗುವುದಿಲ್ಲ. ಆದ್ದರಿಂದ ಭಗವದಿಚ್ಛೆಯಂತೆ ಅವರ ಮನಸ್ಸು ಸದಾ 'ಭಾವಮುಖ'ದಲ್ಲಿರುವಂತಾಯಿತು. ಭಾವಮುಖವೆಂದರೆ ಅದೊಂದು ಅದ್ಭುತ ಮಾನಸಿಕ ಸ್ಥಿತಿ. ಈ ಸ್ಥಿತಿಯಲ್ಲಿ ಮನಸ್ಸು ಸಗುಣ-ನಿರ್ಗುಣಗಳ ನಡುವೆ, ಜಗತ್ತು-ಪರಬ್ರಹ್ಮಗಳ ನಡುವೆ ನಿಂತಿರುತ್ತದೆ. ಈ ಸ್ಥಿತಿಯಲ್ಲಿ ಶ್ರೀರಾಮಕೃಷ್ಣರು ಜಗತ್ತನ್ನು ಜಗನ್ಮಾತೆಯ ದಿವ್ಯಲೀಲೆಯಾಗಿ ಕಾಣುತ್ತಿದ್ದರು. ಹೀಗೆ ಕಾಣುತ್ತ, ತಮ್ಮನ್ನು ಜಗನ್ಮಾತೆಯ ಶಿಶುವೆಂದು ಭಾವಿಸಿ, ಸದಾ ಅವಳ ಮಾರ್ಗದರ್ಶನದಲ್ಲೇ ಇರುವಂತಹ ಶಿಶುಭಾವವನ್ನು ಆಶ್ರಯಿಸಿಕೊಂಡಿದ್ದರು.

ಹೀಗೆ ಅವರು ತಮ್ಮ ಸಮಸ್ತ ಸಾಧನೆಗಳನ್ನು ಮುಗಿಸಿ, ಜಗನ್ಮಾತೆಯೊಂದಿಗೆ ಅತ್ಯಂತ ನಿಕಟ ಸಂಪರ್ಕ-ಸಂಬಂಧವನ್ನಿಟ್ಟುಕೊಂಡು ಜೀವಿಸಲಾರಂಭಿಸಿದರು. ಈ ಸಂದರ್ಭದಲ್ಲಿ ಅವರಿಗೆ ತಮ್ಮ ಅವತಾರದ ಸಂಬಂಧವಾಗಿ ಹಾಗೂ ಮುಂದೆ ತಮ್ಮ ಬಳಿಗೆ ಬರಲಿರುವ ಶಿಷ್ಯರ ಮತ್ತು ಭಕ್ತರ ಸಂಬಂಧವಾಗಿ ಹಲವಾರು ದರ್ಶನಗಳಾದುವು. ಮುಂದೆ ತಮ್ಮಿಂದ ಏನೇನು ಆಗಲಿಕ್ಕಿದೆ ಎನ್ನುವುದನ್ನೆಲ್ಲ ಅವರು ಸ್ಪಷ್ಟವಾಗಿ ಕಂಡರು. ಅಲ್ಲದೆ, ತಮಗೆ ಇತರ ಜೀವರಂತೆ ಮುಕ್ತಿ ಎನ್ನುವುದಿಲ್ಲ; ತಾವು ಮುಕ್ತಿಗೂ ಅತೀತರಾದವರು; ಬದಲಾಗಿ ತಾವು ಮತ್ತೆಮತ್ತೆ ಅವತಾರವೆತ್ತಿಬಂದು ಇತರ ಜೀವರ ಮುಕ್ತಿಗಾಗಿ ಮಾರ್ಗದರ್ಶನ ನೀಡುವವರು ಎಂಬುದನ್ನು ಕಂಡುಕೊಂಡರು. ಅಲ್ಲದೆ, ಜಗನ್ಮಾತೆ ತಮ್ಮ ಮೂಲಕ ಈ ಜಗತ್ತಿನಲ್ಲಿ ಒಂದು ಮಹಾಸಂಸ್ಥೆಯನ್ನು ಸ್ಥಾಪಿಸುವವಳಿದ್ದಾಳೆ; ಆ ಸಂಸ್ಥೆಯಲ್ಲಿ ಅಸಂಖ್ಯಾತ ಮುಮುಕ್ಷುಗಳು ಬಂದು ಸೇರಿಕೊಂಡು, ತಾವು ಮಾಡಿದ ಸಾಧನಾಕ್ರಮವನ್ನನುಸರಿಸಿ ಆಧ್ಯಾತ್ಮಿಕ ಸಾಧನೆ ಮಾಡುತ್ತಾರೆ, ವಿಶ್ವಾತ್ಮಭಾವವನ್ನು ಅಭ್ಯಾಸ ಮಾಡುತ್ತಾರೆ ಎಂಬುದನ್ನು ಮುಂಗಂಡರು.

ಅಲ್ಲದೆ, ಈ ಜಗತ್ತಿನಲ್ಲಿ ಯಾರುಯಾರು ಭಗವಂತನನ್ನು ಹೃತ್ಪೂರ್ವಕವಾಗಿ ಕರೆದಿದ್ದಾರೋ, ಕರೆಯುತ್ತಿದ್ದಾರೋ ಅಂತಹವರೆಲ್ಲ ತಮ್ಮ ಬಳಿಗೆ ಬರಲಿದ್ದಾರೆ ಎಂಬುದನ್ನೂ ಜಗನ್ಮಾತೆ ಅವರಿಗೆ ತೋರಿಸಿಕೊಟ್ಟಳು.

ಈಗ ಅವರಲ್ಲಿ ಇನ್ನೊಂದು ಬಗೆಯ ವ್ಯಾಕುಲತೆ ಉಂಟಾಗಿಬಿಟ್ಟಿದೆ. ಹಿಂದೆ ಯಾವ ಭಗವತ್ಸಾಕ್ಷಾತ್ಕಾರಕ್ಕಾಗಿ ವ್ಯಾಕುಲಗೊಂಡು ತಹತಹಿಸಿದರೋ, ಅದೇ ಸಾಕ್ಷಾತ್ಕಾರದ ಅನುಭವಗಳನ್ನು ಪ್ರಾಮಾಣಿಕರಾದ ಆಧ್ಯಾತ್ಮಿಕ ಸಾಧಕರಿಗೆ ತಿಳಿಸಿಕೊಡಬೇಕು ಎಂಬ ತೀವ್ರ ಕಾತರ ಅವರಲ್ಲಿ ಆರಂಭವಾಗಿಬಿಟ್ಟಿದೆ! ಶುದ್ಧ ಹೃದಯದ ಸಾಧಕರಲ್ಲಿ ತಮ್ಮ ದಿವ್ಯಾನುಭವಗಳನ್ನು ಯಾವಾಗ ಹಂಚಿಕೊಂಡೇನು ಎಂದು ಚಡಪಡಿಸಲಾರಂಭಿಸಿದ್ದಾರೆ. ಈ ವ್ಯಾಕುಲತೆಯ ಕುರಿತಾಗಿ ಶ್ರೀರಾಮಕೃಷ್ಣರು ಮುಂದೆ ಹೇಳುತ್ತಾರೆ: "ಓಹ್! ಆಗ ನನ್ನ ಕಾತರತೆಗೆ ಕೊನೆಯೇ ಇರಲಿಲ್ಲ. ಹಗಲುಹೊತ್ತು ಹೇಗೋ ತಾಳಿಕೊಳ್ಳುತ್ತಿದ್ದೆ. ಆದರೆ ಪ್ರಾಪಂಚಿಕರ ಕಾಡುಹರಟೆಯನ್ನು ಕೇಳಿ ತುಂಬ ವೇದನೆಯಾಗುತ್ತಿತ್ತು. ನನ್ನ ಪ್ರೀತಿಯ ಶುದ್ಧಹೃದಯದ ತ್ಯಾಗಿಗಳು, ಆಧ್ಯಾತ್ಮಿಕ ಸಾಧಕರು ಎಂದಿಗೆ ನನ್ನ ಬಳಿ ಬಂದಾರು ಎನ್ನುವುದನ್ನೇ ಆಸೆಯ ಕಣ್ಣುಗಳಿಂದ ಇದಿರು ನೋಡುತ್ತಿದ್ದೆ. ನನ್ನ ಅಂತರಂಗದ ಅನುಭವಗಳನ್ನೆಲ್ಲ ಅವರ ಮುಂದೆ ತೋಡಿಕೊಂಡು ನನ್ನ ಹೃದಯವನ್ನು ಹಗುರವಾಡಿಕೊಳ್ಳುವ ನಿರೀಕ್ಷೆಯಲ್ಲೇ ಇರುತ್ತಿದ್ದೆ. ಸುತ್ತಮುತ್ತ ಯಾವೊಂದು ಸಂಗತಿ ನಡೆದರೂ ನನಗೆ ತಕ್ಷಣ ಆ ನನ್ನ ಭಾವೀಶಿಷ್ಯರ ಕುರಿತಾಗಿಯೇ ಆಲೋಚಿಸುವಂತಾಗುತ್ತಿತ್ತು. ಅವರು ಬಂದಾಗ ಯಾರಿಗೆ ಯಾವುದನ್ನು ಹೇಳಬೇಕು, ಯಾರಿಗೆ ಏನನ್ನು ಕೊಡಬೇಕು ಎನ್ನುವುದನ್ನೆಲ್ಲ ಮನಸ್ಸಿನಲ್ಲೇ ಗುರುತುಹಾಕಿಕೊಂಡು, ಜೋಡಿಸಿಟ್ಟುಕೊಳ್ಳುತ್ತಿದ್ದೆ.

"ಹೀಗೆ ಹಗಲುಹೊತ್ತು ಹೇಗೋ ಕಳೆಯುತ್ತಿತ್ತು. ಆದರೆ ದಿನ ಕಳೆದು ಸೂರ್ಯಾಸ್ತಮಾನವಾದಾಗ ಮಾತ್ರ ನನ್ನಿಂದ ತಡೆದುಕೊಳ್ಳಲಾಗುತ್ತಿರಲಿಲ್ಲ. "ಇನ್ನೂ ಒಂದು ದಿನ ಕಳೆದುಹೋಯಿತು, ಅವರಾರೂ ಇನ್ನೂ ಬರಲೇ ಇಲ್ಲವಲ್ಲ!' ಎಂದು ಕಳವಳಿಸುತ್ತಿದ್ದೆ. ದೇವಾಲಯದಲ್ಲಿ ಘಟೆ-ಶಂಖ-ಜಾಗಟೆಗಳ ನಾದದೊಂದಿಗೆ ಜಗನ್ಮಾತೆಗೆ ಆರತಿಯಾಗುತ್ತಿದ್ದರೆ ನಾನು ಏಕಾಂತಕ್ಕೆ ಹೋಗಿ, ಛಾವಣಿಯ ಮೇಲೇರಿ ಹಿಂಡುವ ಹೃದಯದಿಂದ, ಗಟ್ಟಿಯಾಗಿ ಅತ್ತುಕರೆಯುತ್ತಿದ್ದೆ—'ಓ ನನ್ನ ಮಕ್ಕಳಿರಾ, ಬನ್ನಿ! ಎಲ್ಲಿರುವಿರಿ ನೀವೆಲ್ಲ! ನೀವಿರದೆ ನಾನೊಂದು ಕ್ಷಣವೂ ಬದುಕಿರಲಾರೆ!' ಎಂದು. ಹಡೆದ ತಾಯಿಯೂ ಕೂಡ ತನ್ನ ಮಗುವಿಗಾಗಿ ಅಷ್ಟೊಂದು ಕಾತರಳಾಗಿರಲಿಕ್ಕಿಲ್ಲ. ಯಾವ ಸ್ನೇಹಿತನೂ ತನ್ನ ಸ್ನೇಹಿತನಿಗಾಗಿ, ಯಾವ ಪ್ರಿಯನೂ ತನ್ನ ಪ್ರಿಯತಮೆಗಾಗಿ ಅಷ್ಟೊಂದು ವ್ಯಾಕುಲನಾಗಿರಲಿಕ್ಕಿಲ್ಲ! ಓಹ್, ಆಗಿನ ನನ್ನ ವ್ಯಾಕುಲತೆ ಅವರ್ಣನೀಯ. ಇದಾದಮೇಲೆಯೇ ಅವರೆಲ್ಲ ಒಬ್ಬೊಬ್ಬರಾಗಿ ಬರಲಾರಂಭಿಸಿದರು."

ಶ್ರೀರಾಮಕೃಷ್ಣರೆಂಬ ಸಹಸ್ರದಳದ ಕಮಲ ಅರಳಿನಿಂತಾಗ ಅದರ ಮಧುವನ್ನು ಹೀರಲು ನಾನಾ ಬಗೆಯ ಜನರು ದುಂಬಿಗಳಂತೆ ಬರಲಾರಂಭಿಸಿದರು—ಗೌರೀ ಪಂಡಿತ, ಪದ್ಮಲೋಚನ, ವೈಷ್ಣವಚರಣ, ಶಶಧರ ತರ್ಕಚೂಡಾಮಣಿ ಇವರೇ ಮೊದಲಾದ ಸಾಧಕರು ಬರುತ್ತಾರೆ. ಕೇಶವಚಂದ್ರ ಸೇನ, ಪ್ರತಾಪಚಂದ್ರ ಮಜುಮದಾರ, ವಿಜಯಕೃಷ್ಣ ಗೋಸ್ವಾಮಿ ಮುಂತಾದ ಖ್ಯಾತ ವ್ಯಕ್ತಿಗಳು ಬರುತ್ತಾರೆ. ಕ್ರೈಸ್ತರು, ಮುಸಲ್ಮಾನರು, ಸಿಕ್ಖರು, ಹಿಂದೂಗಳು—ಇವರೆಲ್ಲ ಬರುತ್ತಾರೆ. ಪಂಡಿತರು ಬರುತ್ತಾರೆ,

ಕವಿಗಳು ಬರುತ್ತಾರೆ, ಸಾಹಿತಿಗಳು ಬರುತ್ತಾರೆ, ವಾಗ್ಮಿಗಳು ಬರುತ್ತಾರೆ, ಸಿದ್ಧಾಂತಿಗಳು ಬರುತ್ತಾರೆ, ಉಪನ್ಯಾಸಕರು ಬರುತ್ತಾರೆ, ಸಮಾಜದ ಮುಖಂಡರು ಬರುತ್ತಾರೆ, ಭಕ್ತ ಶ್ರೇಷ್ಠರು ಬರುತ್ತಾರೆ. ಹೀಗೆ ಹಲವುಹತ್ತು ವಿಧದ ಜನರು ಅವರ ಬಳಿಗೆ ಬರಲಾರಂಭಿಸಿದ್ದಾರೆ. ಆದರೆ ಇವರೆಲ್ಲರ ನಡುವೆ ತಾವು ಅತಿಮುಖ್ಯನೆಂದು ಪರಿಗಣಿಸಿರುವ ಒಬ್ಬಾತನ ಬರವನ್ನೇ ಶ್ರೀರಾಮಕೃಷ್ಣರು ಕಾತರದಿಂದ ಇದಿರುನೋಡುತ್ತಿದ್ದಾರೆ. . .

ಇದೇ ಸಮಯದಲ್ಲೇ ನಮ್ಮ ಕಥಾನಾಯಕನಾದ ನರೇಂದ್ರನ ಹೃದಯದಲ್ಲೂ ಶ್ರೀರಾಮಕೃಷ್ಣರನ್ನು ಕಾಣಬೇಕು; ಕಂಡು, 'ಮಹಾಶಯರೆ, ನೀವು ದೇವರನ್ನು ಕಂಡಿದ್ದೀರಾ ?' ಎಂದು ಕೇಳಬೇಕು ಎನ್ನುವ ತವಕ ಹುಟ್ಟಿದೆ. ಆತ ತನಗರಿವಿಲ್ಲದೆಯೇ ಅವರೆಡೆಗೆ ಆಕರ್ಷಿತನಾಗಿದ್ದಾನೆ. ಮರಿಸಿಂಹ ಮಹಾಸಿಂಹದೆಡೆಗೆ ಆಕರ್ಷಿತವಾಗುವುದು ಸಹಜವೇ !

## ಮರಿಸಿಂಹ—ಮಹಾಸಿಂಹ



ಜಗತ್ತಿನ ಜನರು ಅಜ್ಞಾನದಿಂದಾಗಿ ಯಾತನೆಗಳಿಗೀಡಾಗಿ ಕಂಗಾಲಾಗುವುದನ್ನು ಕಂಡ ಭಗವಂತ, ಕರುಣೆಯಿಂದ ಕರಗಿ ಆಯಾ ಕಾಲಕ್ಕೆ ಆವಶ್ಯಕವಾದ ಸಂದೇಶವನ್ನೀಯಲು ಧರೆಗಿಳಿದುಬರುತ್ತಾನೆ. ಅವನು ತನ್ನದೇ ಸೃಷ್ಟಿಯಾದ ಮಾಯೆಯ ಮುಸುಕು ಹಾಕಿಕೊಂಡು ಮೈದಳೆದು ಬರುತ್ತಾನೆ. ಆದರೆ ಅವನಿಗೆ ತನ್ನ ಸ್ವಸ್ವರೂಪದ ಅರಿವು ಜನ್ಮದಾರಭ್ಯದಿಂದಲೇ ಇರುತ್ತದೆ. ತಾನು ಈ ಜಗತ್ತಿಗೆ ಅವತರಿಸಿಬಂದ ಉದ್ದೇಶದ ಅರಿವು ಅವನಿಗಿರುತ್ತದೆ. ಕೆಲವೇ ವರ್ಷಗಳ ತೀವ್ರ ಆಧ್ಯಾತ್ಮಿಕ ಸಾಧನೆಯ ಮೂಲಕ ತನ್ನ ಮಾಯೆಯ ತೆಳುವಾದ ಪರದೆಯನ್ನು ಹರಿದು ಆತ ಸಚ್ಚಿದಾನಂದಸ್ವರೂಪದಿಂದ ಬೆಳಗುತ್ತಾನೆ. ಆದರೆ, ಸಾಮಾನ್ಯ ಜೀವಿಯೊಬ್ಬನು ತನ್ನ ಮಾಯೆಯ ಪರದೆಯನ್ನು ಹರಿಯಬೇಕಾದರೆ ಅಸಂಖ್ಯಾತ ಜನ್ಮಗಳೇ ಬೇಕಾಗಬಹುದು. ಅವತಾರಪುರುಷರಿಗೂ ಸಾಮಾನ್ಯರಿಗೂ ಇದೊಂದು ಪ್ರಮುಖ ವ್ಯತ್ಯಾಸ. ಅವತಾರಪುರುಷನು ಸಕಾಲದಲ್ಲಿ ತನ್ನ ಮಾಯೆಯ ಪರದೆಯನ್ನು ಹರಿದು, ಪ್ರಬಲ ಆಧ್ಯಾತ್ಮಿಕ ಶಕ್ತಿಕೇಂದ್ರವಾಗಿ ವಿರಾಜಿಸುತ್ತಾನೆ. ಆಗ ಆ ಶಕ್ತಿಯ ತೇಜಸ್ಸನ್ನು ಮುಸುಕಬಲ್ಲ ಶಕ್ತಿ ಇನ್ನೊಂದಿಲ್ಲ. ಅವನು ತನ್ನ ಪ್ರಖರ ತೇಜಸ್ಸಿನಿಂದ ಪ್ರಪಂಚದ ವಿಚಾರಧಾರೆಯನ್ನೇ ಬದಲಿಸಿಬಿಡುತ್ತಾನೆ; ಜಗತ್ತಿನಲ್ಲೊಂದು ಕ್ರಾಂತಿಯನ್ನೇ ಮಾಡಿಬಿಡುತ್ತಾನೆ; ತನ್ನ ಸಾನ್ನಿಧ್ಯದಿಂದಲೇ ಆಧ್ಯಾತ್ಮಿಕತೆಯನ್ನು ಪಸರಿಸುತ್ತಾನೆ. ಅವನ ಸ್ಪರ್ಶಮಾತ್ರದಿಂದಲೇ ಪವಾಡಗಳು ನಡೆಯಬಹುದು. ಆತನ ವೀಕ್ಷಣಮಾತ್ರದಿಂದಲೇ ಅದ್ಭುತಗಳು ಘಟಿಸಬಹುದು. ಆದರೆ ಅವತಾರಪುರುಷನ ಶರೀರವು ಅತ್ಯಂತ ಸಾತ್ವಿಕವಾದ್ದರಿಂದ ಅವನಿಂದ ಹೆಚ್ಚಿನ ಶರೀರಶ್ರಮ ಸಾಧ್ಯವಿಲ್ಲ. ಆದ್ದರಿಂದ ಅವನು ತಾನೇ ಸ್ವತಃ ಓಡಾಡಿ ಧರ್ಮವನ್ನು ಬಿತ್ತರಿಸಲಾರ. ಆ ಕಾರ್ಯಕ್ಕೆ ಸಮೃದ್ಧ ರಜೋಗುಣದಿಂದ ಕೂಡಿದ ವ್ಯಕ್ತಿಯೊಬ್ಬನು ಬೇಕಾಗುತ್ತಾನೆ. ಇಲ್ಲಿ ಇನ್ನೊಂದು ಸ್ವಾರಸ್ಯಕರ ವಿಷಯವಿದೆ: ಅದೇನೆಂದರೆ, ಭಗವಂತ ಅವತಾರ ತಾಳುವಾಗ ತನ್ನ ದಿವ್ಯ ಸಂದೇಶಗಳನ್ನು ಸಾರಲು ಅಥವಾ ತನ್ನ ಕಾರ್ಯವನ್ನು ನಿರ್ವಹಿಸಲು ತನ್ನದೇ ಆದ ಇನ್ನೊಂದು ಅಂಶವೂ ಧರೆಯಲ್ಲಿ ಮೈದಳೆಯುವಂತೆ ಮಾಡುತ್ತಾನೆ. ಮತ್ತು ಸಕಾಲದಲ್ಲಿ ಆ ವ್ಯಕ್ತಿಯನ್ನು ತನ್ನ ಬಳಿಗೆ ಆಕರ್ಷಿಸಿಕೊಂಡು ತನ್ನ ಧರ್ಮಸಂಸ್ಥಾಪನೆಯ ಕಾರ್ಯವನ್ನು ಅವನ ಮೂಲಕ ಮಾಡಿಸುತ್ತಾನೆ. ಭಗವಾನ್ ಕ್ರಿಸ್ತನಿಗೆ ಹಲವಾರು ಶಿಷ್ಯರು-ಭಕ್ತರು ಇದ್ದರಾದರೂ ಅವನು ತನ್ನ ಧರ್ಮಸಂಸ್ಥೆಯನ್ನು ಸ್ಥಾಪಿಸಿದ್ದು ಪೀಟರ್ ಎಂಬ ತನ್ನ ಶಿಷ್ಯನೊಬ್ಬನ ಮೂಲಕ. ಶ್ರೀಕೃಷ್ಣಪರಮಾತ್ಮನು ತನ್ನ ದುಷ್ಟಶಿಕ್ಷಣ-ಶಿಷ್ಟರಕ್ಷಣ ರೂಪವಾದ ಧರ್ಮಸಂಸ್ಥಾಪನಾ ಕಾರ್ಯವನ್ನು ನಡೆಸಿದ್ದು ಅರ್ಜುನನ ಮೂಲಕ. ಭಗವಾನ್ ಬುದ್ಧನು ತನ್ನ ಕಾರ್ಯವನ್ನು ನಡೆಸಿದ್ದು ಆನಂದನ ಮೂಲಕ. ಹಾಗೆಯೇ ಶ್ರೀಕೃಷ್ಣಚೈತನ್ಯನ ನೆರವಿಗೊದಗಿದವನು ಆತನ ಶಿಷ್ಯ-ಸಖನಾದ ನಿತ್ಯಾನಂದ. ಈಗ ಶ್ರೀರಾಮಕೃಷ್ಣರ ಧರ್ಮಸಂಸ್ಥಾಪನಾಕಾರ್ಯಕ್ಕೆ ನೆರವಾಗುವುದಕ್ಕಾಗಿಯೇ ಆಗಮಿಸಿದ್ದಾನೆ, ನರೇಂದ್ರನಾಥ—ಮುಂದೆ ಸ್ವಾಮಿ ವಿವೇಕಾನಂದ.

 

ಶ್ರೀರಾಮಕೃಷ್ಣರು ಮೊದಲ ಸಲ ನರೇಂದ್ರನನ್ನು ನೋಡಿದಾಗಲೇ ಗುರುತಿಸಿಬಿಟ್ಟರು, ತಮ್ಮ ದಿವ್ಯ ಸಂದೇಶಗಳನ್ನು ಹರಡಬೇಕಾದವನು ಇವನೇ ಎಂದು. ಅವರು ತಮ್ಮ ನಿರ್ವಿಕಲ್ಪ ಸಮಾಧಿಯ ಮೂಲಕ ಭೂತ-ವರ್ತಮಾನ-ಭವಿಷ್ಯತ್ಕಾಲಗಳ ಎಲ್ಲ ವಿಷಯಗಳನ್ನು, ವಿದ್ಯಮಾನಗಳನ್ನು ತಿಳಿದುಕೊಳ್ಳಬಲ್ಲವರಾಗಿದ್ದರು. ಹಾಗೆಯೇ, ತಮ್ಮ ಬಳಿಗೆ ಬಂದ ಭಕ್ತರಲ್ಲಿ ಹಾಗೂ ಶಿಷ್ಯರಲ್ಲಿ ಯಾರ್ಯಾರಿಂದ ಏನೇನು ಆಗಬೇಕಾಗಿದೆ ಎಂಬುದನ್ನೂ ತಿಳಿದೇ ಇದ್ದರು. ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಜ್ಞಾನದ ಹಾಗೂ ತಪೋಮಯ ಋಷಿಪರಂಪರೆಯ ಭಾರತವನ್ನು ಪ್ರತಿನಿಧಿಸಿದರೆ, ನರೇಂದ್ರನು ಎಲ್ಲ ಬಗೆಯ ಸಂಶಯ-ಅಪನಂಬಿಕೆಗಳಿಂದ ಹಾಗೂ ನಾಸ್ತಿಕತೆಯಿಂದ ಕೂಡಿದ ಆಧುನಿಕ ಯುಗದ ಪ್ರತಿನಿಧಿಯಂತಿದ್ದ. ಸತ್ಯಸಾಕ್ಷಾತ್ಕಾರ ಮಾಡಿಕೊಳ್ಳುವ ಪ್ರಾಮಾಣಿಕ ಹಂಬಲ ಅವನಿಗಿತ್ತು. ಎಂತಹ ಘನವಾದ ಆಧ್ಯಾತ್ಮಿಕ ಸತ್ಯಗಳನ್ನೇ ಆಗಲಿ, ಚೆನ್ನಾಗಿ ಪರೀಕ್ಷೆ ಮಾಡಿ ರುಜುವಾತುಪಡಿಸಿಕೊಳ್ಳದೆ ಅವನ್ನು ಸ್ವೀಕರಿಸುತ್ತಿರಲಿಲ್ಲ. ಭೌತಿಕ ಜಗತ್ತಿನಲ್ಲಿ ಜ್ಞಾನಾರ್ಜನೆಗೆ ವಿಚಾರವಂತಿಕೆ ಎನ್ನುವುದು ಅತ್ಯುಪಯುಕ್ತ ಸಾಧನವೇ ನಿಜ; ಆದರೆ ಭೌತಿಕ ಜಗತ್ತಿನಿಂದಾಚೆ ಅದು ಕೆಲಸಕ್ಕೆ ಬಾರದು, ಪಾರಮಾರ್ಥಿಕ ಪ್ರಪಂಚವನ್ನು ಪ್ರವೇಶಿಸಿ ಭಗವಂತನ ಅನಂತತೆಯನ್ನು ಅದು ಅಳೆಯಲಾರದು ಎನ್ನುವುದನ್ನು ನರೇಂದ್ರ ತಿಳಿದುಕೊಳ್ಳಬೇಕಾಗಿದೆ. ಶ್ರೀರಾಮಕೃಷ್ಣರೆಂಬ ಈ ಮಹಾಶಕ್ತಿಯೊಂದಿಗಿನ ಸಮಾಗಮದಿಂದ ಅವನು ನವಭಾರತದ ಹೃದಯ-ಬುದ್ಧಿಗಳ ಕೇಂದ್ರವಾಗಿ ನಿರ್ಮಾಣಗೊಳ್ಳಲಿದ್ದಾನೆ. ಈ ಎರಡು ಪ್ರಾಚೀನ-ಅರ್ವಾಚೀನ ಬೃಹತ್ ಚೈತನ್ಯಗಳ ಸಮ್ಮೇಳನದಿಂದ, ಜಗತ್ತಿಗೇ ಆದರ್ಶಪ್ರಾಯವಾಗಬಲ್ಲ ನೂತನ ಹಿಂದೂಧರ್ಮದ ಜನನವಾಗಲಿದೆ.

ನರೇಂದ್ರ ತಮ್ಮ ಬಳಿಗೆ ಬಂದ ಸಂದರ್ಭವನ್ನು ಶ್ರೀರಾಮಕೃಷ್ಣರೇ ತುಂಬ ಸ್ವಾರಸ್ಯಕರವಾಗಿ ಬಣ್ಣಿಸುತ್ತಾರೆ:

"ಗಂಗೆಗೆ ಇದಿರಾಗಿರುವ ಪಶ್ಚಿಮದ ದ್ವಾರದಿಂದ ನರೇಂದ್ರ ಕೋಣೆಯನ್ನು ಪ್ರವೇಶಿಸಿದ. ತನ್ನ ಜೊತೆಯಲ್ಲಿ ಬಂದಿದ್ದ ಇತರರಂತಲ್ಲದೆ ಅವನು ತನ್ನ ಶರೀರದ ಬಗ್ಗೆ, ಬಟ್ಟೆಬರೆಯ ಬಗ್ಗೆ ಅಲಕ್ಷ್ಯದಿಂದಿರುವಂತೆ ತೋರಿತು. ಬಾಹ್ಯಜಗತ್ತಿನ ಕಡೆಗೆ ಅವನಿಗೆ ಗಮನವೇ ಇರಲಿಲ್ಲ. ಆತನ ಮನಸ್ಸು ಸದಾ ಅಂತರ್ಮುಖಿಯಾಗಿರುತ್ತಿದ್ದುದನ್ನು ಕಣ್ಣುಗಳೇ ಹೇಳುತ್ತಿದ್ದುವು. . . 'ಕಲ್ಕತ್ತದಂತಹ ಭೋಗಭರಿತ ನಗರದಿಂದ ಇಂತಹ ಅಧ್ಯಾತ್ಮಶೀಲ ವ್ಯಕ್ತಿಯೊಬ್ಬ ಬರುತ್ತಿದ್ದಾನಲ್ಲ !' ಎಂದು ಆಶ್ಚರ್ಯಪಟ್ಟೆ. . . ನನ್ನ ಅಪೇಕ್ಷೆಯಂತೆ ಅವನೊಂದು ಬಂಗಾಳೀ ಹಾಡು ಹೇಳಿದ: 'ಓ ಮನಸ್ಸೇ ! ನಡೆ, ನಾವು ನಮ್ಮ ಮನೆಗೆ ಹೋಗೋಣ. ಈ ಜಗತ್ತಿನಲ್ಲಿ ನಾವೇಕೆ ಪರದೇಸಿಗಳಂತೆ ಅಲೆಯಬೇಕು ?' ಎಂಬರ್ಥದ ಹಾಡು ಅದು. ಪರಮಾತ್ಮನೊಡನೆ ಮಿಲನಗೊಳ್ಳಲು ಕಾತರಿಸುತ್ತಿರುವ ಹೃದಯವೊಂದರಿಂದ ತಾನಾಗಿಯೇ ಉಕ್ಕಿಬಂದಂತಿತ್ತು ಆ ಕರೆ. ಅದನ್ನು ಕೇಳಿ ನನಗೆ ತಡೆದುಕೊಳ್ಳಲಾಗಲಿಲ್ಲ, ಸಮಾಧಿಸ್ಥನಾಗಿಬಿಟ್ಟೆ. . ."

ಮುಂದೆ ನಡೆದ ವಿಚಿತ್ರವನ್ನು ನರೇಂದ್ರನ ಬಾಯಿಂದ ಕೇಳೋಣ:

"ಸರಿ, ನಾನು ಹಾಡಿದೆ. ಬಳಿಕ ಅವರು ಇದ್ದಕ್ಕಿದ್ದಂತೆ ಎದ್ದರು. ನನ್ನ ಕೈಹಿಡಿದು ಪಕ್ಕದ ವರಾಂಡಕ್ಕೆ ಕರೆದೊಯ್ದು, ಕೋಣೆಯ ಬಾಗಿಲು ಮುಚ್ಚಿಬಿಟ್ಟರು. ವರಾಂಡದ ಇನ್ನೊಂದು ಪಕ್ಕಕ್ಕೆ ತಡಿಕೆ ಹಾಕಿತ್ತು. ಈಗ ಅಲ್ಲಿದ್ದುದು ನಾವಿಬ್ಬರೇ. ಇವರೇನೋ

ನನಗೆ ವೈಯಕ್ತಿಕವಾದ ಬೋಧನೆ-ಗೀದನೆ ಕೊಟ್ಟಾರು ಅಂದುಕೊಂಡೆ. ಆದರೆ ಅಲ್ಲಿ ಅವರ ವರ್ತನೆಯನ್ನು ಕಂಡು ನನಗೆ ಕಕ್ಕಾಬಿಕ್ಕಿಯಾಯಿತು. ಅವರು ನನ್ನ ಕೈಗಳನ್ನು ಹಿಡಿದು ಧಾರಾಕಾರವಾಗಿ ಆನಂದದ ಕಣ್ಣೀರು ಹರಿಸತೊಡಗಿದರು! ನಾನವರಿಗೆ ಬಹು ಕಾಲದ ಆತ್ಮೀಯನೋ ಎಂಬಂತೆ ಪರಮಾದರದ ದನಿಯಲ್ಲಿ ಮಾತನಾಡಿಸಿದರು. 'ಯಾಕಪ್ಪಾ ಇಷ್ಟು ತಡವಾಗಿ ಬಂದೆ? ನನ್ನನ್ನು ಇಷ್ಟುಕಾಲ ಸತಾಯಿಸುವಷ್ಟು ನಿಷ್ಕರುಣಿಯಾದೆಯಾ ನೀನು? ಈ ಪ್ರಾಪಂಚಿಕ ಜನರ ಗಳಹುವಿಕೆಯನ್ನು ಕೇಳಿಕೇಳಿ ನನ್ನ ಕಿವಿಯೆಲ್ಲ ಸೀದುಹೋದಂತಾಗಿದೆ. ಅಯ್ಯೋ, ನನ್ನನ್ನು ಅರ್ಥಮಾಡಿಕೊಳ್ಳ ಬಲ್ಲವರ ಮುಂದೆ ನನ್ನ ಅಂತರಂಗದ ಅನುಭವಗಳನ್ನೆಲ್ಲ ತೋಡಿಕೊಂಡು ಎದೆಯನ್ನು ಹಗುರ ಮಾಡಿಕೊಳ್ಳೋಣ ಅಂತ ಎಷ್ಟು ಒದ್ದಾಡುತ್ತಿದ್ದೇನೆ' ಎಂದು ಹೀಗೇ ಏನೇನೋ ಹೇಳುತ್ತ ಬಿಕ್ಕಿದರು.

"ಆಮೇಲೆ, ಇದ್ದಕ್ಕಿದ್ದಂತೆ ನನ್ನೆದುರು ಕೈಜೋಡಿಸಿ ನಿಂತು ಹೇಳತೊಡಗಿದರು: 'ಪ್ರಭು, ನಾ ಬಲ್ಲೆ! ನೀನು ಆ ಪುರಾತನ ಮಹರ್ಷಿ, ನಾರಾಯಣನ ಅವತಾರನಾದ ನರಋಷಿ; ಮಾನವಕೋಟಿಯ ದುಃಖನಿವಾರಣೆ ಮಾಡಲು ನೀನು ಇಳೆಗೆ ಅವತರಿಸಿ ಬಂದಿರುವೆಯೆಂದು ನಾ ಬಲ್ಲೆ!' ನನಗೆ ದಿಗ್ಭ್ರಾಂತಿಯಾಯಿತು. 'ಇದ್ಯಾವ ವಿಚಿತ್ರ ಮನುಷ್ಯನನ್ನು ನೋಡಲು ಬಂದೆನಪ್ಪ! ಇವನೆಲ್ಲೋ ಪೂರ್ತಿ ಹುಚ್ಚನಿರಬೇಕು. ನನ್ನನ್ನು ನರಋಷಿ, ಅವತಾರ ಅಂತ ಏನೇನೋ ಕರೆಯುತ್ತಿದ್ದಾನಲ್ಲ!' ಎಂದುಕೊಂಡೆ. ಆದರೂ ನಾನು ಸುಮ್ಮನಿದ್ದುಬಿಟ್ಟೆ—ಹೇಳಿಕೊಂಡುಹೋಗಲಿ ಎಂದು. ಅಷ್ಟರಲ್ಲಿ ಅವರು ಪುನಃ ಕೋಣೆಗೆ ಹೋಗಿ ಒಂದಿಷ್ಟು ಮಿಠಾಯಿ, ಕಲ್ಲುಸಕ್ಕರೆ, ಬೆಣ್ಣೆ ಇವನ್ನೆಲ್ಲ ತಂದು ತಮ್ಮ ಕೈಯಾರೆ ನನಗೆ ತಿನ್ನಿಸಲು ಮುಂದಾದರು. 'ಅಯ್ಯೋ, ಬೇಡಬೇಡ! ಅದನ್ನು ನನ್ನ ಕೈಗೆ ಕೊಡಿ. ಗೆಳೆಯರೊಂದಿಗೆ ಹಂಚಿಕೊಂಡು ತಿನ್ನುತ್ತೇನೆ' ಎಂದು ನಾನು ಮತ್ತೆಮತ್ತೆ ಹೇಳಿದರೂ ಕೇಳದೆ, 'ಅವರಿಗೆಲ್ಲ ಆಮೇಲೆ ಕೊಟ್ಟರಾಯಿತು' ಎನ್ನುತ್ತ ಬಲವಂತದಿಂದ ಅಷ್ಟನ್ನೂ ತಿನ್ನಿಸಿಯೇಬಿಟ್ಟರು! ಬಳಿಕ ಮತ್ತೆ ನನ್ನ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡು, 'ಎಲ್ಲಿ, ನಾನೊಬ್ಬನೇ ಇಲ್ಲಿಗೆ ಬೇಗ ಇನ್ನೊಮ್ಮೆ ಬರು ತ್ತೇನೆ ಅಂತ ಮಾತುಕೊಡು!' ಎಂದು ಒತ್ತಾಯಪಡಿಸಿದರು. ಅವರ ಒತ್ತಾಯಕ್ಕೆ ಮಣಿದು ನಾನು 'ಸರಿ, ಬರುತ್ತೇನೆ' ಎನ್ನಬೇಕಾಯಿತು."

ಬಳಿಕ ಇಬ್ಬರೂ ಕೋಣೆಗೆ ಹಿಂದಿರುಗಿದರು. ಈಗಾಗಲೇ ಅಲ್ಲಿದ್ದ ಭಕ್ತರೆಲ್ಲ ಯೋಚಿಸುತ್ತಿರಬಹುದು—'ಇದೇನು, ಶ್ರೀರಾಮಕೃಷ್ಣರು ನಮ್ಮ ನರೇಂದ್ರನ ಮೇಲೆ ಇಷ್ಟೊಂದು ವಿಶ್ವಾಸ ತೋರುತ್ತಿದ್ದಾರಲ್ಲ; ಅವನಲ್ಲಿ ಅವರು ಅಂಥದೇನು ಕಂಡಿರ ಬಹುದು?' ಎಂದು. ಈಗ ಶ್ರೀರಾಮಕೃಷ್ಣರು ಮತ್ತೆ ತಮ್ಮ ಸಣ್ಣ ಮಂಚದ ಮೇಲೆ ಕುಳಿತರು. ತಮ್ಮೆದುರು ಕುಳಿತಿದ್ದ ಭಕ್ತರಿಗೆ ನರೇಂದ್ರನನ್ನು ತೋರಿಸುತ್ತ ಉದ್ಗರಿಸಿದರು: "ನೋಡಿ ಇಲ್ಲಿ, ಇವನ ಮುಖದಲ್ಲಿ ಹೇಗೆ ಸರಸ್ವತಿ ಬೆಳಗುತ್ತಿದ್ದಾಳೆ!" ಹೊಸಬನಾದ ಒಬ್ಬ ತರುಣನ ಬಗ್ಗೆ ಶ್ರೀರಾಮಕೃಷ್ಣರು ಇಂಥ ಅದ್ಭುತವಾದ ಮಾತು ಹೇಳಿದ್ದನ್ನು ಕೇಳಿ ಭಕ್ತರೆಲ್ಲ ಅವನನ್ನೇ ಬೆರಗುಗಣ್ಣಿನಿಂದ ದಿಟ್ಟಿಸಿದರು.

ಈಗ ಶ್ರೀರಾಮಕೃಷ್ಣರು ನರೇಂದ್ರನನ್ನು ಕೇಳಿದರು: "ನೀನು ದಿನಾಲೂ ರಾತ್ರಿ ಮಲಗಿಕೊಳ್ಳುವಾಗ ಒಂದು ಬೆಳಕು ಕಾಣುತ್ತೀಯೇನು?" ನರೇಂದ್ರ ಹೌದೆಂದ. ಒಡನೆಯೇ ಶ್ರೀರಾಮಕೃಷ್ಣರು ಗಟ್ಟಿಯಾಗಿ, "ಆ! ಎಲ್ಲವೂ ತಾಳೆಯಾಗುತ್ತಿದೆ;

ಇವನು ಜನ್ಮತಃ ಧ್ಯಾನಸಿದ್ಧ" ಎಂದರು. ನರೇಂದ್ರ ಮಾತ್ರ ಸುಮ್ಮನೆ ನೋಡುತ್ತ ಕುಳಿತಿದ್ದಾನೆ. ಅವನ ಮನಸ್ಸಿಗಿನ್ನೂ ತಾಳೆಯಾಗಬೇಕಾಗಿದೆ. ಅವನು ಒಂದೇ ಸಮನೆ ಶ್ರೀರಾಮಕೃಷ್ಣರನ್ನು ಪರೀಕ್ಷಾದೃಷ್ಟಿಯಿಂದ ನೋಡುತ್ತಿದ್ದಾನೆ. ಅವರು ಮಾತನಾಡುವ ಕ್ರಮವನ್ನು ನೋಡುತ್ತಾನೆ, ಎಲ್ಲವೂ ಸರಿಯಾಗಿದೆ. ಏನೂ ತಪ್ಪಿಲ್ಲ. ಅವರು ಭಕ್ತರೊಂದಿಗೆ ನಡೆದುಕೊಳ್ಳುವ ಕ್ರಮವನ್ನು ನೋಡುತ್ತಾನೆ; ಎಲ್ಲ ಸರಿಯಾಗಿದೆ, ಏನೂ ಎಡವಟ್ಟಿಲ್ಲ! ಅವರ ವರ್ತನೆ ಸುಸಂಬದ್ಧವಾಗಿದೆ, ಏನೂ ದೋಷವಿಲ್ಲ. ಅವರ ಆಧ್ಯಾತ್ಮಿಕ ಮಾತುಕತೆಯನ್ನು ಕೇಳಿದಾಗ, ಅವರು ಭಾವಸಮಾಧಿಗೇರುವ ಪರಿಯನ್ನು ನೋಡಿದಾಗ, ನೈಜ ತ್ಯಾಗಿಯಂತೆ, ವಿರಾಗಿಯಂತೆ ಕಂಡುಬರುತ್ತಿದ್ದಾರೆ. ಅವರ ಬಾಹ್ಯ ವ್ಯಕ್ತಿತ್ವವನ್ನೂ ಮಾತುಗಳನ್ನು ಹೋಲಿಸಿ ನೋಡಿದಾಗ ಒಂದಕ್ಕೊಂದು ನಿಕಟವಾದ ಹೊಂದಾಣಿಕೆಯಿರುವುದು ಸ್ಪಷ್ಟವಾಗಿ ಗೋಚರಿಸುತ್ತಿದೆ. ಅವರ ಭಾಷೆ ತುಂಬ ಸರಳ; ತೀರ ಸಾಮಾನ್ಯರೂ ಅರ್ಥಮಾಡಿಕೊಳ್ಳುವಷ್ಟು ಸರಳ, ಅಕೃತ್ರಿಮ. ಆದರೂ... ಇವರು ನಿಜಕ್ಕೂ ಅಂಥಾ ದೊಡ್ಡ ಆಧ್ಯಾತ್ಮಿಕ ವ್ಯಕ್ತಿಯೆ ? ಹಾಗಾದರೆ ನೋಡೋಣ, ತನ್ನ ಪ್ರಶ್ನೆಗೆ ಇವರೇನು ಉತ್ತರಿಸುತ್ತಾರೆಂದು. ನರೇಂದ್ರ ಈಗ ಅವರ ಬಳಿಗೆ ಸರಿದು, ತನ್ನ ಯಕ್ಷಪ್ರಶ್ನೆಯನ್ನು ಮುಂದಿಟ್ಟ:

"ಮಹಾಶಯರೆ, ನೀವು ದೇವರನ್ನು ಕಂಡಿದ್ದೀರಾ ?"

ಸುತ್ತ ಕುಳಿತವರಿಗೆಲ್ಲ ಆಶ್ಚರ್ಯ, ಕುತೂಹಲ. ಈ ಹಿಂದೆ ಇಂತಹ ಪ್ರಶ್ನೆಯನ್ನು ಕೇಳಿದವರೇ ಇಲ್ಲ. ಆದರೆ ಶ್ರೀರಾಮಕೃಷ್ಣರು ಮಾತ್ರ ಸ್ವಲ್ಪವೂ ಕಸಿವಿಸಿಗೊಳ್ಳಲಿಲ್ಲ, ತಬ್ಬಿಬ್ಬಾಗಲಿಲ್ಲ. ಮುಗುಳ್ನಗುತ್ತಲೇ, ಬಾಣದಂತೆ ಬಂದ ಅವನ ಪ್ರಶ್ನೆಗೆ ಅಷ್ಟೇ ನೇರವಾದ ಉತ್ತರವಿತ್ತರು:

"ಹೌದಪ್ಪ, ಕಂಡಿದ್ದೇನೆ! ಈಗ ನಿನ್ನನ್ನು ಕಾಣುತ್ತಿರುವಂತೆಯೇ, ಆದರೆ ಇನ್ನೂ ಹೆಚ್ಚು ಸ್ಪಷ್ಟವಾಗಿ ಕಂಡಿದ್ದೇನೆ!"

ನರೇಂದ್ರ ಸ್ತಬ್ಧನಾಗಿ ಕುಳಿತ. ಶ್ರೀರಾಮಕೃಷ್ಣರು ಮತ್ತೆ ನುಡಿದರು:

"ನಾನು ನಿನ್ನನ್ನು ಕಾಣುವಷ್ಟೇ, ನಿನ್ನೊಡನೆ ಮಾತನಾಡುವಷ್ಟೇ ಸ್ಪಷ್ಟವಾಗಿ ಭಗವಂತನನ್ನು ಕಾಣಬಹುದು, ಕಂಡು ಮಾತನಾಡಬಹುದು. ಆದರೆ ದೇವರು ಯಾರಿಗೆ ಬೇಕಾಗಿದೆ, ಹೇಳು ? ಜನಗಳು ಹೆಂಡತಿ-ಮಕ್ಕಳು, ಹಣ-ಆಸ್ತಿಗಾಗಿ ಕೊಡ ಗಟ್ಟಲೆ ಕಣ್ಣೀರು ಸುರಿಸುತ್ತಾರೆ; ಆದರೆ ದೇವರಿಗಾಗಿ ಅಳುವವರು ಯಾರಿದ್ದಾರೆ ಹೇಳು ? ದೇವರಿಗಾಗಿ ಪ್ರಾಮಾಣಿಕವಾಗಿ ಅತ್ತದ್ದೇ ಆದರೆ ಅವನು ದರ್ಶನ ಕೊಟ್ಟೇ ಕೊಡುತ್ತಾನೆ."

ಈ ಉತ್ತರ ನರೇಂದ್ರನ ಮನಸ್ಸಿನಲ್ಲಿ ಆಳವಾಗಿ ನಾಟಿತು; ಗಾಢ ಪ್ರಭಾವ ಬೀರಿತು. 'ನಾನು ದೇವರನ್ನು ನೋಡಿದ್ದೇನೆ' ಎಂದು ಎದೆತಟ್ಟಿ ಹೇಳಬಲ್ಲ ವ್ಯಕ್ತಿಯನ್ನು ಅವನು ಜೀವನದಲ್ಲಿ ಇದೇ ಮೊದಲ ಸಲ ನೋಡುತ್ತಿದ್ದಾನೆ. ಧರ್ಮವೆನ್ನುವುದು ಅನುಭವಗಮ್ಯವಾದ ಸತ್ಯ, ಹಾಗೂ ನಾವು ಈ ಜಗತ್ತನ್ನು ಕಾಣುವುದಕ್ಕಿಂತಲೂ ಎಷ್ಟೋ ಪಾಲು ಹೆಚ್ಚು ಸ್ಪಷ್ಟವಾಗಿ ಭಗವಂತನನ್ನು ಕಾಣಬಹುದು ಎಂಬ ಮಾತನ್ನು ಇದೇ ಮೊಟ್ಟಮೊದಲ ಬಾರಿಗೆ ಕೇಳುತ್ತಿದ್ದಾನೆ. ಶ್ರೀರಾಮಕೃಷ್ಣರಾದರೂ ಅದನ್ನು ಹೇಗೆ ಹೇಳುತ್ತಿದ್ದಾರೆ ? ಸಾಮಾನ್ಯ ಗುರುಗಳಂತೆ ಅನುಮಾನಾಸ್ಪದವಾದ ದನಿಯಲ್ಲಿ ಹೇಳು ತ್ತಿದ್ದಾರೇನು ? ಇಲ್ಲ, ತಮ್ಮ ಸಾಕ್ಷಾತ್ಕಾರದ ಆಧಾರದ ಮೇಲೆ, ಎದೆತಟ್ಟಿ, ದೃಢವಾಕ್ಕಿಡೆ

ಯಿಲ್ಲದಂತೆ ಹೇಳುತ್ತಿದ್ದಾರೆ! ಆ ಮಾತು ಅಷ್ಟು ಶಕ್ತಿಪೂರ್ಣವಾಗಿದೆ.

ನರೇಂದ್ರನಿಗಾದ ಅಚ್ಚರಿ-ಆನಂದ ಎಷ್ಟೆಂದು ಹೇಳೋಣ! ಅವನ ತಲೆಯಲ್ಲಿ ನೂರೆಂಟು ಭಾವಗಳು, ಆಲೋಚನೆಗಳು ನಿಮಿಷಮಾತ್ರದಲ್ಲಿ ಹಾದುಹೋದುವು. "ಅಂತೂ ಕಡೆಗೊಬ್ಬ ಸಿಕ್ಕಿದನಲ್ಲ—ದೇವರನ್ನು ನೋಡಿದ್ದೇನೆ, ನೀನೂ ನೋಡ ಬಹುದು ಎಂದು ಎದೆತಟ್ಟಿ ಹೇಳಬಲ್ಲ ಗಂಡು! ಇವರಲ್ಲಿ ಎಂಥ ಆತ್ಮವಿಶ್ವಾಸವಿದೆ! ಅದು ಕೇವಲ ಬಾಯಿಮಾತಾಗಿರಲು ಸಾಧ್ಯವಿಲ್ಲ. ಇವರ ಅನುಭವದ ಆಳದಿಂದಲೇ ಆ ಮಾತು ಹೊಮ್ಮಿಬಂದಂತೆ ಭಾಸವಾಗುತ್ತಿದೆ. ಆದರೆ ಮೊದಲು ಹಾಗೇಕೆ ವಿಚಿತ್ರ ವಾಗಿ ನಡೆದುಕೊಂಡರು ?. . . ನನ್ನನ್ನು 'ನರಋಷಿ' 'ನಾರಾಯಣ' ಎಂದೆಲ್ಲ ಕರೆದ ರಲ್ಲ, ಅದೇಕೆ ? ಈ ಎರಡು ಅತಿರೇಕಗಳನ್ನು ಹೇಗೆ ಅರ್ಥಮಾಡಿಕೊಳ್ಳಲಿ ? ಬಹುಶಃ ಅದೊಂದು ಹುಚ್ಚೇ ಇರಬೇಕು—ಇಪ್ಪತ್ತನಾಲ್ಕು ಗಂಟೆಯೂ ಒಂದೇ ಆಲೋಚನೆ ಯಲ್ಲಿ ತೊಡಗಿರುವಂತಹ ಹುಚ್ಚು. ಆದರೆ ಒಂದಂತೂ ನಿಜ—ಇವರ ತ್ಯಾಗವೈರಾಗ್ಯ ಗಳು ಮಾತ್ರ ಎಲ್ಲೋ ಕೆಲವೇ ಮಂದಿ ಭಾಗ್ಯಶಾಲಿಗಳಲ್ಲಿ ಕಂಡುಬರುವಂಥವುಗಳು. ಒಂದು ವೇಳೆ ಹುಚ್ಚರೇ ಆಗಿದ್ದರೂ ಇವರು ಪರಮಪವಿತ್ರರೇ ಸರಿ. ಇವರು ನಿಜವಾದ ಸಂತ. ಈ ಒಂದು ಗುಣಕ್ಕಾದರೂ ಮನುಕುಲ ಇವರಿಗೆ ತಲೆಬಾಗಲೇ ಬೇಕು. . ." ಹೀಗೆಲ್ಲ ಆಲೋಚಿಸುತ್ತ ನರೇಂದ್ರ ಇಬ್ಬಂದಿಯ ಮನಸ್ಥಿತಿಯಲ್ಲೇ ಶ್ರೀರಾಮಕೃಷ್ಣರಿಗೆ ಪ್ರಣಾಮ ಸಲ್ಲಿಸಿ ಹಿಂದಿರುಗಿದ.

ಮನೆಗೆ ಬಂದಮೇಲೂ ನರೇಂದ್ರನ ಮನಸ್ಸು ಶ್ರೀರಾಮಕೃಷ್ಣರ ಕುರಿತಾದ ಆಲೋಚನೆಗಳನ್ನೇ ತುಂಬಿಕೊಂಡ ಜೇನುಗೂಡಿನಂತಾಗಿತ್ತು. ತಾನೇನೋ ಶ್ರೀರಾಮ ಕೃಷ್ಣರನ್ನು ಹುಚ್ಚರೆಂದು ಕಡೆಗಣಿಸಬಹುದು; ಆದರೆ ಅವರ ಸನ್ನಿಧಿಯಲ್ಲಿರುವವರೆಗೂ ಒಂದು ಅಪೂರ್ವವಾದ ಮಂಗಳಕರ ಭಾವನೆ ತನ್ನ ಇಡೀ ವ್ಯಕ್ತಿತ್ವವನ್ನೇ ಆವರಿಸಿದ ಹಾಗೆ ಭಾಸವಾಗುತ್ತಿತ್ತಲ್ಲ, ಅದು ಹೇಗೆ ಸಾಧ್ಯವಾಯಿತು ? ಒಟ್ಟಿನಲ್ಲಿ ಅವನಿಗೆ ದಕ್ಷಿಣೇಶ್ವರದ ಕೋಣೆಯಲ್ಲಿನ ಎಲ್ಲವೂ ಅದ್ಭುತ-ಅಪೂರ್ವವಾಗಿ ತೋರುತ್ತಿತ್ತು. ಶ್ರೀರಾಮಕೃಷ್ಣರನ್ನು ಅಪಾರ ಭಕ್ತಿಗೌರವಗಳಿಂದ ಕಾಣುವ ಭಕ್ತವೃಂದವೇನು! ಶ್ರೀರಾಮಕೃಷ್ಣರು ಆಗಾಗ ಏರಿಹೋಗುತ್ತಿದ್ದ ಭಾವಸಮಾಧಿಯ ವೈಚಿತ್ರ್ಯವೇನು! ಮತ್ತೆ ಆ ಸ್ಥಿತಿಯಿಂದ ಇಳಿದುಬರುವ ಅದ್ಭುತವೇನು! ಹಾಗೆ ಇಳಿದುಬಂದಾಗ ಅಲ್ಲಿ ಉಂಟಾಗುವ ಅತ್ಯುನ್ನತ ಆಧ್ಯಾತ್ಮಿಕ ವಾತಾವರಣವೇನು! ಅವರ ಅಲೌಕಿಕವಾದ ಮಾತುಗಳೇನು! ಅವರ ಪವಿತ್ರ ಸನ್ನಿಧಿಯಲ್ಲಿ ತನ್ನ ಮನಸ್ಸು ಅತಿಸಹಜವಾಗಿ ಉನ್ನತ ಸ್ಥಿತಿಗೇರುವ ಪರಿಯೇನು! ಹೀಗೆ ಇವುಗಳನ್ನೆಲ್ಲ ಭಾವಿಸುತ್ತ ನರೇಂದ್ರ ನಿಬ್ಬೆರಗಾದ. ಬೇಗ ಹೋಗಿ ಅವರನ್ನು ಮತ್ತೊಮ್ಮೆ ಕಾಣಬೇಕೆಂಬ ಉತ್ಕಟೇಚ್ಛೆ ಉದಿಸಿತು. ಅಲ್ಲದೆ, ಏಕಾಂಗಿಯಾಗಿ ಶೀಘ್ರದಲ್ಲೇ ಮತ್ತೆ ಬರುತ್ತೇನೆಂದು ಮಾತು ಬೇರೆ ಕೊಟ್ಟಿದ್ದ. ಆದರೆ ತಾನು ಅವರ ಪ್ರಭಾವಕ್ಕೆ ಒಳಗಾಗಬಾರದು ಎಂಬ ಮನಸ್ಸು. ಆದ್ದರಿಂದ ಒಂದಲ್ಲ ಒಂದು ಕೆಲಸದ ನೆಪವನ್ನು ಮುಂದಿಟ್ಟುಕೊಂಡು ದಕ್ಷಿಣೇಶ್ವರಕ್ಕೆ ಹೋಗುವುದನ್ನು ಮುಂದೂಡುತ್ತಲೇ ಬಂದ. ಸುಮಾರು ಒಂದು ತಿಂಗಳ ಬಳಿಕ ಕೊನೆಗೊಂದು ದಿನ ಅತ್ತ ಹೊರಟ. ಈ ಸಲ ಅವನೊಬ್ಬನೇ ನಡೆದುಕೊಂಡು ಹೋದ. ದಕ್ಷಿಣೇಶ್ವರದ ಮಂದಿರೋದ್ಯಾನಕ್ಕೆ ಬಂದವನೇ ಶ್ರೀರಾಮಕೃಷ್ಣರ ಕೋಣೆಯನ್ನು ಪ್ರವೇಶಿಸಿದ. ಶ್ರೀರಾಮಕೃಷ್ಣರು ತಮ್ಮ ಸಣ್ಣಮಂಚದ ಮೇಲೆ ಕುಳಿತಿದ್ದರು. ನರೇಂದ್ರನನ್ನು ಕಾಣು

ತ್ತಲೇ ಅವರಿಗೆ ಆತ್ಮಾನಂದವಾಗಿಬಿಟ್ಟಿತು. ಅವನನ್ನು ತುಂಬ ವಿಶ್ವಾಸದಿಂದ ಬರಮಾಡಿಕೊಂಡು, ಮಂಚದ ಮೇಲೆ ತಮ್ಮ ಪಕ್ಕದಲ್ಲೇ ಕುಳ್ಳಿರಿಸಿಕೊಂಡರು. ಆದರೆ ಮರುಕ್ಷಣಕ್ಕೆ ಅವರಲ್ಲೇನೋ ಒಂದು ಬಗೆಯ ಭಾವಾವೇಶವುಂಟಾದುದನ್ನು ಕಂಡ ನರೇಂದ್ರ. ಈಗ ಅವರು ತಮ್ಮಷ್ಟಕ್ಕೆ ಏನನ್ನೋ ಮಟಗುಟ್ಟುತ್ತ ಅವನೆಡೆಗೆ ಸರಿದರು. ದೃಷ್ಟಿ ಅವನ ಮೇಲೇ ನೆಟ್ಟಿದೆ. ಇದನ್ನು ಕಂಡು ನರೇಂದ್ರ, 'ಕಳೆದ ಸಲ ಬಂದಾಗ ಏನೋ ಒಂದು ತರಹ ವಿಚಿತ್ರವಾಗಿ ನಡೆದುಕೊಂಡರಲ್ಲ, ಹಾಗೆಯೇ ಈಗಲೂ ಏನೋ ಮಾಡುತ್ತಾರೆ ಅಂತ ಕಾಣುತ್ತದೆ' ಎಂದು ಭಾವಿಸಿದ. ಆದರೆ ಕಣ್ರೆಪ್ಪೆ ಹೊಡೆಯುವಷ್ಟರಲ್ಲಿ ಶ್ರೀರಾಮಕೃಷ್ಣರು ತಮ್ಮ ಬಲಪಾದವನ್ನೆತ್ತಿ ಆತನ ಮೈಮೇಲಿಟ್ಟುಬಿಟ್ಟರು! ಆಹ್! ಅದೆಂಥ ದಿವ್ಯ ಸ್ಪರ್ಶ! ಒಡನೆಯೇ ನರೇಂದ್ರನಿಗೆ ಅತಿ ವಿಚಿತ್ರವಾದ, ಭಯಂಕರ ಅನುಭವವಾಯಿತು. ಅವನು ನೋಡನೋಡುತ್ತಿದ್ದಂತೆಯೇ ಆ ಕೋಣೆಯ ಗೋಡೆಗಳೂ ಕೋಣೆಯೊಳಗಿನ ಸಮಸ್ತ ವಸ್ತುಗಳೂ ರಭಸದಿಂದ ಗಿರಗಿರನೆ ತಿರುಗಿ ಅವ್ಯಕ್ತದಲ್ಲಿ ಲೀನವಾಗಿ ಹೋಗಿಬಿಟ್ಟುವು. ಅವನ ವ್ಯಕ್ತಿತ್ವವೂ ಸೇರಿದಂತೆ ಸಮಸ್ತ ವಿಶ್ವವೇ ಕರಕರಗಿ ಯಾವುದೋ ವರ್ಣನಾತೀತ ರಹಸ್ಯ ಶೂನ್ಯದೊಳಗೆ ಲಯವಾಗಿಹೋಯಿತು! ನರೇಂದ್ರನ ಹೃದಯ ಭಯದಿಂದ ನಡುಗಿತು. ಮಹಾಸಿಂಹದ ಸ್ಪರ್ಶಮಾತ್ರದಿಂದ ಮರಿಸಿಂಹ ತಲ್ಲಣಿಸಿತು! ಅವನಿಗೆ ತಾನು ಭಯಂಕರ ಮೃತ್ಯುವಿನ ಬಾಯಿಗೀಡಾಗುತ್ತಿರುವಂತೆ ತೋರಿತು. ಆ ವಿಚಿತ್ರ ಅನುಭವದ ತೀವ್ರತೆಯನ್ನು ತಾಳಲಾರದೆ, "ನನಗಿದೇನು ಮಾಡುತ್ತಿದ್ದೀರಿ ನೀವು! ನನಗೆ ಮನೆಯಲ್ಲಿ ತಾಯ್ತಂದೆಯರಿದ್ದಾರೆ!" ಎಂದು ಕೂಗಿಕೊಂಡ. ಅವನ ಈ ಅಸಹಾಯಕ ಚೀರಾಟವನ್ನು ಕೇಳಿ ಶ್ರೀರಾಮಕೃಷ್ಣರು ನಕ್ಕುಬಿಟ್ಟರು. ಆದರೆ ಅವರಿಗೆ ಸ್ವಲ್ಪ ಅಚ್ಚರಿಯೂ ಆಯಿತು. ಏಕೆಂದರೆ ಅವರು ಅವನಿಂದ ಆ ಬಗೆಯ ಪ್ರತಿಕ್ರಿಯೆಯನ್ನು ನಿರೀಕ್ಷಿಸಿರಲಿಲ್ಲ. ಬಳಿಕ ಅವನ ಎದೆಯನ್ನು ನೇವರಿಸುತ್ತ "ಆಗಲಿ, ಆಗಲಿ; ಇಂದಿಗಿಷ್ಟೇ ಸಾಕು. ಮುಂದೆ ಸಕಾಲದಲ್ಲಿ ಎಲ್ಲವೂ ಆಗುತ್ತದೆ" ಎಂದರು. ಅತ್ಯಾಶ್ಚರ್ಯ! ಶ್ರೀರಾಮಕೃಷ್ಣರು ಹೀಗೆ ಅಂದದ್ದೇ ತಡ, ನರೇಂದ್ರನ ಆ ವಿಚಿತ್ರ ಅನುಭವ ದೂರವಾಯಿತು. ಅವನು ಮತ್ತೆ ಮೊದಲಿನಂತಾದ. ಈಗ ಕೋಣೆಯ ಗೋಡೆಗಳು, ಒಳಗಿರುವ ವಸ್ತುಗಳು ಎಲ್ಲ ಮೊದಲಿನಂತೆಯೇ ಕಾಣತೊಡಗಿದುವು. ಆದರೆ ಇವಿಷ್ಟೂ ನಡೆದುಹೋದದ್ದು ಕೆಲವೇ ಕ್ಷಣಗಳಲ್ಲಿ! ಈ ವಿಚಿತ್ರ ಪ್ರಸಂಗದ ತಲೆಬುಡ ಅರ್ಥವಾಗದೆ ನರೇಂದ್ರ ದಿಗ್ಭ್ರಾಂತನಾಗಿ ಕುಳಿತ.

ನರೇಂದ್ರನ ಆ ವಿಚಿತ್ರ ಅವಸ್ಥೆ ದೂರವಾದಮೇಲೆ ಶ್ರೀರಾಮಕೃಷ್ಣರೂ ಪುನಃ ಸಹಜಸ್ಥಿತಿಗೆ ಮರಳಿದರು. ಈಗ ಆತನೊಂದಿಗೆ, ಅವನು ತಮಗೆ ಚಿರಪರಿಚಿತನಾದ ಹಳೆಯ ಸ್ನೇಹಿತನೋ ಎಂಬಂತೆ ನಡೆದುಕೊಳ್ಳುತ್ತ ಅವನನ್ನು ಉಪಚರಿಸತೊಡಗಿದರು. ಅವನನ್ನು ಎಷ್ಟು ಉಪಚರಿಸಿದರೂ ಅವರಿಗೆ ತೃಪ್ತಿಯಿಲ್ಲ! ಇಂತಹ ನಿಸ್ವಾರ್ಥ, ನಿಷ್ಕಲ್ಮಷ ಪ್ರೀತಿಯನ್ನು ಕಂಡು ನರೇಂದ್ರ ಸಂಪೂರ್ಣ ಮಾರುಹೋದ. ಆ ದಿನವಿಡೀ ಅವನು ದಕ್ಷಿಣೇಶ್ವರದಲ್ಲೇ ಇದ್ದ. ಸಾಯಂಕಾಲವಾಯಿತು, ತಾನಿನ್ನು ಹೋಗಿಬರುವುದಾಗಿ ಶ್ರೀರಾಮಕೃಷ್ಣರಿಗೆ ಹೇಳಿದ. ಅವರಿಗೆ ತುಂಬ ಖೇದವಾಯಿತು. ಕೊನೆಗೆ, ಸಾಧ್ಯವಾದಷ್ಟು ಬೇಗನೆ ಇನ್ನೊಮ್ಮೆ ಬರುವುದಾಗಿ ಅವನಿಂದ ಭಾಷೆ ತೆಗೆದುಕೊಂಡು, ಒಲ್ಲದ ಮನಸ್ಸಿನಿಂದಲೇ ಅನುಮತಿಯಿತ್ತರು.

ನರೇಂದ್ರನ ತಲೆಯಲ್ಲಿ ನೂರೆಂಟು ಆಲೋಚನೆಗಳು. ಈ ಆಶ್ಚರ್ಯಕರ ವ್ಯಕ್ತಿಯು ಇಚ್ಛಾಮಾತ್ರದಿಂದ ತನಗೆ ಅಂತಹ ನಿಗೂಢ ಅವಸ್ಥೆ ಬಂದೊದಗಿತು; ಮತ್ತು ಅವರು ಇಚ್ಛಿಸಿದೊಡನೆ ಅದು ಹೊರಟುಹೋಯಿತು! ಏನಿರಬಹುದು ಇದರ ಮರ್ಮ? ಇದೊಂದು ವಶೀಕರಣವೇ? ಅಥವಾ ಸಮ್ಮೋಹಿನೀ ವಿದ್ಯೆಯ ಪ್ರಯೋಗವೆ? ಛೆ, ಇವೆಲ್ಲ ಸಾಧ್ಯವೇ ಇಲ್ಲ. ಏಕೆಂದರೆ ಸಮ್ಮೋಹಿನಿ-ವಶೀಕರಣ ಇವೆಲ್ಲ ಪ್ರಭಾವ ಬೀರುವುದು ದುರ್ಬಲ ಮನಸ್ಸಿನವರ ಮೇಲೆ ಮಾತ್ರ. ತಾನಾದರೋ ಅಸಾಧಾರಣ ಗಟ್ಟಿಮನಸ್ಸಿನ ಯುವಕ! ಅಲ್ಲದೆ ತಾನು ಇವರನ್ನು ಕೇವಲ ಒಬ್ಬ ಮರುಳ ಎಂದು ಪರಿಗಣಿಸಿದವನು. ಹೀಗಿರುವಾಗ, ಈಗ ತನ್ನಲ್ಲಿ ಇದ್ದಕ್ಕಿದ್ದಂತೆ ಈ ಬಗೆಯ ಪರಿಣಾಮ ಹೇಗೆ ಆಗಿರಬಹುದು? ಯೋಚನೆ ಮಾಡಿಮಾಡಿ, ಕೊನೆಗೆ ಬೇರೇನೂ ತೋಚದೆ, 'ಇದೊಂದು ಬಿಡಿಸಲಾಗದ ಒಗಟು. ಇದನ್ನು ಬಿಡಿಸುವ ಪ್ರಯತ್ನವನ್ನು ಬಿಟ್ಟುಬಿಡುವುದೊಂದೇ ಮಾರ್ಗ' ಎಂದು ತೀರ್ಮಾನಿಸಿದ. ಆದರೆ ಮತ್ತಿನ್ನೆಂದೂ ತಾನು ಅವರ ಪ್ರಭಾವಕ್ಕೆ ಬಲಿಬೀಳದಂತೆ ಜಾಗರೂಕತೆಯಿಂದ ಇರ ಬೇಕು ಎಂದು ತನಗೆ ತಾನೇ ಹೇಳಿಕೊಂಡ. ಮತ್ತೆ ಮರುಕ್ಷಣಕ್ಕೆ ಅವನಿಗೇ ಅನ್ನಿಸಿತು— 'ಅಲ್ಲ, ನನ್ನ ಮನಸ್ಸು ಎಷ್ಟು ಗಟ್ಟಿ, ಎಷ್ಟು ದೃಢ! ಇಂತಹ ನನ್ನ ಮನಸ್ಸನ್ನೇ ಕ್ಷಣಾರ್ಧದಲ್ಲಿ ತಮ್ಮ ಹಿಡಿತಕ್ಕೆ ತೆಗೆದುಕೊಂಡುಬಿಟ್ಟರಲ್ಲ—ಅಂತಹ ಮನುಷ್ಯನನ್ನು ಕೇವಲ ಮರುಳ, ಹುಚ್ಚ ಅಂತ ಹೇಗೆ ತಾನೆ ಕರೆಯಲು ಸಾಧ್ಯ. . . ? ಆದರೆ ಇವರು ಮೊದಲು ನನ್ನನ್ನು ಕಂಡಾಗ ನಡೆದುಕೊಂಡ ರೀತಿಯನ್ನು ನೋಡಿದರೆ, ಯಾರಾದರೂ ಇವರನ್ನು ಹುಚ್ಚನೆಂದು ತಿಳಿಯುವುದೇ ನಿಜ. ಹೋಗಲಿ, ಇವರೇನಾದರೂ ಅವತಾರ ಪುರುಷರಾಗಿದ್ದರೆ ಇದನ್ನೆಲ್ಲ ಸಹಜ ಅಂತ ಒಪ್ಪಿಕೊಳ್ಳಬಹುದಾಗಿತ್ತು. ಆದರೆ ಅವತಾರ-ಗಿವತಾರ ಎನ್ನುವುದೆಲ್ಲ ಬಹಳ ದೂರದ ಮಾತು.' ಆ ದಿನವೆಲ್ಲ ಇಂತಹ ಆಲೋಚನೆಗಳೇ ಅವನ ಮನಸ್ಸನ್ನು ಕೊರೆಯುತ್ತಿದ್ದುವು. ಆ ಒಂದು ವಿಚಿತ್ರ ಘಟನೆಯ ಮರ್ಮವನ್ನು ಅರಿಯಲು ಅಸಮರ್ಥನನ್ನಾಗಿಸಿದ ಪರಿಸ್ಥಿತಿಯೇ ಅವನ ಬುದ್ಧಿಶಕ್ತಿಗೊಂದು ಬಲವಾದ ಏಟು! ಆದರೂ ಸ್ಥೈರ್ಯಗೆಡದೆ 'ಈ ನಿಗೂಢ ರಹಸ್ಯ ವನ್ನು ತಾನು ಭೇದಿಸಿಯೇ ಸಿದ್ಧ' ಎಂದು ದೃಢನಿಶ್ಚಯ ಮಾಡಿದ. ಎಷ್ಟಾದರೂ ಸಿಂಹದ ಮರಿಯಲ್ಲವೆ!

ಕೆಲದಿನಗಳು ಕಳೆದುವು. ನರೇಂದ್ರನಿಗೆ ಈಗ ಮತ್ತೊಮ್ಮೆ ದಕ್ಷಿಣೇಶ್ವರಕ್ಕೆ ಹೋಗಿ ಬರುವ ಮನಸ್ಸಾಗಿದೆ. ಆದರೆ, ತಾನು ಮತ್ತೆ ಆ ವಿಚಿತ್ರ ಮನುಷ್ಯನ ಸಮ್ಮೋಹಿನಿಗೆ ಒಳಗಾಗಲೇಬಾರದು ಎಂದು ಹಿಂದೆಯೇ ಮಾಡಿಕೊಂಡ ನಿರ್ಧಾರವನ್ನು ಈಗ ಮತ್ತೊಮ್ಮೆ ದೃಢಪಡಿಸಿಕೊಂಡ. ಮತ್ತು ಅದೇ ಭಾವದಲ್ಲೇ ದಕ್ಷಿಣೇಶ್ವರಕ್ಕೆ ಬಂದ. ಅವನನ್ನು ಕಂಡೊಡನೆಯೇ ಶ್ರೀರಾಮಕೃಷ್ಣರು ಉಲ್ಲಸಿತರಾದರು. ಅವನೊಡನೆ ಏಕಾಂತದಲ್ಲಿ ಮಾತನಾಡಬಯಸಿ, ಜನಜಂಗುಳಿಯಿದ್ದ ಆ ಜಾಗವನ್ನು ಬಿಟ್ಟು, ಸನಿಹ ದಲ್ಲೇ ಇದ್ದ ಯದುಮಲ್ಲಿಕ ಎಂಬ ಭಕ್ತನ ತೋಟಕ್ಕೆ ಅವನನ್ನು ಕರೆತಂದರು. ಅಲ್ಲಿ ಸ್ವಲ್ಪ ಹೊತ್ತು ಅಡ್ಡಾಡುತ್ತಿದ್ದು, ಬಳಿಕ ಒಂದೆಡೆ ಕುಳಿತರು. ನರೇಂದ್ರನೂ ಪಕ್ಕದಲ್ಲಿ ಕುಳಿತ. ಈಗ ಇವರು ಇನ್ನೇನು ಮಾಡಿಯಾರು ಎಂದು ಅವನು ಎಚ್ಚರದಿಂದ ಗಮನಿ ಸುತ್ತಿದ್ದಾನೆ. ಶ್ರೀರಾಮಕೃಷ್ಣರು ಮೆಲ್ಲನೆ ಭಾವಸಮಾಧಿಗೇರಿದರು. ಮತ್ತು ಆ ಸ್ಥಿತಿ ಯಲ್ಲೇ ಇದ್ದಕ್ಕಿದ್ದಂತೆ ಅವನನ್ನು ಸ್ಪರ್ಶಿಸಿದರು. ತಾನು ಈ ಬಾರಿ ಅವರ ಸ್ಪರ್ಶದಿಂದೆಲ್ಲ

ಪ್ರಭಾವಿತನಾಗಬಾರದು ಎಂದು ದೃಢನಿರ್ಧಾರ ಮಾಡಿಕೊಂಡು ಬಂದಿದ್ದವನಲ್ಲವೆ ಅವನು ? ಆದರೆ ಶ್ರೀರಾಮಕೃಷ್ಣರು ಸ್ಪರ್ಶಿಸಿದಾಗ ಅದೇನೂ ಕೆಲಸಕ್ಕೆ ಬರಲಿಲ್ಲ. ಎಷ್ಟು ಪ್ರಯತ್ನಪಟ್ಟರೂ ತನ್ನನ್ನು ನಿಯಂತ್ರಿಸಿಕೊಳ್ಳಲಾರದಾದ; ಬಾಹ್ಯಪ್ರಜ್ಞೆ ತಪ್ಪಿಯೇ ಹೋಯಿತು ! ಹಾಗೆಯೇ ಎಷ್ಟು ಹೊತ್ತು ಕಳೆಯಿತೋ ಅವನಿಗೆ ತಿಳಿಯಲಿಲ್ಲ. ಆಗ ಏನಾಯಿತೆಂಬುದೂ ಗೊತ್ತಾಗಲಿಲ್ಲ. ಯಾವಾಗಲೋ ಎಚ್ಚೆತ್ತಿಲಿದಾಗ ಶ್ರೀರಾಮಕೃಷ್ಣರು ತನ್ನ ಎದೆಯನ್ನು ನೇವರಿಸುತ್ತಿರುವುದನ್ನು ಕಂಡ. ಅವರು ತಮ್ಮ ಸ್ಪರ್ಶಮಾತ್ರದಿಂದ ಅವನ ಕುಂಡಲಿನೀಶಕ್ತಿಯನ್ನು ಜಾಗ್ರತಗೊಳಿಸಿ ಸಮಾಧಿಸ್ಥಿತಿಗೇರಿಸಿದ್ದರು; ಈಗ ಮತ್ತೆ ಅವನ ಮನಸ್ಸನ್ನು ಸಹಜಸ್ಥಿತಿಗೆ ತರುತ್ತಿದ್ದಾರೆ. ಆದರೆ ಆ ಸಿಂಹದ ಮರಿಗೆ ಇವೆಲ್ಲ ಇನ್ನೂ ತಿಳಿದಿಲ್ಲ. ಶ್ರೀರಾಮಕೃಷ್ಣರಿಗೆ ಮಾತ್ರ ಅಂದು ಅವನ ಸಂಬಂಧವಾಗಿ ಹಲವಾರು ವಿಷಯಗಳು ತಿಳಿದು ಬಂದುವು. ಈ ಕುರಿತಾಗಿ ಮುಂದೆ ಅವರೇ ಆಪ್ತ ಶಿಷ್ಯರೆದುರು ಹೇಳುತ್ತಾರೆ: "ನರೇಂದ್ರ ಆ ಸ್ಥಿತಿಯಲ್ಲಿದ್ದಾಗ ನಾನು ಅವನಿಗೆ ಹಲವಾರು ಪ್ರಶ್ನೆಗಳನ್ನು ಹಾಕಿದೆ. ಅವನ ಪೂರ್ವವೃತ್ತಾಂತವೇನು, ಅವನು ಎಲ್ಲಿ ವಾಸವಾಗಿದ್ದವನು, ಅವನು ಈ ಮರ್ತ್ಯಲೋಕದ ತನ್ನ ಜೀವಿತಾವಧಿಯಲ್ಲಿ ಏನೇನು ಕಾರ್ಯಗಳನ್ನು ಸಾಧಿಸ ಲಿದ್ದಾನೆ—ಎಂಬುದನ್ನೆಲ್ಲ ಕೇಳಿದೆ. ಅವನು ತನ್ನ ಅಂತರಾಳದೊಳಗೆ ಮುಳುಗಿ ಆ ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾದ ಉತ್ತರ ಕೊಟ್ಟ. ಆದರೆ ಆ ವಿಷಯಗಳನ್ನೆಲ್ಲ ನಾನು ಮೊದಲೇ ದರ್ಶನಗಳಲ್ಲಿ ಕಂಡು ತಿಳಿದುಕೊಂಡಿದ್ದೆ; ಈಗ ಅವನಿಂದಲೇ ಕೇಳಿ ದೃಢಪಡಿಸಿಕೊಂಡೆ ಅಷ್ಟೆ. ಅವೆಲ್ಲ ಬಹಳ ರಹಸ್ಯವಾದ ವಿಚಾರಗಳು. ಆದರೆ ಇಷ್ಟು ಮಾತ್ರ ಹೇಳಬಲ್ಲೆ: ಅವನೊಬ್ಬ ನಿತ್ಯಸಿದ್ಧನಾದ ಋಷಿ, ಧ್ಯಾನಸಿದ್ಧ; ತನ್ನ ನಿಜಸ್ವರೂಪ ವನ್ನು ತಿಳಿದೊಡನೆಯೇ, ಕೇವಲ ತನ್ನ ಇಚ್ಛಾಮಾತ್ರದಿಂದ ಯೋಗದ ಮೂಲಕ ಶರೀರ ವನ್ನು ತ್ಯಜಿಸಿಬಿಡುತ್ತಾನೆ."

ನರೇಂದ್ರನ ಕುರಿತಾಗಿ—ಅವನನ್ನು ಭೇಟಿಯಾಗುವ ಮೊದಲೂ ಅನಂತರವೂ—ಶ್ರೀರಾಮಕೃಷ್ಣರು ಕಂಡಿದ್ದ ದರ್ಶನಗಳು ಅನೇಕ; ಕೌತುಕಮಯ. ಅವುಗಳ ಲ್ಲೊಂದನ್ನು ಅವರೇ ಹೀಗೆ ಬಣ್ಣಿಸುತ್ತಾರೆ: *

"ಒಂದು ದಿನ ನನ್ನ ಮನಸ್ಸು ಸಮಾಧಿಯಲ್ಲಿ ಜ್ಯೋತಿರ್ಮಯ ಮಾರ್ಗವಾಗಿ ಎತ್ತರೆತ್ತರಕ್ಕೆ ಏರುತ್ತ ಹೋಗುವುದನ್ನು ಕಂಡೆ. ಶೀಘ್ರದಲ್ಲೇ ಅದು ಸೂರ್ಯ-ಚಂದ್ರ-ನಕ್ಷತ್ರಗಳಿಂದ ಕೂಡಿದ ಈ ಸ್ಥೂಲಜಗತ್ತನ್ನು ಅತಿಕ್ರಮಿಸಿ ಸೂಕ್ಷ್ಮವಾದ ಭಾವಜಗತ್ತನ್ನು ಪ್ರವೇಶಿಸಿತು. ಆ ಜಗತ್ತಿನ ಮತ್ತೂ ಸೂಕ್ಷ್ಮತರವಾದ ಸ್ತರಗಳ ಮೂಲಕ ಹಾದು ಹೋದಂತೆ, ಮಾರ್ಗದ ಇಕ್ಕೆಲಗಳಲ್ಲೂ ದೇವದೇವಿಯರ ವಿಚಿತ್ರ ರೂಪಗಳನ್ನು ಕಂಡೆ. ಕ್ರಮೇಣ ನನ್ನ ಮನಸ್ಸು ಇನ್ನೂ ಮೇಲೇರಿ, ಆ ಲೋಕದ ಹೊರಗಣ ಗಡಿಯನ್ನು ಮುಟ್ಟಿತು. ಅಲ್ಲೊಂದು ಜ್ಯೋತಿಯ ಆವರಣ ಹಬ್ಬಿಕೊಂಡು ಖಂಡ-ಅಖಂಡ ಜಗತ್ತುಗಳನ್ನು ಪ್ರತ್ಯೇಕಿಸುತ್ತದೆ. ಆ ಆವರಣವನ್ನೂ ದಾಟಿಕೊಂಡು ನನ್ನ ಮನಸ್ಸು ನಿರ್ಗುಣ-ನಿರಾಕಾರವಾದ ಅಖಂಡರಾಜ್ಯವನ್ನು ಪ್ರವೇಶಿಸಿತು. ದೇವದೇವಿಯರಿಗೂ

---

* "ಇವನ್ನೆಲ್ಲ ಅವರು ತಮ್ಮ ಅಪೂರ್ವ ಸರಳಶೈಲಿಯಲ್ಲಿ ತಿಳಿಸಿದ್ದರಾದರೂ ಅವನ್ನು ತದ್ವತ್ ಹಾಗೆಯೇ ಪುನರುದ್ಧರಿಸಲು ನಮ್ಮಿಂದ ಸಾಧ್ಯವೇ ಇಲ್ಲ" ಎಂದು ಸ್ವಾಮಿ ಶಾರದಾನಂದರು 'ಶ್ರೀರಾಮಕೃಷ್ಣ ಲೀಲಾ ಪ್ರಸಂಗ'ದಲ್ಲಿ ಬರೆಯುತ್ತಾರೆ.

ಸಹ ಇಲ್ಲಿ ಪ್ರವೇಶವಿಲ್ಲ. ಇಲ್ಲಿಗೆ ಅಡಿಯಿಡಲು ಭಯವೋ ಎಂಬಂತೆ ಅವರೆಲ್ಲ ಇಲ್ಲಿಗಿಂತ ಎಷ್ಟೋ ಕೆಳಗಿನ ಸ್ತರದಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ್ದಾರೆ. ಅಲ್ಲಿ ನಾನು ದಿವ್ಯ ಜ್ಯೋತಿರ್ಮಯ ಶರೀರಧಾರಿಗಳಾದ ಏಳು ಜನ ಋಷಿಗಳು ಸಮಾಧಿ ಮಗ್ನರಾಗಿ ಕುಳಿತಿರುವುದನ್ನು ಕಂಡೆ. ಜ್ಞಾನದಲ್ಲಾಗಲಿ ಪವಿತ್ರತೆಯಲ್ಲಾಗಲಿ ತ್ಯಾಗ ದಲ್ಲಾಗಲಿ ಪ್ರೇಮದಲ್ಲಾಗಲಿ ಅವರು, ಮಾನವಮಾತ್ರರ ವಿಚಾರ ಹಾಗಿರಲಿ, ದೇವತೆ ಗಳನ್ನೂ ಮೀರಿಸಿದ್ದಾರೆ ಎಂದು ನನಗನಿಸಿತು. ಆ ಸಪ್ತರ್ಷಿಗಳ ಮಹಿಮೆ-ಮಹತ್ತು ಗಳನ್ನು ಮನಗಾಣುತ್ತ ವಿಸ್ಮಿತನಾಗಿ ನಿಂತೆ. ಆಗ ಇದ್ದಕ್ಕಿದ್ದಂತೆ ಆ ಅಖಂಡ ಜ್ಯೋತಿರ್ಮಯ ರಾಜ್ಯದ ಒಂದಂಶ ಹಾಗೆಯೇ ಘನೀಭೂತವಾಗಿ ಒಂದು ದಿವ್ಯ ಶಿಶುವಿನ ರೂಪ ತಾಳಿತು. ಆ ಶಿಶು ಮೆಲ್ಲನೆ ಒಬ್ಬ ಋಷಿಯ ಬಳಿಗೆ ಬಂದಿತು. ತನ್ನ ಸುಂದರ ಸುಕೋಮಲ ಕರಗಳಿಂದ ಆತನ ಕೊರಳನ್ನು ಬಳಸಿ ಅಪ್ಪಿಕೊಂಡಿತು. ಮಾಧುರ್ಯದಲ್ಲಿ ವೀಣಾನಾದವನ್ನು ನಾಚಿಸುವ ತನ್ನ ಮಧುರ ಜೇನುಕಂಠದಿಂದ ಅವನನ್ನು ಕರೆಯುತ್ತ, ಸಮಾಧಿಮಗ್ನವಾದ ಅವನ ಮನಸ್ಸನ್ನು ತನ್ನೆಡೆಗೆ ಸೆಳೆಯುವ ಪ್ರಯತ್ನ ಮಾಡಿತು. ಶಿಶುವಿನ ಪ್ರೇಮಪೂರ್ಣ, ಕೋಮಲ ಸ್ಪರ್ಶ ಋಷಿಯನ್ನು ತುರೀಯ ಸ್ಥಿತಿಯಿಂದ ಕೆಳಗೆ ತಂದಿತು. ಅವನ ಕಣ್ರೆಪ್ಪೆಗಳು ಮೆಲ್ಲನೆ ಅರೆಬಿರಿದುವು. ಆ ದಿವ್ಯಶಿಶುವನ್ನೇ ಅವನು ಎವೆಯಿಕ್ಕದೆ ದೃಷ್ಟಿಸಿದ. ನೋಡುತ್ತಿದ್ದಂತೆಯೇ ಅವನ ಮುಖ ಪ್ರಫುಲ್ಲವಾಯಿತು. ಅದನ್ನು ಕಂಡು, ಈ ಶಿಶುವೇ ಆ ಋಷಿಯ ಹೃದಯದ ಸಿರಿ, ಮತ್ತು ಅವರಿಬ್ಬರದು ಅನಾದಿಕಾಲದ ಅವಿನಾ ಸಂಬಂಧ ಎಂದು ನಾನರಿತೆ. ಆ ದಿವ್ಯಶಿಶು ಅತ್ಯಂತ ಆನಂದಪಡುತ್ತ, 'ನಾನು ಭೂಮಿಗೆ ಹೋಗುತ್ತಿದ್ದೇನೆ, ನೀನೂ ನನ್ನೊಂದಿಗೆ ಬರಬೇಕು' ಎಂದು ಅವನಿಗೆಂದಿತು. ಋಷಿ ಮೌನವಾಗಿಯೇ ಇದ್ದ. ಆದರೆ ಅವನ ಪ್ರೇಮಪೂರಿತ ನೋಟವೇ ಅವನ ಸಮ್ಮತಿಯನ್ನು ಸೂಚಿಸುತ್ತಿತ್ತು. ಹಾಗೆಯೇ ನೆಟ್ಟದೃಷ್ಟಿಯಿಂದ ಆ ಶಿಶುವನ್ನು ನೋಡುತ್ತ ಅವನು ಪುನಃ ಸಮಾಧಿಸ್ಥ ನಾಗಿಬಿಟ್ಟ. ತರುವಾಯ, ಆತನ ದೇಹ-ಮನಸ್ಸುಗಳ ಒಂದಂಶವು ಉಜ್ವಲ ಜ್ಯೋತಿ ರೂಪ ತಾಳಿ ಭೂಮಿಯತ್ತ ಇಳಿಯುವುದನ್ನು ಕಂಡು ನಾನು ವಿಸ್ಮಿತನಾದೆ. ನರೇಂದ್ರ ನನ್ನು ನೋಡುತ್ತಿದ್ದಂತೆಯೇ ಗುರುತುಹಿಡಿದುಬಿಟ್ಟೆ—ಇವನೇ ಆ ಋಷಿ ಎಂದು."

"ಹಾಗಾದರೆ, ಆ ದಿವ್ಯಶಿಶು ಯಾರು?" ಎಂದು ಒಬ್ಬ ಭಕ್ತ ಕೇಳಿದಾಗ ಶ್ರೀರಾಮಕೃಷ್ಣರು ಮುಗುಳ್ನಗುತ್ತ ನುಡಿಯುತ್ತಾರೆ: "ನಾನೇ!"

ಶ್ರೀರಾಮಕೃಷ್ಣರ ಈ ದರ್ಶನ ಅದೆಷ್ಟು ಭವ್ಯ! ಇಲ್ಲಿ ನಮಗೆ ನರೇಂದ್ರ ಯಾರು ಎನ್ನುವುದರ ಪರಿಚಯವಾದಂತೆ ಶ್ರೀರಾಮಕೃಷ್ಣರ ನಿಜಸ್ವರೂಪದ ಪರಿಚಯವೂ ಆಗುತ್ತದೆ. ಅಖಂಡ ಸಚ್ಚಿದಾನಂದವೇ ಘನೀಭೂತವಾಗಿ ಅಲ್ಲಿ ಶಿಶುರೂಪ ತಾಳಿದರೆ, ಇಲ್ಲಿ ಶ್ರೀರಾಮಕೃಷ್ಣ ರೂಪ ತಾಳಿದೆ. ಆ ಋಷಿಯ ವ್ಯಕ್ತಿತ್ವದ ಒಂದು ಭಾಗವೇ ಈಗ ಈ ನರೇಂದ್ರ; ಮುಂದೆ ವೀರಸಂನ್ಯಾಸಿ ಸ್ವಾಮಿ ವಿವೇಕಾನಂದ!

ಇನ್ನೊಮ್ಮೆ ಶ್ರೀರಾಮಕೃಷ್ಣರು ಒಂದು ದರ್ಶನದಲ್ಲಿ ದೇದೀಪ್ಯಮಾನವಾದ ಜ್ಯೋತಿಯ ರೇಖೆಯೊಂದು ಕಾಶಿಯಿಂದ ಕಲ್ಕತ್ತಕ್ಕೆ ಆಕಾಶಮಾರ್ಗವಾಗಿ ಹೋದು ದನ್ನು ಕಂಡಿದ್ದರು. ಅದರ ಗೂಢಾರ್ಥವನ್ನು ಗ್ರಹಿಸಿದ ಅವರು, "ನನ್ನ ಪ್ರಾರ್ಥನೆ ನೆರವೇರಿತು! ನನ್ನವನಾದ ಆ ವ್ಯಕ್ತಿ ನನ್ನ ಬಳಿಗೆ ಬಂದೇ ಬರುತ್ತಾನೆ!" ಎಂದು ಉದ್ಗರಿಸಿದ್ದರು. ಯಾವುದು ಆ ಜ್ಯೋತಿ? ಯಾರು ಆ ವ್ಯಕ್ತಿ? ಕಾಶೀ ವಿಶ್ವೇಶ್ವರನೇ

ಆ ಜ್ಯೋತಿ, ನರೇಂದ್ರನೇ ಆ ವ್ಯಕ್ತಿ! ಹೀಗೆ ನರೇಂದ್ರನ ಆಗಮನದ ಕುರುಹುಗಳನ್ನು ಶ್ರೀರಾಮಕೃಷ್ಣರು ಮೊದಲೇ ಕಂಡುಕೊಂಡಿದ್ದರು.

ನರೇಂದ್ರ ಮೂರನೇ ಬಾರಿ ತಮ್ಮಲ್ಲಿಗೆ ಬಂದಾಗ ಅವರು ಆತನನ್ನು ಸಮಾಧಿ ಸ್ಥಿತಿಗೇರಿಸಿ ಅವನ ಪೂರ್ವಾಪರಗಳನ್ನೆಲ್ಲ ತಿಳಿದುಕೊಂಡರೂ ಅವನಿಗೆ ಮಾತ್ರ ಅದಾವುದನ್ನೂ ತಿಳಿಯಗೊಡಲೇ ಇಲ್ಲ! ಏಕಿರಬಹುದು? ಅದು ಶ್ರೀರಾಮಕೃಷ್ಣರ ಇಚ್ಛೆ. ಅವನು ಈಗಲೇ ತನ್ನ ಸ್ವಸ್ವರೂಪವನ್ನು ತಿಳಿಯುವಂತಾಗಬಾರದು ಎನ್ನುವುದು ಅವರ ಉದ್ದೇಶ. ಏಕೆಂದರೆ ಅವನಿನ್ನೂ ಅದಕ್ಕೆ ಸಿದ್ಧನಾಗಿಲ್ಲ. ಒಂದು ವೇಳೆ ಅಂತಹ ತಿಳಿವಳಿಕೆಯೇನಾದರೂ ಉಂಟಾದರೆ ಅವನು ಭಯಭೀತನಾಗಿ ತಲ್ಲಣಿಸಿಹೋಗುತ್ತಾನೆ ಎನ್ನುವುದನ್ನು ಅವರು ಮನಗಂಡಿದ್ದರು. ಅವನು ಎರಡನೆಯ ಸಲ ತಮ್ಮಲ್ಲಿಗೆ ಬಂದಿದ್ದಾಗಲೇ ಅಂತಹ ಅನುಭವವೊಂದು ಕಿಂಚಿತ್ ಆದಾಗ ಅವನು ಕಂಗಾಲಾಗಿ, 'ಇದೇನು ಮಾಡುತ್ತಿದ್ದೀರಿ! ನನಗೆ ಮನೆಯಲ್ಲಿ ತಾಯ್ತಂದೆಯರಿದ್ದಾರೆ' ಎಂದು ಗಟ್ಟಿಯಾಗಿ ಕೂಗಿಕೊಳ್ಳಲಿಲ್ಲವೆ? ಅವನು ಹಾಗೆ ತಲ್ಲಣಿಸಿದ್ದನ್ನು ಕಂಡಾಗ ಶ್ರೀರಾಮಕೃಷ್ಣರಿಗೇ ಸಂದೇಹವುಂಟಾಗಿಬಿಟ್ಟಿತ್ತು—ತಾವು ಹಿಂದೆ ದರ್ಶನದಲ್ಲಿ ಕಂಡಿದ್ದ ವ್ಯಕ್ತಿ ಇವನೆಯೇ?—ಎಂದು. ಆದ್ದರಿಂದಲೇ ಮೂರನೆಯ ಭೇಟಿಯಲ್ಲಿ ಅವರು ಅವನನ್ನು ಸಮಾಧಿಸ್ಥಿತಿಗೇರಿಸಿ, ಅವನ ವೃತ್ತಾಂತವನ್ನೆಲ್ಲ ಕೇಳಿ ಖಚಿತಪಡಿಸಿಕೊಂಡದ್ದು.

ನರೇಂದ್ರನಂತೂ ಈ ಅನುಭವದಿಂದ ಸಂಪೂರ್ಣ ತತ್ತರಿಸಿಹೋದ. ಈ ಅತಿಮಾನುಷ ಅಲೌಕಿಕ ಶಕ್ತಿಯ ಮುಂದೆ ತನ್ನ ಬುದ್ಧಿಶಕ್ತಿ-ಇಚ್ಛಾಶಕ್ತಿಗಳೆಲ್ಲ ತೀರಾ ದುರ್ಬಲವೆಂದು ಅವನಿಗೆ ಮನದಟ್ಟಾಯಿತು. ಹಾಗಲ್ಲದಿದ್ದರೆ ತಾನು ಅಷ್ಟೊಂದು ಎಚ್ಚರ ವಹಿಸಿಯೂ, ಅವರ ಪ್ರಭಾವಕ್ಕೆ ಒಳಗಾಗಲೇಬಾರದೆಂದು ದೃಢನಿಶ್ಚಯ ಮಾಡಿಯೂ ಏನೇನೂ ಪ್ರಯೋಜನವಾಗಲಿಲ್ಲವಲ್ಲ, ಹೇಗದು! ಅಧ್ಯಾತ್ಮದ ಬಗೆಗಿನ ಅವನ ಹಿಂದಿನ ಕಲ್ಪನೆಗಳ ಕಟ್ಟಡ ಬಿರುಕುಬಿಟ್ಟಿತು. ಅವನೀಗ ಆಲೋಚಿಸತೊಡಗಿದ—'ನಾನೆಂದುಕೊಂಡಿದ್ದಂತೆ ಶ್ರೀರಾಮಕೃಷ್ಣರು ಹುಚ್ಚರಂತೂ ಆಗಿರಲು ಸಾಧ್ಯವಿಲ್ಲ. ಮಾತ್ರವಲ್ಲ, ಅವರು ದೈವೀಶಕ್ತಿಸಂಪನ್ನರಾದ ಮಹಾಪುರುಷರೇ ಆಗಿರಬೇಕು. ನನ್ನಂತಹ ಯಾವ ವ್ಯಕ್ತಿಯ ಮನಸ್ಸನ್ನಾದರೂ ಇಚ್ಛಾಮಾತ್ರದಿಂದ ಪರಿವರ್ತಿಸಿ, ಉನ್ನತ ಸ್ತರಕ್ಕೇರಿಸುವ ಶಕ್ತಿ ಅವರಿಗಿರುವುದು ನಿಸ್ಸಂಶಯ. ಇಂತಹ ಮಹಾತ್ಮರ ಕೃಪೆಗೊಳಗಾಗಬೇಕಾದರೆ ಅದು ನನ್ನ ಪರಮಸೌಭಾಗ್ಯವೇ ಸರಿ.'

ಕಾಮಕಾಂಚನಗಳ ಬೆಡಗಿಗೆ ಮರುಳಾಗಿ ತಲೆಕೆಟ್ಟು ನಡೆದುಕೊಳ್ಳುವ ಲೋಕದ ಕೋಟಿಕೋಟಿ ಹುಚ್ಚು ಜನಗಳ ಮಧ್ಯೆ ತಲೆ ಸರಿಯಾಗಿರುವವರು ಇವರೊಬ್ಬರೇ ಎಂದು ಅವನಿಗನ್ನಿಸತೊಡಗಿತು. ಆದರೆ ಶ್ರೀರಾಮಕೃಷ್ಣರು ಆ ಮೊದಲ ಭೇಟಿಯಲ್ಲಿ ತನ್ನೊಡನೆ ವರ್ತಿಸಿದ ರೀತಿ ಮಾತ್ರ ಅವನಿಗೆ ಒಗಟಾಗಿ ತೋರುತ್ತಿತ್ತು. ತಾನು ಶ್ರೀರಾಮಕೃಷ್ಣರ ಲೀಲಾಸಹಚರನಾಗಿದ್ದುಕೊಂಡು, ಅವರ ಅದ್ಭುತ ಕಾರ್ಯಗಳಲ್ಲಿ ವಹಿಸಬೇಕಾದ ಮಹತ್ತರ ಪಾತ್ರವನ್ನು ಅವನು ಕಾಲಾಂತರದಲ್ಲಿ—ಇನ್ನೂ ಹಲವಾರು ಪರೀಕ್ಷೆ-ನಿರೀಕ್ಷೆಗಳಾದ ಮೇಲಷ್ಟೇ—ತಿಳಿಯಬೇಕಾಗಿದೆ.

ಅಂತೂ ಶ್ರೀರಾಮಕೃಷ್ಣರ ಆ ದಿವ್ಯ ಸ್ಪರ್ಶದ ಮುಹೂರ್ತದಿಂದಲೇ ನರೇಂದ್ರ ಅವರಿಗೆ ಸೇರಿದವನಾಗಿಬಿಟ್ಟ. ಅವನೀಗ ಶ್ರೀರಾಮಕೃಷ್ಣರ ಸ್ವತ್ತು. ಆದರೆ ಈ ಬಗೆಯ ಪರಾಧೀನತೆ ಬಂಧನಕಾರಿಯಲ್ಲ; ಶ್ರೀರಾಮಕೃಷ್ಣರ ಸಂಸ್ಪರ್ಶವೆನ್ನುವುದು ಮುಕ್ತಿ

ದಾಯಕವಾದದ್ದು. ಅವನು ತನ್ನ ಪೂರ್ವಗ್ರಹಗಳೆಂಬ ಬಂಧನಗಳಿಂದ ಮುಕ್ತನಾಗುವ ಸಂದರ್ಭವೊದಗಿದೆ.

ಹಿಂದೂ ಪರಂಪರೆಯಲ್ಲಿ ಗುರು-ಶಿಷ್ಯ ಬಾಂಧವ್ಯಕ್ಕೆ ಮಹತ್ವದ ಸ್ಥಾನ. ಆದರೆ ಹಿಂದೆ, ಆಧ್ಯಾತ್ಮಿಕ ಜೀವನದಲ್ಲಿ ಗುರುವಿಗೊಂದು ಪಾತ್ರವಿದೆಯೆಂದು ಒಪ್ಪಿದವನೇ ಅಲ್ಲ ನರೇಂದ್ರ. 'ಎಷ್ಟಾದರೂ ಮನುಷ್ಯ ಮನುಷ್ಯನೇ; ಅಧ್ಯಾತ್ಮವೋ ಬಹಳ ಸೂಕ್ಷ್ಮ. ಇಂತಹ ಸೂಕ್ಷ್ಮ ವಿಷಯದಲ್ಲಿ ಮನುಷ್ಯಸಹಜವಾದ ಸಕಲ ಲೋಪದೋಷಗಳಿಂದಲೂ ಕೂಡಿರುವಂಥವನೊಬ್ಬನು ಇನ್ನೊಬ್ಬ ವ್ಯಕ್ತಿಗೆ ಮಾರ್ಗದರ್ಶನ ನೀಡುವುದೆಂದರೇನು ! ಕುರುಡ ಕುರುಡನಿಗೆ ದಾರಿತೋರಬಲ್ಲನೆ ? ಅಂತಹ ಒಬ್ಬ 'ಗುರು'ವಿನ ಕೈಯಲ್ಲಿ ಸಿಕ್ಕಿಹಾಕಿಕೊಂಡು, ಅವನು ಗಳಹಿದ್ದನ್ನೆಲ್ಲ ಮರುಮಾತಿಲ್ಲದೆ ಒಪ್ಪಿಕೊಂಡು, ಅವನ ಗುಲಾಮನಾಗಿರುವುದಕ್ಕಿಂತ ಮೂರ್ಖತನ ಇನ್ನೊಂದಿಲ್ಲ'—ಇದು ನರೇಂದ್ರನ ಅಭಿಮತ. ಬ್ರಾಹ್ಮಸಮಾಜದ ಸಂಪರ್ಕದಿಂದಾಗಿ ಅವನ ಈ ನಂಬಿಕೆ ಮತ್ತಷ್ಟು ದೃಢವಾಗಿತ್ತು. ಆದರೆ ಈಗ ಎರಡು ಸಲ ಶ್ರೀರಾಮಕೃಷ್ಣರ ದಿವ್ಯ ಸ್ಪರ್ಶವಾಯಿತೋ ಇಲ್ಲವೋ, ಅದು ಬದಲಾಗಿಹೋಯಿತು. ದೇವರೊಬ್ಬನೇ ದಾರಿತೋರಬಲ್ಲವನು ಎಂದು ಅವನು ಹಿಂದೆ ವಾದಿಸುತ್ತಿದ್ದ. ಆದರೆ ಈಗ ಅವನಿಗೆ ಅನಿಸಿತು—'ಸಾಧಾರಣ ಜನಗಳ ಬುದ್ಧಿಗೆ ಎಟುಕಬಲ್ಲ ದೇವರ ಕಲ್ಪನೆಯಾದರೂ ಎಷ್ಟು ಸಂಕುಚಿತ! ಪ್ರೇಮ-ಪಾವಿತ್ರ್ಯಗಳಲ್ಲೂ ತ್ಯಾಗ-ತಪಸ್ಸುಗಳಲ್ಲೂ ಅಂತಹ 'ದೇವರ'ನ್ನೇ ಮೀರಿಸಬಲ್ಲ ವ್ಯಕ್ತಿಗಳು ಈ ಭೂಮಿಯಲ್ಲೇ ಇರಬಲ್ಲರು. ಅಂಥವರ ಸಂಖ್ಯೆ ತೀರ ಅಲ್ಪವಾದರೂ, ಅಂಥವರು ಜನ್ಮತಾಳುವುದಂತೂ ನಿಜ. ಅಂಥ ಮಹಾತ್ಮರು ನಿಜಕ್ಕೂ ಇತರ ಸಾಮಾನ್ಯರಿಗೆ ಗುರುಗಳಾಗಬಲ್ಲರು. ಮತ್ತು ಅವರನ್ನು ಗುರುವಾಗಿ ಸ್ವೀಕರಿಸುವುದರ ಮೂಲಕ ಇತರರು ಧನ್ಯರಾಗುವುದರಲ್ಲಿ ಆಶ್ಚರ್ಯವಿಲ್ಲ' ಎಂದು. ಆದ್ದರಿಂದ ಅವನೀಗ ಶ್ರೀರಾಮಕೃಷ್ಣರನ್ನು ಗುರುವೆಂದು ಸ್ವೀಕರಿಸಲು ಮಾನಸಿಕವಾಗಿ ಸಿದ್ಧನಾದ, ಆದರೆ ಒಂದು ಷರತ್ತಿನ ಮೇಲೆ—ತಾನು ತನ್ನ ವಿಚಾರಸ್ವಾತಂತ್ರ್ಯವನ್ನು ಮಾತ್ರ ಎಂದೆಂದಿಗೂ ಬಿಟ್ಟುಕೊಡಲಾರೆ ಎಂದು.

ಈ ವಿಚಾರಸ್ವಾತಂತ್ರ್ಯದ ಚಿಂತೆ ನರೇಂದ್ರನನ್ನು ಒಂದು ಗೀಳಿನಂತೆಯೇ ಹಿಡಿದುಕೊಂಡಿತ್ತು. ಅದಕ್ಕೆ ಪ್ರಬಲ ಕಾರಣವೂ ಇಲ್ಲದಿರಲಿಲ್ಲ. ಅವನು ಮನುಷ್ಯರ ವರ್ತನೆಯನ್ನು ಚೆನ್ನಾಗಿ ಗಮನಿಸಿದ್ದವನು. ಅವನು ತನ್ನೊಳಗೇ ಹೇಳಿಕೊಂಡ—'ಪ್ರಬಲ ವ್ಯಕ್ತಿತ್ವದ ಇಂತಹ ಮಹಾಪುರುಷರ ಸಂಪರ್ಕಕ್ಕೆ ಬಂದಾಗ ಇತರ ಸಾಮಾನ್ಯರು ತಮ್ಮ ವಿವೇಚನಾಶಕ್ತಿಯನ್ನು ಉಪಯೋಗಿಸಹೋಗದೆ, ಅವರು ಹೇಳುವುದನ್ನು ಅರ್ಧ ಪರೀಕ್ಷೆ ಮಾಡಿ, ಇಲ್ಲವೆ ಪರೀಕ್ಷೆಯನ್ನೇ ಮಾಡದೆ ನಂಬಿಬಿಡುತ್ತಾರೆ. ನಾನು ಮಾತ್ರ ಎಷ್ಟೇ ಕಷ್ಟವಾಗಲಿ, ಇಂತಹ ಅವಿವೇಕಕ್ಕೆ ಎಡೆಗೊಡಲಾರೆ. ಶ್ರೀರಾಮಕೃಷ್ಣರು ಪಡೆದುಕೊಳ್ಳುತ್ತಾರೆಂದು ಹೇಳುವ ದರ್ಶನಗಳನ್ನಾಗಲಿ, ಅನುಭವಗಳನ್ನಾಗಲಿ—ನನಗೇ ಅವು ಲಭ್ಯವಾದಹೊರತು, ಇಲ್ಲವೆ ಆ ಮಾತುಗಳನ್ನು ಅತಿ ತೀಕ್ಷ್ಣವಾದ ಪರೀಕ್ಷೆಗೆ ಒಳಪಡಿಸಿದಹೊರತು—ನಂಬಲಾರೆ. ಇದರಿಂದಾಗಿ ಅವರ ಅಸಮಾಧಾನಕ್ಕೆ ಗುರಿಯಾಗಬೇಕಾದರೂ ಸರಿಯೆ. . .'

ಮನದಲ್ಲಿ ಆಳವಾಗಿ ಬೇರೂರಿರುವ ನಂಬಿಕೆಗಳನ್ನು ಬದಲಾಯಿಸಿಕೊಳ್ಳ ಬೇಕೆಂದರೆ ಎಂಥವರಿಗಾದರೂ ಕಷ್ಟವೇ. ದೃಢಚಿತ್ತರಾದವರ ವಿಷಯದಲ್ಲಿ ಇದು ಇನ್ನೂ ಸತ್ಯ. ಆಗ ಅಂಥವರ ಮನಸ್ಸು ತೀವ್ರವಾದ ಆಂತರಿಕ ಸಂಘರ್ಷವನ್ನು ಅನುಭವಿಸುತ್ತದೆ. ನರೇಂದ್ರನಿಗೊದಗಿದ ಸ್ಥಿತಿ ಇಂಥದು. ಅವನು ಶ್ರೀರಾಮಕೃಷ್ಣರ ಪವಾಡಶಕ್ತಿಯನ್ನು ಕಣ್ಣಾರೆ ಕಾಣುತ್ತಿದ್ದಾನೆ; ಆದರೂ ಅವರನ್ನು ಸಂಪೂರ್ಣವಾಗಿ ಸ್ವೀಕರಿಸಲಾರ. ಅವರ ಅಯಸ್ಕಾಂತೀಯ ವ್ಯಕ್ತಿತ್ವ ಒಂದೇ ಸಮನೆ ಸೆಳೆಯುತ್ತಿದೆ. ಆದರೆ ಆ ಸೆಳೆತಕ್ಕೆ ಒಳಗಾಗದೆ ದೂರವೇ ನಿಲ್ಲುವ ಪ್ರಯತ್ನ ನಡೆಸಿದ್ದಾನೆ.

ನರೇಂದ್ರನ ಎಲ್ಲ ಬಗೆಯ ಮಾನಸಿಕ ಹೋರಾಟವನ್ನು, ಸಂಶಯಗಳ ತುಮುಲ ವನ್ನು, ಭಾವಗಳ ಬಿರುಗಾಳಿಯನ್ನು ಶ್ರೀರಾಮಕೃಷ್ಣರು ಕಾಣುತ್ತಿದ್ದರು; ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಿದ್ದರು. ಏಕೆಂದರೆ ಅವರೂ ತಮ್ಮ ಸಾಧನಾಕಾಲದಲ್ಲಿ ಇಂತಹದೇ ಸ್ಥಿತಿಯನ್ನು ಹಾದುಹೋದವರಲ್ಲವೆ ? ಈಗ ನರೇಂದ್ರನಲ್ಲಿ ಅದೇ ತೀವ್ರತೆ ಯನ್ನು ಕಂಡಾಗ ಅವರಿಗಾಗುತ್ತಿದ್ದುದು ಸಂತೋಷವೇ. ಆತ್ಮಜಾಗೃತಿಯ ಸಮಯದಲ್ಲಿ ಸ್ವಾಭಾವಿಕವಾಗಿಯೇ ಉದ್ಭವಿಸುವ ಮಹಾ ಸಮರ ಇದು.

ಆದರೆ, ಸರ್ವಧರ್ಮಗಳನ್ನೂ ಸಮರ್ಥಿಸಿ, ಅವುಗಳ ಸಮನ್ವಯವನ್ನು ಬಿತ್ತರಿಸಲೆಂದು, ಮತ್ತು ಇಂದ್ರಿಯಭೋಗವೇ ಪರಮಪುರುಷಾರ್ಥವೆಂದು ಭ್ರಮಿ ಸುವ ಜನಕೋಟಿಗೆ ಭಗವದಾನಂದ ಪ್ರಾಪ್ತಿಯ ಮಾರ್ಗವನ್ನು ತೋರಿಸಿಕೊಡಲೆಂದು ಅವತಾರವೆತ್ತಿದವರು ಶ್ರೀರಾಮಕೃಷ್ಣರು. ಅವರ ಈ ಲೀಲಾಕಾರ್ಯವನ್ನು ಯಶಸ್ವಿ ಯಾಗಿ ಪೂರ್ಣಗೊಳಿಸುವುದೇ ನರೇಂದ್ರನ ಜನ್ಮೋದ್ದೇಶ. ಇದನ್ನು ಅರಿತಿದ್ದವರು ಶ್ರೀರಾಮಕೃಷ್ಣರೊಬ್ಬರೇ. ಈಗ ತಾವು ನರೇಂದ್ರನನ್ನು ಕೈಗೆ ತೆಗೆದುಕೊಂಡು ತಮಗೆ ಬೇಕಾದಂತೆ ರೂಪಿಸದಿದ್ದರೆ ಅವನು ದಾರಿತಪ್ಪಿಯಾನು ಎಂದು ಅವರು ಊಹಿಸಿದರು. ಏಕೆಂದರೆ ಅವನೊಳಗೆ ಪ್ರಚಂಡ ಶಕ್ತಿ ಮಹಾಪೂರವಾಗಿ ಹರಿಯುತ್ತಿತ್ತು. ಅವನೇನಾ ದರೂ ಅತ್ಯುನ್ನತ ಸಾಕ್ಷಾತ್ಕಾರವನ್ನು ಪಡೆದುಕೊಂಡು, ಸಕಲ ಮತಧರ್ಮಗಳ ಕುರಿ ತಾಗಿ ತಮ್ಮಂತೆಯೇ ಪರಮ ಉದಾರವೂ ಉದಾತ್ತವೂ ಆದ ದೃಷ್ಟಿಕೋನವನ್ನು ರೂಪಿಸಿಕೊಳ್ಳದಿದ್ದರೆ ತನ್ನೊಳಗಿನ ಆ ಶಕ್ತಿಯ ಒತ್ತಡದಿಂದ ಅವನು ಹೊಸದೊಂದು ಮತವನ್ನೋ ಪಂಥವನ್ನೋ ಸ್ಥಾಪಿಸುತ್ತಾನೆ; ಜಗತ್ತಿನ ಇತರ ಅನೇಕ ಧರ್ಮಗುರು ಗಳಲ್ಲಿ ಒಬ್ಬನಾಗಿ ಪ್ರಸಿದ್ಧಿ ಪಡೆಯುತ್ತಾನೆ; ಆದರೆ ಅವನಿಂದ ಅದಕ್ಕಿಂತ ಘನತರವಾದ ಉದ್ದೇಶವಾವುದೂ ಈಡೇರುವುದಿಲ್ಲ ಎಂಬುದು ಶ್ರೀರಾಮಕೃಷ್ಣರಿಗೆ ತೋರಿತು. ಮತ ಪಂಥಗಳ ಉಗಮದ ಬಗ್ಗೆ ಅವರೇ ಹೇಳುತ್ತಿದ್ದರು: "ನೀರು ಹರಿಯದೆ ನಿಂತಿರುವ ಸಣ್ಣಪುಟ್ಟ ಕೆರೆಕುಂಟೆಗಳಲ್ಲೇ ಕಳೆಗಿಡಗಳೆಲ್ಲ ಬೆಳೆಯುವುದು. ಹರಿಯುವ ನದಿಗಳಲ್ಲಿ ಅವು ಕಾಣಸಿಗಲಾರವು. ಹಾಗೆಯೇ ಮನುಷ್ಯನೂ ಧಾರ್ಮಿಕ ಸತ್ಯದ ಯಾವುದೋ ಒಂದೊಂದು ಅಂಶವನ್ನು ಹಿಡಿದುಕೊಂಡು ಅಷ್ಟರಲ್ಲೇ ತೃಪ್ತನಾದರೆ ಅಲ್ಲಿಯೇ ಸಣ್ಣಪುಟ್ಟ ಮತಗಳು ಹುಟ್ಟಿಕೊಳ್ಳುತ್ತವೆ" ಎಂದು. ನರೇಂದ್ರನೂ ಇಂತಹ ಹೊಸ

ದೊಂದು ಮತವನ್ನು ಹುಟ್ಟುಹಾಕಿದರೆ ಇಂದಿನ ಆಧುನಿಕ ಜಗತ್ತು ಯಾವ ಪರಮೋದಾರವಾದ ಆಧ್ಯಾತ್ಮಿಕ ತತ್ತ್ವಕ್ಕೆ ಹಸಿದಿದೆಯೋ ಅದನ್ನವನು ಜಗತ್ತಿಗೆ ನೀಡಲಾರ; ಹಾಗೇನಾದರೂ ಆದರೆ ಮಾತ್ರ ಅದು ಜಗದ ಜನರ ದೊಡ್ಡ ದೌರ್ಭಾಗ್ಯವಾಗುತ್ತದೆ ಎಂದು ಶ್ರೀರಾಮಕೃಷ್ಣರು ಕಂಡುಕೊಂಡರು. ಆದ್ದರಿಂದ ಹಾಗಾಗದಂತೆ ತಡೆದು, ಪರಿಪೂರ್ಣ ಜ್ಞಾನವನ್ನು ಪಡೆದುಕೊಳ್ಳಲು ಸಮರ್ಥನಾದ ವ್ಯಕ್ತಿಯಾಗುವಂತೆ ನರೇಂದ್ರನಿಗೆ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ಅವರೀಗ ತೊಡಗಿದರು.

ಶ್ರೀರಾಮಕೃಷ್ಣರಿಂದ ಶಿಕ್ಷಣ ಪಡೆಯುತ್ತ, ಅವರ ಪವಿತ್ರ ಸನ್ನಿಧಿಯಲ್ಲಿ ನರೇಂದ್ರ ನಡೆಸಿದ ಜೀವನವೆನ್ನುವುದು ಆಧ್ಯಾತ್ಮಿಕ ಭಾವಜೀವನ; ಉನ್ನತ ಸಾಕ್ಷಾತ್ಕಾರಗಳ ಜೀವನ; ಆಧ್ಯಾತ್ಮಿಕ ಅನುಭವಪೂರ್ಣ ಜೀವನ. ಅವರಿಬ್ಬರ ನಡುವಣ ಬಾಂಧವ್ಯದ ಆಳ-ವೈಶಾಲ್ಯಗಳನ್ನು, ಜಟಿಲತೆ-ಸೂಕ್ಷ್ಮತೆಗಳನ್ನು ಬಣ್ಣಿಸಲಾಗದು. ಆ ಗುರುವೂ ಅದ್ಭುತ, ಈ ಶಿಷ್ಯನೂ ಅದ್ಭುತ. ಕಠೋಪನಿಷತ್ತು ಹೇಳುವಂತೆ, 'ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ'—ಎಂದರೆ, ಆತ್ಮವಿದ್ಯೆಯನ್ನು ಬೋಧಿಸುವ ಗುರುವೂ ಆಶ್ಚರ್ಯಕರನಾಗಿರಬೇಕು; ಕಲಿಯುವ ಶಿಷ್ಯನೂ ಅತ್ಯಂತ ಕುಶಲಿಯಾಗಿರಬೇಕು. ಶ್ರೀರಾಮಕೃಷ್ಣ-ನರೇಂದ್ರರ ವಿಷಯದಲ್ಲಿ ಈ ಉಪನಿಷದ್ವಾಕ್ಯ ನಿಜಕ್ಕೂ ಅನ್ವರ್ಥವಾಗಿದೆ.

ಅತ್ಯುನ್ನತ ಸಾಕ್ಷಾತ್ಕಾರ ಮಾಡಿಕೊಂಡು ಹೃದಯದ ತುಂಬ ಅನುಭವಗಳನ್ನು ತುಂಬಿಕೊಂಡಿರುವ ಲೋಕಗುರುಗಳು, ಸಾಮರ್ಥ್ಯಶಾಲೀಶಿಷ್ಯನೊಬ್ಬನು ದೊರೆತಾಗ ಅವನಿಗೆ ತಮ್ಮ ಅಮೂಲ್ಯ ಅನುಭವಾಮೃತವನ್ನು ಧಾರೆಯೆರೆಯಲು ಕಾತರರಾಗಿರುತ್ತಾರೆ. ಶ್ರೀರಾಮಕೃಷ್ಣರೂ ಕಾದುಕುಳಿತಿದ್ದರು; ಅದಕ್ಕೆ ಸರಿಯಾಗಿ ಸಾಮರ್ಥ್ಯಶಾಲೀ ಶಿಷ್ಯ ನರೇಂದ್ರ ಬಂದೂಬಿಟ್ಟ; ಅವರು ತಮ್ಮ ಅನುಭವಾಮೃತವನ್ನು ಧಾರೆಯೆರೆಯಲೂ ಉತ್ಸಾಹದಿಂದ ಮುಂದಾದರು. ಆದರೆ ತಾವು ಅವನಿಗೆ ನಿರ್ವಿಕಲ್ಪ ಸಮಾಧಿಯ ಅನುಭವದ ರುಚಿಯನ್ನು ತೋರಿಸಹೋದಾಗ ಅವನು ಹೆದರಿ 'ನನಗೆ ಮನೆಯಲ್ಲಿ ತಾಯ್ತಂದೆಯರಿದ್ದಾರೆ, ಹೋಗಬೇಕು' ಎಂದು ಕೂಗಿಕೊಂಡದ್ದನ್ನು ನೆನಪಿಸಿಕೊಂಡು ಶ್ರೀರಾಮಕೃಷ್ಣರು ಅವನನ್ನು ಆಗಾಗ ಛೇಡಿಸುತ್ತಿದ್ದರು: "ನೋಡಯ್ಯಾ, ಒಮ್ಮೆ ಒಬ್ಬ ಮನುಷ್ಯ ಸತ್ತು ಪ್ರೇತವಾದನಂತೆ. ಆ ಪ್ರೇತಕ್ಕೆ ಯಾರೂ ಜೊತೆ ಸಿಗದೆ ಒಂಟಿಯಾಗಿಯೇ ತಿರುಗುತ್ತಿತ್ತು. ಯಾರಾದರೂ ಸತ್ತರು ಅಂತ ಕೇಳಿ ಬಂದರೆ ಸಾಕು, ಅಲ್ಲಿಗೆ ಓಡುತ್ತಿತ್ತು—ತನಗೊಬ್ಬ ಜೊತೆಗಾರ ಸಿಕ್ಕಾನು ಅಂತ. ಆದರೆ, ಪಾಪ, ಅದಕ್ಕೆ ಪ್ರತಿಸಲವೂ ನಿರಾಸೆಯಾಗುತ್ತಿತ್ತು. ಏಕೆಂದರೆ, ಆ ಸತ್ತ ವ್ಯಕ್ತಿ ಯಾವುದೋ ಒಂದು ಪುಣ್ಯಕಾರ್ಯ ಮಾಡಿದ್ದರಿಂದ ಮುಕ್ತನಾಗಿಹೋಗಿಬಿಡುತ್ತಿದ್ದ. ಆದ್ದರಿಂದ ಆ ಪ್ರೇತ ಪೆಚ್ಚುಮೋರೆ ಹಾಕಿಕೊಂಡು ಹಿಂದಿರುಗಬೇಕಾಗುತ್ತಿತ್ತು. ಈಗ, ನನ್ನ ಕಥೆಯೂ ಹಾಗೇ ಆಗಿದೆ. ನೀನು ಬಂದದ್ದನ್ನು ಕಂಡು ನಾನೆಣಿಸಿದೆ, 'ಓ, ನನಗೊಬ್ಬ ಸ್ನೇಹಿತ ಸಿಕ್ಕಿದ!' ಅಂತ. ಆದರೆ ನೀನು ಕೂಡ 'ನನಗೆ ಮನೆಯಲ್ಲಿ ತಾಯ್ತಂದೆಯರಿದ್ದಾರೆ' ಎಂದುಬಿಟ್ಟೆ. ನಾನೀಗ ಆ ಪ್ರೇತದ ಹಾಗೆ ಯಾರೂ ಜೊತೆಗಾರರೇ ಇಲ್ಲದೆ ಒಂಟಿಯಾಗಿಯೇ ಇರಬೇಕಾಗಿದೆ!"

ಆದರೆ ಶ್ರೀರಾಮಕೃಷ್ಣರು ಆ ಪ್ರೇತದಂತೆ ನಿರಾಶರಾಗಿ ಕುಳಿತುಕೊಳ್ಳುವವರರಲ್ಲ. ಅವರು ನರೇಂದ್ರನನ್ನು ತಮ್ಮ ಕೈಯಿಂದ ತಪ್ಪಿಸಿಕೊಳ್ಳಲು ಬಿಟ್ಟರೆ ತಾನೆ? ಆತನನ್ನು

ಅವರು ಬಲವಾಗಿ ಹಿಡಿದಿಟ್ಟುಕೊಂಡುಬಿಟ್ಟಿದ್ದರು!

ನರೇಂದ್ರನನ್ನು ಶ್ರೀರಾಮಕೃಷ್ಣರೊಂದಿಗೆ ಬಿಗಿದಿಟ್ಟ ಆ ಕಟ್ಟು ಯಾವುದಿರ ಬಹುದು? ಅದು ಅವರ ಪ್ರೇಮಬಂಧನ. ಆದರೆ, ಆ ಬಂಧನದ ಸ್ವರೂಪವನ್ನು ಮಾತ್ರ ಅರಿಯಬಲ್ಲವರಿಲ್ಲ, ಬಣ್ಣಿಸಬಲ್ಲವರಿಲ್ಲ. ಅದೊಂದು ಪ್ರವಾಹ; ನರೇಂದ್ರನನ್ನು ತರಗೆಲೆಯಂತೆ ಕೊಚ್ಚಿಕೊಂಡುಹೋದ ಪ್ರೇಮಪ್ರವಾಹ. ಶ್ರೀರಾಮಕೃಷ್ಣರು ನರೇಂದ್ರ ನನ್ನು ಕಂಡ ಪ್ರಥಮ ಘಳಿಗೆಯಲ್ಲೇ ಅದರ ಉಗಮವಾಯಿತು. ಅದು ಭರತ-ಇಳಿತ ಗಳಿಲ್ಲದ ನಿರಂತರ ಮಹಾಪೂರ. ನರೇಂದ್ರ ಜೊತೆಗಿದ್ದಾಗ ಅವರಿಗಾಗುತ್ತಿದ್ದ ಆನಂದ ವನ್ನಾಗಲಿ, ಅವನು ಕೆಲಕಾಲ ಕಣ್ಮರೆಯಾಗಿದ್ದರೆ ಅವರು ಅನುಭವಿಸುತ್ತಿದ್ದಂತಹ ದುಗುಡ-ದುಮ್ಮಾನವನ್ನಾಗಲಿ ಮಾನುಷ ಇತಿಹಾಸದಲ್ಲೇ ಯಾರೂ ಕಂಡಿರಲಾರರು.

ಮೊದಮೊದಲಿಗೆ ಅವನು ವಾರಕ್ಕೊಮ್ಮೆಯೋ ಪಕ್ಷಕ್ಕೊಮ್ಮೆಯೋ ದಕ್ಷಿಣೇ ಶ್ವರಕ್ಕೆ ಬಂದುಹೋಗುತ್ತಿದ್ದ. ಕ್ರಮೇಣ ಈ ಅಂತರ ಕಡಿಮೆಯಾಗುತ್ತಬಂದಿತು. ವಾರಕ್ಕೆ ಎರಡು-ಮೂರು ಸಲ, ಅವಕಾಶವಾದಾಗ ಇನ್ನೂ ಹೆಚ್ಚು ಸಲ ಬರತೊಡಗಿದ. ರಜೆ ಯಲ್ಲಂತೂ ಮೂರ್‍ನಾಲ್ಕು ದಿನ ಅಲ್ಲಿಯೇ ಇದ್ದುಬಿಡುವುದೂ ಸರ್ವೇಸಾಮಾನ್ಯ ವಾಯಿತು. ಆದರೆ ಆಗಾಗ ಕಾರಣಾಂತರದಿಂದ ದಕ್ಷಿಣೇಶ್ವರಕ್ಕೆ ಚಕ್ಕರ್ ಕೊಡುವುದೂ ಇತ್ತು. ಆದರೆ ಶ್ರೀರಾಮಕೃಷ್ಣರು ಅದಕ್ಕೆ ಹೆಚ್ಚು ಅವಕಾಶ ಕೊಡುತ್ತಿರಲಿಲ್ಲ. ಯಾರೊಡನೆಯಾದರೂ ಮತ್ತೆಮತ್ತೆ ಹೇಳಿಕಳಿಸಿ ಅವನನ್ನು ಕರೆಸಿಕೊಳ್ಳುತ್ತಿದ್ದರು.

ಶ್ರೀರಾಮಕೃಷ್ಣರು ನರೇಂದ್ರನ ಮೇಲಿರಿಸಿದ್ದ ವಿಶ್ವಾಸ, ಪ್ರೇಮ, ಮೆಚ್ಚುಗೆ, ಆತ್ಮೀ ಯತೆ—ಇವು ಅವರ ಒಂದೊಂದು ಮಾತಿನಲ್ಲೂ ಒಂದೊಂದು ಕೃತಿಯಲ್ಲೂ ಎದ್ದೆದ್ದು ಕಾಣುತ್ತಿತ್ತು. ಅದನ್ನು ಕಂಡವರಿಗೆಲ್ಲ ಆಶ್ಚರ್ಯ, ಕುತೂಹಲ. 'ಎಲಾ, ಈ ಕಾಲೇಜು ಹುಡುಗನಲ್ಲಿ ಅಂಥದೇನನ್ನು ಕಂಡರಪ್ಪ ಇವರು!' ಎಂದು ಬೆರಗಾಗುವವರೇ ಎಲ್ಲ. ಅವರಿವರಿಗಿರಲಿ, ಸ್ವತಃ ನರೇಂದ್ರನಿಗೂ ಶ್ರೀರಾಮಕೃಷ್ಣರ ವರ್ತನೆಯಿಂದ ಇರುಸು ಮುರುಸಾಗುತ್ತಿತ್ತು. ಕೆಲವೊಮ್ಮೆ ಅವನು 'ಇವೆಲ್ಲ ಆ ಮುದುಕನ ಭ್ರಮೆ' ಎನ್ನುತ್ತಿದ್ದ. ಆದರೆ ಇನ್ನು ಕೆಲವು ಸಲ ಅವರ ನಿಸ್ವಾರ್ಥ ಪ್ರೇಮಕ್ಕೆ ಪ್ರತಿಸ್ಪಂದಿಸಿ ಓಗೊಡುತ್ತಿದ್ದ. ಒಮ್ಮೆ ಅನೇಕ ದಿನಗಳವರೆಗೆ ನರೇಂದ್ರ ಕಾಣಿಸಿಕೊಳ್ಳಲೇ ಇಲ್ಲ. ಶ್ರೀರಾಮಕೃಷ್ಣರು ಬಹಳ ವ್ಯಾಕುಲರಾಗಿ ಅವನನ್ನು ಇದಿರುನೋಡುತ್ತಿದ್ದರು. ಒಂದು ದಿನ ಸಂಜೆಯ ಹೊತ್ತಿಗೆ ರಾಮದಯಾಲ ಎಂಬೊಬ್ಬ ಭಕ್ತ, ರಾಖಾಲ ಮತ್ತು ಬಾಬು ರಾಮ ಎಂಬೊಬ್ಬ ತರುಣ—ಇಷ್ಟು ಜನ ಬಂದರು. ಬಾಬುರಾಮ ದಕ್ಷಿಣೇಶ್ವರಕ್ಕೆ ಬಂದದ್ದು ಆ ದಿನವೇ ಮೊದಲು. ಶ್ರೀರಾಮಕೃಷ್ಣರು ಮೂವರನ್ನೂ ವಿಶ್ವಾಸದಿಂದ ಮಾತನಾಡಿ ಸಿದರು; ಬಳಿಕ ರಾಮದಯಾಲನನ್ನು ಕಾತರದಿಂದ ಕೇಳಿದರು: "ಏನಪ್ಪ, ನರೇಂದ್ರ ನನ್ನು ನೋಡಿದೆಯಾ? ಹೇಗಿದ್ದಾನೆ ಅವನು, ಆರೋಗ್ಯದಿಂದಿದ್ದಾನಷ್ಟೆ?"

"ಹೌದು, ನೋಡಿದೆ, ಚೆನ್ನಾಗಿಯೇ ಇದ್ದಾನೆ."

"ನೋಡು, ಅವನಿಲ್ಲಿಗೆ ಬಂದು ಎಷ್ಟೊಂದು ದಿನ ಆಗಿಹೋಯಿತು! ಅವನನ್ನು ನೋಡಬೇಕು ಅಂತ ನನಗೆ ತುಂಬ ಇಚ್ಛೆಯಾಗುತ್ತಿದೆ. ದಯವಿಟ್ಟು, ಅವನಿಗೆ ಇಲ್ಲಿ ಗೊಮ್ಮೆ ಬಂದುಹೋಗಲು ತಿಳಿಸುತ್ತೀಯಾ?"

ರಾಮದಯಾಲ ಸರಿಯೆಂದ. ಆ ಸಂಜೆ ಬಹಳ ಆನಂದದಿಂದ ಭಗವದ್ವಿಚಾರ ದಲ್ಲಿ ಕಳೆಯಿತು. ರಾತ್ರಿ ಹತ್ತುಗಂಟೆಗೆ ಮೂವರೂ ಅಲ್ಲೇ ಊಟ ಮಾಡಿದರು. ರಾಮ

ದಯಾಲನೂ ಬಾಬುರಾಮನೂ ಪಕ್ಕದ ವರಾಂಡದಲ್ಲಿ ಮಲಗಿದರು. ಒಂದು ತಾಸೂ ಕಳೆದಿಲ್ಲ, ಅಷ್ಟರಲ್ಲೇ ಶ್ರೀರಾಮಕೃಷ್ಣರು ಎದ್ದು ಅವರಿದ್ದಲ್ಲಿಗೆ ಬಂದು ಮೃದುವಾಗಿ ಕರೆದರು: "ಓ, ನಿದ್ದೆ ಹತ್ತಿತೇನು ?" ತಕ್ಷಣ ಇಬ್ಬರೂ, "ಇಲ್ಲ, ಇಲ್ಲ" ಎನ್ನುತ್ತ ಗಡಿಬಿಡಿಯಿಂದ ಎದ್ದರು. ನೋಡುತ್ತಾರೆ, ಶ್ರೀರಾಮಕೃಷ್ಣರು ಪುಟ್ಟ ಹುಡುಗನಂತೆ ತಮ್ಮ ಮೈಮೇಲಿನ ಬಟ್ಟೆಯನ್ನು ಮುದ್ದೆಮಾಡಿ ಕಂಕುಳಲ್ಲಿಟ್ಟುಕೊಂಡು ನಿಂತಿದ್ದಾರೆ!

ಶ್ರೀರಾಮಕೃಷ್ಣರು (ರಾಮದಯಾಲನಿಗೆ): "ಏನಪ್ಪ, ನರೇಂದ್ರನನ್ನು ಬಹಳ ದಿನಗಳಿಂದಲೂ ನೋಡದೆ ನನ್ನ ಹೃದಯವನ್ನೇ ಯಾರೋ (ತಮ್ಮ ಕೈಯಲ್ಲಿದ್ದ ಬಟ್ಟೆಯನ್ನು ಹಿಂಡಿ ತೋರಿಸಿ) ಹೀಗೆ ಹಿಂಡುತ್ತಿದ್ದಾರೋ ಎನ್ನುವಷ್ಟು ನೋವಾಗುತ್ತಿದೆ. ನನ್ನನ್ನೊಮ್ಮೆ ನೋಡಿಹೋಗುವ ಹಾಗೆ ದಯವಿಟ್ಟು ಅವನಿಗೆ ಹೇಳುತ್ತೀಯಾ? ಅವನು ಪರಿಶುದ್ಧ ಸತ್ವದ ವ್ಯಕ್ತಿ, ಅವನು ಸ್ವಯಂ ನಾರಾಯಣ. ಅವನನ್ನು ಆಗಾಗ ನೋಡದಿದ್ದರೆ ನನಗೆ ನೆಮ್ಮದಿಯೇ ಇರುವುದಿಲ್ಲ."

ರಾಮದಯಾಲನಿಗೆ ಶ್ರೀರಾಮಕೃಷ್ಣರ ಮುಗ್ಧಸ್ವಭಾವದ ಪರಿಚಯು ಚೆನ್ನಾಗಿಯೇ ಇತ್ತು. ಅವನು "ನೀವೇನೂ ಯೋಚನೆ ಮಾಡಬೇಡಿ, ಬೆಳಗಾಗುತ್ತಲೇ ನಾನು ಹೋಗಿ ಅವನಿಗೆ ಹೇಳಿ ಇಲ್ಲಿಗೆ ಕಳಿಸುತ್ತೇನೆ" ಎಂದು ಹೇಳಿ ಅವರನ್ನು ಸಂತೈಸಿದ. ಶ್ರೀರಾಮಕೃಷ್ಣರು ಕೋಣೆಗೆ ಮರಳಿದರು; ಇವರಿಬ್ಬರೂ ಮತ್ತೆ ಮಲಗಿದರು. ಆದರೆ ಅರ್ಧ ಗಂಟೆಯಾಗುವುದಕ್ಕಿಲ್ಲ, ಅವರು ಮತ್ತೆ ಬಂದುಬಿಟ್ಟಿದ್ದಾರೆ! "ಓ ರಾಮದಯಾಲ್, ನರೇಂದ್ರ ಯಾಕೆ ಬಾರದೇ ಇದ್ದಿರಬಹುದು? ಆಹ್, ಅವನೆಂತಹ ಪರಿಶುದ್ಧಾತ್ಮ ಗೊತ್ತೇ..." ಹೀಗೆನ್ನುತ್ತ ಅವನ್ನು ಬಾಯ್ತುಂಬ ಕೊಂಡಾಡಿದರು. ಆದರೆ ಅಷ್ಟರಲ್ಲಿ ತಾವು ಇವರಿಬ್ಬರ ನಿದ್ರೆಗೆ ಭಂಗ ತರುತ್ತಿದ್ದೇವೆ ಎಂಬ ನೆನಪಾಗಿ ಹಿಂದಿರುಗಿದರು. ಮರುಘಳಿಗೆಯೇ ಅದನ್ನು ಮರೆತು ತಿರುಗಿ ಬಂದರು; ನರೇಂದ್ರನ ಗುಣಗಾನ ಮಾಡಿ ತಮ್ಮೆದೆಯ ಅಳಲನ್ನು ಕರುಣಾಜನಕವಾಗಿ ಬಣ್ಣಿಸಿದರು! ಆ ರಾತ್ರಿಯೆಲ್ಲ ಹೀಗೆಯೇ ಕಳೆಯಿತು.

ಇದನ್ನೆಲ್ಲ ನೋಡುತ್ತಿದ್ದ ಬಾಬುರಾಮ ಅತ್ಯಾಶ್ಚರ್ಯದಿಂದ ಸ್ತಬ್ಧನಾದ. ಅವನಿಗನ್ನಿಸಿತು: 'ಎಲಾ, ಇದೆಂಥ ಅದ್ಭುತ ಪ್ರೇಮ! ಆದರೆ ಆ ನರೇಂದ್ರ ಎಂಥ ಕಲ್ಲೆದೆಯವನಿರಬೇಕು! ಇವರು ಅವನಿಗಾಗಿ ಅಷ್ಟೊಂದು ಅತ್ತುಕರೆಯುತ್ತಿದ್ದಾರೆ; ಆದರೂ ಅವನು ಬರದೆ ಸತಾಯಿಸುತ್ತಿದ್ದಾನಲ್ಲ!'

ಈ ರೀತಿ ಶ್ರೀರಾಮಕೃಷ್ಣರು ನರೇಂದ್ರನ ಬರವಿಗಾಗಿ ವ್ಯಾಕುಲಗೊಳ್ಳುತ್ತಿದ್ದುದು ತೀರ ಸಾಮಾನ್ಯ ದೃಶ್ಯ. ಇನ್ನೊಮ್ಮೆ ಅವನು ಹೀಗೆಯೇ ಬಹಳ ದಿನಗಳವರೆಗೆ ಕಾಣಿಸಿಕೊಳ್ಳದಿದ್ದಾಗ ಶ್ರೀರಾಮಕೃಷ್ಣರು ಚಡಪಡಿಸುತ್ತಿದ್ದುದನ್ನು ಕಂಡ ಅವರ ಭಕ್ತನಾದ ವೈಕುಂಠನಾಥ ಸನ್ಯಾಲ ಎಂಬವನು ಹೇಳುತ್ತಾನೆ: "ಆ ದಿನವೆಲ್ಲ ಶ್ರೀರಾಮಕೃಷ್ಣರು ನರೇಂದ್ರನ ವಿಷಯವಾಗೇ ಮಾತನಾಡುತ್ತಿದ್ದರು, ಅವನನ್ನು ಕೊಂಡಾಡುತ್ತಿದ್ದರು; ಹಾಗೇ ಮಾತನಾಡುತ್ತ ಆಡುತ್ತ ಇನ್ನಷ್ಟು ಉದ್ವಿಗ್ನರಾದರು. ಕಡೆಗೆ ಮೈಮರೆತರು. ಅವನ ವಿರಹವನ್ನು ತಡೆದುಕೊಳ್ಳಲಾರದೆ ಹೊರಗಡೆ ಜಗಲಿಗೆ ಓಡಿ, 'ಅಮ್ಮಾ ಜಗನ್ಮಾತೆ! ಅವನನ್ನು ಕಾಣದೆ ನಾನು ಬದುಕಲಾರೆ' ಎಂದು ಗಟ್ಟಿಯಾಗಿ ಕೂಗಿಕೊಂಡರು. ಮತ್ತೆ ಕೋಣೆಗೆ ಬಂದು 'ನಾನೆಷ್ಟೊಂದು ಅತ್ತಿದ್ದೇನೆ! ನರೇಂದ್ರ ಮಾತ್ರ ಇನ್ನೂ ಬರಲೇ ಇಲ್ಲವಲ್ಲಾ. ನನ್ನ ಎದೆಯನ್ನು ಯಾರೋ ಹಿಂಡಿದ ಹಾಗೆ ಯಾತನೆ

ಯಾಗುತ್ತಿದೆ. ಆದರೆ ಅವನಿಗೆ ಇದೊಂದೂ ಲಕ್ಷ್ಯವೇ ಇಲ್ಲ' ಎಂದರು. ಹೀಗೆ ಹೇಳಿ ಪುನಃ ಜಗಲಿಗೆ ಓಡಿದರು; ಮತ್ತೆ ಅಲ್ಲಿಂದ ಬೇಗ ಹಿಂದಿರುಗಿ ಬಂದು ತಮ್ಮ ಅಳಲನ್ನು ತೋಡಿಕೊಂಡರು: 'ನಾನೋ ಮುದುಕ. ಆ ಹುಡುಗನಿಗಾಗಿ ತವಕಿಸುತ್ತಿದ್ದೇನೆ. ಇದನ್ನೆಲ್ಲ ನೋಡಿದರೆ ಜನ ಏನೆಂದುಕೊಂಡಾರು ! ನೀವೆಲ್ಲ ನನ್ನ ಸ್ವಂತದವರು. ನಿಮ್ಮ ಮುಂದೆ ನನ್ನ ಮನಸ್ಥಿತಿಯನ್ನು ಹೇಳಿಕೊಳ್ಳಲು ನನಗೇನೂ ನಾಚಿಕೆಯಿಲ್ಲ. ಆದರೆ ಇತರರೆಲ್ಲ ಇದನ್ನು ಹೇಗೆ ತೆಗೆದುಕೊಳ್ಳುತ್ತಾರೋ ! ನನಗಂತೂ ತಡೆದುಕೊಳ್ಳುವುದಕ್ಕೆ ಆಗುತ್ತಿಲ್ಲ.' ಹೀಗೆ ಅವರು ಹೇಳಿತೀರದಷ್ಟು ಸಂಕಟವನ್ನನುಭವಿಸಿದರು. ಆದರೆ ಕೊನೆಗೆ ನರೇಂದ್ರ ಬಂದಾಗ ಮಾತ್ರ ಅವರಿಗಾದ ಆನಂದವೂ ಅಷ್ಟೇ ತೀವ್ರ."

ಒಮ್ಮೆ ಭಕ್ತರೆಲ್ಲ ಸೇರಿ ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಜನ್ಮದಿನವನ್ನು ಆಚರಿಸುತ್ತಿದ್ದರು. ಆದರೆ ಮಧ್ಯಾಹ್ನವಾದರೂ ಅಚ್ಚುಮೆಚ್ಚಿನ ಶಿಷ್ಯ ನರೇಂದ್ರ ಮಾತ್ರ ಇನ್ನೂ ಬರಲೇ ಇಲ್ಲ! "ಅವನು ಬಂದನೆ ? ಬಂದನೆ ?" ಎಂದು ಶ್ರೀರಾಮಕೃಷ್ಣರು ಮತ್ತೆಮತ್ತೆ ಕೇಳುತ್ತಿದ್ದಾರೆ. ಕೊನೆಗೆ ನರೇಂದ್ರ ಬಂದ; ಬಂದು ಗುರುದೇವನಿಗೆ ನಮಸ್ಕರಿಸಿದ. ಅವನನ್ನು ನೋಡಿದ್ದೇ ತಡ, ಶ್ರೀರಾಮಕೃಷ್ಣರು ಅವನ ಭುಜದ ಮೇಲೊರಗಿಕೊಂಡು ಹಾಗೆಯೇ ಭಾವಸಮಾಧಿಸ್ಥರಾಗಿಬಿಟ್ಟರು ! ಬಳಿಕ ಮೆಲ್ಲನೆ ಪ್ರಕೃತಿಸ್ಥರಾಗಿ ಶಿಷ್ಯನ ಮೈದಡವುತ್ತ, ಕೈಯಾರೆ ಸಿಹಿತಿಂಡಿ ತಿನ್ನಿಸಿದರು. ಇನ್ನೊಮ್ಮೆ ನರೇಂದ್ರ ಹಲವಾರು ದಿನಗಳವರೆಗೆ ಬಾರದೆ ಕೊನೆಗೊಂದು ದಿನ ಬಂದ. ಅವನು ದಕ್ಷಿಣೇಶ್ವರದ ದಡದಲ್ಲಿ ದೋಣಿಯಿಂದ ಇಳಿಯುವುದನ್ನು ಕಂಡ ಶ್ರೀರಾಮಕೃಷ್ಣರು ಅಲ್ಲಿಗೇ ಓಡಿಬಂದರು; ವಾತ್ಸಲ್ಯದಿಂದ ಶಿಷ್ಯನ ಮುಖವನ್ನು ನೇವರಿಸುತ್ತ, ಓಂಕಾರ ವನ್ನುಚ್ಚರಿಸುತ್ತ ಹಾಗೆಯೇ ಸಮಾಧಿಸ್ಥರಾಗಿಬಿಟ್ಟರು !

ಮುಂದೆ ಎಷ್ಟೋ ಸಲ ನರೇಂದ್ರ ಮನೆಯಲ್ಲಿನ ತೊಂದರೆಗಳಿಂದಾಗಿ ದಕ್ಷಿಣೇಶ್ವರಕ್ಕೆ ಬಾರದಿದ್ದಾಗ, ಶ್ರೀರಾಮಕೃಷ್ಣರು ತಮಗೆ ತಾವೇ ಒಂದು ಬಗೆಯಲ್ಲಿ ಸಮಾಧಾನ ಹೇಳಿಕೊಳ್ಳುತ್ತಿದ್ದುದೂ ಉಂಟು—"ಅವನು ಬರದಿದ್ದುದೇ ಒಳ್ಳೆಯದಾಯಿತು. ಅವನನ್ನು ನೋಡಿದರೆ ನನ್ನ ಭಾವಗಳಲ್ಲಿ ಅಲ್ಲೋಲಕಲ್ಲೋಲವೇ ನಡೆದುಬಿಡುತ್ತದೆ. ಅವನು ಇಲ್ಲಿಗೆ ಬಂದನೆಂದರೆ ಅದೇ ಒಂದು ದೊಡ್ಡ ಕಥೆಯಾಗಿಬಿಡುತ್ತದೆ" ಎಂದು.

ಶ್ರೀರಾಮಕೃಷ್ಣರ ನರೇಂದ್ರಪ್ರೇಮಕ್ಕೆ ಉದಾಹರಣೆಯಾದ ಒಂದು ಘಟನೆ:

೧೮೮೫ರ ಮೇ ತಿಂಗಳಿನಲ್ಲೊಂದು ಶನಿವಾರ. ಶ್ರೀರಾಮಕೃಷ್ಣರು ರಾಮಚಂದ್ರ ದತ್ತನ ಮನೆಗೆ ಬರಲಿದ್ದಾರೆ. ಒಂದು ದೊಡ್ಡ ಗುಂಪು ಅವರ ನಿರೀಕ್ಷೆಯಲ್ಲಿದೆ. ಶ್ರೀರಾಮಕೃಷ್ಣರು ಗಾಡಿಯಲ್ಲಿ ಬಂದಿಳಿದರು. ಬೈಠಕ್‌ಖಾನೆಗೆ ಪ್ರವೇಶಿಸಿ ಕುಳಿತೊಡ ನೆಯೇ ಯಾರನ್ನೋ ನಿರೀಕ್ಷಿಸುತ್ತ ಅತ್ತಿತ್ತ ನೋಡಿದರು. "ನರೇನ್ ಎಲ್ಲಿ, ಕಾಣುತ್ತಿಲ್ಲ ವಲ್ಲ ?" ಎಂದು ಕಾತರದ ದನಿಯಲ್ಲಿ ಕೇಳಿದರು. ನರೇಂದ್ರನ ಮನೆ ಅಲ್ಲೇ ಹತ್ತಿರ ದಲ್ಲೇ. ಅವನು ಬರಲೇಬೇಕಾಗಿತ್ತು. ಆದರೆ ಏಕೆ ಬರಲಿಲ್ಲವೋ ! ಆಗ ಯಾರೋ ಹೇಳಿದರು, "ಅವನಿಗೆ ತಲೆಸಿಡಿತವಂತೆ, ಮಲಗಿಬಿಟ್ಟಿದ್ದಾನೆ." ಇದನ್ನು ಕೇಳುತ್ತಿದ್ದಂತೆ ಶ್ರೀರಾಮಕೃಷ್ಣರು ಉದ್ವಿಗ್ನರಾದರು. "ಹೌದೆ ! ಹಾಗಾದರೆ ನಾನವನನ್ನು ನೋಡಲೇ ಬೇಕು. ಯಾರಾದರೂ ಹೋಗಿ ಅವನನ್ನು ಕರೆತನ್ನಿ ! ಹೇಗಾದರೂ ಸರಿಯೆ !"

ನಿರಂಜನ, ಕಾಳೀಪ್ರಸಾದ ಮೊದಲಾದ ತರುಣಶಿಷ್ಯರು ನರೇಂದ್ರನ ಮನೆಗೆ ಹೊರಟರು. ಹೋಗಿ ನೋಡುತ್ತಾರೆ—ನರೇಂದ್ರ ಮಂಚದ ಮೇಲೆ ಮಲಗಿದ್ದಾನೆ;

ಹಣೆಯ ಮೇಲೆ ಒದ್ದೆ ಪಟ್ಟಿ. ಯಾತನೆಯಿಂದ ಚಡಪಡಿಸುತ್ತಿದ್ದಾನೆ. ಇವನನ್ನು ಈ ಸ್ಥಿತಿಯಲ್ಲಿ ಎಬ್ಬಿಸುವುದಾದರೂ ಹೇಗೆ?. . .ಆದರೂ ಕಾಳೀಪ್ರಸಾದ ಬಾಯ್ದೆರೆದ:

"ನರೇನ್, ಠಾಕೂರರು ರಾಮ್‌ಬಾಬುವಿನ ಮನೆಗೆ ಬಂದಿದ್ದಾರೆ. ನಿನ್ನನ್ನು ನೋಡುವುದಕ್ಕೆ ತುಂಬ ಕಾತರರಾಗಿದ್ದಾರೆ. ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವುದಕ್ಕೆ ಅಂತ ಬಂದಿದ್ದೇವೆ."

"ನನಗೆ ಭಯಂಕರ ತಲೆನೋವು! ಎದ್ದೇಳುವುದಿರಲಿ, ಕಣ್ಣುಬಿಡುವುದಕ್ಕೂ ಆಗುತ್ತಿಲ್ಲ. ಬೆಳಕು ಕಂಡರೆ ಸಹಿಸುವುದಕ್ಕಾಗುವುದಿಲ್ಲ. ನಾನಲ್ಲಿಗೆ ಹೇಗೆ ಬರಲಪ್ಪಾ? ದಯವಿಟ್ಟು ಅವರಿಗೆ ನನ್ನ ನಮಸ್ಕಾರಗಳನ್ನು ತಿಳಿಸಿಬಿಟ್ಟು, ನನ್ನ ಪರವಾಗಿ ಕ್ಷಮೆ ಕೋರುತ್ತೀಯಾ?"—ನರೇಂದ್ರ ಬಹಳ ಕಷ್ಟಪಡುತ್ತ ನಿಧಾನವಾಗಿ ಹೇಳಿದ.

"ಆದರೆ ಠಾಕೂರರು ನಿನ್ನನ್ನು ನೋಡಲೇಬೇಕು ಅಂತ ಉತ್ಕಂಠಿತರಾಗಿ ಕಾಯುತ್ತಿದ್ದಾರೆ. ಹೇಗಾದರೂ ಮಾಡಿ ಬಂದುಬಿಡು. ನಾವು ಮೆಲ್ಲನೆ ನಡೆಸಿಕೊಂಡು ಹೋಗುತ್ತೇವೆ. ಇಲ್ಲವೆನ್ನಬೇಡ ನರೇನ್, ದಯವಿಟ್ಟು!"

ನರೇಂದ್ರ ಇದಕ್ಕೊಪ್ಪಿ ಎದ್ದುನಿಂತ. ತಲೆಯ ಮೇಲೆ ಒದ್ದೆ ಪಟ್ಟಿ ಹಾಗೆಯೇ ಇತ್ತು. ಕಾಳೀಪ್ರಸಾದ, ನಿರಂಜನ ಇಬ್ಬರೂ ಅತ್ತಿತ್ತ ನಿಂತು ಅವನ ಕೈಗಳನ್ನು ತಮ್ಮ ಭುಜದ ಮೇಲಿರಿಸಿಕೊಂಡು ಮೆಲ್ಲನೆ ಮುನ್ನಡೆಸಿಕೊಂಡು ಬಂದರು.

ಶ್ರೀರಾಮಕೃಷ್ಣರು ಭಕ್ತರಿಂದಾವೃತರಾಗಿ ಬೈಠಕ್‌ಖಾನೆಯ ಮಧ್ಯದಲ್ಲಿ ಕುಳಿತಿದ್ದಾರೆ. ನರೇಂದ್ರನನ್ನು ನೋಡುತ್ತಲೇ ಅವರ ಮುಖ ಮಂದಹಾಸದಿಂದ ಬೆಳಗಿತು. ಎಲ್ಲರ ಕಣ್ಣುಗಳೂ ಅವರಿಬ್ಬರ ಮೇಲೆಯೇ ನೆಟ್ಟಿವೆ. ನರೇಂದ್ರನನ್ನು ಕಂಡು ಶ್ರೀರಾಮಕೃಷ್ಣರಿಗೆ ಎಷ್ಟು ಆನಂದವಾಗಿದೆಯೆಂಬುದನ್ನು ವಿಸ್ಮಯದಿಂದ ನೋಡುತ್ತಿದ್ದಾರೆ. ನರೇಂದ್ರ ಬಂದು ತಮಗೆ ಪ್ರಣಾಮ ಮಾಡುತ್ತಲೇ ಶ್ರೀರಾಮಕೃಷ್ಣರು ಅತ್ಯಂತ ವಾತ್ಸಲ್ಯದಿಂದ ತಮ್ಮೆರಡೂ ಕೈಗಳಿಂದ ಅವನ ತಲೆಯನ್ನು ಮುಟ್ಟಿ ಹರಸಿದರು. ಮರುಕ್ಷಣವೇ ಅವನು ಪುಟಿದೆದ್ದು ನಿಂತ. ಅವನೊಳಗೆ ಇದ್ದಕ್ಕಿದ್ದಹಾಗೆ ಏನೋ ಆಗಿಬಿಟ್ಟದೆ! ಅತ್ಯಾಶ್ಚರ್ಯದಿಂದ ಕೂಗಿಕೊಂಡ: "ಏನು ಮಾಡಿದಿರಿ ನೀವು! ನನ್ನ ತಲೆಶೂಲೆ ಹೊರಟುಹೋಯಿತಲ್ಲ!" ತನ್ನ ಮಾತಿನಲ್ಲಿ ತನಗೇ ನಂಬಿಕೆಯಿಲ್ಲದವನಂತೆ ಮತ್ತೆ ಕೂಗಿದ: "ಇದೇನೋ ಜಾದೂ ಮಾಡಿದಂತಿದೆ! ನಿಜಕ್ಕೂ ನನ್ನ ತಲೆನೋವು ಹೊರಟುಹೋಯಿತು!"

ಶ್ರೀರಾಮಕೃಷ್ಣರು ಪ್ರೀತಿಯಿಂದ ಅವನನ್ನು ದಿಟ್ಟಿಸುತ್ತ ಸುಮ್ಮನೆ ನಸುನಕ್ಕರು. ಅಷ್ಟೊಂದು ಜನದ ಸಮ್ಮುಖದಲ್ಲೇ ಈ ಅದ್ಭುತ ನಡೆದುಹೋಯಿತು.

ಶ್ರೀರಾಮಕೃಷ್ಣರು ಇಂಥ ಅತೀಂದ್ರಿಯ ಶಕ್ತಿಯನ್ನು ವ್ಯಕ್ತಗೊಳಿಸುತ್ತಿದ್ದುದು ತೀರಾ ಅಪರೂಪ; ಅಷ್ಟೇ ಅಲ್ಲ, ಶಕ್ತಿಪ್ರದರ್ಶನ ಮಾಡುವ ಯೋಗಿ-ಯತಿಗಳನ್ನು ಅಪಾಥಭೂತಿಗಳೆಂದು ತಿಳಿದು ದೂರವಿರಬೇಕೆಂದು ಅವರು ಶಿಷ್ಯರಿಗೆ ಹೇಳುತ್ತಿದ್ದರು. ಆದರೆ ಇದೊಂದು ವಿಶೇಷ ಸಂದರ್ಭವೆಂದು ತಮ್ಮ ನಿಯಮವನ್ನು ಸಡಿಲಿಸಿದ್ದಿರಬಹುದು.

ಈಗ ಶ್ರೀರಾಮಕೃಷ್ಣರೆಂದರು: "ನರೇನ್, ಒಂದು ಹಾಡು ಹೇಳುತ್ತೀಯಾ?" ನರೇಂದ್ರ ತಂಬೂರಿ ಶ್ರುತಿ ಮಾಡಿಕೊಂಡು ಹಾಡಲಾರಂಭಿಸಿದ. ಭಕ್ತರೆಲ್ಲ ಆ ಮಧುರ ಗಾನಸುಧೆಯಲ್ಲಿ ಮುಳುಗಿಹೋದರು. ಶ್ರೀರಾಮಕೃಷ್ಣರಂತೂ ಒಮ್ಮೆಗೇ ಭಾವಸ್ಥ

ರಾದರು. ಅವನ ಗಾಯನದ ಮೂರು ತಾಸಿನ ಕಾಲ ಅವಿರತವಾಗಿ ಮುಂದುವರಿಯಿತು. ಆದರೆ ಅವನಲ್ಲಿ ದಣಿವಿನ ಸುಳಿವೇ ಇಲ್ಲದುದನ್ನು ಕಂಡ ಭಕ್ತರು ಮತ್ತಷ್ಟು ಬೆರಗಾದರು. ಅನಂತರ ಸಾಮೂಹಿಕ ಸಂಕೀರ್ತನೆ ನರ್ತನಗಳು ನಡೆದು ಕಾರ್ಯಕ್ರಮ ಮುಕ್ತಾಯಗೊಂಡಿತು.

ನರೇಂದ್ರನಿಗೆ ಶ್ರೀರಾಮಕೃಷ್ಣರಲ್ಲಿನ ಅತಿದೊಡ್ಡ ಆಕರ್ಷಣೆಯೆಂದರೆ ಅವರ ಪರಿಪೂರ್ಣ ತ್ಯಾಗವೈರಾಗ್ಯ; ಅವರ ಸ್ಫಟಿಕಸದೃಶ ಪಾವಿತ್ರ್ಯ, ಅವರ ಭಗವತ್ಪ್ರೇಮ. ಶ್ರೀರಾಮಕೃಷ್ಣರನ್ನು ನರೇಂದ್ರನೆಡೆಗೆ ಸೆಳೆಯುತ್ತಿದ್ದ ಅತಿಮುಖ್ಯ ಅಂಶವೆಂದರೆ ಅವನ ಆತ್ಮಾವಲಂಬನ ಮನೋಭಾವ, ಪೌರುಷಪೂರ್ಣ ವ್ಯಕ್ತಿತ್ವ ಮತ್ತು ಸತ್ಯಸಾಕ್ಷಾತ್ಕಾರಕ್ಕಾಗಿ ಅವನ ಏಕನಿಷ್ಠೆಯ ಪ್ರಾಮಾಣಿಕ ಹಂಬಲ. ಶ್ರೀರಾಮಕೃಷ್ಣರು ನರೇಂದ್ರನ ಮೇಲಿಟ್ಟಿದ್ದ ವಿಶ್ವಾಸ ಅಪಾರವಾದದ್ದು, ಅದನ್ನು ಮಾತಿನಿಂದ ವರ್ಣಿಸಲು ಸಾಧ್ಯವಿಲ್ಲ. ಸಾಮಾನ್ಯ ಜನರು ಅವನ ವಿಶೇಷ ಗುಣಗಳನ್ನೆಲ್ಲ ತಪ್ಪಾಗಿ ಅರ್ಥಮಾಡಿಕೊಳ್ಳುತ್ತಿದ್ದುದೇ ಹೆಚ್ಚು. ಅವನು ಸ್ವಭಾವತಃ ಸ್ವಾವಲಂಬಿ, ಸ್ವತಂತ್ರ ಮನೋವೃತ್ತಿಯವನು. ಆದರೆ ಜನಗಳು ಅವನ ಈ ಸ್ವಾವಲಂಬಿ ಮನೋಭಾವವನ್ನು ಹುಚ್ಚುಸಾಹಸ ಎಂದು ಅರ್ಥೈಸಿದರು; ಅವನ ಪೌರುಷವನ್ನು ಹಟಮಾರಿತನ ಎಂದು ಅರ್ಥಮಾಡಿಕೊಂಡರು. ಅವನ ಸತ್ಯಶೋಧನೆಯ ಪ್ರಯತ್ನವೆನ್ನುವುದು ಅಪಕ್ವ ಬುದ್ಧಿಯಂತೆ ಕಾಣಿಸಿತು. ಇನ್ನು ಹೊಗಳಿಕೆ-ತೆಗಳಿಕೆಗಳ ವಿಷಯದಲ್ಲಂತೂ ನರೇಂದ್ರ ಸಂಪೂರ್ಣ ಉದಾಸೀನ. ಅವನ ಭಾವನೆ-ಮಾತು-ಕೃತಿಗಳಲ್ಲಿ ಸದಾ ಒಂದು ಅಸಾಮಾನ್ಯ ನಿರ್ಭಯತೆ ಎದ್ದು ಕಾಣುತ್ತಿತ್ತು. ಇದನ್ನು ಜನ ದುರಹಂಕಾರವೆಂದು ಭಾವಿಸುತ್ತಿದ್ದರು. ಹೀಗೆಲ್ಲ ಮಾತು ಹುಟ್ಟಿಕೊಳ್ಳಲು ಕಾರಣವಿಲ್ಲದಿರಲಿಲ್ಲ—ಏನೆಂದರೆ, ನರೇಂದ್ರ ಯಾರ ಮುಲಾಜನ್ನೂ ಇಟ್ಟುಕೊಳ್ಳುವವನಲ್ಲ. ಕಾರಣ, ಅವನಿಗೆ ಯಾರ ಹೊಗಳಿಕೆಯೂ ಬೇಕಿಲ್ಲ; ಇತರರಿಂದ ಮುಚ್ಚಿಡುವಂಥದು ಅವನಲ್ಲೇನೂ ಇಲ್ಲ. ಯಾವುದಕ್ಕಾದರೂ ಹೆದರಿಕೊಂಡು ಜೀವನ ನಡೆಸುವ ಅಭ್ಯಾಸ ಅವನದಲ್ಲ. ಹಿಂದೊಂದು ಮುಂದೊಂದು ಮಾಡುವವರನ್ನು ಕಂಡರೇ ಅವನಿಗೆ ಆಗುವುದಿಲ್ಲ. ಇಂಥವನನ್ನು ಎಷ್ಟು ಜನ ಸರಿಯಾಗಿ ಅರ್ಥಮಾಡಿಕೊಂಡಾರು ?

ಆದರೆ ರತ್ನಕ್ಕೆ ಬೆಲೆಕಟ್ಟುವವನು ವಜ್ರದ ವ್ಯಾಪಾರಿಯಲ್ಲದೆ ತರಕಾರಿಯವನಲ್ಲವಲ್ಲ! ನರೇಂದ್ರನ ಯೋಗ್ಯತೆಯನ್ನರಿತಿದ್ದ ಶ್ರೀರಾಮಕೃಷ್ಣರು ಅವನನ್ನು ಅಪರಂಜಿ ಎನ್ನುತ್ತಿದ್ದರು. ಆದರೆ ಅವನ ವ್ಯಕ್ತಿತ್ವವಿನ್ನೂ ವಿಕಸನಗೊಳ್ಳಲಿಕ್ಕಿದೆ; ಮುಂದೆ ಅದು ಸಹಸ್ರದಳ ಕಮಲದಂತೆ ಅರಳಿ, ತನ್ನ ಅನುಪಮ ಪರಿಮಳವನ್ನು ಬೀರಲಿಕ್ಕಿದೆ ಎಂಬುದು ಅವರಿಗೆ ತಿಳಿದಿತ್ತು. ಲೋಕದ ಕಠೋರ ವಾಸ್ತವಿಕತೆಯ ಬಿಸಿ ಅವನಿಗಿನ್ನೂ ತಗಲಬೇಕಾಗಿದೆ; ಮಾನವನ ದಾರುಣ ದುಃಖಸಂಕಟಗಳ ಪರಿಚಯವಾಗಬೇಕಾಗಿದೆ. ಹಾಗಾದಾಗ ಅವನ ವ್ಯಕ್ತಿತ್ವ ಪರಿಪಾಕಗೊಂಡು ಬೇರೆಯೇ ರೂಪ ತಾಳಲಿದೆ. ಅವನ ಈಗಿನ ನಿರ್ಲಕ್ಷ್ಯ ನಿಷ್ಠುರತೆಗಳು ಕರಗಿ ಅಪಾರ ಅನುಕಂಪೆಯ ಸ್ರೋತವಾಗಲಿವೆ; ಆತನ ಅಮಿತ ಆತ್ಮವಿಶ್ವಾಸವು ಜೀವರೆದೆಗೆ ಹೊಸ ಭರವಸೆಯನ್ನೂ ಚೈತನ್ಯವನ್ನೂ ತುಂಬಬಲ್ಲ ಜೀವಸತ್ವದಂತೆ ಕೆಲಸ ಮಾಡಲಿದೆ; ಇಂದು ನಿರಂಕುಶ-ಸ್ವಚ್ಛಂದವೆಂಬಂತೆ ತೋರುತ್ತಿರುವ ನಡವಳಿಕೆಯೇ ಮುಂದೆ ಅಪೂರ್ವ ಸಂಯಮಪೂರ್ಣವಾದ ಆತ್ಮವಿಶ್ವಾಸವಾಗಿ ವಿಜೃಂಭಿಸಲಿದೆ ಎಂದು. ಭವಿಷ್ಯದ ಈ ಭವ್ಯ ಚಿತ್ರವನ್ನು ಶ್ರೀರಾಮ

ಕೃಷ್ಣರು ನಿಚ್ಚಳವಾಗಿ ಕಾಣುತ್ತಿದ್ದರು. ಆದ್ದರಿಂದ ಅವನ ಸ್ವತಂತ್ರ ಮನೋವೃತ್ತಿಗೆ ಅವರು ಯಾವುದೇ ಬಗೆಯ ಕಡಿವಾಣ ತೊಡಿಸಲಿಲ್ಲ, ನಿರ್ಬಂಧ ಹೇರಲಿಲ್ಲ. ಅಷ್ಟೇ ಅಲ್ಲ, ಅವನ ಈ ಸದ್ಗುಣಗಳನ್ನು ಬಣ್ಣಿಸಿ ಕೊಂಡಾಡುವ ಒಂದು ಅವಕಾಶವನ್ನೂ ಬಿಡುತ್ತಿರಲಿಲ್ಲ.

ನರೇಂದ್ರನನ್ನು ಹೊಗಳಬೇಕೆಂದರೆ ಶ್ರೀರಾಮಕೃಷ್ಣರಿಗೆ ಒಂದು ನಾಲಿಗೆ ಸಾಲದು —ಅವನು ಎದುರಿಗಿದ್ದರೂ ಸರಿಯೆ, ಇಲ್ಲದಿದ್ದರೂ ಸರಿಯೆ. ಮುಖಸ್ತುತಿಯ ಕೆಡುಕನ್ನು ಅರಿಯದವರೇನಲ್ಲ ಅವರು. ಯಾವುದೇ ವ್ಯಕ್ತಿಯ—ವಿಶೇಷತಃ ಸಾಧಕನ —ಅವನತಿಗೆ ಈ ಹೊಗಳಿಕೆಯೇ ಜಾರುಬಂಡೆಯಾಗಿ ಪರಿಣಮಿಸಬಲ್ಲುದು. ಆದರೆ ನರೇಂದ್ರನ ವಿಷಯದಲ್ಲಿ ಮಾತ್ರ ಅವರು ಈ ಎಚ್ಚರಿಕೆಯನ್ನು ಗಾಳಿಗೆ ತೂರಿದ್ದರು. ಏಕೆಂದರೆ, ಸ್ತುತಿನಿಂದೆಗಳಾವುವೂ ತಲುಪಲಾರದಷ್ಟು ಎತ್ತರ ಅವನ ಬುದ್ಧಿಯ ಆವಾಸಸ್ಥಾನವೆಂಬುದು ಅವರಿಗೆ ನಿಚ್ಚಳವಾಗಿತ್ತು.

ಶ್ರೀರಾಮಕೃಷ್ಣರು ತಮ್ಮ ತರುಣಶಿಷ್ಯರ ಪೈಕಿ ನರೇಂದ್ರ, ರಾಖಾಲ, ಬಾಬು ರಾಮ, ಯೋಗೀಂದ್ರ, ನಿರಂಜನ ಮತ್ತು ಪೂರ್ಣಚಂದ್ರ ಇವರುಗಳನ್ನು ಈಶ್ವರ ಕೋಟಿಗೆ ಸೇರಿದವರು ಎಂದು ಹೇಳುತ್ತಿದ್ದರು. ಈಶ್ವರಕೋಟಿಗಳು ಎಂದರೆ ನಿತ್ಯ ಸಿದ್ಧರು, ನಿತ್ಯಮುಕ್ತರು ಎಂದರ್ಥ. ಇವರೆಲ್ಲ ಆಧ್ಯಾತ್ಮಿಕ ಸಾಧನೆ ಮಾಡಬೇಕಾಗಿಯೇ ಇಲ್ಲ. ಅವತಾರಪುರುಷರ ಆಗಮನದೊಂದಿಗೆ ಅವರ ಲೀಲಾಸಹಚರರಾಗಿ ಬರುವವರು ಇವರು. ಶ್ರೀರಾಮಕೃಷ್ಣರು ನರೇಂದ್ರಾದಿಗಳ ಕುರಿತಾಗಿ ಕೆಲವೊಮ್ಮೆ ಹೇಳುತ್ತಿದ್ದರು: "ಇವರು ಇಲ್ಲಿ ಏನೇನು ಶಿಕ್ಷಣ ಪಡೆಯುತ್ತಿದ್ದಾರೋ, ಸಾಧನೆ ಮಾಡುತ್ತಿದ್ದಾರೋ ಅದೆಲ್ಲ ಅವರಿಗಾಗಿ ಅಲ್ಲವೇ ಅಲ್ಲ; ಅವರಿಗದರ ಆವಶ್ಯಕತೆಯೇ ಇಲ್ಲ. ಅವರ ಸಾಧನೆಯೆಲ್ಲ ಜಗತ್ತಿನ ಹಿತಕ್ಕಾಗಿ." ನರೇಂದ್ರನನ್ನಂತೂ ಶ್ರೀರಾಮಕೃಷ್ಣರು ಅತ್ಯಂತ ಉನ್ನತ ಭಾವನೆಯಿಂದ ನೋಡುತ್ತಿದ್ದರು. ಅವನ ಕುರಿತಾಗಿ ಯಾರಾದರೂ ಟೀಕಿಸಿ ಮಾತನಾಡಿದರೆ, "ಏನು ಮಾತಾಡುತ್ತಿದ್ದೀಯೆ ನೀನು ! ಶಿವನಿಂದೆ ! ಶಿವನಿಂದೆ ಮಾಡುತ್ತಿದ್ದೀ !" ಎಂದು ಗದರಿಸುತ್ತಿದ್ದರು. ಒಮ್ಮೆ ಒಬ್ಬ ಭಕ್ತ ಬಂದು, "ಮಹಾಶಯರೆ, ನರೇಂದ್ರ ಈಚೀಚೆಗೆ ಕೆಲವು ಅಯೋಗ್ಯರ ಸಹವಾಸಕ್ಕೆ ಬಿದ್ದು ದಾರಿತಪ್ಪಿ ನಡೆಯುತ್ತಿದ್ದಾನೆ" ಎಂದು ಚಾಡಿ ಹೇಳಿದ. ಒಡನೆಯೇ ಶ್ರೀರಾಮಕೃಷ್ಣರು, "ನೋಡು, ಹಾಗಾಗುವುದಕ್ಕೆ ಸಾಧ್ಯವೇ ಇಲ್ಲ ! ನರೇಂದ್ರ ಖಂಡಿತ ದಾರಿತಪ್ಪಿ ನಡೆಯಲಾರ ಎನ್ನುವುದನ್ನು ಜಗನ್ಮಾತೆಯೇ ನನಗೆ ತೋರಿಸಿಕೊಟ್ಟಿದ್ದಾಳೆ. ನೋಡಿಕೊ, ಇನ್ನೊಂದು ಸಲ ಅವನ ಮೇಲೇನಾದರೂ ಹೇಳಿದೆಯೊ, ನಾನು ಇನ್ನೆಂದಿಗೂ ನಿನ್ನ ಮುಖವನ್ನೇ ನೋಡುವುದಿಲ್ಲ !" ಎಂದು ರೇಗಿಬಿಟ್ಟರು. ಹೀಗೆ ನರೇಂದ್ರನ ಮೇಲೆ ಅಪವಾದ ಹೊರಿಸುವವರ ಬಾಯಿಮುಚ್ಚಿಸಿಬಿಡುತ್ತಿದ್ದರು. ಜೊತೆಗೆ, ಅವಕಾಶ ಸಿಕ್ಕಾಗಲೆಲ್ಲ ಭಕ್ತರ ಇದಿರಲ್ಲಿ ಅವನನ್ನು ಮನಸಾರೆ ಕೊಂಡಾಡುತ್ತಿದ್ದರು. ಆತನ ಸದ್ಗುಣಗಳನ್ನು ವರ್ಣಿಸುವಲ್ಲಿ ಅವರಿಗೆ ವಿಶೇಷ ಉತ್ಸಾಹ. ಸಾಮಾನ್ಯರಾದ ಅಲ್ಪಬುದ್ಧಿಯವರೇನಾದರೂ ಇಂತಹ ಮೆಚ್ಚುಗೆಯ ಮಾತುಗಳನ್ನು ಕೇಳಿದ್ದರೆ ಅವರ ತಲೆ ತಿರುಗಿಹೋಗುತ್ತಿತ್ತು. ಇದು ಶ್ರೀರಾಮಕೃಷ್ಣರಿಗೂ ಚೆನ್ನಾಗಿ ಗೊತ್ತಿತ್ತು. ಆದರೆ ನರೇಂದ್ರ ಆ ತರಹದ ಅಲ್ಪ ಬುದ್ಧಿಯವನಲ್ಲ ಎಂಬುದು ತಿಳಿದದ್ದರಿಂದಲೇ ಅವನನ್ನು ಹಾಗೆ ಎಲ್ಲರೆದುರು ಮುಕ್ತ ಕಂಠದಿಂದ ಹೊಗಳುತ್ತಿದ್ದರು.

ಒಂದು ದಿನ ಕೇಶವಚಂದ್ರ ಸೇನ, ವಿಜಯಕೃಷ್ಣ ಗೋಸ್ವಾಮಿಯೇ ಮೊದಲಾದ ಬ್ರಾಹ್ಮಸಮಾಜದ ಅನೇಕ ಪ್ರಖ್ಯಾತ ಮುಂದಾಳುಗಳು ಶ್ರೀರಾಮಕೃಷ್ಣರೆದುರು ಆಸೀನರಾಗಿದ್ದಾರೆ. ತರುಣ ನರೇಂದ್ರ ಕೂಡ ಅಲ್ಲಿದ್ದಾನೆ. ಮಾತಿನ ಮಧ್ಯೆ ಶ್ರೀರಾಮಕೃಷ್ಣರು ಭಾವಸ್ಥರಾದರು. ಹಾಗೆಯೇ ಎದುರು ಕುಳಿತಿದ್ದವರತ್ತ ದೃಷ್ಟಿ ಹಾಯಿಸಿದರು. ಬಳಿಕ ಅವರ ದೃಷ್ಟಿ ನರೇಂದ್ರನ ಮೇಲೆ ಬಿತ್ತು. ಒಡನೆಯೇ ಆತನ ಭವಿಷ್ಯದ ಘನವ್ಯಕ್ತಿತ್ವದ ಚಿತ್ರ ಅವರ ಕಂಗಳಿಗೆ ಗೋಚರವಾಯಿತು. ಅವನು ಮುಂದೆ ಎಂತಹ ಅದ್ಭುತಗಳನ್ನು ಎಸಗಲಿದ್ದಾನೆ- ಎಂಬುದನ್ನು ಸ್ಪಷ್ಟವಾಗಿ ಕಂಡು ಅವರ ಹೃದಯದಲ್ಲಿ ಭಾವ ತುಂಬಿ ಬಂತು. ಆದರೆ ತಮ್ಮ ಮನಸ್ಸಿಗೆ ಬಂದದ್ದನ್ನು ಕೂಡಲೇ ಹೊರಹಾಕಲಿಲ್ಲ. ಸ್ವಲ್ಪ ಹೊತ್ತಿಗೆ ಬ್ರಾಹ್ಮಸದಸ್ಯರೆಲ್ಲ ಪ್ರಣಾಮ ಸಲ್ಲಿಸಿ ನಿರ್ಗಮಿಸಿದರು. ಆಗ ಉಳಿದ ಭಕ್ತರ ಹತ್ತಿರ ಶ್ರೀರಾಮಕೃಷ್ಣರು ಹೇಳುತ್ತಾರೆ:

"ಕೇಶವನಲ್ಲಿ ಶಕ್ತಿಯ ಒಂದು ಅಂಶ ಸಮೃದ್ಧವಾಗಿದೆ; ಅಷ್ಟರಿಂದಲೇ ಅವನು ಜಗತ್ಪ್ರಸಿದ್ಧನಾಗಿಬಿಟ್ಟಿದ್ದಾನೆ. ಆದರೆ ನರೇಂದ್ರನಲ್ಲಿ ಅಂತಹ ಹದಿನೆಂಟು ಅಂಶಗಳು ಪರಿಪೂರ್ಣವಾಗಿರುವುದನ್ನು ನಾನೀಗ ಕಂಡೆ! ಕೇಶವ-ವಿಜಯಕೃಷ್ಣರಲ್ಲಿ ಜ್ಞಾನವು ಹಣತೆಯ ಹಾಗೆ ಉರಿಯುತ್ತಿದ್ದರೆ, ನರೇಂದ್ರನಲ್ಲಿ ಸ್ವಯಂ ಜ್ಞಾನಸೂರ್ಯನೇ ಬೆಳಗುತ್ತಿದ್ದಾನೆ; ಅದರ ಪ್ರಖರ ಪ್ರಕಾಶವು ಅಜ್ಞಾನ-ಮೋಹಗಳನ್ನು ಸುಟ್ಟುಹಾಕುತ್ತಿದೆ!"

ಬೇರಾರಾದರೂ ಇಂತಹ ಮೆಚ್ಚುಗೆಯ ಮಾತುಗಳನ್ನು ಕೇಳಿದ್ದರೆ ಅದೆಷ್ಟು ಉಬ್ಬಿಹೋಗಿರುತ್ತಿದ್ದರೊ! ಆದರೆ ನರೇಂದ್ರನಿಗೆ ಈ ಮಾತು ಇಷ್ಟವೇ ಆಗಲಿಲ್ಲ. ಅವನು ಅಸಮಾಧಾನಗೊಂಡು ನುಡಿದ:

"ಮಹಾಶಯರೆ, ಇದೇನೆನ್ನುತ್ತಿದ್ದೀರಿ ನೀವು? ಇದನ್ನು ಕೇಳಿದರೆ ಜನ ನಿಮ್ಮನ್ನು ಹುಚ್ಚ ಎಂದಾರು, ಅಷ್ಟೆ. ಅಂತಹ ಜಗತ್ಪ್ರಸಿದ್ಧರಾದ ಕೇಶವಚಂದ್ರ ಸೇನರ, ಸಂತ ವಿಜಯಕೃಷ್ಣರ ಜೊತೆಯಲ್ಲಿ ನನ್ನಂತಹ ಸರ್ವೇಸಾಮಾನ್ಯನಾದ ಒಬ್ಬ ವಿದ್ಯಾರ್ಥಿಯನ್ನು ಹೋಲಿಸುತ್ತಿದ್ದೀರಲ್ಲ! ದಯವಿಟ್ಟು ಇನ್ನೆಂದಿಗೂ ಹೀಗೆಲ್ಲ ಮಾಡಬೇಡಿ."

ನರೇಂದ್ರನ ಈ ವಿನಯವನ್ನು ಕಂಡು ಶ್ರೀರಾಮಕೃಷ್ಣರಿಗೆ ಇನ್ನಷ್ಟು ಸಂತೋಷವೇ ಆಯಿತು. ಅವರು ಮುಗುಳ್ನಗುತ್ತ ಉತ್ತರಿಸಿದರು:

"ಮಗು, ನಾನು ತಾನೆ ಏನು ಮಾಡಲಿ? ನಾನಾಗಿಯೇ ಹಾಗೆ ಹೇಳಿದೆ ಅಂತ ತಿಳಿದೆಯಾ? ಜಗನ್ಮಾತೆಯೇ ನನಗೆ ಹಾಗೆಂದು ತೋರಿಸಿಕೊಟ್ಟಳು. ಮತ್ತು ಆಕೆ ಎಂದಿಗೂ ಸುಳ್ಳುಪಳ್ಳನ್ನು ತೋರಿಸಿಲ್ಲ. ಆದಕ್ಕೇ ನಾನು ಹಾಗೆಂದೆ."

ಆದರೆ ನರೇಂದ್ರ ಇದನ್ನೆಲ್ಲ ನಂಬುವವನಲ್ಲ. ಅವನು ಎಲ್ಲರೆದುರಿಗೇ ಕೇಳುತ್ತಾನೆ: "ಅವೆಲ್ಲ ಜಗನ್ಮಾತೆಯೇ ನಿಮಗೆ ತೋರಿಸಿಕೊಟ್ಟದ್ದೋ ಅಥವಾ ನಿಮ್ಮ ಮೆದುಳಿನ ಹುಚ್ಚುಕಲ್ಪನೆಯೋ ಯಾರಿಗೆ ಗೊತ್ತು! ನನಗೇನಾದರೂ ಅಂತಹ ದರ್ಶನ-ಗಿರ್ಶನಗಳಾಗಿದ್ದಿದ್ದರೆ ಅವನ್ನೆಲ್ಲ ಭ್ರಮೆ ಅಂತ ಬದಿಗೊತ್ತಿಬಿಡುತ್ತಿದ್ದೆ. ಪಾಶ್ಚಾತ್ಯ ವಿಜ್ಞಾನ ಸ್ಪಷ್ಟವಾಗಿ ಹೇಳುತ್ತಿದೆ, ಏನೆಂದರೆ ನಮ್ಮನಮ್ಮ ಮನಸ್ಸು-ಇಂದ್ರಿಯಗಳಿಂದಲೇ ನಾವು ಎಷ್ಟೋ ಸಲ ಮೋಸಹೋಗುತ್ತೇವೆ; ಆದರಲ್ಲೂ ನಮ್ಮ ಪೂರ್ವಗ್ರಹ ಪೀಡಿತವಾದ ವೈಯಕ್ತಿಕ ಅನಿಸಿಕೆಗಳಿಂದಾಗಿ ನಾವು ಭ್ರಮೆಗೀಡಾಗುವುದಂತೂ ಇನ್ನೂ ಹೆಚ್ಚು ಅಂತ. ನೀವು ನನ್ನನ್ನು ಅಷ್ಟೊಂದಾಗಿ ಪ್ರೀತಿಸುತ್ತೀರಿ. ಎಲ್ಲ ವಿಷಯಗಳಲ್ಲೂ ನಾನೊಬ್ಬ ದೊಡ್ಡಮನುಷ್ಯ ಎನ್ನುವಂತೆ ಕಾಣಲು ಇಷ್ಟಪಡುತ್ತೀರಿ. ಆದಕ್ಕೇ ನನ್ನ ಕುರಿತಾಗಿ

ನಿಮ್ಮ ಮೆದುಳಿನಲ್ಲಿ ಅಂಥ ಕಲ್ಪನೆಗಳೆಲ್ಲ ಹುಟ್ಟಿಕೊಳ್ಳುತ್ತವೆ."

ಹೀಗೆ ಅವನು ಇಂತಹ ಸಂದರ್ಭಗಳಲ್ಲೆಲ್ಲ ಶ್ರೀರಾಮಕೃಷ್ಣರ ಮಾತುಗಳನ್ನು ನೇರವಾಗಿ, ಯುಕ್ತಿಯುಕ್ತವಾಗಿ ಪ್ರತಿಭಟಿಸುತ್ತಿದ್ದ. ಅವನು ಹೀಗೆ ತಮ್ಮನ್ನು ಖಂಡಿಸುವಾಗ ಶ್ರೀರಾಮಕೃಷ್ಣರೇನಾದರೂ ಭಾವಸ್ಥಿತಿಯಲ್ಲಿದ್ದರೆ ಅವನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ; ಸುಮ್ಮನೆ ಮುಗುಳ್ನಗುತ್ತ ಆಲಿಸುತ್ತಿದ್ದರು. ಆದರೆ ಅವರು ಸಹಜಸ್ಥಿತಿಯಲ್ಲಿರುವಾಗ ಅವನು ಹೀಗೆಲ್ಲ ಹೇಳಿದರೆ, ಅವರ ಮನಸ್ಸಿಗೆ ಬಹಳ ಗಲಿಬಿಲಿಯುಂಟಾಗಿಬಿಡುತ್ತಿತ್ತು. ಏಕೆಂದರೆ, ಮೇಲ್ನೋಟಕ್ಕೆ ಅವನ ಮಾತು ತರ್ಕಬದ್ಧವಾಗಿರುತ್ತಿತ್ತು. ಅಲ್ಲದೆ ಅವನನ್ನು ಶ್ರೀರಾಮಕೃಷ್ಣರು ನಾರಾಯಣಸ್ವರೂಪಿಯೆಂದು ತಿಳಿದಿದ್ದರು. 'ಇಂಥವನಾಡುವ ಮಾತು ಸುಳ್ಳಾಗಲು ಸಾಧ್ಯವಿಲ್ಲವಲ್ಲ'—ಎಂಬ ಶಂಕೆ ಅವರಲ್ಲೆದ್ದು ತಮ್ಮ ದರ್ಶನದ ಬಗ್ಗೆಯೇ ಅನುಮಾನ ತಾಳಿಬಿಡುತ್ತಿದ್ದರು; ಮತ್ತು ಜಗನ್ಮಾತೆಯ ಬಳಿಗೋಡಿ, "ಅಮ್ಮಾ ನರೇಂದ್ರ ಹೀಗೆಲ್ಲ ಹೇಳುತ್ತಾನಲ್ಲ, ಏನು ಮಾಡಲಿ ?" ಎಂದು ಮೊರೆಯಿಡುತ್ತಿದ್ದರು. ಶ್ರೀರಾಮಕೃಷ್ಣರ ಪಾಲಿಗೆ ಆಕೆ ಸ್ಪಷ್ಟವಾಗಿ ಮಾತನಾಡುವ ಜೀವಂತ ದೇವಿಯಲ್ಲವೆ ? ಅವಳೆನ್ನುತ್ತಿದ್ದಳು, "ಅವನು ಹೇಳಿದ್ದನ್ನೆಲ್ಲ ಏಕೆ ತಲೆಗೆ ಹಚ್ಚಿಕೊಳ್ಳುತ್ತಿ? ಇನ್ನು ಕೆಲವು ದಿನ, ಅಷ್ಟೆ. ಆಮೇಲೆ ಅವನು ನೀನು ಹೇಳಿದ ಪ್ರತಿಯೊಂದು ಮಾತನ್ನೂ ಒಪ್ಪಿಕೊಳ್ಳುತ್ತಾನೆ, ನೋಡುತ್ತಿರು." ಆಗಲೇ ಅವರಿಗೆ ಸಮಾಧಾನ.

ಒಮ್ಮೆ ನರೇಂದ್ರ ಹಲವಾರು ದಿನಗಳವರೆಗೂ ದಕ್ಷಿಣೇಶ್ವರಕ್ಕೆ ಹೋಗಲೇ ಇಲ್ಲ. ಅವನನ್ನು ಕಾಣದೆ ಶ್ರೀರಾಮಕೃಷ್ಣರ ಜೀವ ತಲ್ಲಣಿಸಿಹೋಯಿತು. ಭಕ್ತರ ಮೂಲಕ ಹೇಳಿಕಳಿಸಿದರೂ ಅದೇಕೋ ಆತ ಬರಲೇ ಇಲ್ಲ. ಇನ್ನು ಶ್ರೀರಾಮಕೃಷ್ಣರಿಂದ ಸುಮ್ಮನಿರಲು ಸಾಧ್ಯವಾಗಲಿಲ್ಲ. ತಾವೇ ಹೋಗಿ ನೋಡಿಕೊಂಡು ಬರಲು ಮನಸ್ಸು ಮಾಡಿದರು. ಅಂದು ಭಾನುವಾರ. ಸಂಜೆಯ ಹೊತ್ತಿಗೆ ಅವನು ತಪ್ಪದೆ 'ಸಾಧಾರಣ ಬ್ರಾಹ್ಮಸಮಾಜ'ದ ಪ್ರಾರ್ಥನಾಗೋಷ್ಠಿಗೆ ಹೋಗುತ್ತಾನೆ ಎನ್ನುವುದು ಅವರಿಗೆ ತಿಳಿದಿತ್ತು. ಆದ್ದರಿಂದ ತಾವು ಅಲ್ಲಿಗೇ ಹೋಗಿಬಿಡುವುದೆಂದು ಆಲೋಚಿಸಿ, ಒಂದಿಬ್ಬರು ಭಕ್ತರೊಂದಿಗೆ ನೇರವಾಗಿ ಅತ್ತ ಹೊರಟರು. ತಾವು ಹೀಗೆ ಕರೆಯಿಸಿಕೊಳ್ಳದೆ ಅಲ್ಲಿಗೆ ಹೋದರೆ ಯಾರೇನು ಭಾವಿಸಿಯಾರು ಎಂಬ ಶಂಕೆ ಅವರಿಗೆ ಬರಲೇ ಇಲ್ಲ. ಏಕೆಂದರೆ ಅವರು ಅದಾಗಲೇ ಹಲವಾರು ಬಾರಿ ಬ್ರಾಹ್ಮಸಮಾಜದ ಸಭೆಗಳಿಗೆ ಹೋದದ್ದುಂಟು. ಅಲ್ಲದೆ, ಬ್ರಾಹ್ಮಸಮಾಜದ ಎರಡು ಪಂಗಡಗಳ ಮುಖಂಡರಿಗೂ ಅವರು ಬೇಕಾದವರೇ. ಆದ್ದರಿಂದ ಆ ಬಗ್ಗೆ ಚಿಂತಿಸದೆ, ಬ್ರಾಹ್ಮಸಮಾಜಕ್ಕೆ ಬಂದು ತಲುಪಿದರು. ಸಭೆ ನಡೆಯುತ್ತಿತ್ತು. ಭಜನೆಯ ತಂಡದ ಇತರರೊಂದಿಗೆ ನರೇಂದ್ರ ವೇದಿಕೆಯ ಮೇಲೆ ಕುಳಿತಿದ್ದ. ಮುಖಂಡರೊಬ್ಬರು ಪ್ರವಚನ ನೀಡುತ್ತಿದ್ದರು. ಶ್ರೀರಾಮಕೃಷ್ಣರು ನರೇಂದ್ರನ ಕುರಿತಾಗಿಯೇ ಆಲೋಚಿಸುತ್ತ ಅರ್ಧಬಾಹ್ಯಾವಸ್ಥೆಯಲ್ಲಿದ್ದುದರಿಂದ, ಬೇರೇನನ್ನೂ ಗಮನಿಸದೆ ಸೀದಾ ಒಳಗೆ ಪ್ರವೇಶಮಾಡಿ ಮುಂದಕ್ಕೆ ಬಂದರು. ಸಭಿಕರೆಲ್ಲ ಅಚ್ಚರಿ-ಕುತೂಹಲಗಳಿಂದ ಅವರನ್ನೇ ದಿಟ್ಟಿಸಲಾರಂಭಿಸಿದರು. ಗುಜುಗುಜು ಪ್ರಾರಂಭವಾಯಿತು. ಬ್ರಾಹ್ಮ ಧುರೀಣರೆಲ್ಲ ಶ್ರೀರಾಮಕೃಷ್ಣರನ್ನು ಅತ್ಯಂತ ಪೂಜ್ಯದೃಷ್ಟಿಯಿಂದ ನೋಡುತ್ತಿದ್ದರು. ಆದರೆ ಕೇಶವಸೇನ-ವಿಜಯಕೃಷ್ಣರಲ್ಲಿ ಭಿನ್ನಾಭಿಪ್ರಾಯವುಂಟಾಗಿ ಸಮಾಜವು ಒಡೆಯಲು ಶ್ರೀರಾಮಕೃಷ್ಣರೇ ಕಾರಣ ಎಂದು ಇತರ ಅನೇಕ ಸದಸ್ಯರು

ತಪ್ಪುಕಲ್ಪನೆ ಹೊಂದಿದ್ದರು. ಆದ್ದರಿಂದ, ಅಂದು ಅಲ್ಲಿದ್ದ ಹಿರಿಯರು ಯಾರೂ ಅವರನ್ನು ಆದರಿಸುವ ಗೋಜಿಗೆ ಹೋಗದೆ ಸುಮ್ಮನಿದ್ದುಬಿಟ್ಟರು. ಆದರೆ ಶ್ರೀರಾಮಕೃಷ್ಣರು ಮಾತ್ರ ಅತ್ತಿತ್ತ ನೋಡದೆ, ಬೇರೇನನ್ನೂ ಚಿಂತಿಸದೆ ವೇದಿಕೆಯ ಬಳಿಗೇ ನಡೆದರು. ನರೇಂದ್ರನನ್ನು ಕಂಡು "ನರೇನ್, ನರೇನ್!" ಎನ್ನುತ್ತ ಪೂರ್ಣ ಸಮಾಧಿಸ್ಥರಾಗಿ ನಿಂತುಬಿಟ್ಟರು! ಇದು ಸಭಿಕರಿಗೆ ಇನ್ನಷ್ಟು ಕುತೂಹಲಕ್ಕೆ ಕಾರಣವಾಯಿತು. ಹಿಂದಿನ ಸಾಲುಗಳಲ್ಲಿ ಕುಳಿತಿದ್ದ ಅನೇಕರು ಅವರನ್ನು ಸರಿಯಾಗಿ ನೋಡುವ ಉದ್ದೇಶದಿಂದ ಬೆಂಚುಗಳ ಮೇಲೆ ಹತ್ತಿನಿಂತರು. ಈ ಗಲಭೆಯನ್ನೆಲ್ಲ ನಿಲ್ಲಿಸಲು ಕೆಲವರು ದೀಪಗಳನ್ನು ಆರಿಸಿಬಿಟ್ಟರು. ಇದರಿಂದ ಗಲಭೆ ನಿಲ್ಲುವುದರ ಬದಲಿಗೆ ಇನ್ನಷ್ಟು ಹೆಚ್ಚಿತು! ಒಳಗೆ ಕುಳಿತಿದ್ದವರೆಲ್ಲ ಬಾಗಿಲ ಕಡೆಗೆ ಓಡಿದರು. ಹೀಗೆ ನಿಮಿಷಾರ್ಧದಲ್ಲಿ ದೊಡ್ಡ ಕೋಲಾಹಲವುಂಟಾಯಿತು. ಇದನ್ನೆಲ್ಲ ನೋಡುತ್ತ ನರೇಂದ್ರ ಖೇದಗೊಂಡ. ಶ್ರೀರಾಮಕೃಷ್ಣರು ಈಗ ಇಲ್ಲಿಗೇಕೆ ಬಂದಿದ್ದಾರೆಂಬುದು ಅವನಿಗೆ ತಿಳಿದುಹೋಯಿತು. ಕೂಡಲೇ ಅವರ ನೆರವಿಗೆ ಧಾವಿಸಿದ. ಅವರ ಕೈಹಿಡಿದುಕೊಂಡು, ಮೆಲ್ಲಗೆ ಹಿಂಬಾಗಿಲ ಮೂಲಕ ಹೊರಗೆ ಕರೆತಂದ. ಬಳಿಕ ಒಂದು ಸಾರೋಟಿನಲ್ಲಿ ಅವರೊಂದಿಗೆ ದಕ್ಷಿಣೇಶ್ವರಕ್ಕೆ ಬಂದ.

ಬ್ರಾಹ್ಮಸಮಾಜೀಯರಿಂದ ಶ್ರೀರಾಮಕೃಷ್ಣರಿಗಾದ ಅವಮರ್ಯಾದೆಯನ್ನು ಕಂಡು ನರೇಂದ್ರನ ಮೈಯುರಿಯುತ್ತಿದೆ. ಒಬ್ಬ ಆಗಂತುಕನಿಗೆ ಕೊಡುವ ಮರ್ಯಾದೆಯನ್ನಾದರೂ ಕೊಡಬೇಡವೆ? ಅಲ್ಲದೆ ಇದಕ್ಕೆಲ್ಲ ಪರೋಕ್ಷವಾಗಿ ತಾನೇ ಕಾರಣನೆಂಬ ದುಗುಡ ಬೇರೆ. "ಇಂಥ ಜಾಗಕ್ಕೆ ನೀವೇಕೆ ಬಂದಿರಿ? ನನ್ನನ್ನು ಹುಡುಕಿಕೊಂಡು ಯಾಕೆ ಬರಬೇಕಾಗಿತ್ತು?" ಎಂದು ಶ್ರೀರಾಮಕೃಷ್ಣರನ್ನು ಚೆನ್ನಾಗಿ ದಬಾಯಿಸಿದ. ಆದರೆ ಅವರಿಗೆ ಮಾತ್ರ, ತಮಗೆ ಅಪಮಾನವಾಯಿತೆಂಬ ಭಾವನೆಯೂ ಇಲ್ಲ; ನರೇಂದ್ರನ ಛೀಮಾರಿಯಿಂದ ಬೇಸರವೂ ಇಲ್ಲ. ಅವರಿಗೆ ಬೇಕಾಗಿದ್ದುದೊಂದೇ—ನರೇಂದ್ರ. ಅವನು ಸಿಕ್ಕಿಬಿಟ್ಟಿದ್ದಾನೆ! ತಮ್ಮ ಸನಿಹದಲ್ಲೇ ಇದ್ದಾನೆ! ಇನ್ನಾವುದನ್ನು ಕಟ್ಟಿಕೊಂಡು ಏನಾಗಬೇಕು? ಆನಂದದಲ್ಲಿ ಮುಳುಗಿ ತಾವೇತಾವಾಗಿದ್ದಾರೆ.

ಶ್ರೀರಾಮಕೃಷ್ಣರು ತನ್ನ ಮೇಲಿನ ಪ್ರೀತಿಯಿಂದಾಗಿ, ತಮ್ಮ ಸ್ವಂತ ಆತ್ಮಗೌರವದ ಕಡೆಗೂ ಗಮನ ಕೊಡುತ್ತಿಲ್ಲವೆಂದು ಕಂಡಾಗ ನರೇಂದ್ರ ಅವರಿಗೊಂದು ಎಚ್ಚರಿಕೆಯ ಮಾತು ಹೇಳಿದ:

"ಪುರಾಣದಲ್ಲಿ ಬರುವ ರಾಜಾ ಭರತನ ಕಥೆಯನ್ನು ಜ್ಞಾಪಿಸಿಕೊಳ್ಳಿ. ಅವನು ತಪಸ್ಸಿನಲ್ಲಿ ತೊಡಗಿದ್ದಾಗಲೂ ತಾನು ಸಾಕಿದ್ದ ಜಿಂಕೆಯ ಬಗೆಗೇ ಯೋಚಿಸಿ ಯೋಚಿಸಿ ಸತ್ತದ್ದರಿಂದ ಮುಂದಿನ ಜನ್ಮದಲ್ಲಿ ಜಿಂಕೆಯಾಗಿಯೇ ಹುಟ್ಟಬೇಕಾಯಿತಂತೆ. ಈ ಕಥೆಯೇನಾದರೂ ನಿಜವೆನ್ನುವುದಾದಲ್ಲಿ, ನನ್ನ ಕುರಿತಾಗಿ ಇಷ್ಟೊಂದು ಚಿಂತಿಸುತ್ತಿರುವ ನೀವೂ ಅದನ್ನು ನೆನಪಿಟ್ಟುಕೊಳ್ಳುವುದು ಒಳ್ಳೆಯದು. ದಯವಿಟ್ಟು ಅದರ ಪರಿಣಾಮವೇನಾದೀತೆಂದು ಯೋಚಿಸಿನೋಡಿ."

ಬಾಲಕಸ್ವಭಾವದ ಶ್ರೀರಾಮಕೃಷ್ಣರು ಈ ಮಾತನ್ನು ಕೇಳಿ ಅಲ್ಲಾಡಿಹೋದರು. ಸತ್ಯವ್ರತನಾದ ನರೇಂದ್ರನಲ್ಲವೆ ಹಾಗೆ ಹೇಳುತ್ತಿರುವುದು? ಎಂದಮೇಲೆ ಅದು ನಿಜವೇ ಇರಬೇಕು!

"ಆಹ್! ಸರಿಯಾಗೇ ಹೇಳಿದೆ ಮಗು! ಹಾಗೆಯೇ ಆಗಿಬಿಟ್ಟರೇನು ಗತಿ?

ಆದರೆ ನನಗೆ ನಿನ್ನನ್ನು ನೋಡದೆ ಇರುವುದಕ್ಕೆ ಸಾಧ್ಯವೇ ಇಲ್ಲವಲ್ಲ! ಈಗೇನು ಮಾಡಲಪ್ಪ?" ಎಂದುದ್ಗರಿಸಿದರು. ಭಯಾಕ್ರಾಂತರಾಗಿ ಓಡಿದರು, ಮಾತೆಯ ಮಂದಿರಕ್ಕೆ! ಆದರೆ, ಒಂದೆರಡು ನಿಮಿಷದಲ್ಲಿ ಹಿಂದಿರುಗಿದಾಗ ಅವರ ಮುಖ ನಗೆ ಯಿಂದ ಬೆಳಗುತ್ತಿತ್ತು. ಬಂದವರೇ ಹುಸಿ ಮುನಿಸಿನಿಂದ ಗದರಿದರು:

"ಹೋಗೋ, ಘಟಿಂಗ! ಇನ್ನೆಂದಿಗೂ ನಾನು ನಿನ್ನ ಮಾತಿಗೆ ಕಿವಿಗೊಡಲಾರೆ. ತಾಯಿ ಏನು ಹೇಳಿದಳು ಗೊತ್ತೆ? 'ನೀನು ಅವನನ್ನು ಸ್ವಯಂ ನಾರಾಯಣನೆಂಬಂತೆ ನೋಡುತ್ತಿರುವುದರಿಂದಲೇ ಅಷ್ಟೊಂದು ಪ್ರೀತಿಸುತ್ತಿರುವುದು. ಯಾವಾಗ ಅವನಲ್ಲಿ ನಾರಾಯಣನನ್ನು ಕಾಣುವುದಿಲ್ಲವೋ, ಆಗ ನೀನು ಅವನನ್ನು ಕಣ್ಣೆತ್ತಿಯೂ ನೋಡ ಲಾರೆ!' ಅಂತ ಹೇಳಿದಳು, ತಿಳಿಯಿತೋ?"

ಹೀಗೆ ಶ್ರೀರಾಮಕೃಷ್ಣರು ತಮ್ಮ ಒಂದೇ ಮಾತಿನಿಂದ ಅವನ ತರ್ಕವನ್ನೆಲ್ಲ ತಳ್ಳಿ ಹಾಕಿಬಿಟ್ಟರು.

ಅವರ ಈ ಮಾತಿನ ಮರ್ಮವೇನು? ನರೇಂದ್ರನನ್ನು ಅವರು ಕೇವಲ ಒಬ್ಬ ವ್ಯಕ್ತಿಯೆಂಬಂತೆ ಕಂಡು ಪ್ರೀತಿಸುತ್ತಿಲ್ಲ; ಬದಲಾಗಿ, ನರರೂಪಿಯಾದ ಸ್ವಯಂ ನಾರಾಯಣನನ್ನಾಗಿ ಕಂಡು ಪ್ರೀತಿಸುತ್ತಿದ್ದಾರೆ! ನಾವು ಮನುಷ್ಯರನ್ನು ಕೇವಲ ಮನುಷ್ಯ ರೆಂಬ ದೃಷ್ಟಿಯಿಂದ ಪ್ರೀತಿಸಿದರೆ ಅದು ಮೋಹವೆನ್ನಿಸುತ್ತದೆ; ಆದರೆ ಭಗವತ್ಸ್ವರೂಪಿ ಗಳಂತೆ ಕಂಡು ಪ್ರೀತಿಸಿದರೆ ಅದು ಪ್ರೇಮವೆನಿಸುತ್ತದೆ. 'ಮೋಹ'ವೆನ್ನುವುದು, ಬಂಧ ನಕ್ಕೆ ಕಾರಣವಾದರೆ, 'ಪ್ರೇಮ'ವೆಂಬುದು ಬಿಡುಗಡೆಗೆ—ಎಂದರೆ ಮುಕ್ತಿಗೆ—ಕಾರಣ ವಾಗುತ್ತದೆ. ಇಲ್ಲಿ ಶ್ರೀರಾಮಕೃಷ್ಣರು ನರೇಂದ್ರನಲ್ಲಿ ಸಾಕ್ಷಾತ್ ಭಗವಂತನನ್ನು ಕಾಣು ತ್ತಿದ್ದಾರೆ; ಆದ್ದರಿಂದ ಅವರಿಗೆ ಭರತನ ಗತಿ ಉಂಟಾಗಲಾರದು. ನರೇಂದ್ರ ಹಾಗೂ ಇತರ ಶಿಷ್ಯರ ಮೇಲೆ ಶ್ರೀರಾಮಕೃಷ್ಣರ ಪ್ರೀತಿ ಅಷ್ಟೊಂದು ಉಕ್ಕಿಹರಿಯುತ್ತಿದ್ದುದರ ಮೂಲಕಾರಣವನ್ನು ನಾವಿಲ್ಲಿ ಕಂಡುಕೊಳ್ಳಬಹುದಾಗಿದೆ. ಅವರ ಪ್ರೀತಿಯೆನ್ನುವುದು ಮಾನುಷವಾದ ಸಂಕುಚಿತ ಮೋಹವಲ್ಲ.

ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಬಳಿಯಲ್ಲೇ ಇನ್ನೊಬ್ಬ 'ಮಹಾತ್ಮ' ವಾಸ ವಾಗಿದ್ದ. ಅವನ ಹೆಸರು ಹಾಜರಾ. ಅವನೊಬ್ಬ ಆಷಾಢಭೂತಿ; ತಾನು ದೊಡ್ಡ ಆಧ್ಯಾ ತ್ಮಿಕ ವ್ಯಕ್ತಿಯೆಂಬಂತೆ ಸೋಗು ಹಾಕುತ್ತಿದ್ದ. ಅಲ್ಲಿಗೆ ಬರುವ ಭಕ್ತರನ್ನು—ಮುಖ್ಯವಾಗಿ ಯುವಕರನ್ನು—ತನ್ನೆಡೆಗೆ ಸೆಳೆದುಕೊಳ್ಳುವುದು; ಅವರಿಗೆ ಒಂದಿಷ್ಟು 'ಬೋಧನೆ' ಮಾಡುವುದು; ಸಾಧ್ಯವಾದರೆ ಒಂದಿಷ್ಟು ಹಣ ಕೀಳುವ ಪ್ರಯತ್ನ ಮಾಡುವುದು— ಇದೇ ಅವನ ಕಸುಬು. ಶ್ರೀರಾಮಕೃಷ್ಣರು ನರೇಂದ್ರ-ರಾಖಾಲಾದಿ ಹುಡುಗರ ಜೊತೆ ಬಹಳವಾಗಿ ಬೆರೆಯುವುದನ್ನು ಕಂಡು ಒಮ್ಮೆ ಟೀಕಿಸುತ್ತಾನೆ, "ಏನು, ನೀವು ಈ ಹುಡುಗರನ್ನೆಲ್ಲ ಅಷ್ಟೊಂದು ಹಚ್ಚಿಕೊಂಡುಬಿಟ್ಟಿದ್ದೀರಲ್ಲ, ನೀವು ಧ್ಯಾನಜಪ ಮಾಡು ವುದು ಯಾವಾಗ?" ಈತ ಸ್ವತಃ ತಾನೇ ದೇವರ ಧ್ಯಾನ ಮಾಡದೆ, ಇತರರು ಬರು ವುದು-ಹೋಗುವುದನ್ನೇ ಗಮನಿಸುತ್ತ ಕುಳಿತುಕೊಂಡಿರುವವನು; ಇಂಥವನು ಶ್ರೀರಾಮಕೃಷ್ಣರಿಗೆ ಈ ಮಾತುಗಳನ್ನು ಹೇಳುತ್ತಿದ್ದಾನೆ! ಅಲ್ಲದೆ ಅವರು ಇನ್ನು ಧ್ಯಾನ ಮಾಡಿ ಸಾಧಿಸಬೇಕಾದ್ದೇನಿದೆ? ಸಾಕ್ಷಾತ್ಕಾರದ ಅತ್ಯುನ್ನತ ಶಿಖರವನ್ನೇ ಏರಿರುವವರು ಅವರು. ಆದರೆ ಹಿಂದೆಯೇ ನೋಡಿದಂತೆ ಅವರದು ಬಾಲಕಸ್ವಭಾವ. ಹೋಗಿ ಜಗನ್ಮಾತೆಯನ್ನು ಕೇಳುತ್ತಾರೆ—'ಹಾಜರಾ ಹೀಗೆ ಹೇಳುತ್ತಾನಲ್ಲ, ಏನು ಮಾಡಲಿ?'

ಎಂದು. ತಕ್ಷಣ ಜಗನ್ಮಾತೆ ಅವರಿಗೆ ಸಮಾಧಿಸ್ಥಿತಿಯಲ್ಲಿ ನೆನಪಿಸಿಕೊಡುತ್ತಾಳೆ—"ಎಲ್ಲ ಮನುಷ್ಯರ ರೂಪದಲ್ಲೂ ವ್ಯಕ್ತವಾಗಿರುವವಳು ನಾನೇ; ಆದರೆ ಪರಿಶುದ್ಧಾತ್ಮರಲ್ಲಿ ವಿಶೇಷವಾಗಿ ಪ್ರಕಟವಾಗಿದ್ದೇನೆ" ಎಂದು. ಉತ್ತರ ಸ್ಪಷ್ಟವಾಗಿದೆ. ನರೇಂದ್ರಾದಿಗಳೆಲ್ಲ ಪರಿಶುದ್ಧಾತ್ಮರು. ಆದ್ದರಿಂದ ಪರಮಾತ್ಮ ಅವರಲ್ಲಿ ವಿಶೇಷವಾಗಿ ಪ್ರಕಟಗೊಂಡಿದ್ದಾನೆ. ಆದಕ್ಕೇ ಶ್ರೀರಾಮಕೃಷ್ಣರಿಗೆ ಅವರೆಂದರೆ ವಿಶೇಷ ಪ್ರೀತಿ, ವಿಶೇಷ ಆನಂದ. ಜಗನ್ಮಾತೆ ಯಿಂದ ಆ ಉತ್ತರ ಪಡೆದು ಸಹಜಸ್ಥಿತಿಗೆ ಮರಳಿದಾಗ ಶ್ರೀರಾಮಕೃಷ್ಣರು ಹಾಜರಾನ ಮೇಲೆ ಸಿಟ್ಟುಗೊಂಡು ತಮ್ಮಷ್ಟಕ್ಕೆ ತಾವೇ ಅಂದುಕೊಳ್ಳುತ್ತಾರೆ: "ಎಂಥ ದುಷ್ಟ ಇವನು! ನನ್ನ ಮನಸ್ಸನ್ನೆಲ್ಲ ಕದಡಿಬಿಟ್ಟನಲ್ಲ!" ಆದರೆ ಮತ್ತೆ ತಾವೇ ಸಮಾಧಾನ ಮಾಡಿಕೊಳ್ಳುತ್ತಾರೆ: "ಹೋಗಲಿ, ಆ ಬಡಪಾಯಿಯನ್ನೇಕೆ ಬೈಯುವುದು? ಅವನಿಗೆ ಇದೆಲ್ಲ ಹೇಗೆ ಅರ್ಥವಾಗಬೇಕು!"

ಶ್ರೀರಾಮಕೃಷ್ಣರು ಇನ್ನೊಮ್ಮೆ ಭಕ್ತರೆದುರು ಹೇಳುತ್ತಾರೆ:

"ಈ ಪರಿಶುದ್ಧ ಹೃದಯದ ಹುಡುಗರನ್ನೆಲ್ಲ ನಾನು ಸಾಕ್ಷಾತ್ ನಾರಾಯಣ ಸ್ವರೂಪರು ಅಂತಲೇ ಭಾವಿಸುತ್ತೇನೆ. ನರೇಂದ್ರ ಮೊದಲ ಸಲ ಇಲ್ಲಗೆ ಬಂದಾಗ ನೋಡುತ್ತೇನೆ—ಅವನಲ್ಲಿ ದೇಹಭಾವನೆಯೇ ಇರಲಿಲ್ಲ. ನಾನು ಅವನ ಎದೆಯನ್ನು ಮುಟ್ಟಿದ ತಕ್ಷಣವೇ ಅವನಿಗೆ ಬಾಹ್ಯಪ್ರಜ್ಞೆ ತಪ್ಪಿಹೋಯಿತು; ಅಂಥ ಪರಿಶುದ್ಧ ಆತ. ಕ್ರಮೇಣ ನನಗೆ ಅವನನ್ನು ಮತ್ತೆಮತ್ತೆ ನೋಡಬೇಕು ಎನ್ನುವ ಭಾವನೆ ಬೆಳೆಯುತ್ತ ಬಂತು. ಅವನನ್ನು ನೋಡದೆ ಇದ್ದರೆ ಮನಸ್ಸಿಗೆ ತುಂಬ ನೋವಾಗುತ್ತಿತ್ತು. ಆಗ ಒಮ್ಮೆ ನಾನು ಕಾಳೀದೇವಾಲಯದ ಅಧಿಕಾರಿಯಾದ ಭೋಲಾನಾಥನನ್ನು ಕೇಳಿದೆ—'ಏನಪ್ಪ, ನನಗೆ ಈ ತರಹದ ಭಾವ ಏಕೆ ಬರುತ್ತಿದೆ? ಅದೂ ಒಬ್ಬ ಹುಡುಗನ ಮೇಲೆ! ಅದರಲ್ಲೂ ಅವನೊಬ್ಬ ಕಾಯಸ್ಥರ ಜಾತಿಯವನು!' ಅದಕ್ಕೆ ಭೋಲಾನಾಥ ಹೇಳಿದ: 'ಮಹಾಶಯರೆ; ಎಲ್ಲ ಸರಿಯಾಗಿಯೇ ಇದೆ. ಮಹಾಭಾರತದಲ್ಲಿ ಹೇಳಿದೆ—ಯಾರ ಮನಸ್ಸು ಸಮಾಧಿಸ್ಥಿತಿಗೆ ಮುಟ್ಟಿ ಸಹಜಸ್ಥಿತಿಗೆ ಹಿಂದಿರುಗುತ್ತದೆಯೋ, ಅಂಥವರು ಸತ್ವಗುಣ ತುಂಬಿರುವ ವ್ಯಕ್ತಿಗಳ ಜೊತೆಯುಲ್ಲಿ ಮಾತ್ರವೇ ಸಂತೋಷವಾಗಿರಬಲ್ಲರು; ಉನ್ನತ ಆಧ್ಯಾತ್ಮಶೀಲ ವ್ಯಕ್ತಿಗಳ ಜೊತೆಯುಲ್ಲಿ ಮಾತ್ರವೇ ಅವರಿಗೆ ಆನಂದ ಅಂತ.' ಭೋಲಾನಾಥ ಹೇಳಿದ ಈ ಮಾತನ್ನು ಕೇಳಿದಮೇಲೆಯೇ ನನಗೆ ಸ್ವಲ್ಪ ಸಮಾಧಾನ ವಾಯಿತು."

ನರೇಂದ್ರನ ಗುಣಗಾನ ಮಾಡುವುದೆಂದರೆ ಶ್ರೀರಾಮಕೃಷ್ಣರಿಗೆ ಎಲ್ಲಿಲ್ಲದ ಉತ್ಸಾಹ. ಒಮ್ಮೆ ಯದುಮಲ್ಲಿಕನ ಉದ್ಯಾನಗೃಹದ ಅಧಿಕಾರಿಯಾದ ರತನ್ ಎಂಬವನ ಮುಂದೆ ನರೇಂದ್ರನನ್ನು ಕೊಂಡಾಡುತ್ತ ಹೇಳುತ್ತಾರೆ: "ನೋಡು, ಈ ಹುಡುಗರೆಲ್ಲರೂ ಜಾಣರೇ; ಬಹಳ ಒಳ್ಳೆಯವರೇ. ಆದರೆ ನರೇಂದ್ರನಂಥವನನ್ನು ನಾನೆಲ್ಲೂ ನೋಡಿಲ್ಲ. ಅವನು ಹಾಡುಗಾರಿಕೆಯಲ್ಲಿ, ವಾದ್ಯಗಳನ್ನು ನುಡಿಸುವುದರಲ್ಲಿ ಎಷ್ಟು ನಿಪುಣನೋ ಜ್ಞಾನಸಂಪಾದನೆಯಲ್ಲೂ ಅಷ್ಟೇ ಪ್ರಚಂಡ; ಸಂಭಾಷಣೆ ನಡೆಸು ವುದರಲ್ಲಿ ಎಷ್ಟು ಗಟ್ಟಿಗನೋ ಆಧ್ಯಾತ್ಮಿಕವಾಗಿಯೂ ಅಷ್ಟೇ ಸಮರ್ಥ! ಧ್ಯಾನಕ್ಕೆ ಕುಳಿತನೆಂದರೆ ಇಡೀ ರಾತ್ರಿ ಮೈಮೇಲೆ ಪರಿವೆಯೇ ಇರುವುದಿಲ್ಲ. ನನ್ನ ನರೇಂದ್ರ ಇದ್ದಾನಲ್ಲ, ಅವನು ಖೋಟಾ ಅಲ್ಲ, ತಾಜಾ ನಾಣ್ಯ; ಬಡಿದರೆ 'ಠಣಾರ್' ಎಂಬ ಶುದ್ಧವಾದ ನಾದವೇ ಬರುತ್ತದೆ... ಇತರ ಹುಡುಗರೆಲ್ಲ ಹಾಗೂಹೀಗೂ ಕಷ್ಟಪಟ್ಟು

ಎರಡುಮೂರು ಪರೀಕ್ಷೆಗಳನ್ನು ಪಾಸುಮಾಡಿದರೆ ಅವರ ಮಟ್ಟಿಗೆ ಅದೇ ಬಹಳ ದೊಡ್ಡದು. ಅಲ್ಲಿಗೆ ಅವರದ್ದೆಲ್ಲ ಮುಗಿಯಿತು. ಆದರೆ ನರೇಂದ್ರ ಹಾಗಲ್ಲ. ಅವನಿಗೆ ಎಲ್ಲವೂ ಲೀಲಾಜಾಲ. ಪರೀಕ್ಷೆ ಪಾಸು ಮಾಡುವುದೆಲ್ಲ ಅವನಿಗೆ ನೀರು ಕುಡಿದಂತೆ. ಅಲ್ಲದೆ ಅವನು ಬ್ರಾಹ್ಮಸಮಾಜಕ್ಕೆ ಹೋಗುತ್ತಾನೆ. ಆದರೆ ಅವನು ಉಳಿದ ಬ್ರಾಹ್ಮ ಸದಸ್ಯರಂತಲ್ಲ; ಅವನು ನಿಜವಾದ ಬ್ರಹ್ಮಜ್ಞಾನಿ! ಅವನು ಧ್ಯಾನಕ್ಕೆ ಕುಳಿತಾಗ ಬೆಳಕು ಕಾಣುತ್ತಾನೆ! ನಾನು ನರೇಂದ್ರನನ್ನು ಅಷ್ಟೊಂದು ಪ್ರೀತಿಸುವುದು ಸುಮ್ಮಸುಮ್ಮನೆ ಎಂದು ತಿಳಿದುಕೊಂಡೆಯಾ ?"

ಇನ್ನೊಂದು ಸಲ, ತಮ್ಮ ಇತರ ಭಕ್ತರೊಂದಿಗೆ ನರೇಂದ್ರನನ್ನು ಹೋಲಿಸುತ್ತ ಅವನ ಹಿರಿಮೆಯನ್ನು, ಶ್ರೇಷ್ಠತೆಯನ್ನು ವರ್ಣಿಸುತ್ತಾರೆ:

"ನರೇಂದ್ರ ಅತ್ಯಂತ ಉನ್ನತ ಮಟ್ಟಕ್ಕೆ—ಅಖಂಡ ಸಚ್ಚಿದಾನಂದ ಸಾಮ್ರಾಜ್ಯಕ್ಕೆ ಸೇರಿದವನು. ಅವನು ಸ್ವಭಾವತಃ ಪೌರುಷವಂತ. ಇಲ್ಲಿಗೆ ಎಷ್ಟೊಂದು ಜನ ಬರುತ್ತಾರೆ, ಆದರೆ ನರೇಂದ್ರನಂಥವರು ಇನ್ನೊಬ್ಬರಿಲ್ಲ.

"ಆಗಾಗ ನಾನು ಭಕ್ತರ ಸಾಮರ್ಥ್ಯವನ್ನು ತೂಗಿನೋಡುತ್ತಿರುತ್ತೇನೆ. ಅವರಲ್ಲಿ ಕೆಲವರು ಹತ್ತು ದಳದ ಪದ್ಮದ ಹಾಗೆ ಕಾಣುತ್ತಾರೆ; ಇನ್ನು ಕೆಲವರು ಹದಿನಾರು ದಳದ ಪದ್ಮದಂತೆ; ಇನ್ನು ಕೆಲವರು ಶತದಳ ಪದ್ಮದಂತೆ ಕಾಣುತ್ತಾರೆ. ಆದರೆ ನರೇಂದ್ರ ಇದ್ದಾನಲ್ಲ, ಅವನು ಮಾತ್ರ ಸಹಸ್ರದಳ ಪದ್ಮ. ಇತರ ಭಕ್ತರೆಲ್ಲ ತಂಬಿಗೆ-ಬಿಂದಿಗೆ ಗಳಾದರೆ ನರೇಂದ್ರ ದೊಡ್ಡ ಗುಡಾಣ. ಇತರರೆಲ್ಲ ಕೆರೆಕುಂಟೆಗಳಾದರೆ ನರೇಂದ್ರ ಮಹಾಸರೋವರ.

"ನರೇಂದ್ರ ಯಾರ ಹಿಡಿತಕ್ಕೂ ಸಿಕ್ಕುವವನಲ್ಲ. ಅವನು ಇಂದ್ರಿಯಸುಖಗಳಿಗೆ ಅಂಟಿಕೊಂಡು ಅವುಗಳ ವಶನಾಗುವವನಲ್ಲ. ಅವನು ಗಂಡು ಪಾರಿವಾಳದಂತೆ; ಗಂಡುಪಾರಿವಾಳದ ಕೊಕ್ಕನ್ನು ಗಟ್ಟಿಯಾಗಿ ಹಿಡಿದುಕೊಂಡರೆ ಅದು ತಪ್ಪಿಸಿಕೊಂಡು ಹಾರಿಹೋಗುತ್ತದೆ, ಆದರೆ ಹೆಣ್ಣು ಪಾರಿವಾಳ ಹಾಗೆ ಮಾಡಲಾರದು. ನರೇಂದ್ರನದು ಪುರುಷಸ್ವಭಾವ. ಆದ್ದರಿಂದಲೇ ಅವನು ಗಾಡಿಯ ಬಲಭಾಗಕ್ಕೆ ಕುಳಿತುಕೊಳ್ಳುತ್ತಾನೆ. ಆದರೆ ಭವನಾಥನದ್ದು ಸ್ತ್ರೀಸ್ವಭಾವ. ಆದ್ದರಿಂದಲೇ ಅವನು ಗಾಡಿಯ ಎಡಭಾಗದಲ್ಲಿ ಕುಳಿತುಕೊಳ್ಳುವುದು. ಯಾವುದಾದರೂ ಸಭೆಗೆ ಹೋದಾಗ ನರೇಂದ್ರ ನನ್ನ ಜೊತೆ ಯಲ್ಲಿದ್ದುಬಿಟ್ಟರೆ ನನಗೆ ತುಂಬ ಧೈರ್ಯ!" ಹೀಗೆ ನರೇಂದ್ರನ ಗುಣ ಸ್ವಭಾವಗಳನ್ನು ಎಷ್ಟು ಪರಿಯಾಗಿ ವರ್ಣಿಸಿದರೂ ಅವರಿಗೆ ತೃಪ್ತಿಯಿಲ್ಲ.

ಒಮ್ಮೆ ಕಾರಣಾಂತರದಿಂದ ಕೆಲದಿನಗಳವರೆಗೆ ನರೇಂದ್ರ ದಕ್ಷಿಣೇಶ್ವರಕ್ಕೆ ಹೋಗಿರ ಲಿಲ್ಲ. ಒಂದು ದಿನ ಅವನು ಮನೆಯಲ್ಲಿ ಮಹಡಿಯ ಮೇಲೆ ತನ್ನ ಸ್ನೇಹಿತರೊಂದಿಗೆ ಯಾವುದೋ ವಿಷಯವಾಗಿ ಚರ್ಚಿಸುತ್ತ ಕುಳಿತಿದ್ದಾನೆ. ಆಗ ಕೆಳಗಡೆಯಿಂದ "ನರೇನ್, ಓ ನರೇನ್!" ಎಂಬ ಮಧುರ ಸ್ವರವೊಂದು ಕೇಳಿಬಂತು. ಆ ದನಿ ಅವನಿಗೆ ಸುಪರಿಚಿತ. ಕೂಡಲೇ ಕೆಳಗೆ ಓಡಿಬಂದು ನೋಡುತ್ತಾನೆ—ಶ್ರೀರಾಮಕೃಷ್ಣರು ಬಂದು ಬಿಟ್ಟಿದ್ದಾರೆ! ಅವನನ್ನು ಕಂಡು ಅವರು ಅಶ್ರುನಯನರಾಗಿ, "ನರೇನ್, ಯಾಕಪ್ಪ ಇಷ್ಟು ದಿವಸ ಬರಲೇ ಇಲ್ಲ!" ಎಂದು ವಾತ್ಸಲ್ಯದಿಂದ ವಿಚಾರಿಸಿದರು. ಆ ಪ್ರೀತಿ ಯನ್ನು ಕಂಡು ನರೇಂದ್ರ ಮೂಕನಾದ. ಬಳಿಕ ಅವರನ್ನು ಒಳಕ್ಕೆ ಬರಮಾಡಿಕೊಂಡು ಕುಳ್ಳಿರಿಸಿದ. ಶ್ರೀರಾಮಕೃಷ್ಣರು ಅವನಿಗಾಗಿ ಸಿಹಿತಿನಿಸು ತಂದಿದ್ದರು; ಈಗ ಅದನ್ನು

ಅವನಿಗೆ ತಮ್ಮ ಕೈಗಳಿಂದಲೇ ತಿನ್ನಿಸಿ ಆನಂದಿಸಿದರು. ಬಳಿಕ, ಅವರ ಕೋರಿಕೆಯಂತೆ ನರೇಂದ್ರ ತಂಬೂರಿ ಮೀಟುತ್ತ ಭಾವಭರಿತನಾಗಿ ದೇವಿಯ ಒಂದು ಕೀರ್ತನೆಯನ್ನು ಹಾಡತೊಡಗಿದ. ಅವನ ಶುದ್ಧಹೃದಯದಿಂದ ಹೊರಹೊಮ್ಮಿದ ಮಧುರಗಾಯನ ವನ್ನು ಕೇಳುತ್ತ ಶ್ರೀರಾಮಕೃಷ್ಣರು ಸಮಾಧಿಮಗ್ನರಾಗಿಬಿಟ್ಟರು. ಅವರ ನರೇಂದ್ರಪ್ರೇಮ ವನ್ನು ಶಬ್ದಗಳಿಂದ ಬಣ್ಣಿಸಿ ಮುಗಿಸಲುಂಟೆ ?

ಶ್ರೀರಾಮಕೃಷ್ಣರು ತಮ್ಮೆಲ್ಲ ಯುವಶಿಷ್ಯರೊಂದಿಗೂ ಅತ್ಯಂತ ಆತ್ಮೀಯ ಬಾಂಧವ್ಯ ವನ್ನಿಟ್ಟುಕೊಂಡಿದ್ದರು. ಆದರೆ ನರೇಂದ್ರನೊಂದಿಗಿನ ಅವರ ಸಂಬಂಧ ಮಾತ್ರ ಇತರ ಶಿಷ್ಯರೊಂದಿಗಿನದ್ದಕ್ಕಿಂತ ವಿಭಿನ್ನವಾದದ್ದು; ಅದೊಂದು ವಿಶೇಷ ಸಂಬಂಧ. ಅವನನ್ನು ಸಂಧಿಸಿದ ಹೊಸತರಲ್ಲಿ ಒಮ್ಮೆ ಅವರು ಹೇಳಿದ್ದರು, "ನೋಡು, ನಿನ್ನಲ್ಲಿ ಸಾಕ್ಷಾತ್ ಶಿವ ಇದ್ದಾನೆ; ನನ್ನಲ್ಲಿ ಶಕ್ತಿಯಿದ್ದಾಳೆ. ಆದರೆ ಶಿವ-ಶಕ್ತಿಯರು ಬೇರೆಯಲ್ಲ, ಒಂದೇ !" ಈ ಮಾತುಗಳಾವುವೂ ನರೇಂದ್ರನಿಗೆ ಆಗ ಅರ್ಥವಾಗಲಿಲ್ಲವೆನ್ನಿ. ಇನ್ನೊಂದು ಮುಖ್ಯ ಸಂಗತಿಯನ್ನು ಇಲ್ಲಿ ಸ್ಮರಿಸಬಹುದು. ಏನೆಂದರೆ, ಶ್ರೀರಾಮಕೃಷ್ಣರು ಅವನಿಗೆ ತಮ್ಮ ವೈಯಕ್ತಿಕ ಸೇವೆಯನ್ನು ಮಾಡಲು ಅವಕಾಶ ಕೊಡುತ್ತಿರಲಿಲ್ಲ. ಏಕೆಂದರೆ, ಅವರು ಅವನಲ್ಲಿ ಸಾಕ್ಷಾತ್ ಶಿವನನ್ನು ಅಷ್ಟು ಸ್ಪಷ್ಟವಾಗಿ ಕಾಣುತ್ತಿದ್ದರು. ಅಲ್ಲದೆ, ಸೇವೆ ಮಾಡುವುದರ ಉದ್ದೇಶವಾದರೂ ಏನು ? ತನ್ನ ಅಂತಶ್ಶುದ್ಧಿಗಾಗಿ. ಆದರೆ ಯಾರ ಹೃದಯ ಅದಾಗಲೇ ಪರಮ ಪರಿಶುದ್ಧವಾಗಿದೆಯೋ ಅಂಥವರು ಸೇವೆ ಮಾಡ ಬೇಕಾದ ಅಗತ್ಯ ವಾದರೂ ಏನಿದೆ ? ಆದರೆ ತಾನು ಮಾತ್ರ ಈ ಭಾಗ್ಯವಿಶೇಷದಿಂದ ವಂಚಿತನಾದೆನಲ್ಲ ಎನ್ನುವುದು ನರೇಂದ್ರನ ಪರಿತಾಪ. ಆದ್ದರಿಂದ ಅವನು ತುಂಬ ನಮ್ರತೆಯಿಂದ ಒಂದಲ್ಲ ಒಂದು ಬಗೆಯ ಸೇವೆ ಮಾಡಲು ಮುಂದಾಗುತ್ತಿದ್ದ. ಆದರೆ ಶ್ರೀರಾಮಕೃಷ್ಣರು ಅದಕ್ಕೆ ಅವಕಾಶ ಕೊಡುತ್ತಲೇ ಇರಲಿಲ್ಲ; "ನಿನ್ನ ದಾರಿ ಬೇರೆ" ಎಂದುಬಿಡುತ್ತಿದ್ದರು.

ಆಧ್ಯಾತ್ಮಿಕ ಜೀವನದಲ್ಲಿ ಶಿಸ್ತಿಗೆ ಅಗ್ರಸ್ಥಾನ. ಆದ್ದರಿಂದ ಶ್ರೀರಾಮಕೃಷ್ಣರು ತಮ್ಮ ಶಿಷ್ಯರ ನಿದ್ರಾಹಾರಗಳು, ಧ್ಯಾನ-ಜಪ-ಪ್ರಾರ್ಥನೆಗಳು, ದೈನಂದಿನ ಕಾರ್ಯಕಲಾಪ ಗಳು—ಈ ಎಲ್ಲ ವಿಷಯಗಳಲ್ಲೂ ಕಟ್ಟುಪಾಡುಗಳನ್ನು ಮಾಡಿಟ್ಟಿದ್ದರು. ಆದರೆ ಆಶ್ಚರ್ಯದ ಸಂಗತಿಯೆಂದರೆ, ನರೇಂದ್ರನ ವಿಷಯದಲ್ಲಿ ಮಾತ್ರ ಅವರು ಯಾವ ನಿಯಮ-ನಿರ್ಬಂಧವನ್ನೂ ಹೇರಿರಲಿಲ್ಲ. ಅವರು ಎಲ್ಲರೆದುರಿಗೂ ಹೇಳುತ್ತಿದ್ದರು: "ನರೇಂದ್ರ ನಿತ್ಯಸಿದ್ಧ, ಜನ್ಮತಃ ಧ್ಯಾನಸಿದ್ಧ. ಅವನಿನ್ನು ಹೊಸದಾಗಿ ಧ್ಯಾನವನ್ನು ಕಲಿತು ಅಭ್ಯಾಸ ಮಾಡಬೇಕಿಲ್ಲ. ಅವನಲ್ಲಿ ಜ್ಞಾನಾಗ್ನಿಯೆಂಬುದು ಪ್ರಜ್ವಲಿಸುತ್ತಿದೆ. ಅವನು ಎಂತಹ ಅಶುದ್ಧವಾದ ಆಹಾರವನ್ನು ತಿಂದರೂ ಅದರ ದುಷ್ಪರಿಣಾಮವನ್ನು ಆ ಅಗ್ನಿಯು ಸುಟ್ಟು ಭಸ್ಮಮಾಡಿಬಿಡಬಲ್ಲುದು. ಆದ್ದರಿಂದ ಅಶುದ್ಧ ಆಹಾರಸೇವನೆ ಯಿಂದ ಅವನ ಮನಸ್ಸು ಎಂದಿಗೂ ಮಲಿನಗೊಳ್ಳುವುದಿಲ್ಲ. ತನ್ನ ಜ್ಞಾನಖಡ್ಗದಿಂದ ಅವನು ಮಾಯಾಪಾಶವನ್ನು ಕತ್ತರಿಸಿಹಾಕಿಬಿಡುತ್ತಾನೆ. ಭುವನಮೋಹಿನೀ ಮಾಯೆ ಅವನನ್ನೆಂದಿಗೂ ಕಟ್ಟಿಹಾಕಲಾರಳು." ಅವನ ಕುರಿತಾಗಿ ಇಂಥ ಮಾತುಗಳನ್ನೆಲ್ಲ ಕೇಳಿ ದವರು ಬೆಕ್ಕಸಬೆರಗಾಗುತ್ತಿದ್ದರು, ಆ ಮಾತುಗಳ ಮರ್ಮವನ್ನರಿಯಲಾಗದೆ ಸ್ತಬ್ಧ ರಾಗುತ್ತಿದ್ದರು.

ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಬರುತ್ತಿದ್ದ ಅನೇಕ ಭಕ್ತರು—ಮುಖ್ಯವಾಗಿ

ಶ್ರೀಮಂತರು—ಹಣ್ಣುಹಂಪಲು, ಸಿಹಿತಿಂಡಿ ಇವುಗಳನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದರು. ಸಾಮಾನ್ಯವಾಗಿ ಶ್ರೀರಾಮಕೃಷ್ಣರು ಅವುಗಳಲ್ಲಿ ಒಂದು ತುಣುಕನ್ನು ಮಾತ್ರ ಪರಿಗ್ರಹಿಸಿ, ಉಳಿದುದನ್ನು ಭಕ್ತರಿಗೆ ಹಂಚಿಬಿಡುತ್ತಿದ್ದರು. ಆದರೆ ಆ ಕಾಣಿಕೆಗಳನ್ನು ಕೊಟ್ಟವರ ಚಾರಿತ್ರ್ಯ ದೋಷಪೂರ್ಣವಾಗಿದ್ದರೆ, ಇಲ್ಲವೆ ಸ್ವಾರ್ಥೋದ್ದೇಶದಿಂದ ಕೂಡಿದ್ದರೆ ಶ್ರೀರಾಮಕೃಷ್ಣರಿಗೆ ಅದು ಸ್ಪಷ್ಟವಾಗಿ ಗೋಚರಿಸಿಬಿಡುತ್ತಿತ್ತು. ಅಂಥವನ್ನು ಅವರು ತಾವೂ ತಿನ್ನುತ್ತಿರಲಿಲ್ಲ, ಭಕ್ತರಿಗೂ ಕೊಡುತ್ತಿರಲಿಲ್ಲ. ಅವು ಸಾಧಕರ ದೇಹ-ಮನೋಬುದ್ಧಿಗಳಿಗೆ ತುಂಬ ಹಾನಿಕಾರಕ ಎಂಬುದೇ ಅದಕ್ಕೆ ಕಾರಣ. ಹಾಗಾದರೆ ಅಂತಹ ಉಪಯುಕ್ತ ಪದಾರ್ಥಗಳನ್ನೆಲ್ಲ ಏನು ಮಾಡುವುದು ? ಚಿಂತೆಯಿಲ್ಲ; ಅವುಗಳನ್ನು ಅರಗಿಸಿಕೊಳ್ಳಬಲ್ಲ ಧೀರನೊಬ್ಬನಿದ್ದಾನೆ—ನರೇಂದ್ರನಾಥ ! ಆ ತಿನಿಸುಗಳನ್ನೆಲ್ಲ ಅವರು ನರೇಂದ್ರನಿಗೆ ಕೊಟ್ಟುಬಿಡುತ್ತಿದ್ದರು. ಒಂದು ವೇಳೆ ಅವನು ಆಗ ಅಲ್ಲಿಲ್ಲದಿದ್ದರೆ ಅಥವಾ ಸದ್ಯದಲ್ಲೇ ಬರುವ ಸಂಭವವಿಲ್ಲದಿದ್ದರೆ, ಅವನ ಮನೆಗೇ ಕಳಿಸಿಕೊಡುತ್ತಿದ್ದರು. ಒಮ್ಮೊಮ್ಮೆ ಅವನು, "ನೀವು ನಿಷಿದ್ಧ ಎಂದು ಹೇಳುವ ಪದಾರ್ಥಗಳನ್ನೇ ಹೋಟೆಲಿನಲ್ಲಿ ನಾನಿವತ್ತು ತಿಂದೆ" ಎಂದು ಹೇಳುತ್ತಿದ್ದ. ಆದರೆ ಅವನು 'ಸಾಹಸ ಪ್ರದರ್ಶನ'ಕ್ಕಾಗಿ ಹಾಗೆ ತಿಂದದ್ದಲ್ಲ, ಸ್ನೇಹಿತರ ಜೊತೆಯಲ್ಲಿ ಹೋಗಿದ್ದರಿಂದ ತಿನ್ನಬೇಕಾಯಿತು ಅಷ್ಟೆ, ಎಂಬುದನ್ನು ತಿಳಿದಿರುವ ಶ್ರೀರಾಮಕೃಷ್ಣರು ಹೇಳುತ್ತಿದ್ದರು: "ಅದರಿಂದ ನಿನಗೇನೂ ತೊಂದರೆಯಾಗುವುದಿಲ್ಲ. ಯಾರು ಭಗವಂತನಲ್ಲಿ ಮನಸ್ಸನ್ನು ದೃಢವಾಗಿ ನೆಲೆಗೊಳಿಸಿದ್ದಾರೋ ಅಂಥವರಿಗೆ ಹಂದಿಮಾಂಸ ಹಸುವಿನ ಮಾಂಸಗಳು ಕೂಡ ಹವಿಷ್ಯಾನ್ನಕ್ಕೆ ಸಮ. ಆದರೆ ಯಾರು ಕಾಮಕಾಂಚನದಲ್ಲಿ ಮನಸ್ಸಿಟ್ಟಿದ್ದಾರೋ ಅಂಥವರು ತರಕಾರಿಯನ್ನೇ ತಿಂದರೂ ಅದು ಹಂದಿಮಾಂಸ ಹಸುವಿನ ಮಾಂಸಕ್ಕೆ ಸಮ. ಆದ್ದರಿಂದ ನೀನು ನಿಷಿದ್ಧವೆನಿಸಿಕೊಂಡ ಆಹಾರವನ್ನೇ ತಿಂದಿದ್ದರೂ ನನ್ನಿಂದೇನೂ ಅಭ್ಯಂತರವಿಲ್ಲ. ಆದರೆ ಈ ಇತರ ಹುಡುಗರೇನಾದರೂ ಹಾಗೆ ಮಾಡಿದರೆ, ಅವರು ನನ್ನನ್ನು ಮುಟ್ಟಿದರೂ ಸಹಿಸಿಕೊಳ್ಳಲಾರೆ."

ಆದರೆ ಕಾಣಿಕೆಗಳನ್ನು ಸ್ವೀಕರಿಸುವ ವಿಷಯದಲ್ಲಿ ಶ್ರೀರಾಮಕೃಷ್ಣರು ತೋರಿಸುತ್ತಿದ್ದ ತಾರತಮ್ಯವನ್ನು ಕಂಡು ನರೇಂದ್ರನಿಗೆ ಆಶ್ಚರ್ಯ. ಇದು ಕೇವಲ ಅವರ ಒಂದು ವಿಚಿತ್ರ ಅಭ್ಯಾಸವೋ ಅಥವಾ ಅವರ ಅತಿ ಮಡಿವಂತಿಕೆಯೋ ಎಂದು ಆಲೋಚಿಸಿದ. ಆದರೆ ಶ್ರೀರಾಮಕೃಷ್ಣರು ಇದಕ್ಕೆ ವಿವರಣೆ ಕೊಡುತ್ತಾರೆ—ಯಾರ ಗುಣ-ನಡತೆ ಶುದ್ಧವಾಗಿರುವುದಿಲ್ಲವೋ ಅಂಥವರ ಕೈಯಿಂದ ಯಾವುದೇ ವಸ್ತುವನ್ನು ಪರಿಗ್ರಹಿಸಲು ತಮ್ಮಿಂದ ಸಾಧ್ಯವೇ ಆಗುವುದಿಲ್ಲ—ಎಂದು. ಇದನ್ನು ಕೇಳಿ ನರೇಂದ್ರನ ಕುತೂಹಲ ಇನ್ನಷ್ಟು ಕೆರಳಿತು. 'ಇದೇನಾಶ್ಚರ್ಯ ! ಅವರ ಶೀಲ ಚೆನ್ನಾಗಿದೆಯೋ ಇಲ್ಲವೋ ಇವರಿಗೆ ಹೇಗೆ ಗೊತ್ತಾಗಬೇಕು ? ಎಲ್ಲರ ಚಾರಿತ್ರ್ಯವನ್ನೂ ಅಳೆದುನೋಡಲು ಇವರಿಂದ ಸಾಧ್ಯವೆ ? ಆಗಲಿ, ಇದನ್ನು ಪರೀಕ್ಷೆ ಮಾಡಿ ನೋಡಿಯೇಬಿಡಬೇಕು' ಎಂದು ತೀರ್ಮಾನಿಸಿದ. ಅದರಂತೆ ಯಾರ್ಯಾರು ತಂದುಕೊಟ್ಟ ತಿಂಡಿತಿನಿಸುಗಳನ್ನು ಅವರ ಶೀಲ ಚೆನ್ನಾಗಿಲ್ಲವೆಂಬ ಕಾರಣದಿಂದ ಶ್ರೀರಾಮಕೃಷ್ಣರು ಬದಿಗಿಟ್ಟುಬಿಡುತ್ತಿದ್ದರೋ ಅಂಥವರ ಗುಣನಡತೆಗಳನ್ನೆಲ್ಲ ಕೆದಕಿ ಪರೀಕ್ಷಿಸಲು ಹೊರಟ. ಹಾಗೆ ನೋಡಿದಾಗ, ಮೇಲ್ನೋಟಕ್ಕೆ ಆ ವ್ಯಕ್ತಿಗಳಲ್ಲಿ ಒಬ್ಬೊಬ್ಬನೂ ತುಂಬ ಸದ್ಗುಣವಂತನಂತೆ ಕಂಡು ಬಂದರೂ ಅವರ ಶೀಲ ನಿಜಕ್ಕೂ ಚೆನ್ನಾಗಿಲ್ಲವೆಂಬುದು ದೃಢಪಟ್ಟಿತು. ಶ್ರೀರಾಮಕೃಷ್ಣರ

ಪಾವಿತ್ರ್ಯವೆಂಬುದು ಅದೆಷ್ಟು ಉನ್ನತ ಮತ್ತು ಅವರ ಪರಿಶೀಲನಾ ಶಕ್ತಿ ಅದೆಷ್ಟು ಸೂಕ್ಷ್ಮ ಎಂಬುದನ್ನು ಭಾವಿಸಿ ನೋಡುತ್ತ ಅವನು ಆಶ್ಚರ್ಯಚಕಿತನಾದ.

ಎಷ್ಟೋ ಸಲ ನರೇಂದ್ರನಿಗೂ ಇತರ ಭಕ್ತರಿಗೂ ನಾನಾ ವಿಷಯಗಳ ಬಗ್ಗೆ ವಾದ-ವಿವಾದವೇರ್ಪಡುತ್ತಿತ್ತು. ಈ ದೃಶ್ಯವನ್ನು ನೋಡಲು ಶ್ರೀರಾಮಕೃಷ್ಣರಿಗೆ ತುಂಬ ಹಿಗ್ಗು. ಒಮ್ಮೊಮ್ಮೆ ಅವರೇ ಯಾರಿಗಾದರೂ ನರೇಂದ್ರನೊಂದಿಗೆ ವಾದ ಮಾಡುವಂತೆ ಹೇಳುವುದೂ ಇತ್ತು. ಏಕೆಂದರೆ ಅವನ ವಾದದ ವೈಖರಿ ಅಷ್ಟೊಂದು ಬಿರುಸು, ಸೊಗಸು. ಅವನು ವಾದಕ್ಕಿಳಿದರೆ ಒಂದು ಬಿರುಗಾಳಿಯನ್ನೇ ಎಬ್ಬಿಸಿಬಿಡುತ್ತಿದ್ದ. ಪಾಶ್ಚಾತ್ಯ ಹಾಗೂ ಪೌರ್ವಾತ್ಯ ತತ್ತ್ವಶಾಸ್ತ್ರಜ್ಞರ ವಾಕ್ಯಗಳನ್ನು ಉದಾಹರಿಸುತ್ತ ಅವನು ಮಾತನಾಡುತ್ತಿದ್ದರೆ ಅವನ ತಿಳಿವಳಿಕೆಯ ಆಳವನ್ನು ಕಂಡು ಎಲ್ಲರೂ ಬೆರಗಾಗು ತ್ತಿದ್ದರು. ಅಲ್ಲದೆ ಅವನು ತತ್ತ್ವವಿಚಾರವಾಗಿ ಮಾತನಾಡುತ್ತಿದ್ದರೆ ಅದು ಕೇವಲ ಪುಸ್ತಕಪಾಂಡಿತ್ಯದಂತೆ ಕಾಣುತ್ತಿರಲಿಲ್ಲ. ಆ ಜ್ಞಾನವೇ ಅವನಲ್ಲಿ ಮೈದಳೆದು ವ್ಯಕ್ತವಾಗು ತ್ತಿರುವಂತೆ ಕಂಡುಬರುತ್ತಿತ್ತು. ಅವನು ತನ್ನ ಅದ್ಭುತ ವಿಚಾರಶಕ್ತಿಯಿಂದ ತನಗಿಂತಲೂ ಎಷ್ಟೋ ಹಿರಿಯರಾದವರೊಡನೆ ವಾದ ಮಾಡಿ ಗೆಲ್ಲುವುದನ್ನು ಕಂಡು ಶ್ರೀರಾಮ ಕೃಷ್ಣರಿಗಾಗುತ್ತಿದ್ದ ಸಂತಸ ಅಷ್ಟಿಷ್ಟಲ್ಲ. ಆದರೆ ಯಾವಾಗಲಾದರೊಮ್ಮೆ ಶ್ರೀರಾಮ ಕೃಷ್ಣರೇ ಅವನ ಎದುರುವಾದಿಯ ಬೆಂಬಲಕ್ಕೆ ನಿಂತುಬಿಟ್ಟರೆ ನರೇಂದ್ರ ಸೋಲೊಪ್ಪ ಬೇಕಾಗುತ್ತಿತ್ತು, ಅದು ಬೇರೆ ವಿಷಯ.

ನರೇಂದ್ರ ಬ್ರಾಹ್ಮಸಮಾಜದ 'ಸಗುಣ-ನಿರಾಕಾರ ಬ್ರಹ್ಮ'ದ ತತ್ತ್ವಕ್ಕೆ ಸಂಪೂರ್ಣ ಬದ್ಧನಾಗಿದ್ದ. ಆದ್ದರಿಂದ ಯಾವುದೇ ದೇವದೇವಿಯರ ಅಸ್ತಿತ್ವವನ್ನೂ ಅವನು ಒಪ್ಪಿಕೊಳ್ಳುತ್ತಿರಲಿಲ್ಲ. ಪ್ರತಿಮೆಗಳನ್ನಿಟ್ಟು ಪೂಜಿಸುವುದು, ಅವುಗಳ ಮುಂದೆ ಅಡ್ಡ ಬೀಳುವುದು—ಇದನ್ನೆಲ್ಲ ಮೌಢ್ಯವೆಂದು ಹೀಗಳೆಯುತ್ತಿದ್ದ. ಗರಡಿಮನೆಯಲ್ಲಿ ಅವನ ಸ್ನೇಹಿತನಾಗಿದ್ದ ರಾಖಾಲನೂ ಬ್ರಾಹ್ಮಸಮಾಜದ ಸದಸ್ಯನಾಗಿದ್ದ. ಆದರೆ ರಾಖಾಲ ಈಗ ಶ್ರೀರಾಮಕೃಷ್ಣರ ನಿಕಟ ಸಂಪರ್ಕಕ್ಕೆ ಬಂದಿದ್ದ. ಅಲ್ಲದೆ ಅವನದು ಭಕ್ತಿಪ್ರಧಾನ ವಾದ ಸ್ವಭಾವ. ಶ್ರೀರಾಮಕೃಷ್ಣರ ದಿವ್ಯ ಸನ್ನಿಧಿ-ಸಹವಾಸದಿಂದಾಗಿ ಕ್ರಮೇಣ ಅವನ ಭಕ್ತಿ ಇನ್ನಷ್ಟು ಉಜ್ವಲಗೊಳ್ಳತೊಡಗಿತು. ಆದ್ದರಿಂದ ಅವನು ಶ್ರೀರಾಮಕೃಷ್ಣರೊಂದಿಗೆ ಕಾಳೀದೇವಸ್ಥಾನಕ್ಕೆ ಹೋಗುತ್ತಿದ್ದ; ದೇವಿಗೆ ಪ್ರಣಾಮ ಸಲ್ಲಿಸುತ್ತಿದ್ದ. ಆದರೆ ಇದೆಲ್ಲ ಬ್ರಾಹ್ಮಸಮಾಜದ ತತ್ತ್ವಗಳಿಗೆ ವಿರುದ್ಧ. ರಾಖಾಲ ಹೀಗೆ ಕಾಳಿಗೆ ನಮಸ್ಕರಿಸುವುದನ್ನು ಒಮ್ಮೆ ನರೇಂದ್ರ ನೋಡಿಬಿಟ್ಟ. ತಕ್ಷಣ ಅವನನ್ನು ತರಾಟೆಗೆ ತೆಗೆದುಕೊಂಡ— "ಏನೋ! ಬ್ರಾಹ್ಮಸಮಾಜದಲ್ಲಿ ನೀನು ಪ್ರತಿಜ್ಞೆ ಮಾಡಿಲ್ಲವೆ, ವಿಗ್ರಹಗಳ ಮುಂದೆ ಶಿರಬಾಗುವುದಿಲ್ಲ ಅಂತ! ಈಗ ಇದೇನು ಮಾಡುತ್ತಿರುವುದು ನೀನು?" ರಾಖಾಲ ತುಂಬ ಮೆದು ಸ್ವಭಾವದವನು. ಅವನು ನರೇಂದ್ರನ ಜೊತೆಯಲ್ಲಿ ಪ್ರತಿವಾದ ಮಾಡುವುದರ ಬದಲಾಗಿ ಅವನಿಂದ ತಪ್ಪಿಸಿಕೊಂಡು ತಿರುಗಾಡಲಾರಂಭಿಸಿದ. ಇದು ಶ್ರೀರಾಮಕೃಷ್ಣರ ದೃಷ್ಟಿಗೆ ಬಿತ್ತು. ಅವರೇ ರಾಖಾಲನ ನೆರವಿಗೆ ಬಂದರು. ನರೇಂದ್ರನನ್ನು ಕರೆದು, "ನರೇನ್, ರಾಖಾಲನನ್ನು ಸುಮ್ಮನೆ ಏತಕ್ಕೆ ಹೆದರಿಸುತ್ತೀಯೋ? ಅವನು ನಿನ್ನನ್ನು ಕಂಡರೇ ಭಯಪಟ್ಟುಕೊಂಡು ಓಡುತ್ತಾನೆ! ನೋಡು, ಅವನಿಗೀಗ ಸಾಕಾರ ಭಗವಂತನಲ್ಲಿ ನಂಬಿಕೆ ಉಂಟಾಗಿದೆ. ನೀನೇಕೆ ಅವನ ಭಾವವನ್ನು ಬದಲಾಯಿಸಲು ಹೋಗುವುದು? ಒಂದೇ ಸಲಕ್ಕೆ ನಿರಾಕಾರ ಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳು

ವುದು ಎಲ್ಲರಿಗೂ ಸಾಧ್ಯವಾಗುವಂಥದಲ್ಲ.'' ಈ ಮಾತಿಗೆ ಮನ್ನಣೆ ಕೊಟ್ಟು, ಅವನು ರಾಖಾಲನ ಭಾವಸ್ವಾತಂತ್ರ್ಯದಲ್ಲಿ ಕೈಹಾಕುವುದನ್ನು ಬಿಟ್ಟುಬಿಟ್ಟ.

ಆದರೂ ತನ್ನ ನಂಬಿಕೆಯೇ ಸರಿಯಾದದ್ದು ಎನ್ನುವ ಧೋರಣೆ ನರೇಂದ್ರನನ್ನು ಬಿಟ್ಟಿರಲಿಲ್ಲ. ಅದನ್ನು ಕಂಡು ಶ್ರೀರಾಮಕೃಷ್ಣರು, ''ನೋಡು, ಸಾಕ್ಷಾತ್ಕಾರಕ್ಕಿರುವುದು ಒಂದೇ ದಾರಿ ಅಂತ ತಿಳಿಯಬೇಡ. ಎಲ್ಲ ದಾರಿಗಳಿಂದಲೂ, ಎಲ್ಲ ದಿಕ್ಕುಗಳಿಂದಲೂ ಅದೇ ಸತ್ಯವನ್ನು ತಲುಪಲು ಸಾಧ್ಯವಿದೆ. ಇದನ್ನು ಮನಗಾಣಲು ಪ್ರಯತ್ನಿಸು'' ಎಂದು ತಿಳಿಯಹೇಳುತ್ತಿದ್ದರು. ಕ್ರಮೇಣ ಅವನು ಆಧ್ಯಾತ್ಮಿಕ ಸಾಧನೆಗಳ ಗುರಿ ಒಂದೇ ಎನ್ನುವುದನ್ನೇನೋ ಅರ್ಥಮಾಡಿಕೊಂಡರೂ, ಮೂರ್ತಿಪೂಜೆಯನ್ನು ಮಾತ್ರ ಸುತರಾಂ ಒಪ್ಪಿಕೊಳ್ಳಲಿಲ್ಲ. ಒಂದು ದಿನ ಶ್ರೀರಾಮಕೃಷ್ಣರು, ವಿಗ್ರಹಗಳು ಆಧ್ಯಾತ್ಮಿಕ ತತ್ತ್ವಗಳ ಮೂರ್ತರೂಪ ಎಂಬ ಸತ್ಯವನ್ನು ನರೇಂದ್ರನಿಗೆ ಮನಗಾಣಿಸಲು ಪ್ರಯತ್ನಪಟ್ಟು, ಸೋತು, ಕೊನೆಗೆ, ''ನೀನು ನನ್ನ ತಾಯಿಯನ್ನು ಒಪ್ಪಿಕೊಳ್ಳದೆಯಿದ್ದಮೇಲೆ ಇಲ್ಲಿಗೇಕೆ ಬರುತ್ತಿರುವೆ ಮತ್ತೆ?'' ಎಂದು ಕೆಣಕಿದರು. ನರೇಂದ್ರ ಇದಕ್ಕೆ ಕೊಟ್ಟ ಉತ್ತರವೆಂಥದು ? ಅವನು ಕೇಳುತ್ತಾನೆ, ''ಇಲ್ಲಿಗೆ ಬಂದಮಾತ್ರಕ್ಕೆ ನಾನು ಆಕೆಯನ್ನು ಒಪ್ಪಿಕೊಂಡುಬಿಡಬೇಕೋ ?'' ಇಂಥ ದಿಟ್ಟತನದ ಉತ್ತರವನ್ನು ಕೇಳಿ ಶ್ರೀರಾಮಕೃಷ್ಣರು ದಂಗಾಗಿಬಿಡಬೇಕಾಗಿತ್ತು. ಆದರೆ ಅವನ ಭೂತ-ಭವಿಷ್ಯಗಳೆಲ್ಲ ಅವರಿಗೆ ಅಂಗೈ ಮೇಲಿನ ನೆಲ್ಲಿಕಾಯಿಯಲ್ಲವೆ ? ಮುಗುಳ್ನಕ್ಕು ನುಡಿದರು: ''ಆಗಲಿ, ಆಗಲಿ. ಹೀಗೇ ಹೇಳುತ್ತಿರು. ಇನ್ನು ಕೆಲವೇ ದಿನಗಳಲ್ಲಿ ನೀನು ನನ್ನ ತಾಯಿಯನ್ನು ಒಪ್ಪಿಕೊಳ್ಳುವುದಷ್ಟೇ ಅಲ್ಲ, ಅವಳ ಹೆಸರಿನಲ್ಲಿ ಕಣ್ಣೀರು ಸುರಿಸುತ್ತೀಯೆ, ನೋಡುತ್ತಿರು !'' ಬಳಿಕ ಅಲ್ಲಿದ್ದ ಇತರ ಭಕ್ತರಿಗೆ ಹೇಳುತ್ತಾರೆ: ''ಈ ಹುಡುಗನಿಗೆ ದೇವರ ಸಾಕಾರ ತತ್ತ್ವದಲ್ಲಿ ನಂಬಿಕೆಯಿಲ್ಲ. ನನ್ನ ಅತೀಂದ್ರಿಯ ಅನುಭವಗಳೆಲ್ಲ ಕೇವಲ ಭ್ರಾಂತಿ ಎನ್ನುತ್ತಾನೆ. ಆದರೆ ಇವನು ಶುದ್ಧ ಸಂಸ್ಕಾರಗಳಿಂದ ಕೂಡಿದವನು; ತುಂಬ ಒಳ್ಳೆಯ ಹುಡುಗ. ಪ್ರತ್ಯಕ್ಷ ಪ್ರಮಾಣವಿಲ್ಲದೆ ಯಾವುದನ್ನೂ ಸೀದಾಸೀದಾ ನಂಬುವವನೇ ಅಲ್ಲ. ಅಲ್ಲದೆ ತುಂಬ ಓದಿಕೊಂಡಿದ್ದಾನೆ; ಪ್ರಚಂಡವಾದ ಬುದ್ಧಿಶಕ್ತಿಯಿದೆ, ಒಳ್ಳೇ ವಿವೇಕ ಇದೆ.''

ನಿಜಕ್ಕೂ ಶ್ರೀರಾಮಕೃಷ್ಣ-ನರೇಂದ್ರರ ಸಂಬಂಧ ಅದ್ಭುತವೇ ಸರಿ. ನರೇಂದ್ರ ತಮ್ಮ ಅನುಭವಗಳನ್ನೇ ಪ್ರಶ್ನಿಸಿದರೂ, ತಮ್ಮ ಎಷ್ಟೋ ಅಭಿಪ್ರಾಯಗಳನ್ನು ಒಪ್ಪದೆ ಪ್ರತಿವಾದಿಸಿದರೂ, ಒಂದು ರೀತಿಯಲ್ಲಿ ಬಂಡಾಯಗಾರನಂತೆ ಕಾಣುತ್ತಿದ್ದರೂ ಶ್ರೀರಾಮಕೃಷ್ಣರು ಮಾತ್ರ ಅವನ ಮೇಲೆ ಪೂರ್ಣ ವಿಶ್ವಾಸವಿಟ್ಟಿದ್ದಾರೆ; ಪೂರ್ಣ ಪ್ರೀತಿ ಕೊಟ್ಟಿದ್ದಾರೆ. ಈ ಪ್ರೀತಿ ವಿಶ್ವಾಸಗಳು ಯಾವುದೇ ಕಾರಣದಿಂದಲೂ ಕಡಮೆಯಾಗುವಂಥವಲ್ಲ. ಏಕೆಂದರೆ ಅವನು ಆ ರೀತಿಯಲ್ಲಿ ಏಕೆ ಪ್ರತಿಯೊಂದು ವಿಷಯದಲ್ಲೂ ತರ್ಕ ವಿತರ್ಕ ಮಾಡುತ್ತಾನೆ, ಏಕೆ ಎಲ್ಲವನ್ನೂ ಮತ್ತೆಮತ್ತೆ ಪ್ರಶ್ನಿಸಿ, ಪರೀಕ್ಷಿಸಿ ನೋಡುತ್ತಾನೆ ಎಂಬುದು ಶ್ರೀರಾಮಕೃಷ್ಣರಿಗೆ ಚೆನ್ನಾಗಿ ಗೊತ್ತಿತ್ತು. ಅವನ ಈ ವಿಚಾರಪೂರ್ಣ ಮನೋಭಾವವನ್ನು ಅವರು ಹೃತ್ಪೂರ್ವಕವಾಗಿ ಮೆಚ್ಚಿಕೊಂಡಿದ್ದರು.

ಅವರಿಬ್ಬರ ನಡುವೆ ಯಾವಾಗಲೂ ತೀವ್ರ ವಾದ ವಿವಾದಕ್ಕೆ ಒಳಗಾಗುತ್ತಿದ್ದ ಒಂದು ವಿಷಯವೆಂದರೆ ರಾಧಾ-ಕೃಷ್ಣರ ಪ್ರೇಮ ಮಿಲನದ ಮತ್ತು ಅವರ ವಿರಹ ವೇದನೆಯ ಕತೆ. ಆ ಇಡೀ ಘಟನೆಯ ಸತ್ಯತೆಯ ಬಗ್ಗೆಯೇ ನರೇಂದ್ರನಿಗೆ ಶಂಕೆ. ರಾಧಾ-ಕೃಷ್ಣರ ಕುರಿತಾದ ಎಲ್ಲ ಬಣ್ಣನೆಗಳೂ ಕೇವಲ ಕಟ್ಟುಕತೆ, ಕವಿಕಲ್ಪನೆ ಎಂದೇ

ಅವನ ನಂಬಿಕೆ. ಮತ್ತು ಒಂದು ವೇಳೆ ಅವೆಲ್ಲ ನಿಜವೆಂದೇ ಇಟ್ಟುಕೊಂಡರೂ ರಾಧಾ-ಕೃಷ್ಣರ ನಡುವಿನ ಆ ಸಂಬಂಧವಂತೂ ಅನೈತಿಕ, ದೂಷಣೀಯ ಎಂದು ಹೀಗಳೆಯುತ್ತಿದ್ದ. ಸ್ವತಃ ಮಧುರಭಾವ ಸಾಧನೆ ಮಾಡಿ ರಾಧೆಯ ದಿವ್ಯ ಪ್ರೇಮವನ್ನು ತಮ್ಮೊಳಗೇ ತಂದುಕೊಂಡು, ಅನುಭವಿಸಿ, ಸಾಕ್ಷಾತ್ಕರಿಸಿಕೊಂಡಿದ್ದವರು ಶ್ರೀರಾಮಕೃಷ್ಣರು ಎಂಬ ಅದ್ಭುತ ವಿಚಾರವನ್ನು ಬಲ್ಲದವನೇನಲ್ಲ ನರೇಂದ್ರ. ಆದರೂ ಅವರ ರಾಧಾ-ಕೃಷ್ಣ ವರ್ಣನೆಯನ್ನು ಒಪ್ಪದೆ, ಅವರೊಂದಿಗೇ ನಿಶ್ಶಂಕೆಯಿಂದ ವಾದಿಸುತ್ತಾನೆ; ಲಕ್ಷಾಂತರ ಜನರ ಆರಾಧ್ಯದೈವರಾದ ರಾಧಾ-ಕೃಷ್ಣರ ಸಂಬಂಧವನ್ನು ಅಶ್ಲೀಲವೆಂದು ಖಂಡಿಸಿ ಈಡಾಡುತ್ತಾನೆ! ಶ್ರೀರಾಮಕೃಷ್ಣರು ಅವನಿಗೆ ಅನೇಕ ರೀತಿಗಳಲ್ಲಿ ತಿಳಿಯಹೇಳಿದರೂ ಅವನಿಗದು ಸಮ್ಮತವಾಗಲೇ ಇಲ್ಲ. ಕೊನೆಗೊಂದು ದಿನ ಅವರೆಂದರು:

"ಸರಿ, ನೀನೆನ್ನುವ ಹಾಗೆ ರಾಧೆ ಎನ್ನುವವಳೊಬ್ಬಳು ಇರಲೇ ಇಲ್ಲ ಅಂತಲೇ ಇಟ್ಟುಕೊಳ್ಳೋಣ. ಅದು ಯಾವನೋ ಒಬ್ಬ ಪ್ರೇಮೀ ಸಾಧಕನ ಕಲ್ಪನೆ ಎಂದೇ ಭಾವಿಸೋಣ. ಆದರೆ ಆ ವ್ಯಕ್ತಿತ್ವವನ್ನು ಕಲ್ಪಿಸಿಕೊಂಡಾಗ ಆ ಸಾಧಕನು ರಾಧೆಯ ದಿವ್ಯ ಭಾವದಲ್ಲೇ ತನ್ಮಯನಾಗಿ, ತನ್ಮೂಲಕ ಆತ ರಾಧೆಯೇ ಆಗಿರಬೇಕು ಎಂದು ನೀನು ಒಪ್ಪುವೆಯಲ್ಲವೆ? ಅಂದಮೇಲೆ, ಬೃಂದಾವನಲೀಲೆಯು ಬಾಹ್ಯಪ್ರಪಂಚದಲ್ಲಿ ಕೂಡ ನಡೆದದ್ದು ನಿಜವೆಂದಾಗುತ್ತದೆಯಲ್ಲವೆ?" ಈ ಉತ್ತರವನ್ನು ನರೇಂದ್ರ ಒಪ್ಪಿಕೊಳ್ಳಲೇ ಬೇಕಾಯಿತು.

ಆದರೆ ಅವನ ಈ ಬಗೆಯ ಬಂಡಾಯದ ಬುದ್ಧಿಯನ್ನು ಕಂಡು ಶ್ರೀರಾಮಕೃಷ್ಣರು ಒಳಗೊಳಗೇ ಸಂತೋಷಿಸುತ್ತಿದ್ದರು. ಏಕೆಂದರೆ ನಿಜವಾದ ಬೋಧೆಯುಂಟಾಗಬೇಕಾದರೆ, ನಿಜವಾದ ಜ್ಞಾನದ ಬೆಳಕನ್ನು ಪಡೆಯಬೇಕಾದರೆ ಸಾಕಷ್ಟು ವಾದವಿವಾದಗಳನ್ನು ಮಾಡಲೇಬೇಕು, ಚೆನ್ನಾಗಿ ಹೋರಾಡಲೇಬೇಕು ಎಂದು ಅವರು ಅರಿತಿದ್ದರು. ಅಲ್ಲದೆ ಮುಂದೆ ನರೇಂದ್ರ ಇತರರ ಬೌದ್ಧಿಕ-ಆಧ್ಯಾತ್ಮಿಕ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಬಗೆಹರಿಸಲು ಸಮರ್ಥನಾಗಬೇಕಾದರೆ ಈ ಹಂತವನ್ನು ದಾಟಿ ಹೋಗಲೇಬೇಕು ಎಂದವರು ತಿಳಿದಿದ್ದರು. ಇಲ್ಲಿ ಇನ್ನೊಂದು ಗಮನೀಯವಾದ ವಿಷಯವಿದೆ. ಅದೇನೆಂದರೆ, ಅಂಥಾ ಪ್ರಚಂಡ ವಿಚಾರವಾದಿಯೂ ಸಂದೇಹಿಯೂ ಆದ ನರೇಂದ್ರ ತನ್ನೆಲ್ಲ ಸಮಸ್ಯೆಗಳನ್ನೂ ಬಗೆಹರಿಸಿಕೊಂಡು ಸತ್ಯಸಾಕ್ಷಾತ್ಕಾರದೆಡೆಗೆ ವೇಗವಾಗಿ ಮುಂದುವರಿಯುತ್ತಿರುವುದನ್ನು ಕಂಡಾಗ, ನಮಗೆ ಶ್ರೀರಾಮಕೃಷ್ಣರ ಅದ್ಭುತ ಶಿಕ್ಷಣ ಕೌಶಲದ ಪರಿಚಯವಾಗುತ್ತದೆ. ಅಲ್ಲದೆ, ಇಂದಿನ ನಾಸ್ತಿಕ್ಯದ ಯುಗದಲ್ಲಿ ಸ್ವಯಂ ಹಿಂದೂಧರ್ಮಸಾರವೇ ಶ್ರೀರಾಮಕೃಷ್ಣರ ರೂಪದಲ್ಲಿ ಮೈವೆತ್ತಿರುವಂತೆ ತೋರುತ್ತದೆ.

ಮೊತ್ತಮೊದಲಿನಿಂದಲೂ ಶ್ರೀರಾಮಕೃಷ್ಣರು ನರೇಂದ್ರನನ್ನು ಅಣಿಗೊಳಿಸುತ್ತಿದ್ದುದು ಅದ್ವೈತತತ್ತ್ವದ ಸಾಕ್ಷಾತ್ಕಾರಕ್ಕೆ. ಈ ಉದ್ದೇಶದಿಂದಲೇ ಅವರು ನರೇಂದ್ರನಿಗೆ ತಮ್ಮ ಬಳಿಯಲ್ಲಿದ್ದ ಅಷ್ಟಾವಕ್ರಸಂಹಿತೆಯೇ ಮೊದಲಾದ ಅದ್ವೈತತತ್ತ್ವವನ್ನು ಪ್ರತಿಪಾದಿಸುವ ಗ್ರಂಥಗಳನ್ನು ಗಟ್ಟಿಯಾಗಿ ಓದಲು ಹೇಳುತ್ತಿದ್ದರು. ಅವನಲ್ಲದೆ ಬೇರೆ ಯಾರಾದರೂ ಶಿಷ್ಯರು ಆ ಗ್ರಂಥಗಳನ್ನು ತೆಗೆದು ಓದಲು ಹವಣಿಸಿದರೆ ಶ್ರೀರಾಮಕೃಷ್ಣರು, "ಅವನ್ನು ತೆರೆಯಬೇಡ ಬಿಡು; ಅವು ನಿನಗೆ ಹೇಳಿಸಿದ್ದಲ್ಲ" ಎಂದುಬಿಡುತ್ತಿದ್ದರು. ಆದರೆ ನರೇಂದ್ರನಿಗೆ ಅವುಗಳ ಬೋಧನೆ ಒಪ್ಪಿಗೆಯಾಗುತ್ತಿರಲಿಲ್ಲ. ಆದ್ದರಿಂದ ಅವನ್ನು ಓದಲೂ ಇಷ್ಟಪಡುತ್ತಿರಲಿಲ್ಲ. ಆದರೂ ಶ್ರೀರಾಮಕೃಷ್ಣರು ಒತ್ತಾಯ ಮಾಡಿ ಓದಿಸುತ್ತಿದ್ದರು. ಈ ಗ್ರಂಥಗಳಲ್ಲಿ 'ಅಹಂ ಬ್ರಹ್ಮಾಸ್ಮಿ' 'ನಾನು ಪರಬ್ರಹ್ಮ' 'ನಾನೇ ಎಲ್ಲವೂ ಆಗಿದ್ದೇನೆ' ಎನ್ನುವಂತಹ ತತ್ತ್ವಗಳನ್ನೇ ಎತ್ತಿಹಿಡಿಯಲಾಗಿದೆ. ನರೇಂದ್ರನಾದರೋ ಬ್ರಾಹ್ಮಸಮಾಜದ 'ಸಗುಣ-ನಿರಾಕಾರ ಬ್ರಹ್ಮ'ದ ತತ್ತ್ವಗಳನ್ನೇ ನಂಬಿ ಸ್ವೀಕರಿಸಿದ್ದವನು. ಆದ್ದರಿಂದ ಅವನಿಗೆ ಈ ವೇದಾಂತದ ಭಾವನೆಗಳು ಒಪ್ಪಿಗೆಯಾಗುತ್ತಿರಲಿಲ್ಲ. ಒಮ್ಮೊಮ್ಮೆ ಅವನು ಸಹನೆತಪ್ಪಿ, "ಛೆ! ಇದೆಷ್ಟು ಅವಹೇಳನಕರ! ಈ ಬಗೆಯ ವಾದಕ್ಕೂ ನಾಸ್ತಿಕತೆಗೂ ಏನೇನೂ ವ್ಯತ್ಯಾಸವಿಲ್ಲ. 'ನಾನೇ ಪರಬ್ರಹ್ಮ' ಅಂತ ತಿಳಿದುಕೊಳ್ಳುವುದಕ್ಕಿಂತ ದೊಡ್ಡ ಪಾಪ ಜಗತ್ತಿನಲ್ಲಿ ಇನ್ನಾವುದೂ ಇಲ್ಲ. ನಾನೂ ದೇವರಂತೆ, ನೀವೂ ದೇವರಂತೆ, ಈ ಪ್ರಾಣಿಪಕ್ಷಿಗಳೆಲ್ಲವೂ ದೇವರಂತೆ! ಸೃಷ್ಟಿಸಲ್ಪಟ್ಟಿರುವ ಜೀವಿ ತಾನೇ 'ಸೃಷ್ಟಿಕರ್ತ' ಅಂತ ತಿಳಿದುಕೊಳ್ಳಲು ಹೇಗೆ ಸಾಧ್ಯ? ಇದಕ್ಕಿಂತ ಹಾಸ್ಯಾಸ್ಪದವಾದದ್ದೇನಾದರೂ ಉಂಟೆ! ಇಂಥದನ್ನೆಲ್ಲ ಬರೆದಿದ್ದಾರಲ್ಲ ಆ ಋಷಿಗಳು, ಅವರಿಗೆ ತಲೆ ಸರಿಯಿರಲಿಲ್ಲ ಅಂತ ಕಾಣುತ್ತದೆ" ಎಂದು ಲೇವಡಿ ಮಾಡುತ್ತಿದ್ದ.

ಅವನ ಈ ಬಗೆಯ ಅಪಹಾಸ್ಯದ ಒರಟುಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರಿಗೆ ಸಿಟ್ಟೇರಿರಬಹುದೆ? ಇಲ್ಲ; ಬದಲಾಗಿ ಅವರು ಇದನ್ನು ತಮಾಷೆಯಾಗಿಯೇ ನೋಡಿದರು. ಮತ್ತು ಇದ್ದಕ್ಕಿದ್ದಂತೆ ಅವನ ಭಾವಕ್ಕೆ ಆಘಾತವಾಗಬಾರದೆಂದು ನಯವಾಗಿಯೇ ಛೇಡಿಸಿದರು:

"ಆ ಮಾತುಗಳಲ್ಲಿ ನಿನಗೆ ನಂಬಿಕೆ ಬಾರದಿದ್ದರೆ ಬಿಟ್ಟುಬಿಡು. ನಿನಗೆ ಒಪ್ಪಿಗೆಯಾಗಲಿಲ್ಲ ಎನ್ನುವ ಕಾರಣಕ್ಕೆ ಆ ಮಹರ್ಷಿಗಳನ್ನೆಲ್ಲ ಹಾಗೆ ಹೀಯಾಳಿಸಬಹುದೆ? ಭಗವಂತನ ಮಹಿಮೆ ಅನಂತವಾದದ್ದು. ನೀನೇಕೆ ಅದನ್ನು ಸೀಮಿತಗೊಳಿಸಲು ಹೋಗುತ್ತೀಯೆ? ಆತ ಸತ್ಯಸ್ವರೂಪಿ. ಅವನನ್ನೇ ಪ್ರಾರ್ಥಿಸಿಕೊ. ಅವನು ತನ್ನನ್ನು ಯಾವ ರೂಪದಲ್ಲಿ ತೋರಿಸಿಕೊಡುತ್ತಾನೋ ಅದನ್ನೇ ನಂಬಿ ಸ್ವೀಕರಿಸು."

ಆದರೆ ಬಡಪೆಟ್ಟಿಗೆ ಬಗ್ಗುವವನಲ್ಲ ನರೇಂದ್ರ. ತನ್ನ ವೈಜ್ಞಾನಿಕ ದೃಷ್ಟಿಗೆ ತಾಳೆಯಾಗದ ಯಾವುದನ್ನೂ ಅವನು ಒಪ್ಪುವವನೇ ಅಲ್ಲ. ಸುಳ್ಳು ಎನಿಸಿದ್ದನ್ನು ಶತಾಯಗತಾಯ ವಿರೋಧಿಸುವುದು ಆತನ ಗುಣ. ಆದ್ದರಿಂದ ಅವಕಾಶ ಸಿಕ್ಕಾಗಲೆಲ್ಲ ಅದ್ವೈತವಾದವನ್ನು ಗೇಲಿಮಾಡುತ್ತಲೇ ಇದ್ದ. ಏನೇ ಆದರೂ ನರೇಂದ್ರನ ಮಾರ್ಗ ಜ್ಞಾನ

ಮಾರ್ಗವೇ ಎಂಬುದು ಶ್ರೀರಾಮಕೃಷ್ಣರಿಗೆ ಖಂಡಿತವಾಗಿ ತಿಳಿದಿತ್ತು. ಆದ್ದರಿಂದ ಅವರು ಮಾತ್ರ ಅವನಿಗೆ ವೇದಾಂತತತ್ತ್ವಬೋಧನೆ ಮಾಡುವುದನ್ನು ಬಿಡಲಿಲ್ಲ.

ಸಾಮಾನ್ಯವಾಗಿ, ನರೇಂದ್ರ ಬರುತ್ತಿದ್ದಂತೆಯೇ ಶ್ರೀರಾಮಕೃಷ್ಣರು ಭಾವಪರವಶ ರಾಗಿಬಿಡುತ್ತಿದ್ದರು. ಕ್ರಮೇಣ ಅರ್ಧಪ್ರಜ್ಞೆ ಮರಳುತ್ತಿರುವಂತೆ, ಅತ್ಯಾನಂದದಿಂದ ಅವ ನೊಡನೆ ಆಧ್ಯಾತ್ಮಿಕ ಸಂಭಾಷಣೆಯಲ್ಲಿ ತೊಡಗುತ್ತಿದ್ದರು. ತನ್ಮೂಲಕ ಘನವಾದ ಆಧ್ಯಾತ್ಮಿಕ ರಹಸ್ಯಗಳನ್ನು ಅವನಿಗೆ ತಿಳಿಯಪಡಿಸುತ್ತಿದ್ದರು. ಕೆಲವೊಮ್ಮೆ ಅವರಿಗೆ ಅವನ ಬಾಯಿಂದ ಒಂದೆರಡು ಹಾಡುಗಳನ್ನು ಕೇಳುವ ಇಚ್ಛೆಯಾಗುತ್ತಿತ್ತು. ಆದರೆ ಆತನ ಗಂಧರ್ವಸ್ವರವನ್ನು ಕೇಳಿದೊಡನೆಯೇ ಸಮಾಧಿ! ಆದರೂ ನರೇಂದ್ರ ಹಾಡು ವುದನ್ನು ನಿಲ್ಲಿಸದೆ ತನ್ಮಯಚಿತ್ತನಾಗಿ ಗಂಟೆಗಟ್ಟಲೆ ಒಂದಾದಮೇಲೊಂದು ಹಾಡು ಹೇಳುತ್ತಲೇ ಹೋಗುತ್ತಿದ್ದ. ಮಧ್ಯೆ ಶ್ರೀರಾಮಕೃಷ್ಣರಿಗೆ ಭಾಗಶಃ ಬಾಹ್ಯಪ್ರಜ್ಞೆ ಮರಳಿ ದರೆ ಆಗ ಅವರು ಅವನನ್ನು ಯಾವುದಾದರೊಂದು ನಿರ್ದಿಷ್ಟ ಹಾಡನ್ನು ಹೇಳುವಂತೆ ಕೇಳುತ್ತಿದ್ದರು. "ಜೋ ಕುಛ್ ಹೈ ಸೋ ತೂ ಹೀ ಹೈ"—'ಏನೇನಿವೆಯೋ ಅವೆಲ್ಲ ನೀನೇ' ಎಂಬ ಹಾಡನ್ನಂತೂ ಕೇಳದಿದ್ದರೆ ಅವರಿಗೆ ಸಮಾಧಾನವೇ ಇಲ್ಲ. ಅನಂತರ ಅವರು ಸ್ವಲ್ಪ ಹೊತ್ತು ಅವನಿಗೆ ಅದ್ವೈತದ ವಿಚಾರಗಳನ್ನು ತಿಳಿಸಿಕೊಡುತ್ತಿದ್ದರು. ಜೀವನಿಗೂ ಈಶ್ವರನಿಗೂ ಇರುವ ಭೇದ, ಜೀವದ ಮತ್ತು ಬ್ರಹ್ಮದ ನಿಜಸ್ವರೂಪ— ಇಂಥವುಗಳ ಬಗ್ಗೆ ಹೇಳುತ್ತಿದ್ದರು. ಈ ನಡುವೆ ನರೇಂದ್ರನಿಗೆ ದಕ್ಷಿಣೇಶ್ವರದಲ್ಲೊಬ್ಬ 'ಆಪ್ತ ಸಖ' ಸಿಕ್ಕಿದ್ದ—ಅವನೇ ಹಾಜರಾ. ಹಿಂದೆಯೇ ಹೇಳಿದಂತೆ, ಅವನೊಬ್ಬ ಆಷಾಢ ಭೂತಿ. ಆದರೂ ಅವನೊಡನೆ ನರೇಂದ್ರನಿಗೆ ಅದೇನೋ ನಂಟು, ಅದೇನೋ ಗಂಟು! ಹಾಜರಾನದು ನರಿಬುದ್ಧಿಯಾದರೆ ನರೇಂದ್ರನದು ಸಿಂಹಬುದ್ಧಿ. ಅಂತೂ ಈ ಸಿಂಹ ರಾಜನೊಂದಿಗೆ ಆ ನರಿಮಂತ್ರಿಯ ಅಪೂರ್ವ ಜೋಡಿ! ಶ್ರೀರಾಮಕೃಷ್ಣರ ಬಳಿಗೆ ಬಂದಾಗಲೆಲ್ಲ ನರೇಂದ್ರ ಹಾಜರಾನೊಂದಿಗೆ, ಅನುಕೂಲವಿದ್ದಂತೆ ಒಂದೋ ಎರಡೋ ಗಂಟೆಕಾಲ ಹರಟೆ ಕೊಚ್ಚುತ್ತಿದ್ದ. ಅವನ ಮಾತುಗಳನ್ನೆಲ್ಲ ಹಾಜರಾ ಶ್ರದ್ಧೆಯಿಂದ ಆಲಿಸುತ್ತಿದ್ದ. ಅವನಿಗಾಗಿ ಹುಕ್ಕಾ ತಯಾರಿಸಿಕೊಡುತ್ತಿದ್ದ. ಇದನ್ನು ಕಂಡು ಉಳಿದ ತರುಣರು "ಹಾಜರಾ ಮಹಾಶಯ ನರೇಂದ್ರನ 'ಫರೆಂಡು'" ಎಂದು ತಮಾಷೆ ಮಾಡುತ್ತಿದ್ದರು. ಇವನ ವಿಷಯದಲ್ಲಿ ನರೇಂದ್ರನಿಗೂ ಶ್ರೀರಾಮಕೃಷ್ಣರಿಗೂ ಯಾವಾ ಗಲೂ ಭಿನ್ನಾಭಿಪ್ರಾಯವೇ. ಒಂದು ದಿನ ಹೀಗೇ ಶ್ರೀರಾಮಕೃಷ್ಣರು 'ಅದ್ವೈತ ವೇದಾಂತದ ದೃಷ್ಟಿಯಿಂದ ಜೀವಾತ್ಮನೂ ಪರಮಾತ್ಮನೂ ಒಂದೇ' ಎಂಬುದನ್ನು ಅರ್ಥಪಡಿಸುವ ಪ್ರಯತ್ನ ನಡೆಸಿದ್ದಾರೆ. ನರೇಂದ್ರನೇನೋ ಅವರ ಮಾತನ್ನೆಲ್ಲ ಮನವಿಟ್ಟು ಕೇಳಿದ; ಆದರೆ ಅವನಿಗೆ ಅವು ಸ್ವಲ್ಪವೂ ಒಪ್ಪಿಗೆಯಾಗಲಿಲ್ಲ. ಕೆಲಹೊತ್ತಿನ ಮೇಲೆ ಕೋಣೆಯಿಂದ ಆಚೆಬಂದ. ಹಾಜರಾ ಅಲ್ಲೇ ಇದ್ದ. ನರೇಂದ್ರ ಹುಕ್ಕಾ ಎಳೆಯುತ್ತ ಅವನೊಂದಿಗೆ ಹರಟುತ್ತ ಕುಳಿತ. ಆಗತಾನೇ ಶ್ರೀರಾಮಕೃಷ್ಣರು ಹೇಳು ತ್ತಿದ್ದ ವಿಷಯವನ್ನು ತೆಗೆದು, "ನೋಡಯ್ಯ, ಈ ಪಾತ್ರೆಯೂ ಬ್ರಹ್ಮವಂತೆ, ಲೋಟವೂ ಬ್ರಹ್ಮವಂತೆ! ಏನೇನು ಕಾಣುತ್ತಿದೆಯೋ ಎಲ್ಲವೂ ಬ್ರಹ್ಮವಂತೆ! ಅಷ್ಟೇ ಅಲ್ಲ, ನಾವೆಲ್ಲರೂ ಬ್ರಹ್ಮವೇ ಅಂತೆ. ಹೇಗಿದೆ ತಮಾಷೆ!" ಎನ್ನುತ್ತ ಲೇವಡಿಮಾಡಿದ. "ಚೆನ್ನಾಗಿದೆ, ಚೆನ್ನಾಗಿದೆ" ಎನ್ನುತ್ತ ನರಿಮಂತ್ರಿ ದನಿಗೂಡಿಸಿದ. ಇಬ್ಬರೂ ಗಹಗಹಿಸಿ ನಕ್ಕರು.

ಈ ವೇಳೆಗೆ ಒಳಗಡೆ ಅರ್ಧಬಾಹ್ಯಾವಸ್ಥೆಯಲ್ಲಿದ್ದ ಶ್ರೀರಾಮಕೃಷ್ಣರು ಮೆಲ್ಲ ನೆದ್ದು, ಬಾಲಕನಂತೆ ತಮ್ಮ ಉಟ್ಟಬಟ್ಟೆಯನ್ನು ಕಂಕುಳಲ್ಲಿಟ್ಟುಕೊಂಡು ಅವರ ಬಳಿಗೆ ಬಂದರು. ಮತ್ತು ಅವರ ನಗುವನ್ನು ಕಂಡು ಮುಗುಳ್ನಗುತ್ತ, ವಾತ್ಸಲ್ಯದ ದನಿಯಲ್ಲಿ ಕೇಳಿದರು: "ಏನಪ್ಪಾ, ಏನು ಸಮಾಚಾರ?" ಹೀಗೆನ್ನುತ್ತ ಅವರ ಉತ್ತರಕ್ಕಾಗಿ ಕಾಯದೆ ಮುಂದೆ ಬಂದು ನರೇಂದ್ರನನ್ನು ಸ್ಪರ್ಶಿಸಿ ಸಮಾಧಿಸ್ಥರಾದರು.

ಆ ಸ್ಪರ್ಶದಿಂದ ನರೇಂದ್ರನ ಮೇಲುಂಟಾದ ಪರಿಣಾಮ ಮಾತ್ರ ಹಿಂದೆಂದಿಗಿಂತ ವಿಚಿತ್ರ, ಮಹತ್ತರ. ಅದನ್ನು ಅವನೇ ವರ್ಣಿಸಲಿ:

"ಕ್ಷಣಮಾತ್ರದಲ್ಲಿ ನನ್ನ ಮನಸ್ಥಿತಿಯಲ್ಲೇನೋ ಕ್ರಾಂತಿಯಾಗಿಬಿಟ್ಟಿತು. ಈ ಇಡೀ ವಿಶ್ವದಲ್ಲೇ ಪರಬ್ರಹ್ಮವನ್ನುಳಿದು ಬೇರೇನೂ ಇಲ್ಲವೆಂಬುದನ್ನು ಕಂಡು ಆಶ್ಚರ್ಯಾ ಘಾತಗೊಂಡೆ. ಆದರೂ ಸುಮ್ಮನೆಯೇ ಇದ್ದೆ—ನೋಡೋಣ, ಈ ಸ್ಥಿತಿ ಎಷ್ಟು ಹೊತ್ತಿರುತ್ತದೋ ಅಂತ. ಆದರೆ ಆ ದಿನವೆಲ್ಲ ಅದರ ತೀವ್ರತೆ ಕಡಮೆಯಾಗಲೇ ಇಲ್ಲ. ಮನೆಗೆ ಬಂದರೂ ಅದೇ ಸ್ಥಿತಿ. ಏನೇನು ಕಾಣುತ್ತಿದ್ದೆನೋ ಅವೆಲ್ಲವೂ ಪರಬ್ರಹ್ಮ ಚೈತನ್ಯವೇ ಎಂಬಂತೆ ಭಾಸವಾಯಿತು. ಊಟಕ್ಕೆ ಕುಳಿತೆ. ಮುಂದಿದ್ದ ತಟ್ಟೆ, ಬಡಿಸಿದ ಅಡಿಗೆ, ಬಡಿಸುತ್ತಿರುವ ತಾಯಿ ಮತ್ತು ಸ್ವತಃ ನಾನು—ಹೀಗೆ ಪ್ರತಿಯೊಂದೂ ಅದೇ ಬ್ರಹ್ಮಮಯವಾಗಿ ಕಂಡಿತು. ಒಂದೆರಡು ತುತ್ತು ತಿಂದೆ, ಆಮೇಲೆ ಸುಮ್ಮನೆ ಕುಳಿತು ಬಿಟ್ಟೆ. 'ಯಾಕಪ್ಪ ಮಗು, ಸುಮ್ಮನೆ ಕುಳಿತೆಯಲ್ಲ? ಊಟ ಮಾಡೋದಿಲ್ಲವೇ?' ಎಂಬ ತಾಯಿಯ ವಾತ್ಸಲ್ಯದ ದನಿ ಕೇಳಿ ಎಚ್ಚರವಾಯಿತು. ಮತ್ತೆ ತಿನ್ನತೊಡಗಿದೆ. ತಿನ್ನುತ್ತಿರಲಿ, ಕುಡಿಯುತ್ತಿರಲಿ, ವಿಶ್ರಮಿಸುತ್ತಿರಲಿ, ಅಡ್ಡಾಡುತ್ತಿರಲಿ—ಅದೇ ಅನುಭವ, ಅದೇ ಅವಸ್ಥೆ! ರಸ್ತೆಯಲ್ಲಿ ಹೋಗುವಾಗ ಎದುರಿನಿಂದ ಗಾಡಿ ಬರುತ್ತಿದ್ದರೆ, ಒಮ್ಮೊಮ್ಮೆ ನನಗೆ ಪಕ್ಕಕ್ಕೆ ಸರಿದು ಗಾಡಿಗೆ ದಾರಿ ಬಿಡಬೇಕೆಂದೇ ಅನ್ನಿಸುತ್ತಿರಲಿಲ್ಲ. ಏಕೆಂದರೆ ನಾನೂ ಆ ಗಾಡಿಯೂ ಒಂದೇ ಪರಬ್ರಹ್ಮವಸ್ತುವೆಂದು ಭಾಸವಾಗುತ್ತಿತ್ತು. ಅಂಗಾಂಗಗಳಲ್ಲಿ ಸ್ಪರ್ಶಜ್ಞಾನವೇ ಇಲ್ಲವಾಗಿಬಿಟ್ಟಿತ್ತು. ಊಟ ಮಾಡಿದರೆ ತೃಪ್ತಿಯ ಅನುಭವವೇ ಇಲ್ಲ! ಉಣ್ಣುತ್ತಿರುವವನು ನಾನಲ್ಲ, ಬೇರೆ ಯಾರೋ ಎಂಬ ಭಾವನೆ ಬರುತ್ತಿತ್ತು. ಒಮ್ಮೊಮ್ಮೆ ಊಟದ ಮಧ್ಯೆ ಮಲಗಿಬಿಡುತ್ತಿದ್ದೆ. ಸ್ವಲ್ಪ ಹೊತ್ತಿಗೆ ಎದ್ದು ಪುನಃ ಉಣ್ಣುತ್ತಿದ್ದೆ. ಹೀಗೆ ಕೆಲವೊಮ್ಮೆ ಮಿತಿಮೀರಿ ತಿಂದುಬಿಡುತ್ತಿದ್ದೆ. ಆದರೂ ತೊಂದರೆಯೇನೂ ಆಗಲಿಲ್ಲ. ಆದರೆ ಈ ವಿಚಿತ್ರ ವರ್ತನೆಯನ್ನೆಲ್ಲ ಕಂಡು ತಾಯಿ ಗಾಬರಿಗೊಂಡು, 'ನಿನಗೆ ಒಳ ಗೊಳಗೇ ಏನೋ ಕಾಯಿಲೆಯಾಗಿರಬೇಕು' ಎಂದು ಉದ್ಗರಿಸುತ್ತಿದ್ದಳು. 'ಇವನಿನ್ನು ಹೆಚ್ಚು ದಿನ ಬದುಕಿರಲಾರ' ಎಂದು ಭಾವಿಸಿ ತಲ್ಲಣಗೊಳ್ಳುತ್ತಿದ್ದಳು.

"ಕಡೆಗೊಮ್ಮೆ ಈ ಅನುಭವದ ಉತ್ಕಟತೆ ಇಳಿದಾಗ ಜಗತ್ತು ಒಂದು ಕನಸಿನಂತೆ ಕಾಣತೊಡಗಿತು. ಒಂದು ದಿನ ಕಾರ್ನ್‌ವಾಲೀಸ್ ಚೌಕದ ಬದಿಯಲ್ಲಿ ನಡೆದುಕೊಂಡು ಹೋಗುವಾಗ ಅಲ್ಲಿ ಸುತ್ತಲೂ ಇದ್ದ ಕಬ್ಬಿಣದ ಕಂಬಿಗಳಿಗೆ ತಲೆಯನ್ನು ಚಚ್ಚಿಕೊಂಡು ನೋಡಿದೆ—ನಾನು ಕಾಣುತ್ತಿರುವುದು ನಿಜವಾದ ಕಂಬಿಗಳೋ ಕನಸಿನ ಕಂಬಿಗಳೋ ಎಂದು! ಕೈಕಾಲುಗಳೆಲ್ಲ ಜೋಮುಹಿಡಿದಂತಾಗಿದ್ದರಿಂದ ಪಾರ್ಶ್ವವಾಯು ಬಡಿಯುತ್ತ ದೇನೋ ಎಂದು ಭಯವಾಗುತ್ತಿತ್ತು. ಅಂತೂ ಎಷ್ಟೋ ದಿನ ಆ ಭಯಂಕರವಾದ ಭಾವಾವಸ್ಥೆಯಿಂದ ಬಿಡುಗಡೆ ಸಿಗಲೇ ಇಲ್ಲ. ಕಡೆಗೆ ಸಹಜಸ್ಥಿತಿಗೆ ಮರಳಿದ ಮೇಲೆ ನನಗೆ ತೋಚಿತು—'ಇದು ಅದ್ವೈತಜ್ಞಾನದ ಲಕ್ಷಣವಾಗಿರಬೇಕು' ಎಂದು. ಹಾಗಾದರೆ,

ಈ ಬಗ್ಗೆ ಶಾಸ್ತ್ರಗಳಲ್ಲಿ ಹೇಳಿರುವುದು ಸುಳ್ಳಲ್ಲವೆಂದಾಯಿತು. ಅಂದಿನಿಂದ ಅದ್ವೈತ ತತ್ತ್ವದ ವಿಷಯದಲ್ಲಿ ನಾನು ಮತ್ತೆ ಸಂದೇಹ ಪಡಲಿಲ್ಲ."

ಶ್ರೀರಾಮಕೃಷ್ಣರು ಇನ್ನೂ ಯಾವಯಾವ ಪರಿಯಿಂದ ನರೇಂದ್ರನ ಸಂಶಯುಗಳನ್ನೆಲ್ಲ ಹೋಗಲಾಡಿಸಿದರೋ, ಇನ್ನೆಷ್ಟೆಷ್ಟು ರೀತಿಯಲ್ಲಿ ಅವನಿಗೆ ಶಿಕ್ಷಣ ನೀಡಿದರೋ ಹೇಳುವುದು ಕಷ್ಟ. ಏಕೆಂದರೆ ಅವರಿಬ್ಬರ ಸಂವಾದ ಹೆಚ್ಚಾಗಿ ಮೌಖಿಕವಲ್ಲ; ಮಾನಸಿಕ.

ಇದೇ ದಿನಗಳಲ್ಲಿ ನಡೆದ ಮತ್ತೊಂದು ಅಪೂರ್ವ ಪ್ರಸಂಗವನ್ನು ನರೇಂದ್ರ ಕೆಲವರ್ಷಗಳ ಬಳಿಕ ತನ್ನ ಸ್ನೇಹಿತ ಶರಚ್ಚಂದ್ರನ ಮುಂದೆ ಬಯಲುಮಾಡುತ್ತಾನೆ:

ಅದೊಂದು ದಿನ ಶರಚ್ಚಂದ್ರನೂ ಅವನ ಬಂಧು ಶಶಿಭೂಷಣನೂ ನರೇಂದ್ರನ ಮನೆಗೆ ಬಂದಿದ್ದಾರೆ. ಇಬ್ಬರೂ ಶ್ರೀರಾಮಕೃಷ್ಣರ ತರುಣಶಿಷ್ಯರು; ತಮ್ಮ ಗುರುವಿನ ಮಹಿಮೆಯನ್ನು ಅಲ್ಪಸ್ವಲ್ಪ ಅರಿತವರು. ಅಂದು ನರೇಂದ್ರ, ತನ್ನ ಉಜ್ವಲ ವಾಗ್ಧಾರೆಯಿಂದ ಅವರಿಬ್ಬರಲ್ಲೂ ಸ್ಫೂರ್ತಿಯ ಬುಗ್ಗೆಯನ್ನೇ ಚಿಮ್ಮಿಸಿದ. ಅವನ ಮಾತನ್ನು ಕೇಳುತ್ತಕೇಳುತ್ತ ಅವರು ರೋಮಾಂಚಿತರಾದರು. ಈ ಹಿಂದೆ ಅವರು ಆತನ ಯಾವ ದಿವ್ಯಶಕ್ತಿಯಿಂದ ಅವನೆಡೆಗೆ ಆಕರ್ಷಿತರಾಗಿದ್ದರೋ, ಆ ಶಕ್ತಿ ಅಂದು ಸಾವಿರಪಟ್ಟು ಗಾಢವಾಗಿದ್ದಂತೆ ತೋರಿತು. ಅಷ್ಟು ದಿನವೂ ಅವರು ಶ್ರೀರಾಮಕೃಷ್ಣರನ್ನು ಭಗವತ್ಸಾಕ್ಷಾತ್ಕಾರ ಪಡೆದುಕೊಂಡ ಸಂತನೋ ಅಥವಾ ಸಿದ್ಧಪುರುಷನೋ ಇರಬೇಕೆಂದು ಭಾವಿಸಿದ್ದರು. ಆದರೆ ಅಂದು ಶ್ರೀರಾಮಕೃಷ್ಣರ ಸಂಬಂಧವಾದ ನರೇಂದ್ರನ ಮನಮುಟ್ಟುವ ಮಾತುಗಳು ಅವರ ಮನಸ್ಸಿನಲ್ಲಿ ಹೊಸಬೆಳಕನ್ನು ಹೊತ್ತಿಸಿದುವು. ಮಹಾಮಹಿಮರಾದ ಏಸುಕ್ರಿಸ್ತ, ಚೈತನ್ಯ ಮೊದಲಾದವರ ಜೀವನಚರಿತ್ರೆಗಳನ್ನು ಅವರು ಓದಿದ್ದರು. ಅವುಗಳಲ್ಲಿ ಬರೆದಿದ್ದ ಅನೇಕ ಅಲೌಕಿಕ ಘಟನೆಗಳನ್ನು ಓದಿ, ಅವೆಲ್ಲ ನಂಬಲನರ್ಹವೆಂದು ತೀರ್ಮಾನಿಸಿದ್ದರು. ಆದರೆ ಆ ದಿನ ನರೇಂದ್ರನ ಸ್ಫೂರ್ತಿಯುತ ಮಾತುಗಳನ್ನು ಆಲಿಸಿದಾಗ ಅಂತಹ ಘಟನೆಗಳು ಶ್ರೀರಾಮಕೃಷ್ಣರ ಜೀವನದಲ್ಲಿ ಅನುದಿನವೂ ಸಂಭವಿಸುತ್ತಿವೆ ಎಂಬ ವಿಶ್ವಾಸ ಅವರಲ್ಲುಂಟಾಯಿತು. ಶ್ರೀರಾಮಕೃಷ್ಣರು ತಮ್ಮ ಸ್ಪರ್ಶಮಾತ್ರದಿಂದ ಅಥವಾ ಇಚ್ಛಾಮಾತ್ರದಿಂದ, ಶರಣಾಗತರಾದ ಭಕ್ತರ ಸಂಸ್ಕಾರಬಂಧನಗಳನ್ನು ಬಿಡಿಸಿ ಅವರಿಗೆ ಭಕ್ತಿಜ್ಞಾನಗಳನ್ನು ನೀಡುತ್ತಿದ್ದಾರೆ, ಅಥವಾ ಅವರ ಜೀವನಗತಿಯನ್ನು ಆಧ್ಯಾತ್ಮಿಕ ಮಾರ್ಗಕ್ಕೆ ತಿರುಗಿಸುತ್ತಿದ್ದಾರೆ ಎಂದರಿತರು.

ದಾರಿಯಲ್ಲಿ ಮಾತನಾಡುತ್ತ ಸ್ನೇಹಿತರು ಮೂವರೂ ಒಂದು ಕೆರೆಯ ಬಳಿಗೆ ಬಂದರು. ಶ್ರೀರಾಮಕೃಷ್ಣರ ಕೃಪೆಯಿಂದ ತನಗಾದ ದಿವ್ಯಾನುಭವಗಳನ್ನು ಹೇಳಿಕೊಳ್ಳುತ್ತ ನರೇಂದ್ರ ಭಾವಭರಿತನಾದ. ತನ್ನೊಳಗೆ ತಾನು ಮಗ್ನನಾಗಿ ತನ್ನ ಅಂತರ್ಯದ ಆನಂದವನ್ನು ಹೊರಸೂಸಲು, ಹಾಡೊಂದನ್ನು ಹಾಡತೊಡಗಿದ:

*ಶ್ರೀಗೌರಾಂಗನು ಪ್ರೇಮಧನವನು ಸಕಲರಲ್ಲು ವಿತರಿಸುತಿಹನು;*
*ನಿತ್ಯಾನಂದನು 'ಬನ್ನಿರಿ' ಎನ್ನುತ ಎಲ್ಲರನ್ನು ಕರೆಯುತ್ತಿಹನು!*

ಹಾಡು ಮುಗಿದ ಮೇಲೆ ನರೇಂದ್ರ ಸ್ವಗತವೆಂಬಂತೆ ಮೆಲ್ಲಮೆಲ್ಲನೆ ಹೇಳುತ್ತಾನೆ: "...ಹೌದು, ನಿಜವಾಗಿ ಹಂಚುತ್ತಿದ್ದಾನೆ. ಪ್ರೇಮವಾಗಲಿ ಭಕ್ತಿಯಾಗಲಿ ಜ್ಞಾನವಾಗಲಿ ಮುಕ್ತಿಯಾಗಲಿ—ಗೌರಾಂಗನು (ಶ್ರೀರಾಮಕೃಷ್ಣರು) ಬೇಕುಬೇಕೆಂದುದನ್ನು ಹಂಚುತ್ತಿದ್ದಾನೆ. ಆಹ್, ಎಂಥ ಶಕ್ತಿ! (ಸ್ವಲ್ಪ ಹೊತ್ತು ಮೌನವಾಗಿದ್ದು, ಬಳಿಕ) ಅಂದು ರಾತ್ರಿ,

ಕೋಣೆಯ ಬಾಗಿಲಿಗೆ ಅಗಳಿ ಹಾಕಿಕೊಂಡು ಮಲಗಿದ್ದೆ. ಇದ್ದಕ್ಕಿದ್ದಂತೆ ಅವರು ನನ್ನ ಶರೀರದೊಳಗೆ ಇರುವವನನ್ನು ಸೆಳೆದು ದಕ್ಷಿಣೇಶ್ವರಕ್ಕೆ ಕರೆದೊಯ್ದರು. ಎಷ್ಟೋ ಬಗೆಯಾಗಿ ಉಪದೇಶ ಕೊಟ್ಟು, ಮರಳಿ ಹೋಗಲು ಅನುಮತಿಯಿತ್ತರು! ದಕ್ಷಿಣೇಶ್ವರದ ಗೌರಾಂಗರು ಏನು ಬೇಕಾದರೂ ಮಾಡಬಲ್ಲರು!"

ಇದನ್ನೆಲ್ಲ ಕೇಳುತ್ತ ಗೆಳೆಯರಿಬ್ಬರೂ ವಿಸ್ಮಯಮೂಕರಾಗಿಬಿಟ್ಟರು.

ಈ ರೀತಿಯಾಗಿ ಶ್ರೀರಾಮಕೃಷ್ಣರು ನರೇಂದ್ರನನ್ನು ಮೆಲ್ಲಗೆ ಹೆಜ್ಜೆಹೆಜ್ಜೆಯಾಗಿ, ಮೆಟ್ಟಿಲುಮೆಟ್ಟಿಲಾಗಿ, ಸಂಶಯದಿಂದ ಶ್ರದ್ಧೆಯ ಕಡೆಗೆ, ಕತ್ತಲಿನಿಂದ ಬೆಳಕಿನ ಕಡೆಗೆ, ಈ ಪ್ರಪಂಚದ ಸಂಕುಚಿತತೆಯಿಂದ ವಿಶ್ವಾತ್ಮಭಾವದ ವೈಶಾಲ್ಯದ ಕಡೆಗೆ ನಡೆಸಿಕೊಂಡು ಹೋದರು. ಅವರ ಅಲೌಕಿಕ ಶಕ್ತಿ ಆತನನ್ನು ಕ್ರಮಕ್ರಮವಾಗಿ ಲೌಕಿಕ ಬಂಧನದಿಂದ ಆಧ್ಯಾತ್ಮಿಕ ಸ್ವಾತಂತ್ರ್ಯದ ಕಡೆಗೆ, ಅಲ್ಪಬುದ್ಧಿಯ ಅರೆಜ್ಞಾನದಿಂದ ಸಮಗ್ರವಾದ ಸರ್ವಜ್ಞತ್ವದೆಡೆಗೆ, ಕೊನೆಗೆ ಸಚ್ಚಿದಾನಂದಸ್ವರೂಪದ ಬ್ರಹ್ಮಜ್ಞಾನದವರೆಗೆ ಮುನ್ನಡೆಸಿಕೊಂಡು ಹೋಯಿತು. ಶ್ರೀರಾಮಕೃಷ್ಣರ ಬೋಧನೆಗಳ ಸತ್ಯತೆಯನ್ನು ಮನಗಂಡು, ಹೊಸ ಅನುಭವಗಳನ್ನು ಗಳಿಸುತ್ತ ತನ್ನ ಸಂದೇಹಗಳನ್ನು ಪರಿಹರಿಸಿಕೊಳ್ಳುತ್ತ ಬಂದಂತೆ, ಅವರ ಮೇಲೆ ನರೇಂದ್ರನ ಪ್ರೀತಿ-ವಿಶ್ವಾಸ-ಗೌರವಗಳು ಸಾವಿರಮಡಿಯಾಗಿ ಹೆಚ್ಚಲಾರಂಭಿಸಿದುವು. ಕ್ರಮೇಣ ಅವನು ಅವರನ್ನು ಆಧ್ಯಾತ್ಮಿಕ ಸಾಮ್ರಾಜ್ಯದ ಚಕ್ರವರ್ತಿ ಎಂಬಂತೆ ಸ್ವೀಕರಿಸಲಾರಂಭಿಸಿದ.

ಆದರೆ ತಮ್ಮ ವ್ಯಕ್ತಿತ್ವವನ್ನಾಗಲಿ, ಬೋಧನೆಯನ್ನಾಗಲಿ ಶಿಷ್ಯರು ಅಷ್ಟು ಸುಲಭವಾಗಿ ಸ್ವೀಕರಿಸಬೇಕೆಂದು ನಿರೀಕ್ಷಿಸುವವರಲ್ಲ ಶ್ರೀರಾಮಕೃಷ್ಣರು. ಶಿಷ್ಯರಾಗುವವರು ತಮ್ಮನ್ನು ಚೆನ್ನಾಗಿ ಪರೀಕ್ಷೆ ಮಾಡಿನೋಡಿ ತೃಪ್ತಿಯಾದರೆ ಮಾತ್ರ ಸ್ವೀಕರಿಸಲಿ ಎನ್ನುವುದು ಅವರ ಧೀರ ಮನೋಭಾವ. ಯಾವ ಗುರುವು ಶರೀರ-ಮಾತು-ಮನಸ್ಸುಗಳಿಂದ ಪರಿಶುದ್ಧನಾಗಿರುತ್ತಾನೆಯೋ ಅಂಥವನು ಮಾತ್ರ ತನ್ನ ಶಿಷ್ಯರಿಂದ ಪರೀಕ್ಷೆ ಮಾಡಿಸಿಕೊಳ್ಳಲು ಒಪ್ಪುತ್ತಾನೆ. ಶ್ರೀರಾಮಕೃಷ್ಣರಾದರೋ ಒಳಗೂ ಹೊರಗೂ ಚೊಕ್ಕ ಬಂಗಾರ. ಅಲ್ಲದೆ, ಶಿಷ್ಯರು ತಾವೇ ಸ್ವತಃ ಪರೀಕ್ಷೆ ಮಾಡಿನೋಡಿ ತಮ್ಮ ಗುರುವಿನ ಋಜುತ್ವವನ್ನು ಕಣ್ಣಾರೆ ಕಂಡಾಗ, ಆತನ ಬೋಧನೆಗಳು ಅವರ ಮನಸ್ಸಿಗೆ ಒಪ್ಪಿಗೆಯಾಗುವುದಲ್ಲದೆ ನೆಲೆನಿಲ್ಲುವಂತಾಗುತ್ತದೆ. ಆಗ ಗುರುವಿನಲ್ಲಿ, ಗುರುವಿನ ಬೋಧನೆಯಲ್ಲಿ ಶ್ರದ್ಧೆ ದೃಢವಾಗುತ್ತದೆ. ಆದ್ದರಿಂದ ಶ್ರೀರಾಮಕೃಷ್ಣರು ನರೇಂದ್ರನಿಗೆ ಹೇಳುತ್ತಾರೆ: "ನೋಡಯ್ಯ, ಸರಾಫು ವ್ಯಾಪಾರಿಗಳು ನಾಣ್ಯವನ್ನು 'ಠಣ್' ಅಂತ ಬಡಿದು, ಅದು ಖೋಟಾ ನಾಣ್ಯವೋ ತಾಜಾ ನಾಣ್ಯವೋ ಎನ್ನುವುದನ್ನು ಪರೀಕ್ಷೆ ಮಾಡುವುದಿಲ್ಲವೆ? ಹಾಗೆಯೇ ನೀನೂ ನನ್ನನ್ನು ಪರೀಕ್ಷೆ ಮಾಡಿನೋಡು. ಹಾಗಲ್ಲದೆ ಒಪ್ಪಿಕೊಳ್ಳಲೇ ಬೇಡ." ನಿಜಕ್ಕೂ ಇದು ಶ್ರೀರಾಮಕೃಷ್ಣರ ಧೀರತನವೇ ಸರಿ. ಅದಕ್ಕೆ ಸರಿಯಾಗಿ ಶಿಷ್ಯ ನರೇಂದ್ರನ ಧೀರತನವೂ ಕಡಮೆಯೇನಲ್ಲ. ಅವನು ಹೆಜ್ಜೆಹೆಜ್ಜೆಗೂ ಅವರನ್ನು ಪರೀಕ್ಷೆಮಾಡಲು ಸಿದ್ಧನಾಗಿಯೇ ಇದ್ದ.

ಒಂದು ದಿನ ಅವನು ದಕ್ಷಿಣೇಶ್ವರಕ್ಕೆ ಬಂದಾಗ, ಶ್ರೀರಾಮಕೃಷ್ಣರು ಕಲ್ಕತ್ತಕ್ಕೆ ಹೋಗಿರುವ ವಿಚಾರ ತಿಳಿಯಿತು. ಆಗ ಅವನ ಮನಸ್ಸಿಗೆ ಹಠಾತ್ತನೆ ಒಂದು ಭಾವನೆ ಬಂದಿತು: 'ಶ್ರೀರಾಮಕೃಷ್ಣರು ಹೇಳುತ್ತಾರೆ—ಕಾಮಕಾಂಚನವನ್ನು ತ್ರಿಕರಣಪೂರ್ವಕವಾಗಿ ತ್ಯಾಗ ಮಾಡಬೇಕು ಅಂತ; ಮತ್ತು ತಾವು ಹಣವನ್ನು ಸ್ಪರ್ಶ ಕೂಡ ಮಾಡ

ಲಾರೆವು ಅಂತಲೂ ಹೇಳುತ್ತಾರೆ. ಆ ಮಾತಿನ ಸತ್ಯತೆಯನ್ನು ಪರೀಕ್ಷಿಸಿಯೇಬಿಡಬೇಕು.' ಹೀಗೆ ಆಲೋಚಿಸಿ ಅವನು ಮೆಲ್ಲಗೆ ಅವರ ಹಾಸಿಗೆಯ ದುಪ್ಪಟದ ಕೆಳಗಡೆ ಒಂದು ರೂಪಾಯಿಯ ನಾಣ್ಯವನ್ನು ಅಡಗಿಸಿಟ್ಟು, ಅಲ್ಲಿಂದ ಮರೆಯಾದ. ಶ್ರೀರಾಮಕೃಷ್ಣರು ಸ್ವಲ್ಪ ಹೊತ್ತಿಗೆ ಹಿಂದಿರುಗಿದರು; ಎಂದಿನಂತೆ ತಮ್ಮ ಹಾಸಿಗೆಯ ಮೇಲೆ ಕುಳಿತರು. ತಕ್ಷಣವೇ ಏನೋ ಕುಟುಕಿದವರಂತೆ ನೋವಿನಿಂದ ಛಂಗನೆ ಹಾರಿದರು! ಏನಾಯಿತೆಂದು ಗೊತ್ತಾಗದೆ ಆಶ್ಚರ್ಯಪಡುತ್ತ ನಿಂತರು. ಅಲ್ಲಿದ್ದವನೊಬ್ಬ ಹಾಸಿಗೆಯನ್ನು ಕೊಡವಿ ನೋಡಿದ. ಆಗ ಹೊದಿಕೆಯ ಕೆಳಗೆ ಅಡಗಿಸಿಟ್ಟಿದ್ದ ರೂಪಾಯಿಯ ನಾಣ್ಯ ಕೆಳಗೆ ಬಿತ್ತು. ಈ ವೇಳೆಗೆ ಅಲ್ಲಿಗೆ ಬಂದು ನಿಂತಿದ್ದ ನರೇಂದ್ರ ಇದನ್ನೆಲ್ಲ ನೋಡಿದ. ಅವನಿಗೆ ನಾಚಿಕೆಯಾಯಿತು. ಒಂದು ಮಾತನ್ನೂ ಆಡದೆ ಕೋಣೆಯನ್ನು ಬಿಟ್ಟು ಹೊರಟುಹೋದ. ಅವನಿಟ್ಟಿದ್ದ ಪರೀಕ್ಷೆಯಲ್ಲಿ ಶ್ರೀರಾಮಕೃಷ್ಣರು ಯಶಸ್ವಿಯಾಗಿದ್ದರು. ಇದು ಇವನೇ ತಮ್ಮನ್ನು ಪರೀಕ್ಷೆಮಾಡಲು ನಡೆಸಿದ ತಂತ್ರ ಎಂದು ಗೊತ್ತಾದಾಗ ಶ್ರೀರಾಮಕೃಷ್ಣರು ಬಹಳವಾಗಿ ಸಂತೋಷಪಟ್ಟರು.

ನರೇಂದ್ರ ತನ್ನ ಗುರುವಿನ ಮೇಲೆ ನಡೆಸಿದ ಪರೀಕ್ಷೆಗಳಲ್ಲಿ ಇದು ಒಂದು ಮಾತ್ರ. ಅವರು ತನ್ನನ್ನು ಗಮನಿಸುತ್ತಿದ್ದಂತೆಯೇ ತಾನೂ ಅವರನ್ನು ಎಡೆಬಿಡದೆ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಅವರ ಒಂದೊಂದು ಮಾತನ್ನೂ ತನ್ನ ಬುದ್ಧಿಯ ಒರೆಗಲ್ಲಿಗೆ ಉಜ್ಜಿ, ಸರಿಯೆಂದು ಕಂಡುಬಂದುದನ್ನು ಮಾತ್ರವೇ ಸ್ವೀಕರಿಸುತ್ತಿದ್ದ.

ಹಾಗೆಯೇ ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನು ಪರೀಕ್ಷೆಗೆ ಗುರಿಪಡಿಸದೆ ಬಿಡುತ್ತಿರಲಿಲ್ಲ. ನರೇಂದ್ರನೂ ಇಂತಹ ಹಲವಾರು ಪರೀಕ್ಷೆಗಳಿಗೆ ಗುರಿಯಾಗಬೇಕಾಯಿತು. ಒಮ್ಮೆ ಶ್ರೀರಾಮಕೃಷ್ಣರು ಅವನ ದೇಹವನ್ನು ಶರೀರಸಾಮುದ್ರಿಕ ದೃಷ್ಟಿಯಿಂದ ಪರೀಕ್ಷಿಸಿ, "ನಿನ್ನ ಶರೀರಲಕ್ಷಣವೆಲ್ಲ ಚೆನ್ನಾಗಿದೆ. ಆದರೆ ಒಂದೇ ಒಂದು ದೋಷವೆಂದರೆ ನೀನು ನಿದ್ರೆ ಮಾಡುವಾಗ ಭಾರವಾಗಿ ಉಸಿರಾಡುತ್ತೀಯೆ. ಯೋಗಿಗಳ ಪ್ರಕಾರ, ಭಾರವಾಗಿ ಉಸಿರಾಡುವವರ ಆಯುಷ್ಯ ಕಡಮೆ" ಎಂದರು. ಇನ್ನೊಂದು ಸಂದರ್ಭದಲ್ಲಿ ಅವರೆನ್ನುತ್ತಾರೆ: "ನಿನ್ನ ಕಣ್ಣುಗಳು ನೀನೊಬ್ಬ ಒಣಜ್ಞಾನಿಯಲ್ಲ ಎಂಬುದನ್ನು ಎತ್ತಿ ತೋರಿಸುತ್ತವೆ. ನಿನ್ನಲ್ಲಿ ಆಳವಾದ ಜ್ಞಾನವೂ, ಮಧುರವಾದ ಭಕ್ತಿಯೂ ಬಹಳ ಚೆನ್ನಾಗಿ ಸಮರಸದಿಂದ ಬೆರೆತುಕೊಂಡಿವೆ." ಇಂತಹ ಅನೇಕ ಪರೀಕ್ಷೆಗಳ ಮೂಲಕ ಶ್ರೀರಾಮಕೃಷ್ಣರು ಆತನ ಸಂಯಮ ಧೈರ್ಯ ಸ್ಥೈರ್ಯ ತ್ಯಾಗಬುದ್ಧಿ—ಇವೆಲ್ಲ ಅತ್ಯುನ್ನತ ಮಟ್ಟದವು ಎಂದು ತೀರ್ಮಾನಿಸಿದ್ದರು. ಆದ್ದರಿಂದ, 'ಎಷ್ಟೇ ಹಸಿದರೂ ಸಿಂಹ ಹುಲ್ಲು ತಿಂದೀತೆ ?' ಎಂಬಂತೆ ಎಂಥಾ ಸಂಕಟದ ಪರಿಸ್ಥಿತಿಯೇ ಒದಗಿಬಂದರೂ ನರೇಂದ್ರ ಮಾತ್ರ ಸಾಮಾನ್ಯರಂತೆ ವರ್ತಿಸುವುದಿಲ್ಲ ಎಂದು ಕಂಡುಕೊಂಡಿದ್ದರು.

ಒಮ್ಮೆ ಮಾತ್ರ ನರೇಂದ್ರ ತನಗರಿವಿಲ್ಲದಂತೆಯೇ ದೀರ್ಘ ಕಾಲದ, ಅತಿ ಕಠಿಣ ಪರೀಕ್ಷೆಯೊಂದಕ್ಕೆ ಈಡಾದ:

ನರೇಂದ್ರ ದಕ್ಷಿಣೇಶ್ವರಕ್ಕೆ ಬಂದ ದಿನಗಳಲ್ಲೆಲ್ಲ ಶ್ರೀರಾಮಕೃಷ್ಣರಿಗೆ ಉತ್ಸವ. ಅವನನ್ನು ಕಂಡರೆ ಅವರಿಗೆ ಹೇಳಿತೀರದಷ್ಟು ಆನಂದ. ಆದರೊಂದು ದಿನ ಆದೇಕೋ ಇದ್ದಕ್ಕಿದ್ದಂತೆ ಎಲ್ಲವೂ ಸಂಪೂರ್ಣ ವಿರುದ್ಧವಾಯಿತು. ನರೇಂದ್ರ ಬಂದ; ಎಂದಿನಂತೆ ನಮಸ್ಕರಿಸಿ ಕುಳಿತ. ಶ್ರೀರಾಮಕೃಷ್ಣರು ಮಿಸುಕಲಿಲ್ಲ, ಮುಗುಳ್ನಗೆ ಬೀರಲಿಲ್ಲ, ಅವನತ್ತ ತಿರುಗಿಯೂ ನೋಡಲಿಲ್ಲ. ಅಸಡ್ಡೆಯ ಮುಖಭಾವ, ವಿಲಕ್ಷಣ ಮೌನ! ನರೇಂದ್ರ

ಬಹಳ ಹೊತ್ತು ಸುಮ್ಮನೆ ಕುಳಿತಿದ್ದ. ಕಡೆಗೆ, ಬಹುಶಃ ಗುರುಗಳು ಭಾವಸ್ಥಿತಿಯಲ್ಲಿರ ಬೇಕೆಂದು ಭಾವಿಸಿ ಎದ್ದುಹೋದ. ಅಲ್ಲೇ ಹೊರಗೆ ಹಾಜರಾನಂತೂ ಇದ್ದೇ ಇದ್ದಾನಲ್ಲ. ಅವನ ಜೊತೆಯಲ್ಲಿ ಸ್ವಲ್ಪ ಹರಟೆಕೊಚ್ಚಿ, ಗುಡುಗುಡಿ ಸೇದಿದ. ಅಷ್ಟೊತ್ತಿಗೆ ಶ್ರೀರಾಮ ಕೃಷ್ಣರು ಯಾರೊಂದಿಗೋ ಮಾತನಾಡಿದ್ದು ಕೇಳಿಸಿತು. ಮತ್ತೆ ಒಳಗೆ ಬಂದ. ಆದರೆ ಇವನನ್ನು ನೋಡುತ್ತಿದ್ದಂತೆಯೇ ಅವರು ಮತ್ತೆ ಸುಮ್ಮನಾಗಿಬಿಟ್ಟರು. ಅಷ್ಟೇ ಅಲ್ಲ, ಗೋಡೆಗೆ ಮುಖ ಮಾಡಿ ಮಲಗಿಬಿಟ್ಟರು! ದಿನವೆಲ್ಲ ಹೀಗೇ ಕಳೆಯಿತು. ಆದರೆ ಇದನ್ನು ನರೇಂದ್ರನೇನೂ ತಪ್ಪಾಗಿ ತಿಳಿಯಲಿಲ್ಲ. ಸಂಜೆಯ ವೇಳೆಗೆ ಶ್ರೀರಾಮಕೃಷ್ಣರಿಗೆ ಪ್ರಣಾಮ ಸಲ್ಲಿಸಿ ನಿರ್ಗಮಿಸಿದ.

ಒಂದು ವಾರದೊಳಗಾಗಿ ಅವನು ಮತ್ತೊಮ್ಮೆ ಬಂದ. ಆದರೆ ಶ್ರೀರಾಮಕೃಷ್ಣ ರದು ಅದೇ ಮೌನ, ಅದೇ ಔದಾಸೀನ್ಯ! ಅಂದೂ ಅವನು ಹಾಜರಾ ಮತ್ತಿತರ ಭಕ್ತ ರೊಂದಿಗೆ ಹರಟೆಕೊಂಡಿದ್ದು ಹಿಂದಿರುಗಿದ. ಹೀಗೆಯೇ ಮೂರನೆಯ ಸಲವೂ ಬಂದ, ನಾಲ್ಕನೆಯ ಸಲವೂ ಬಂದ. ಶ್ರೀರಾಮಕೃಷ್ಣರ ವರ್ತನೆ ಮಾತ್ರ ಬದಲಾಗಲೇ ಇಲ್ಲ. ಅವನು ಎದುರಿಗಿದ್ದರೂ ಒಂದೇ ಇಲ್ಲದಿದ್ದರೂ ಒಂದೇ ಎಂಬಂಥ ಅಲಕ್ಷ್ಯ! ಇಲ್ಲವೆ, ಯಾವನೋ ಅಪರಿಚಿತನೆಂಬಂತೆ ನೋಡಿ ಅತ್ತ ತಿರುಗಿಬಿಡುತ್ತಾರೆ. ಆದರೂ ನರೇಂದ್ರ ಸ್ವಲ್ಪವೂ ಬೇಸರಿಸಿಕೊಳ್ಳಲಿಲ್ಲ. ಅಥವಾ ತನ್ನಿಂದ ಏನು ತಪ್ಪಾಯಿತೋ ಎಂದು ಕೊರ ಗಲೂ ಇಲ್ಲ. ಎಂದಿನ ವಿಶ್ವಾಸದಿಂದ ತನ್ನಷ್ಟಕ್ಕೆ ತಾನು ವಾರಕ್ಕೊಮ್ಮೆ ಬಂದುಹೋಗು ತ್ತಿದ್ದ. ಈ ನಡುವಿನ ಅವಧಿಯಲ್ಲಿ ಶ್ರೀರಾಮಕೃಷ್ಣರು ಯಾರನ್ನಾದರೂ ಕಲ್ಕತ್ತಕ್ಕೆ ಕಳಿಸಿ, ನರೇಂದ್ರನ ಅರಿವಿಗೆ ಬಾರದಂತೆ ಅವನ ಕ್ಷೇಮಸಮಾಚಾರವನ್ನು ತಿಳಿದುಕೊಳ್ಳು ತ್ತಿದ್ದರು. ಹೀಗೇ ಒಂದು ತಿಂಗಳ ಮೇಲಾಯಿತು. ಒಂದು ದಿನ ಅವನು ಬಂದಾಗ ಶ್ರೀರಾಮಕೃಷ್ಣರು ಕೇಳಿದರು: "ನಾನು ನಿನ್ನ ಜೊತೆ ಮಾತುಕತೆಯೇನೂ ಆಡುವುದಿಲ್ಲ. ಆದರೂ ನೀನು ಮಾತ್ರ ಬರುತ್ತಲೇ ಇದ್ದೀಯಲ್ಲ, ಅದು ಹೇಗೆ?"

ನರೇಂದ್ರ ತನ್ನ ಎಂದಿನ ದಿಟ್ಟತನದಿಂದ ಸಹಜವಾಗಿ ಉತ್ತರಿಸಿದ: "ನೀವು ನನ್ನನ್ನು ಮಾತನಾಡಿಸಲಿ ಅಂತ ನಾನಿಲ್ಲಿಗೆ ಬರುತ್ತೇನೆ ಎಂದುಕೊಂಡಿರಾ? ನಾನು ನಿಮ್ಮನ್ನು ಪ್ರೀತಿಸುತ್ತೇನೆ. ನಿಮ್ಮನ್ನು ನೋಡಲು ನನಗಿಷ್ಟ; ಆದಕ್ಕಾಗಿ ಬರುತ್ತೇನೆ."

ಇದನ್ನು ಕೇಳಿದಾಗ ಶ್ರೀರಾಮಕೃಷ್ಣರಿಗಾದ ಸಂತಸ ಅಷ್ಟಿಷ್ಟಲ್ಲ. "ಆಹ್, ನರೇನ್! ಇಷ್ಟು ದಿನವೂ ನಾನು ನಿನ್ನನ್ನು ಸುಮ್ಮನೆ ಪರೀಕ್ಷಿಸುತ್ತಿದ್ದೆ ಅಷ್ಟೆ. ನಿನ್ನ ಮೇಲೆ ಪ್ರೀತಿ-ವಿಶ್ವಾಸ ತೋರದಿದ್ದರೆ ನೀನು ಹೇಗೆ ಪ್ರತಿಕ್ರಿಯಿಸುತ್ತೀಯೋ ನೋಡೋಣ ಎಂದೇ ಹಾಗೆ ಮಾಡಿದೆ. ಭಲೇ! ಈ ರೀತಿ ಅಸಡ್ಡೆ ತೋರಿದಾಗ ನಿನ್ನಂತಹ ಉನ್ನತ ಮಟ್ಟದ ಸಾಧಕರು ಮಾತ್ರ ತಡೆದುಕೊಂಡಾರು. ಬೇರೆ ಯಾರೇ ಆಗಿದ್ದರೂ ಯಾವತ್ತೋ ನನ್ನಿಂದ ದೂರವಾಗಿಬಿಡುತ್ತಿದ್ದರು. ಮತ್ತೆ ಈ ಕಡೆ ತಿರು ಗಿಯೂ ನೋಡುತ್ತಿರಲಿಲ್ಲ" ಎಂದು ಕೊಂಡಾಡಿದರು.

ನಿಜಕ್ಕೂ ಇದೊಂದು ಭಯಂಕರ ಅಗ್ನಿಪರೀಕ್ಷೆಯೇ ಸರಿ. ದಿವ್ಯ ಗುರು ನಡೆಸಿದ ಗುರುತರ ಪರೀಕ್ಷೆ. ಮೊಟ್ಟಮೊದಲ ಭೇಟಿಯಿಂದಲೂ ಅವರಿರ್ವರ ನಡುವೆ ಬೆಳೆದು ಬಂದಿದ್ದ ಬಾಂಧವ್ಯ ಎಷ್ಟು ಗಾಢವಾದದ್ದು, ಸುಮಧುರವಾದದ್ದು, ಅಲೌಕಿಕವಾದದ್ದು! ಶ್ರೀರಾಮಕೃಷ್ಣರು ನರೇಂದ್ರನ ಬಗ್ಗೆ ತೋರಿದ್ದ ಪ್ರೀತಿಯೇನು, ವಿಶ್ವಾಸವೇನು! ಅವನಿಗಾಗಿ ಸಿಹಿತಿಂಡಿಗಳನ್ನು ತೆಗೆದಿಟ್ಟಿದ್ದು ಅವನು ಬಂದ ಕೂಡಲೇ ಉಪಚರಿಸಿ,

ತಮ್ಮ ಕೈಯಿಂದಲೇ ಅವನಿಗೆ ತಿನ್ನಿಸುವುದೇನು, ಮನೆಗೂ ಕಳಿಸಿಕೊಡುವುದೇನು! ಭಕ್ತರ ಮುಂದೆ ಅವನನ್ನು ಕೊಂಡಾಡುವುದೇನು! ಅವನನ್ನು ಹುಡುಕಿಕೊಂಡು ತಾವೇ ಕಲ್ಕತ್ತಕ್ಕೆ ಬರುವುದೇನು! ಈಗ ಇದ್ದಕ್ಕಿದ್ದಂತೆ, ಅದೂ ಅಕಾರಣವಾಗಿ ಈ ನಿರ್ಲಕ್ಷ್ಯ ವೇನು, ಔದಾಸೀನ್ಯವೇನು, ಅಸಹನೀಯ ಮೌನವೇನು! ಆದರೆ ನರೇಂದ್ರ ಮಾತ್ರ ಇದನ್ನೆಲ್ಲ ಸಹಿಸಿಕೊಂಡು ಶ್ರೀರಾಮಕೃಷ್ಣರ ಮೇಲೆ ಅದೇ ಭಕ್ತಿ-ಪ್ರೀತಿ-ಗೌರವವನ್ನಿಟ್ಟು ಕೊಂಡದ್ದು ದೊಡ್ಡ ಅದ್ಭುತವಲ್ಲವೆ? ಒಂದು ವೇಳೆ ಅವನು ಅವರ ಔದಾಸೀನ್ಯವನ್ನು ಕಂಡು ಅವರನ್ನು ನಿರಾಕರಿಸಿ ಹೊರಟುಹೋಗಿಬಿಟ್ಟಿದ್ದರೆ, ಅವನಿಗೆ ನಿಜಕ್ಕೂ ಬಹಳ ನಷ್ಟವಾಗುತ್ತಿತ್ತು. ಶ್ರೀರಾಮಕೃಷ್ಣರಂತಹ ಯುಗಪುರುಷರನ್ನು, ಪರಮಗುರುವನ್ನು ಸಂಧಿಸಲು ಅವನು ತೋರಿದ್ದ ಕಾತರತೆ ಅದೆಷ್ಟು! ಈ ರೀತಿ ತಾನು ಕಂಡುಕೊಂಡ ಅನರ್ಘ್ಯ ರತ್ನವನ್ನು ಬಿಟ್ಟುಬಿಟ್ಟಿದ್ದರೆ ನಿಜಕ್ಕೂ ಅವನಿಗುಂಟಾಗುತ್ತಿದ್ದುದು ಭರಿಸ ಲಾರದ ನಷ್ಟ.

ಭಗವಂತನು ನಮ್ಮನ್ನೇ ಆಗಲಿ, ನಾವು ಭಗವಂತನನ್ನೇ ಆಗಲಿ ನಿರಾಕರಿಸಿದರೆ ಆದರಿಂದ ನಷ್ಟ ಭಗವಂತನಿಗಲ್ಲ, ನಮಗೇ! ಗುರುಗಳು ನಮ್ಮನ್ನಾಗಲಿ, ನಾವು ಗುರು ಗಳನ್ನಾಗಲಿ ನಿರಾಕರಿಸಿದಾಗ ನಷ್ಟವಾಗುವುದು ನಮಗೇ ಹೊರತು ಗುರುಗಳಿಗಲ್ಲ. ಈ ಬಗೆಯ ನಿರಾಕರಣೆಯಿಂದ ಬಂದೊದಗುವ ದುಃಖ ಮಾತ್ರ ನಿಜಕ್ಕೂ ಅಸಹನೀಯ ವಾಗುತ್ತದೆ. ಆದ್ದರಿಂದಲೇ ಉಪನಿಷತ್ತಿನಲ್ಲಿ ಶಿಷ್ಯ ಪ್ರಾರ್ಥಿಸಿಕೊಳ್ಳುತ್ತಾನೆ:

*ಮಾಽಹಂ ಬ್ರಹ್ಮ ನಿರಾಕುರ್ಯಾಮ್ ಮಾ ಮಾ ಬ್ರಹ್ಮ ನಿರಾಕರೋತ್।*
*ಅನಿರಾಕರಣಮಸ್ತು ಅನಿರಾಕರಣಂ ಮೇ ಅಸ್ತು।*
*ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು*
*ತೇ ಮಯಿ ಸಂತು॥*

ಎಂದರೆ, "ಬ್ರಹ್ಮವನ್ನು (ಪರಮಾತ್ಮನನ್ನು) ನಾನು ಎಂದಿಗೂ ನಿರಾಕರಿಸದಂತಾಗಲಿ, ಬ್ರಹ್ಮವೂ ನನ್ನನ್ನು ನಿರಾಕರಿಸದಿರಲಿ. ನಿರಾಕರಣೆಯೇ ಇಲ್ಲದಿರಲಿ. ಕೊನೆಗೆ, ನನ್ನಿಂದ ಲಾದರೂ ನಿರಾಕರಣೆ ಇಲ್ಲದಿರಲಿ. ಉಪನಿಷತ್ತಿನ ಧರ್ಮಗಳೆಲ್ಲವೂ ಆತ್ಮನಿರತನಾದ ನನ್ನಲ್ಲಿ ಕಾಣಿಸಿಕೊಳ್ಳಲಿ" ಎಂದು. ಇಲ್ಲಿ ಶಿಷ್ಯ ಭಗವಂತನನ್ನು ಪ್ರಾರ್ಥಿಸುತ್ತ 'ಕೊನೆಗೆ ನನ್ನಿಂದಲಾದರೂ ನಿರಾಕರಣೆ ಇಲ್ಲದಿರಲಿ' ಎಂದು ಪ್ರಾರ್ಥಿಸಿಕೊಂಡದ್ದು ತುಂಬ ಮನನೀಯ. ಹಾಗೆಯೇ ಇಲ್ಲಿ ಶ್ರೀರಾಮಕೃಷ್ಣರು ತನ್ನನ್ನು ವಾರಗಟ್ಟಲೆ ಸಂಪೂರ್ಣ ವಾಗಿ ನಿರಾಕರಿಸಿದರೂ ನರೇಂದ್ರ ಮಾತ್ರ ಅವರನ್ನು ನಿರಾಕರಿಸದಿದ್ದುದು ಆ ಉಪನಿಷತ್ತಿನ ಪ್ರಾರ್ಥನೆಗೆ ಅನುಗುಣವಾಗಿದೆ.

ಆದರೆ ಇಲ್ಲೊಂದು ಪ್ರಶ್ನೆಯೇಳಬಹುದು—ಶ್ರೀರಾಮಕೃಷ್ಣರು ನರೇಂದ್ರನನ್ನು ನಿರಾಕರಿಸಿದ್ದು, ಅವನ ಕಡೆ ಔದಾಸೀನ್ಯ ತೋರಿದ್ದು ಇದೆಲ್ಲ ಕೇವಲ ತೋರಾಣಿಕೆ ಯಲ್ಲವೆ? ನಿಜವೇ. ಆದರೆ ಇದೆಲ್ಲ ಕೇವಲ ತೋರಾಣಿಕೆಯೆಂದು ಅವನಿಗೆ ಗೊತ್ತಾ ದುದು ಯಾವಾಗ? ನಾಟಕ ಮುಗಿದ ಮೇಲೆಯೇ! ಶ್ರೀರಾಮಕೃಷ್ಣರೇ ಅದನ್ನು ಹೇಳಿದ ಮೇಲೆ! ಆದ್ದರಿಂದ ನಿಜಕ್ಕೂ ಅದೊಂದು ಕಠಿಣ ಪರೀಕ್ಷೆ. ಅದಕ್ಕೇ ಶ್ರೀರಾಮ ಕೃಷ್ಣರು ಅವನಿಗೆ ಯೋಗ್ಯತಾಪತ್ರ ಕೊಡುತ್ತಾರೆ—'ಈ ಬಗೆಯ ಔದಾಸೀನ್ಯವನ್ನು ನಿನ್ನಂಥ ಉನ್ನತ ಮಟ್ಟದ ಸಾಧಕರು ಮಾತ್ರ ತಡೆದುಕೊಳ್ಳಬಲ್ಲರು' ಎಂದು.

ಹೀಗೆ ಶ್ರೀರಾಮಕೃಷ್ಣರು ನರೇಂದ್ರನನ್ನು ಪರಿಪರಿಯಾಗಿ ಪರೀಕ್ಷಿಸಿದರು. ಇನ್ನೊಂದು ದಿನ ಅವರು ಅವನನ್ನು ಪಂಚವಟಿಯ ಏಕಾಂತಕ್ಕೆ ಕರೆತಂದು ಹೇಳಿದರು:

"ನೋಡು, ಆಧ್ಯಾತ್ಮಿಕ ಸಾಧನೆಗಳ ಫಲವಾಗಿ ನನಗೆ ಅಣಿಮಾ ಮುಂತಾದ ಅಷ್ಟಸಿದ್ಧಿಗಳು* ಲಭ್ಯವಾಗಿವೆ. ಆದರೆ, ನೀನೇ ನೋಡುತ್ತಿದ್ದೀಯಲ್ಲ, ಮೈಮೇಲಿನ ಬಟ್ಟೆಯನ್ನೂ ಸರಿಯಾಗಿ ಇಟ್ಟುಕೊಳ್ಳಲಾರದವನು ನಾನು. ನನ್ನಂಥವನಿಗೆ ಆ ಸಿದ್ಧಿಗಳನ್ನೆಲ್ಲ ಕಟ್ಟಿಕೊಂಡು ಏನಾಗಬೇಕು! ಆದ್ದರಿಂದ ಅವನ್ನೆಲ್ಲ ನಿನಗೆ ಕೊಟ್ಟುಬಿಡಲು ಜಗನ್ಮಾತೆಯನ್ನು ಕೇಳಿಕೊಳ್ಳೋಣವೆಂದಿದ್ದೇನೆ. ಹೇಗಿದ್ದರೂ ಮುಂದೆ ನೀನು ಆಕೆಯ ಕಾರ್ಯಗಳನ್ನು ಬಹಳಷ್ಟು ಸಾಧಿಸುವುದಕ್ಕಿದೆ ಅಂತ ಅವಳೇ ಹೇಳಿದ್ದಾಳೆ. ಆಗ ನೀನು ಈ ಸಿದ್ಧಿಗಳನ್ನು ಯಥೇಚ್ಛವಾಗಿ ಬಳಸಬಹುದು; ಏನೆನ್ನುವೆ ?"

ನರೇಂದ್ರ (ಕ್ಷಣಕಾಲ ಯೋಚಿಸಿ): "ಅವುಗಳಿಂದ ನನಗೆ ಭಗವತ್ಸಾಕ್ಷಾತ್ಕಾರಕ್ಕೆ ಅನುಕೂಲವಾಗುತ್ತದೆಯೆ ?"

ಶ್ರೀರಾಮಕೃಷ್ಣರು: "ಇಲ್ಲ ಇಲ್ಲ. ಆ ದಿಸೆಯಲ್ಲಿ ಅವುಗಳಿಂದ ನಿನಗೇನೂ ಉಪಯೋಗವಾಗಲಾರದು. ಆದರೆ ನೀನು ಸಾಕ್ಷಾತ್ಕಾರ ಪಡೆದುಕೊಂಡಾದಮೇಲೆ, ಆಕೆಯ ಕಾರ್ಯಗಳನ್ನು ಸಾಧಿಸಲು ಸಹಾಯವಾದೀತು."

ನರೇಂದ್ರ ತಕ್ಷಣ ಉತ್ತರಿಸಿದ: "ಹಾಗಾದರೆ ನನಗವೆಲ್ಲ ಬೇಡ. ಮೊದಲು ನನಗೆ ಭಗವತ್ಸಾಕ್ಷಾತ್ಕಾರ ಬೇಕು. ಆ ಸಿದ್ಧಿಗಳನ್ನೆಲ್ಲ ಪಡೆದುಕೊಳ್ಳುವುದೋ ಬಿಡುವುದೋ ಎಂದು ಆಮೇಲೆ ಆಲೋಚಿಸಬಹುದು. ಈಗಲೇ ಅವು ನನ್ನ ಕೈಸೇರಿದರೆ ನಾನು ಅಹಂಕಾರವಶನಾಗಿ ನನ್ನ ಧ್ಯೇಯವನ್ನು ಮರೆತು ಹಾಳಾಗಿಹೋದೇನು."

ಈ ಉತ್ತರದಿಂದ ಶ್ರೀರಾಮಕೃಷ್ಣರಿಗೆ ಅತ್ಯಂತ ಆನಂದವಾಯಿತಷ್ಟೇ ಅಲ್ಲ, ಸಮಾಧಾನವೂ ಆಯಿತು—ಮುಂದೆ ಲೋಕಶಿಕ್ಷಣಕ್ಕಾಗಿ ನಿಯುಕ್ತವಾಗಲಿರುವ ತಮ್ಮ ನರೇಂದ್ರ ಎಂಥ ಪ್ರಲೋಭನೆಗೂ ಒಳಗಾಗುವವನಲ್ಲ ಎಂಬ ಸಮಾಧಾನ. ಈ ಜಗತ್ತಿನ ಸಕಲ ಪ್ರಲೋಭನೆಗಳನ್ನೂ ಮೀರಿಸುವಂಥವು ಈ ಅಣಿಮಾದಿ ಅಷ್ಟಸಿದ್ಧಿಗಳು. ಅವುಗಳಲ್ಲಿ ಒಂದು ದೊರೆತರೂ ಸಾಕು, ಮನುಷ್ಯ ಅದರ ಸಹಾಯದಿಂದ ಪವಾಡ ತೋರಿಸುತ್ತ, ಅದರಿಂದ ದೊರಕುವ ಹೆಸರು ಕೀರ್ತಿಗಳ ಜಾಲದಲ್ಲಿ ಸಿಲುಕಿಕೊಂಡು, ಧ್ಯೇಯದಿಂದ ತಾನು ಜಾರಿಬೀಳುವುದಲ್ಲದೆ ಜನರನ್ನೂ ದಾರಿತಪ್ಪಿಸುತ್ತಾನೆ. ಹೀಗಿರುವಾಗ ಅಂತಹ ಸಿದ್ಧಿಗಳನ್ನು ತಾವಾಗಿಯೇ ಕೊಡಲು ಮುಂದಾದರೂ ಅವನ್ನು ಒಮ್ಮೆಗೇ ನಿರಾಕರಿಸಿದ ನರೇಂದ್ರ, ಶ್ರೀರಾಮಕೃಷ್ಣರೊಡ್ಡಿದ ಪರೀಕ್ಷೆಯಲ್ಲಿ ಮತ್ತೊಮ್ಮೆ ಉನ್ನತ ದರ್ಜೆಯಲ್ಲಿ ಉತ್ತೀರ್ಣನಾದ.

---

* ನೋಡಿ: ಅನುಬಂಧ ೧.

## ವ್ಯಕ್ತಿತ್ವ ವಿಕಸನ



ನರೇಂದ್ರನು ಶ್ರೀರಾಮಕೃಷ್ಣರ ಗರಡಿಯುಲ್ಲಿ ಕಠಿಣ ತರಬೇತಿ ಪಡೆಯುತ್ತ ಹೊಸ ಹೊಸ ಪಾಠಗಳನ್ನು ಕಲಿಯುತ್ತ ಶಕ್ತಿಶಾಲಿಯಾಗಿ ಮುನ್ನಡೆಯುತ್ತಿರುವುದನ್ನು ಈ ವರೆಗೆ ನೋಡಿದೆವು. ಆದರೆ ಅದು ಅವನ ವ್ಯಕ್ತಿತ್ವನಿರ್ಮಾಣದ ಕಾರ್ಯಪ್ರಣಾಳಿಗಳಲ್ಲಿ ಒಂದು ಮಾತ್ರ. ಇನ್ನೂ ಅನೇಕ ಅಂಶಗಳು—ಹಲವಾರು ಗ್ರಂಥಗಳು, ತತ್ತ್ವಗಳು, ವಾದವಿವಾದಗಳು, ವ್ಯಕ್ತಿಗಳು, ದೃಶ್ಯಗಳು, ಪರಿಸರಗಳು—ಅವನ ಮೇಲೆ ಪ್ರಭಾವ ಬೀರುತ್ತ ಆತನನ್ನು ರೂಪಿಸುತ್ತಿದ್ದುವು. ಅವನ ಇಲ್ಲಿಯವರೆಗಿನ ಜೀವನವನ್ನು ಸಿಂಹಾವಲೋಕನ ಮಾಡಿದಾಗ ಅಂತಹ ಮೂರು ಮುಖ್ಯಾಂಶಗಳನ್ನು ಗುರುತಿಸ ಬಹುದು. ಮೊದಲ ಅಂಶವೆಂದರೆ ಅವನ ಆಧ್ಯಾತ್ಮಿಕ ಮನೋವೃತ್ತಿ; ಅರ್ಥಾತ್ ತನ್ನ ನಿಜವ್ಯಕ್ತಿತ್ವವೊಂದು ಬೇರೆಯೇ ಇದೆ ಎಂಬುದರ ಬಗ್ಗೆ ಅವನಿಗಿದ್ದ ಅರಿವು. ಎರಡನೆ ಯದೆಂದರೆ ಅವನ ತಂದೆ-ತಾಯಿ ಹಾಗೂ ಮನೆತನದ ಪ್ರಭಾವ ಮತ್ತು ಅವನ ಆಳವಾದ ಅಧ್ಯಯನದ ಪರಿಣಾಮ. ಮೂರನೆಯದಾಗಿ, ಅವನನ್ನು ಅಶಾಂತಿಯು ತುಮುಲದಿಂದ ಶಾಂತಿಧಾಮದೆಡೆಗೆ, ಸಂಶಯದ ಸುಳಿಯಿಂದ ಶ್ರದ್ಧೆಯ ಶಿಖರದೆಡೆಗೆ ಕರೆದೊಯ್ಯುತ್ತಿರುವ ಗುರು ಶ್ರೀರಾಮಕೃಷ್ಣರ ಮಾರ್ಗದರ್ಶನ.

ನರೇಂದ್ರನ ಮೇಲೆ ಅವನ ಮನೆತನ, ಅದರಲ್ಲೂ ಮುಖ್ಯವಾಗಿ ಆತನ ತಾಯ್ತಂದೆಯರು ಬೀರಿದ ಪ್ರಭಾವ ಎಷ್ಟು ಆಳವಾದದ್ದು ಎಂಬುದನ್ನು ಹಿಂದೆಯೇ ಕಂಡಿದ್ದೇವೆ. ಉದಾತ್ತವಾಗಿ ಆಲೋಚಿಸುವ, ಉನ್ನತವಾಗಿ ಭಾವಿಸುವ ಹಾಗೂ ಸಭ್ಯತೆ ಯಿಂದ ನಡೆದುಕೊಳ್ಳುವ ಪಾಠಗಳನ್ನು ಅವನು ತಾಯಿಯಿಂದ ಕಲಿತರೆ, ತಂದೆಯಿಂದ ಔದಾರ್ಯ-ಪೌರುಷಗಳನ್ನೂ ರಾಷ್ಟ್ರದ ಸತ್ಸಂಪ್ರದಾಯಗಳ ಬಗೆಗೆ ಗೌರವಬುದ್ಧಿ ಯನ್ನೂ ಮೈಗೂಡಿಸಿಕೊಂಡ. ತಂದೆ ವಿಶ್ವನಾಥನ ದೆಸೆಯಿಂದಾಗಿಯೇ ಅವನು ಕ್ರೈಸ್ತ ಹಾಗೂ ಇಸ್ಲಾಂ ಸಂಸ್ಕೃತಿಗಳತ್ತ ಗಮನ ಹರಿಸಿ, ಕ್ರಮೇಣ ತನ್ನ ಜಾಗತಿಕ ಜ್ಞಾನವನ್ನು ವೃದ್ಧಿಗೊಳಿಸಿಕೊಳ್ಳುವಂತಾಯಿತು. ಅವನಿಗೆ ಈ ಬಗೆಯ ಜ್ಞಾನಸಂಪಾದನೆ ಅತ್ಯಾ ವಶ್ಯಕವಾಗಿತ್ತು. ಏಕೆಂದರೆ ಮುಂದೆ ಅವನು ವೀರಸಂನ್ಯಾಸಿ ವಿವೇಕಾನಂದರಾಗಬೇಕಾ ದವನು. ಆದ್ದರಿಂದ ಪರರಾಷ್ಟ್ರಗಳ ಸಂಸ್ಕೃತಿಗಳನ್ನು, ಧರ್ಮಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಅರಿತುಕೊಳ್ಳಬೇಕಾದ ಆವಶ್ಯಕತೆಯಿತ್ತು. ಆದ್ದರಿಂದಲೇ ಅವನು ಪ್ರಾಚ್ಯ-ಪಾಶ್ಚಾತ್ಯ ತತ್ತ್ವಶಾಸ್ತ್ರ, ಇತಿಹಾಸ, ಕಲೆ, ವಿಜ್ಞಾನ ಮತ್ತು ವಿಶೇಷವಾಗಿ ಧರ್ಮ—ಇವುಗಳ ಸಮಗ್ರ ಪರಿಚಯ ಮಾಡಿಕೊಳ್ಳಲು ಅಷ್ಟೊಂದು ಕಾತರನಾಗಿದ್ದುದನ್ನು ನೋಡುತ್ತೇವೆ. ಅದರಲ್ಲೂ ಮುಖ್ಯವಾಗಿ, ಪಾಶ್ಚಾತ್ಯ ತತ್ತ್ವಶಾಸ್ತ್ರಗಳ ಮರ್ಮ-ಮೌಲ್ಯಗಳನ್ನೂ ಸಾರ್ಥಕತೆಯನ್ನೂ ಅರಿತುಕೊಂಡು ಸ್ವಾಧೀನಪಡಿಸಿಕೊಳ್ಳಲು ಅವನು ದೃಢನಿರ್ಧಾರದ ಪ್ರಯತ್ನದಲ್ಲಿ ನಿರತನಾದ.

ಈ ತತ್ತ್ವಶಾಸ್ತ್ರ-ಸಿದ್ಧಾಂತಗಳನ್ನು ಅಧ್ಯಯಿಸಿದಂತೆ ಇವುಗಳಲ್ಲಿ ಹೆಚ್ಚಿನವೆಲ್ಲ ಕೇವಲ ಬುದ್ಧಿಚಮತ್ಕಾರಕ್ಕೆ ಸಂಬಂಧಿಸಿದ ಅಂಶಗಳು ಎನ್ನುವುದು ನರೇಂದ್ರನ ಅರಿವಿಗೆ ಬಂದಿತು. ಇವುಗಳಲ್ಲಿ ಮನುಷ್ಯನ ಭಾವನಾತ್ಮಕತೆಗೆ ಒಂದು ಸ್ಥಾನವಿಲ್ಲದಿರುವುದನ್ನು

ಕಂಡ. ಇವುಗಳೆಲ್ಲ ವಿಚಾರಸ್ವಾತಂತ್ರ್ಯಕ್ಕೆ ಅವಕಾಶ ಕೊಡದಿರುವ 'ಕಣ್ಣುಮುಚ್ಚಿಕೊಂಡು ನಂಬು' ಎನ್ನುವ ಜಾತಿಯ ಸಿದ್ಧಾಂತಗಳು ಎಂದೆನಿಸಿತು ಅವನಿಗೆ. ಈ ಸಿದ್ಧಾಂತಗಳಲ್ಲಿ ಎಷ್ಟೇ ಬುದ್ಧಿವಂತಿಕೆಯಿಂದ, ಚಾಕಚಕ್ಯತೆಯಿಂದ ಸತ್ಯದ ರೂಪುರೇಖೆಯನ್ನು ವರ್ಣಿಸಿರಬಹುದು. ಆದರೆ ನರೇಂದ್ರನಿಗೆ ಬೇಕಾದದ್ದು ಸತ್ಯದ ಮೇಲ್ನೋಟದ ಬಣ್ಣನೆಯಲ್ಲ; ಅವನಿಗೆ ಬೇಕಾಗಿರುವುದು ಸಾಕ್ಷಾತ್ ಸತ್ಯ—ಅದನ್ನು 'ದೇವರು' ಎಂದರೂ ಸರಿ, ಇನ್ನಾವ ಹೆಸರಿನಿಂದ ಕರೆದರೂ ಸರಿ. ಯಾವುದು ಮನುಷ್ಯನಲ್ಲಿ ಆಧ್ಯಾತ್ಮಿಕ ಪ್ರವೃತ್ತಿಯನ್ನುಂಟುಮಾಡುತ್ತದೋ, ಯಾವುದು ಮನುಷ್ಯನ ರಚನಾತ್ಮಕ ಶಕ್ತಿಯ ಮೂಲವೋ, ಯಾವುದು ಮನುಷ್ಯನ ಬುದ್ಧಿಶಕ್ತಿ-ಇಚ್ಛಾಶಕ್ತಿಗಳಿಗೆ ಅತ್ಯುನ್ನತವಾದ ಮತ್ತು ಅತ್ಯಂತ ಉದಾತ್ತವಾದ ಸ್ಫುರಣೆಯನ್ನು ಕೊಡುತ್ತದೋ ಅದು ಮಾತ್ರವೇ ನಿಜವಾದ ತತ್ತ್ವಶಾಸ್ತ್ರ; ಈ ಗುಣಲಕ್ಷಣಗಳಿಲ್ಲದಿದ್ದಲ್ಲಿ ಅದೆಲ್ಲ ಕೆಲಸಕ್ಕೆ ಬಾರದ ಕಂತೆ ಎಂಬ ತೀರ್ಮಾನಕ್ಕೆ ಬಂದ ನರೇಂದ್ರ.

ತನ್ನ ಕಾಲೇಜು ಅಧ್ಯಯನದ ಐದು ವರ್ಷಗಳ ಅವಧಿಯಲ್ಲಿ ಅವನು, ಆಗಿನ ಜಗತ್ತಿನ ವಿಚಾರಧಾರೆಯ ಮೇಲೆ ಗಾಢ ಪ್ರಭಾವ ಬೀರಿದ್ದ ಅನೇಕ ಮಹಾ ವಿದ್ವಾಂಸರ ಸಿದ್ಧಾಂತಗಳನ್ನೆಲ್ಲ ಓದಿ ಅರಗಿಸಿಕೊಂಡ. ಜಾನ್ ಸ್ಟೂಅರ್ಟ್ ಮಿಲ್, ಡೆಕಾರ್ಟೆ, ಹ್ಯೂಮ್, ಬೆನ್‌ತ್ಯಾಮ್, ಸ್ಪಿನೋಸಾ, ಡಾರ್ವಿನ್, ಸ್ಪೆನ್ಸರ್, ಕ್ಯಾಂಟ್, ಫಿಕ್ಟೆ, ಶೋಫೆನೋವರ್ ಮೊದಲಾದವರ ಅಭಿಪ್ರಾಯಗಳನ್ನು ಪರಿಪೂರ್ಣವಾಗಿ ಅರಿತುಕೊಂಡ. ಇವುಗಳಲ್ಲಿ ಕೆಲವು ನಾಸ್ತಿಕ್ಯವನ್ನು ಎತ್ತಿಹಿಡಿಯುವಂಥವು. 'ದೇವರೊಬ್ಬನಿರಬಹುದು, ಆದರೆ ಆತನ ಬಗ್ಗೆ ಅರಿತುಕೊಳ್ಳಲು ಸಾಧ್ಯವಿಲ್ಲ' ಎಂದು ಸಾರುವವು ಕೆಲವು. ಹಾಗೆಯೇ, ವಿಶ್ವದ ಉಗಮದ ಮತ್ತು ಬೆಳವಣಿಗೆಯ ಬಗ್ಗೆ, ಮಾನವನ ನಿಜ ಸ್ವಭಾವದ ಬಗ್ಗೆ, ಗೊತ್ತುಗುರಿಗಳ ಬಗ್ಗೆ ಬಗೆಬಗೆಯಾಗಿ ತರ್ಕಿಸುವವು ಕೆಲವು. ಇವುಗಳನ್ನೆಲ್ಲ ಮನನ ಮಾಡಿದ್ದಲ್ಲದೆ, ಮನುಷ್ಯನ ಮೆದುಳು-ನರಮಂಡಲ-ಶರೀರಗಳ ಕಾರ್ಯವಿಧಾನವನ್ನೂ ಪರಸ್ಪರ ಸಾಮರಸ್ಯದ ಮರ್ಮವನ್ನೂ ಅರ್ಥಮಾಡಿಕೊಳ್ಳಲು ನರೇಂದ್ರ ಆಗಾಗ ಗೆಳೆಯರ ಜೊತೆಯಲ್ಲಿ ಕಲ್ಕತ್ತದ ವೈದ್ಯಕೀಯ ಕಾಲೇಜಿಗೆ ಹೋಗಿ, ಉಪನ್ಯಾಸಗಳನ್ನು ಕೇಳುತ್ತಿದ್ದ.

ಈ ವಿವಿಧ ಸಿದ್ಧಾಂತಗಳ ಪರಿಚಯ ಮಾಡಿಕೊಂಡದ್ದರಿಂದ ಅವನಿಗಾದ ಲಾಭ ಅಪಾರ. ಇವುಗಳಿಂದಾಗಿ ಅವನ ಆಲೋಚನಾಶಕ್ತಿ ಬಲಗೊಂಡಿತು; ವಿವೇಚನಾಶಕ್ತಿ ಇನ್ನಷ್ಟು ಹರಿತಗೊಂಡಿತು. ಯಾವುದೇ ವಿಷಯದಲ್ಲೇ ಆಗಲಿ ನಿರ್ಧಾರ ತೆಗೆದುಕೊಳ್ಳುವ ಅವನ ಸಾಮರ್ಥ್ಯ ದುರ್ಭೇದ್ಯವಾಯಿತು. ಇವುಗಳಲ್ಲಿ ಮೊದಲಿಗೆ ಹರ್ಬರ್ಟ್ ಸ್ಪೆನ್ಸರನ ಅಜ್ಞೇಯತಾವಾದ—ದೇವರನ್ನು ಅರಿತುಕೊಳ್ಳಲು ಸಾಧ್ಯವಿಲ್ಲವೆಂಬ ವಾದ—ನರೇಂದ್ರನ ಕುತೂಹಲವನ್ನು ಬಹಳವಾಗಿ ಕೆರಳಿಸಿತ್ತು. ಸಾಂಪ್ರದಾಯಿಕ ಭಾವನೆಗಳನ್ನು ಬುಡಸಹಿತ ಅಲುಗಾಡಿಸಿಬಿಡುವಂಥದು ಸ್ಪೆನ್ಸರನ ಸಿದ್ಧಾಂತ. ಇಂತಹ ಕ್ರಾಂತಿಕಾರಿ ವಿಚಾರಧಾರೆಗೆ ತನ್ನನ್ನು ಒಡ್ಡಿಕೊಂಡರೂ ನರೇಂದ್ರ ತನ್ನ ಮೂಲ ವ್ಯಕ್ತಿತ್ವವನ್ನು ಹಾಗೆಯೇ ಉಳಿಸಿಕೊಂಡಿದ್ದ. ಇದೊಂದು ಅಸಾಮಾನ್ಯ ವಿಷಯ. ಅವನ ಭಾವನಾತ್ಮಕ ಸ್ವಭಾವ, ಆದರ್ಶಕ್ಕಾಗಿ ಜೀವಿಸುವ ಛಲ—ಇವು ಅವನಲ್ಲಿ ಆಳವಾಗಿ ಬೇರೂರಿದ್ದು ಅವನ ಹಿಂದಿನ ದೃಷ್ಟಿಕೋನವನ್ನು ಸ್ಥಿರವಾಗಿ ನಿಲ್ಲಿಸಿದುವು. ಅವನಲ್ಲಿ ರಕ್ತಗತವಾಗಿದ್ದ ವಿಶಾಲದೃಷ್ಟಿಯೇ ಅವನು ಒಬ್ಬ ನಾಸ್ತಿಕನಾಗದಂತೆ, ಅಥವಾ

'ಅದೃಷ್ಟವಾದಿ'ಯಾಗದಂತೆ ರಕ್ಷಿಸಿತು. ಅಜ್ಞೇಯತಾವಾದದಲ್ಲೇ ವಿರಮಿಸಲು ಅವನ ದೈವಶ್ರದ್ಧೆಯಿಂದೊಡಗೂಡಿದ ಅಸಾಮಾನ್ಯ ಬುದ್ಧಿ ಒಪ್ಪಲಿಲ್ಲ. ಸೃಷ್ಟಿ-ಸ್ಥಿತಿ-ಲಯಗಳ ಹಿಂದೆ, ಬರಿಗಣ್ಣಿಗೆ ಕಾಣದ ಶಕ್ತಿಯೊಂದು ಇದ್ದೇ ಇದೆ ಎಂದು ಅವನ ಅಂತರಂಗ ಮಾರ್ನುಡಿಯುತ್ತಿತ್ತು. ಅಜ್ಞೇಯತಾವಾದಕ್ಕಿಂತಲೂ ವಿಶಾಲದೃಷ್ಟಿಯ ಇತರ ಕೆಲವು ವಾದಗಳು ಹೆಚ್ಚು ಸಮಾಧಾನಕರವಾಗಿ ತೋರಿದುವಾದರೂ ಅವನು ಅಲ್ಲಿಗೇ ನಿಲ್ಲ ಲಿಲ್ಲ. ದೃಢನೆಲೆಯನ್ನು ಕಾಣುವ ಕಾತರದಲ್ಲಿ ಅವಸರದ ನಿರ್ಧಾರಕ್ಕೆ ಬರದೆ ಆ ಸಿದ್ಧಾಂತಗಳನ್ನು ಮತ್ತೆ ಅಷ್ಟೇ ಕಠಿಣ ವಿಶ್ಲೇಷಣೆಗೆ ಒಳಪಡಿಸಿದ. ಕೊನೆಗೆ ಅವುಗಳಲ್ಲೂ ಅಂತಿಮ ಸತ್ಯವನ್ನು ಕಾಣದೆ ಅವನ್ನೂ ತಿರಸ್ಕರಿಸಿದ.

ಈ ಮಧ್ಯೆ ಅವನು ಹಿಂದೂ ಸಾಮಾಜಿಕ ವ್ಯವಸ್ಥೆಯ ಕಡುವಿರೋಧಿಯಾಗಿದ್ದ. ಇಡೀ ರಾಷ್ಟ್ರವೇ ಬ್ರಾಹ್ಮಣವರ್ಗದ ಸೆರೆಯಾಳಾಗಿರುವಂತೆ ಅವನಿಗೆ ತೋರಿತು. ಜಾತಿ-ಮತ-ಧರ್ಮಗಳು ವಿಚಿತ್ರವಾಗಿ ಹೆಣೆದುಕೊಂಡಿರುವುದನ್ನು ಗಮನಿಸಿ ರೋಷ ಗೊಂಡ. ಭಾವಜೀವಿಗಳ ಜೀವನದಲ್ಲಿ ಇದೊಂದು ಸಂದಿಗ್ಧ ಹಂತ. ಈ ಹಂತದಲ್ಲಿ ಅವರಿಗೆ ನೈತಿಕತೆಯ ಮೇಲಿನ ವಿಶ್ವಾಸ ಕುಸಿಯುವ ಸಂಭವವಿರುತ್ತದೆ. ದೇವರು-ಧರ್ಮ-ಸಾಧನೆ ಎಲ್ಲವೂ ಸುಳ್ಳು, ಅರ್ಥವಿಹೀನ ಎಂದು ತೋರಿದಾಗ ವ್ಯಕ್ತಿಯನ್ನು ಸಂಯಮಗೊಳಿಸಲು ಅಲ್ಲೇನಿರುತ್ತದೆ ? ನಿಜಕ್ಕೂ ನರೇಂದ್ರನಿಗೆ ಇದೊಂದು ಸಂಕ್ರ ಮಣ ಕಾಲ. ಆಗಲೂ ಅವನು ದಿಕ್ಕೆಡದೆ, ಮನಸ್ಸಿನ ಸ್ಥಿಮಿತವನ್ನು ಕಾಪಾಡಿಕೊಳ್ಳಲು ಸಮರ್ಥನಾದದ್ದು ಅವನ ಅದ್ಭುತ ಅಂತಸ್ಸತ್ವಕ್ಕೆ, ಸಂಯಮಕ್ಕೆ ಪುರಾವೆ.

ತನ್ನ ನೈಜಸ್ವರೂಪವನ್ನು ಅರಿತುಕೊಳ್ಳಲೇಬೇಕು, ಅಜ್ಞಾನದ ಬಲೆಯಿಂದ ಪಾರಾಗಬೇಕು ಎಂಬ ತೀವ್ರ ಚಡಪಡಿಕೆಯಲ್ಲಿ ನರೇಂದ್ರನ ಮನಸ್ಸು ಇಂದ್ರಿಯಸುಖ ವೆಂಬ ಸುಳಿಯ ಸೆಳೆತವನ್ನು ಮೀರಿ, ಉನ್ನತಮಟ್ಟದ ಬೌದ್ಧಿಕ ಪ್ರಪಂಚವನ್ನು ಹೊಕ್ಕು ಸಂಚರಿಸತೊಡಗಿತು. ದೇವನೊಬ್ಬನಿರುವುದಾದರೆ ಅವನನ್ನು ಸಾಕ್ಷಾತ್ಕರಿಸಿಕೊಳ್ಳುವ ಮಾರ್ಗವನ್ನು ಕಂಡುಕೊಳ್ಳುವುದು ಅವನ ಪಾಲಿಗೆ ಅತ್ಯಂತ ಅವಸರದ ಅಗತ್ಯವಾಗಿ ತೋರುತ್ತಿತ್ತು. ಜೀವನದ ರಹಸ್ಯವು ಬಗೆಹರಿಯುವವರೆಗೂ ಅವನ ಜೀವಕ್ಕೆ ಸಮಾ ಧಾನವಿಲ್ಲ. ನಾಸ್ತಿಕತೆ ಆಗಾಗ ತಲೆಹಾಕಿದರೂ ಅದು ತಾತ್ಕಾಲಿಕ ಮಾತ್ರ. 'ಸಾಕ್ಷಾತ್ಕಾರ ಮಾಡಿಕೊಳ್ಳಲೇಬೇಕು ! ಅದಕ್ಕೊಂದು ಮಾರ್ಗವಿರಲೇಬೇಕು ! ಆದರೆ ಅದನ್ನು ಬಲ್ಲ ವರು ಯಾರು ? ಆ ಪರಮಸತ್ಯವನ್ನು ಬಣ್ಣಿಸುವ, ವಿಶ್ಲೇಷಿಸುವ ತತ್ತ್ವಗಳೆಷ್ಟು, ಸಿದ್ಧಾಂತಗಳೆಷ್ಟು ! ವೇದ ಪುರಾಣ ಬೈಬಲು ಕೊರಾನು ಮೊದಲಾದ ಶಾಸ್ತ್ರಗ್ರಂಥ ಗಳೆಷ್ಟು ! ಆದರೆ ಇಷ್ಟೆಲ್ಲ ಇದ್ದರೂ, ತನ್ನ ಸಾಕ್ಷಾತ್ಕಾರಕ್ಕೆ ಅವು ನೆರವಾಗದಿದ್ದರೆ, ಸತ್ಯ ಧಾಮದ ಬಾಗಿಲನ್ನು ತೆರೆಸುವಲ್ಲಿ ಅಸಮರ್ಥವಾದರೆ, ಅವಕ್ಕೆ ಕಾಸಿನ ಬೆಲೆಯೂ ಇಲ್ಲ! ಅವು ಎಷ್ಟು ಸ್ವಾರಸ್ಯಕರವಾಗಿದ್ದರೂ, ರೋಚಕವಾಗಿದ್ದರೂ, ಅವುಗಳ ಪ್ರಯೋಜನ ಸೊನ್ನೆಯೇ ಸರಿ !'—ಇದು ಅವನ ವಿಚಾರಲಹರಿ.

ವಿಜ್ಞಾನ ಎಂದು ನಾವು ಯಾವುದನ್ನು ಕರೆಯುತ್ತೇವೆಯೋ ಅದು ನಮ್ಮ ಅನು ಭವಕ್ಕೆ ಬರುವ ವಿಷಯಗಳನ್ನು ಮಾತ್ರ ಒಪ್ಪಿಕೊಳ್ಳುತ್ತದೆ. ಇಂದ್ರಿಯಗಳ ಮೂಲಕ ನಮ್ಮ ತಿಳಿವಿಗೆ ಬರುವ ಜ್ಞಾನವೆಂಬುದು ದೇಶಕಾಲಗಳೇ ಮೊದಲಾದ ಉಪಾಧಿಗಳಿಗೆ ಒಳಪಟ್ಟದ್ದು. ಆದ್ದರಿಂದ ಇಂದ್ರಿಯಗೋಚರವಾದ ಈ ಬಾಹ್ಯಪ್ರಪಂಚ 'ನಿಜಕ್ಕೂ' ಹೇಗಿದೆ ಎಂದು ನಾವು ಅರಿತುಕೊಳ್ಳಲಾರೆವು. ಹಾಗೆಯೇ, ಮಾನವನ ನಿಜಸ್ವಭಾವ

ವನ್ನು ಮಾನವನು ಕಂಡುಕೊಳ್ಳಲಾರ—ಈ ವಾದವನ್ನು ಪಾಶ್ಚಾತ್ಯ ವಿಜ್ಞಾನವೂ ಒಪ್ಪಿಕೊಳ್ಳುತ್ತದೆ. ನರೇಂದ್ರನಿಗೆ ಇದು ಸಮ್ಮತ. ಆದರೆ ಸನಾತನ ಸತ್ಯವೆಂಬುದು ಬುದ್ಧಿಗೂ ಇಂದ್ರಿಯಗಳಿಗೂ ಅತೀತವಾದ ವಸ್ತು. ಹೀಗಿರುವಾಗ, ಈ ಬುದ್ಧಿ ಮತ್ತು ಇಂದ್ರಿಯ ಗೋಚರವಾದ ವಿಷಯಗಳನ್ನೇ ಸಂಪೂರ್ಣವಾಗಿ ತಿಳಿಯಲಾರದ ವಿಜ್ಞಾನವೆಂಬುದು, ಅತೀಂದ್ರಿಯ ವಸ್ತುವಾದ ದೇವರನ್ನು ಮುಟ್ಟಲು ಹೇಗೆ ಸಾಧ್ಯ ? ಆದ್ದರಿಂದ ನಮ್ಮ 'ನಿಜವ್ಯಕ್ತಿತ್ವ'ದ ಬಗ್ಗೆ ನಮಗಿರುವ ಕಲ್ಪನೆಯಾದರೂ ಇಂದ್ರಿಯಾನುಭವಗಳಿಗೆ ಒಳಪಟ್ಟಿರುವಂಥದೇ; ಆದ್ದರಿಂದ ಸಾಪೇಕ್ಷವಾದದ್ದೇ. ಇದಕ್ಕೆ ಅತೀತವಾದ 'ಆತ್ಮ'ವೊಂದಿದೆಯೆಂಬುದನ್ನು ಸಾಬೀತುಪಡಿಸುವಲ್ಲಿ ವಿಜ್ಞಾನ ಸೋತಿದೆ—ಆದ್ದರಿಂದ 'ಅಂತಿಮ ಸತ್ಯ'ದ ಬಗ್ಗೆ ಯಾವುದೇ ನಿರ್ಧಾರಕ್ಕೆ ಬರಲು ಪಾಶ್ಚಾತ್ಯ ಪಂಡಿತರು ಅಸಮರ್ಥರಾಗಿದ್ದಾರೆ ಎಂಬುದನ್ನು ನರೇಂದ್ರ ಕಂಡುಕೊಂಡ.

ಆದರೆ ಪಾಶ್ಚಾತ್ಯರ ಭೌತಿಕ ಜ್ಞಾನದ ಮೇಲೂ ಅವರ ವಿಶ್ಲೇಷಣಾ ವಿಧಾನಗಳ ಮೇಲೂ ಅವನಿಗೆ ವಿಶೇಷ ಗೌರವವಿತ್ತು. ಈ ಬಗೆಯ ವಿಶ್ಲೇಷಣಾ ಮಾರ್ಗಗಳಿಂದ ಅವನು ಶ್ರೀರಾಮಕೃಷ್ಣರ ಅತೀಂದ್ರಿಯ ಅನುಭವಗಳನ್ನು ವಿಮರ್ಶಿಸಿ ನೋಡಿದ. ಯಾವಯಾವುದು ಈ ಪರೀಕ್ಷೆಯಲ್ಲಿ ಉತ್ತೀರ್ಣವಾಯಿತೋ ಅಂಥದನ್ನು ಮಾತ್ರ ಒಪ್ಪಿಕೊಂಡ. ಅವನು ಸತ್ಯಸಾಕ್ಷಾತ್ಕಾರಕ್ಕಾಗಿ ಅಷ್ಟೊಂದು ಕಾತರನಾಗಿದ್ದರೂ ಯಾವುದೋ ಭಯದಿಂದಲೋ ಇಲ್ಲವೆ ಹೊರಗಡೆಯ ಒತ್ತಡದಿಂದಲೋ ಯಾವುದನ್ನೂ ಒಪ್ಪಿಕೊಳ್ಳುವವನಲ್ಲ; ಇವು ಯಾವುವೂ ತನ್ನ ವೈಚಾರಿಕ ದೃಷ್ಟಿಗೆ ಹೊಂದಿಕೆಯಾಗದಿದ್ದರೆ ಪ್ರಾಮಾಣಿಕನಾದ ನಾಸ್ತಿಕನಾಗಿಯೇ ಉಳಿಯಲೂ ಆತ ಸಿದ್ಧ. ಸತ್ಯಸಾಕ್ಷಾತ್ಕಾರಕ್ಕಾಗಿ ಪ್ರಪಂಚದ ಸಕಲ ಭೋಗಗಳನ್ನೂ, ಅಷ್ಟೇಕೆ, ತನ್ನ ಜೀವನವನ್ನೂ ಬಲಿದಾನ ಮಾಡಲು ಅವನು ಸಿದ್ಧನಾಗಿದ್ದ. ಪಾಶ್ಚಾತ್ಯ-ಪೌರ್ವಾತ್ಯ ತತ್ತ್ವಶಾಸ್ತ್ರಗಳು ಹಾಗೂ ವಿಜ್ಞಾನ-ಕಲೆಗಳನ್ನೆಲ್ಲ ಅವನು ಅಷ್ಟೊಂದು ಅಧ್ಯಯನ ಮಾಡಿದ್ದು ಕೇವಲ ಲೋಕಮಾನ್ಯತೆಗಾಗಿ ಅಲ್ಲ, ಭಗವತ್ಸಾಕ್ಷಾತ್ಕಾರಕ್ಕಾಗಿ. ತಾನು ಅರಸುತ್ತಿರುವ ಸತ್ಯವನ್ನು ಕಂಡುಕೊಳ್ಳಲು ವಿಚಾರಮಾರ್ಗದ ತುತ್ತತುದಿಯವರೆಗೂ ಹೋಗಿ, ಇನ್ನು ಮುಂದು ವರಿಯಲು ಸಾಧ್ಯವಿಲ್ಲದಾದಾಗ, ಪುನಃ ತನ್ನಲ್ಲಿ ಸಹಜವಾಗಿದ್ದ ಶ್ರದ್ಧೆಯ ಪಥಕ್ಕೆ ಮರಳಿ ಬರಬೇಕಾಯಿತು. ಇದನ್ನು ನಾವು ಮುಂದೆ ನೋಡಲಿದ್ದೇವೆ.

ನರೇಂದ್ರನ ಅಧ್ಯಯನವು ಕೇವಲ ತತ್ತ್ವಶಾಸ್ತ್ರ, ಭೌತವಿಜ್ಞಾನಗಳಿಗೆ ಸೀಮಿತವಾಗಿರಲಿಲ್ಲ. ಇತಿಹಾಸವೂ ಅವನ ನೆಚ್ಚಿನ ವಿಷಯಗಳಲ್ಲೊಂದು. ಬೇರೆಬೇರೆ ಸನ್ನಿವೇಶಗಳಲ್ಲಿ, ಒತ್ತಡಗಳಲ್ಲಿ ಮನುಷ್ಯನ ಶೀಲ-ನಡವಳಿಕೆಗಳು ಹೇಗೆ ಉನ್ನತಿಗೇರಿದುವು, ಹೇಗೆ ಪತನ ಹೊಂದಿದುವು—ಇದನ್ನು ಅರಿತುಕೊಳ್ಳುವಲ್ಲಿ ಅವನಿಗೆ ವಿಶೇಷ ಉತ್ಸಾಹ, ಕುತೂಹಲ. ಅವನ ಪಾಲಿಗೆ ಚರಿತ್ರೆಯೆಂದರೆ ರಾಷ್ಟ್ರಗಳ ಆಶೋತ್ತರಗಳ ಮತ್ತು ಪ್ರಗತಿ-ಅಪಗತಿಗಳ ಶತಶತಮಾನಗಳ ದಾಖಲೆ.

ಕಾವ್ಯ-ಕವನಗಳಲ್ಲಿ ನರೇಂದ್ರನಿಗಿದ್ದ ಆಸಕ್ತಿ ಅಪಾರ. ಏಕೆಂದರೆ ಕಾವ್ಯವು ಭಾವುಕರ ಭಾಷೆ. ಅವನ ಕಾವ್ಯಾಕಾಶದ ಧ್ರುವತಾರೆಯೆಂದರೆ ವರ್ಡ್ಸ್‌ವರ್ತ್ ಮಹಾಕವಿ. ಇತಿಹಾಸ, ತತ್ತ್ವಶಾಸ್ತ್ರ, ಕಾವ್ಯ, ವಿಜ್ಞಾನ ಇವೆಲ್ಲ ಒಂದೇ ಪರಮಸತ್ಯದ ಬೇರೆ ಬೇರೆ ಮುಖಗಳೆಂಬಂತೆ ವರ್ಡ್ಸ್‌ವರ್ತ್ ಕವಿಯಲ್ಲಿ ದಾರ್ಶನಿಕನ ಶಕ್ತಿಯಿತ್ತು. ಆದ್ದರಿಂದಲೇ ನರೇಂದ್ರನಿಗೆ ಅವನ ಕಾವ್ಯಗಳಲ್ಲಿ ವಿಶೇಷ ಒಲವು.

ನರೇಂದ್ರ ಯಾವುದೇ ಕಾರ್ಯದಲ್ಲಿ ತೊಡಗಿರಲಿ, ಅದನ್ನವನು ಅದರ ಪ್ರಾಶಸ್ತ್ಯ, ಯುಕ್ತತೆಗಳನ್ನು ಮನಗಂಡು ಮಾಡುತ್ತಿದ್ದನೇ ಹೊರತು ಎಂದಿಗೂ ಮತ್ತೊಬ್ಬರ ಬಲಾತ್ಕಾರದಿಂದಲ್ಲ. ಅವನದು ಸ್ವತಂತ್ರ ಮನೋಭಾವ. ಆತ್ಮವಿಕಾಸದ ಹಾದಿಯಲ್ಲಿ ಸ್ವತಂತ್ರ ಮನೋಭಾವವು ಆಧಾರಭೂತವಾದ ಗುಣ ಎಂಬುದು ಅವನ ಅಭಿಮತ. ಆದರೆ ಈ ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ವಿವೇಕಪ್ರಜ್ಞೆಯಿರಬೇಕು; ಎಂದರೆ, ಸ್ವಾತಂತ್ರ್ಯವನ್ನು ವಿವೇಕಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು ಎಂಬುದನ್ನು ಆತ ಬಲ್ಲ. ದಾಸ್ಯದಲ್ಲಿರುವವನು ಯಜಮಾನನ ಅಂಕೆಗೊಳಗಾಗಿ ನೀತಿನಿಯಮಗಳನ್ನು ಪಾಲಿಸಿದರೆ, ಯಜಮಾನನಾದವನು ಅವುಗಳನ್ನು ಸ್ವತಂತ್ರನಾಗಿಯೇ ಪಾಲಿಸುತ್ತಾನೆ. ವಿವೇಕಿಯಾದವನು ಯಜಮಾನನಿಗೆ ಸಮ, ಅವಿವೇಕಿಯಾದವನು ದಾಸನಿಗೆ ಸಮ ಎಂಬುದು ನರೇಂದ್ರನ ಅಭಿಮತ. ತಾನು ಸದಾಚಾರಸಂಪನ್ನನಾಗಿರಬೇಕು, ನೀತಿವಂತನಾಗಿರಬೇಕು ಎಂಬುದರ ಕಡೆಗೆ ಅವನು ವಿಶೇಷ ಗಮನ ಹರಿಸುತ್ತಿದ್ದ. ಆಗಾಗ ಅವನಲ್ಲಿ ನಾಸ್ತಿಕತೆಯ ಚಿಹ್ನೆಗಳು ಕಂಡುಬಂದರೂ, ವಿಲಾಸಪೂರ್ಣವಾದ ಪ್ರಾಪಂಚಿಕ ಜೀವನವನ್ನು ಮಾತ್ರ ಅವನು ತಿರಸ್ಕರಿಸಿಬಿಟ್ಟಿದ್ದ.

ನಾವು ಹಿಂದೆಯೇ ಕಂಡಂತೆ ಅವನಲ್ಲಿ ಸಂನ್ಯಾಸದ ಮನೋವೃತ್ತಿ ಸಹಜವಾಗಿಯೇ ಬೆಳೆದುಬಂದಿತ್ತು. ಆದರೂ ಅವನು ಇಹಜೀವನವನ್ನೇ ಕಡೆಗಣಿಸುವವನಲ್ಲ. ಬದುಕಿದರೆ ಚೆನ್ನಾಗಿಯೇ ಬದುಕಬೇಕೆನ್ನುವವನು ಅವನು. ಅವನಲ್ಲಿ ಹಸುಳೆಯ ಹುಮ್ಮಸ್ಸಿನೊಂದಿಗೆ ತೀವ್ರ ಆಧ್ಯಾತ್ಮಿಕ ಮನೋವೃತ್ತಿಯೂ ಸೇರಿಕೊಂಡಿತ್ತು. ಇದನ್ನು ಆಗಾಗ ಅವನ ಮಾತುಗಳಲ್ಲಿ ಕಾಣಬಹುದಾಗಿತ್ತು. ಅವನೊಮ್ಮೆ ಬಿ.ಎಲ್. ಪರೀಕ್ಷೆಗಾಗಿ ಸಿದ್ಧತೆ ನಡೆಸುತ್ತಿದ್ದ ಸಮಯದಲ್ಲಿ ಇದ್ದಕ್ಕಿದ್ದಂತೆ ತನ್ನ ಸ್ನೇಹಿತನ ಮುಂದೆ ಉದ್ಗರಿಸುತ್ತಾನೆ: "ನಾನು ಈ ಪರೀಕ್ಷೆಗೆ ಕುಳಿತುಕೊಳ್ಳುವ ಆಲೋಚನೆಯನ್ನೇ ಬಿಟ್ಟು ಬಿಡಬೇಕೆಂದಿದ್ದೇನೆ. ಈ ಪರೀಕ್ಷೆಗಳಿಗೆಲ್ಲ ಏನರ್ಥ! ನಾನು ಸ್ವತಂತ್ರನಾಗಬೇಕು!" ಮದುವೆಯೆಂಬುದು ಆಧ್ಯಾತ್ಮಿಕ ಜೀವನಕ್ಕೆ ಒಂದು ಅಡ್ಡಿ ಎಂಬುದನ್ನು ಅವನು ತಾರುಣ್ಯದಲ್ಲೇ ಗುರುತಿಸಿದ್ದ. ಇನ್ನೊಮ್ಮೆ ಅದೇ ಸ್ನೇಹಿತನಿಗೆ ಹೇಳುತ್ತಾನೆ: "ನೀನು ಮದುವೆಯಾದವನು, ಗೃಹಸ್ಥಜೀವನಕ್ಕೆ ಬದ್ಧನಾದವನು. ಆದರೆ ನಾನು ಸ್ವತಂತ್ರ. ನನ್ನದು ಸಂನ್ಯಾಸ ಜೀವನ. ಇದು ಖಂಡಿತ!" ಅವನ ನಾಸ್ತಿಕ ಸಿದ್ಧಾಂತವೇ ಅವನಿಗೆ ಜೀವನದ ಪೊಳ್ಳುತನವನ್ನು ತೋರಿಸಿಕೊಟ್ಟಿತ್ತು. ಅದನ್ನು ಧಿಕ್ಕರಿಸಿ ನಿಲ್ಲುವ ಏಕಮಾತ್ರ ಮಾರ್ಗವೆಂದರೆ ಸಂನ್ಯಾಸ ಎಂಬ ನಿರ್ಧಾರ ಅವನಲ್ಲಿ ಬೆಳೆಯುತ್ತಿತ್ತು.

ಈ ಹಂತದಲ್ಲಿ ನರೇಂದ್ರನಿಗೆ ಅವನ ಬುದ್ಧಿವಂತಿಕೆಯೇ ಸತ್ಯಸಾಕ್ಷಾತ್ಕಾರಕ್ಕೆ ದೊಡ್ಡ ತಡೆಯಾಗಿ ಪರಿಣಮಿಸಿತ್ತು. ಏಕೆಂದರೆ ಉಪನಿಷತ್ತು ಘೋಷಿಸುತ್ತದೆ—'*ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ ನ ಬಹುನಾ ಶ್ರುತೇನ*' ಎಂದರೆ, ಆತ್ಮಸಾಕ್ಷಾತ್ಕಾರವು ಪ್ರವಚನದಿಂದ ಪ್ರಾಪ್ತವಾಗುವಂಥದಲ್ಲ; ಬುದ್ಧಿಯಿಂದಲೂ ಶಾಸ್ತ್ರ ಪಾಂಡಿತ್ಯದಿಂದಲೂ ಸಿದ್ಧಿಸುವಂಥದಲ್ಲ. ಹಾಗಾದರೆ ಈ ಬುದ್ಧಿಯ ಸದ್ದನ್ನು ಅಡಗಿಸುವುದು ಹೇಗೆ? ಶ್ರದ್ಧೆಯ ಹೆಸರಿನಲ್ಲಿ ಬುದ್ಧಿಯ ಬೆಳವಣಿಗೆಯನ್ನು ಹೊಸಕಿಬಿಡಬೇಕೆ? ಕೂಡದು! ಬುದ್ಧಿಯ ಬೆಳವಣಿಗೆಯನ್ನು ಕುಂಠಿತಗೊಳಿಸುವುದಲ್ಲ ಉಪಾಯ, ವೃದ್ಧಿಗೊಳಿಸುವುದೇ ಉಪಾಯ! ಬುದ್ಧಿಯು ಎಷ್ಟು ವಿಶಾಲವಾಗಿ, ಆಳವಾಗಿ, ಉನ್ನತವಾಗಿ, ಸಮರ್ಥವಾಗಿ ಬೆಳೆಯಲು ಸಾಧ್ಯವೋ, ಅಷ್ಟೂ ಬೆಳೆಯಲು ಅವಕಾಶ

ಕೊಟ್ಟು, ಅದು ತನ್ನ ಪರಿಮಿತಿಯನ್ನು ಅರಿತುಕೊಳ್ಳುವಂತೆ ಮಾಡುವುದೇ ಉಪಾಯ. ಅನಂತನಾದ ಭಗವಂತನನ್ನು ಸಾಂತವಾದ ತಾನು ಅರಿತುಕೊಳ್ಳಲಾಗದು ಎಂಬುದರ ಅರಿವು ಮನಸ್ಸಿಗಾಗಬೇಕು. ಆಗ ಹೃದಯದ ಭಾವದೊಂದಿಗೆ ಅದು ಮಿಳಿತವಾಗುತ್ತದೆ. ಭಾವದಿಂದ ಭಕ್ತಿ ಉದಿಸುತ್ತದೆ; ಭಕ್ತಿ ಉದಿಸಿದಾಗ ಭಗವಂತನ ಕೃಪೆಯಾಗುತ್ತದೆ. ಕೃಪೆಯಿಂದಲೇ ಸಾಕ್ಷಾತ್ಕಾರ. ಶ್ರೀರಾಮಕೃಷ್ಣರ ದಿವ್ಯ ಸಂಪರ್ಕದಿಂದ ನರೇಂದ್ರನ ಬುದ್ಧಿ-ವೈಚಾರಿಕತೆಗಳೆಲ್ಲ ಪರಿಪಾಕ ಹೊಂದಲಿವೆ. ಅವನು ಇನ್ನೂ ಎಷ್ಟೋ ಕಷ್ಟಗಳನ್ನು ಎದುರಿಸಬೇಕಾಗಿದೆ. ಅವನ ಎಷ್ಟೋ ಸಂಶಯಗಳೆಲ್ಲ ಇನ್ನೂ ಪರಿಹಾರವಾಗಬೇಕಾಗಿವೆ. ಹೀಗೆ ನಾನಾ ಬಗೆಯ ಬವಣೆಗಳ ಮೂಸೆಯಲ್ಲಿ ಪರಿಪಾಕ ಹೊಂದಿ, ಕಟ್ಟಕಡೆಗೆ ಗುರುವಿನ ಪಾದಗಳಿಗೆ ಶರಣಾಗಿ, ಗುರು ಹೇಳಿದ್ದನ್ನೆಲ್ಲ ಮರುಮಾತಿಲ್ಲದೆ ಒಪ್ಪಿಕೊಳ್ಳುವ ಹದಕ್ಕೆ ಬರಬೇಕಾಗಿದೆ! ಶ್ರೀರಾಮಕೃಷ್ಣರಿಂದ ಪ್ರತಿಯೊಂದು ವಿಷಯವನ್ನೂ ಸಂದೇಹಕ್ಕೆ ಆಸ್ಪದವಿಲ್ಲದ ರೀತಿಯಲ್ಲಿ ಅರಿತು ಒಪ್ಪಿಕೊಳ್ಳುವಂತಾಗಲು ಅವನು ಹೆಜ್ಜೆಹೆಜ್ಜೆಗೂ ಹೋರಾಡಿದ. ಆದರೆ ಹಾಗೆ ಹೋರಾಡಿ ತಿಳಿದುಕೊಂಡಮೇಲೆ ಮಾತ್ರ ಆ ವಿಷಯದಲ್ಲಿ ಇನ್ನು ಸಂಶಯವುಳಿಯಲಿಲ್ಲ; ಆ ವಿಷಯದ ಪರಿಪೂರ್ಣ ಜ್ಞಾನ ಅವನಿಗೆ ಉಂಟಾಯಿತು ಎಂದೇ ಅರ್ಥ. ಒಂದು ಗಮನಾರ್ಹ ಅಂಶವೆಂದರೆ, ಕೊನೆಗೊಂದು ದಿನ ತಾನು ಯಶಸ್ವಿಯಾಗಿಯೇತೀರುತ್ತೇನೆ ಎನ್ನುವ ವಿಶ್ವಾಸ ಅವನಲ್ಲಿ ಯಾವಾಗಲೂ ಇದ್ದೇ ಇತ್ತು. ನಿಜ, ಅವನಂತಹ ಪರಿಶುದ್ಧ ಹೃದಯನಿಗಲ್ಲದೆ ಮತ್ತಾರಿಗೆ ದೇವರು ಲಭಿಸಿಯಾನು?

ಅಂತೂ ಈ ಬಗೆಯ ಸಂಶಯ ಹಾಗೂ ಅನಿಶ್ಚಿತತೆಗಳ ಸುಳಿಯಿಂದ ಬೇಗನೆ ಪಾರಾಗಬೇಕು ಎಂದು ಹಂಬಲಿಸುತ್ತಿದ್ದಾನೆ ನರೇಂದ್ರ; ಎಂದೆಂದೂ ಬದಲಾಗದ ನಿತ್ಯ ಜ್ಞಾನಕ್ಕಾಗಿ, ಶಾಂತಿ ಸಮಾಧಾನಗಳನ್ನು ಸುರಿಸುವಂತಹ ಸತ್ಯಜ್ಞಾನಕ್ಕಾಗಿ ಹಂಬಲಿಸುತ್ತಿದ್ದಾನೆ. ಅವನಲ್ಲಿ ಆಗಾಗ ಕಂಡುಬರುವ 'ನಾಸ್ತಿಕತೆ'ಯೂ ನಿಜವಾದ ನಾಸ್ತಿಕತೆಯೇನಲ್ಲ; ಅದು ಅವನ ಹೃದಯದ ವ್ಯಾಕುಲತೆಯ ಇನ್ನೊಂದು ರೂಪ ಅಷ್ಟೆ. 'ಸಾಕ್ಷಾತ್ಕಾರವಿನ್ನೂ ಆಗಲಿಲ್ಲವಲ್ಲ' ಎಂಬ ತೀವ್ರ ಚಡಪಡಿಕೆಯಿಂದಾಗಿ ಅವನನ್ನು ಒಂದು ಬಗೆಯ ಶೂನ್ಯತೆ, ಜುಗುಪ್ಸೆ ಆವರಿಸಿಬಿಟ್ಟಿದೆ. ಆದರೆ ಅದೇಕೆಂಬುದನ್ನು ಹೇಳಲು ಮಾತ್ರ ಅವನಿಂದ ಸಾಧ್ಯವಾಗುತ್ತಿಲ್ಲ. ಒಂದು ಬಗೆಯ ದಿಕ್ಕೆಟ್ಟ ಮನಸ್ಥಿತಿಯಲ್ಲಿ ಹೇಳುತ್ತಾನೆ: "ನನಗೊಂದೂ ತೋಚುತ್ತಿಲ್ಲ" ಎಂದು. ಸಾಮಾನ್ಯ ತತ್ತ್ವವಾದಿಯಾದರೆ 'ನನಗೆ ಗೊತ್ತಿಲ್ಲ' ಎಂದು ಉದಾಸೀನನಾಗಿ ಹೇಳಿ ಸುಮ್ಮನಾಗಿಬಿಡುತ್ತಾನೆ. ಆದರೆ ನಿಜವಾದ ವ್ಯಾಕುಲತೆಯಿರುವ, ಮುಂದೆ ಸಂತನಾಗಲಿರುವ ಸಾಧಕ ನರೇಂದ್ರ ಯಾತನೆ ತುಂಬಿದ ಹೃದಯದಿಂದ ಹೇಳುತ್ತಾನೆ: "ನನಗೊಂದೂ ತೋಚುತ್ತಿಲ್ಲ, ಈಗೇನು ಮಾಡಲಿ?" ಎಂದು. ಸಾಮಾನ್ಯರಾದ ಪ್ರಾಪಂಚಿಕರಿಗೆಲ್ಲ ಈ ಆದರ್ಶಗಳು, ಸಂಸ್ಕೃತಿ-ಪರಂಪರೆಗಳು ಉಳಿದರೂ ಅಷ್ಟೆ, ಅಳಿದರೂ ಅಷ್ಟೆ—ಅದರಿಂದ ಅವರಿಗೆ ಸಂತೋಷವೂ ಇಲ್ಲ, ದುಃಖವೂ ಇಲ್ಲ. ಏಕೆಂದರೆ, ಈ ಪ್ರಪಂಚ ಎಂಥ ಸಂಕಟಮಯವಾದದ್ದು ಎಂಬ ಅರಿವಾದಾಗಲೇ ನಿಜವಾದ ವೈರಾಗ್ಯವುದಿಸುವುದು. ಆದರೆ ಪ್ರಾಪಂಚಿಕರಿಗೆ ಈ ಪ್ರಪಂಚ ಸಂಕಟಮಯವೆಂಬ ಅರಿವೇ ಇಲ್ಲದಿರುವಾಗ ಅವರಿಗೆಲ್ಲಿ ಬರಬೇಕು ವೈರಾಗ್ಯ!

ಒಂದು ಬಹುಮುಖ್ಯ ವಿಷಯವೆಂದರೆ, ತನ್ನ ಅಂತರಂಗದಲ್ಲಿ ನಾನಾಬಗೆಯ

ತುಮುಲಗಳು ನಡೆಯುತ್ತಿದ್ದರೂ ನರೇಂದ್ರ ತನ್ನ ಆಧ್ಯಾತ್ಮಿಕ ಸಾಧನೆಗಳನ್ನು ಬಿಡದೆ ಮಾಡಿಕೊಂಡುಬರುತ್ತಿದ್ದ. ತಪ್ಪದೆ ಧ್ಯಾನಾಭ್ಯಾಸ ಮಾಡುತ್ತಿದ್ದ. ಧ್ಯಾನದಿಂದ ಮನಸ್ಸನ್ನು ಶಾಂತಗೊಳಿಸಲು ಸಾಧ್ಯವಾದ್ದರಿಂದ ಅಪೂರ್ವ ಸಮಾಧಾನವನ್ನು ಅನುಭವಿಸುತ್ತಿದ್ದ. ಹೀಗೆ ಮನಸ್ಸನ್ನು ಶಾಂತಗೊಳಿಸಿದಾಗ, ತನ್ನ ಮನಸ್ಸಿನ ಅತ್ಯಂತ ಒಳವಲಯದೊಳಗೆ ಪ್ರವೇಶಿಸಲು ಸಾಧ್ಯವಾಗುತ್ತಿತ್ತು. ಆಗ ಅವನ ಸಂಶಯದ ಮನಸ್ಸು ಹೊರಗೆಯೇ ನಿಂತಿರಬೇಕಾಗಿತ್ತು. ಏಕೆಂದರೆ ಈ ಸಂಶಯದ ಮನಸ್ಸಿಗೆ ಅಂತರಂಗದ ತೀರಾ ಒಳಕ್ಕೆ ಪ್ರವೇಶವಿಲ್ಲ. ಶ್ರೀರಾಮಕೃಷ್ಣರು ಅವನಿಗೆ ಮೊದಲ ಎರಡು-ಮೂರು ಸಂದರ್ಶನಗಳಲ್ಲಿ ಮಾಡಿಸಿಕೊಟ್ಟ ಅನುಭವಗಳೆಲ್ಲ ಈಗ ಧ್ಯಾನಕ್ಕೆ ವಿಶೇಷವಾಗಿ ನೆರವಾಗುತ್ತಿದ್ದುವು. ಪರಮಸತ್ಯದಲ್ಲಿ ಮನಸ್ಸನ್ನು ನೆಲೆನಿಲ್ಲಿಸಲು ಸಹಾಯವಾಗುತ್ತಿದ್ದುವು. ಅಲ್ಲದೆ ಶ್ರೀರಾಮಕೃಷ್ಣರ ಈ ಮಾತುಗಳು ಅವನ ಮೇಲೆ ವಿಶೇಷವಾಗಿ ಪ್ರಭಾವ ಬೀರಿದ್ದುವು: "ನೋಡು, ಮನುಷ್ಯನ ಪ್ರಾಮಾಣಿಕ ಪ್ರಾರ್ಥನೆಯನ್ನು ಭಗವಂತ ಖಂಡಿತ ಕೇಳುತ್ತಾನೆ. ನಾನು ಪ್ರತಿಜ್ಞೆ ಮಾಡಿ ಹೇಳುತ್ತೇನೆ: ಭಗವಂತನನ್ನು ನೀನು ನನ್ನನ್ನು ಕಾಣುವುದಕ್ಕಿಂತ ಹೆಚ್ಚು ಸ್ಪಷ್ಟವಾಗಿ ಕಾಣಬಲ್ಲೆ; ನನ್ನೊಂದಿಗೆ ಮಾತನಾಡುವುದಕ್ಕಿಂತ ಹೆಚ್ಚಿನ ಆತ್ಮೀಯತೆಯಿಂದ ಅವನೊಂದಿಗೆ ಮಾತನಾಡಬಲ್ಲೆ. ಅವನ ವಾಣಿಯನ್ನು ಕೇಳಬಹುದು, ಅವನ ಸ್ಪರ್ಶವನ್ನು ಅನುಭವಿಸಬಹುದು." ಮತ್ತೆ ಹೇಳುತ್ತಿದ್ದರು: "ನೀನು ನಾನಾ ದೇವತೆಗಳ ಅಸ್ತಿತ್ವವನ್ನು ಒಪ್ಪದೆ ಬದಿಗೊತ್ತಿದರೆ ಏನೂ ಚಿಂತೆಯಿಲ್ಲ. ಆದರೆ ನಿನಗೆ ಆ ಒಂದು ಪರಮಸತ್ಯದ ಮೇಲೆ ವಿಶ್ವಾಸವಿರುವುದಾದರೆ, ಸಮಸ್ತ ವಿಶ್ವದ ಚಲನೆಯನ್ನೇ ನಿಯಂತ್ರಿಸುವಂತಹ ಆ ಪರಮ ಚೈತನ್ಯದ ಮೇಲೆ ವಿಶ್ವಾಸವಿರುವುದಾದರೆ ಸಾಕು. 'ಹೇ ಭಗವಂತ, ನೀನು ಯಾರೆಂಬುದು ನನಗೆ ತಿಳಿಯದು. ಆದ್ದರಿಂದ ನೀನೇ ನಿನ್ನ ಸ್ವರೂಪವನ್ನು ತೋರುವ ಕೃಪೆ ಮಾಡು' ಅಂತ ಪ್ರಾರ್ಥಿಸಿಕೊ. ನಿನ್ನ ಪ್ರಾರ್ಥನೆ ಪ್ರಾಮಾಣಿಕವಾದದ್ದಾದರೆ ಅವನದನ್ನು ಕೇಳಿಯೇ ಕೇಳುತ್ತಾನೆ." ಶ್ರೀರಾಮಕೃಷ್ಣರ ಈ ಮಾತುಗಳಿಂದ ನರೇಂದ್ರನಿಗೆ ತನ್ನ ಸಾಧನೆಯ ಕಡೆಗೆ ಇನ್ನಷ್ಟು ಮನಸ್ಸು ಕೊಡಲು ಸಹಾಯವಾಯಿತು; ವಿಶ್ವಾಸ ಹೆಚ್ಚಿತು. ಇನ್ನೂ ಹೆಚ್ಚಿನ ರಭಸದಿಂದ ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾದ. ಹ್ಯಾಮಿಲ್ಟನ್ ಎಂಬ ಪಾಶ್ಚಾತ್ಯ ಚಿಂತಕನೊಬ್ಬ ಹೇಳುತ್ತಾನೆ: 'ಮಾನವನ ಬುದ್ಧಿಶಕ್ತಿಯೆಂಬುದು ಭಗವಂತನ ಕುರಿತಾಗಿ ಎಲ್ಲೋ ಕಿಂಚಿತ್ ಪರಿಚಯ ಮಾಡಿಕೊಳ್ಳಬಲ್ಲುದೇ ಹೊರತು ಅದಕ್ಕಿಂತ ಮುಂದೆ ಹೋಗಲಾರದು. ಅವನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಈ ಬುದ್ಧಿಯಿಂದ ಸಾಧ್ಯವಿಲ್ಲ. ಬುದ್ಧಿಯಿಂದ ತಿಳಿದುಕೊಳ್ಳಬಹುದಾದ ಸಿದ್ಧಾಂತಾದಿಗಳೆಲ್ಲ ಮುಗಿದಮೇಲೆ ನಿಜವಾದ ಧರ್ಮ, ನಿಜವಾದ ಆಧ್ಯಾತ್ಮಿಕತೆ ಪ್ರಾರಂಭವಾಗುತ್ತದೆ.' ಈ ಮಾತುಗಳು ಮತ್ತೆಮತ್ತೆ ನರೇಂದ್ರನ ಮನಸ್ಸಿಗೆ ಬರಲಾರಂಭಿಸಿದುವು. ಏಕೆಂದರೆ ಅವನಿಗೆ ಮೊದಮೊದಲು ತನ್ನ ಬುದ್ಧಿಶಕ್ತಿಯ ಮೇಲೆ ವಿಶೇಷ ನಂಬಿಕೆಯಿತ್ತು; ಇಂತಹ ತೀಕ್ಷ್ಣ ಬುದ್ಧಿಯಿಂದ ಏನನ್ನಾದರೂ ತಿಳಿದುಕೊಳ್ಳಬಲ್ಲೆನೆಂಬ ವಿಶ್ವಾಸವಿತ್ತು. ಆದರೆ ಈ ಬುದ್ಧಿಯಿಂದ ಏನನ್ನು ಬೇಕಾದರೂ ತಿಳಿದುಕೊಳ್ಳಬಹುದು, ಆದರೆ ಭಗವಂತನನ್ನು ತಿಳಿದುಕೊಳ್ಳುವುದು ಮಾತ್ರ ಅಸಾಧ್ಯ ಎಂಬುದು ಈಗೀಗ ಅವನಿಗೆ ಅರ್ಥವಾಗುತ್ತಿದೆ! ಸಾಧನೆ ಮಾಡುತ್ತ ಹೋದಂತೆ, ಉಪನಿಷದ್ವಾಕ್ಯಗಳ ಈ ಸತ್ಯ ಅವನಿಗೆ ಮನವರಿಕೆಯಾಗುತ್ತಿದೆ—

'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'—ಎಂದರೆ, ಪರಮಾತ್ಮನನ್ನು ತಿಳಿಯಲೆಂದು ಹೊರಟ ಮಾತುಗಳೂ ಮನಸ್ಸೂ ಅವನನ್ನು ಅರ್ಥ ಮಾಡಿಕೊಳ್ಳಲಾಗದೆ ಹಿಂದಿರುಗಿದುವಂತೆ! ಮಾತಿನ ಮೂಲಕ ಏನನ್ನು ಬೇಕಾದರೂ ವರ್ಣಿಸಿ ವಿವರಿಸಬಹುದು, ಆದರೆ ಭಗವಂತನನ್ನು ಮಾತ್ರ ಯಥಾವತ್ತಾಗಿ ವರ್ಣಿಸಿ ವಿವರಿಸುವುದು ಸಾಧ್ಯವಿಲ್ಲ. ನಮ್ಮ ಮನಸ್ಸಿನಿಂದ ಏನನ್ನು ಬೇಕಾದರೂ ಗ್ರಹಿಸಿ ಅರ್ಥ ಮಾಡಿಕೊಳ್ಳಬಹುದು, ಆದರೆ ಅನಂತನಾದ ಭಗವಂತನನ್ನು ಮಾತ್ರ ಯಥಾವತ್ತಾಗಿ ಗ್ರಹಿಸಿ ಅರಿತುಕೊಳ್ಳುವುದು ಸಾಧ್ಯವಿಲ್ಲ. ಈ ಮಾತುಗಳ ಸತ್ಯತೆ ಅರ್ಥವಾದಂತೆಲ್ಲ ಅವನು ಹೆಚ್ಚೆಚ್ಚು ಧ್ಯಾನನಿರತನಾದ. ಶಾಸ್ತ್ರಗ್ರಂಥಗಳನ್ನು ಮನವಿಟ್ಟು ಓದಲಾರಂಭಿಸಿದ. ಧ್ಯಾನ-ಅಧ್ಯಯನ-ಭಜನೆ ಇವುಗಳಲ್ಲೇ ಮಗ್ನನಾಗಿಬಿಟ್ಟ.

ಶ್ರೀರಾಮಕೃಷ್ಣರ ಸಲಹೆಯ ಪ್ರಕಾರ ಅವನೀಗ ಹೊಸ ಬಗೆಯ ಧ್ಯಾನಕ್ರಮವನ್ನು ರೂಢಿಸಿಕೊಂಡ. ಈ ಹಿಂದೆ ಅವನು ಧ್ಯಾನ ಮಾಡುತ್ತಿದ್ದುದು ಬ್ರಾಹ್ಮಸಮಾಜದ ನಂಬಿಕೆಯ ಪ್ರಕಾರ ಸಗುಣ-ನಿರಾಕಾರ ಬ್ರಹ್ಮದ ಮೇಲೆ. ಈಗ ಅವನು, 'ಹೇ ಭಗವನ್, ಕೃಪೆಮಾಡಿ ನನಗೆ ನಿನ್ನ ನಿಜಸ್ವರೂಪವನ್ನು ತೋರಿಸು' ಎಂದು ತನ್ನ ಹೃದಯಾಂತರಾಳದಿಂದ ಪ್ರಾರ್ಥಿಸಿಕೊಳ್ಳುತ್ತಿದ್ದ. ಹೀಗೆ ಪ್ರಾರ್ಥಿಸಿಕೊಂಡು ಗಾಢ ಧ್ಯಾನದಲ್ಲಿ ಲೀನವಾಗಿಬಿಡುತ್ತಿದ್ದ. ಈಗ ಅವನಿಗೆ ತನ್ನ ಶರೀರಪ್ರಜ್ಞೆಯೂ ಇಲ್ಲ, ಸಮಯಪ್ರಜ್ಞೆಯೂ ಇಲ್ಲ! ಪ್ರತಿ ರಾತ್ರಿಯೂ ಉಳಿದವರೆಲ್ಲ ನಿದ್ರಿಸುತ್ತಿರುವಾಗ ಅವನು ಈ ರೀತಿ ಧ್ಯಾನಮಗ್ನನಾಗಿ ಕುಳಿತಿರುತ್ತಿದ್ದ. ಆಗ ಅವನ ಅಂತರಂಗ ಒಂದು ಅಪೂರ್ವ ಶಾಂತಿಯನ್ನು ಅನುಭವಿಸುತ್ತಿತ್ತು. ಬಳಿಕ ಅವನನ್ನು ಧ್ಯಾನದ ಅಮಲು ಆವರಿಸಿಕೊಂಡುಬಿಡುತ್ತಿತ್ತು. ಆ ಅನುಭವದಿಂದ ಮನಸ್ಸನ್ನು ಹಿಂದೆಳೆದುಕೊಂಡು ಆಸನವನ್ನು ಬಿಟ್ಟು ಎದ್ದೇಳುವ ಮನಸ್ಸಾಗುತ್ತಲೇ ಇರಲಿಲ್ಲ. ಒಂದು ದಿನ ಹೀಗೆ ಧ್ಯಾನವನ್ನು ಮುಗಿಸಿ ಕುಳಿತಿದ್ದಾಗ, ಅವನಿಗೆ ಭಗವಾನ್ ಬುದ್ಧನ ದರ್ಶನಭಾಗ್ಯವಾಯಿತು. ಆ ಅನುಭವವನ್ನು ತನ್ನ ಗುರುಭಾಯಿ ಶರಚ್ಚಂದ್ರನ ಹತ್ತಿರ ಹೇಳಿಕೊಳ್ಳುತ್ತಾನೆ:

"...ಒಂದು ದಿನ ಹೀಗೆಯೇ ಧ್ಯಾನ ಮುಗಿಸಿ ಅದೇ ಆನಂದದ ಸ್ಥಿತಿಯಲ್ಲಿ ಕುಳಿತಿದ್ದಾಗ, ಇದ್ದಕ್ಕಿದ್ದಂತೆ ಒಂದು ಅದ್ಭುತವಾದ ಸಂನ್ಯಾಸಿಯ ಆಕೃತಿ ಪ್ರತ್ಯಕ್ಷವಾದುದನ್ನು ಕಂಡೆ. ಆತ ಎಲ್ಲಿಂದ ಬಂದನೋ ತಿಳಿಯಲಿಲ್ಲ. ಅವನು ನನ್ನ ಮುಂದೆ ಸ್ವಲ್ಪ ದೂರದಲ್ಲಿ ನಿಂತಿದ್ದ. ಕೋಣೆಯಲ್ಲೆಲ್ಲ ಒಂದು ದಿವ್ಯ ಜ್ಯೋತಿಯ ಪ್ರಕಾಶ ತುಂಬಿಕೊಂಡಿತು. ಅವನು ಕಾಷಾಯವಸ್ತ್ರ ಧರಿಸಿದ್ದ; ಕೈಯಲ್ಲಿ ಕಮಂಡಲು ಇತ್ತು. ಮುಖ ಪರಮಪ್ರಶಾಂತವಾಗಿತ್ತು. ಅವನ ಮನಸ್ಸು ಸಂಪೂರ್ಣ ಅಂತರ್ಮುಖವಾಗಿರುವುದನ್ನು ಆ ಮುಖಮುದ್ರೆ ಸೂಚಿಸುತ್ತಿತ್ತು. ಆ ಪ್ರಶಾಂತತೆಯನ್ನು ಕಂಡು ನಾನು ಬೆರಗಾಗಿ ಅವನೆಡೆಗೆ ಆಕರ್ಷಿತನಾದೆ. ಅವನು ಮೆಲ್ಲನೆ ಹೆಜ್ಜೆಹಾಕುತ್ತ ನನ್ನೆಡೆಗೆ ನಡೆದು ಬಂದ. ಅವನ ದೃಷ್ಟಿ ನನ್ನ ಮೇಲೆಯೇ ನೆಟ್ಟಿತ್ತು. ನನಗೆ ಅವನು ಏನನ್ನೋ ಹೇಳಹೊರಟಂತಿತ್ತು, ಆ ಮುಖಭಾವ. ಆದರೆ ಅದೇಕೋ ನನಗೆ ತುಂಬ ಹೆದರಿಕೆಯಾಯಿತು. ಅಲ್ಲಿನ್ನು ಕುಳಿತಿರಲಾಗದೆ ಆಸನದಿಂದೆದ್ದು ಸರಸರನೆ ಕೋಣೆಯ ಬಾಗಿಲನ್ನು ತೆರೆದುಕೊಂಡು ಹೊರಗೆ ಬಂದುಬಿಟ್ಟೆ. ಆದರೆ ಮರುಕ್ಷಣವೇ, 'ಛೆ, ಇದೆಂತಹ ಹುಚ್ಚು ಹೆದರಿಕೆ!' ಎನ್ನಿಸಿತು. ಧೈರ್ಯ ತಂದುಕೊಂಡು ಮತ್ತೆ ಕೋಣೆಗೆ ಹಿಂದಿರುಗಿದೆ—ನೋಡೋಣ, ಆ ಸಂನ್ಯಾಸಿ ಏನು ಹೇಳುತ್ತಾನೋ ಅಂತ. ಆದರೆ, ಅಯ್ಯೋ,

ಅವನು ಅಲ್ಲಿರಲಿಲ್ಲ! ಅವನು ಮತ್ತೆ ಬರಬಹುದೆಂದು ಬಹಳ ಹೊತ್ತು ಕಾದೆ. ಕಾದದ್ದು ವ್ಯರ್ಥವಾಯಿತು, ಅವನು ಕಾಣಿಸಿಕೊಳ್ಳಲೇ ಇಲ್ಲ. 'ಆ ಸಂನ್ಯಾಸಿ ಹೇಳು ವುದನ್ನು ಕೇಳಲೂ ನಿಲ್ಲದೆ ಓಡಿಹೋಗಿಬಿಟ್ಟೆನಲ್ಲ, ಎಂಥ ಮೂರ್ಖ ನಾನು!' ಎಂದು ತುಂಬ ಖೇದವಾಯಿತು. ನನ್ನ ಮೇಲೆಯೇ ನನಗೆ ಬೇಸರವಾಯಿತು. ನಾನು ಎಷ್ಟೋ ಜನ ಸಂನ್ಯಾಸಿಗಳನ್ನು ನೋಡಿದ್ದೇನೆ, ಆದರೆ ಆತನ ಮುಖದಲ್ಲಿ ವ್ಯಕ್ತವಾದಂತಹ ಭಾವಪ್ರಕಾಶವನ್ನು ಮಾತ್ರ ಇನ್ನಾರಲ್ಲೂ ಕಂಡಿಲ್ಲ. ಆ ಮುಖ ನನ್ನ ಹೃದಯುದಲ್ಲಿ ಅಚ್ಚಳಿಯದ ಮುದ್ರೆಯನ್ನೊತ್ತಿಬಿಟ್ಟಿತ್ತು. ಇದೆಲ್ಲ ನನ್ನ ಭ್ರಮೆಯಾಗಿರಲೂಬಹು ದೇನೋ. ಆದರೆ ಎಷ್ಟೋ ಸಲ ನನಗೆ ಅನಿಸುತ್ತದೆ—ನಾನು ಆ ದಿನ ಪಡೆದದ್ದು ಸಾಕ್ಷಾತ್ ಬುದ್ಧಭಗವಂತನ ದರ್ಶನವನ್ನೇ ಎಂದು."

ಶ್ರೀರಾಮಕೃಷ್ಣರ ದಿವ್ಯ ಸಂಪರ್ಕದಲ್ಲಿ ನರೇಂದ್ರನ ಆಧ್ಯಾತ್ಮಿಕ ಸಾಧನೆ ರಭಸ ದಿಂದ ಸಾಗತೊಡಗಿತ್ತು. ಅವನಿಗೆ ಹೊಸಹೊಸ ಆಧ್ಯಾತ್ಮಿಕ ಅನುಭವಗಳಾಗುತ್ತಿದ್ದುವು. ಆದರೆ ಈ ಆಧ್ಯಾತ್ಮಿಕ ಅನುಭವಗಳಿಗೂ ಭಗವತ್ಸಾಕ್ಷಾತ್ಕಾರಕ್ಕೂ ಬಹಳ ವ್ಯತ್ಯಾಸವಿದೆ. ಆಧ್ಯಾತ್ಮಿಕ ಅನುಭವವೆಂಬುದು ಸಾಧಕನು ಸಾಧನೆಯ ಸರಿಯಾದ ಮಾರ್ಗದಲ್ಲಿದ್ದಾನೆ ಎನ್ನುವುದನ್ನು ಸೂಚಿಸುವುದೇ ಹೊರತು ಭಗವತ್ಸಾಕ್ಷಾತ್ಕಾರವನ್ನೇ ಅಲ್ಲ. ನಿಜವಾದ ಸಾಕ್ಷಾತ್ಕಾರವಾದ ಮೇಲೆ ಇನ್ನು ಅಲ್ಲಿ ಸಂಶಯ ಹೋರಾಟಗಳಿರಬಾರದು. ಅಲ್ಲಿ ದುಃಖದ ಕಿಲುಬೇ ಇರಬಾರದು. ಅಲ್ಲದೆ ಶ್ರೀರಾಮಕೃಷ್ಣರು ಹೇಳುವಂತೆ, ಭಗವಂತ ನಮ್ಮೊಡನೆ ಮಾತನಾಡುವಂತಾಗಬೇಕು. ನಮ್ಮ ಮಾತಿಗೆ ಅವನ ಮರುದನಿ ಸಿಗು ವಂತಿರಬೇಕು. ನರೇಂದ್ರನಿಗೆ ಈ ಬಗೆಯ ಸ್ಪಷ್ಟ ಸಾಕ್ಷಾತ್ಕಾರವನ್ನು ಮಾಡಿಕೊಳ್ಳ ಬೇಕೆಂಬ ಹಂಬಲ ಅಧಿಕವಾಗುತ್ತಿತ್ತು. ಅದನ್ನು ಪಡೆದೇ ತೀರಬೇಕು ಎಂದು ಅವನು ದೃಢಸಂಕಲ್ಪ ಮಾಡಿಬಿಟ್ಟ. ಸಾಮಾನ್ಯ ಜನಕೋಟಿಯ ಹಂಬಲಿಕೆಯೆಲ್ಲ ಇಂದ್ರಿಯ ಭೋಗಗಳ ಕಡೆಗೆ ಹರಿಯುತ್ತಿದ್ದರೆ, ನರೇಂದ್ರನಲ್ಲಿ ಅದು ಜೀವನದ ರಹಸ್ಯವನ್ನು ಭೇದಿಸುವುದರ ಕಡೆಗೆ ಹರಿಯುತ್ತಿತ್ತು. ಅವನ ಹೃದಯದ ಏಕೈಕ ಹಂಬಲವೆಂದರೆ ಸಾಕ್ಷಾತ್ಕಾರ. ಇಂತಹ ಪ್ರಾಮಾಣಿಕ ವ್ಯಾಕುಲತೆಯಿರುವಲ್ಲಿ ಸಾಕ್ಷಾತ್ಕಾರ ಸಿದ್ಧಿಸಲೇ ಬೇಕು! ಪ್ರಾಪಂಚಿಕವಾದ ಎಲ್ಲ ಜ್ಞಾನ-ಅನುಭವಗಳನ್ನೂ ವಿಶ್ಲೇಷಿಸಿ ನೋಡುತ್ತ ಕೊನೆಗೆ ಅವನೊಂದು ತೀರ್ಮಾನಕ್ಕೆ ಬಂದ: ಈ ಪ್ರಪಂಚಾನುಭವವೇ ಆಗಲಿ, ಈ ಪ್ರಾಪಂಚಿಕ ಜ್ಞಾನವೇ ಆಗಲಿ—ಇವೆಲ್ಲ ತಿರುಳಿಲ್ಲದವು, ಬರೀ ಟೊಳ್ಳು ಮತ್ತು ಆತ್ಮಸಾಕ್ಷಾತ್ಕಾರಕ್ಕೆ ಬಾಧಕವಾದವುಗಳು' ಎಂದು. ಮುಂಡಕೋಪನಿಷತ್ತಿನ ಒಂದು ಮಾತು ಹೀಗಿದೆ—

*'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್.'* ಎಂದರೆ, 'ಬ್ರಾಹ್ಮಣನಾದವನು, ಅರ್ಥಾತ್ ವಿವೇಕಿಯಾದವನು, ಲೋಕಲೋಕಾಂತರ ಗಳನ್ನೆಲ್ಲ ವಿವೇಕದಿಂದ ಪರೀಕ್ಷೆಮಾಡಿ ನೋಡಿ, ಕೊನೆಗೆ ಅವುಗಳ ವಿಷಯದಲ್ಲಿ ವೈರಾಗ್ಯ ತಾಳಬೇಕು, ನಿರಾಸಕ್ತನಾಗಬೇಕು' ಎಂದು. ಬುದ್ಧಿಯನ್ನುಪಯೋಗಿಸಿ ಪರೀಕ್ಷೆ ಮಾಡಿ ನೋಡಿದಾಗ, ಈ ಲೋಕದ ಸುಖಗಳೇ ಆಗಲಿ ಇತರ ಲೋಕಗಳ ಸುಖಗಳೇ ಆಗಲಿ ಕೇವಲ ಕ್ಷಣಿಕ, ಅಷ್ಟೇ ಅಲ್ಲ, ಅವುಗಳನ್ನು ಅನುಭವಿಸಿ ಮುಗಿಸಿದ ಕೂಡಲೇ ಅಪಾರ ದುಃಖ, ಆದ್ದರಿಂದ ಲೌಕಿಕ ಅನುಭವಗಳಾವುವೂ ನಿತ್ಯಶಾಂತಿ ಹಾಗೂ ನಿತ್ಯಾ ನಂದವನ್ನು ಕೊಡಲಾರವು ಎಂಬುದು ತಿಳಿದುಬರುತ್ತದೆ. ಆದ್ದರಿಂದ ವಿವೇಕಿಯಾದ

ವನು ಈ ಪ್ರಾಪಂಚಿಕ ಸುಖದ ಬೆನ್ನುಹತ್ತದೆ, ನಿತ್ಯಾನಂದಪ್ರಾಪ್ತಿಯ ಕಡೆಗೆ ಮನ ಗೊಡಬೇಕು. ಇಲ್ಲಿ ನರೇಂದ್ರನೂ ಚೆನ್ನಾಗಿ ವಿಮರ್ಶಿಸಿನೋಡಿ, 'ಇವೆಲ್ಲ ತಿರುಳಿಲ್ಲದ್ದು, ಆತ್ಮಸಾಕ್ಷಾತ್ಕಾರಕ್ಕೆ ಬಾಧಕವಾದದ್ದು' ಎಂಬ ಸತ್ಯವನ್ನು ಮನಗಂಡ. ಹಾಗೆಯೇ, ಯೋಚನೆ ಮಾಡುತ್ತಮಾಡುತ್ತ, ಸಮಸ್ತ ಸೃಷ್ಟಿಯೂ ಯಾವುದೋ ಒಂದು ಅನಿರ್ವಚನೀಯ ಸತ್ಯವೊಂದರಿಂದ ಉದ್ಭವಿಸಿದೆ ಎಂಬುದರಲ್ಲಿ ನಂಬಿಕೆ ಬೆಳೆಯಿತು.

ತೈತ್ತಿರೀಯ ಉಪನಿಷತ್ತು ಹೇಳುತ್ತದೆ—

*ಯತೋ ವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ।*
*ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ। ತದ್ ಬ್ರಹ್ಮೇತಿ।*

ಭೃಗು ತನ್ನ ತಂದೆಯಾದ ವರುಣನನ್ನು ಕೇಳುತ್ತಾನೆ: 'ಹೇ ಭಗವನ್, ನನಗೆ ಪರಬ್ರಹ್ಮದ ಕುರಿತಾಗಿ ತಿಳಿಸಿಕೊಡು' ಎಂದು. ಆಗ ವರುಣನು ಮೇಲಿನಂತೆ ಉತ್ತರಿಸು ತ್ತಾನೆ: 'ಯಾವುದರಿಂದ ಈ ಜೀವಿಗಳೆಲ್ಲ ಹುಟ್ಟುವವೋ, ಹುಟ್ಟಿದ ಜೀವಿಗಳೆಲ್ಲ ಯಾವುದರಿಂದ ಜೀವಿಸುತ್ತವೆಯೋ ಮತ್ತು ಕೊನೆಯಲ್ಲಿ ಯಾವುದನ್ನು ಕುರಿತು ಹೋಗಿ ಸೇರಿಕೊಳ್ಳುತ್ತವೆಯೋ ಅದನ್ನು ಅರಿತುಕೊ; ಅದೇ ಬ್ರಹ್ಮ' ಇಂತಹ ಪರಬ್ರಹ್ಮದ ಅಸ್ತಿತ್ವದಲ್ಲಿ ನರೇಂದ್ರನಿಗೆ ವಿಶ್ವಾಸ ಹೆಚ್ಚಿತು.

ಹೀಗೆ ಅವನು ತನ್ನ ಬುದ್ಧಿಯಿಂದ, ವಿವೇಕದಿಂದ ತಿಳಿಯಬಹುದಾದಷ್ಟನ್ನೂ ತಿಳಿದ. ಆದರೆ ಪರಮಾತ್ಮ ಅವಾಙ್ಮಾನಸಗೋಚರ. ಆದ್ದರಿಂದ ಅವನನ್ನು ತಿಳಿಯಲು ಬೇಕಾದದ್ದು ಬುದ್ಧಿಶಕ್ತಿಯಲ್ಲ, ಆತ್ಮಶಕ್ತಿ. ಮನೋಬುದ್ಧಿಗಳನ್ನು ಆತ್ಮದಲ್ಲಿ ಲೀನ ಗೊಳಿಸಿದಾಗ ನಿಜವಾದ ಆಧ್ಯಾತ್ಮಿಕ ಜೀವನ ಆರಂಭವಾಗುತ್ತದೆ. ನರೇಂದ್ರ ತನ್ನ ದಿವ್ಯ ಗುರು ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ ಮೆಲ್ಲಮೆಲ್ಲನೆ ಈ ಆಧ್ಯಾತ್ಮಿಕ ಜೀವನ ವನ್ನು ಬಲಪಡಿಸಿಕೊಂಡ. ನಾಸ್ತಿಕ ಮನೋಭಾವದಿಂದ ಆಸ್ತಿಕ ಮನೋಭಾವಕ್ಕೆ ಏರುವ ಕಾರ್ಯ ಸ್ವಲ್ಪ ಸಾವಕಾಶವೇ. ಪುನಃ ಈ ಆಸ್ತಿಕ ಮನೋಭಾವದಿಂದ, ಪ್ರಾಮಾಣಿಕ ಪ್ರಾರ್ಥನೆ ಹಾಗೂ ಧ್ಯಾನದ ಸ್ಥಿತಿಗೆ ಏರುವುದಕ್ಕೂ ಕಾಲಾವಕಾಶ ಬೇಕಾಗುತ್ತದೆ. ತನ್ನ ಇಂದ್ರಿಯಗಳನ್ನು ಶಾಂತಗೊಳಿಸುವುದರ ಮೂಲಕ, ಇಂದ್ರಿಯ ಭೋಗಗಳನ್ನು ತ್ಯಾಗ ಮಾಡುವುದರ ಮೂಲಕ ಹೃತ್ಪೂರ್ವಕ ಪ್ರಾರ್ಥನೆ ಮಾಡಲು, ಗಾಢತಮ ಧ್ಯಾನಲೀನನಾಗಲು ಸಮರ್ಥನಾದ. ಧ್ಯಾನ ಗಾಢವಾದಂತೆಲ್ಲ ಅವನ ಭಗವದ್ದರ್ಶನದ ಹಂಬಲ ಇನ್ನಷ್ಟು ತೀವ್ರವಾಯಿತು. ಏಕೆಂದರೆ, ಭಗವಂತನ ನೇರ ದರ್ಶನದಿಂದ ಆಗುವ ಆನಂದ, ಧ್ಯಾನಾನಂದಕ್ಕಿಂತಲೂ ಎಷ್ಟೋ ಪಾಲು ಮಿಗಿಲು.

ಅವನು ಭಗವಂತನ ಸ್ವರೂಪದ ಕುರಿತಂತೆ ಗಾಢವಾಗಿ ಆಲೋಚನೆ ನಡೆಸಿದ. ಹಗಲಿರುಳೂ ಕೇವಲ ಆ ಸಚ್ಚಿದಾನಂದನ ಕುರಿತಾಗಿಯೇ ಚಿಂತನೆ, ಆಲೋಚನೆ. ಧ್ಯಾನವೆಂಬುದು ಅವನಿಗೆ ಸ್ವಭಾವಗತವಾಯಿತು. ಸತ್ಯದರ್ಶನ ಮಾಡಬೇಕೆಂಬ ತೀವ್ರ ಕಾತರತೆಯು ಅವನ ಬುದ್ಧಿ ನಿರ್ಮಿಸಿದ್ದ ಆಲೋಚನೆಗಳ, ಕಲ್ಪನೆಗಳ ಗೋಡೆಗಳನ್ನು ನುಚ್ಚುನೂರು ಮಾಡಿತು. ಇದರಿಂದಾಗಿ ಆತನ ಅಂತರ್ದೃಷ್ಟಿ ಬೆಳೆಯಲು ಅವಕಾಶ ವಾಯಿತು. ನಿದ್ರಾಮಗ್ನನಾಗಿರುವಾಗ ಇಂದ್ರಿಯಲೋಕದ ಪರಿಧಿಯಾಚೆಗಿನ ಅನೇಕ ದೃಶ್ಯಗಳನ್ನು ಅಸ್ಪಷ್ಟವಾಗಿ ಕಾಣುತ್ತಿದ್ದ. ಕೆಲವೊಮ್ಮೆ ಬೆಳಗ್ಗೆ ಏಳುವಾಗ ಅನಿರ್ವಚ ನೀಯವಾದ ಆನಂದದಿಂದ ತುಂಬಿರುತ್ತಿದ್ದ. ಅವನ ಆ ಅನುಭವಗಳು ಸಾಧಾರಣ

ನಿದ್ರೆ-ಸ್ವಪ್ನಗಳಂತಲ್ಲ. ಪರಮಸತ್ಯದ ಮಿಂಚುನೋಟಗಳಾದ ಈ ಬಗೆಯ ಆನಂದಾನುಭವಗಳು ಅವನಿಗೆ ಪ್ರತಿದಿನವೂ ಆಗುತ್ತಿದ್ದುವು. ಅಲ್ಲದೆ, ತಾನು ಈ ದೇಹವಲ್ಲ, ತಾನು ಈ ದೇಹದಿಂದ ಬೇರೆ ಎಂಬ ಭಾವನೆ ಅವನಲ್ಲಿ ಮತ್ತೆಮತ್ತೆ ಮೂಡುತ್ತಿತ್ತು.

ಆದರೆ, ಶ್ರೀರಾಮಕೃಷ್ಣರು ಅವನಲ್ಲಿ ಸುಪ್ತವಾಗಿದ್ದ ಆಧ್ಯಾತ್ಮಿಕತೆಯನ್ನು ಜಾಗೃತಗೊಳಿಸಲು ಪ್ರಯತ್ನಪಡುತ್ತಿದ್ದರೆ, ಅವನು ಮಾತ್ರ ತನ್ನ ಬುದ್ಧಿಶಕ್ತಿಯಿಂದ ಅದನ್ನು ನಿರೋಧಿಸುತ್ತಿದ್ದ. ಅವರ ಅನುಭವದ ಮಾತುಗಳನ್ನೆಲ್ಲ ಅಲ್ಲಗಳೆದು ಟೀಕಿಸುತ್ತಿದ್ದ. ಆದರೆ ಶ್ರೀರಾಮಕೃಷ್ಣರೇ ಹೇಳುತ್ತಿದ್ದಂತೆ ಅವರೇನೂ ಸಾಮಾನ್ಯವಾದ ನೀರುಹಾವಲ್ಲ, ಮಹಾ ಘಟಸರ್ಪ! ಅವರು ಹೇಳುವಂತೆ, ನೀರುಹಾವು ಕಪ್ಪೆಯನ್ನು ಹಿಡಿದರೆ ಅದನ್ನು ಪೂರ್ಣ ನುಂಗಲೂ ಆರದೆ ಬಿಡಲೂ ಆರದೆ ಒದ್ದಾಡುತ್ತಿರುತ್ತದೆ. ಆದರೆ ನಾಗರಹಾವೇನಾದರೂ ಕಪ್ಪೆಯನ್ನು ಹಿಡಿದರೆ, ಅದು ಮೂರು ಸಲ ಕೂಗುವುದರೊಳಗಾಗಿ ಅದನ್ನು ಮುಗಿಸಿಬಿಡುತ್ತದೆ. ಹಾಗೆಯೇ ಸಾಮಾನ್ಯ ಗುರುಗಳು ತಮ್ಮ ಶಿಷ್ಯರನ್ನು ಉದ್ಧಾರ ಮಾಡಲೂ ಆರದೆ, ಬಿಡಲೂ ಆರದೆ ಒದ್ದಾಡುತ್ತಿರುತ್ತಾರೆ—ನೀರುಹಾವು-ಕಪ್ಪೆಗಳಂತೆ ಗುರುವಿಗೂ ಸಂಕಟ, ಶಿಷ್ಯನಿಗೂ ಸಂಕಟ. ಆದರೆ ಸಮರ್ಥ ಗುರುವಾದವನು ನಾಗರಹಾವಿನ ಹಾಗೆ. ಶಿಷ್ಯ 'ಹಾಂ ಹೂಂ' ಎನ್ನುವುದರೊಳಗಾಗಿ ಅವನನ್ನು ಸಮಾಧಾನಸ್ಥಿತಿಗೆ ತಂದುಬಿಡುತ್ತಾನೆ. ಇಂತಹ ಸಮರ್ಥ ಗುರುವಿನಲ್ಲಿ ನರೇಂದ್ರ ಕ್ರಮೇಣ ಸಂಪೂರ್ಣ ಶರಣಾಗುತ್ತ ಬಂದ; ಅವನ ಪ್ರತಿಭಟನೆ ಕುಂದಿತು.

ಆದರೆ ನರೇಂದ್ರ ಹೀಗೆ ಪರಿವರ್ತನೆಗೊಂಡ ಮತ್ತು ಬೆಳಕನ್ನು ಕಂಡ ಕಥೆ ಅವರ್ಣನೀಯ, ಅತಿ ಸೂಕ್ಷ್ಮ. ಶ್ರೀರಾಮಕೃಷ್ಣರು ಇವುಗಳನ್ನೆಲ್ಲ ಮಾತುಗಳಿಂದ ವಿವರಿಸಲಾಗದ ಒಂದು ಅಲೌಕಿಕ ವಿಧಾನದಲ್ಲಿ ಸಾಧಿಸಿದರು. ನರೇಂದ್ರನ ಹೊರನೋಟದ ಚಡಪಡಿಕೆಯನ್ನು ಮತ್ತು ಅವನ ಬೌದ್ಧಿಕ ಹೋರಾಟವನ್ನು ಮಾತ್ರ ಅವನ ಕೆಲವು ಸ್ನೇಹಿತರು ಸ್ವಲ್ಪಮಟ್ಟಿಗೆ ಗಮನಿಸಲು ಸಮರ್ಥರಾಗಿದ್ದರು. ಆದರೆ ಈ ಅದ್ಭುತ ಮಾರ್ಪಾಡಿನ ಹಿಂದಿರುವ ವಿವರಗಳನ್ನು ಶ್ರೀರಾಮಕೃಷ್ಣರು ಮತ್ತು ಪ್ರಾಯಶಃ ನರೇಂದ್ರ ಮಾತ್ರ ಬಲ್ಲರು.

# ಸಂಕಟಗಳ ಸುಳಿಯಲ್ಲಿ



ಈಗ ನರೇಂದ್ರ ತನ್ನ ಬಿ.ಎ. ಪದವಿಯ ಕೊನೆಯ ವರ್ಷದಲ್ಲಿದ್ದಾನೆ. ಈವರೆಗೂ ಅವನ ಜೀವನಯಾತ್ರೆ ಸುಗಮ-ಸುಖಕರವಾಗಿಯೇ ಸಾಗಿದೆ. ನಾವೀಗಾಗಲೇ ನೋಡಿದಂತೆ, ಯಾವುದಕ್ಕೂ ಕೊರತೆಯಿಲ್ಲದ ಸಂತೃಪ್ತ ಕುಟುಂಬ ಅವನದು. ಅವನ ತಂದೆ ವಿಶ್ವನಾಥ ದತ್ತ ಸಮಾಜದಲ್ಲಿ ತುಂಬ ಪ್ರಭಾವಶಾಲಿ ವ್ಯಕ್ತಿ. ವಕೀಲಿವೃತ್ತಿಯಲ್ಲಿ ಸಾಕಷ್ಟು ಯಶಸ್ಸನ್ನೂ ಧನವನ್ನೂ ಗಳಿಸಿ ಶ್ರೀಮಂತ ಬದುಕನ್ನು ಬಾಳುತ್ತಿದ್ದವನು. ಆದರೆ ಅವನು ಅಷ್ಟೊಂದು ಸಂಪಾದಿಸಿದರೂ ಹತ್ತಾರು ಜನರಿಂದ ಕೂಡಿದ ತನ್ನ ಅವಿಭಕ್ತ ಕುಟುಂಬದ ನಿರ್ವಹಣೆಗಾಗಿ, ಮನೆಯಲ್ಲಿ ಸಂಗೀತ ಕಛೇರಿಗಳನ್ನು ಏರ್ಪಡಿಸುವುದಕ್ಕಾಗಿ, ಸ್ನೇಹಿತರನ್ನು-ಬಂಧುಗಳನ್ನು ಸತ್ಕರಿಸುವುದಕ್ಕಾಗಿ, ಕೇಳಿದವರಿಗೆ ಸಹಾಯಕೊಡುವುದಕ್ಕಾಗಿ ಕೈಬಿಚ್ಚಿ ಖರ್ಚುಮಾಡುತ್ತಿದ್ದ. ಆದ್ದರಿಂದ ಅವನ ಸಂಪಾದನೆಯೆಲ್ಲ ಅಲ್ಲಿಗಲ್ಲಿಗೆ ಸರಿಹೋಗಿಬಿಡುತ್ತಿತ್ತು. ಸಾಲದ್ದಕ್ಕೆ, ಅವನ ಚಿಕ್ಕಪ್ಪನಾದ ಕಾಳೀಪ್ರಸಾದ ದತ್ತ ಕೂಡ ಯಾವ ಉದ್ಯೋಗವನ್ನೂ ಮಾಡದೆ ಅವನ ಮನೆಯಲ್ಲೇ ತಳವೂರಿದ್ದ. ಈತ ಪಿತ್ರಾರ್ಜಿತ ಸಂಪತ್ತನ್ನು ಕರಗಿಸಿ ತಿನ್ನುವುದಲ್ಲದೆ ವಿಶ್ವನಾಥನ ಸಂಪಾದನೆಯಲ್ಲೂ ಒಂದಿಷ್ಟನ್ನು ಕಸಿದುಕೊಳ್ಳುತ್ತಿದ್ದ. ಚಿಕ್ಕಪ್ಪನ ಜೊತೆಯಲ್ಲಿ ಜಗಳವೇಕೆ ಎಂದು ವಿಶ್ವನಾಥ ಅವನು ಕೇಳಿದಷ್ಟನ್ನು ಕೊಟ್ಟುಬಿಡುತ್ತಿದ್ದ.

ತನ್ನ ವ್ಯವಹಾರವನ್ನು ನಿಭಾಯಿಸಲು ವಿಶ್ವನಾಥ ಒಂದು ವಕೀಲಿ ಸಂಸ್ಥೆಯನ್ನು ಕಟ್ಟಿದ್ದ. ಇದರಲ್ಲಿ ಇನ್ನೂ ಕೆಲವು ವಕೀಲರು ಅವನೊಂದಿಗೆ ಪಾಲುದಾರರಾಗಿ ಇದ್ದರು. ಮೊದಮೊದಲು ಇವರೊಳಗಿನ ವ್ಯವಹಾರ ಚೆನ್ನಾಗಿಯೇ ನಡೆಯಿತು. ಆದರೆ ವಿಶ್ವನಾಥನು ಕಾರ್ಯನಿಮಿತ್ತವಾಗಿ ಪರವೂರುಗಳಿಗೆ ಹೋಗಿದ್ದಾಗ ಈ ಪಾಲುದಾರರು ಸಂಸ್ಥೆಯ ಹೆಸರಿನಲ್ಲಿ ಧಾರಾಳವಾಗಿ ಸಾಲಮಾಡಿ ಆ ಹಣವನ್ನೆಲ್ಲ ತಿಂದುಹಾಕಿದರು. ಅವನ ಸಂಸ್ಥೆ ಯಾವ ಕ್ಷಣದಲ್ಲಾದರೂ ದಿವಾಳಿಯೇಳುವ ಸ್ಥಿತಿಗೆ ತಲುಪುತ್ತಿರುವುದು ಬೇರೆ ಯಾರಿಗೂ ಗೊತ್ತಾಗಿರಲಿಲ್ಲ. ಸ್ವತಃ ವಿಶ್ವನಾಥನಿಗೂ ಇದು ಗೊತ್ತಾದದ್ದು ತೀರ ತಡವಾಗಿ. ಅವನ ಮನೆಮುಂದಿಗಂತೂ ಈ ಸಾಲಗಳ ವಿಷಯವೆಲ್ಲ ತಿಳಿದುಬಂದದ್ದು ಅವನು ತೀರಿಕೊಂಡಮೇಲೆಯೇ. ಅವನೊಬ್ಬನ ಸಂಪಾದನೆಯ ಬಲದಿಂದ ಸಂಸಾರ ರಥ ಹೇಗೋ ನಡೆಯುತ್ತಿತ್ತು. ಆದರೆ ಮೇಲ್ನೋಟಕ್ಕೆ ಮಾತ್ರ ಅವರು ಹಿಂದಿನ ಶ್ರೀಮಂತ ಜೀವನವನ್ನೇ ನಡೆಸುತ್ತಿರುವಂತಿತ್ತು. ಆದರೆ ಈ ಮಧ್ಯೆ ದುರ್ಗಾಪ್ರಸಾದನ ಅಲ್ಪಸ್ವಲ್ಪ ಪಿತ್ರಾರ್ಜಿತ ಆಸ್ತಿಯ ಸಲುವಾಗಿ ಜಗಳವೆದ್ದು ಕೊನೆಗೆ ಆ ಮನೆಯನ್ನು ಬಿಟ್ಟು ಹೊರಬರಬೇಕಾಯಿತು. ಈಗ ವಿಶ್ವನಾಥ ತನ್ನ ಹೆಂಡತಿ-ಮಕ್ಕಳೊಂದಿಗೆ ಒಂದು ಬಾಡಿಗೆ ಮನೆಯಲ್ಲಿ ವಾಸಿಸಲಾರಂಭಿಸಿದ.

ಈ ನಡುವೆ ನರೇಂದ್ರ ಎರಡನೆಯ ವರ್ಷದ ಬಿ.ಎ. ತರಗತಿಯಲ್ಲಿ ಓದುತ್ತಿದ್ದಾಗಲೇ ಬಿ.ಎಲ್. ತರಗತಿಗೂ ಸೇರಿಕೊಂಡಿದ್ದ. ಮಗನನ್ನು ಒಬ್ಬ ಸಮರ್ಥ ವಕೀಲನನ್ನಾಗಿ ಮಾಡುವ ಉದ್ದೇಶದಿಂದ ವಿಶ್ವನಾಥ ಅವನನ್ನು ನಿಮಾಯಿಚಂದ್ರ ಬಸು ಎಂಬವನ ವಕೀಲಿ ಸಂಸ್ಥೆಗೆ ಸೇರಿಸಿದ. ಅವನನ್ನು ತನ್ನ ಸಂಸ್ಥೆಯಲ್ಲೇ ಸೇರಿಸಿಕೊಳ್ಳ

ಬಹುದಿತ್ತು; ಆದರೆ ಸ್ವಂತದವರ ಮಾತು–ಮಾರ್ಗದರ್ಶನಗಳಿಗಿಂತ ಇತರರದು ಹೆಚ್ಚು ಪರಿಣಾಮಕಾರಿ ಎಂದು ವಿಶ್ವನಾಥ ಭಾವಿಸಿದನೇನೋ. ನರೇಂದ್ರನನ್ನು ವಕೀಲಿಯಲ್ಲಿ ವಿಶೇಷ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಕಳಿಸುವ ಅಭಿಪ್ರಾಯವೂ ಇತ್ತು. ಇದಕ್ಕೆ ನರೇಂದ್ರನ ಸಮ್ಮತಿಯೂ ಇದ್ದಂತಿತ್ತು. ಆದರೆ ಅಷ್ಟರಲ್ಲೇ ಆಕಸ್ಮಿಕವೊಂದು ಸಂಭವಿಸಿ ಅದರ ಸಾಧ್ಯತೆಯೇ ಇಲ್ಲದಂತಾಯಿತು.

ನರೇಂದ್ರ ಅತ್ತ ಶ್ರೀರಾಮಕೃಷ್ಣರ ಪ್ರಭಾವಕ್ಕೆ ಸಿಲುಕಿ ತೀವ್ರ ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾಗಿದ್ದುದಲ್ಲದೆ, ಇತ್ತ ತಂದೆಯ ಆಶಯಕ್ಕೆ ಅನುಸಾರವಾಗಿ ವಕೀಲಿ ವೃತ್ತಿಯ ಸಾಧನೆಯ ಕಡೆಗೂ ಗಮನ ಕೊಡಲಾರಂಭಿಸಿದ. ಇಷ್ಟರಲ್ಲೇ ವಿಶ್ವನಾಥ ಪ್ರಾಪ್ತವಯಸ್ಕನಾದ ಮಗನಿಗೆ ಮದುವೆ ಮಾಡುವ ಪ್ರಯತ್ನದಲ್ಲಿ ಮತ್ತೆ ತೊಡಗಿದ. ಈ ಹಿಂದೆಯೇ ಮದುವೆಯ ಪ್ರಸ್ತಾಪ ಬಂದಿದ್ದಾಗ ನರೇಂದ್ರ ಅದನ್ನು ಖಡಾಖಂಡಿತವಾಗಿ ತಳ್ಳಿಹಾಕಿದ್ದನ್ನು ನೋಡಿದ್ದೇವೆ. ಆದರೆ ವಿಶ್ವನಾಥ ಆ ವಿಷಯದಲ್ಲಿನ್ನೂ ನಿರಾಶನಾಗಿರಲಿಲ್ಲ. ಮದುವೆಯೊಂದು ಆಗಿಬಿಟ್ಟರೆ ದೋಣಿಗೆ ಲಂಗರು ಹಾಕಿದಂತೆ ಮಗ ಸಂಸಾರದ ಕಡೆ ಗಮನ ಕೊಡುತ್ತ ಮನೆಯಲ್ಲೇ ಇರುವಂತಾಗುತ್ತದೆ, ಹೊಣೆಗಾರಿಕೆಯ ಅರಿವು ಮೂಡುವಂತಾಗುತ್ತದೆ, ಆಗ ಅವನ ಹಾರಾಟಗಳೆಲ್ಲ ತಾನಾಗಿಯೇ ನಿಂತುಹೋಗುತ್ತವೆ ಎಂಬುದು ಅವನ ಆಲೋಚನೆ. ಆದರೆ ನರೇಂದ್ರನ ಪ್ರತಿಭಟನೆಯ ವಿಷಯ ಹಾಗಿರಲಿ, ಅವನ ಮದುವೆಯ ಪ್ರಸ್ತಾಪ ಬಂದಾಗಲೆಲ್ಲ ಯಾವುದೋ ಒಂದು ಅನಿರೀಕ್ಷಿತ ಕಷ್ಟವೋ ಅನನುಕೂಲತೆಯೋ ತಲೆದೋರಿ ಅದು ಅಲ್ಲಿಗೇ ನಿಂತುಹೋಗುತ್ತಿತ್ತು. ಆದರೆ ಇದರಲ್ಲಿ ಅಂತಹ ಆಶ್ಚರ್ಯವೇನಿಲ್ಲ ಎನ್ನಬೇಕು. ಏಕೆಂದರೆ, ಮದುವೆಯ ಪ್ರಸ್ತಾಪವೊಂದು ಬಂದಿದೆ ಎಂದು ಗೊತ್ತಾಗುತ್ತಲೇ ಇತ್ತ ಶ್ರೀರಾಮಕೃಷ್ಣರು ವ್ಯಾಕುಲರಾಗಿ, 'ಅಮ್ಮಾ ಈ ಮದುವೆ ನಡೆಯದಂತೆ ಮಾಡಿಬಿಡು' ಎಂದು ಪ್ರಾರ್ಥಿಸುತ್ತಿದ್ದರು! ಅವರ ಪ್ರಾರ್ಥನೆಗೆ ಜಗನ್ಮಾತೆ ಇಲ್ಲವೆಂದಾಳೆಯೆ? ಶ್ರೀರಾಮಕೃಷ್ಣರ ಈ ವರ್ತನೆಯನ್ನು ಕಂಡು ಸಾಮಾನ್ಯ ಪ್ರಾಪಂಚಿಕರು, 'ಅಲ್ಲ, ಭುವನೇಶ್ವರಿ ದೇವಿ ಪೂಜೆ-ವ್ರತ-ತಪಸ್ಸು ಮಾಡಿ ನರೇಂದ್ರನಂತಹ ಗಂಡುಸಂತಾನವನ್ನು ಪಡೆದರೆ, ಅವಳ ವಂಶಾಭಿವೃದ್ಧಿಗೇ ಕಲ್ಲುಹಾಕುವಂತಹ ಪ್ರಾರ್ಥನೆ ಮಾಡುತ್ತಿದ್ದಾರಲ್ಲ ಇವರು!' ಎಂದುಕೊಳ್ಳಬಹುದು. ಆದರೆ ಶ್ರೀರಾಮಕೃಷ್ಣರಿಗೆ ಚೆನ್ನಾಗಿ ಗೊತ್ತಿತ್ತು—ಯಾರೋ ಒಬ್ಬಳನ್ನು ಮದುವೆ ಮಾಡಿಕೊಂಡು ತನ್ನೆಲ್ಲ ಪ್ರೀತಿಯನ್ನೂ ಅವಳೊಬ್ಬಳಿಗೇ ಸುರಿಯುವುದಕ್ಕಾಗಿ ಹುಟ್ಟಿದವನಲ್ಲ ನರೇಂದ್ರ, ಅಥವಾ ಸಂಸಾರ ಕಟ್ಟಿಕೊಂಡು ಕೇವಲ ಅದರ ಪಾಲನೆ-ಪೋಷಣೆಯಲ್ಲೇ ಜೀವನವನ್ನು ಸವೆಸುವುದಕ್ಕಾಗಿ ಜನ್ಮವೆತ್ತಿದವನಲ್ಲ ಎಂದು. ಅವನು ಅವತರಿಸಿರುವುದು ಜೀವರ ಉದ್ಧಾರಕ್ಕಾಗಿ, ಸಮಸ್ತ ಮಾನವಕೋಟಿಯ ಮೇಲೆ ತನ್ನ ಪ್ರೀತಿಯ ಮಳೆಗರೆಯುವುದಕ್ಕಾಗಿ ಎನ್ನುವುದು ಅವರ ದಿವ್ಯದೃಷ್ಟಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಮದುವೆಯ ಮಾತುಕತೆಗಳು ಬಿದ್ದುಹೋದ ವರ್ತಮಾನ ತಲುಪಿದಾಗಲೆಲ್ಲ ಸಮಾಧಾನದ ನಿಟ್ಟುಸಿರೆಳೆಯುತ್ತಿದ್ದರು. ಆದರೆ ಹೀಗೆ ಎಷ್ಟು ಸಂಬಂಧಗಳು ಕೂಡಿಬರದೆಹೋದರೂ ವಿಶ್ವ ನಾಥ ತಾಳ್ಮೆಗೆಡದೆ ಹೊಸ ಸಂಬಂಧವನ್ನು ಹುಡುಕುತ್ತಿದ್ದ. ಹೀಗೆ ಹೊಸ ಹುರುಪಿನಿಂದ ಹುಡುಕಿ ಕೊನೆಗೊಂದು ಪ್ರಖ್ಯಾತ-ಶ್ರೀಮಂತ ಮನೆತನದ ಸಂಬಂಧವನ್ನು ಏರ್ಪಡಿಸಿದ. ಆ ಹೆಣ್ಣಿನ ಕಡೆಯವರು ಹೇರಳವಾಗಿ ವರದಕ್ಷಿಣೆ ಕೊಡಲು ಮುಂದಾಗಿದ್ದರು.

ಅಲ್ಲದೆ ವರನನ್ನು ಉನ್ನತ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಕಳಿಸುವುದಕ್ಕೂ ಸಿದ್ಧರಿದ್ದರು. ಹಿರಿಯರ ನಡುವೆ ಮಾತುಕತೆ ನಡೆಯಿತು. ಯಾವ ವಿಷಯಕ್ಕೂ ತಕರಾರು ಹುಟ್ಟಿಕೊಳ್ಳಲಿಲ್ಲ. ವಿಶ್ವನಾಥನಿಗೆ ತುಂಬ ಸಮಾಧಾನವಾಯಿತು, ಕೊನೆಗಾದರೂ ಒಂದು ಸರಿಯಾದ ಸಂಬಂಧ ನಿಶ್ಚಯವಾಯಿತಲ್ಲ ಎಂದು. ಆದರೆ ನರೇಂದ್ರ ತಾನು ಮದುವೆಯಾಗುವುದೇ ಇಲ್ಲ ಎಂದು ಹಠಹಿಡಿದ. ಏನಾದರೂ ವಿಶ್ವನಾಥ ಅವನ ಮಾತಿಗೆ ಗಮನಕೊಡಲಿಲ್ಲ. ಹುಡುಗರು ತಮ್ಮ ಪೌರುಷವನ್ನು ತೋರಿಸಿಕೊಳ್ಳಲು ಹಾಗೆಲ್ಲ ಆಡುತ್ತಾರೆ ಎಂದೇ ಭಾವಿಸಿದ್ದ ಆತ. ಈಗ ಪರಿಸ್ಥಿತಿ ಹೇಗೆ ಮುಂದುವರಿಯುತ್ತಿತ್ತೋ ಏನೋ, ಆದರೆ ಕೆಲದಿನಗಳಲ್ಲೇ ವಿಶ್ವನಾಥ ಹಠಾತ್ತಾಗಿ ಹೃದಯಾಘಾತದಿಂದ ಕಾಲವಾದ. ಮದುವೆಯು ಸಂಭವವೇ ಇಲ್ಲವಾಯಿತು. ಆಗಂತೂ ನರೇಂದ್ರ ಸರ್ವತಂತ್ರ ಸ್ವತಂತ್ರನಾದ. ಅವಿವಾಹಿತನಾಗಿ ಉಳಿಯುವ ಅವನ ನಿರ್ಧಾರವನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲವಾಯಿತು. ಆಮೇಲೂ ಮನೆಮಂದಿ ಅವನನ್ನು ಮದುವೆಯಾಗುವಂತೆ ಬಲವಂತಪಡಿಸಿದಾಗ ನರೇಂದ್ರ, "ನೀವೆಲ್ಲ ಸೇರಿ ನನ್ನನ್ನು ಮುಳುಗಿಸಿಬಿಡಬೇಕು ಅಂತ ಆಲೋಚಿಸಿದ್ದೀರೇನು ? ಮದುವೆಯಾಗಿಬಿಟ್ಟರೆ ನನ್ನ ಕಥೆ ಮುಗಿದಹಾಗೆಯೇ !" ಎಂದು ರೇಗಿಬಿಡುತ್ತಿದ್ದ.

ಮುಂದಿನ ವಿಷಯ ಹಾಗಿರಲಿ; ಇನ್ನೂ ಬಿ.ಎ. ಓದುತ್ತಿರುವಾಗಲೇ ಅವನು ಎಷ್ಟೋ ಸಲ ತನ್ನ ಆಪ್ತ ಸ್ನೇಹಿತರ ಮುಂದೆ ಸಂನ್ಯಾಸಜೀವನದ ಘನತೆಯನ್ನು ವರ್ಣಿಸುತ್ತಿದ್ದ; ತಾನೂ ಸಂನ್ಯಾಸಿಯಾಗಲು ಮನಸ್ಸು ಮಾಡಿರುವುದನ್ನು ಸೂಚಿಸುತ್ತಿದ್ದ. ಆದರೆ ಸ್ನೇಹಿತರಿಗೆ ಇದೆಲ್ಲ ಸರಿಕಾಣಲಿಲ್ಲ. ಅವನ ಮೇಲಿನ ವಿಶ್ವಾಸದಿಂದ, "ಏನಪ್ಪ ನರೇನ್, ನೀನೇಕೆ ಒಂದು ವ್ಯವಸ್ಥೆ ಮಾಡಿಕೊಂಡು ನೆಲೆನಿಲ್ಲಬಾರದು ? ನಿನಗೆ ಒಳ್ಳೇ ಭವಿಷ್ಯವಿದೆ. ನೀನು ಮನಸ್ಸು ಮಾಡಿದರೆ ಒಂದು ಒಳ್ಳೆಯ ಹುದ್ದೆಯನ್ನು ಪಡೆದುಕೊಂಡು ಸುಖವಾಗಿರಬಹುದು" ಎಂದು ಬುದ್ಧಿ ಹೇಳಲೆತ್ನಿಸಿದರು. ಆದರೆ ನರೇಂದ್ರ ಈ ಸಲಹೆಗಳನ್ನೆಲ್ಲ ಒಂದೇ ಸಲಕ್ಕೆ ತಿರಸ್ಕರಿಸಿಬಿಟ್ಟ: "ನೋಡಿ, ನಾನೂ ಹಿಂದೆ ಹೆಸರು-ಕೀರ್ತಿ, ಸ್ಥಾನಮಾನ, ಸಂಪತ್ತು-ಅಧಿಕಾರಗಳ ಕನಸು ಕಂಡಿದ್ದೆ. ಆದರೆ ವಿಚಾರ ಮಾಡಿ ನೋಡಿದಂತೆ, ಇಂದಲ್ಲ ನಾಳೆ ಮೃತ್ಯು ಬಂದು ಇವೆಲ್ಲವನ್ನೂ ನುಂಗಿ ನೊಣೆಯುತ್ತದೆ ಅಂತ ಮನವರಿಕೆಯಾಯಿತು. ಎಂದಿದ್ದರೂ ಮೃತ್ಯುವಶವಾಗುವಂಥದನ್ನು ಬೆಳೆಸಿಕೊಂಡು ಏನಾಗಬೇಕು ? ಆದ್ದರಿಂದ ಸಂನ್ಯಾಸಜೀವನವೇ ಶ್ರೇಷ್ಠವಾದದ್ದು. ಏಕೆಂದರೆ, ಮೃತ್ಯುವನ್ನೇ ಬದಿಗೊತ್ತಿ ಅಮರತೆಗೇರುವ ಪ್ರಯತ್ನ ಮಾಡುತ್ತಾನೆ ಸಂನ್ಯಾಸಿ. ಪ್ರಾಪಂಚಿಕರೆಲ್ಲ ಈ ಅನಿತ್ಯವಾದ ಭೋಗಭಾಗ್ಯಗಳ ಹಿಂದೆ ಅಲೆದಾಡಿದರೆ, ಸಂನ್ಯಾಸಿ ನಿತ್ಯಸತ್ಯದೆಡೆಗೆ ಸಾಗುತ್ತಾನೆ."

ಈ ವಾದ ಅವನ ಸ್ನೇಹಿತರಿಗೆ ಅತಿ ವಿಚಿತ್ರವಾಗಿ ತೋರಿತು. ಅವರಲ್ಲೊಬ್ಬ ಹೇಳಿದ—"ಈಗ ಕಷ್ಟ ಏನು ಅಂದರೆ ನರೇಂದ್ರ ಆ ದಕ್ಷಿಣೇಶ್ವರದ ಮುದುಕನ ಸಹವಾಸಕ್ಕೆ ಬಿದ್ದುಬಿಟ್ಟಿದ್ದಾನೆ. ಆ ಮುದುಕನೋ, ಯಾವಾಗಲೂ ದೇವರ ವಿಷಯವಾಗಿಯೇ ಮಾತನಾಡುತ್ತಿರುತ್ತಾನೆ. ಆಗಾಗ ಸಮಾಧಿಗೇರುತ್ತಾನೆ. ಸಂನ್ಯಾಸಜೀವನ ನಡೆಸುತ್ತಿದ್ದಾನೆ. ಅವನಿಗೆ ಈ ಪ್ರಪಂಚದ ಗಂಧವೇ ಇಲ್ಲ. ಆ ಮುದುಕನೇ ನಮ್ಮ ನರೇಂದ್ರನ ಬುದ್ಧಿಯನ್ನು ಪಲ್ಲಟಗೊಳಿಸಿಬಿಟ್ಟಿದ್ದಾನೆ. ಇವನ ತಲೆತಿರುಗಿಸಿ ಭವಿಷ್ಯವನ್ನೆಲ್ಲ ಹಾಳುಮಾಡುತ್ತಿರುವವನು ಅವನೇ. ನರೇನ್, ನಿನಗೇನಾದರೂ ಬುದ್ಧಿ ಗಿದ್ಧಿ

ಇದ್ದರೆ ಅವನ ಬಳಿಗೆ ಹೋಗುವುದನ್ನು ನಿಲ್ಲಿಸಿಬಿಡು. ಇಲ್ಲದೆಹೋದರೆ, ನಿನ್ನ ಭವಿಷ್ಯವೆಲ್ಲ ಹಾಳಾಗಿ ಹೋಗುವುದು ಖಂಡಿತ. ನಿನ್ನಲ್ಲಿ ಒಳ್ಳೇ ಪ್ರತಿಭೆಯಿದೆ, ನೀನು ಮನಸ್ಸು ಮಾಡಿದರೆ ಬೇಕಾದ್ದನ್ನು ಸಾಧಿಸಬಲ್ಲೆ ಕಣೊ! ಸುಮ್ಮನೆ ಅಲ್ಲಿಗೆ ಹೋಗುವುದನ್ನು ಬಿಟ್ಟುಬಿಡು." ಆಗ ನರೇಂದ್ರ ಗಂಭೀರವಾಗಿ ಹೇಳಿದ: "ನೋಡಿ, ನಿಮಗದೆಲ್ಲ ಅರ್ಥವಾಗುವುದಿಲ್ಲ. ನಿಮಗೇ ಏನು, ನನಗೂ ಅರ್ಥವಾಗುತ್ತಿಲ್ಲ!... ಇಲ್ಲ, ನನಗೂ ಅರ್ಥವಾಗುತ್ತಿಲ್ಲ. ಆದರೆ... ಆ ಮುದುಕನನ್ನು, ಆ ಮಹಾತ್ಮನನ್ನು ನಾನು ಪ್ರೀತಿಸುತ್ತೇನೆ." ಇದಕ್ಕೆ ಅವನ ಸ್ನೇಹಿತರು ಏನು ತಾನೆ ಹೇಳಿಯಾರು?

ಮದುವೆಯ ವಿಷಯದಲ್ಲಿ ನರೇಂದ್ರನ ಮೇಲೆ ಮನೆಮಂದಿಯ ಒತ್ತಡ ಹೆಚ್ಚಾಗಿರುವುದು ತಿಳಿದಾಗ ಶ್ರೀರಾಮಕೃಷ್ಣರು ಅವನ ಬಗ್ಗೆ ಕಾತರಗೊಂಡರು. ಕೆಲವು ದಿನಗಳವರೆಗೆ ಅವನು ದಕ್ಷಿಣೇಶ್ವರಕ್ಕೆ ಬರದಿದ್ದರೆ ತಾವೇ ಅವನ ಮನೆಗೆ ಹೋಗಿ ಮಾತನಾಡಿಸುತ್ತಿದ್ದರು. ಅವನಿಗೆ ಧ್ಯಾನಕ್ಕೆ ಹಾಗೂ ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿದಂತೆ ವಿಶೇಷ ಸಲಹೆಗಳನ್ನು ನೀಡುತ್ತಿದ್ದರು. ಎಲ್ಲಿ ಅವನು ತಾಯ್ತಂದೆಯರ, ಬಂಧು-ಬಳಗದವರ ಬಲವಂತಕ್ಕೆ ಮಣಿದು ಮದುವೆಯ ಬಂಧನಕ್ಕೆ ಒಳಗಾಗಿಬಿಡುತ್ತಾನೋ ಎಂದು ಅವರು ಹೆದರಿಬಿಟ್ಟಿದ್ದರು. ಆದ್ದರಿಂದ ಕಠಿಣ ಬ್ರಹ್ಮಚರ್ಯವನ್ನು ಬಿಡದೆ ಪಾಲಿಸಿಕೊಂಡುಬರುವಂತೆ ಪ್ರೋತ್ಸಾಹಿಸಿದರು. ಒಂದು ದಿನ ಅವರೆನ್ನುತ್ತಾರೆ, "ನೋಡು, ಮನುಷ್ಯ ಹನ್ನೆರಡು ವರ್ಷಗಳವರೆಗೆ ಕಟ್ಟುನಿಟ್ಟಾದ ಬ್ರಹ್ಮಚರ್ಯವನ್ನು ಪಾಲಿಸಿದ್ದೇ ಆದರೆ ಅವನಲ್ಲೊಂದು ಸೂಕ್ಷ್ಮ ಶಕ್ತಿ ಬೆಳೆಯುತ್ತದೆ. ಸಾಧಾರಣ ಬುದ್ಧಿವಂತಿಕೆಯಿಂದ ಗ್ರಹಿಸಲಾಗದ ಗಹನ ವಿಚಾರಗಳನ್ನೂ ಅವನು ಈ ಶಕ್ತಿಯಿಂದ ಯಥಾವತ್ತಾಗಿ ಗ್ರಹಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಈ ಶಕ್ತಿಯ ಸಹಾಯದಿಂದ ಅವನು ಭಗವಂತನ ಪ್ರತ್ಯಕ್ಷ ದರ್ಶನ ಮಾಡಲೂ ಸಮರ್ಥನಾಗುತ್ತಾನೆ. ಅವನ ಪರಿಶುದ್ಧ ಗ್ರಹಣಸಾಮರ್ಥ್ಯವೇ ಅವನನ್ನು ಭಗವತ್ಸಾಕ್ಷಾತ್ಕಾರಕ್ಕೆ ಅರ್ಹನನ್ನಾಗಿ ಮಾಡುತ್ತದೆ." ನಿಜಕ್ಕೂ ಅವರು ನರೇಂದ್ರನಿಗೆ ಬ್ರಹ್ಮಚರ್ಯದ ಪಾಠವನ್ನು ಹೊಸದಾಗಿ ಹೇಳಿಕೊಡಬೇಕಾದ ಅಗತ್ಯವೇನೂ ಇರಲಿಲ್ಲ. ಏಕೆಂದರೆ, ನಾವು ನೋಡಿದಂತೆ ಅವನು ಮೊದಲಿನಿಂದಲೂ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದವನೇ. ಆದರೆ ಅವನೀಗ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಬೇರೆಯವರ ಬಲವಂತದಿಂದಾಗಿ ಎಲ್ಲಿ ಮದುವೆಯ ಬಂಧನಕ್ಕೆ ಸಿಲುಕಿಕೊಂಡುಬಿಟ್ಟಾನೋ ಎಂಬ ಬಾಲಸಹಜ ಭೀತಿಯಿಂದ ಶ್ರೀರಾಮಕೃಷ್ಣರು ಇದನ್ನೆಲ್ಲ ಹೇಳುತ್ತಿದ್ದರಷ್ಟೆ.

ಯಾವಾಗ ನರೇಂದ್ರ 'ಮದುವೆ ಬೇಡ, ಸಂನ್ಯಾಸಿಯಾಗುತ್ತೇನೆ' ಎಂದು ಹಠಹಿಡಿದು ಕುಳಿತುಬಿಟ್ಟನೋ ಆಗ ಮನೆಯವರ ಮನಸ್ಸಿನಲ್ಲಿ ಶ್ರೀರಾಮಕೃಷ್ಣರ ಬಗ್ಗೆ ಸಂಶಯದ ಮೊಳಕೆ ಕಾಣಿಸಿಕೊಂಡಿತು. ಅವರ ಪ್ರಭಾವಕ್ಕೆ ಒಳಗಾಗಿರುವುದರಿಂದಲೇ ಈಗ ಇವನು ಮದುವೆಯಾಗುವುದಿಲ್ಲ ಎನ್ನುತ್ತಿರುವುದು ಎಂದು ಅರ್ಥೈಸಿದರು. ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನ ಮನೆಗೆ ಬಂದು, ಅವನ ಕೋಣೆಯಲ್ಲಿ ವೈಯಕ್ತಿಕವಾಗಿ ಮಾತನಾಡುತ್ತಿದ್ದಾರೆ; ಆಜೀವ ಬ್ರಹ್ಮಚರ್ಯಪಾಲನೆಯ ಬಗ್ಗೆ ಬೋಧಿಸುತ್ತಿದ್ದಾರೆ. ಆಗ ಅವನ ಅಜ್ಜಿ ಮರೆಯಲ್ಲಿ ನಿಂತು ಅವರ ಸಂಭಾಷಣೆಯನ್ನೆಲ್ಲ ಕೇಳಿಸಿಕೊಂಡು ನರೇಂದ್ರನ ತಾಯ್ತಂದೆಯರ ಹತ್ತಿರ ವರದಿ ಮಾಡಿಬಿಟ್ಟಳು. ಅಂದಿನಿಂದ, ಅವನಿಗೆ ಸಾಧ್ಯವಾದಷ್ಟು ಬೇಗನೆ ಮದುವೆ ಮಾಡಿಬಿಡುವ ಪ್ರಯತ್ನ ಆರಂಭ

ವಾಯಿತು. ಆದರೆ ಹಿಂದೆ ಹೇಳಿದಂತೆ, ಮತ್ತೆಮತ್ತೆ ಮದುವೆ ಪ್ರಯತ್ನ ಮಾಡಿದಾಗಲೂ ಎಲ್ಲ ನಿಶ್ಚಯವಾದ ಮೇಲೆ ಯಾವುದೋ ಒಂದು ಕ್ಷುಲ್ಲಕ ಕಾರಣದಿಂದ ಎಲ್ಲ ಬಿದ್ದುಹೋಗುತ್ತಿತ್ತು.

ಈ ವೇಳೆಗೆ, ಎಂದರೆ ೧೮೮೪ರ ಪ್ರಾರಂಭದಲ್ಲಿ, ನರೇಂದ್ರನಿಗೆ ಜಗತ್ತಿನ ಘೋರ ವಾಸ್ತವಿಕತೆಯನ್ನು ಮುಖಾಮುಖಿಯಾಗಿ ಎದುರಿಸಬೇಕಾದ ಸಂದರ್ಭ ಒದಗಿಬಂತು. ಅವನ ಉಲ್ಲಾಸಮಯ ಸ್ವಭಾವಕ್ಕೆ, ನಿಶ್ಚಿಂತೆಯ ಲಘು ಪ್ರಕೃತಿಗೆ ದೊಡ್ಡ ಹೊಡೆತ ಬಿತ್ತು. ಅಂದು ಫೆಬ್ರವರಿ ೨೫; ಬಾರಾನಾಗೋರಿನ ತನ್ನ ಸ್ನೇಹಿತನೊಬ್ಬನ ಕೋರಿಕೆಯಂತೆ ಆಹ್ವಾನಿತರೆದುರು ಭಕ್ತಿಸಂಗೀತವನ್ನು ಹಾಡಲು ನರೇಂದ್ರ ಹೋಗಿದ್ದ. ಕಾರ್ಯಕ್ರಮ ಮುಗಿದ ಮೇಲೆ ರಾತ್ರಿಯ ಭೋಜನ ಮುಗಿಸಿಕೊಂಡು ಎಲ್ಲರೂ ಅಲ್ಲೇ ವಿಶ್ರಮಿಸುತ್ತಿದ್ದರು. ರಾತ್ರಿ ಎರಡು ಗಂಟೆಗೆ ನರೇಂದ್ರನಿಗೊಂದು ದಾರುಣ ವಾರ್ತೆ ಬಂತು–ಆತನ ತಂದೆ ಹೃದಯಾಘಾತದಿಂದ ತೀರಿಕೊಂಡರು ಎಂದು. ಅದನ್ನು ಕೇಳಿ ಅವನ ಕೈಕಾಲೇ ಆಡಲಿಲ್ಲ. ಹೇಗೋಮಾಡಿ ಮನೆಗೆ ಧಾವಿಸಿದ. ಅಷ್ಟು ಹೊತ್ತಿಗೆ ಎಲ್ಲ ಮುಗಿದುಹೋಗಿತ್ತು—ವಿಶ್ವನಾಥನ ಶರೀರವನ್ನು ಸ್ಮಶಾನಕ್ಕೊಯ್ಯಲು ಸಿದ್ಧತೆ ನಡೆಯುತ್ತಿತ್ತು. ತಾಯಿ, ಸೋದರಸೋದರಿಯರೆಲ್ಲರೂ ರೋದಿಸುತ್ತಿದ್ದರು. ಒಂದು ತಿಂಗಳ ಹಿಂದೆಯೇ ವಿಶ್ವನಾಥನಿಗೆ ಒಮ್ಮೆ ಹೃದಯಾಘಾತವಾಗಿದ್ದು, ಆಗಿನಿಂದ ವಿಶ್ರಾಂತಿಯಲ್ಲಿದ್ದ. ಆದರೆ ಅವನು ಇದ್ದಕ್ಕಿದ್ದಂತೆ ಹೀಗೆ ತೀರಿಕೊಂಡಾನೆಂಬ ಕಲ್ಪನೆಯೇ ನರೇಂದ್ರನ ಮನಸ್ಸಿಗೆ ಬಂದಿರಲಿಲ್ಲ ಎಂದು ತೋರುತ್ತದೆ. ಅವನೀಗ ದಿಕ್ಕುತೋಚದೆ ಅಳಲೂ ಆರದೆ, ಮಾತನಾಡಲೂ ಆರದೆ ನಿಂತುಬಿಟ್ಟ. ಬಳಿಕ ಕಣ್ಣೀರ ಕೋಡಿ ಹರಿಯಿತು. ಅವನೇ ಹಿರಿಯ ಮಗನಾದ್ದರಿಂದ ಉತ್ತರಕ್ರಿಯೆಗಳನ್ನೆಲ್ಲ ನೆರವೇರಿಸಿದ.

ವಿಶ್ವನಾಥನ ಹಠಾತ್ ನಿಧನದಿಂದ ಅವನ ಸಂಸಾರ ಅತ್ಯಂತ ಅಸಹಾಯಕ ಪರಿಸ್ಥಿತಿಗೆ ಸಿಕ್ಕಿಕೊಂಡಿತು. ಅವನ ಸಾವಿಗಾಗಿ ಶೋಕಿಸುತ್ತ ಕುಳಿತಿರಲೂ ಮನೆಮಂದಿಗೆ ಅವಕಾಶವಾಗಲಿಲ್ಲ—ಅಷ್ಟರಲ್ಲಿಯೇ ಕಷ್ಟಕೋಟಲೆಗಳೆಲ್ಲ ರಣಹದ್ದುಗಳಂತೆ ಮುತ್ತಿದುವು. ವಿಶ್ವನಾಥ ತೀರಿಕೊಂಡನೆಂಬ ಸುದ್ದಿ ಕೇಳಿದ ಕೂಡಲೆ ಸಾಲಗಾರರೆಲ್ಲ ಮನೆ ಬಾಗಿಲು ತಟ್ಟಲಾರಂಭಿಸಿದರು. ಏಳೆಂಟು ಜನರ ಸಂಸಾರ. ಅವರಲ್ಲಿ ನರೇಂದ್ರನೊಬ್ಬನೇ ಕೆಲಸ ಮಾಡಬಲ್ಲ ಗಂಡುಮಗ. ಅವನಿಗೋ ಇನ್ನೂ ಯಾವ ಉದ್ಯೋಗವೂ ಇಲ್ಲ. ಆದ್ದರಿಂದ ಮನೆಗೆ ಬೇರೆ ವರಮಾನವೇ ಇರಲಿಲ್ಲ. ಈಗ ನರೇಂದ್ರನೇ ಅವರಿಗೆಲ್ಲ ಅನ್ನ ಕಾಣಿಸಬೇಕು. ಕಷ್ಟದ ದಿನಗಳು ಕಾಲಿಟ್ಟುವು. ನರೇಂದ್ರ ಶ್ರೀಮಂತಿಕೆಯ ಸುಪ್ಪತ್ತಿಗೆಯಿಂದ ಇದ್ದಕ್ಕಿದ್ದಂತೆ ಬಡತನದ ಬವಣೆಯೊಳಗೆ ಬಿದ್ದ. ಕಷ್ಟಗಳ ಕಾರ್ಮೋಡಗಳು ಎಷ್ಟು ದಟ್ಟವಾಗಿ ಕವಿದುಕೊಂಡಿದ್ದುವೆಂದರೆ, ಇನ್ನು ಬೆಳಕು ಕಾಣಲು ಸಾಧ್ಯವೇ ಇಲ್ಲವೇನೋ ಎಂಬಂತೆ ಕಂಡುಬರುತ್ತಿತ್ತು. ಆದರೆ ನರೇಂದ್ರ ಗಂಡುಗಲಿ. ಈ ದುರದೃಷ್ಟ ಪರಂಪರೆಯನ್ನು ಧೈರ್ಯದಿಂದ, ಅಂತಸ್ಸತ್ವದಿಂದ, ಸಾಮರ್ಥ್ಯದಿಂದ ಎದುರಿಸಿದ. ಅವನು ತನಗೆ ತಾನೇ ಪ್ರಭು. ಸಂಕಟಗಳ ಒತ್ತಡಕ್ಕೆ ಸಿಲುಕಿ ದಾಸನಾಗಿ ದೀನನಾಗುವವನಲ್ಲ. ಆದರೆ ನಿಜಕ್ಕೂ ಅವನಿಗೀಗ ಬಂದ ಪರಿಸ್ಥಿತಿ ಅದೆಷ್ಟು ಘೋರ! ಅವನೀಗ ಬಿ.ಎಲ್. ಪರೀಕ್ಷೆಗಾಗಿ ಓದುತ್ತಿದ್ದಾನೆ. ಅವನ ಕಾಲೇಜಿನಲ್ಲಿ ಈಗ ಅತಿ ಬಡವನೆಂದರೆ ಅವನೇ! ಕಾಲಿಗೆ ಒಂದು ಜೊತೆ ಸರಿಯಾದ ಪಾದರಕ್ಷೆಯೂ ಇಲ್ಲ. ತೊಡಲು ಅತ್ಯಂತ ಸಾಮಾನ್ಯವಾದ ಒರಟು ಬಟ್ಟೆಗಳು.

ಎಷ್ಟೋ ಸಲ ಅವನು ಕಾಲೇಜಿಗೆ ಊಟವಿಲ್ಲದೆ ಬರಿಹೊಟ್ಟೆಯಲ್ಲಿ ಹೋಗಬೇಕಾಯಿತು. ಆಗಾಗ ಹಸಿವು ತಾಳಲಾರದೆ ಬಸವಳಿದು ತಲೆಸುತ್ತಿ ಬಂದು ಬಿದ್ದದ್ದೂ ಉಂಟು! ಕೆಲವೊಮ್ಮೆ ಅವನು ಸ್ನೇಹಿತರ ಆಹ್ವಾನದ ಮೇರೆಗೆ ಅವರ ಮನೆಗಳಿಗೆ ಹೋಗುತ್ತಿದ್ದ. ಅವರೊಂದಿಗೆ ಸಂತೋಷವಾಗಿ ಗಂಟೆಗಟ್ಟಲೆ ಮಾತನಾಡುತ್ತಿದ್ದ. ಅವರು ಒಮ್ಮೊಮ್ಮೆ ಅವನನ್ನು ಊಟಕ್ಕೇಳುವಂತೆ ಹೇಳುತ್ತಿದ್ದರು. ಆದರೆ ಅವನಿಗೆ ತಕ್ಷಣ ತನ್ನ ಮನೆಯಲ್ಲಿನ ನಿರ್ಗತಿಕ ದಾರುಣ ಚಿತ್ರ ಕಣ್ಮುಂದೆ ಕಟ್ಟುತ್ತಿತ್ತು. ಮನೆಯವರೆಲ್ಲ ಅಲ್ಲಿ ಗಂಜಿ ಕುಡಿಯುತ್ತಿರುವಾಗ ತಾನಿಲ್ಲಿ ಪುಷ್ಕಳವಾಗಿ ಊಟ ಮಾಡಲೆ. . . 'ಇಲ್ಲ ಇಲ್ಲ. ನನಗೆ ಯಾವುದೋ ಒಂದು ತ್ವರಿತದ ಕೆಲಸವಿದೆ' ಎಂದು ಹೇಳಿ ಅಲ್ಲಿಂದ ಹೊರಟುಬಿಡುತ್ತಿದ್ದ. ಮನೆಯಲ್ಲೂ ಸಾಧ್ಯವಾದಷ್ಟು ಕಡಿಮೆ ಊಟ ಮಾಡುತ್ತಿದ್ದ—ಇತರರಾದರೂ ಸ್ವಲ್ಪ ಹೆಚ್ಚಾಗಿ ಉಣ್ಣಲಿ ಎಂಬ ಉದ್ದೇಶದಿಂದ. ಇನ್ನು ಕೆಲವೊಮ್ಮೆ ತಾಯಿ ಅವನನ್ನು ಊಟಕ್ಕೆ ಕರೆದರೆ, "ನನ್ನ ಊಟ ಆಗಿದೆಯಮ್ಮ; ಇವೊತ್ತು ನನಗೆ ಸ್ನೇಹಿತನ ಮನೆಯಲ್ಲಿ ಊಟ ಆಯಿತು. ನೀವೆಲ್ಲ ಊಟ ಮಾಡಿ" ಎಂದು ಸುಳ್ಳು ಹೇಳಿ ಉಪವಾಸವಿದ್ದುಬಿಡುತ್ತಿದ್ದ! ಅದೂ, ತಾನು ನಿಜಕ್ಕೂ ಊಟ ಮಾಡಿದವನಂತೆ ಗೆಲುವಿನ ಮುಖದಿಂದಲೇ ಹೇಳುತ್ತಿದ್ದ. ಅವನು ಹೇಳುತ್ತಿರುವುದು ಸುಳ್ಳೆಂದು ಯಾರಿಗೂ ತಿಳಿಯುತ್ತಿರಲಿಲ್ಲ. ತನಗೊದಗಿದ ದುಃಖ-ದಾರಿದ್ರ್ಯಗಳನ್ನು ಅವನು ಹಗುರವಾಗಿ ಭಾವಿಸಿ ಕಡೆಗಣಿಸಲು ಪ್ರಯತ್ನಿಸುತ್ತಿದ್ದ. ಅವನು ಮಾತ್ರವಲ್ಲ, ಮನೆಯವರೆಲ್ಲರೂ ತಮ್ಮ ದಾರಿದ್ರ್ಯವನ್ನು ಜನರ ಕಣ್ಣಿನಿಂದ ಮರೆಮಾಚುತ್ತಿದ್ದರು. ಎಷ್ಟಾದರೂ ಅವರದು ಶ್ರೀಮಂತ, ಗೌರವಾನ್ವಿತ ದತ್ತ ವಂಶವಲ್ಲವೆ?

ಎಷ್ಟೋ ಸಲ ಮನೆಯಲ್ಲಿ ಎಲ್ಲರಿಗೂ ಸಾಕಾಗುವಷ್ಟು ಅಕ್ಕಿ ಬೇಳೆ ಮುಂತಾದ ಅಡಿಗೆ ಪದಾರ್ಥಗಳು ಇರುತ್ತಿರಲಿಲ್ಲ; ಕೈಯೂ ಬರಿದಾಗಿರುತ್ತಿತ್ತು. ಆಗ ನರೇಂದ್ರ ತಾಯಿಗೆ ಹೇಳುತ್ತಿದ್ದ—'ಇಂದು ನನ್ನ ಸ್ನೇಹಿತರು ಊಟಕ್ಕೆ ಕರೆದಿದ್ದಾರೆ. ನಾನು ಅಲ್ಲಿಗೆ ಹೋಗುತ್ತಿದ್ದೇನೆ' ಎಂದು. ಹೀಗೆ ಸುಳ್ಳು ಹೇಳಿ ದಿನವೆಲ್ಲ ಊಟವಿಲ್ಲದೆ ಇದ್ದುಬಿಡುತ್ತಿದ್ದ! ಅಭಿಮಾನಿಯಾದ ನರೇಂದ್ರ ಯಾರ ಮುಂದೆಯೂ ಅದನ್ನೆಲ್ಲ ಹೇಳಿಕೊಳ್ಳುತ್ತಲೂ ಇರಲಿಲ್ಲ. ಅವನ ಶ್ರೀಮಂತ ಸ್ನೇಹಿತರು ಅವನನ್ನು ಹಾಡುವುದಕ್ಕಾಗಿ ತಮ್ಮ ಮನೆಗೋ ಉದ್ಯಾನವನಕ್ಕೋ ಆಮಂತ್ರಿಸುತ್ತಿದ್ದರು. ತಪ್ಪಿಸಿಕೊಳ್ಳಲು ಬೇರೆ ದಾರಿ ಸಿಗದಂತಾದಾಗ ಒಪ್ಪಿಕೊಳ್ಳುತ್ತಿದ್ದ. ಆದರೆ ತಾನು ಎಂತಹ ಪರಿಸ್ಥಿತಿಯಲ್ಲಿದ್ದೇನೆ ಎಂಬುದನ್ನು ನರೇಂದ್ರ ತಾನಾಗಿ ಹೇಳಿದವನೂ ಅಲ್ಲ, ಆ ಸ್ನೇಹಿತರು ಕೂಡ ಕೇಳಿ ತಿಳಿದುಕೊಳ್ಳುವವರೂ ಅಲ್ಲ. ಆದರೂ ಅವರಲ್ಲಿ ಒಬ್ಬೊಬ್ಬರು ಕೆಲವೊಮ್ಮೆ ಅವನನ್ನು ಕೇಳುವುದಿತ್ತು, 'ಏನು, ಇವೊತ್ತು ಸ್ವಲ್ಪ ಸುಸ್ತಾದ ಹಾಗೆ ಕಾಣುತ್ತೀಯಲ್ಲ ಏಕೆ?' ಎಂದು. ಈ ಸ್ನೇಹಿತರಲ್ಲಿ ಒಬ್ಬ ಮಾತ್ರ ನರೇಂದ್ರನ ಪರಿಸ್ಥಿತಿಯನ್ನು ಹೇಗೋ ತಿಳಿದುಕೊಂಡುಬಿಟ್ಟಿದ್ದ. ಅವನು ಅಜ್ಞಾತವಾಗಿ ನರೇಂದ್ರನ ತಾಯಿಗೆ ಆಗಾಗ ಹಣ ಕಳಿಸುತ್ತಿದ್ದ. ಇದನ್ನು ತಿಳಿದ ನರೇಂದ್ರ ಮುಂದೆ ಹೇಳುತ್ತಾನೆ—'ಅವನ ಈ ಉಪಕಾರಕ್ಕಾಗಿ ನಾನು ಅವನಿಗೆ ಎಂದೆಂದಿಗೂ ಕೃತಜ್ಞನಾಗಿದ್ದೇನೆ' ಎಂದು.

ನರೇಂದ್ರನ ಸ್ನೇಹಿತರಲ್ಲಿ ಎಷ್ಟೋ ಜನ ಶ್ರೀಮಂತರು. ಅವರಿಗೆ ಆತನ ಬಡತನ ಹೊರನೋಟಕ್ಕೆ ಕಾಣುತ್ತಿರಲಿಲ್ಲ. ಕೆಲವೊಮ್ಮೆ ಅವರು ತಮ್ಮ ಭರ್ಜರಿ ಕುದುರೆ ಸಾರೋಟುಗಳಲ್ಲಿ ಅವನ ಮನೆಗೆ ಬಂದು ಅವನನ್ನು ವಾಯುವಿಹಾರಕ್ಕೋ, ಸಣ್ಣಪುಟ್ಟ

ಪ್ರವಾಸಗಳಿಗೋ ಕರೆಯುತ್ತಿದ್ದರು. ನರೇಂದ್ರ ಸ್ವಲ್ಪವೂ ಸಂಶಯಕ್ಕೆ ಆಸ್ಪದ ಕೊಡದೆ ನಗುನಗುತ್ತ ಅವರ ಜೊತೆ ಹೊರಟುಬಿಡುತ್ತಿದ್ದ. ಆದರೆ ಅವನ ಶರೀರ ಸೊರಗಿ ಹೋಗಿರುವುದು ಸ್ಪಷ್ಟವಾಗಿ ಕಾಣುತ್ತಿದೆಯಲ್ಲ! ಬಡತನವೇ ಇದಕ್ಕೆ ಕಾರಣವೆಂದು ಅವನ ಸ್ನೇಹಿತರಿಗೆ ತೋಚಲೇ ಇಲ್ಲ. ಬಹುಶಃ ತಂದೆಯ ಸಾವಿನ ದುಃಖದಿಂದ ಕೊರಗುತ್ತಿರಬೇಕು ಎಂದು ಭಾವಿಸಿ ಅವರು ಸುಮ್ಮನಾಗಿಬಿಟ್ಟರು. ನಿಜವಾದ ಆಧ್ಯಾತ್ಮಿಕ ಸಾಧನೆಯೆಂಬುದು, ಅಂತಸ್ಸತ್ತ್ವವೆಂಬುದು ಜೀವನದಲ್ಲಿ ವಿಶೇಷವಾಗಿ ನೆರವಿಗೆ ಬರುವುದು ಇಲ್ಲಿಯೇ. ಅವುಗಳ ಪ್ರಾಮುಖ್ಯತೆ ಅರ್ಥವಾಗುವುದು ಇಂತಹ ಸನ್ನಿವೇಶ ಗಳಲ್ಲಿಯೇ. ಕಷ್ಟಸಂಕಟಗಳು ಪ್ರಾಪ್ತವಾದಾಗ ಧೃತಿಗೆಡದೆ ಸಹಿಸಿಕೊಳ್ಳಲು ಹಾಗೂ ಜೋಲುಮೋರೆ ಹಾಕಿಕೊಳ್ಳದೆ ಹರ್ಷಚಿತ್ತದಿಂದಿರಲು ಈ ಆಧ್ಯಾತ್ಮಿಕ ದೃಷ್ಟಿ ನೆರವಾಗು ತ್ತದೆ. ಜೀವನದಲ್ಲಿ ಕಷ್ಟಸಂಕಟಗಳು ಎಲ್ಲರಿಗೂ ಬರುತ್ತವೆ—ಆಧ್ಯಾತ್ಮಿಕ ವ್ಯಕ್ತಿಗಳಿಗೂ ಬರುತ್ತವೆ, ಪ್ರಾಪಂಚಿಕರಿಗೂ ಬರುತ್ತವೆ. ಆದರೆ ನಿಜವಾದ ಆಧ್ಯಾತ್ಮಿಕರು ಸಹಿಸಿಕೊಳ್ಳು ತ್ತಾರೆ, ಪ್ರಾಪಂಚಿಕರು ವಿಲಿವಿಲಿ ಒದ್ದಾಡುತ್ತಾರೆ.

ನಿಜಕ್ಕೂ ನರೇಂದ್ರನಿಗೆ ಒದಗಿಬಂದ ಕಷ್ಟಸಂಕಟಗಳು ಸಾಮಾನ್ಯವಾದವುಗಳಲ್ಲ. ತಂದೆಯ ಮರಣವೊಂದೇ ಆಗಿದ್ದರೆ ಕೆಲಕಾಲದಲ್ಲೇ ಮರೆಯಬಹುದಾಗಿತ್ತು. ಆದರೆ ಕಿತ್ತುತಿನ್ನುವ ದಾರಿದ್ರ್ಯ ಪ್ರಾಪ್ತವಾಗಿದೆ. ಅಂಥ ನಿರಾತಂಕದ, ವೈಭೋಗದ ಜೀವನ ನಡೆಸಿದವರಿಗೆ ಇದ್ದಕ್ಕಿದ್ದಂತೆ ಈ ದುರ್ಗತಿ! ಇಂಥದನ್ನು ಸಹಿಸುವುದಾಗಲಿ ಕಡೆಗಣಿ ಸುವುದಾಗಲಿ ಸಾಧ್ಯವೆ? ದಿನಬೆಳಗಾದರೆ ದಾರಿದ್ರ್ಯ ತನ್ನ ಕ್ರೂರ ಮುಖವನ್ನು ತೋರಿಸಿ ಅಣಕಿಸುತ್ತಿದೆ. ಇವೆಲ್ಲ ಸಾಲದೆಂಬಂತೆ ಈಗ ಇನ್ನೊಂದು ಕಷ್ಟ ಅಂಟಿಕೊಂಡು ಬಂತು. ವಿಶ್ವನಾಥನಿಂದ ನಾನಾ ಬಗೆಯ ಸಹಾಯ ಪಡೆದ ಅವನ ಸ್ವಂತ ಸಂಬಂಧಿಗಳೇ ಈಗ ಆಸ್ತಿಗಾಗಿ ತಿರುಗಿಬಿದ್ದರು. ಅವನ ಮನೆಯನ್ನು ಕಸಿದುಕೊಳ್ಳುವ ಉದ್ದೇಶದಿಂದ ಯಾವುದೋ ಆಧಾರದ ಮೇಲೆ ನ್ಯಾಯಾಲಯಕ್ಕೆ ಹೋದರು. ನಾವೀಗಾಗಲೇ ನೋಡಿದಂತೆ, ಈಚೆಗೆ ಕೆಲತಿಂಗಳಿನಿಂದ ವಿಶ್ವನಾಥನೂ ಅವನ ಮನೆಮಂದಿಯೂ ಈ ವ್ಯಾಜ್ಯದ ಕಾರಣದಿಂದ ಬೇರೊಂದು ಬಾಡಿಗೆ ಮನೆಯಲ್ಲಿ ವಾಸವಾಗಿದ್ದರು. ತನ್ನ ತಂದೆ ತೀರಿಹೋದ ಮೇಲೂ ನರೇಂದ್ರ ಕೆಲದಿನಗಳವರೆಗೆ ಈ ಮನೆಯಲ್ಲಿಯೇ ಇದ್ದ. ಆದರೆ ಬಾಡಿಗೆಯನ್ನೂ ಕೊಡಲಾಗದಂತಾದಾಗ ತನ್ನ ಅಜ್ಜಿಯ ಮನೆಗೆ ಹೋಗಿರ ಬೇಕಾಯಿತು. ಇತ್ತ ಅವರ ಸ್ವಂತ ಮನೆಯ ಕೋರ್ಟು ವ್ಯವಹಾರ ವರ್ಷಗಟ್ಟಲೆ ನಡೆಯಿತು. ತಮ್ಮ ಸಂಸಾರದ ವ್ಯವಹಾರವೆಲ್ಲ ಸಾರ್ವಜನಿಕ ವಿಷಯವಾಯಿತಲ್ಲ ಎಂದು ಭುವನೇಶ್ವರಿ ತುಂಬ ನೊಂದುಕೊಂಡಳು. ಈ ಜಗಳವನ್ನು ತಮ್ಮತಮ್ಮೊಳಗೇ ಶಾಂತವಾಗಿ ಬಗೆಹರಿಸಿಕೊಳ್ಳುವ ಪ್ರಯತ್ನ ಮಾಡಿದಳು. ಆದರೆ ಕಾಳೀಪ್ರಸಾದನ ಹೆಂಡತಿ ಹೊಂದಾಣಿಕೆಗೆ ಒಪ್ಪಲಿಲ್ಲ. ಅಂತೂ ನರೇಂದ್ರ ಕೋರ್ಟಿಗೆ ಹೋಗಬೇಕಾ ಯಿತು. ವರ್ಷಗಟ್ಟಲೆ ಅಲೆದಾಡಬೇಕಾಯಿತು. ಈ ಸಂದರ್ಭದಲ್ಲಿ ಅವನು ವಕೀಲಿ ಅಭ್ಯಾಸ ಮಾಡುತ್ತಿದ್ದ ಸಂಸ್ಥೆಯ ನಿಮಾಯಿಚಂದ್ರ ಮತ್ತು ಬ್ಯಾನರ್ಜಿ ಎಂಬವರು ತುಂಬ ನೆರವಿಗೆ ಬಂದರು. ಅಲ್ಲದೆ ನರೇಂದ್ರ ಕೂಡ ಈ ವಾದದಲ್ಲಿ ತನ್ನ ವಕೀಲಿಕೆಯ ಪ್ರತಿಭೆಯನ್ನು ತೋರಿಸಿದ. ಇದನ್ನು ಕಂಡು ಪ್ರತಿವಾದಿಗಳ ಕಡೆಯವನಾದ ಬ್ರಿಟಿಷ್ ವಕೀಲ ಕೂಡ ಹೃತ್ಪೂರ್ವಕವಾಗಿ ಮೆಚ್ಚಿಕೊಂಡ. ಅಂತೂ ಕೆಲವರ್ಷಗಳೇ ಕಳೆದಮೇಲೆ ನರೇಂದ್ರನ ಮನೆಮಂದಿಗೆ ನ್ಯಾಯ ಸಿಕ್ಕಿತು; ಅವನ ಪಾಲಿಗೆ ಬರಬೇಕಾದ ಆಸ್ತಿ-ಮನೆ

ಸಿಕ್ಕಿತು, ಅವನ ತಾಯಿಯೂ ಸೋದರ ಸೋದರಿಯರೂ ಮತ್ತೆ ಆ ಮನೆಯಲ್ಲಿ ವಾಸಿಸಲಾರಂಭಿಸಿದರು. ಅಷ್ಟು ಹೊತ್ತಿಗೆ ಬಂಧುಗಳ ಕಿರಿಕಿರಿಯೂ ಕಡಿಮೆಯಾಗಿತ್ತು. (ಆ ವೇಳೆಗೆ ನರೇಂದ್ರ ಸಂನ್ಯಾಸಿಯಾಗಿ ಹೊರಟುಬಿಟ್ಟಿದ್ದ.) ಆದರೆ ಅಲ್ಲಿಯವರೆಗೂ ಅವರು ಅನುಭವಿಸಿದ್ದು ಸಾಧಾರಣ ಕಷ್ಟಗಳನ್ನಲ್ಲ. ಹಲವಾರು ವರ್ಷಗಳವರೆಗೆ ಅನ್ನಬಟ್ಟೆಗೂ ಪರದಾಡುವ ಪರಿಸ್ಥಿತಿಯಿತ್ತು. ನರೇಂದ್ರ ಮನೆಯವರೆಲ್ಲರಿಗೂ ಒಂದು ತುತ್ತು ಅನ್ನದ ವ್ಯವಸ್ಥೆ ಮಾಡಲು ಹೋರಾಡಿದ. ಆದರೆ ಅಷ್ಟು ಬುದ್ಧಿವಂತ, ವಿದ್ಯಾವಂತ, ಲಕ್ಷಣವಂತನಾದ ನರೇಂದ್ರನಿಗೂ ಒಂದು ಸರಿಯಾದ ಕೆಲಸ ಸಿಗಲೇ ಇಲ್ಲ. ಹೇಗೋ ಮಾಡಿ ಮೆಟ್ರೋಪಾಲಿಟನ್ ಶಾಲೆಯಲ್ಲಿ ಮಾಸ್ತರಿಕೆಯ ಕೆಲಸ ವೊಂದನ್ನು ಸಂಪಾದಿಸಿಕೊಂಡ. ಆದರೆ ಇದು ಕೇವಲ ಕೆಲತಿಂಗಳ ಕಾಲ ಮಾತ್ರ.

ಭುವನೇಶ್ವರೀ ದೇವಿಯ ಸಂಸಾರವನ್ನು ಅಲ್ಲೋಲಕಲ್ಲೋಲ ಮಾಡಿದ ಈ ಚಂಡಮಾರುತವು ತಾಯಿ-ಮಗನ ಸಂಬಂಧ ಹಿಂದಿಗಿಂತ ನೂರುಪಟ್ಟು ದೃಢವಾಗಲು, ಆತ್ಮೀಯವಾಗಲು ನೆರವಾಯಿತು. ಈ ಸಂದರ್ಭದಲ್ಲಿ ಭುವನೇಶ್ವರಿ ತಾನು ಪತಿ ವಿಶ್ವ ನಾಥನಲ್ಲಿ ಕಂಡು ಮೆಚ್ಚಿಕೊಂಡಿದ್ದ ಒಂದು ಗುಣವನ್ನು—ಎಂದೆಂದಿಗೂ ಸೋಲೊಪ್ಪಿ ಕೊಳ್ಳದಿರುವ ಮಹಾ ಗುಣವನ್ನು—ಮಗ ನರೇಂದ್ರನಲ್ಲಿ ಕಂಡುಕೊಂಡಳು. ಅಷ್ಟೇ ಅಲ್ಲ, ಸ್ವತಃ ಭುವನೇಶ್ವರಿಯ ಅಂತಸ್ಸತ್ತ್ವವು ಕೂಡ ಅಗ್ನಿಪರೀಕ್ಷೆಯ ಈ ಸಂಧಿಕಾಲ ದಲ್ಲಿ ಬೆಳಕಿಗೆ ಬಂತು. ಆ ಮಹಾತಾಯಿಯ ಬಗ್ಗೆ ಶಾರದಾನಂದರು ಬರೆಯುತ್ತಾರೆ:

"ಪತಿಯ ನಿಧನಾನಂತರ ಇದ್ದಕ್ಕಿದ್ದಂತೆ ಕಷ್ಟದ ಮಡುವಿಗೆ ದೂಡಲ್ಪಟ್ಟ ಭುವನೇಶ್ವರೀ ದೇವಿ ತನ್ನ ಅದ್ಭುತವಾದ ಅಂತಸ್ಸತ್ತ್ವ, ಆಶ್ಚರ್ಯಕರವಾದ ತಾಳ್ಮೆ, ಶಾಂತತೆ, ಮಿತವ್ಯಯದ ಗುಣ ಮತ್ತು ಎಂಥ ಪರಿಸ್ಥಿತಿಗೂ ಹೊಂದಿಕೊಳ್ಳಬಲ್ಲ ಶಕ್ತಿ ಇವುಗಳನ್ನು ವ್ಯಕ್ತಪಡಿಸಿದಳು. ಸಂಸಾರವನ್ನು ನಿರ್ವಹಿಸಲು ಅದುವರೆಗೂ ತಿಂಗಳಿಗೆ ಒಂದು ಸಾವಿರ ರೂಪಾಯಿ ಖರ್ಚು ಮಾಡುತ್ತಿದ್ದವಳು ಈಗ ಕೇವಲ ಮೂವತ್ತು ರೂಪಾಯಿಗಳಲ್ಲಿ ಇಡೀ ಸಂಸಾರದ ಖರ್ಚನ್ನು ನಡೆಸಬೇಕಾಗಿ ಬಂತು. ಆದರೆ ಒಮ್ಮೆ ಯಾದರೂ ಆಕೆ ಹತಾಶಳಾದಂತೆ ಕಾಣಲಿಲ್ಲ. ಅವಳು ತನ್ನ ಸಂಸಾರವನ್ನು ಅಷ್ಟು ಕಡಿಮೆ ಆದಾಯದಲ್ಲಿ ಅದೆಷ್ಟು ಜಾಣ್ಮೆಯಿಂದ ಅಚ್ಚುಕಟ್ಟಾಗಿ ನಿಭಾಯಿಸಿದಳೆಂದರೆ, ಆ ಸಂಸಾರವನ್ನು ನೋಡಿದವರೆಲ್ಲ ಅವರ ಆದಾಯ ಬಹಳ ಹೆಚ್ಚಾಗಿಯೇ ಇರ ಬೇಕೆಂದು ಭಾವಿಸುತ್ತಿದ್ದರು. ನಿಜಕ್ಕೂ ಆಕೆಯ ಪರಿಸ್ಥಿತಿಯನ್ನು ನೆನೆಸಿಕೊಂಡರೇ ಮೈ ನಡುಗುತ್ತದೆ. ಅವರ ಆದಾಯ ತಿಂಗಳಿಗೆ ಇಂತಿಷ್ಟು ಎನ್ನುವುದು ಕೂಡ ನಿಶ್ಚಯವಿರ ಲಿಲ್ಲ. ಆದರೆ ಅದಷ್ಟರಲ್ಲೇ ಭುವನೇಶ್ವರಿ ತನ್ನ ವೃದ್ಧ ತಾಯಿಯನ್ನೂ ಮಕ್ಕಳನ್ನೂ ಸಾಕಿ ಸಲಹಿ, ಮಕ್ಕಳ ವಿದ್ಯಾಭ್ಯಾಸದ ಖರ್ಚನ್ನೂ ನೋಡಿಕೊಳ್ಳಬೇಕಾಗಿತ್ತು. ಆಕೆಯ ಪತಿಯ ಹಣ-ಅಧಿಕಾರಗಳ ಸಹಾಯದಿಂದಲೇ ಮೇಲೆ ಬಂದಿದ್ದ ಬಂಧುವರ್ಗದವರೂ ಕೂಡ ಈಗ ಅತ್ಯಂತ ಕೃತಘ್ನರಾಗಿ ವರ್ತಿಸಿ, ಅವರ ಆಸ್ತಿಯನ್ನೂ ಕಸಿದುಕೊಳ್ಳುವ ಪ್ರಯತ್ನ ನಡೆಸಿದ್ದರು. ಹಿರಿಯ ಮಗ ನರೇಂದ್ರನಿಗೆ ಒಂದು ಸರಿಯಾದ ಕೆಲಸವೂ ಸಿಗದೆ ಆತ ಕಡೆಗೆ ವೈರಾಗ್ಯಭಾವವನ್ನು ತಾಳಿ ಪ್ರಪಂಚವನ್ನೇ ತ್ಯಜಿಸಿಬಿಡುವ ಆಲೋಚನೆಯಲ್ಲಿದ್ದ. ಇಂತಹ ದಾರುಣ ಪರಿಸ್ಥಿತಿಯಲ್ಲೂ ಆಕೆ ಸ್ಥಿಮಿತಬುದ್ಧಿಯಿಂದ ವರ್ತಿಸಿದ ಪರಿಯನ್ನು ಕಂಡವರಲ್ಲಿ ಆಕೆಯ ಬಗ್ಗೆ ಗೌರವ-ಪೂಜ್ಯಭಾವಗಳು ತಾನೇ ತಾನಾಗಿ ಉದಿಸುತ್ತವೆ."

ಭುವನೇಶ್ವರಿ ಎದುರಿಸಿದ ಕಷ್ಟಗಳು ಈ ರೀತಿಯಾದರೆ, ನರೇಂದ್ರನ ಕಷ್ಟಸಂಕಟಗಳು ಇನ್ನೂ ಅಸಹನೀಯವಾದವು. ತಂದೆ ಸತ್ತ ಸೂತಕದ ದಿನಗಳು ಕೂಡ ಇನ್ನೂ ಮುಗಿದಿಲ್ಲ, ದುಃಖದ ಕಣ್ಣೀರೇ ಇನ್ನೂ ಆರಿಲ್ಲ, ಅಷ್ಟರಲ್ಲೇ ಅವನು ಕೆಲಸಕ್ಕಾಗಿ ಅಲೆದಾಡುವಂತಾಯಿತು. ಮಧ್ಯಾಹ್ನದ ಉರಿಬಿಸಿಲಿನಲ್ಲಿ ಕೈಯಲ್ಲಿ ಅರ್ಜಿ ಹಿಡಿದುಕೊಂಡು ಕಛೇರಿಯಿಂದ ಕಛೇರಿಗೆ ಎಡತಾಕಿದ. ಹೊಟ್ಟೆಯಲ್ಲಿ ಹಸಿವಿನ ಬೆಂಕಿ, ತಲೆಯ ಮೇಲೆ ಸುಡುತ್ತಿರುವ ಸೂರ್ಯ, ಕಾಲಿಗೆ ಚಪ್ಪಲಿಯಿಲ್ಲ. ಆದರೆ ಹಸಿವು ಎಂದು ಕುಳಿತುಕೊಳ್ಳುವಂತಿಲ್ಲ; ಕಾಲು ಸುಡುತ್ತದೆ ಎಂದು ಸುಮ್ಮನಿರುವಂತಿಲ್ಲ. ಏಕೆಂದರೆ, ಉದ್ಯೋಗ ಸಿಗದೆಹೋದರೆ ತನಗೆ ಮಾತ್ರವಲ್ಲ, ಮನೆಮಂದಿಯ ಹೊಟ್ಟೆಗೆ ಸೊನ್ನೆ. ನರೇಂದ್ರ ಯಾರನ್ನೂ ಸಾಲ ಕೇಳುವವನಲ್ಲ; ಸ್ನೇಹಿತರು, ಸಂಬಂಧಿಕರು ತಾವಾಗಿಯೇ ಕೊಡುವವರಲ್ಲ! ಕೆಲವೊಮ್ಮೆ ಅವನ ಒಬ್ಬಿಬ್ಬರು ಆತ್ಮೀಯ ಸ್ನೇಹಿತರು ಅವನ ಆ ದುರದೃಷ್ಟದ ದಿನಗಳಲ್ಲಿ ಸಹಾನುಭೂತಿಯಿಂದ ಅವನ ಉದ್ಯೋಗಾನ್ವೇಷಣೆಯಲ್ಲಿ ನೆರವಾಗಲು ಬಂದರು. ಆದರೆ ಅವನ ಪಾಲಿಗೆ ಪ್ರತಿಯೊಂದು ಕಡೆಯಲ್ಲೂ ಬಾಗಿಲು ಮುಚ್ಚಿಕೊಳ್ಳುತ್ತಿತ್ತು. ಅವನಿಗೀಗ ಮೊತ್ತಮೊದಲನೆಯದಾಗಿ ಜೀವನದ ಕಠೋರ ವಾಸ್ತವಿಕತೆಯ ದರ್ಶನವಾಗುತ್ತಿದೆ. ಅದನ್ನು ಕಂಡಾಗ ಅವನಿಗನ್ನಿಸತೊಡಗಿತು—ಈ ಜಗತ್ತಿನಲ್ಲಿ ಸ್ವಾರ್ಥರಹಿತವಾದ ಸಹಾನುಭೂತಿ, ಸ್ನೇಹ ಎಂಬವುಗಳೆಲ್ಲ ಕೇವಲ ಮಾತನಾಡಲು ಉಪಯೋಗಿಸುವ ಔಪಚಾರಿಕ ಪದಗಳಷ್ಟೇ ಎಂದು. ಇಲ್ಲಿ ದುರ್ಬಲರಿಗೆ, ಬಡವರಿಗೆ, ಅಸಹಾಯಕರಿಗೆ ಸ್ಥಾನವಿಲ್ಲ ಎಂದು ಅವನಿಗೆ ತೋರಿತು. ಕೆಲವೇ ದಿನಗಳ ಹಿಂದೆ ಯಾರ್ಯಾರು ಅವನಿಗೆ ಬೇಕಾದ ಸಹಾಯವನ್ನೆಲ್ಲ ಮಾಡಲು ಮುಂದಾಗುತ್ತಿದ್ದರೋ ಈಗ ಅವರೇ ಅವನನ್ನು ಕಂಡ ತಕ್ಷಣ ಮುಖ ತಿರುಗಿಸತೊಡಗಿದ್ದರು. ಹೋಗಲಿ, ಅವರಿಗೂ ಏನೋ ತೊಂದರೆಯಿರಬಹುದೆ? ಹಾಗೇನಿಲ್ಲ! ಅವರೆಲ್ಲ ಸಾಕಷ್ಟು ಧನಿಕರೇ. ಆದರೆ ಅಸಹಾಯಕ ಸ್ಥಿತಿಯಲ್ಲಿರುವ ನರೇಂದ್ರನನ್ನು ಕಂಡರೆ ಮಾತ್ರ ದೂರವಾಗುತ್ತಿದ್ದಾರೆ—'ಶಕ್ತನಾದರೆ ನೆಂಟರೆಲ್ಲ ಹಿತರು, ಅಶಕ್ತನಾದರೆ ಅವರೇ ವೈರಿಗಳು ಲೋಕದಲಿ' ಎಂಬಂತೆ. ಇದನ್ನೆಲ್ಲ ನೋಡುತ್ತನೋಡುತ್ತ ನರೇಂದ್ರನಿಗೆ ಕೆಲವೊಮ್ಮೆ ಅನ್ನಿಸುತ್ತಿತ್ತು—ಈ ಪ್ರಪಂಚವು ದೇವರ ಸೃಷ್ಟಿಯಲ್ಲ, ದೆವ್ವದ ಸೃಷ್ಟಿ ಎಂದು.

ಒಂದು ದಿನ ಅವನು ಕೆಲಸಕ್ಕಾಗಿ ಅಲೆದಾಡುತ್ತ ಆಯಾಸಗೊಂಡು 'ಆಕ್ಟರ್ ಲೋನಿ ಮಾನ್ಯುಮೆಂಟ್' ಎಂಬ ಎತ್ತರದ ಕಟ್ಟಡದ ನೆರಳಿನಲ್ಲಿ ಕುಳಿತುಕೊಂಡಿದ್ದಾನೆ. ಆಗ ಅವನ ಇಬ್ಬರು ಸ್ನೇಹಿತರು ಆಕಸ್ಮಿಕವಾಗಿ ಅವನನ್ನು ನೋಡಿ ಅಲ್ಲಿಗೆ ಬಂದರು. ಅವನ ದುಸ್ಥಿತಿಯನ್ನು ಕಂಡ ಒಬ್ಬ ಸ್ನೇಹಿತ ಅವನನ್ನು ಸಮಾಧಾನಪಡಿಸುವ ಉದ್ದೇಶದಿಂದ ಮೆಲ್ಲನೆ ಒಂದು ಹಾಡನ್ನು ಗುನುಗಲಾರಂಭಿಸಿದ:

*ಬೀಸುತಿಹುದು ಮಂದಾನಿಲ—ಇದುವೆ ಬ್ರಹ್ಮನುಸಿರು;*
*ಮೈಮನವನು ತಣಿಸುತಿಹುದು, ಇದುವೆ ಅವನ ಕರುಣೆಯು!*

ಅವನು ಈ ಹಾಡನ್ನು ಅರ್ಧ ಕೂಡ ಹೇಳಿಲ್ಲ, ಅಷ್ಟರಲ್ಲೇ ನರೇಂದ್ರ ಅವನನ್ನು ತಡೆದ. ಅವನಿಗೆ ಈ ಹಾಡನ್ನು ಕೇಳಿ ಸಮಾಧಾನವಾಗುವುದಿರಲಿ, ಅಸಹಾಯಕರಾಗಿದ್ದ ತನ್ನ ತಾಯಿ ಹಾಗೂ ತಮ್ಮಂದಿರ ನೆನಪು ಒತ್ತರಿಸಿಬಂದು, ಯಾರೋ ತಲೆಯ ಮೇಲೆ

ದೊಣ್ಣೆಯಿಂದ ಬಡಿದಂತಾಯಿತು. ಅವನು ಆಕ್ರೋಶದ ದನಿಯಲ್ಲಿ ನುಡಿದ—"ದಯಮಾಡಿ ನಿನ್ನ ಆ ಹಾಡನ್ನು ನಿಲ್ಲಿಸುತ್ತೀಯಾ! ಚಿನ್ನದ ತಟ್ಟೆಯಲ್ಲಿ ಊಟ ಮಾಡುವವರಿಗೆ ಸೊಗಸೀತು ಇಂಥಾ ಹಾಡುಗಳೆಲ್ಲ. ಹಸಿವೆಯನ್ನೇ ಅನುಭವಿಸದವರಿಗೆ ಸೊಗಸೀತು. ನಿಜ, ಈ ತರಹದ ಹಾಡುಗಳನ್ನು ಒಂದು ಕಾಲದಲ್ಲಿ ನಾನೂ ಇಷ್ಟಪಟ್ಟಿದ್ದೆ. ಆದರೆ ಇಂದು ಜೀವನದ ಬೀಭತ್ಸ ದೃಶ್ಯದ ಮುಂದೆ ಅವೆಲ್ಲ ವಿಡಂಬನೆಗಳ ಹಾಗೆ ಕಂಡುಬರುತ್ತಿವೆ!" ನರೇಂದ್ರನ ಸಿಡಿಮಿಡಿಯನ್ನು ಕೇಳಿ ಅವನ ಸ್ನೇಹಿತ ಮತ್ತೆ ಮಾತನಾಡುವ ಸಾಹಸ ಮಾಡಲಿಲ್ಲ. ಆದರೆ ಅವನ ಬಾಯಿಂದ ಆ ಮಾತನ್ನು ಹೊರಡಿಸಿದ್ದ ಅವನೊಡಲೊಳಗಿನ ದುಃಖದ ತೀವ್ರತೆ ಆ ಸ್ನೇಹಿತನಿಗೆ ಹೇಗೆ ಅರ್ಥವಾಗಬೇಕು!

ನರೇಂದ್ರನ ಹಳೆಯ ಸ್ನೇಹಿತರು ಕೆಲವರು ಅನ್ಯಾಯಮಾರ್ಗಗಳಿಂದ ಹಣ ಸಂಪಾದನೆ ಮಾಡುತ್ತಿದ್ದರು. ಕಡಮೆ ಕಾಲಾವಧಿಯಲ್ಲಿ ಹೆಚ್ಚು ಹಣವನ್ನು ಸುಲಭವಾಗಿ ಸಂಪಾದಿಸಬೇಕಾದರೆ ಇದೇ ಏಕಮಾತ್ರ ಉಪಾಯ ಎಂಬುದು ಅವರ ನಿಶ್ಚಿತ ನಿಲುವು. ಅವರಿಗೂ ನರೇಂದ್ರನಿಗೆ ಒದಗಿಬಂದಂತಹ ದುರದೃಷ್ಟದ ಪರಿಸ್ಥಿತಿಗಳು ಎದುರಾಗಿದ್ದುದರಿಂದಲೇ ಅವರು ಆ ಮಾರ್ಗಗಳನ್ನು ಹಿಡಿಯಬೇಕಾಗಿಬಂದಿತ್ತು. ಈಗ ನರೇಂದ್ರನೂ ಇದ್ದಕ್ಕಿದ್ದಂತೆ ಬಡತನದ ಬವಣೆಗೆ ಸಿಲುಕಿದ್ದನ್ನು ಕಂಡ ಆ ಸ್ನೇಹಿತರು ಅವನ ಮೇಲಿನ ಸಹಾನುಭೂತಿಯಿಂದ ಅವನನ್ನು ತಮ್ಮೊಂದಿಗೆ ಸೇರಿಕೊಳ್ಳುವಂತೆ ಆಹ್ವಾನಿಸಿದರು. ಹೀಗಾದರೂ ಅವನ ಬಡತನ ನೀಗಲಿ ಎಂಬುದು ಅವರ 'ಸದುದ್ದೇಶ'. ಆದರೆ ನರೇಂದ್ರನ ನೈತಿಕತೆಯೆಂಬುದು ಮರಳಿನ ಮೇಲೆ ಕಟ್ಟಿದ ಕಟ್ಟಡವಲ್ಲ. ಅವನು ಅಡ್ಡದಾರಿಗಿಳಿಯಲಿಲ್ಲ ಎಂಬುದನ್ನು ಹೇಳಬೇಕಾಗಿಯೇ ಇಲ್ಲವಲ್ಲ!

ಅವನ ಮುಂದೆ ಮಾಯಾಜಿಂಕೆಯಂತೆ ಸುಳಿದಾಡಿದ ಪ್ರಲೋಭನೆಗಳು ಅನೇಕ. ಹಿಂದಿನಿಂದಲೂ ಅವನ ಮೇಲೆ ಕಣ್ಣಿಟ್ಟಿದ್ದ ಒಬ್ಬಳು ಶ್ರೀಮಂತ ಮಹಿಳೆ ಅವನಿಗೊಂದು ಅಶ್ಲೀಲ ಸಲಹೆಯನ್ನು ನೀಡಿ, ಅವನ ಕಷ್ಟಗಳನ್ನೆಲ್ಲ ತಾನು ಪರಿಹರಿಸುವುದಾಗಿ ಸೂಚಿಸಿದಳು. ಆದರೆ ಅವನು ತುಂಬ ಕಟುವಾಗಿ ಅವಳ ಸಲಹೆಯನ್ನು ತುಚ್ಛೀಕರಿಸಿದ. ಇನ್ನೊಮ್ಮೆ ಮತ್ತೊಬ್ಬ ಹೆಂಗಸು ಇದೇ ರೀತಿಯ ಇಂಗಿತವನ್ನು ವ್ಯಕ್ತಪಡಿಸಿದಾಗ ನರೇಂದ್ರ ಅವಳಿಗೆ ಕನಿಕರದಿಂದ ಹೇಳಿದ—"ನೀನು ದೇಹಸುಖವನ್ನು ಅರಸುತ್ತ ಜೀವನವನ್ನೆಲ್ಲ ವ್ಯರ್ಥ ಮಾಡಿಕೊಂಡೆ. ಮೃತ್ಯುವಿನ ಕಪ್ಪುನೆರಳು ನಿನ್ನ ಮುಂದೆಯೇ ಸುಳಿದಾಡುತ್ತಿದೆ. ಅದನ್ನೆದುರಿಸಲು ಏನಾದರೂ ಸಿದ್ಧತೆ ಮಾಡಿಕೊಂಡಿದ್ದೀಯಾ? ಈಗಲಾದರೂ ಇಂಥ ಹೀನ ಬಯಕೆಗಳನ್ನೆಲ್ಲ ತ್ಯಜಿಸಿ ಭಗವಂತನ ಸ್ಮರಣೆ ಮಾಡು." ನರೇಂದ್ರನಿಗೊದಗಿದ ಕಷ್ಟಪರಂಪರೆಗಳು ಅವನನ್ನು ನೈತಿಕತೆಯ ಶಿಖರದಿಂದ ಜಾರಿಸಲು ಸಮರ್ಥವಾಗಲಿಲ್ಲ ಎನ್ನುವುದೊಂದು ಮಹತ್ವದ ಅಂಶ.

ಆದರೆ ನರೇಂದ್ರನಿಗೆ ಈಗ ಎದುರಾಗಿರುವ ಕಷ್ಟಗಳಿಗೆ ಒಂದು ವಿಶೇಷ ಅರ್ಥವಿದೆ ಎನ್ನಬಹುದು. ಈ ಕಷ್ಟಗಳೆಲ್ಲ ಅವನಿಗೆ ಸಹನೆಯ ಪಾಠವನ್ನು ಕಲಿಸುತ್ತಿವೆ. ಬೃಹತ್ಕಾರ್ಯಗಳನ್ನು ಸಾಧಿಸಬೇಕಾದರೆ ಬೃಹತ್ತಾದ ಕಷ್ಟಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಕಷ್ಟಸಹಿಷ್ಣುತೆಯಿಲ್ಲದವನಿಂದ ಏನನ್ನೂ ಸಾಧಿಸಲಾಗದು. ನರೇಂದ್ರ ಮುಂದೆ ಸ್ವಾಮಿ ವಿವೇಕಾನಂದರಾದಾಗ ಅವರ ಜೀವನವೇನೂ ಹೂವಿನ ಹಾಸಿಗೆಯಾಗಿರಲಿಲ್ಲ. ಈಗ ನರೇಂದ್ರನಾಗಿ ಅನುಭವಿಸುತ್ತಿರುವ ಕಷ್ಟಗಳಿಗಿಂತಲೂ ಎಷ್ಟೋ ಪಾಲು ಹೆಚ್ಚಿನ

ಪರ್ವತೋಪಮ ಕಷ್ಟಗಳನ್ನು ಎದುರಿಸಬೇಕಾಯಿತು. ಅದಕ್ಕೆ ಪೂರ್ವತಯಾರಿಯಾಗಿ ಅವನು ಇಂದು ಈ ಬಗೆಯ ಕಷ್ಟಗಳನ್ನು ಅನುಭವಿಸುತ್ತಿದ್ದಾನೆ ಎನ್ನಬಹುದು. ಕಷ್ಟಗಳನ್ನು ಧೀರತೆಯಿಂದ ಸಹಿಸಿಕೊಳ್ಳುವುದು ಒಂದು ದೊಡ್ಡ ಗುಣ. ಗೊಣಗದೆ, ಮರುಮಾತಿಲ್ಲದೆ ಸಹಿಸಿಕೊಂಡರೆ ನಮ್ಮಲ್ಲಿ ಅಪಾರ ಶಕ್ತಿ ಉತ್ಪನ್ನವಾಗುತ್ತದೆ. ಈ ಬಗೆಯ ಸಹನೆಗೆ 'ತಿತಿಕ್ಷೆ' ಎಂದು ಹೆಸರು. 'ವಿವೇಕಚೂಡಾಮಣಿ'ಯಲ್ಲಿ ಈ ತಿತಿಕ್ಷೆಯ ಲಕ್ಷಣವನ್ನು ವಿವರಿಸಲಾಗಿದೆ:

*ಸಹನಂ ಸರ್ವದುಃಖಾನಾಂ ಅಪ್ರತೀಕಾರಪೂರ್ವಕಂ*
*ಚಿಂತಾವಿಲಾಪರಹಿತಂ ಸಾ ತಿತಿಕ್ಷಾ ನಿಗದ್ಯತೇ||*

ಎಂದರೆ, ಎಲ್ಲ ಬಗೆಯ ದುಃಖಗಳನ್ನೂ, ಯಾವುದೇ ಬಗೆಯ ಪ್ರತಿಕ್ರಿಯೆಯನ್ನೂ ತೋರದೆ, ಯಾವುದೇ ರೀತಿಯಿಂದ ಚಿಂತಾಕ್ರಾಂತನಾಗದೆ ಮತ್ತು ವಿಲಾಪಿಸದೆ ಸಹಿಸಿಕೊಳ್ಳುವ ಗುಣವನ್ನು ತಿತಿಕ್ಷೆ ಎನ್ನುತ್ತಾರೆ. ಭಗವತ್ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬವರಲ್ಲೇ ಆಗಲಿ, ಮಹಾಕಾರ್ಯವೊಂದನ್ನು ಸಾಧಿಸಹೊರಟವರಲ್ಲೇ ಆಗಲಿ ಇರಲೇಬೇಕಾದ ಒಂದು ಗುಣವೆಂದರೆ ಈ ತಿತಿಕ್ಷೆ. ಶಮ ದಮ ಉಪರತಿ ತಿತಿಕ್ಷೆ ಸಮಾಧಾನ ಶ್ರದ್ಧಾ ಎನ್ನುವ ಈ ಆರು 'ಸಂಪತ್ತು'ಗಳಲ್ಲಿ ತಿತಿಕ್ಷೆಯೆಂಬುದು ಒಂದು ದೊಡ್ಡ ಸಂಪತ್ತು. ಈ ಬಗೆಯ ತಿತಿಕ್ಷೆಯನ್ನು ಅಭ್ಯಾಸ ಮಾಡುವುದಕ್ಕಾಗಿಯೋ ಎಂಬಂತೆ ನರೇಂದ್ರನೀಗ ಬಗೆಬಗೆಯ ಕಷ್ಟಪರಂಪರೆಯನ್ನು ಎದುರಿಸಬೇಕಾಗಿದೆ.

ಹೀಗೆ ನಾನಾ ಬಗೆಯ ಕಷ್ಟಗಳಿಗೆ, ಪ್ರಲೋಭನೆಗಳಿಗೆ ಒಳಗಾದರೂ ಅವನು ಭಗವಂತನ ಅಸ್ತಿತ್ವದಲ್ಲಿ, ಆತನ ಕರುಣೆಯಲ್ಲಿ ನಂಬಿಕೆಯನ್ನು ಕಳೆದುಕೊಂಡಿರಲಿಲ್ಲ. ಪ್ರತಿದಿನ ಬೆಳಗ್ಗೆ ಎದ್ದೊಡನೆಯೇ ಭಗವಂತನ ಸ್ಮರಣೆ ಮಾಡಿ, ಬಳಿಕ ಕೆಲಸ ಹುಡುಕಲು ಹೊರಡುತ್ತಿದ್ದ. ಒಂದು ದಿನ ಎಂದಿನಂತೆ ಪ್ರಾರ್ಥನೆ ಮಾಡುತ್ತಿದ್ದಾನೆ, ಆಗ ಅದನ್ನು ಕೇಳಿಸಿಕೊಂಡ ಅವನ ತಾಯಿ ಇದ್ದಕ್ಕಿದ್ದಂತೆ, "ಛೀ ದಡ್ಡ! ಸಾಕು ಸುಮ್ಮನಿರೋ! ನೀನು ನಿನ್ನ ಬಾಲ್ಯದಿಂದಲೂ ಆ ದೇವರಿಗಾಗಿ ಗಂಟಲು ಕಿತ್ತುಕೊಂಡೆಯಲ್ಲ, ಕೊನೆಗೂ ಅವನು ನಿನಗೆ ಏನು ಮಾಡಿದ?' ಎಂದುಬಿಟ್ಟಳು. ಸ್ವತಃ ತಾಯಿಯೇ, ತನ್ನನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡು ಬಾಲ್ಯದಿಂದಲೂ ಭಗವಂತನ ಕುರಿತಾಗಿ ಬೋಧಿಸಿದವಳೇ ಹೀಗೆ ಹೇಳಿಬಿಟ್ಟಾಗ ನರೇಂದ್ರ ತತ್ತರಿಸಿಹೋದ. ಅವನ ಶ್ರದ್ಧೆಯ ಗೋಪುರ ಬಿರುಕುಬಿಟ್ಟಿತು. ಮನಸ್ಸಿನಲ್ಲಿ ಸಂಶಯ ಸುಳಿದಾಡಿತು—'ನಿಜಕ್ಕೂ ದೇವರು ಇರುವುದು ಹೌದೆ? ಮನುಷ್ಯ ವ್ಯಾಕುಲತೆಯಿಂದ ಕರೆದಾಗ ಅವನು ಅದನ್ನು ಕೇಳಿಸಿಕೊಳ್ಳುತ್ತಾನೆ ಎನ್ನುತ್ತಾರಲ್ಲ, ಅದು ಸತ್ಯವೆ? ಹಾಗಾದರೆ ನಾನು ಇಷ್ಟೊಂದು ಪ್ರಾರ್ಥಿಸಿಕೊಳ್ಳುತ್ತಿದ್ದೇನಲ್ಲ, ಅವನೇಕೆ ಕಿವಿಗೊಡುತ್ತಿಲ್ಲ? ಅವನ ಮಂಗಳಕರ ಸೃಷ್ಟಿಯಲ್ಲಿ ಇಷ್ಟೊಂದು ಅಮಂಗಳ, ದುಃಖಸಂಕಟಗಳೆಲ್ಲ ಇವೆಯಲ್ಲ, ಏಕೆ? ದಯಾಮಯನಾದ ಭಗವಂತನ ಸೃಷ್ಟಿಯಲ್ಲಿ ಭೂತ-ಪಿಶಾಚಿಗಳು ರಾಜ್ಯಭಾರ ಮಾಡುತ್ತಿವೆಯಲ್ಲ, ಏಕೆ?' "ಭಗವಂತನು ಕರುಣಾಮಯ ಹಾಗೂ ಮಂಗಳಕರ ಎನ್ನುವುದಾದಲ್ಲಿ, ಬರಗಾಲದ ಸಮಯದಲ್ಲಿ ಕೋಟಿಗಟ್ಟಲೆ ಜನರು ಒಂದು ತುತ್ತು ಅನ್ನವಿಲ್ಲದೆ ಹಸಿವೆಯಿಂದ ನರಳಿ ಸಾಯುತ್ತಾರಲ್ಲ, ಏಕೆ?" ಎಂಬ ಪಂಡಿತ ಈಶ್ವರಚಂದ್ರ ವಿದ್ಯಾಸಾಗರರ ಮಾತುಗಳು ಅವನ ಕಿವಿಯಲ್ಲಿ ಗುಂಯಿಗುಡಲಾರಂಭಿ

ಸಿದುವು. ಅವನಿಗೀಗ ಆ ದೇವರ ಮೇಲೆ ಭಯಂಕರ ಕೋಪ ಬಂದುಬಿಟ್ಟಿದೆ. ಯಾವಾಗ ಸ್ವತಃ ತನ್ನ ಹೆತ್ತ ತಾಯಿಯೇ 'ಭಗವಂತ ನಿನಗೆ ಏನು ಮಾಡಿದ ?' ಎಂದು ಕೇಳಿಬಿಟ್ಟಳೋ ಆಗ ಅವನಿಗೂ ಅನ್ನಿಸಿತು, 'ಹೌದಲ್ಲ! ಭಗವಂತ ನನಗೆ ಏನು ಮಾಡಿದ ?' ಎಂದು. ತಾಳಲಾರದ ಕಷ್ಟಗಳು ಮುತ್ತಿಕೊಂಡಾಗ ಎಂಥವರೂ ಕಂಗಾಲಾಗುವುದು ಸಹಜ. ಹೃದಯದಲ್ಲಿ ನಾಸ್ತಿಕತೆಯ ಭಾವನೆ ಹುಟ್ಟುವುದು ಇಂತಹ ಸಂದರ್ಭಗಳಲ್ಲೇ. ಆದರೆ ಇದೇ ನರೇಂದ್ರ ಮುಂದೆ ಸ್ವಾಮಿ ವಿವೇಕಾನಂದ ರಾಗಿ ಸಮಸ್ತ ಜಗತ್ತಿಗೆ ಆಸ್ತಿಕತೆಯ ಸಂದೇಶವನ್ನು ಧೀರತೆಯಿಂದ ಸಾರುವ ದೃಶ್ಯವನ್ನು ಕಂಡಾಗ, ಈಗ ಅವನಲ್ಲಿ ಉಂಟಾಗಿರುವ ನಾಸ್ತಿಕತೆಯೆನ್ನುವುದು ಕೇವಲ ತಾತ್ಕಾಲಿಕ ವಾದದ್ದು ಎಂಬುದನ್ನು ನಾವು ತಿಳಿಯಬೇಕು.

ನರೇಂದ್ರನದು ಮುಚ್ಚುಮರೆಯಿಲ್ಲದ ಸ್ವಭಾವ. ತನ್ನ ಮನಸ್ಸಿನಲ್ಲಿದ್ದ ಯಾವುದೇ ಆಲೋಚನೆಯನ್ನು ಇತರರಿಂದ ಮುಚ್ಚಿಡದಿರುವುದು ಅವನಲ್ಲಿ ಬಾಲ್ಯ ದಿಂದಲೂ ಬಂದ ಒಂದು ಗುಣ. ಯಾರದಾದರೂ ಹೆದರಿಕೆಯಿಂದಲೋ ಅಥವಾ ಒತ್ತಡದಿಂದಲೋ ತನ್ನ ಭಾವನೆಗಳನ್ನು ಅದುಮಿ ಅಡಗಿಸಿಡುವ ಸ್ವಭಾವವೇ ಅವನ ದಲ್ಲ. ಆದ್ದರಿಂದ ಈಗಲೂ ಕೂಡ ತನ್ನ ಮನಸ್ಸಿನಲ್ಲಿ ಧುಮುಧುಮಿಸಿ ಬರುವ ಭಾವನೆಗಳನ್ನು ಘಂಟಾಘೋಷವಾಗಿ ಪ್ರಕಟಿಸಲು ಪ್ರಾರಂಭಿಸಿದ. ಅವನೀಗ ಜಗತ್ತಿಗೆಲ್ಲ ಒಂದು ವಿಷಯವನ್ನು ಸಾರಿ ಹೇಳುತ್ತಿದ್ದಾನೆ—"ದೇವರು ಎನ್ನುವುದೇನೂ ಇಲ್ಲ. ಈ ದೇವರು ದಿಂಡರು ಎಲ್ಲ ಬರೀ ಸುಳ್ಳು; ಕೇವಲ ಕಂತೆಪುರಾಣ. ಅಥವಾ ಒಂದು ವೇಳೆ ಅವನಿರುವುದೇ ನಿಜವಾದರೂ ಅವನನ್ನು ಕರೆಯುವುದಾಗಲಿ ಪ್ರಾರ್ಥಿಸುವುದಾಗಲಿ ನಿರರ್ಥಕ." ನಾವು ಹಿಂದೆಯೇ ನೋಡಿದಂತೆ ಯಾವ ವಿಷಯವಾಗಿ ವಾದಿಸಿದರೂ ತೀವ್ರವಾಗಿಯೇ ವಾದಿಸುವವನು ನರೇಂದ್ರ. ಈಗ ಅವನ ನಾಸ್ತಿಕತೆಯ ವಾದವೂ ಅಷ್ಟೇ ಪ್ರಖರವಾಗಿತ್ತು. ಅದನ್ನು ಕೇಳಿದ ಜನರು ಭಾವಿಸಿದರು—ಇವನು ಸಂಪೂರ್ಣ ನಾಸ್ತಿಕನಾಗಿಬಿಟ್ಟ ಎಂದು. ಸುದ್ದಿ ಒಬ್ಬರಿಂದೊಬ್ಬರಿಗೆ ಬಹುಬೇಗ ಹರಡಿತು. ಒಂದನ್ನು ಹತ್ತಾಗಿ ಮಾಡುವುದು, ಹತ್ತನ್ನು ನೂರಾಗಿ ಮಾಡುವುದು ಜನಜಂಗುಳಿಯ ಸಹಜ ಸ್ವಭಾವ. 'ನರೇಂದ್ರ ಪೂರ್ತಿ ನಾಸ್ತಿಕನಾಗಿಬಿಟ್ಟಿದ್ದಾನಂತೆ' ಎಂಬ ಈ ಮಾತಿನಲ್ಲಿ ಜನರಿಗೆ ಅಷ್ಟೇನೂ ರುಚಿ ಕಾಣಲಿಲ್ಲ. ಅದರಲ್ಲಿ ಅಂಥ ಸ್ವಾರಸ್ಯವೇನಿದೆ? ಆದ್ದರಿಂದ ಇನ್ನೊಂದೆರಡನ್ನು ಸೇರ್ಪಡೆ ಮಾಡಿದರು. "ನರೇಂದ್ರ ಸಂಪೂರ್ಣ ನಾಸ್ತಿಕನಾಗಿಬಿಟ್ಟ ನಂತೆ!" "ಅಷ್ಟೇ ಆಗಿದ್ದರೆ ಪರವಾಗಿಲ್ಲ ಅನ್ನಬಹುದಾಗಿತ್ತು; ಕುಡಿತ ಬೇರೆ ಶುರು ಮಾಡಿಬಿಟ್ಟಿದ್ದಾನಂತೆ!" "ಅಯ್ಯೋ ಅದನ್ನೇನು ಹೇಳುತ್ತೀರಿ! ವೇಶ್ಯೆಯರ ಸಹ ವಾಸಕ್ಕೂ ಬಿದ್ದಿದ್ದಾನೆ ಎನ್ನುತ್ತಾರೆ!"—ಹೀಗೆ ಸುದ್ದಿ ಭರದಿಂದ ಪ್ರಚಾರವಾಯಿತು. ಕಡೆಗೊಂದು ದಿನ ಅದು ನರೇಂದ್ರನ ಕಿವಿಯನ್ನೂ ತಲುಪಿತು. ಇದನ್ನು ಕೇಳಿದಾಗ ಅವನಿಗೆಷ್ಟು ರೋಸಿಹೋಗಿರಬೇಕು! ಇಂಥ ಮಾತುಗಳು ತನ್ನ ತಾಯಿಯ ಕಿವಿಗೆ ಬಿದ್ದರೆ ಆಕೆ ಏನು ಭಾವಿಸಿಯಾಳು! ತಾನೇನೋ ನಾಸ್ತಿಕತೆಯ ಒಂದು ಮಾತನಾಡಿದರೆ ಈ ಜನ ಹೀಗೆ ಬಾಯಿಗೆ ಬಂದಂತೆ ಅಪಪ್ರಚಾರ ಮಾಡಲಾರಂಭಿಸಿದ್ದಾರಲ್ಲ, ಇದೆಂಥ ಅನ್ಯಾಯ! ಆದರೆ ಜನರಲ್ಲೆಲ್ಲ ಇದು ಹರಡಿಯಾಗಿದೆ. ಇನ್ನು ಇದು ಸತ್ಯವಲ್ಲವೆಂದು ಸಾಬೀತು ಮಾಡುವುದಾದರೂ ಸಾಧ್ಯವೆ? ನರೇಂದ್ರನಿಗೆ ಬಹಳ ದುಃಖವಾಯಿತು. ಆದರೆ ದುಃಖದಿಂದ ಅವನು ಕುಗ್ಗಲಿಲ್ಲ, ದುರ್ಬಲನಾಗಲಿಲ್ಲ. ಬದಲಾಗಿ ಅವನ

ಮನಸ್ಸು ಇನ್ನಷ್ಟು ಗಡಸಾಯಿತು. ಆಗ ಅವನು ಇನ್ನಷ್ಟು ರಾಜಾರೋಷವಾಗಿ ಹೇಳಲಾರಂಭಿಸಿದ—"ಈ ಸಂಕಟಮಯವಾದ ಜಗತ್ತಿನಲ್ಲಿ ದುಃಖದಿಂದ ನರಳುತ್ತಿರುವ ಮನುಷ್ಯ ಅದನ್ನು ಮರೆಯುವುದಕ್ಕಾಗಿ ಒಂದಷ್ಟು ಕುಡಿದರೂ ಅದರಲ್ಲೇನೂ ದೋಷವಿಲ್ಲ. ಅಷ್ಟು ಮಾತ್ರವಲ್ಲ, ಅಂಥ ಅಕೃತ್ಯಗಳು ನಿಜವಾಗಿಯೂ ಶಾಂತಿ-ಸಮಾಧಾನ ಕೊಡಬಲ್ಲವು ಎಂದು ನನಗನಿಸಿದರೆ, ನಾನೂ ಕೂಡ ಯಾರಿಗೂ ಹೆದರಿಕೊಳ್ಳದೆ ನನ್ನಿಷ್ಟದಂತೆಯೇ ನಡೆದುಕೊಂಡೇನು!" ಅವನು ಹೀಗೆಲ್ಲ ಮಾತನಾಡಿದ್ದು ಜನ ತನ್ನ ಮೇಲೆ ಅನ್ಯಾಯವಾಗಿ ದೋಷಾರೋಪಣೆ ಮಾಡುತ್ತಿದ್ದಾರಲ್ಲ ಎಂಬ ರೋಷದ ಭರದಲ್ಲಿ. ಆದರೆ ಜನರಿಗೀಗ ಒಂದು ಪ್ರತ್ಯಕ್ಷ ಆಧಾರವೇ ಸಿಕ್ಕಂತಾಯಿತು. ಈಗ ಅವರೆಲ್ಲ ಅನ್ನಲಾರಂಭಿಸಿದರು—"ನೋಡಿದಿರಾ! ನಾವು ಹೇಳಿದ್ದು ಸುಳ್ಳಲ್ಲ. ನರೇಂದ್ರ ನಾಸ್ತಿಕನಾದದ್ದೂ ಹೌದು, ಕುಡಿತಕ್ಕಿಳಿದದ್ದೂ ಹೌದು, ವ್ಯಭಿಚಾರಿಯಾದದ್ದೂ ಹೌದು. ಅವನೇ ಒಪ್ಪಿಕೊಳ್ಳುತ್ತಿದ್ದಾನಲ್ಲ! ಮನುಷ್ಯ ಸುಖಕ್ಕಾಗಿ ಏನು ಮಾಡಿದರೂ ತಪ್ಪಿಲ್ಲ ಅಂತ ಅವನೇ ಹೇಳುತ್ತಿದ್ದಾನಲ್ಲ!" ಎಂದು. ಅಂತೂ ಈ ಜನರಿಗೆ ನರೇಂದ್ರ 'ದಾರಿ ತಪ್ಪಿರುವುದು' ಮತ್ತಷ್ಟು ದೃಢವಾಯಿತು.

ಇದೆಲ್ಲ ಇಲ್ಲಿಗೇ ನಿಲ್ಲಲಿಲ್ಲ. ದಕ್ಷಿಣೇಶ್ವರದವರೆಗೂ ಹೋಯಿತು ಈ ಅಪಲಾಪ. ಶ್ರೀರಾಮಕೃಷ್ಣರು ಮಾತ್ರ ಒಂದು ಮಾತನ್ನೂ ಆಡದೆ ತಟಸ್ಥವಾಗಿದ್ದುಬಿಟ್ಟರು. ಅವರ ಭಕ್ತರಿಗಂತೂ ಇದೊಂದು ನಂಬಲಾಗದ ಸುದ್ದಿ. ಆದರೆ ಹಲವಾರು ಜನ ಮಾತನಾಡಿಕೊಳ್ಳುತ್ತಿರುವಾಗ ನಿಜಾಂಶವಿದ್ದರೂ ಇರಬಹುದು ಎಂಬ ಅನುಮಾನವುಂಟಾಯಿತು. ಕೊನೆಗೆ ನರೇಂದ್ರನ ಬಳಿಗೇ ಹೋಗಿ ಮುಖಾಮುಖಿ ಮಾತನಾಡಿ ಸತ್ಯವೇನೆಂಬುದನ್ನು ತಿಳಿದುಕೊಂಡು ಬರುವುದೇ ಸರಿ ಎಂದು ನಿರ್ಧರಿಸಿ, ಅವರಲ್ಲಿ ಕೆಲವರು ಬಂದು ಕೇಳಿದರು, "ಏನಪ್ಪ ನರೇನ್, ಜನ ಏನೇನೋ ಮಾತನಾಡಿಕೊಳ್ಳುತ್ತಿದ್ದಾರಲ್ಲ! ಕೇಳಿ ನಮಗೆಲ್ಲ ತುಂಬ ಬೇಸರವಾಯಿತು. . ." ಅವರು ಮಾತನಾಡಿದ ರೀತಿ ನೋಡಿದರೆ ಅವರು ಆ ಸುದ್ದಿಯಲ್ಲಿ ಕೆಲವಂಶವನ್ನಾದರೂ ನಂಬಿದ್ದಾರೆನ್ನುವುದು ಸ್ಪಷ್ಟವಾಗಿತ್ತು. ಅದನ್ನು ಕಂಡು ನರೇಂದ್ರನಿಗೆ ಮತ್ತಷ್ಟು ನೋವಾಯಿತು. ಅವನ ಅಭಿಮಾನಕ್ಕೆ ಧಕ್ಕೆಯಾಯಿತು. 'ಛೆ, ಇದೇನಿದು? ಇವರೂ ನನ್ನನ್ನು ಅರ್ಥಮಾಡಿಕೊಳ್ಳಲಾರದೆ ಹೋದರಲ್ಲ! ನನ್ನನ್ನು ಅಂಥ ನೀಚ ಎಂದು ತಿಳಿದುಕೊಂಡುಬಿಟ್ಟಿದ್ದಾರಲ್ಲ!' ಎನ್ನಿಸಿತು. ಅವರು ಪಾಪ-ಪುಣ್ಯಗಳ ಮಾತನ್ನೆತ್ತಿ, ಬುದ್ಧಿ ಹೇಳಲು ಹೊರಟಾಗಲಂತೂ ಇನ್ನಷ್ಟು ಕೆರಳಿ, "ನೋಡಿ, ನರಕಭೀತಿಯಿಂದ ದೇವರನ್ನು ನಂಬುವುದು ಹೇಡಿತನ" ಎಂದು ಕಟುವಾಗಿ ಹೇಳಿಬಿಟ್ಟ. ಪಾಶ್ಚಾತ್ಯ ಚಿಂತಕರ ಅಭಿಪ್ರಾಯಗಳನ್ನೆಲ್ಲ ಉದಾಹರಿಸಿ ದೇವರ ಅಸ್ತಿತ್ವದ ಕುರಿತಾದ ಅವರ ನಂಬಿಕೆಯನ್ನೆಲ್ಲ ಈಡಾಡಿದ. ಇದರ ಪರಿಣಾಮವಾಗಿ ಆ ಭಕ್ತರು ಅವನನ್ನು ಇನ್ನಷ್ಟು ಅಪಾರ್ಥ ಮಾಡಿಕೊಂಡರು. 'ಇವನು ಸಂಪೂರ್ಣ ಹಾಳಾಗಿರುವುದೇ ನಿಜ' ಎಂದು ನಿರ್ಧರಿಸಿ, ಅಲ್ಲಿಂದ ಹೊರಟರು. ಇದನ್ನು ಕಂಡು ಅವನಿಗೆ ಒಂದು ಬಗೆಯಲ್ಲಿ ಸಂತೋಷವೇ ಆಯಿತು. 'ಹೇಗಿದ್ದರೂ ತಪ್ಪಾಗಿಯೇ ಭಾವಿಸುವ ಜನ ಇನ್ನಷ್ಟು ಚೆನ್ನಾಗಿಯೇ ತಪ್ಪಾಗಿ ತಿಳಿದುಕೊಂಡುಹೋಗಲಿ, ಏನೀಗ!' ಎಂದುಕೊಂಡ. ಆದರೆ ಇನ್ನೊಂದು ಬಗೆಯಲ್ಲಿ ಆಲೋಚಿಸಿದಾಗ ದುಃಖ ಉಕ್ಕಿಬಂತು. ಆ ಭಕ್ತರು ಶ್ರೀರಾಮಕೃಷ್ಣರ ಬಳಿಗೆ ಹೋಗಿ ತಾವು ಕಲ್ಪಿಸಿಕೊಂಡಿರುವುದನ್ನೇ ಹೇಳಿ, ಅವರೂ ಅದನ್ನು ನಂಬಿಬಿಟ್ಟರೆ!. . . ಆಮೇಲೆ ತಾನಲ್ಲಿಗೆ ಹೋಗಿ

ಮುಖ ತೋರಿಸುವುದಾದರೂ ಹೇಗೆ? ಆದರೆ ಮರುಕ್ಷಣಕ್ಕೇ ಅವನ ಮನಸ್ಸು ಗಡಸಾಗಿ ಪ್ರತಿಕ್ರಿಯೆ ತೋರಿಸಿತು—'ಆಗಲಿ, ಪರವಾಗಿಲ್ಲ; ಜನದ ಮಾತಿನಿಂದೆಲ್ಲ ಅವರು ನನ್ನನ್ನು ಅಳೆಯುವಂತಿದ್ದರೆ ನಾನು ಯಾರನ್ನೂ ಲೆಕ್ಕಿಸುವವನಲ್ಲ.' ಆದರೆ ಶ್ರೀರಾಮಕೃಷ್ಣರು ತಮ್ಮ ನೆಚ್ಚಿನ ಶಿಷ್ಯನನ್ನು ಎಂದಿಗಾದರೂ ಅಪಾರ್ಥ ಮಾಡಿಕೊಂಡಾರೆಯೆ? ತಮ್ಮ ಸ್ವಂತ ಭಕ್ತರೇ ಬಂದು ನರೇಂದ್ರನ ಬಗ್ಗೆ ತಾವು ಕಂಡುಕೇಳಿದ ಸುದ್ದಿಗಳನ್ನೆಲ್ಲ ತಿಳಿಸಿದರೂ ಪ್ರತಿಕ್ರಿಯಿಸದೆ ಸುಮ್ಮನೆಯೇ ಇದ್ದರು. ಅವರು ಹಾಗೆ ಸುಮ್ಮನಿದ್ದುದಕ್ಕೆ ಕಾರಣ ನರೇಂದ್ರನ ಮೇಲಿನ ಮೋಹವಲ್ಲ. ಬದಲಾಗಿ ಆತ ಪುಟವಿಟ್ಟ ಅಪರಂಜಿಯಂತೆ ಪರಿಶುದ್ಧ ಎಂಬುದು ಅವರಿಗೆ ಗೊತ್ತು. ಶ್ರೀರಾಮಕೃಷ್ಣರ ಪ್ರಿಯ ಶಿಷ್ಯರಲ್ಲೊಬ್ಬನಾದ ಭವನಾಥ ಅಶ್ರುಭರಿತ ಕಂಗಳಿಂದ ಹೇಳಿದ—"ಸ್ವಾಮಿ, ನರೇಂದ್ರ ಇಷ್ಟೊಂದು ಕೆಳಮಟ್ಟಕ್ಕಿಳಿದಾನು ಅಂತ ನಾನು ಕನಸಿನಲ್ಲೂ ಭಾವಿಸಿರಲಿಲ್ಲ" ಎಂದು. ಆಗ ಮಾತ್ರ ಶ್ರೀರಾಮಕೃಷ್ಣರು ರೇಗಿಬಿಟ್ಟರು: "ಮೂರ್ಖ, ಹಾಗೆಲ್ಲ ಮಾತನಾಡಬೇಡ! ನರೇಂದ್ರ ಎಂದಿಗೂ ದಾರಿತಪ್ಪಿ ನಡೆಯಲಾರ ಅಂತ ಜಗನ್ಮಾತೆ ನನಗೆ ಸ್ಪಷ್ಟವಾಗಿ ಹೇಳಿದ್ದಾಳೆ. ನೋಡಿಕೊ, ನೀನು ಇನ್ನೊಂದು ಸಲ ಏನಾದರೂ ಅವನ ಬಗ್ಗೆ ಹಾಗೆಲ್ಲ ಮಾತನಾಡಿದರೆ ನಾನು ನಿನ್ನ ಮುಖ ಕೂಡ ನೋಡುವುದಿಲ್ಲ!" ಮುಂದೆ ಈ ವಿಷಯಗಳೆಲ್ಲ ತಿಳಿದುಬಂದಾಗ ನರೇಂದ್ರನಿಗಾದ ಆಶ್ಚರ್ಯ-ಆನಂದ ಅಷ್ಟಿಷ್ಟಲ್ಲ. ತನ್ನ ಮೇಲಿನ ಅವರ ವಿಶ್ವಾಸ ಪ್ರೇಮಗಳನ್ನು ಮನಗಂಡು ಅವನ ಕಣ್ಣಲ್ಲಿ ನೀರು ತುಂಬಿಬಂತು.

ನರೇಂದ್ರ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ, ತೋರಿಕೆಗೆ ನಾಸ್ತಿಕನಂತೆ ಮಾತಾಡುತ್ತಿದ್ದರೂ ಅವನಿಗೇ ಅದರಲ್ಲಿ ನಂಬಿಕೆಯಿರಲಿಲ್ಲ. ಬಾಲ್ಯದಿಂದಲೂ ತನಗಾಗಿದ್ದ ವಿವಿಧ ಆಧ್ಯಾತ್ಮಿಕ ದರ್ಶನಗಳ, ಅನುಭವಗಳ ನೆನಪು ಮರುಕಳಿಸತೊಡಗಿತ್ತು. ಅದರಲ್ಲೂ ಶ್ರೀರಾಮಕೃಷ್ಣರ ದಿವ್ಯ ಸಂಪರ್ಕದಿಂದ ತಾನು ಪಡೆದುಕೊಂಡ ಅತೀಂದ್ರಿಯ ಅನುಭವಗಳು ಅವನ ಮನಸ್ಸಿನಲ್ಲಿ ನಿಚ್ಚಳವಾಗಿ ಅಚ್ಚೊತ್ತಿದ್ದುವು. ಈ ಅನುಭವಗಳು ಅವನನ್ನು ನಾಸ್ತಿಕನಾಗಲು ಬಿಡಲಾರವು. ದೈವಶ್ರದ್ಧೆಯೆಂಬುದು ಅವನಲ್ಲಿ ರೂಢಮೂಲವಾಗಿತ್ತು. ಎಲ್ಲ ಕಷ್ಟ-ತಾಪತ್ರಯಗಳ ನಡುವೆಯೂ ಅವನ ಮನಸ್ಸೀಗ ತೀವ್ರವಾಗಿ ಆಲೋಚಿಸುತ್ತಿದೆ—'ಭಗವಂತನೆಂಬವನು ಇರಲೇಬೇಕು. ಮತ್ತು ಅವನನ್ನು ಸಾಕ್ಷಾತ್ಕರಿಸಿಕೊಳ್ಳಲು ಒಂದು ಮಾರ್ಗವೂ ಇರಲೇಬೇಕು. ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳದೆಹೋದರೆ ಈ ಜೀವನಕ್ಕೆ ಅರ್ಥವೇನಿದೆ? ಸೊಗಸೇನಿದೆ? ನಾನು ಆ ಸಾಕ್ಷಾತ್ಕಾರದ ಮಾರ್ಗವನ್ನು ಕಂಡುಕೊಳ್ಳಲೇಬೇಕು.' ಹೀಗೆ ಅವನ ಮನಸ್ಸು ಸಂಶಯ-ನಂಬಿಕೆಗಳ ನಡುವೆ ಡೋಲಾಯಮಾನವಾಗಿತ್ತು.

ದಿನಗಳ ಮೇಲೆ ದಿನಗಳು ಉರುಳುತ್ತಿವೆ. ಈ ನಡುವೆ ಅವನ ಆರ್ಥಿಕ ಪರಿಸ್ಥಿತಿ ಇನ್ನೂ ಹಾಗೇ ಇದೆ—ಮೊದಲಿನ ದುಸ್ಥಿತಿಯೇ ಮುಂದುವರಿಯುತ್ತಿದೆ. ಕೆಲಸಕ್ಕಾಗಿ ಅಲೆಯುತ್ತಲೇ ಇದ್ದಾನೆ. ಒಂದು ದಿನ ಹೀಗೆಯೇ ಕೆಲಸ ಹುಡುಕಿಕೊಂಡು ಹೊರಟಿದ್ದಾನೆ; ಬೆಳಗ್ಗಿನಿಂದ ಸುತ್ತಾಡುತ್ತಿದ್ದಾನೆ. ಆ ದಿನ ಮಳೆ ಬೇರೆ. ಮಧ್ಯಾಹ್ನವಾಯಿತು. ಸಂಜೆಯೂ ಆಯಿತು. ಕೆಲಸ ಸಿಗಲಿಲ್ಲ, ಊಟವೂ ಇಲ್ಲ. ಒಂದು ಕಡೆ ದಿನವಿಡೀ ಊಟವಿಲ್ಲದೆ ಹಸಿದಿದ್ದಾನೆ, ಇನ್ನೊಂದು ಕಡೆ ಮಳೆಯಲ್ಲಿ ತೋಯುತ್ತ ಅಲೆದಲೆದು ಸೋತಿದ್ದಾನೆ. ಆದರಿನ್ನೇನು ತಾನೆ ಮಾಡಲು ಸಾಧ್ಯ? ಸೋತ ಕಾಲುಗಳನ್ನು ಮನೆಯ

ಕಡೆಗೆ ಬಲವಂತವಾಗಿ ಎಳೆದುಕೊಂಡು ಹೋಗುತ್ತಿದ್ದಾನೆ. ಮನಸ್ಸು ಮಂಕಾಗಿಬಿಟ್ಟಿದೆ. ನಿಶ್ಶಕ್ತಿಯಿಂದ ಇನ್ನು ಒಂದು ಹೆಜ್ಜೆ ಮುಂದಿಡಲೂ ಸಾಧ್ಯವಿಲ್ಲವೆನಿಸಿತು. ಕಣ್ಣುಕತ್ತಲೆ ಬಂದು ಅಲ್ಲೇ ರಸ್ತೆಯ ಪಕ್ಕದ ಮನೆಯೊಂದರ ಗೋಡೆಗೆ ಒರಗಿ ಕುಸಿದು ಕುಳಿತು ಕೊಂಡ. ಒಂದು ಕ್ಷಣ ಪ್ರಜ್ಞೆ ತಪ್ಪಿದಂತಾಯಿತು. ಮರುಕ್ಷಣವೇ ಎಚ್ಚರವಾಯಿತು. ಆಗ ಅವನ ಮನಸ್ಸನ್ನು ನಾನಾ ಬಗೆಯ ಆಲೋಚನೆಗಳು ಮುತ್ತಿಕೊಂಡು ದಾಳಿ ಮಾಡಿಬಿಟ್ಟುವು. ಅವನು ಆ ಆಲೋಚನೆಗಳನ್ನು ಓಡಿಸಲೂ ಆರ, ಅಷ್ಟೊಂದು ನಿತ್ರಾಣನಾಗಿದ್ದ. ಆಗ ಒಂದು ಅದ್ಭುತ ಸಂಭವಿಸಿತು. ಇದ್ದಕ್ಕಿದ್ದಂತೆ ಯಾವುದೋ ಅಲೌಕಿಕ ಶಕ್ತಿಯ ಪ್ರಭಾವದಿಂದಲೋ ಎಂಬಂತೆ ತನ್ನ ಅಂತರಾತ್ಮವನ್ನು ಸುತ್ತಿದ್ದ ಆವರಣಗಳೆಲ್ಲ ಒಂದೊಂದಾಗಿ ಕಳಚಿಹೋಗುತ್ತಿರುವಂತೆ ಅವನಿಗೆ ಭಾಸವಾಯಿತು. ಇಷ್ಟು ದಿನವೂ ಹಲವಾರು ಸಮಸ್ಯೆಗಳು ಅವನ ಮನಸ್ಸಿನಲ್ಲಿ ಸೇರಿಕೊಂಡು ಅವನನ್ನು ಪೀಡಿಸುತ್ತಿದ್ದುವು: 'ಭಗವತ್ಕೃಪೆ ಮತ್ತು ವಿಧಿನಿಯಮ ಎಂಬವು ಈ ಜಗತ್ತಿನಲ್ಲಿ ಒಟ್ಟೊಟ್ಟಿಗೆ ಇರಲು ಸಾಧ್ಯವೆ? ಭಗವಂತನು ನಿಜಕ್ಕೂ ದಯಾಮಯನಾಗಿದ್ದಲ್ಲಿ, ಅವನದೇ ಆದ ಈ ಸೃಷ್ಟಿಯಲ್ಲಿ ಇಷ್ಟೊಂದು ದುಃಖದಾರಿದ್ರ್ಯಗಳು, ಕಷ್ಟಸಂಕಟಗಳು ಇರಲು ಹೇಗೆ ಸಾಧ್ಯ?'—ಇಂಥವು. ಆದರೆ ಅವನ ಆತ್ಮವನ್ನು ಮುಚ್ಚಿದ್ದ ತೆರೆಗಳು ಒಂದೊಂದಾಗಿ ಕಳಚಿದಾಗ ಈ ಎಲ್ಲ ಸಮಸ್ಯೆಗಳೂ ಆಶ್ಚರ್ಯಕರವಾಗಿ ಪರಿಹಾರ ವಾದುವು. ಆಳವಾದ ಆತ್ಮಾವಲೋಕನದಿಂದ ಸೃಷ್ಟಿಯ ಈ ನಿಯಮಗಳು ಅವನಿಗೆ ಗೋಚರವಾದುವು. ಈಗ ಅವನ ಮನಸ್ಸು ಸಂಪೂರ್ಣ ಶಾಂತವಾಗಿತ್ತು, ಸಮಾಧಾನ ಗೊಂಡಿತ್ತು. ಮೆಲ್ಲನೆ ಅಲ್ಲಿಂದೆದ್ದು ಮನೆಯ ಕಡೆಗೆ ಹೆಜ್ಜೆ ಹಾಕಿದ. ಆಶ್ಚರ್ಯ! ಅವನ ನಿಶ್ಶಕ್ತಿಯೆಲ್ಲ ಮಾಯವಾಗಿತ್ತು. ಅವನಲ್ಲಿ ಒಂದು ನವಶಕ್ತಿ ಉದಿಸಿತ್ತು. ಮನಸ್ಸಿನಲ್ಲಿ ಒಂದು ವಿಶೇಷ ಹುರುಪುಂಟಾಗಿತ್ತು. ಅವನು ಅಪಾರವಾದ ಶಾಂತಿಯನ್ನು ಅನುಭವಿಸ ಲಾರಂಭಿಸಿದ.

ಈ ಅಲೌಕಿಕ ಅನುಭವವಾದ ಮೇಲೆ ನರೇಂದ್ರನ ಸ್ವಭಾವದಲ್ಲೊಂದು ಮಹತ್ತರ ಬದಲಾವಣೆಯಾಯಿತು. ಅವನು ಜನರ ಹೊಗಳಿಕೆ-ತೆಗಳಿಕೆಗಳಿಗೆಲ್ಲ ಕಿವಿ ಗೊಡುವುದನ್ನು ಪೂರ್ತಿಯಾಗಿ ಬಿಟ್ಟುಬಿಟ್ಟ. ಅವನು ಹಿಂದೆಯೇ ತಿಳಿದಿದ್ದ ಒಂದು ವಿಷಯ ಈಗ ಇನ್ನಷ್ಟು ಸ್ಪಷ್ಟವಾಯಿತು. ತಾನು ಸಾಮಾನ್ಯ ಜನರಂತೆ ಹಣ ಸಂಪಾದನೆ ಮಾಡಿ ಸಂಸಾರ ಸಾಗಿಸುವುದಕ್ಕಾಗಿ ಜನ್ಮವೆತ್ತಿದವನಲ್ಲ; ಇನ್ನು ಇಂದ್ರಿಯಸುಖಗಳನ್ನು ಅನುಭವಿಸುವ ಮಾತಂತೂ ದೂರವೇ ಉಳಿಯಿತು—ಎಂಬ ಈ ನಂಬಿಕೆ ಅವನಲ್ಲಿ ಆಳವಾಗಿ ಬೇರೂರಿತು. ಎಂದಮೇಲೆ, ತನ್ನ ಈ ಪರದಾಟವೆಲ್ಲ ನಿರರ್ಥಕವಲ್ಲವೆ? ಆದ್ದರಿಂದ, ಈ ಮಾಯಾಬಂಧನಗಳನ್ನೆಲ್ಲ ಕತ್ತರಿಸಿಕೊಂಡು ತನ್ನ ತಾತನಂತೆಯೇ ಸಂನ್ಯಾಸಿಯಾಗಿ ಮನೆ ಬಿಟ್ಟು ಹೊರಡಲು ಗುಟ್ಟಾಗಿ ಸಿದ್ಧತೆ ನಡೆಸಿ ಅದಕ್ಕೊಂದು ದಿನವನ್ನೂ ನಿಶ್ಚಯಿಸಿದ. ಅವನ ಅದೃಷ್ಟಕ್ಕೆ, ತಾನು ಹೊರಡಬೇಕೆಂದಿದ್ದ ದಿನದಂದೇ ಶ್ರೀರಾಮಕೃಷ್ಣರು ಕಲ್ಕತ್ತಕ್ಕೆ ಬರುವವರಿದ್ದಾರೆ ಎಂಬ ವರ್ತಮಾನ ಸಿಕ್ಕಿತು. ಇದನ್ನು ಕೇಳಿ ಅವನಿಗೆ ಬಹಳ ಸಂತೋಷವಾಯಿತು. 'ಆಹ್! ನಿಜಕ್ಕೂ ಇದು ಶುಭಸೂಚನೆ. ಅಂದು ಗುರುಗಳ ಆಶೀರ್ವಾದ ಪಡೆದುಕೊಂಡೇ ಸರ್ವಸಂಗ ಪರಿತ್ಯಾಗ ಮಾಡಿಬಿಡು ತ್ತೇನೆ' ಎಂದು ಮನಸ್ಸಿನಲ್ಲೇ ಹೇಳಿಕೊಂಡ. ಅಂತೆಯೇ ಆ ದಿನ ಹೋಗಿ ಶ್ರೀರಾಮ ಕೃಷ್ಣರನ್ನು ಭೇಟಿ ಮಾಡಿ ನಮಸ್ಕರಿಸಿದ. ಅವನನ್ನು ಕಂಡ ತಕ್ಷಣವೇ ಶ್ರೀರಾಮಕೃಷ್ಣರಿಗೆ

ಅವನ ಮನದ ಉದ್ದೇಶ ತಿಳಿದುಹೋಯಿತು. ಆದ್ದರಿಂದ "ನೋಡು, ನೀನು ಇಂದು ದಕ್ಷಿಣೇಶ್ವರಕ್ಕೆ ಬಂದು ನನ್ನೊಡನೆಯೇ ಈ ರಾತ್ರಿಯನ್ನು ಕಳೆಯಬೇಕು" ಎಂದು ಒತ್ತಾಯಪಡಿಸಿದರು. ಆದರೆ ನರೇಂದ್ರ ಅಂದೇ ಸರ್ವಸಂಗ ಪರಿತ್ಯಾಗ ಮಾಡಿ ಹೊರಟುಹೋಗಲು ಯೋಜನೆ ಹಾಕಿಕೊಂಡು ಸಿದ್ಧನಾಗಿರುವವನು. ಆದ್ದರಿಂದ ದಕ್ಷಿಣೇಶ್ವರಕ್ಕೆ ಹೋಗುವುದನ್ನು ತಪ್ಪಿಸಿಕೊಳ್ಳಲು ನಾನಾ ಕಾರಣಗಳನ್ನು ಒಡ್ಡಿದ. ಆದರೆ ಏನೂ ಪ್ರಯೋಜನವಾಗಲಿಲ್ಲ. ಅವನು ಅವರ ಜೊತೆಯಲ್ಲಿ ಹೋಗಲೇ ಬೇಕಾಯಿತು. ಇಬ್ಬರೂ ಒಂದೇ ಗಾಡಿಯಲ್ಲಿ ಸಾಗಿದರು. ದಾರಿಯಲ್ಲಿ ವಿಶೇಷವಾದ ಮಾತುಕತೆಯೇನೂ ನಡೆಯಲಿಲ್ಲ. ಆದರೆ ದಕ್ಷಿಣೇಶ್ವರದಲ್ಲಿ ತಮ್ಮ ಕೋಣೆಯನ್ನು ತಲುಪಿದೊಡನೆಯೇ ಶ್ರೀರಾಮಕೃಷ್ಣರು ಭಾವಾವಿಷ್ಟರಾದರು. ಆ ಸ್ಥಿತಿಯಲ್ಲೇ ಮೆಲ್ಲನೆ ನರೇಂದ್ರನ ಬಳಿಸಾರಿದರು. ಅತ್ಯಂತ ವಿಶ್ವಾಸದಿಂದ ಅವನನ್ನು ಸ್ಪರ್ಶಿಸುತ್ತ, ಕಂಬನಿ ದುಂಬಿ ಒಂದು ಹಾಡನ್ನು ಹಾಡಿದರು:

*ನುಡಿಯಲಾರೆವು ನಾವು ರಾಧಾ, ನುಡಿಯದಿರಲೂ ಆರೆವು!*
*ನಾವು ನಿನ್ನನು ಕಳೆದುಕೊಂಡೇವೆಂಬ ಭಯದೊಳಗಿರುವೆವು*

ಈ ಹಾಡನ್ನು ಅವರು ನರೇಂದ್ರನ ಕುರಿತೇ ಹಾಡಿದ್ದರು. ಅಲ್ಲಿಯವರೆಗೂ ನರೇಂದ್ರ ತನ್ನೊಳಗಿನ ಭಾವಾವೇಗವನ್ನು ತಡೆದುಕೊಂಡಿದ್ದ. ಆದರೆ ಶ್ರೀರಾಮಕೃಷ್ಣರು ಆ ಮರ್ಮಸ್ಪರ್ಶಿಯಾದ ಹಾಡನ್ನು ಹಾಡಿದಾಗ ಮಾತ್ರ ಇನ್ನು ತಡೆದುಕೊಳ್ಳುವು ದಾಗದೆ ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಅತ್ತುಬಿಟ್ಟ.

ಹೀಗೆ ಶಿಷ್ಯನ ಮನೋಭಿಪ್ರಾಯ ಗುರುವಿಗೆ ತಿಳಿದಿದೆ, ಗುರುವಿನ ಹಾಡಿನ ಅರ್ಥ ಶಿಷ್ಯನಿಗೂ ಗೊತ್ತಾಗಿದೆ. ಆದ್ದರಿಂದ ಇಬ್ಬರೂ ಕಣ್ಣೀರು ಸುರಿಸುತ್ತಿದ್ದಾರೆ. ಆದರೆ ಇವರಿಬ್ಬರೂ ಹೀಗೆ ಮಾತಿಲ್ಲದೆ ಕಣ್ಣೀರು ಹರಿಸುತ್ತಿರುವುದನ್ನು ಕಂಡ ಭಕ್ತರಿಗೆಲ್ಲ ಆಶ್ಚರ್ಯವೋ ಆಶ್ಚರ್ಯ. ಪಾಪ, ಅವರಿಗೆ ಇವರಿಬ್ಬರ ನಡುವಿನ ಗುಟ್ಟು ಹೇಗೆ ಅರ್ಥವಾಗಬೇಕು! ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರು ಸಹಜ ಸ್ಥಿತಿಗೆ ಬಂದಾಗ ಒಬ್ಬ ಭಕ್ತ ಅವರಿಬ್ಬರೂ ಹಾಗೆ ಕಣ್ಣೀರು ಸುರಿಸಿದ್ದಕ್ಕೆ ಕಾರಣ ಕೇಳಿದ. ಅದಕ್ಕೆ ಶ್ರೀರಾಮಕೃಷ್ಣರು ಮುಗುಳುನಕ್ಕು "ಅದೆಲ್ಲ ನಮ್ಮನಮ್ಮೊಳಗಿನ ವಿಷಯ" ಎಂದು ಬಿಟ್ಟರು. ಹೀಗೆ ಆ ದಿನ ಕಳೆಯಿತು, ರಾತ್ರಿಯಾಯಿತು. ಶ್ರೀರಾಮಕೃಷ್ಣರು ಇತರ ಭಕ್ತ ರನ್ನೆಲ್ಲ ಕಳಿಸಿ ನರೇಂದ್ರನೊಬ್ಬನನ್ನೇ ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು ನುಡಿದರು, "ನರೇನ್, ನನಗೆ ಗೊತ್ತು, ನೀನು ಜನ್ಮ ತಾಳಿರುವುದೇ ಜಗನ್ಮಾತೆಯ ಕಾರ್ಯವನ್ನು ಸಾಧಿಸುವುದಕ್ಕಾಗಿ ಎಂದು. ಆದರೆ ನಾನು ಬದುಕಿರುವವರೆಗೆ ಮಾತ್ರ ನೀನು ಮನೆ ಯಲ್ಲೇ ಇರಬೇಕು." ಹೀಗೆ ಹೇಳುತ್ತ ಮತ್ತೆ ಗಟ್ಟಿಯಾಗಿ ಅತ್ತುಬಿಟ್ಟರು. ಅಂತೂ ತಾನು ಅಂದೇ ಸರ್ವಸಂಗ ಪರಿತ್ಯಾಗ ಮಾಡಿಬಿಡಬೇಕು ಎಂಬ ನಿರ್ಧಾರವನ್ನು ನರೇಂದ್ರ ಬದಲಿಸಬೇಕಾಯಿತು. ಮರುದಿನ ಬೆಳಗ್ಗೆ ಎದ್ದು, ಶ್ರೀರಾಮಕೃಷ್ಣರಿಗೆ ನಮಿಸಿ ಮನೆಗೆ ಹೊರಟ.

ಈಗ ತನ್ನ ತಾಯಿಯನ್ನೂ ಸೋದರ-ಸೋದರಿಯರನ್ನೂ ಸಲಹುವ ಚಿಂತೆ ಮತ್ತೆ ಅವನ ಹೆಗಲೇರಿತು. ಪುನಃ ಉದ್ಯೋಗದ ಬೇಟೆಗೆ ಹೊರಟ. ಯಾವುದೋ ವಕೀಲರ ಆಫೀಸಿನಲ್ಲಿ ಒಂದು ಸಣ್ಣ ಕೆಲಸ ಸಿಕ್ಕಿತು. ಕೆಲವು ಪುಸ್ತಕಗಳನ್ನು ಅನುವಾದಿ

ಸುವ ಕೆಲಸವನ್ನೂ ಮಾಡಿದ. ಇದರಿಂದೆಲ್ಲ ಎರಡು ಹೊತ್ತಿನ ಊಟಕ್ಕಾಗುವಷ್ಟು ಸಿಗುತ್ತಿತ್ತು ಅಷ್ಟೆ. ಇದಾವುದೂ ಶಾಶ್ವತವಾದ ಉದ್ಯೋಗವೇನೂ ಆಗಿರಲಿಲ್ಲ. ತಾಯಿಯ ಹಾಗೂ ಒಡಹುಟ್ಟಿದವರ ಅಶನಾರ್ಥಕ್ಕೆ ಒಂದು ಶಾಶ್ವತ ವ್ಯವಸ್ಥೆ ಮಾಡಬೇಕೆಂದು ಅವನೆಷ್ಟೋ ಪ್ರಯತ್ನಪಟ್ಟ. ಆದರೆ ಕೊನೆಗೂ ಅದು ಅವನಿಂದ ಸಾಧ್ಯವಾಗದೆ ಹೋಯಿತು. ಭಗವಂತನ ಲೀಲೆ ನಿಜಕ್ಕೂ ವಿಚಿತ್ರವಾದದ್ದೇ ಸರಿ. ವಿದ್ಯಾ ಬುದ್ಧಿ ತೇಜಸ್ಸು ಪರಾಕ್ರಮಗಳಿಂದ ತುಂಬಿ ತುಳುಕಾಡುತ್ತಿರುವ ನರೇಂದ್ರನಂತಹ ಅಸಾಧಾರಣ ತರುಣನಿಗೆ ಒಂದು ಸರಿಯಾದ ಕೆಲಸ ಸಿಗದೆಹೋಗಬೇಕಾದರೆ ಅದನ್ನು ಭಗವಂತನ ಲೀಲೆಯೆನ್ನದೆ ಇನ್ನೇನು ತಾನೆ ಹೇಳೋಣ!

ಹೀಗಿರುವಾಗ, ಒಂದು ದಿನ ನರೇಂದ್ರನಿಗೆ ಇದ್ದಕ್ಕಿದ್ದಂತೆ ಒಂದು ಆಲೋಚನೆ ಹೊಳೆಯಿತು. 'ಹೇಗಿದ್ದರೂ ಭಗವಂತ ಶ್ರೀರಾಮಕೃಷ್ಣರ ಪ್ರಾರ್ಥನೆಯನ್ನು ಕೇಳುತ್ತಾನಲ್ಲ, ತಾನೇಕೆ ಅವರನ್ನೇ ಕೇಳಿಕೊಳ್ಳಬಾರದು...? ತನಗೆ ಒದಗಿರುವ ಆರ್ಥಿಕ ಬವಣೆಯನ್ನು ಹೋಗಲಾಡಿಸುವಂತೆ ಒಂದು ಮಾತು ಏಕೆ ಕೇಳಿನೋಡಬಾರದು?' ಶ್ರೀರಾಮಕೃಷ್ಣರು ತನ್ನ ಯಾವ ಕೋರಿಕೆಯನ್ನಾದರೂ ಈಡೇರಿಸಲು ಸಿದ್ಧ ಎಂಬ ಭರವಸೆ ಅವನಿಗಿತ್ತು. ಹೀಗಿರುವಾಗ ಈ ಸಣ್ಣ ಕೋರಿಕೆಯನ್ನು ಈಡೇರಿಸಲಾರರೆ? ಸರಿ, ತಡಮಾಡದೆ ದಕ್ಷಿಣೇಶ್ವರಕ್ಕೆ ಓಡಿದ. ಅವರನ್ನು ಕೇಳಿಕೊಂಡ:

"ಮಹಾಶಯರೆ, ನನ್ನ ತಾಯಿ, ಸೋದರ-ಸೋದರಿಯರೆಲ್ಲ ಸರಿಯಾದ ಊಟ-ಬಟ್ಟೆಗೂ ಗತಿಯಿಲ್ಲದೆ ನರಳುತ್ತಿದ್ದಾರೆ. ನಾನು ಶಕ್ತಿಮೀರಿ ಪ್ರಯತ್ನಿಸಿದರೂ ನನಗೊಂದು ಸರಿಯಾದ ಉದ್ಯೋಗ ಸಿಕ್ಕಿಲ್ಲ. ಹೇಗಿದ್ದರೂ ನೀವು ಜಗನ್ಮಾತೆಯನ್ನು ಚೆನ್ನಾಗಿ ಬಲ್ಲವರು, ಅವಳ ಜೊತೆಯಲ್ಲಿ ಮಾತನಾಡುವವರು. ಈಗ ನನ್ನ ಸಂಸಾರದ ಕಷ್ಟಗಳನ್ನೆಲ್ಲ ಹೋಗಲಾಡಿಸುವಂತೆ ನಿಮ್ಮ ಕಾಳಿಯನ್ನು ನನ್ನ ಪರವಾಗಿ ದಯವಿಟ್ಟು ಕೇಳಿಕೊಳ್ಳಬೇಕು."

ಶ್ರೀರಾಮಕೃಷ್ಣರು: "ಅಯ್ಯೋ! ನಾನು ಆ ತರಹದ ಪ್ರಾರ್ಥನೆಯನ್ನೆಲ್ಲ ಸಲ್ಲಿಸಲಾರೆನಪ್ಪ! ಆದರೆ ನೀನೇ ಯಾಕೆ ಕಾಳಿಯ ಹತ್ತಿರ ಹೋಗಿ ಕೇಳಿಕೊಳ್ಳಬಾರದು? ನೀನು ಅವಳನ್ನು ಒಪ್ಪಿಕೊಳ್ಳದಿರುವುದೇ ನಿನ್ನ ಈ ಎಲ್ಲ ಕಷ್ಟಗಳಿಗೂ ಕಾರಣ."

ನರೇಂದ್ರ: "ಆದರೆ ನನಗೆ ಆಕೆಯ ಪರಿಚಯವೇ ಇಲ್ಲ. ಆದ್ದರಿಂದ ದಯವಿಟ್ಟು ನನ್ನ ಪರವಾಗಿ ನೀವೇ ಅವಳಿಗೆ ಹೇಳಿ. ನೀವು ಹೇಳಲೇಬೇಕು."

ಶ್ರೀರಾಮಕೃಷ್ಣರು (ವಾತ್ಸಲ್ಯ ತುಂಬಿದ ದನಿಯಲ್ಲಿ): "ನರೇನ್! ನಿಜ ಹೇಳಬೇಕೆಂದರೆ, ನಾನು ನಿನಗಾಗಿ ಬಹಳ ಸಲ ಪ್ರಾರ್ಥನೆ ಸಲ್ಲಿಸಿದ್ದೇನಪ್ಪ. ಆದರೆ ನೀನೇ ಜಗನ್ಮಾತೆಯನ್ನು ಒಪ್ಪಿಕೊಳ್ಳುವುದಿಲ್ಲವಲ್ಲ, ಆದ್ದರಿಂದ ಅವಳು ನನ್ನ ಆ ಪ್ರಾರ್ಥನೆಯನ್ನು ಈಡೇರಿಸಿಕೊಡಲು ಒಪ್ಪುತ್ತಿಲ್ಲ... ಸರಿ, ಆಗಲಿ; ಇವೊತ್ತು ಮಂಗಳವಾರ, ಒಳ್ಳೆಯ ದಿನ. ಇವೊತ್ತು ರಾತ್ರಿ ನೀನು ಕಾಳೀ. ದೇವಾಲಯಕ್ಕೆ ಹೋಗಿ ಅವಳಿಗೆ ಸಾಷ್ಟಾಂಗ ಪ್ರಣಾಮ ಮಾಡು. ಬಳಿಕ ನಿನಗೆ ಬೇಕಾದ ವರವನ್ನು ಕೇಳಿಕೊ. ಅವಳು ಅನುಗ್ರಹಿಸುತ್ತಾಳೆ. ಅವಳು ಸರ್ವಜ್ಞೆ, ಜ್ಞಾನಸ್ವರೂಪಿಣಿ, ಪರಬ್ರಹ್ಮನ ಆದ್ಯಾಶಕ್ತಿ. ಅವಳು ಇಚ್ಛಾಮಾತ್ರದಿಂದ ಸಮಸ್ತ ಬ್ರಹ್ಮಾಂಡವನ್ನೇ ಸೃಷ್ಟಿಸಿದವಳು! ಆಕೆ ಮನಸ್ಸು ಮಾಡಿದರೆ ಆಗದಿರುವುದೇನಿದೆ?"

ಅತ್ಯಾಶ್ಚರ್ಯದ ಸಂಗತಿಯೆಂದರೆ ನರೇಂದ್ರನಿಗೆ ಅವರಾಡಿದ ಪ್ರತಿಯೊಂದು ಮಾತೂ ಅಕ್ಷರಶಃ ನಂಬಿಕೆಯಾಯಿತು. ಏಕೆಂದರೆ ಶ್ರೀರಾಮಕೃಷ್ಣರು ಸದಾ ಜಗನ್ಮಾತೆಯೊಂದಿಗೆ ವಾಸವಾಗಿರುವವರಲ್ಲವೆ? ಅಲ್ಲದೆ, ಅವನನ್ನೀಗ ತಾಳಲಾರದ ಕಷ್ಟಗಳು ಬಂದು ಮುತ್ತಿಕೊಂಡಿವೆಯಲ್ಲ! ಸರಿ, ರಾತ್ರಿಯಾಗುವುದನ್ನೇ ಕಾಯುತ್ತ ಕುಳಿತ. ಕೊನೆಗೆ, ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಶ್ರೀರಾಮಕೃಷ್ಣರ ಅನುಜ್ಞೆ ಪಡೆದು ಕಾಳೀ ದೇವಾಲಯಕ್ಕೆ ಹೊರಟ. ಹೋಗುವಾಗಲೇ ಅವನನ್ನೊಂದು ದೈವೀ ಭಾವೋನ್ಮತ್ತತೆ ಆವರಿಸಿಕೊಂಡುಬಿಟ್ಟಿತ್ತು. ಸರಿಯಾಗಿ ಹೆಜ್ಜೆಹಾಕಲೂ ಸಾಧ್ಯವಾಗುತ್ತಿಲ್ಲ ಅವನಿಗೆ! 'ನಾನೀಗ ಜೀವಂತ ದೇವಿಯ ಬಳಿಗೆ ಹೋಗುತ್ತಿದ್ದೇನೆ, ಅವಳ ಮಾತುಗಳನ್ನು ಕೇಳಲಿದ್ದೇನೆ' ಎಂಬ ಭಾವವೇ ಅವನ ನರನಾಡಿಗಳಲ್ಲೆಲ್ಲ ತುಡಿಯುತ್ತಿತ್ತು. ತೂರಾಡುತ್ತಲೇ ದೇವಸ್ಥಾನವನ್ನು ಪ್ರವೇಶಿಸಿದ. ನೋಡುತ್ತಾನೆ, ಗರ್ಭಗುಡಿಯಲ್ಲಿ ಭವತಾರಿಣಿ ಸಾಕ್ಷಾತ್ ಚಿನ್ಮಯಿಯಾಗಿ ನಿಂತಿದ್ದಾಳೆ! ಚೈತನ್ಯಮಯಿಯಾಗಿ ನಿಂತಿದ್ದಾಳೆ! ದಿವ್ಯ ಸೌಂದರ್ಯದಿಂದ ಶೋಭಾಯಮಾನಳಾಗಿದ್ದಾಳೆ! ಭಕ್ತರ ಅಭೀಷ್ಟಗಳನ್ನು ಈಡೇರಿಸಲು ಸಿದ್ಧಳಾಗಿ, ದಿವ್ಯ ವಾತ್ಸಲ್ಯವನ್ನು ಹರಿಯಿಸುತ್ತಿದ್ದಾಳೆ. ಇಂಥ ಜಗನ್ಮಾತೆಯನ್ನು ಕಂಡು ನರೇಂದ್ರ ಭಾವಾವೇಶಭರಿತನಾಗಿ, ಆನಂದೋನ್ಮತ್ತನಾಗಿ ದೀರ್ಘದಂಡಪ್ರಣಾಮ ಮಾಡಿದ. ಬಳಿಕ ಕೈಜೋಡಿಸಿಕೊಂಡು, "ಅಮ್ಮಾ ಜಗನ್ಮಾತೆ! ವಿವೇಕ ಕೊಡು, ವೈರಾಗ್ಯ ಕೊಡು, ಜ್ಞಾನ ಕೊಡು, ಭಕ್ತಿ ಕೊಡು! ಅಮ್ಮಾ ನನಗೆ ನಿರಂತರವೂ ನಿನ್ನ ದರ್ಶನವಾಗುವಂತೆ ಅನುಗ್ರಹಿಸು!" ಎಂದು ಪ್ರಾರ್ಥಿಸಿದ.

ಈಗ ಅವನ ಇಡೀ ವ್ಯಕ್ತಿತ್ವದಲ್ಲಿ ಒಂದು ಅಪೂರ್ವವಾದ ದಿವ್ಯ ಶಾಂತಿ ನೆಲೆಸಿದೆ. ಅವನ ಹೃದಯದಲ್ಲಿ ಜಗನ್ಮಾತೆ ಪ್ರಕಾಶಿಸುತ್ತಿದ್ದಾಳೆ.

ಆನಂದಭರಿತನಾಗಿ ತಮ್ಮ ಬಳಿಗೆ ಬಂದ ನರೇಂದ್ರನನ್ನು ಶ್ರೀರಾಮಕೃಷ್ಣರು ಕೇಳಿದರು: "ಏನು, ಹೋದ ಕೆಲಸವಾಯಿತೆ? ನಿನ್ನ ಆರ್ಥಿಕ ಮುಗ್ಗಟ್ಟನ್ನು ಹೋಗಲಾಡಿಸುವಂತೆ ಜಗನ್ಮಾತೆಯನ್ನು ಕೇಳಿಕೊಂಡೆಯಾ?"

ನರೇಂದ್ರ ತಬ್ಬಿಬ್ಬಾಗಿ ನುಡಿದ: "ಇಲ್ಲ ಮಹಾಶಯರೆ. ಎಲ್ಲ ಮರೆತೇಬಿಟ್ಟೆ. ಈಗ ನಾನೇನು ಮಾಡಲಿ?"

ಶ್ರೀರಾಮಕೃಷ್ಣರು: "ಇನ್ನೇನು ಮಾಡುವುದು? ಮತ್ತೆ ಹೋಗು, ನಿನ್ನ ಅವಶ್ಯಕತೆಗಳನ್ನೆಲ್ಲ ಕೇಳಿಕೊ."

ನರೇಂದ್ರ ಮತ್ತೊಮ್ಮೆ ಕಾಳಿಯನ್ನು ನೋಡಲು ಹೊರಟ. ಆದರೆ ಪುನಃ ಅದೇ ಭಾವಾವೇಶ! ಬೇರೆಲ್ಲವನ್ನೂ ಮರೆತೇಬಿಟ್ಟ. ಸಾಷ್ಟಾಂಗ ಪ್ರಣಾಮ ಮಾಡಿ ಜ್ಞಾನ-ಭಕ್ತಿಗಳನ್ನು ಕರುಣಿಸುವಂತೆ ಹೃತ್ಪೂರ್ವಕವಾಗಿ ಬೇಡಿಕೊಂಡು ಹಿಂದಿರುಗಿದ. ಶ್ರೀರಾಮಕೃಷ್ಣರು ಕೇಳಿದರು:

"ಏನು, ಈ ಸಲವಾದರೂ ಸರಿಯಾಗಿ ಕೇಳಿಕೊಂಡೆಯಾ? ಅಥವಾ ಮತ್ತೆ ಮರೆತೆಯೋ?"

ನರೇಂದ್ರ (ನಾಚಿಕೆಯಿಂದ): "ಹೌದು, ಈ ಸಲವೂ ಮರೆತೇಬಿಟ್ಟೆ. ಅಲ್ಲಿ ಹೋಗುವಷ್ಟರಲ್ಲೇ ಯಾವುದೋ ಅಲೌಕಿಕ ಶಕ್ತಿಯ ಪ್ರಭಾವಕ್ಕೆ ಸಿಕ್ಕಿಕೊಂಡು ಮನೆಯ ವಿಷಯವನ್ನೆಲ್ಲ ಮರೆತೆ. ಕೇವಲ ಜ್ಞಾನ-ಭಕ್ತಿಗಳಿಗಾಗಿ ಪ್ರಾರ್ಥಿಸಿಕೊಂಡೆ. ಈಗ ಉಪಾಯವೇನು? ನೀವೇ ಹೇಳಿ."

ಶ್ರೀರಾಮಕೃಷ್ಣರು: "ಛೆ, ಎಂಥಾ ದಡ್ಡ ನೀನು ! ಇದೊಂದೆರಡು ಮಾತುಗಳನ್ನು ನೆನಪಿಟ್ಟುಕೊಂಡು ಹೋಗಿ ಕೇಳುವುದಕ್ಕಾಗಲಿಲ್ಲವೆ ನಿನ್ನಿಂದ ? ಸರಿ, ಪುನಃ ಹೋಗು. ಈ ಸಲವಾದರೂ ನಿನಗೆ ಬೇಕಾದ್ದನ್ನು ಬೇಡಿಕೊ. ಮರೆತೀಯೆ ಮತ್ತೆ!"

ಈ ಸಲ ಅವನು ಮನಸ್ಸು ಗಟ್ಟಿ ಮಾಡಿಕೊಂಡು, ದೇವಿಯೆದುರು ತನ್ನ ಬಯಕೆಯನ್ನಿಡುವ ದೃಢ ನಿರ್ಧಾರದಿಂದ ಹೊರಟ. ತಾನು ಬಂದ ಉದ್ದೇಶವನ್ನು ಮರೆಯಲಿಲ್ಲ. ಆದರೆ ದೇವಿಯ ಮುಂದೆ ನಿಂತಾಗ ಮಾತ್ರ ಅವನಿಗೆ ಇನ್ನಿಲ್ಲದಷ್ಟು ನಾಚಿಕೆಯಾಯಿತು. 'ಆಹಾ, ಸಾಕ್ಷಾತ್ ಜಗನ್ಮಾತೆಯ ಬಳಿಗೆ ಬಂದು ಎಂಥಾ ಕ್ಷುಲ್ಲಕವಾದದ್ದನ್ನು ಕೇಳಲು ಹೊರಟಿದ್ದೇನೆ, ಚಕ್ರವರ್ತಿಯ ಬಳಿಗೆ ಹೋಗಿ ನಾಲ್ಕು ಬದನೇಕಾಯಿ ಕೇಳುವಂತೆ ! ಛಿ, ನಾನೆಂಥ ಮೂರ್ಖ !' ಎಂದು ಆಲೋಚಿಸಿ, ತುಂಬ ದುಃಖದಿಂದ ಜಗಜ್ಜನನಿಯ ಮುಂದೆ ಶಿರಬಾಗಿ ನಮಸ್ಕರಿಸುತ್ತ, "ಅಮ್ಮಾ ಜಗನ್ಮಾತೆ ! ನನಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನೇ ಕರುಣಿಸು. ನನಗಿನ್ನೇನೂ ಬೇಡ" ಎಂದು ಮೊರೆಯಿಟ್ಟ.

ಹೀಗೆ ಪ್ರಾರ್ಥಿಸಿಕೊಂಡು ಹೊರಗೆ ಬರುತ್ತಿದ್ದಂತೆಯೇ ಅವನು ವಿಸ್ಮಯಗೊಂಡು ಆಲೋಚಿಸಿದ: 'ನನಗೇನಾಗುತ್ತಿದೆ ಇವತ್ತು! ನನ್ನ ಮನಸ್ಸು ನನ್ನ ಅಧೀನದಲ್ಲೇ ಇದ್ದಂತಿಲ್ಲವಲ್ಲಾ ?. . . ಹೌದು, ಇದೆಲ್ಲ ಶ್ರೀರಾಮಕೃಷ್ಣರದೇ ಕೈವಾಡ. ಇಲ್ಲದಿದ್ದರೆ ಹೀಗೆಲ್ಲ ಆಗಲು ಸಾಧ್ಯವಿಲ್ಲ. ಮೂರು ಸಲ ಬಂದು ಮೂರು ಸಲವೂ ನನ್ನ ಮನಸ್ಸಿನ ಕೋರಿಕೆಯನ್ನು ಸಲ್ಲಿಸಲು ಆಗಲಿಲ್ಲವೆಂದರೆ !'

ನೇರವಾಗಿ ಶ್ರೀರಾಮಕೃಷ್ಣರ ಬಳಿಗೆ ಬಂದು ಹೇಳಿದ: "ಮಹಾಶಯರೆ, ನನ್ನ ಮೇಲೆ ಮೋಡಿ ಹಾಕಿ ನಾನು ಎಲ್ಲವನ್ನೂ ಮರೆಯುವಂತೆ ಮಾಡುತ್ತಿರುವುದು ನೀವೇ ಎಂದು ನನಗೆ ಅರ್ಥವಾಗಿದೆ. ಈಗ ನೀವೇ ನನ್ನ ಮೇಲೆ ಅನುಗ್ರಹ ಮಾಡಬೇಕು. ನನ್ನ ಮನೆಮಂದಿಯ ಅನ್ನ-ಬಟ್ಟೆಗೆ ಕೊರತೆಯಿಲ್ಲದಂತೆ ಮಾಡುವುದು ಈಗ ನಿಮ್ಮದೇ ಜವಾಬ್ದಾರಿ."

ಶ್ರೀರಾಮಕೃಷ್ಣರು: "ಮಗೂ ನರೇನ್, ನಾನಾಗಲೇ ಹೇಳಲಿಲ್ಲವೆ ? ನನ್ನ ಬಾಯಿಂದ ಅಂಥ ಪ್ರಾರ್ಥನೆ ಬಾರದಪ್ಪ. ನೀನು ಏನು ಕೇಳಿಕೊಂಡರೆ ಅದನ್ನು ಆಕೆ ದಯಪಾಲಿಸುತ್ತಾಳೆ ಅಂತ ಕೂಡ ನಾನು ಹೇಳಿದೆ. ಆದರೆ ನೀನೇ ನಿನಗೆ ಬೇಕಾದ್ದನ್ನು ಕೇಳಿಕೊಳ್ಳದಿದ್ದರೆ ನಾನು ತಾನೆ ಏನು ಮಾಡಲಿ ? ಐಹಿಕ ಸುಖವನ್ನು ಅನುಭವಿಸುವುದು ನಿನ್ನ ಹಣೆಯಲ್ಲಿ ಬರೆದಿಲ್ಲ, ಅಷ್ಟೇ !"

ಆದರೆ ನರೇಂದ್ರ ಅಷ್ಟಕ್ಕೆ ಬಿಡದೆ ಮತ್ತೆಮತ್ತೆ ಗೋಗರೆದ: "ಅದೆಲ್ಲ ಆಗುವುದಿಲ್ಲ. ನನಗೋಸ್ಕರ ನೀವು ಕೇಳಿಕೊಳ್ಳಲೇಬೇಕು. ನೀವು ಒಂದು ಮಾತು ಹೇಳಿದರೆ ಸಾಕು, ನನ್ನ ಮನೆಯವರ ಕಷ್ಟಗಳೆಲ್ಲ ದೂರವಾಗುತ್ತವೆ, ನನಗೆ ಚೆನ್ನಾಗಿ ಗೊತ್ತು."

ಕಟ್ಟಕಡೆಗೆ ಶ್ರೀರಾಮಕೃಷ್ಣರಿಂದ ಅಭಯ ದೊರೆಯಿತು: "ಸರಿ, ನಡೆ; ಅವರಿನ್ನು ಕನಿಷ್ಠ ಅನ್ನ-ಬಟ್ಟೆಗಳಿಗಾಗಿ ಪರದಾಡಬೇಕಾಗುವುದಿಲ್ಲ."

ಈ ಮಾತು ಸತ್ಯವಾಗಿ ಪರಿಣಮಿಸಿತು. ಭಗವಂತನ ಸ್ವರೂಪವನ್ನು ಪರಿಪೂರ್ಣವಾಗಿ ಅರಿಯುವಲ್ಲಿ ನರೇಂದ್ರನಿಗೆ ಈ ಅನುಭವ ಬಹಳವಾಗಿ ಸಹಾಯ ಮಾಡಿತು. 'ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು; ಅವನು ಸಗುಣನೂ ಹೌದು, ನಿರ್ಗುಣನೂ ಹೌದು; ಅವನನ್ನು ತಂದೆಯೆನ್ನಬಹುದು, ತಾಯಿ ಎನ್ನಲೂ ಬಹುದು' ಎಂಬ ಸತ್ಯ ಅವನಿಗೆ ಇದೀಗ ಅರ್ಥವಾಗತೊಡಗಿದೆ. ಇಲ್ಲಿಯವರೆಗೆ ಅವನು ಭಗ

ವಂತನ ಸಾಕಾರ ಸ್ವರೂಪವನ್ನಾಗಲಿ ಮಾತೃತ್ವವನ್ನಾಗಲಿ ಒಪ್ಪಿಕೊಳ್ಳುತ್ತಿರಲಿಲ್ಲ. ಭಗವಂತನನ್ನು ವಿಗ್ರಹರೂಪದಲ್ಲಿ ಅರ್ಚಿಸಿ ಆರಾಧಿಸುವುದರಿಂದ ಆಧ್ಯಾತ್ಮಿಕ ಸಾಧನೆಯಲ್ಲಿ ವಿಶೇಷ ಅನುಕೂಲತೆಯಿದೆ ಎಂಬ ಸತ್ಯವನ್ನು ಒಪ್ಪಿಕೊಳ್ಳುತ್ತಿರಲಿಲ್ಲ. ಈಗ ಈ ಹೊಸ ಅನುಭವವಾದನಂತರ ಭಗವಂತನ ಸಾಕಾರಸ್ವರೂಪವನ್ನು ಒಪ್ಪಿಕೊಂಡು ಸಾಕಾರ ಮೂರ್ತಿಯಾದ ಕಾಳಿಯ ಮುಂದೆ ಉದ್ದಂಡ ಪ್ರಣಾಮ ಮಾಡುತ್ತಾನೆ. ಭಗವಂತನ ಮಾತೃತ್ವವನ್ನು ಒಪ್ಪಿಕೊಂಡು ಅದೇ ಜಗನ್ಮಾತೆಯನ್ನು ಪ್ರಾರ್ಥಿಸಿಕೊಳ್ಳುತ್ತಾನೆ. ನಿಜಕ್ಕೂ ಅವನಲ್ಲಿ ಇದೊಂದು ಅದ್ಭುತ ಪರಿವರ್ತನೆ; ಆತನ ಶಿಷ್ಯವೃತ್ತಿಯಲ್ಲಿ ಮಹತ್ವದ ಘಟ್ಟ. ಏಕೆಂದರೆ ಅವನು ಯಾವುದೇ ವಿಚಾರವನ್ನೂ ಸುಮ್ಮನೆ ಒಪ್ಪುವವನೇ ಅಲ್ಲ. ಆದ್ದರಿಂದಲೇ ಇಷ್ಟು ದಿನವೂ ಸಾಕಾರ ಭಗವಂತನ ಪೂಜೆಯನ್ನು 'ಮೌಢ್ಯ' ಎಂದು ಹೀಯಾಳಿಸುತ್ತಿದ್ದ. ಇನ್ನು ಮುಂದೆ ಅವನು ಹಾಗೆಂದೂ ಮಾಡಲಾರ. ಏಕೆಂದರೆ ಅರ್ಧಂಬರ್ಧ ನಂಬಿಕೆಯೆಂಬುದು ಅವನ ಜಾಯಮಾನದಲ್ಲೇ ಇಲ್ಲ. ಯಾವುದನ್ನೇ ಆಗಲಿ ಒಮ್ಮೆ ಒಪ್ಪಿ ಸ್ವೀಕರಿಸಿದನೆಂದರೆ ಅದನ್ನು ಮತ್ತೆ ಬಿಡಲಾರ. ಮಾತ್ರವಲ್ಲ, ಅತಿ ಶೀಘ್ರದಲ್ಲೇ ಅವನೊಳಗಿನ ಭಕ್ತಿ ಮೊಳೆತು ಬೃಹತ್ತಾಗಿ ನಿಲ್ಲಲಿದೆ. ಹೀಗೆ ಅವನ ಆಧ್ಯಾತ್ಮಿಕ ಜೀವನವು ಪರಿಪೂರ್ಣತೆಯ ದಾರಿಯಲ್ಲಿ ಮುನ್ನಡೆಯುವಂತಾಗಿದೆ. ಶ್ರೀರಾಮಕೃಷ್ಣರಿಗಂತೂ ಇದು ಬಹಳ ಸಂತೋಷದ ವಿಷಯ. ಮುಂದೆ ಸ್ವಾಮಿ ವಿವೇಕಾನಂದರಾಗಿ ಜಗತ್ತಿಗೆ ಆಧ್ಯಾತ್ಮಿಕ ಜೀವನದ ಸಮಗ್ರ ಪರಿಚಯ ಮಾಡಿಸಿಕೊಡಬೇಕಾದ ನರೇಂದ್ರ, ಇಂದು ಮೂರ್ತಿಪೂಜೆಯನ್ನೇ ಒಪ್ಪಿಕೊಳ್ಳದಿದ್ದರೆ ಹೇಗೆ ? ಭಗವಂತನ ಮಾತೃತ್ವವನ್ನು ಒಪ್ಪಿಕೊಳ್ಳದಿದ್ದರೆ ಹೇಗೆ ? ಆಧ್ಯಾತ್ಮಿಕ ಜೀವನವೆಂಬುದು ಪರಿಪೂರ್ಣವಾಗಬೇಕಾದರೆ ಅದರ ಸಮಸ್ತ ಅಂಶಗಳನ್ನೂ, ಅವುಗಳ ಪ್ರಾಶಸ್ತ್ಯ ಹಾಗೂ ಉಪಯುಕ್ತತೆಗಳನ್ನೂ ಅರಿತಿರಬೇಕಾಗುತ್ತದೆ. ಇಲ್ಲದಿದ್ದರೆ ಅಂಥವನ ಜ್ಞಾನವೆಂಬುದು ಆನೆಯನ್ನು ಮುಟ್ಟಿನೋಡಿದ ಕುರುಡರ ಕಥೆಯಂತಾಗಿಬಿಡುತ್ತದೆ. ಆದರೆ ಶ್ರೀರಾಮಕೃಷ್ಣರು ಅವತರಿಸಿರುವುದು ಸರ್ವಧರ್ಮ ಸಮನ್ವಯವನ್ನು ಸ್ಥಾಪಿಸುವುದಕ್ಕಾಗಿ; ಸರ್ವಭಾವಗಳನ್ನು ಪುರಸ್ಕರಿಸುವುದಕ್ಕಾಗಿ; ಸರ್ವಸಾಧನೆಗಳ ಮರ್ಮವನ್ನು ಮನಮುಟ್ಟಿಸುವುದಕ್ಕಾಗಿ. ಹೀಗಿರುವಾಗ, ಅವರ ಪಟ್ಟಶಿಷ್ಯನಾದ ನರೇಂದ್ರ, ಶಾಸ್ತ್ರಸಮ್ಮತವಾದ ಮೂರ್ತಿಪೂಜೆಯನ್ನು ನಿರಾಕರಿಸಿಬಿಟ್ಟರೆ ಹೇಗೆ ? ಶ್ರೇಷ್ಠ ಭಕ್ತರ ಅನುಭವಸಿದ್ಧ ವಿಷಯವಾದ ಭಗವಂತನ ಜಗನ್ಮಾತೃತ್ವದ ಅಂಶವನ್ನೇ ಒಪ್ಪಿಕೊಳ್ಳದಿದ್ದರೆ ಹೇಗೆ ? ಆದರೀಗ ಅವನಲ್ಲಿ ಪರಿವರ್ತನೆಯುಂಟಾಗಿದೆ. ಆಧ್ಯಾತ್ಮಿಕ ಸಾಧನೆಯ ಮಾರ್ಗದಲ್ಲಿ ಅವನು ದೊಡ್ಡ ಹೆಜ್ಜೆಯೊಂದನ್ನಿಟ್ಟಿದ್ದಾನೆ.

ಮರುದಿನ ಮಧ್ಯಾಹ್ನ; ಶ್ರೀರಾಮಕೃಷ್ಣರು ತಮ್ಮ ಕೋಣೆಯಲ್ಲಿ ಒಬ್ಬರೇ ಕುಳಿತಿದ್ದಾರೆ. ನರೇಂದ್ರ ಹೊರಗೆ ಜಗಲಿಯ ಮೇಲೆ ನಿದ್ರಿಸುತ್ತಿದ್ದಾನೆ. ಆಗ ವೈಕುಂಠನಾಥ ಸನ್ಯಾಲ ಎಂಬೊಬ್ಬ ತರುಣಭಕ್ತ ಅಲ್ಲಿಗೆ ಬಂದ. 'ಇದೇನು ಇವನು ಈ ಹೊತ್ತಿನಲ್ಲಿ ಮಲಗಿಕೊಂಡಿದ್ದಾನಲ್ಲ!' ಎಂದು ಅವನಿಗೆ ಆಶ್ಚರ್ಯವಾಗಿರಬೇಕು. ಆತ ತಮಗೆ ನಮಸ್ಕಾರ ಮಾಡಿದೊಡನೆಯೇ ಶ್ರೀರಾಮಕೃಷ್ಣರು ಉತ್ಸಾಹದಿಂದ ಹೇಳತೊಡಗಿದರು: "ನೋಡು, ಈ ಹುಡುಗ ಇದ್ದಾನಲ್ಲ, ಇವನು ಬಹಳ ಒಳ್ಳೆಯ ಹುಡುಗ. ನರೇಂದ್ರ ಅಂತ ಇವನ ಹೆಸರು. ಇವನು ಇಲ್ಲಿಯವರೆಗೂ ಜಗನ್ಮಾತೆಯನ್ನು ಒಪ್ಪಿಕೊಳ್ಳುತ್ತಿರಲಿಲ್ಲ, ಆದರೆ ನಿನ್ನೆ ಒಪ್ಪಿಕೊಂಡುಬಿಟ್ಟ ! ಈಚೆಗೆ ಅವನು ವಿಪರೀತ ಕಷ್ಟದಲ್ಲಿದ್ದಾನೆ.

ಆದ್ದರಿಂದ ಅವನಿಗೆ ನಾನು, ಹಣಕ್ಕಾಗಿ ಜಗನ್ಮಾತೆಯನ್ನು ಸ್ವಲ್ಪ ಪ್ರಾರ್ಥಿಸಿಕೊ ಎಂದು ಹೇಳಿದೆ. ಆದರೆ ಅವನಿಂದ ಅದು ಸಾಧ್ಯವಾಗಲೇ ಇಲ್ಲ. ದೇವಿಯಿಯನ್ನು ಹಾಗೆ ಕೇಳುವುದಕ್ಕೆ ಅವನಿಗೆ ನಾಚಿಕೆಯಾಯಿತಂತೆ. ದೇವಸ್ಥಾನಕ್ಕೆ ಹೋಗಿಬಂದವನೇ ದೇವಿಯ ಮೇಲೆ ತನಗೊಂದು ಹಾಡು ಹೇಳಿಕೊಡುವಂತೆ ನನ್ನನ್ನು ಕೇಳಿಕೊಂಡ. ನಾನು ಹೇಳಿಕೊಟ್ಟೆ. ನಿನ್ನೆ ರಾತ್ರಿಯಿಡೀ ಅದನ್ನೇ ಹಾಡುತ್ತಾ ಇದ್ದುಬಿಟ್ಟ. ಆದ್ದರಿಂದ ಅವನೀಗ ಮಲಗಿಕೊಂಡಿದ್ದಾನೆ."

ಹೀಗೆಂದ ಶ್ರೀರಾಮಕೃಷ್ಣರು ತುಂಬ ಮುಗ್ಧ ಸಂತೋಷದಿಂದ ಮತ್ತೆ ಹೀಗೆಂದರು: "ಇವನು ಜಗನ್ಮಾತೆಯನ್ನು ಒಪ್ಪಿಕೊಂಡದ್ದು ದೊಡ್ಡ ಅದ್ಭುತವಲ್ಲವೆ ? !"

ವೈಕುಂಠ: "ಹೌದು, ನಿಜಕ್ಕೂ ಅದ್ಭುತವೇ."

ಸ್ವಲ್ಪ ಹೊತ್ತು ಸುಮ್ಮನಿದ್ದ ಶ್ರೀರಾಮಕೃಷ್ಣರು ಪುನಃ ನುಡಿದರು: "ಆಶ್ಚರ್ಯ ! ಅಲ್ಲವೆ ? ಏನೆನ್ನುತ್ತೀಯಾ ?"

ಹೀಗೆ ಕೆಲಹೊತ್ತು ಶ್ರೀರಾಮಕೃಷ್ಣರ ಬಾಯಲ್ಲಿ ಮತ್ತೆಮತ್ತೆ ಅದೇ ಮಾತು ಅದೇ ಉದ್ಗಾರ ಬರುತ್ತಿತ್ತು. ನರೇಂದ್ರ ಜಗನ್ಮಾತೆಯನ್ನು ಒಪ್ಪಿಕೊಳ್ಳುವುದು ಅವರ ದೃಷ್ಟಿಯಲ್ಲಿ ಎಷ್ಟು ಪ್ರಾಮುಖ್ಯವಾಗಿತ್ತು ಎಂದು ಇದರಿಂದ ಊಹಿಸಬಹುದು.

ಅಪರಾಹ್ನ ನಾಲ್ಕು ಗಂಟೆಯ ಹೊತ್ತಿಗೆ ನರೇಂದ್ರ ಮನೆಗೆ ಹೊರಟು ಶ್ರೀರಾಮಕೃಷ್ಣರಿಂದ ಬೀಳ್ಕೊಳ್ಳಲು ಬಂದ. ಅವನನ್ನು ಕಂಡೊಡನೆ ಅವರು ಉತ್ಸುಕರಾಗಿ ಅವನ ಬಳಿಸಾರಿ, ಹೆಚ್ಚುಕಡಿಮೆ ಅವನಿಗೆ ತಗಲಿಕೊಂಡಂತೆಯೇ ಕುಳಿತರು. ಬಳಿಯಿದ್ದ ವೈಕುಂಠನಾಥನಿಗೆ ತಮ್ಮಿಬ್ಬರನ್ನೂ ತೋರಿಸಿಕೊಳ್ಳುತ್ತ ಹೇಳಿದರು: "ನೋಡು ! ನಾನೇ ಇವನು ಮತ್ತು ಇವನೇ ನಾನು ಎನ್ನುವುದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ. ನಮ್ಮಿಬ್ಬರಲ್ಲಿ ಯಾವ ಭೇದವೂ ಇಲ್ಲ. ಗಂಗೆಯ ನೀರಿನ ಮೇಲೆ ತೇಲುತ್ತಿರುವ ಒಂದು ಕಡ್ಡಿ ನೀರನ್ನು ಎರಡಾಗಿ ವಿಭಜಿಸುವಂತೆ ಕಂಡರೂ ನಿಜಕ್ಕೂ ಅದು ಒಂದೇ ತಾನೆ ! ಹಾಗೇ ನಾವಿಬ್ಬರೂ ಕೂಡ. ನಾನು ಹೇಳಿದ್ದು ನಿನಗೆ ಅರ್ಥವಾಯಿತೆ ? ಏನು ಹೇಳುತ್ತಿ ?"

ಆದರೆ ವೈಕುಂಠನಿಗೆ ಈ ಮಾತುಗಳೆಲ್ಲ ಹೇಗೆ ಅರ್ಥವಾಗಬೇಕು ಪಾಪ ! ಅವರಿಬ್ಬರೂ ಬೇರೆಬೇರೆಯಾಗಿ ಕುಳಿತಿರುವುದು ಕಣ್ಣೆದುರಿಗೇ ಸ್ಪಷ್ಟವಾಗಿ ಕಾಣುತ್ತಿದೆ. ಅಂಥದರಲ್ಲಿ ಶ್ರೀರಾಮಕೃಷ್ಣರು ತಾವಿಬ್ಬರೂ ಒಂದೇ, ಯಾವ ಭೇದವೂ ಇಲ್ಲ ಎಂದು ಹೇಳಿಬಿಟ್ಟರೆ ಅವನು ಏನೆಂದು ಅರ್ಥಮಾಡಿಕೊಳ್ಳಬೇಕು ? ಅವರಿಬ್ಬರಲ್ಲಿ ಪರಸ್ಪರ ಆತ್ಮೀಯತೆ-ಸ್ನೇಹ ಅಷ್ಟೊಂದು ನಿಕಟವಾಗಿದೆ ಎಂದೆ ? ಅಥವಾ ಅವರಿಬ್ಬರೂ ಎರಡು ಶರೀರ, ಒಂದೇ ಆತ್ಮ ಎಂದೆ ? ಅವನು ಸುಮ್ಮನೆ ಆಶ್ಚರ್ಯದಿಂದ ನೋಡುತ್ತಿದ್ದಾನೆ.

ಶ್ರೀರಾಮಕೃಷ್ಣರು, ಹೀಗೆ ಮಾತನಾಡುತ್ತ ವೈಕುಂಠನಾಥನಿಗೆ ಹುಕ್ಕ ತಯಾರಿಸಲು ಹೇಳಿದರು.* ಬಳಿಕ ಒಂದೆರಡು ಬಾರಿ ಅದನ್ನು ಸೇದಿ ತಮ್ಮ ಕೈಯನ್ನು ನರೇಂದ್ರನತ್ತ ಚಾಚಿ, "ಇಗೊ, ನೀನೂ ಒಂದು ಸಲ ಸೇದು" ಎನ್ನುತ್ತ ಕೊಳವೆಯನ್ನು ಹಿಡಿದಿದ್ದ ತಮ್ಮ ಮುಷ್ಟಿಯನ್ನು ಅವನ ತುಟಿಗಿಟ್ಟರು. ಸಹಜವಾಗಿಯೇ ಅವನು ತುಂಬ ಕಸಿವಿಸಿಗೊಂಡ. ಗುರುವಿನ ಕೈಯನ್ನು ತನ್ನ ತುಟಿಯಿಂದ ಮುಟ್ಟಿ ಎಂಜಲು ಮಾಡಲು ಹೇಗೆ ತಾನೆ ಸಾಧ್ಯ ? ಆಗ ಶ್ರೀರಾಮಕೃಷ್ಣರು, "ಇದೇನು ಬುದ್ಧಿ ನಿನ್ನದು ! ನಾನು

---

* ನೋಡಿ: ಅನುಬಂಧ ೨.

ನಿನಗಿಂತ ಬೇರೆಯೆ ? ಇದು (ತಾವು) ನಾನೇ ಮತ್ತು ಅದು (ನರೇಂದ್ರ) ಕೂಡ ನಾನೇ'' ಎನ್ನುತ್ತ ಪುನಃ ತಮ್ಮ ಕೈಯನ್ನು ಅವನ ಬಾಯಿಗೆ ಹಿಡಿದರು. ಬೇರೆ ದಾರಿ ಗಾಣದೆ ಅವನು ಅವರ ಕೈಯಿಂದಲೇ ಸೇದಬೇಕಾಯಿತು. ಒಂದೆರಡು ಬಾರಿ ಸೇದಿದ ಮೇಲೆ ಅವರು ಅದೇ ಕೈಯಿಂದ ಮತ್ತೆ ತಾವು ಸೇದಹೊರಟರು. ತಕ್ಷಣ ನರೇಂದ್ರ ಅವರನ್ನು ತಡೆಯುತ್ತ, ''ಮಹಾಶಯರೆ, ದಯವಿಟ್ಟು ನಿಮ್ಮ ಕೈಯನ್ನು ಮೊದಲು ತೊಳೆದುಕೊಳ್ಳಿ'' ಎಂದ. ಆದರೆ ಅವನ ಮಾತನ್ನು ನಿರ್ಲಕ್ಷಿಸಿ, ''ನೀನಿನ್ನೂ ನಿನ್ನ ಈ ಅಲ್ಪ ಭೇದಬುದ್ಧಿಯನ್ನು ಬಿಡಲಿಲ್ಲವಲ್ಲ!'' ಎನ್ನುತ್ತ ಅದೇ ಕೈಯಿಂದಲೇ ಹುಕ್ಕ ಸೇದಿದರು. ಅಲ್ಲದೆ, ಒಂದು ವಿಶೇಷ ಭಾವಾವಸ್ಥೆಯಲ್ಲಿ ಆನಂದದಿಂದ ಮಾತುಕತೆ ಯಾಡುತ್ತ ಕುಳಿತರು.

ನರೇಂದ್ರ ತಮ್ಮಿಂದ ಬೇರೆಯಲ್ಲವೆಂಬುದನ್ನು ಅವನಿಗೂ ಇತರರಿಗೂ ತಿಳಿಸಿ ಕೊಡುವುದಕ್ಕಾಗಿಯೇ ಈ ಹುಕ್ಕ ಸೇದುವ ನಾಟಕವಾಡುತ್ತಿದ್ದಾರೆ ಶ್ರೀರಾಮಕೃಷ್ಣರು. ಇದನ್ನೆಲ್ಲ ನೋಡುತ್ತಿದ್ದ ವೈಕುಂಠನಾಥನಿಗೆ ಪರಮಾಶ್ಚರ್ಯ. ಯಾವ ಶ್ರೀರಾಮ ಕೃಷ್ಣರು, ತಮಗಾಗಿ ತಂದ ಆಹಾರದಲ್ಲಿ ಮೊದಲೇ ಒಂದು ಸ್ವಲ್ಪವನ್ನು ಬೇರೆ ಯಾರಾ ದರೂ ತಿಂದಿದ್ದರೆ ಅದನ್ನು ತಿನ್ನುತ್ತಿರಲಿಲ್ಲವೋ, ಅಷ್ಟೇಕೆ, ತಮಗೆ ತಂದ ಆಹಾರವನ್ನು ಆಘ್ರಾಣಿಸಿದ್ದನ್ನು ಗಮನಿಸಿದರೂ ಅದನ್ನು ಮುಟ್ಟುತ್ತಿರಲಿಲ್ಲವೋ, ಅಂಥವರು ಇಂದು ನರೇಂದ್ರನ ವಿಷಯದಲ್ಲಿ ಮಾತ್ರ ಇಷ್ಟು ವಿಭಿನ್ನವಾಗಿ ನಡೆದುಕೊಂಡಿದ್ದನ್ನು ನೋಡಿ ಅವನಿಗೆ ನಂಬಲೇ ಆಗುತ್ತಿಲ್ಲ. ಅಂತೂ ಈ ಘಟನೆಯಿಂದ ಶ್ರೀರಾಮಕೃಷ್ಣರು ನರೇಂದ್ರನ ಮೇಲಿಟ್ಟಿದ್ದ ಆತ್ಮೀಯತೆ, ಪ್ರೀತಿ-ವಿಶ್ವಾಸಗಳನ್ನು ಪ್ರತ್ಯಕ್ಷವಾಗಿ ನೋಡಲು ಅವನಿಗೊಂದು ಅವಕಾಶವಾಯಿತು.

ಹೀಗೆಯೇ ಬಹಳ ಹೊತ್ತು ಕಳೆದುಹೋಯಿತು. ರಾತ್ರಿ ಎಂಟು ಗಂಟೆಯ ವೇಳೆಗೆ ನರೇಂದ್ರನೂ ವೈಕುಂಠನೂ ಶ್ರೀರಾಮಕೃಷ್ಣರಿಂದ ಬೀಳ್ಕೊಂಡು ಕಲ್ಕತ್ತಕ್ಕೆ ಹೊರಟರು.

ಶ್ರೀರಾಮಕೃಷ್ಣರ ಈ ಬಗೆಯ ಅಲೌಕಿಕವಾದ ಸ್ನೇಹ, ಪ್ರೀತಿ-ವಿಶ್ವಾಸಗಳನ್ನು ಅನುಭವಿಸಿದ ನರೇಂದ್ರ ಮುಂದೆ ಆಗಾಗ ಹೇಳುತ್ತಿದ್ದ: ''ಮೊಟ್ಟ ಮೊದಲ ಬಾರಿ ನೋಡಿದಾಗಿನಿಂದಲೂ ನನ್ನನ್ನು ಒಂದೇ ಸಮನಾಗಿ ನಂಬಿದವರೆಂದರೆ ಶ್ರೀರಾಮಕೃಷ್ಣ ರೊಬ್ಬರೇ. ನನ್ನಲ್ಲಿ ಏಕಪ್ರಕಾರವಾಗಿ ವಿಶ್ವಾಸವಿಟ್ಟವರೆಂದರೆ ಅವರು ಮಾತ್ರವೇ. ನನ್ನ ಸ್ವಂತ ತಾಯಿ ಮತ್ತು ಸೋದರರರು ಕೂಡ ನನ್ನನ್ನು ಅಷ್ಟರಮಟ್ಟಿಗೆ ನಂಬಲಿಲ್ಲ. ಶ್ರೀರಾಮಕೃಷ್ಣರ ಈ ಅವಿಚ್ಛಿನ್ನ ಪ್ರೀತಿ ಮತ್ತು ವಿಶ್ವಾಸವೇ ನನ್ನನ್ನು ಅವರೊಂದಿಗೆ ಎಂದೆಂದಿಗೂ ಬಂಧಿಸಿಬಿಟ್ಟಿದೆ. ಹೃತ್ಪೂರ್ವಕವಾಗಿ ಪ್ರೀತಿಸುವ ಬಗೆ ಏನೆಂಬುದು ಅವರಿಗೆ ಮಾತ್ರ ತಿಳಿದಿತ್ತು. ಪ್ರಾಪಂಚಿಕರ ಪ್ರೀತಿಯೆಲ್ಲ ಕೇವಲ ಸೋಗು, ತೋರಾಣಿಕೆ. ಅದರ ಹಿಂದೆ ಸ್ವಾರ್ಥ ತುಂಬಿಕೊಂಡಿರುತ್ತದೆ.''

ತನ್ನನ್ನು ಶ್ರೀರಾಮಕೃಷ್ಣರೊಂದಿಗೆ ಬಿಗಿದಿಟ್ಟಿರುವ ಅಭೇದ್ಯವಾದ ಬಂಧನವೆಂದರೆ ಅವರ ಅಲೌಕಿಕ, ನಿಸ್ವಾರ್ಥ ಪ್ರೇಮ ಎನ್ನುತ್ತಿದ್ದಾನೆ ನರೇಂದ್ರ. ಅವನು ಆದಾಗಲೇ ಅವರ ಅಪೂರ್ವ ಸಮಾಧಿಸ್ಥಿತಿಯನ್ನೂ ಪ್ರಾಮಾಣಿಕ ತ್ಯಾಗವನ್ನೂ ಸತ್ಯಪರತೆಯೇ ಮೊದಲಾದ ಇತರ ಅನೇಕ ಆಶ್ಚರ್ಯಕರ ಗುಣಗಳನ್ನೂ ಕಂಡು ಬೆರಗಾಗಿದ್ದ, ಮನ ಸೋತಿದ್ದ. ಆದರೆ ಅವನನ್ನು ಸಂಪೂರ್ಣವಾಗಿ ಪರಾಜಯಗೊಳಿಸಿದ ಅಂಶವೆಂದರೆ

ಅವರ ಪ್ರೀತಿ-ವಿಶ್ವಾಸವೊಂದೇ. ಯಾವುದೇ ಕಾರಣಕ್ಕೂ ಅವರಿಂದ ದೂರವಾಗದಂತೆ ಅವನನ್ನು ತಡೆಹಿಡಿದಿದ್ದುದು ಆ ಪ್ರೇಮವೊಂದೇ. ಅವನೇನೂ ಜಗತ್ತನ್ನು ಕಂಡರಿಯದ ಮುಗ್ಧನಲ್ಲ. ಅವನಾಗಲೇ ಅಸಂಖ್ಯಾತ ಜನರನ್ನು ಕಂಡಿದ್ದಾನೆ, ಅವರ ಪರಸ್ಪರ ವಿಶ್ವಾಸಪೂರ್ಣ ಸಂಬಂಧಗಳನ್ನೂ ಸಾಕಷ್ಟು ಕಂಡಿದ್ದಾನೆ. ಅದೆಲ್ಲವನ್ನೂ ನೋಡಿ ನೋಡಿ, ಆ ಬಗೆಯ ಪ್ರೀತಿಯನ್ನೂ ಸವಿದು, ಈಗ ಶ್ರೀರಾಮಕೃಷ್ಣರ ಪ್ರೀತಿಯ ರೀತಿಯನ್ನು ಕಂಡಮೇಲೆ ಅವನಿಗೆ ಅರ್ಥವಾಗುತ್ತಿದೆ—ಜಗತ್ತಿನ ಜನರ 'ಪ್ರೇಮ' ಎನ್ನುವುದೆಲ್ಲ ಕಾಮಗಂಧದಿಂದ ಕೂಡಿದ್ದು ಎಂದು. ನಿಸ್ವಾರ್ಥ ಪ್ರೇಮದ ಲಕ್ಷಣವೇನೆಂದರೆ ಅಲ್ಲಿ ಯಾವುದೇ ಬಗೆಯ ಪ್ರತಿಫಲಾಪೇಕ್ಷೆಯ ನಿರೀಕ್ಷೆಯೂ ಇರಲಾರದು. ಅವನು ಶ್ರೀರಾಮಕೃಷ್ಣರಲ್ಲಿ ಕಂಡು ಅನುಭವಿಸಿದುದು ಆ ಬಗೆಯ ನಿಸ್ವಾರ್ಥ ಪ್ರೇಮವನ್ನು.

ಇಲ್ಲೊಂದು ಪ್ರಶ್ನೆಯೇಳಬಹುದು—ನಿಜಕ್ಕೂ ನಿಸ್ವಾರ್ಥ ಪ್ರೇಮ ಎನ್ನುವಂಥದೇನಾದರೂ ಇರಲು ಸಾಧ್ಯವೆ? ಶ್ರೀರಾಮಕೃಷ್ಣರು ನರೇಂದ್ರನಿಗೆ ಸುರಿದ ಪ್ರೀತಿಯ ಹಿನ್ನೆಲೆಯಲ್ಲೂ ಸ್ವಾರ್ಥವಿದೆಯಲ್ಲ?—ಮುಂದೆ ಅವನ ಮೂಲಕ ಧರ್ಮಪ್ರಸಾರ ಮಾಡಿಸಬೇಕು ಎಂಬ ಸ್ವಾರ್ಥೋದ್ದೇಶ! ಇದಕ್ಕೆ ಉತ್ತರವಿಷ್ಟೆ—ಈ ಧರ್ಮಪ್ರಸಾರ ಕಾರ್ಯದಿಂದ, ಲೋಕಕಲ್ಯಾಣ ಕಾರ್ಯದಿಂದ ಶ್ರೀರಾಮಕೃಷ್ಣರಿಗಾಗಲಿ ನರೇಂದ್ರನಿಗಾಗಲಿ ಲಾಭವೇನೂ ಇಲ್ಲ. ಅವರ ಸ್ವಂತಕ್ಕೆ ಇವುಗಳಿಂದೆಲ್ಲ ಏನೇನೂ 'ಪ್ರಯೋಜನ' ವಿಲ್ಲ. ಅವರಲ್ಲಿ, ಇವುಗಳಿಂದ ಜಗತ್ತಿನ ಜನರಿಗೆ ಹಿತವಾಗಲಿ, ಮಂಗಳವಾಗಲಿ ಎಂಬ ಭಾವವಿದೆಯೇ ಹೊರತು ಸ್ವಾರ್ಥೋದ್ದೇಶವೇನೂ ಇಲ್ಲ. ಸ್ವಾರ್ಥ ಎನ್ನುವುದು ಎಲ್ಲಿ ಬರುತ್ತದೆಂದರೆ ಕಾರ್ಯೋದ್ದೇಶವನ್ನು ತಾನು, ತನ್ನ ಹೆಂಡತಿ-ಮಕ್ಕಳು, ತನ್ನ ಇಷ್ಟ ಮಿತ್ರರು—ಇಷ್ಟಕ್ಕೇ ಸೀಮಿತಗೊಳಿಸಿಕೊಂಡಾಗ ಮಾತ್ರ. ವಿಶ್ವವನ್ನೇ ತಬ್ಬಿಕೊಂಡಾಗ ಸ್ವಾರ್ಥವೆಲ್ಲಿ ಬಂತು! ಆದ್ದರಿಂದ ಶ್ರೀರಾಮಕೃಷ್ಣರು ಮುಂದೆ ನರೇಂದ್ರನಿಂದ ಲೋಕಕಲ್ಯಾಣ ಕಾರ್ಯವನ್ನು ಮಾಡಿಸಬೇಕೆಂಬ ಉದ್ದೇಶವಿಟ್ಟುಕೊಂಡಿದ್ದರೂ ಅದರಲ್ಲಿ ಸ್ವಾರ್ಥದ ಗಂಧವಿರಲಿಲ್ಲ. ಇಂತಹ ಪ್ರೇಮದ ಇನ್ನೊಂದು ಲಕ್ಷಣವೇನೆಂದರೆ ಅಲ್ಲಿ ನಂಬಿಕೆ-ವಿಶ್ವಾಸಗಳು ಸಂಪೂರ್ಣವಾಗಿ ನೆಲೆಗೊಂಡಿರುತ್ತವೆ. ಶ್ರೀರಾಮಕೃಷ್ಣರು ಅದಾಗಲೇ ತಮ್ಮ ಪ್ರೀತಿಗೆ ಅವನು ಪಾತ್ರನೆಂಬುದನ್ನು ಕಂಡುಕೊಂಡಿದ್ದಾರೆ. ಅವನೆಂದೂ ದಾರಿತಪ್ಪಿ ನಡೆಯುವವನಲ್ಲ ಎಂಬುದನ್ನು ಜಗನ್ಮಾತೆಯೇ ಅವರಿಗೆ ತೋರಿಸಿಕೊಟ್ಟಿದ್ದಾಳೆ. ಆದ್ದರಿಂದಲೇ ಅವರು ಅವನಲ್ಲಿ ಅಪಾರ ನಂಬಿಕೆಯಿಟ್ಟಿದ್ದಾರೆ, ಮತ್ತು ಅವನ ಮೇಲಿನ ಅವರ ಪ್ರೇಮ ಅಷ್ಟೊಂದು ಪರಿಪೂರ್ಣವಾದದ್ದಾಗಿದೆ. ಅವರ ಈ ದಿವ್ಯ ಪ್ರೇಮ-ವಿಶ್ವಾಸಗಳನ್ನು ಕಂಡೇ ನರೇಂದ್ರನೆನ್ನುತ್ತಾನೆ—"ಶ್ರೀರಾಮಕೃಷ್ಣರ ಈ ಪ್ರೀತಿ-ವಿಶ್ವಾಸವೇ ನನ್ನನ್ನು ಅವರೊಂದಿಗೆ ಎಂದೆಂದಿಗೂ ಬಂಧಿಸಿಬಿಟ್ಟಿದೆ. ಈ ಲೋಕದಲ್ಲಿ ಇತರರನ್ನು ಪ್ರೀತಿಸುವ ಬಗೆ ಯಾರಿಗಾದರೂ ಗೊತ್ತಿದ್ದರೆ, ಅದು ಶ್ರೀರಾಮಕೃಷ್ಣರಿಗೆ ಮಾತ್ರವೇ. . ."

ಶ್ರೀರಾಮಕೃಷ್ಣರು ನರೇಂದ್ರನನ್ನು ಎಷ್ಟೇ ಪ್ರೀತಿಸಬಹುದು, ಅವನಲ್ಲಿ ಎಷ್ಟೇ ಸಲಿಗೆಯಿಂದಿರಬಹುದು; ಆದರೆ ಅವರ ಜೊತೆಯಲ್ಲಿ ಬದುಕುವುದೆಂದರೆ ಅದೊಂದು ತಪಸ್ಸೇ ಸರಿ. ಅದೊಂದು ಕಟ್ಟುನಿಟ್ಟಿನ ಆಧ್ಯಾತ್ಮಿಕ ಸಾಧನೆಯೇ ಸರಿ! ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿದ್ದಾಗ ಪ್ರತಿಯೊಬ್ಬನ ಮನಸ್ಸೂ ಶಾರೀರಿಕ ವಲಯದಿಂದ ಮೇಲೇರಿ ಆತ್ಮರಾಜ್ಯವನ್ನು ಸಮೀಪಿಸುತ್ತಿತ್ತು. ಅವರ ಜೊತೆಯಲ್ಲಿದ್ದುಕೊಂಡು ಅವರ ಭಾವ ದೆತ್ತರಕ್ಕೆ ಏರಬೇಕಾದರೆ ಭಕ್ತರಲ್ಲಿ ಅತ್ಯಂತ ಉನ್ನತ ಮಟ್ಟದ ಪ್ರಜ್ಞೆ ಇರಬೇಕಾಗಿತ್ತು, ಸಾಕಷ್ಟು ಉಚ್ಚತರ ನೈತಿಕತೆಯೇ ಇರಬೇಕಾಗಿತ್ತು. ಅವರ ದಿವ್ಯ ಸನ್ನಿಧಿಯೆಂಬುದು ಭಕ್ತರ ಭಾವನೆಗಳನ್ನು ಬಡಿದೆಬ್ಬಿಸಿ, ಉನ್ನತ ಆಧ್ಯಾತ್ಮಿಕ ಆನಂದದೆಡೆಗೆ ಕರೆದೊಯ್ಯು ತ್ತಿತ್ತು, ಭಾವೋನ್ಮತ್ತತೆಯನ್ನು ನೀಡುತ್ತಿತ್ತು. ಶ್ರೀರಾಮಕೃಷ್ಣರು ಎಷ್ಟೋ ಸಲ ತಮ್ಮ ದಿವ್ಯಾನುಭವಗಳನ್ನು ಶಬ್ದಗಳಿಂದ ವರ್ಣಿಸಲು ಪ್ರಯತ್ನಿಸುತ್ತಿದ್ದರು. ಆದರೆ, ವರ್ಣಿ ಸುತ್ತ ಹೋದಂತೆ ಅವರ ಮನಸ್ಸು ಶಬ್ದಗಳನ್ನು ಮೀರಿ ಭಗವಂತನೆಡೆಗೆ ಧಾವಿಸಿಬಿಡು ತ್ತಿತ್ತು. ಆಧ್ಯಾತ್ಮಿಕ ಜ್ಯೋತಿಯೆಂಬುದು ಅವರಲ್ಲಿ ಪ್ರಚಂಡ ಪ್ರಕಾಶದಿಂದ ಪ್ರಜ್ವಲಿಸು ತ್ತಿತ್ತು. ಅವರ ಪ್ರಭೆಯಲ್ಲಿ ಪ್ರತಿಯೊಬ್ಬನ ಅಂತಸ್ಸತ್ತ್ವವೂ ಬೆಳಗಲಾರಂಭಿಸುತ್ತಿತ್ತು.

ಶ್ರೀರಾಮಕೃಷ್ಣರ ಆತ್ಮೀಯತೆ ಮತ್ತು ಸಲಿಗೆಯ ಮಾಧುರ್ಯದಲ್ಲಿ ಅವರ ಶಿಷ್ಯರೆಲ್ಲ ಹೇಗೆ ಆನಂದದಿಂದ ತೇಲಾಡುತ್ತಿದ್ದರು ಎಂಬುದನ್ನು ಅವರ ಪಾದಗಳ ಬಳಿಯಲ್ಲಿ ಕುಳಿತು ಕಣ್ಣಾರೆ ಕಂಡವರು ಮಾತ್ರ ಬಲ್ಲರು. ಅವರಲ್ಲಿ ಅಹಂಕಾರದ ಲವಲೇಶವೂ ಇರಲಿಲ್ಲ. ಬಿಂಕ-ಬಿಗುಮಾನಗಳಿರಲಿಲ್ಲ. ಅಲ್ಲಿದ್ದುದೆಲ್ಲ ತುಂಬ ಸರಳ ವಾದ ಸಲಿಗೆಯ ಮಾನವೀಯ ಸಂಬಂಧ; ಸಹಜವಾದ ಮೃದುಮಧುರ ಸಂಬಂಧ. ಇವುಗಳಿಂದಾಗಿ ಅವರ ಸುತ್ತಮುತ್ತ ಒಂದು ಆತ್ಮೀಯ ವಾತಾವರಣ ನೆಲೆಗೊಂಡಿತ್ತು. ಅದರಲ್ಲೊಂದು ಅಲೌಕಿಕತೆ ಎದ್ದುಕಾಣುತ್ತಿತ್ತು. ಅಲ್ಲಿ ಭಗವಂತನ ಸಾನ್ನಿಧ್ಯವೇ ಏರ್ಪಟ್ಟಿತ್ತು ಎಂದರೆ ಅದು ಸತ್ಯದೂರವಾದ ಮಾತಲ್ಲ. ಹೀಗಿದ್ದರೂ, ದಕ್ಷಿಣೇಶ್ವರದ ಆ ಭವ್ಯ ವೃಕ್ಷಗಳ ತಲದಲ್ಲಿ ಮತ್ತು ಶ್ರೀರಾಮಕೃಷ್ಣರ ಕೋಣೆಯಲ್ಲಿ ಎಷ್ಟೋ ಸಲ ನಗೆಯ ಹೊನಲೇ ಹರಿಯುತ್ತಿತ್ತು. ಶ್ರೀರಾಮಕೃಷ್ಣರೂ ಅವರ ಶಿಷ್ಯರೂ ಸೇರಿ ಅಲ್ಲಿ ಆತ್ಮೀಯವಾಗಿ ಮಾತನಾಡುತ್ತ ಹಾಸ್ಯಚಟಾಕಿಗಳನ್ನು ಹಾರಿಸುತ್ತ ಹೊಟ್ಟೆ ತುಂಬ ನಗು ತ್ತಿದ್ದ ಸಂದರ್ಭಗಳು ಅದೆಷ್ಟೋ! ಆದರೆ ಶ್ರೀರಾಮಕೃಷ್ಣರು ಸಾಂದರ್ಭಿಕವಾಗಿ ಆಡುವ ಒಂದೆರಡೇ ಮಾತುಗಳು ಆ ಹಾಸ್ಯದ ವಾತಾವರಣವನ್ನು ಬದಲಾಯಿಸಿ, ಒಂದು ಮಂಗಳಕರ ಆಧ್ಯಾತ್ಮಿಕ ವಾತಾವರಣವನ್ನುಂಟುಮಾಡುತ್ತಿದ್ದುವು; ಆಗ ಮಾನುಷ ಆನಂದ ಮರೆಯಾಗಿ, ದಿವ್ಯಾನಂದ ಉದ್ಭವವಾಗುತ್ತಿತ್ತು. ಆ ದೃಶ್ಯವನ್ನು ನರೇಂದ್ರ ಮುಂದೆ ಈ ರೀತಿಯಾಗಿ ವರ್ಣಿಸುತ್ತಾನೆ:

"ನಾವೆಲ್ಲ ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಅನುಭವಿಸಿದ ಆನಂದವನ್ನು ಶಬ್ದ ಗಳಿಂದ ವರ್ಣಿಸಿ ತಿಳಿಸಲು ಸಾಧ್ಯವೇ ಇಲ್ಲ. ಅವರು ತಮಾಷೆ ಮಾಡುತ್ತಲೇ, ನಗುನಗುತ್ತಲೇ ನಮಗೇ ಅರಿವಾಗದಂತೆ ನಮ್ಮನ್ನೆಲ್ಲ ತಿದ್ದಿ, ತರಬೇತಿ ಕೊಟ್ಟು, ನಮ್ಮ

ಆಧ್ಯಾತ್ಮಿಕ ಜೀವನವನ್ನು ರೂಪಿಸಿದ ಪರಿ ಪರಮಾದ್ಭುತ. ಶ್ರೀರಾಮಕೃಷ್ಣರು ಒಬ್ಬ ನುರಿತ ಪೈಲವಾನನಂತೆ—ಆತ ತನ್ನ ಹೊಸ ಶಿಷ್ಯನಿಗೆ ತರಬೇತಿ ಕೊಡುವಾಗ ಬಹಳ ಎಚ್ಚರಿಕೆಯಿಂದ ನಿಧಾನವಾಗಿ ಮುಂದುವರಿಯುತ್ತಾನೆ. ಕೆಲವು ಸಲ ಬಹಳ ಕಷ್ಟ ದಿಂದಲೋ ಎಂಬಂತೆ ಶಿಷ್ಯನನ್ನು ಸೋಲಿಸುತ್ತಾನೆ; ಇನ್ನು ಕೆಲವು ಸಲ ಬೇಕುಬೇಕೆಂದೇ ಅವನ ಕೈಯಲ್ಲಿ ತಾನೇ ಸೋಲುತ್ತಾನೆ. ಹೀಗೆ ಶಿಷ್ಯನಲ್ಲಿ ಆತ್ಮವಿಶ್ವಾಸ ಹುಟ್ಟಿಸುತ್ತಾನೆ. ಶ್ರೀರಾಮಕೃಷ್ಣರು ನಮಗೆಲ್ಲ ಶಿಕ್ಷಣ ಕೊಟ್ಟ ಬಗೆ ತದ್ವತ್ ಅದೇ ರೀತಿ. ಅವರು ನಮ್ಮ ಪ್ರತಿಯೊಬ್ಬನಲ್ಲೂ ಸುಪ್ತವಾಗಿರುವ ದೈವತ್ವವನ್ನು ಕಾಣಬಲ್ಲವರಾಗಿದ್ದರು. ನಮ್ಮಲ್ಲಿ ಆತ್ಮಜ್ಯೋತಿ ಅತ್ಯಂತ ಕಿರುಗಾತ್ರದಲ್ಲಿ ಬೆಳಗುತ್ತಿದ್ದರೂ, ಮುಂದೆ ಸಕಾಲದಲ್ಲಿ ಅದು ಬೃಹದ್ಗಾತ್ರದಲ್ಲಿ ಪ್ರಕಾಶಿಸಲಿರುವುದನ್ನು ಅವರು ಮುಂಗಾಣಬಲ್ಲವರಾಗಿದ್ದರು. ಆ ಭವ್ಯ ಚಿತ್ರವನ್ನು ಈಗಲೇ ನಮ್ಮ ಕಣ್ಮುಂದೆ ಹಿಡಿಯುತ್ತ ನಮ್ಮನ್ನು ಹುರಿದುಂಬಿಸು ತ್ತಿದ್ದರು. ನಮ್ಮ ಕುರಿತು ಪ್ರಶಂಸೆಯ ಮಾತುಗಳನ್ನೇ ಆಡುತ್ತಿದ್ದರು. ಆದರೆ ಅದ ರೊಂದಿಗೆ, ಆತ್ಮಸಾಕ್ಷಾತ್ಕಾರದ ದಾರಿಯಲ್ಲಿ ಅಡ್ಡವಾಗಿರುವ ಪ್ರಾಪಂಚಿಕತೆಯ ಸುಳಿ ಯೊಳಗೆ ಸಿಲುಕಿಕೊಂಡು ನಾವು ಮುಳುಗಿಹೋಗದಂತೆ ಎಚ್ಚರಿಕೆಯನ್ನೂ ಕೊಡು ತ್ತಿದ್ದರು. ಅಲ್ಲದೆ, ನಮ್ಮ ನಿತ್ಯಜೀವನದ ಪ್ರತಿಯೊಂದು ಅಂಶವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿ, ನಮ್ಮನ್ನು ಒಂದು ಪರಿಮಿತಿಯೊಳಗೇ ಇಟ್ಟಿರುತ್ತಿದ್ದರು. ಆದರೆ ಇವೆಲ್ಲವನ್ನೂ ಅವರು ಶಿಷ್ಯರ ಅರಿವಿಗೇ ಬಾರದಂತೆ ಸದ್ದಿಲ್ಲದೆ ಮಾಡುತ್ತಿದ್ದರು. ಇದೇ ಅವರ ಶಿಕ್ಷಣದ ರಹಸ್ಯ; ಇದೇ ಅವರು ಶಿಷ್ಯರ ಜೀವನಗಳನ್ನು ರೂಪಿಸುತ್ತಿದ್ದ ವಿಧಾನ.

“ಒಮ್ಮೆ ನಾನು ಧ್ಯಾನ ಮಾಡಲು ಕುಳಿತಾಗ, ನನ್ನ ಮನಸ್ಸು ಏನು ಮಾಡಿದರೂ ಏಕಾಗ್ರವಾಗದೆಹೋಯಿತು. ನಾನು ಅದನ್ನು ಶ್ರೀರಾಮಕೃಷ್ಣರಿಗೆ ತಿಳಿಸಿ, ಅವರ ಸಲಹೆ ಕೇಳಿದೆ. ಆಗ ಅವರು ಈ ವಿಷಯದಲ್ಲಿ ತಮ್ಮ ಕೆಲವು ಅನುಭವಗಳನ್ನು ನನಗೆ ತಿಳಿಸಿ, ಕೆಲವು ಉಪಯುಕ್ತ ಸಲಹೆಗಳನ್ನು ಕೊಟ್ಟರು. ಇನ್ನೊಂದು ಸಲ, ನಾನು ಮುಂಜಾ ನೆಯ ಶಾಂತವಾದ ಸಮಯದಲ್ಲಿ ಧ್ಯಾನಕ್ಕೆ ಕುಳಿತುಕೊಂಡರೆ, ಹತ್ತಿರದಲ್ಲಿದ್ದ ಗೋಣಿ ನಾರಿನ ಕಾರ್ಖಾನೆಯ ಸಿಳ್ಳಿನ ಶಬ್ದ ಧ್ಯಾನಕ್ಕೆ ಭಂಗ ತರುತ್ತಿತ್ತು. ಶ್ರೀರಾಮಕೃಷ್ಣರಲ್ಲಿ ಇದನ್ನು ಹೇಳಿಕೊಂಡಾಗ, ಅವರು ಆ ಸಿಳ್ಳಿನ ಶಬ್ದದ ಮೇಲೆಯೇ ಮನಸ್ಸನ್ನು ಏಕಾಗ್ರ ಗೊಳಿಸುವಂತೆ ಹೇಳಿದರು. ನಾನು ಅದರಂತೆಯೇ ಮಾಡಿದೆ. ಆ ಉಪಾಯ ತುಂಬ ಯಶಸ್ವಿಯಾಯಿತು. ಮತ್ತೊಮ್ಮೆ, ಎಷ್ಟೇ ಪ್ರಯತ್ನಮಾಡಿದರೂ ಶರೀರಪ್ರಜ್ಞೆಯನ್ನು ಮೀರಿ ಸಂಪೂರ್ಣ ಏಕಾಗ್ರತೆಯಿಂದ ಧ್ಯಾನಮಾಡಲು ಸಾಧ್ಯವೇ ಆಗುತ್ತಿರಲಿಲ್ಲ. ನಾನಾಗ ಅವರ ಮೊರೆಹೋದೆ. ಆಗ ಅವರು ತಮ್ಮ ಗುರು ತೋತಾಪುರಿ ಮಾಡಿದ್ದ ಉಪಾಯವನ್ನೇ ನನ್ನ ಮೇಲೂ ಪ್ರಯೋಗಿಸಿದರು. ನನ್ನ ಭ್ರೂಮಧ್ಯವನ್ನು ತಮ್ಮ ಉಗುರಿನಿಂದ ಬಲವಾಗಿ ಒತ್ತಿ ಹಿಡಿದು, ‘ಈ ನೋವಿನ ಜಾಗದಲ್ಲಿ ನಿನ್ನ ಮನಸ್ಸನ್ನು ಏಕಾಗ್ರಗೊಳಿಸು’ ಎಂದರು. ನಾನು ಹಾಗೆಯೇ ಮಾಡಲು ಪ್ರಯತ್ನಪಟ್ಟೆ. ನೋಡು ತ್ತೇನೆ—ನನಗೀಗ ಭ್ರೂಮಧ್ಯದಲ್ಲಿ ಮನಸ್ಸನ್ನು ಎಷ್ಟು ಹೊತ್ತು ಬೇಕಾದರೂ ಏಕಾಗ್ರ ಗೊಳಿಸಲು ಸಾಧ್ಯವಾಗುತ್ತಿದೆ! ಅಲ್ಲದೆ, ಶರೀರಪ್ರಜ್ಞೆಯನ್ನು ಸಂಪೂರ್ಣ ಮರೆತು ಕುಳಿತುಕೊಳ್ಳಲು ಸಾಧ್ಯವಾಗುತ್ತಿದೆ! ಶರೀರವನ್ನೇ ಮರೆತ ಮೇಲೆ ಮೈಕೈ ನೋಯು ವುದಾಗಲಿ, ಮನಸ್ಸನ್ನು ಅವು ಚಂಚಲಗೊಳಿಸುವುದಾಗಲಿ ದೂರವೇ ಉಳಿಯಿತು. ಆದ್ದರಿಂದ ಧ್ಯಾನ ನಿರಾತಂಕವಾಗಿ ನಡೆಯಿತು.

"ಪಂಚವಟಿ ನಿರ್ಜನವಾದ, ಬಹಳ ಪ್ರಶಾಂತವಾದ ಸ್ಥಳ. ಅಲ್ಲದೆ, ಸ್ವತಃ ಶ್ರೀರಾಮಕೃಷ್ಣರು ಆಧ್ಯಾತ್ಮಿಕ ಸಾಧನೆಗಳನ್ನು ಮಾಡಿ ಸಾಕ್ಷಾತ್ಕಾರಗಳನ್ನು ಪಡೆದುಕೊಂಡ ಪವಿತ್ರ ಸ್ಥಳ. ಆದ್ದರಿಂದ ನಮ್ಮ ಪಾಲಿಗೆ ಆ ಸ್ಥಳ ಧ್ಯಾನಕ್ಕೆ ಬಹಳ ಪ್ರಶಸ್ತವಾಗಿತ್ತು. ಅಲ್ಲಿ ನಾವು ಧ್ಯಾನ ಜಪತಪಾದಿಗಳನ್ನು ಮಾಡುವುದಲ್ಲದೆ, ಬಹಳಷ್ಟು ಸಮಯವನ್ನು ಸಂತೋಷಕರವಾದ ಮಾತುಕತೆ, ನಲಿದಾಟಗಳಲ್ಲಿ ಕಳೆಯುತ್ತಿದ್ದೆವು. ಈ ನಮ್ಮ ಚಟುವಟಿಕೆಗಳಲ್ಲಿ ಕೆಲವೊಮ್ಮೆ ಶ್ರೀರಾಮಕೃಷ್ಣರೂ ಪಾಲ್ಗೊಂಡು, ಅಲ್ಲಿನ ನಿಷ್ಕಲ್ಮಶ ಆನಂದವನ್ನು ಇನ್ನಷ್ಟು ಹೆಚ್ಚಿಸುತ್ತಿದ್ದರು. ಆ ಪಂಚವಟಿಯಲ್ಲಿ ಸಂತೋಷದಿಂದ ಓಡಾಡುವುದು, ಕುಣಿದು ಕುಪ್ಪಳಿಸುವುದು, ಮರಗಳನ್ನು ಹತ್ತುವುದು, ಬಿಳಲುಗಳನ್ನು ಹಿಡಿದುಕೊಂಡು ಜೋತಾಡುವುದು—ಮುಂತಾದ ನಾನಾ ರೀತಿಯ ಆಮೋದ-ಪ್ರಮೋದಗಳಲ್ಲಿ ತೊಡಗುತ್ತಿದ್ದೆವು. ಕೆಲವೊಮ್ಮೆ ವನಭೋಜನವನ್ನೂ ನಡೆಸುತ್ತಿದ್ದೆವು. ಅಲ್ಲಿ ಮೊದಲ ಸಲ ವನಭೋಜನವನ್ನು ಏರ್ಪಡಿಸಿದ್ದಾಗ ಅಡಿಗೆ ಮಾಡಿದ್ದವನು ನಾನೇ. ಇದನ್ನು ತಿಳಿದ ಶ್ರೀರಾಮಕೃಷ್ಣರೂ ಅಂದು ಅದರಲ್ಲಿ ಭಾಗ ವಹಿಸಿದರು. ಆದರೆ ಅವರು ಬ್ರಾಹ್ಮಣರು ಮಾಡಿದ ಅಡಿಗೆಯನ್ನು ಮಾತ್ರ ಸ್ವೀಕರಿಸಬಲ್ಲರು ಎಂಬುದು ನನಗೆ ತಿಳಿದಿತ್ತು. ಆದ್ದರಿಂದ ಅವರಿಗಾಗಿ ಕಾಳೀ ದೇವಾಲಯದ ಪ್ರಸಾದವನ್ನೇ ತರಿಸಿದ್ದೆ. ಆದರೆ ಅವರು 'ನಿನ್ನಂಥ ಪರಿಶುದ್ಧಾತ್ಮರು ಮಾಡಿದ ಅಡಿಗೆಯನ್ನು ಸ್ವೀಕರಿಸುವುದರಲ್ಲಿ ಏನೂ ದೋಷವಿಲ್ಲ' ಎನ್ನುತ್ತ, ನಾನೆಷ್ಟು ತಡೆದರೂ ಕೇಳದೆ, ನಾನು ಮಾಡಿದ ಅಡಿಗೆಯನ್ನೇ ಮೆಚ್ಚಿಕೊಳ್ಳುತ್ತ, ಆನಂದದಿಂದ ಊಟ ಮಾಡಿದರು."

ಈ ವರದಿಯಿಂದ ನರೇಂದ್ರಾದಿಗಳು ಶ್ರೀರಾಮಕೃಷ್ಣರ ದಿವ್ಯ ಸಂಗದಲ್ಲಿ ಕಳೆದ ಆನಂದದ ದಿನಗಳ, ಅವರು ಪಡೆದ ಶಿಕ್ಷಣವಿನ್ಯಾಸದ ಒಂದು ಸ್ಥೂಲ ಪರಿಚಯವಾಗುತ್ತದೆ ನಮಗೆ.

ನರೇಂದ್ರ ಈಗೀಗ ನಿಜಸ್ವರೂಪದಿಂದ ವ್ಯಕ್ತನಾಗತೊಡಗಿದ್ದ. ತಾಯಿಸಿಂಹದ ಮುಂದೆ ಮರಿಸಿಂಹ ಕುಣಿದು ಕುಪ್ಪಳಿಸುವಂತೆ, ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಅವನು ಸ್ವೇಚ್ಛೆಯಾಗಿ ವಿಹರಿಸುತ್ತಿದ್ದ. ತಂದೆಯ ಮರಣಾನಂತರ ಕೆಲ ಸಮಯ ಅವನ ಶಕ್ತಿ-ಸಾಹಸಗಳೆಲ್ಲ ಒಳಗೆ ಸೇರಿಕೊಂಡಿದ್ದುವು. ಈಗ ಆ ದುಃಖದ ದಿನಗಳು ಮರೆಯಾಗುತ್ತಿವೆ. ಜೊತೆಗೆ ಶ್ರೀರಾಮಕೃಷ್ಣರ ವಾತ್ಸಲ್ಯದ ರಕ್ಷೆ ಸಿಕ್ಕಿದೆ. ಆದ್ದರಿಂದ ಅವನ ಶಕ್ತಿ-ಸಾಹಸಗಳೆಲ್ಲ ಈಗ ಮತ್ತೊಮ್ಮೆ ಪೂರ್ಣರೂಪದಿಂದ ವ್ಯಕ್ತವಾಗತೊಡಗಿದ್ದುವು. ಅವನ ಅನಂತ ಚೈತನ್ಯವೀಗ ಆಧ್ಯಾತ್ಮಿಕ ಶಕ್ತಿಯಾಗಿ ಪ್ರವಾಹದೋಪಾದಿಯಲ್ಲಿ ಹರಿಯಲಾರಂಭಿಸಿತು. ಅದನ್ನು ಕಂಡು ಶ್ರೀರಾಮಕೃಷ್ಣರಿಗೆ ಬಹಳ ಆನಂದವಾಗಿಬಿಟ್ಟಿತು. ಆತನ ಆಧ್ಯಾತ್ಮಿಕ ಪ್ರಗತಿಯನ್ನು ಅವರು ಸ್ಪಷ್ಟವಾಗಿ ಕಾಣುತ್ತಿದ್ದರು. ಶ್ರೀರಾಮಕೃಷ್ಣರು ತೀವ್ರ ಸಾಧನೆಯ ಫಲವಾಗಿ ಅತ್ಯುನ್ನತ ಸಾಕ್ಷಾತ್ಕಾರವನ್ನು ಪಡೆದು ಆಧ್ಯಾತ್ಮಿಕ ಸಾಮ್ರಾಜ್ಯದ ಚಕ್ರವರ್ತಿಯಂತೆ ವಿರಾಜಿಸುತ್ತಿದ್ದರೆ, ಆ ಮಹಾಸಾಮ್ರಾಜ್ಯದ ಉತ್ತರಾಧಿಕಾರಿಯಾದ ರಾಜಕುಮಾರನಂತೆ ಬೆಳಗುತ್ತಿದ್ದ ನರೇಂದ್ರ—ಅದೇ ರಾಜಗಾಂಭೀರ್ಯ, ಅದೇ ತೇಜಸ್ಸು, ಅದೇ ಪರಾಕ್ರಮ ಅವನಲ್ಲಿ. ಶ್ರೀರಾಮಕೃಷ್ಣರು ಅವನಿಗೆ ಸಂಪೂರ್ಣ ಸ್ವಾತಂತ್ರ್ಯವನ್ನಿತ್ತಿದ್ದರು. ಅವನ ಮನಸ್ಸು ಎಷ್ಟು ಸ್ವತಂತ್ರವಾಗಿ, ಹೊಸ ರೀತಿಯಲ್ಲಿ ಆಲೋಚನೆ ಮಾಡಬಲ್ಲದೋ ಅಷ್ಟೂ ಅವಕಾಶ ಕೊಟ್ಟಿದ್ದರು. ಅವನ ಅಂತಸ್ಸತ್ವ

ಪೂರ್ಣ ತೇಜಸ್ಸಿನಿಂದ ಪ್ರಕಟಗೊಳ್ಳಲು ಎಲ್ಲ ರೀತಿಯಲ್ಲೂ ಸಹಾಯ ಮಾಡುತ್ತಿದ್ದರು. ಅವನ ಜಾಗ್ರತ ಮನಸ್ಸೇ ಅವನಿಗೆ ಗುರುವಾಗುವಂತೆ ಅನುಕೂಲಿಸಿಕೊಟ್ಟರು. ಅವರವರ ಪ್ರಾಮಾಣಿಕ ಪ್ರಯತ್ನವೇ ಕಾಲಕ್ರಮದಲ್ಲಿ ಅವರವರ ಹೃದಯದಲ್ಲಿ ಜ್ಯೋತಿ ಬೆಳಗುವಂತೆ ಮಾಡುತ್ತದೆ ಎಂಬುದು ಶ್ರೀರಾಮಕೃಷ್ಣರ ನಿಶ್ಚಿತ ಅಭಿಪ್ರಾಯ. ಆದ್ದರಿಂದ ಅವರು ನರೇಂದ್ರನಿಗೆ ಮನಬಿಚ್ಚಿ ಮಾತನಾಡಲು, ನಡೆದುಕೊಳ್ಳಲು, ಸಂಪೂರ್ಣ ಸ್ವಾತಂತ್ರ್ಯವಿತ್ತಿದ್ದರು. ಅಲ್ಲದೆ, "ನೋಡು ನರೇನ್, ನಾನು ಹೇಳಿದೆನೆಂಬ ಕಾರಣಕ್ಕಾಗಿ ನೀನು ಯಾವುದನ್ನೂ ಒಪ್ಪಿಕೊಳ್ಳಬೇಕಾಗಿಲ್ಲ. ನೀನೇ ಅದನ್ನೆಲ್ಲ ಪರೀಕ್ಷೆ ಮಾಡಿ ನೋಡು. ನೀನು ಗುರಿಯನ್ನು ಸೇರುವುದು ಸತ್ಯವನ್ನು ಸಾಕ್ಷಾತ್ಕಾರಿಸಿಕೊಳ್ಳುವುದರ ಮೂಲಕ ಮಾತ್ರವೇ" ಎನ್ನುತ್ತಿದ್ದರು.

ಈ ಅನುಮತಿಯ ಮೇರೆಗೆ ನರೇಂದ್ರ, ಅವರ ಪ್ರತಿಯೊಂದು ಮಾತನ್ನೂ ಪರೀಕ್ಷೆ ಮಾಡಿದ್ದರಿಂದಲೇ ಅವರನ್ನು ಆಮೂಲಾಗ್ರವಾಗಿ ಅರಿತುಕೊಳ್ಳಲು ಸಾಧ್ಯವಾಯಿತು. ಶಿಷ್ಯರಲ್ಲೆಲ್ಲ ಅವರ ಮಹತ್ವವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡವನೆಂದರೆ ಅವನೇ ಎನ್ನಬಹುದು. ಏಕೆಂದರೆ, ಶ್ರೀರಾಮಕೃಷ್ಣರ ಮಾತನ್ನೂ ಶಂಕಿಸಿ ಪ್ರಶ್ನಿಸುವ ಧೈರ್ಯವಿದ್ದುದು ಅವನಿಗೆ ಮಾತ್ರ. ಅವರ ಪ್ರತಿಯೊಂದು ಮಾತನ್ನೂ ಅವನು ತನ್ನ ವಿಮರ್ಶೆಯ ತಕ್ಕಡಿಯಲ್ಲಿ ತೂಗಿನೋಡಿ ಸಂಶಯಗಳನ್ನು ಪರಿಹರಿಸಿಕೊಳ್ಳುತ್ತಿದ್ದ. ಅವೆಲ್ಲ ಪರಿಹಾರವಾದ ಮೇಲಷ್ಟೇ ಅವರ ವಾಕ್ಯಗಳಲ್ಲಿ ಶ್ರದ್ಧೆ ತಾಳುತ್ತಿದ್ದ. ಆದರೆ ಇತರ ಶಿಷ್ಯರ ವಿಚಾರವೇ ಬೇರೆ. ಅವರು ಶ್ರೀರಾಮಕೃಷ್ಣರ ಮುಖಕಮಲದಿಂದ ಹೊರಬಿದ್ದ ಮಾತುಗಳನ್ನೆಲ್ಲ ಮರುಮಾತಿಲ್ಲದೆ ಸ್ವೀಕರಿಸುವವರು. ಏಕೆಂದರೆ ಅವರೆಲ್ಲ 'ಭಕ್ತರು'. ಶ್ರೀರಾಮಕೃಷ್ಣರ ಮೇಲಿನ ಅವರ ಭಕ್ತಿ ಪ್ರೀತಿ ಅಪಾರ. ತತ್ಪರಿಣಾಮವಾಗಿ ಅವರಿಗೆ ಶ್ರೀರಾಮಕೃಷ್ಣರ ಮಾತುಗಳಲ್ಲಿ ಸಹಜವಾಗಿಯೇ ಅವಿಚಲ ಶ್ರದ್ಧೆ. ಈ ಪ್ರೀತಿಯ ಬಲದಿಂದಲೇ ಅವರು ಶ್ರೀರಾಮಕೃಷ್ಣರನ್ನು ಅರ್ಥ ಮಾಡಿಕೊಳ್ಳುತ್ತಿದ್ದರು. ಆದರೆ ನರೇಂದ್ರ ಹಾಗಲ್ಲ. ಅವನು ಅವರಾಡುವ ಮಾತುಗಳನ್ನೆಲ್ಲ ಪ್ರಶ್ನಿಸುತ್ತಿದ್ದ. ಕೆಲವೊಮ್ಮೆ ಅವರ ಮಾತುಗಳನ್ನು ಕೇಳಿ ಪರಿಹಾಸ ಮಾಡುತ್ತಿದ್ದ, ಟೀಕಿಸುತ್ತಿದ್ದ. ಹೀಗೆಲ್ಲ ಮಾಡಿದ ಮಾತ್ರಕ್ಕೆ ಅವನಿಗೆ ಅವರ ಮೇಲೆ ಪ್ರೀತಿ ಇರಲಿಲ್ಲವೆಂದೇನೂ ಅಲ್ಲ. ಹಾಗೆ ನೋಡಿದರೆ, ಇತರ ಶಿಷ್ಯರ ಗುರುಭಕ್ತಿಗಿಂತ ಅವನ ಗುರುಭಕ್ತಿ ಅತ್ಯಂತ ವಿಶಿಷ್ಟವಾದದ್ದು, ಅತಿಶಯವಾದದ್ದು. ಈ ಭಕ್ತಿಯ ಪರಿಣಾಮವಾಗಿ ಅವನು ಅವರಿಗಾಗಿ ಯಾವ ಸೇವೆಯನ್ನಾದರೂ ಮಾಡಲು ಸಿದ್ಧನಾದದ್ದನ್ನು ಮುಂದೆ ನಾವು ನೋಡಲಿದ್ದೇವೆ. ಆದರೆ ಈಗಂತೂ ಅವರ ಯಾವುದೇ ಉಪದೇಶವನ್ನಾಗಲಿ, ಚೆನ್ನಾಗಿ ಪರೀಕ್ಷಿಸಿಯೇ ಸ್ವೀಕರಿಸುವ ಕ್ರಮವನ್ನಿಟ್ಟುಕೊಂಡಿದ್ದ. ಆ ಪ್ರತಿಯೊಂದು ಉಪದೇಶದ ತಥ್ಯವೂ ತನ್ನ ಮನಸ್ಸಿಗೆ ಗೋಚರಿಸಲೇಬೇಕು ಎಂಬುದು ಅವನ ನಿಲುವು. ಆದರೆ ಅವತಾರಪುರುಷರ, ಸಂತರ ಎಷ್ಟೋ ಉಪದೇಶಗಳು ಬುದ್ಧಿಗ್ರಾಹ್ಯವಲ್ಲ; ಆದ್ದರಿಂದ ಅಲ್ಲಿ ವೈಚಾರಿಕ ಬುದ್ಧಿಗೆ ಪ್ರವೇಶವಿಲ್ಲ. ಇದೂ ಅವನಿಗೆ ತಿಳಿದಿಲ್ಲವೆಂದಲ್ಲ. ಆದರೆ, ವೈಚಾರಿಕಬುದ್ಧಿಗೆ ಗ್ರಾಹ್ಯವಾಗುವ ಅಂಶಗಳನ್ನಾದರೂ ಅವರು ಯುಕ್ತಿಯುಕ್ತವಾಗಿ ತಿಳಿಸಿಕೊಡಲಿ ಎಂಬುದು ಅವನ ಆಶಯ.

ತನ್ನಲ್ಲಿ ಸಹಜವಾಗಿದ್ದ ಆತ್ಮಶಕ್ತಿ ಹಾಗೂ ಹರಿತವಾದ ತರ್ಕಶಕ್ತಿ—ಈ ಎರಡು ಶಕ್ತಿಗಳ ಸಹಾಯದಿಂದ ನರೇಂದ್ರ ಸತ್ಯಶೋಧನೆ ಮಾಡುತ್ತ ಸಾಕ್ಷಾತ್ಕಾರದೆಡೆಗೆ ವೇಗ

ವಾಗಿ ಸಾಗಿದ್ದ. ಆದನ್ನು ಕಂಡು ಆತನ ಬಗ್ಗೆ ಶ್ರೀರಾಮಕೃಷ್ಣರ ಹೃದಯ ತುಂಬಿ ಬರುತ್ತಿತ್ತು. ಒಂದು ಸಂದರ್ಭದಲ್ಲಿ ತಮ್ಮ ಸುತ್ತ ಕುಳಿತಿದ್ದ ಶಿಷ್ಯರಿಗೆ ನರೇಂದ್ರನನ್ನು ತೋರಿಸುತ್ತ ಅವರು ಉದ್ಗರಿಸುತ್ತಾರೆ: "ನೋಡಿ ಅವನನ್ನು! ಅವನ ಗ್ರಹಣಶಕ್ತಿ ಅದೆಷ್ಟು ಅದ್ಭುತವಾಗಿದೆ! ಅವನಲ್ಲಿ ಪ್ರಖರ ಜ್ಞಾನವೆಂಬುದು ಪಾರವಿಲ್ಲದ ಸಾಗರ ದಂತಿದೆ. ಸಾಕ್ಷಾತ್ ಮಹಾಮಾಯೆ ಕೂಡ ಅವನ ಹತ್ತಿರ ಸುಳಿಯಲಾರಳು. ಆಕೆ ಅವನಿಗಿಂತ ಹತ್ತು ಅಡಿ ದೂರದಲ್ಲೇ ನಿಲ್ಲಬೇಕು! ಅವನಿಗೆ ಈ ಆಧ್ಯಾತ್ಮಿಕ ಹಾಗೂ ಬೌದ್ಧಿಕ ವೈಭವವನ್ನು ಕರುಣಿಸಿದವಳು ಅವಳೇ. ಆದರೆ ಈಗ ಆ ವೈಭವದ ಮುಂದೆ, ಪ್ರಖರ ತೇಜಸ್ಸಿನ ಮುಂದೆ ಅವಳೇ ನಿಲ್ಲಲಾರದವಳಾಗಿದ್ದಾಳೆ!"

ಆದರೆ ಶ್ರೀರಾಮಕೃಷ್ಣರೇ ಕೆಲವೊಮ್ಮೆ ಜಗನ್ಮಾತೆಯನ್ನು 'ಅಮ್ಮಾ, ದಯಮಾಡಿ ನಿನ್ನ ಮಾಯೆಯನ್ನು ನರೇಂದ್ರನ ಮೇಲೆ ಸ್ವಲ್ಪ ಹರಡು' ಎಂದು ಪ್ರಾರ್ಥಿಸಿಕೊಳ್ಳು ತ್ತಿದ್ದರು. ಸಾಮಾನ್ಯ ಜನರ ವಿಷಯದಲ್ಲಾದರೆ, 'ನಿನ್ನ ಮಾಯೆಯ ಆವರಣವನ್ನು ಸ್ವಲ್ಪ ಸರಿಸು' ಎಂದು ಪ್ರಾರ್ಥಿಸಿಕೊಳ್ಳಬೇಕಾಗುತ್ತದೆ. ಆದರೆ ನರೇಂದ್ರನ ವಿಷಯದಲ್ಲಿ ಅದು ತದ್ವಿರುದ್ಧ. ಏಕೆಂದರೆ ಮುಂದೆ ಅವನಿಂದ ಲೋಕಕಲ್ಯಾಣದ ಕಾರ್ಯ ಆಗ ಬೇಕಾಗಿದೆ. ಸ್ವಲ್ಪ ಮಟ್ಟಿಗಾದರೂ ಮಾಯೆಯ ಆವರಣವಿಲ್ಲದೆಹೋದರೆ ಲೋಕಹಿತ ಚಿಂತನೆ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ, ಮಾಯೆಯ ಒಂದಂಶವಾದರೂ ಇಲ್ಲದಿದ್ದರೆ ಮನುಷ್ಯ ಶುದ್ಧಸತ್ತ್ವನಾಗುತ್ತಾನೆ. ಅಂಥವನ ಮನಸ್ಸು ಸದಾ ಅತ್ಯುನ್ನತ ವಾದ ನಿರ್ವಿಕಲ್ಪ ಸಮಾಧಿಯ ಸ್ಥಿತಿಯಲ್ಲೇ ಇದ್ದುಬಿಡುತ್ತದೆ. ಮನಸ್ಸನ್ನು ಅಲ್ಲಿಂದ ಕೆಳಗೆಳೆಯಲು ಸಾಧ್ಯವೇ ಆಗುವುದಿಲ್ಲ. ಹೀಗೆ ಅವನು ಲೋಕದ ಪಾಲಿಗೆ, ಇದ್ದೂ ಇಲ್ಲದವನಾಗಿಬಿಡುತ್ತಾನೆ. ಹಾಗೆಯೇ ನರೇಂದ್ರನೂ ತನ್ನ ಆನಂದದಲ್ಲಿ ತಾನೇ ಮುಳುಗಿದ್ದುಬಿಟ್ಟರೆ ಲೋಕಕ್ಕೆ ಅವನಿಂದ ಏನು ಪ್ರಯೋಜನವಾದೀತು? ಆದ್ದ ರಿಂದಲೇ ಶ್ರೀರಾಮಕೃಷ್ಣರು ಜಗನ್ಮಾತೆಯನ್ನು ಹಾಗೆ ಪ್ರಾರ್ಥಿಸಿಕೊಳ್ಳುತ್ತಿದ್ದುದು.

ಶ್ರೀರಾಮಕೃಷ್ಣರ ಶಿಕ್ಷಣವಿಧಾನ ನಿಜಕ್ಕೂ ಬಹಳ ವಿಶಿಷ್ಟವಾದದ್ದು, ಅದ್ಭುತ ವಾದದ್ದು. ತರುಣಶಿಷ್ಯರು ಸೇರಿ ತಮ್ಮತಮ್ಮೊಳಗೆ ಆತ್ಮತತ್ತ್ವದ ಕುರಿತಾಗಿಯೋ ವೇದಾಂತದ ಕುರಿತಾಗಿಯೋ ಚರ್ಚೆ ಮಾಡುವುದಿತ್ತು. ಆಗ ಶ್ರೀರಾಮಕೃಷ್ಣರು ತಾವು ಮಧ್ಯೆ ಪ್ರವೇಶ ಮಾಡದೆ ಅವರ ಮಾತುಗಳನ್ನು ಮೌನವಾಗಿ ಆಲಿಸುತ್ತಿದ್ದರು. ಆದರೆ ಆ ಶಿಷ್ಯರಿಗೆ ಗಂಟೆಗಟ್ಟಲೆ ತರ್ಕ ಮಾಡಿಯೂ ತಿಳಿಯಲಾಗದ ವಿಚಾರವನ್ನು ಅವರು ಕೇವಲ ಒಂದೇ ಮಾತಿನಲ್ಲಿ, ಇಲ್ಲವೆ ಒಂದು ಹಾಡಿನ ಮೂಲಕ, ಅಥವಾ ತಮ್ಮ ನೋಟಮಾತ್ರದಿಂದ ತಿಳಿಸಿಕೊಟ್ಟುಬಿಡುತ್ತಿದ್ದರು. ಅವರ ಬೋಧನೆಯ ಪಲ್ಲವಿ ಮಾತ್ರ ಇದೊಂದೇ: 'ಭಗವತ್ಸಾಕ್ಷಾತ್ಕಾರವೇ ಜೀವನದ ಗುರಿ; ಸಾಕ್ಷಾತ್ಕಾರವಾಯಿತೆಂದರೆ ಈ ತರ್ಕ-ವಿತರ್ಕಗಳೆಲ್ಲ ನಿಂತುಹೋಗುತ್ತವೆ; ಹೃದಯದಲ್ಲಿ ಜ್ಞಾನಜ್ಯೋತಿ ಪ್ರಕಾಶ ವಾಗುತ್ತದೆ.'

ಒಂದು ದಿನ ನರೇಂದ್ರನೂ ಇತರ ಶಿಷ್ಯರೂ ಸೇರಿ ಬಿಸಿಬಿಸಿ ವಾದ-ವಿವಾದದಲ್ಲಿ ತೊಡಗಿದ್ದಾರೆ. 'ಭಗವಂತ ಸಾಕಾರನೆ, ನಿರಾಕಾರನೆ? ಭಗವಂತ ಅವತಾರ ತಾಳುವುದು ನಿಜವೆ ಅಥವಾ ಈ ಅವತಾರಗಳೆಲ್ಲ ಕಟ್ಟುಕಥೆಗಳೆ?'—ಇದು ವಾದದ ವಿಷಯ. ಆಗಿನ್ನೂ ನರೇಂದ್ರ ಕಟ್ಟಾ ನಿರಾಕಾರವಾದಿಯಾಗಿದ್ದ. ಅವತಾರತತ್ತ್ವವನ್ನೂ ಹೀಗಳೆಯುತ್ತಿದ್ದ. ಆದರೆ ಉಳಿದ ತರುಣರೆಲ್ಲ ಸಹಜವಾಗಿಯೇ ಭಕ್ತಿಪ್ರಧಾನ ಸ್ವಭಾವ

ದವರು. ಅಲ್ಲದೆ, ಶ್ರೀರಾಮಕೃಷ್ಣರ ಬೋಧನೆಗಳಲ್ಲಿ ವಿಶ್ವಾಸ ತಳೆದಿದ್ದವರು. ಎಲ್ಲರೂ ಬಹಳ ಬುದ್ಧಿವಂತ ಯುವಕರೇ. ಆದ್ದರಿಂದ ವಾದ ಒಳ್ಳೇ ರಭಸದಿಂದ ಸಾಗಿತ್ತು. ಶಾಸ್ತ್ರಗಳ, ಸಿದ್ಧಾಂತಗಳ ಆಧಾರದ ಮೇಲೆ ವಾದ ನಡೆಯಿತು. ಶಾಸ್ತ್ರವಾಕ್ಯಗಳೂ ಮುಗಿದುವು; ಸಿದ್ಧಾಂತದ ಉದಾಹರಣೆಗಳೂ ಮುಗಿದುವು. ಕೊನೆಗೆ ವಾದದಲ್ಲಿ ಗೆದ್ದವನು ನರೇಂದ್ರನೇ. ನಾಲ್ಕಾರು ಜನ ಸೇರಿಯೂ ಅವನನ್ನು ಸೋಲಿಸಲಾಗ ಲಿಲ್ಲ. ಅವನು ಉಳಿದೆಲ್ಲರ ವಾದಗಳನ್ನು ಕತ್ತರಿಸಿಹಾಕಿಬಿಟ್ಟ. ಆ ಹೊತ್ತಿಗೆ ಸರಿಯಾಗಿ ಶ್ರೀರಾಮಕೃಷ್ಣರು ಭಾವಸ್ಥಿತಿಯಲ್ಲಿ ಅಲ್ಲಿಗೆ ಬಂದರು; ಬರುತ್ತಿದ್ದ ಹಾಗೆಯೇ ಅವರೆಲ್ಲರ ವಾದ-ವಿವಾದಗಳಿಗೆ ಉತ್ತರವೋ ಎಂಬಂತೆ, ಸಂತ ರಾಮಪ್ರಸಾದನ ಹಾಡೊಂದನ್ನು ಭಾವಪೂರ್ಣವಾಗಿ ಹಾಡತೊಡಗಿದರು:

*ದೇವದೇವನ ನಿಜವನರಿಯಲು ಮನವು ತೊಳಲುತ ಬಳಲಿದೆ;*
*ಬೀಗಮುದ್ರೆಯನಿಟ್ಟ ಕೋಣೆಯೊಳಲೆವ ಮನುಜನ ತೆರನಿದೆ!*

*ದಿವ್ಯಪ್ರೇಮಕೆ ದೊರೆವನವನು, ಶ್ರದ್ಧೆಗಲ್ಲದೆ ಒಲಿಯನು*
*ವೇದ-ಶಾಸ್ತ್ರ-ಪುರಾಣ-ದರ್ಶನದಾಚೆಗೇ ನಿಂತಿರುವನು!*

*ಭಕ್ತಿಗೊಲಿಯುವ ಹೃದಯದಮೃತಾನಂದರೂಪನು ಎಂಬರು;*
*ಇದನರಿತೆ ಆ ಯೋಗಿವರ್ಯರು ಯುಗಯುಗವು ತಪಗೈದರು!*

*ಭಕ್ತಿ ಎಚ್ಚರಗೊಳಲು ಎದೆಯಲಿ ಅವನೆ ನಿನ್ನನು ಸೆಳೆವನು*
*ಈ ರಹಸ್ಯವ ಜಗದ ಸಂತೆಯ ಜನಸಮೂಹಕೆ ತಿಳಿಸೆನು!*

*ಶ್ರೀಪ್ರಸಾದನು ನುಡಿವನೀ ತೆರ — 'ಮಾತೃಭಾವದಿ ನೆನೆವನು;*
*ನನ್ನ ಸೂಚನೆಯರಿತು ನೀವೇ ತಿಳಿಯಿರಾತನ ನಿಜವನು'*

ಈ ಹಾಡನ್ನು ಕೇಳುತ್ತಲೇ ಶಿಷ್ಯರೆಲ್ಲ ಆನಂದೋದ್ವೇಗದಿಂದ ಸ್ತಬ್ಧರಾಗಿಬಿಟ್ಟರು. ಆ ಹಾಡು ಅವರೆಲ್ಲರ ವಾದ ವಿವಾದದ ಕಾವನ್ನು ಆರಿಸಿಬಿಟ್ಟಿತ್ತು. ವಾದ ಮಾಡುವುದು ಮನಸ್ಸು-ಬುದ್ಧಿಗಳು. ಆದರೆ ಭಗವಂತನಿರುವುದು ಮನಸ್ಸು ಬುದ್ಧಿಗಳಾಚೆಗೆ. ಉಪ ನಿಷತ್ತು ಘೋಷಿಸುತ್ತದೆ—'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ...' ಮಾತಿಗೆ ಅತೀತನಾದವನನ್ನು ಮಾತಿನಿಂದ ವರ್ಣಿಸುವುದು ಹೇಗೆ ? ಮನ ಸ್ಸಿಗೂ ಮೀರಿದವನನ್ನು ಮನಸ್ಸಿನಿಂದ ಅರಿತುಕೊಳ್ಳುವುದು ಹೇಗೆ ? ಆದ್ದರಿಂದಲೇ ಶ್ರೀರಾಮಕೃಷ್ಣರು ಹಾಡುತ್ತಾರೆ:

'(ಮನವು) ಬೀಗಮುದ್ರೆಯನಿಟ್ಟ ಕೋಣೆಯೊಳಲೆವ ಮನುಜನ ತೆರನಿದೆ !'

ಭಗವಂತ ಶಾಸ್ತ್ರಗಳಲ್ಲೂ ಇಲ್ಲ, ತಂತ್ರಗಳಲ್ಲೂ ಇಲ್ಲ, ವೇದಗಳಲ್ಲೂ ಇಲ್ಲ. ಅವನಿರುವುದು ದಿವ್ಯ ಪ್ರೇಮವಿರುವಲ್ಲಿ, ಶುದ್ಧ ಭಕ್ತಿಯಿರುವಲ್ಲಿ. ಅಲ್ಲದೆ,

'ಭಕ್ತಿಯೆಚ್ಚರಗೊಳಲು ಎದೆಯಲಿ ಅವನೆ ನಿನ್ನನು ಸೆಳೆವನು. . . !'

ಹಾಡಿನ ಭಾವವನ್ನು ಗ್ರಹಿಸಿದ ನರೇಂದ್ರಾದಿಗಳು ಒಮ್ಮೆಗೇ ಮೂಕರಾಗಿಬಿಟ್ಟರು. ಅವರೆಲ್ಲರ ಪ್ರಶ್ನೆ-ಪರಿಪ್ರಶ್ನೆಗಳಿಗೆ ಸರಿಯಾದ ಉತ್ತರ ಸಿಕ್ಕಿಬಿಟ್ಟಿತ್ತು.

ನಿಜಕ್ಕೂ ಭಗವಂತನ ವಿಷಯವನ್ನು ತಿಳಿಸಹೊರಟಾಗ ಶ್ರೀರಾಮಕೃಷ್ಣರು ಉಪ ಯೋಗಿಸುತ್ತಿದ್ದ ಭಾಷೆಯೆಂದರೆ 'ಸಾಕ್ಷಾತ್ಕಾರದ ಭಾಷೆ'. ಉಳಿದವರೆಲ್ಲ ಭಗವಂತನ

ಅಸ್ತಿತ್ವದ ಕುರಿತಾಗಿ ಶಾಸ್ತ್ರಗಳ ಭಾಷೆಯಿಂದ ವಿಶ್ಲೇಷಿಸಿ ವಿವರಿಸಹೊರಟರೆ, ಶ್ರೀರಾಮ ಕೃಷ್ಣರು ನೇರವಾದ ತಮ್ಮ ಈ ಸಾಕ್ಷಾತ್ಕಾರದ ಭಾಷೆಯಲ್ಲಿ ಹೇಳಿಬಿಡುತ್ತಾರೆ. ಉಳಿದವರು ಗಂಟೆಗಟ್ಟಲೆ ಶಾಸ್ತ್ರವಾಕ್ಯಗಳನ್ನು ಉದಾಹರಿಸಿ ವಿವರಿಸಿದರೂ ಅರ್ಥವಾಗದಿದ್ದುದು, ಶ್ರೀರಾಮಕೃಷ್ಣರ ಒಂದೇ ಒಂದು ವಾಕ್ಯದಿಂದ ಅಥವಾ ಹಾಡಿನಿಂದ ಸ್ಪಷ್ಟವಾಗಿಬಿಡುತ್ತದೆ ! ಏಕೆಂದರೆ ಅವರು ಕೇವಲ ಶಾಸ್ತ್ರಪಂಡಿತರಲ್ಲ, ದ್ರಷ್ಟಾರರು; ಭಗವಂತನನ್ನು ಮುಖಾಮುಖಿಯಾಗಿ ಕಂಡವರು. ಹಾಗಿರುವಾಗ ಅವರು ತರ್ಕ-ವಿತರ್ಕಗಳ ಮೂಲಕ ಆತನ ಬಗ್ಗೆ ತಿಳಿಸಿಕೊಡಬೇಕಾದ ಆವಶ್ಯಕತೆಯೇನಿದೆ ? ಕೂದಲೆಳೆಯನ್ನು ಸೀಳುವಂತಹ ವ್ಯರ್ಥ ವಾದಗಳ ಮರೆಹೊಗಬೇಕಾದ ಅಗತ್ಯವೇನಿದೆ ? ಪಂಚಾಂಗವನ್ನು ಹಿಂಡಿದರೆ ಮಳೆ ಬರುತ್ತದೆಯೆ ? ಹಾಗೆಯೇ, ಶಾಸ್ತ್ರವಾಕ್ಯಗಳನ್ನು ಬಿಡಿಸಿ ನೋಡಿದರೆ ದೇವರು ಸಿಗುತ್ತಾನೆಯೆ ? ಶ್ರೀರಾಮಕೃಷ್ಣರು ಕೂಡ ಬುದ್ಧದೇವನಂತೆಯೇ ಶಾಸ್ತ್ರ-ಸಿದ್ಧಾಂತಗಳನ್ನು ಬಗೆದುನೋಡುವಂತಹ ತರ್ಕ ವಿತರ್ಕಗಳಿಗೆ ಗಮನ ಕೊಡುವವರಲ್ಲ. ಅಲ್ಲದೆ, ನಿಜವಾದ ಆಧ್ಯಾತ್ಮಿಕತೆಯೆಂಬುದು ದೊಡ್ಡ ದೊಡ್ಡ ಸಿದ್ಧಾಂತಗಳನ್ನು ರಮ್ಯವಾದ ಶಬ್ದಗಳ ಮೂಲಕ ವರ್ಣಿಸುವುದರಲ್ಲಿಲ್ಲ; ಅಥವಾ ಶಾಸ್ತ್ರ ವ್ಯಾಖ್ಯಾನ ಕೌಶಲದಲ್ಲಿಲ್ಲ. ನಿಜವಾದ ಆಧ್ಯಾತ್ಮಿಕತೆಯಿರುವುದು ಭಗವತ್ಸಾಕ್ಷಾತ್ಕಾರದಲ್ಲಿ. ಆದ್ದರಿಂದ ಶಿಷ್ಯರು ತರ್ಕ ವಿತರ್ಕಗಳಲ್ಲಿ ತೊಡಗಿದಾಗಲೆಲ್ಲ ಶ್ರೀರಾಮಕೃಷ್ಣರು ಅವರ ಆಲೋಚನಾಪಥವನ್ನು ಅಲ್ಲಿಂದ ತಪ್ಪಿಸಿ ಸತ್ಯಸಾಕ್ಷಾತ್ಕಾರದೆಡೆಗೆ ತಿರುಗಿಸುತ್ತಾರೆ—ಹೇಗೆ ಹೋರಾಡಿ ಸಾಧನೆ ಮಾಡಬೇಕು, ಹೇಗೆ ಸಂಯಮದಿಂದಿದ್ದು ತಪಸ್ಸನ್ನಾಚರಿಸಬೇಕು, ಹೇಗೆ ಭಗವದ್ದರ್ಶನಕ್ಕಾಗಿ ವ್ಯಾಕುಲಿತರಾಗಬೇಕು ಎಂಬುದರ ಕಡೆಗೆ ಅವರ ಗಮನ ಸೆಳೆಯುತ್ತಾರೆ. ತರ್ಕ ವಿತರ್ಕಗಳು ತುಂಬ ಮುಂದುವರಿದು ರಭಸ ಹೆಚ್ಚಾದಂತೆ ಕಂಡುಬಂದರೆ ಶ್ರೀರಾಮಕೃಷ್ಣರು ಅಸಹನೆಗೊಂಡು, "ಇನ್ನು ಈ ಮಾತೆಲ್ಲ ಇಷ್ಟಕ್ಕೇ ಸಾಕು" ಎನ್ನುತ್ತಿದ್ದರು. ಮಣಗಟ್ಟಲೆ ಮಾತನಾಡುವ ಪಂಡಿತರನ್ನು ಅವರು ರಣಹದ್ದಿಗೆ ಹೋಲಿಸುತ್ತಿದ್ದರು. "ರಣಹದ್ದು ಬಹಳ ಎತ್ತರದಲ್ಲೇನೋ ಹಾರಾಡುತ್ತಿರುತ್ತದೆ. ಆದರೆ ಅದರ ದೃಷ್ಟಿ ಮಾತ್ರ ಕೆಳಗೆ ನೆಲದ ಮೇಲಿರುವ ಕೊಳೆತ ಶವದ ಮೇಲೆಯೇ. ಹಾಗೆಯೇ ಈ ಪಂಡಿತರು ಶಾಸ್ತ್ರತತ್ತ್ವಗಳ ದೊಡ್ಡದೊಡ್ಡ ಮಾತುಗಳನ್ನಾಡಿದರೂ ಅವರ ಗಮನ ಇರುವುದೆಲ್ಲ ಹೆಸರು-ಕೀರ್ತಿ, ಕಾಮ-ಕಾಂಚನಗಳ ಕಡೆಗೆ" ಎನ್ನುತ್ತಿದ್ದರು.

ಇನ್ನೆಷ್ಟೋ ಸಲ ಶ್ರೀರಾಮಕೃಷ್ಣರ ಮೌನವೇ ಅತ್ಯಂತ ಸ್ಪಷ್ಟವಾದ ಉಪದೇಶವಾಗಿ ಪರಿಣಮಿಸುತ್ತಿತ್ತು. ಕೆಲವೊಮ್ಮೆ ಶಿಷ್ಯರು ತಮ್ಮ ವಾದ-ವಿವಾದಗಳನ್ನೆಲ್ಲ ಮುಗಿಸಿ ನೋಡಿದರೆ, ಅವರು ಸಮಾಧಿಸ್ಥರಾಗಿಬಿಟ್ಟಿರುತ್ತಿದ್ದರು ! ಇದೇನಿದು, ಇವರು ಹೀಗೆ ಸಮಾಧಿಮಗ್ನರಾದುದುಕ್ಕೆ ಕಾರಣವೇನಿರಬಹುದು ಎಂದು ಆಲೋಚಿಸಿದಾಗ ತಿಳಿಯುತ್ತಿತ್ತು—ಇದು ತಮ್ಮ ವ್ಯರ್ಥ ತರ್ಕ-ವಿತರ್ಕಗಳ ವಿರುದ್ಧ ಶ್ರೀರಾಮಕೃಷ್ಣರ ಪ್ರತಿಭಟನೆ ಎಂದು ! 'ನೋಡಿ, ನೀವು ಯಾವ ಭಗವಂತನ ವಿಷಯವಾಗಿ ಇಷ್ಟೆಲ್ಲ ಮಾತನಾಡುತ್ತಿದ್ದೀರೋ, ಅಂಥ ಭಗವಂತನನ್ನು ಅರಿಯಬೇಕಾದದ್ದು ಮೌನದ ಮೂಲಕ; ಅವನನ್ನು ಅರಿತು ಆನಂದಿಸಬೇಕಾದದ್ದು ಹೀಗೆ ಸಮಾಧಿಸ್ಥಿತಿಯಲ್ಲಿ—ನೋಡಿ !' ಎಂದು ಅವರು ಹೇಳುತ್ತಿರುವಂತಿತ್ತು.

ಆದರೆ ವಾದ-ವಿವಾದಗಳ ಉಪಯುಕ್ತತೆಯನ್ನೂ ಶ್ರೀರಾಮಕೃಷ್ಣರು ಚೆನ್ನಾ

ಗಿಯೇ ಅರಿತಿದ್ದರು. ವಿಚಾರಶಕ್ತಿ ಹರಿತವಾಗಲು ಮತ್ತು ವಿಷಯಸ್ಪಷ್ಟತೆಗಾಗಿ ಕೆಲವೊಮ್ಮೆ ವಾದ ಮಾಡಬೇಕಾಗುತ್ತದೆ. ಆದ್ದರಿಂದಲೇ ಅವರು ಸಾಮಾನ್ಯತಃ ಶಿಷ್ಯರ ಚರ್ಚೆಗಳಲ್ಲಿ ನಡುವೆ ಪ್ರವೇಶಿಸುತ್ತಿರಲಿಲ್ಲ, "ಹುಡುಗರು ಚರ್ಚೆ ಮಾಡಲಿ; ಹಾಗೆ ಮಾಡುವುದರಿಂದ ಚೆನ್ನಾಗಿ ಕಲಿಯುತ್ತಾರೆ" ಎನ್ನುತ್ತಿದ್ದರು. ಅಲ್ಲದೆ ಕೆಲವು ಸಲ ತಾವೂ ಅವರ ಚರ್ಚೆಯನ್ನು ಕೇಳಿ ಆನಂದಿಸುತ್ತಿದ್ದರು. ಶಿಷ್ಯರು ಚರ್ಚೆ ಮಾಡುವ ರೀತಿಯನ್ನು ನೋಡಿಯೇ ಅವರ ಆಧ್ಯಾತ್ಮಿಕತೆಯ ಆಳವನ್ನು ಕಂಡುಕೊಳ್ಳುತ್ತಿದ್ದರು. ನಿಜಕ್ಕೂ ಶ್ರೀರಾಮಕೃಷ್ಣರ ಸಾನ್ನಿಧ್ಯವೇ ಒಂದು ಶಿಕ್ಷಣಕೇಂದ್ರ ಎನ್ನಬಹುದು; ಒಂದು ಉನ್ನತ ಆಧ್ಯಾತ್ಮಿಕ ವಿದ್ಯಾಶಾಲೆ ಎನ್ನಬಹುದು. ಶ್ರೀರಾಮಕೃಷ್ಣರ ಸಮರ್ಥ ಮಾರ್ಗದರ್ಶನದಲ್ಲಿ ಎಲ್ಲರೂ ತಮ್ಮತಮ್ಮ ಜೀವನಾದರ್ಶವನ್ನು ಕಂಡುಕೊಳ್ಳಲು ಅನುಕೂಲಿಸುವಂತಿತ್ತು ಆ ವಾತಾವರಣ. ಇನ್ನು ಕೆಲವೊಮ್ಮೆ ಶ್ರೀರಾಮಕೃಷ್ಣರು ಶಿಷ್ಯರ ಚರ್ಚೆಯನ್ನು ಗಮನಿಸಿ, ಅವರ ತಪ್ಪು ಗ್ರಹಿಕೆ, ತಪ್ಪು ವಾದಗಳನ್ನು ತೋರಿಸಿಕೊಡುತ್ತಿದ್ದರು. ಎಷ್ಟೋ ಸಲ ನರೇಂದ್ರ ತನ್ನ ಭಾರತೀಯ ಹಾಗೂ ಪಾಶ್ಚಾತ್ಯ ತತ್ತ್ವಶಾಸ್ತ್ರಗಳ ಜ್ಞಾನದ ಬಲದಿಂದ, ತನ್ನ ವಾಗ್ವೈಖರಿಯಿಂದ, ತನ್ನ ಬಲಯುತವಾದ ಆಲೋಚನಾ ಶಕ್ತಿಯಿಂದ ಎಂಥವರನ್ನೂ ಸುಲಭವಾಗಿ ಬಾಯಿಮುಚ್ಚಿಸಿಬಿಡುತ್ತಿದ್ದ. ಅಂತಹ ಸಂದರ್ಭಗಳಲ್ಲಿ ಶ್ರೀರಾಮಕೃಷ್ಣರೂ ಮಧ್ಯೆ ಪ್ರವೇಶ ಮಾಡುತ್ತಿದ್ದರು. ಒಂದು ದಿನ ಶ್ರದ್ಧೆಯ ಕುರಿತಾಗಿ ಚರ್ಚೆಯೆದ್ದಿತು. ಮುಕ್ತಿ ಗಳಿಸಬೇಕಾದರೆ ಶ್ರದ್ಧೆಯೇ ಸಾಧನ ಎಂದು ಇತರರೆಲ್ಲ ವಾದಿಸಿದರೆ, ನರೇಂದ್ರ ಹೇಳುತ್ತಾನೆ: "ಕೇವಲ ಶ್ರದ್ಧೆಯಿಂದೇನಾದೀತು ? ಮುಕ್ತಿ ಪಡೆಯಲು ಬೇಕಾದದ್ದು ಶ್ರದ್ಧೆಯಲ್ಲ, ಜ್ಞಾನ. ಶ್ರದ್ಧೆ ಎನ್ನುವುದು ಬರೀ ಕುರುಡು—ಶ್ರದ್ಧೆಯೆಂದರೆ ಅಂಧವಿಶ್ವಾಸ" ಎಂದು. ಆಗ ಶ್ರೀರಾಮಕೃಷ್ಣರು ಮಧ್ಯೆ ಪ್ರವೇಶಿಸಿ ನುಡಿದರು: "ಅಂಧಶ್ರದ್ಧೆ ಎಂದೆಯಲ್ಲ, ಅದೇನದು ? ಶ್ರದ್ಧೆ ಯಾವಾಗಲೂ ಅಂಧವೇ ! ಶ್ರದ್ಧೆಗೇನು ಕಣ್ಣಿದೆಯೆ ? ಅದನ್ನು ನೀನು 'ಅಂಧಶ್ರದ್ಧೆ' ಎಂದು ಕರೆಯುವುದೇತಕ್ಕೆ ? ಸುಮ್ಮನೆ 'ಶ್ರದ್ಧೆ' ಎನ್ನು; ಇಲ್ಲವೆ 'ಜ್ಞಾನ' ಎನ್ನು. ಅದರ ಬದಲು ಕಣ್ಣಿರುವ ಶ್ರದ್ಧೆ, ಕಣ್ಣಿಲ್ಲದ ಶ್ರದ್ಧೆ ಅಂತ ಶ್ರದ್ಧೆಯನ್ನೇ ವಿಭಾಗಿಸುವೆಯಲ್ಲ!" ಇದನ್ನು ಕೇಳಿ ನರೇಂದ್ರನ ಬಾಯಿ ಕಟ್ಟಿಯೇ ಹೋಯಿತು. ಒಂದು ಮಾತನ್ನೂ ಆಡಲಾರದೆ ತೆಪ್ಪಗೆ ಕುಳಿತುಬಿಟ್ಟ. ಆಲೋಚಿಸಿದಂತೆಲ್ಲ ಅವನಿಗೆ 'ಶ್ರದ್ಧೆ ಯಾವಾಗಲೂ ಅಂಧವೇ; ಶ್ರದ್ಧೆ ಎನ್ನು, ಇಲ್ಲವೆ ಜ್ಞಾನ ಎನ್ನು'—ಎನ್ನುವ ಮಾತಿನ ಸತ್ಯತೆ ನಿಚ್ಚಳವಾಗತೊಡಗಿತು. ಹೀಗೆ ಶ್ರೀರಾಮಕೃಷ್ಣರು ಶ್ರದ್ಧೆಯ ನಿಜಸ್ವರೂಪದ ಬಗ್ಗೆ ಅವನಲ್ಲಿ ಹೊಸ ಅರಿವನ್ನೇ ಉಂಟುಮಾಡಿದರು.

ಶ್ರೀರಾಮಕೃಷ್ಣರ ದಿವ್ಯ ಶಿಕ್ಷಣದಿಂದ ನರೇಂದ್ರನಿಗೆ, ನಿಧಾನವಾಗಿಯಾದರೂ ನಿಶ್ಚಯವಾಗಿ, ಅರ್ಥವಾಗತೊಡಗಿತು—ನಿಜವಾದ ಧರ್ಮ ಎಂದರೆ ಅದು ಸಾಕ್ಷಾತ್ಕಾರ; ಮನುಷ್ಯನಾದವನು ಭಗವಂತನನ್ನು ಕಾಣಲೇಬೇಕು ಎಂದು. ಮನುಷ್ಯನು ಭಗವಂತನ ಕುರಿತಾಗಿ ಆಲೋಚನೆ, ತರ್ಕ ವಿತರ್ಕ ಮಾಡುವುದು ಒಳ್ಳೆಯದೇ; ಆದರೆ ಆತನನ್ನು ಪ್ರತ್ಯಕ್ಷವಾಗಿ ಕಾಣುವುದೇ ಅತ್ಯುನ್ನತವಾದದ್ದು, ಪರಮಶ್ರೇಷ್ಠವಾದದ್ದು ಎಂಬ ವಿಷಯ ಅವನಿಗೆ ಮನದಟ್ಟಾಯಿತು. ಭಗವಂತನ ಸಾಕ್ಷಾತ್ಕಾರಕ್ಕೆ ಪ್ರೀತಿಪೂರ್ವಕ ಸಹನೆಯಿಂದ ಕೂಡಿದ ದೀರ್ಘಕಾಲದ ಸಾಧನೆ ಅತ್ಯಾವಶ್ಯಕ ಎಂಬುದೂ ಅರಿವಾಯಿತು.

ಶಿಷ್ಯರು ಶ್ರೀರಾಮಕೃಷ್ಣರನ್ನು ಕೇಳುವುದಿತ್ತು—"ಭಗವಂತನ ಸಾಕ್ಷಾತ್ಕಾರಕ್ಕೆ ಉಪಾಯವೇನು, ಯಾವ ಮಾರ್ಗ ಶ್ರೇಷ್ಠವಾದದ್ದು?" ಎಂದು. ಅದಕ್ಕೆ ಶ್ರೀರಾಮ ಕೃಷ್ಣರು ಒಂದು ಸುಲಭ ವಿಧಾನವನ್ನು ಸೂಚಿಸುತ್ತಿದ್ದರು: "ಅವನನ್ನೇ ಪ್ರಾರ್ಥನೆ ಮಾಡಿಕೊಳ್ಳಿ!" ಎಂದು. "ಪ್ರಾರ್ಥನೆ ಮಾಡುವುದು ಹೇಗೆ?" ಎಂಬ ಶಿಷ್ಯರ ಪ್ರಶ್ನೆಗೆ ಅವರು ಉತ್ತರಿಸುತ್ತಿದ್ದರು: "ನೀವು ಹೇಗೆ ಬೇಕಾದರೂ ಪ್ರಾರ್ಥನೆ ಮಾಡಿಕೊಳ್ಳ ಬಹುದು. ನಿಮಗೆ ಯಾವ ರೀತಿ ಇಷ್ಟವಾಗುತ್ತದೆಯೋ, ಸರಿಹೊಂದುತ್ತದೆಯೋ ಆ ರೀತಿಯಲ್ಲೇ ಪ್ರಾರ್ಥಿಸಿಕೊಳ್ಳಿ. ಭಗವಂತ ಇರುವೆಯ ಹೆಜ್ಜೆಯ ಸಪ್ಪಳವನ್ನೂ ಕೇಳಿಸಿ ಕೊಳ್ಳಬಲ್ಲ." ಹೀಗೆ ಸಾಧನೆಯ ಕುರಿತಾದ ಎಲ್ಲ ಪ್ರಶ್ನೆಗಳಿಗೂ ಸುಲಭ-ಸಮಾಧಾನ ಕರವಾಗಿ ಉತ್ತರಿಸುತ್ತಿದ್ದರು. ಪ್ರಾರ್ಥನೆ, ಧ್ಯಾನ, ಜಪ-ತಪಗಳ ಬಗ್ಗೆ ವಿಶದವಾಗಿ ತಿಳಿಸಿಕೊಡುತ್ತಿದ್ದರು. ಭಗವಂತನ ಸಾಕಾರ-ನಿರಾಕಾರ ಸಗುಣ-ನಿರ್ಗುಣ ತತ್ತ್ವಗಳ ಬಗ್ಗೆ ಹೀಗೆನ್ನುತ್ತಿದ್ದರು: "ಭಗವಂತ ಸಾಕಾರನೂ ಹೌದು, ನಿರಾಕಾರನೂ ಹೌದು; ಅವನು ಸಗುಣನೂ ಹೌದು, ನಿರ್ಗುಣನೂ ಹೌದು; ಮತ್ತು ಅವನು ಇವೆಲ್ಲಕ್ಕೂ ಅತೀತನೂ ಹೌದು. ಸಾಕ್ಷಾತ್ಕಾರವಾದಾಗ ಅವನು ಮನುಷ್ಯನ ಅಂತರಂಗದಲ್ಲಿ ವ್ಯಕ್ತ ನಾಗುತ್ತಾನೆ. ಅವನು ಭಕ್ತರ ಸಂತೋಷಕ್ಕಾಗಿ ಯಾವ ಆಕಾರವನ್ನಾದರೂ ತಳೆಯ ಬಲ್ಲ." ವಿಗ್ರಹಪೂಜೆ ಮಾಡುವುದು ಸರಿಯೇ ತಪ್ಪೇ ಎಂಬ ಪ್ರಶ್ನೆಗೆ ಅವರೆನ್ನುತ್ತಾರೆ: "ಭಗವದ್ದರ್ಶನಕ್ಕೆ ಸಹಾಯವಾಗುವಂತಹ ಯಾವುದೇ ಬಗೆಯ ಪೂಜೆಯಾದರೂ ಅದು ಸರಿಯೇ. ಆದರೆ ಮುಖ್ಯವಾಗಿ ಬೇಕಾದುದು ತೀವ್ರ ವ್ಯಾಕುಲತೆ."

ಶ್ರೀರಾಮಕೃಷ್ಣರು ಎಲ್ಲ ಬಗೆಯ ಆಧ್ಯಾತ್ಮಿಕ ಸಾಧನೆಗಳಲ್ಲೂ ನುರಿತವರು; ಎಲ್ಲ ಸಾಧನಾಪಥಗಳಲ್ಲೂ ಶಾಸ್ತ್ರೋಕ್ತವಾಗಿ ಸಾಧನೆ ಮಾಡಿ ಭಗವದ್ದರ್ಶನ ಮಾಡಿದವರು. ಹಿಂದೂ ಶಾಸ್ತ್ರಗಳು ನಾನಾಬಗೆಯ ಆಧ್ಯಾತ್ಮಿಕ ಸಾಧನೆಗಳನ್ನು, ಯೋಗಮಾರ್ಗಗಳನ್ನು ತಿಳಿಸಿಕೊಡುತ್ತವೆ. ಏಕೆಂದರೆ ಒಬ್ಬೊಬ್ಬನ ಅಭಿರುಚಿ, ಮನೋಭಾವ ಒಂದೊಂದು ಬಗೆ. ಅವರವರು ತಮಗಿಷ್ಟವಾದ ಮಾರ್ಗವನ್ನು ಆರಿಸಿಕೊಂಡು ಮುಂದುವರಿಯಲು ಶಾಸ್ತ್ರಗಳ ಸಮ್ಮತಿಯಿದೆ. ಆದರೆ ಈ ಶಾಸ್ತ್ರಗಳಲ್ಲಿ ತಿಳಿಸಲಾದ ಮಾರ್ಗಗಳಲ್ಲಿ ಕೆಲವು ರಾಜಮಾರ್ಗಗಳು, ಇನ್ನು ಕೆಲವು ಕಾಡುದಾರಿಗಳು. ತಂತ್ರಸಾಧನೆ ಎಂಬ ಒಂದು ಬಗೆಯ ಆಧ್ಯಾತ್ಮಿಕ ಸಾಧನೆ ಬಂಗಾಳದಲ್ಲಿ ಹೆಚ್ಚಾಗಿ ಪ್ರಚಲಿತವಾಗಿದೆ. ಇದನ್ನು ವಕ್ರ ವಾದ, ಕೊಳಕಾದ ಗಲ್ಲಿ ರಸ್ತೆಗೆ ಹೋಲಿಸಬಹುದು. ಈ ಸಾಧನೆಯಲ್ಲಿ ಸ್ತ್ರೀ-ಪುರುಷರು ಜೊತೆಯಾಗಿ ಸಾಧನೆ ಮಾಡುವ ಪ್ರಣಾಳಿಯಿದೆ. ಲೈಂಗಿಕತೃಷ್ಣೆಯನ್ನು ಕ್ರಮೇಣ ನಿರ್ಮೂಲಗೊಳಿಸಿ, ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವ ಒಂದು ವಿಶಿಷ್ಟ ಪ್ರಕ್ರಿಯೆಯನ್ನು ಇದರಲ್ಲಿ ತಿಳಿಸಿಕೊಡಲಾಗಿದೆ. ಆದರೆ ಬಂಗಾಳದಲ್ಲಿ ಈ ಸಾಧನೆ ಯನ್ನು ಅವಲಂಬಿಸಿದವರಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಸಾಧಕರು ಕೇವಲ ಲೈಂಗಿಕತೆ ಯಲ್ಲೇ ಮುಳುಗಿರುತ್ತಾರೆ. ಒಟ್ಟಿನಲ್ಲಿ, ಈ ಸಾಧನೆಯನ್ನು ಗಂಭೀರವಾಗಿ ಪರಿಗಣಿಸಿ ದವರೂ ಕೂಡ ಬೇಗನೆ ದಾರಿತಪ್ಪಿ ಭ್ರಷ್ಟರಾಗುವ ಸಂಭವವೇ ಹೆಚ್ಚು. ಆದ್ದರಿಂದ ತಂತ್ರಸಾಧನೆಯೆಂದರೆ ನಾಗರಿಕರಿಗೆ ಹೇವರಿಕೆ; ಅಂತಹ 'ಸಾಧಕ'ರನ್ನು ಕಂಡರೆ ಸಿಡಿಮಿಡಿ. ತರುಣ ನರೇಂದ್ರನಿಗಂತೂ ಇಂತಹ ಭಾವನೆ ಇನ್ನಷ್ಟು ತೀವ್ರ. ಇದು ಶ್ರೀರಾಮಕೃಷ್ಣರಿಗೂ ಗೊತ್ತು. ಆದರೆ ಅವರು ಸ್ವಯಂ ಈ ಬಗೆಯ ಸಾಧನೆಯನ್ನು ಪರಿಶುದ್ಧ ರೂಪದಲ್ಲಿ ನಡೆಸಿ ಯಶಸ್ವಿಯಾದವರು. *(ವಿವರಗಳಿಗೆ ನೋಡಿ:*

ಯುಗಾವತಾರ ಶ್ರೀರಾಮಕೃಷ್ಣ, ಸಂ. ೧.) ಅಲ್ಲದೆ ಅವರ ದೃಷ್ಟಿಕೋನ ಅತ್ಯಂತ ವಿಶಾಲ; ಇತರೆಲ್ಲರಿಗಿಂತ ವಿಭಿನ್ನ.

ಒಮ್ಮೆ ಸಂಭಾಷಣೆಯ ಸಂದರ್ಭದಲ್ಲಿ ತಂತ್ರಸಾಧನೆಯ ಪ್ರಸ್ತಾಪ ಬಂದಿತು. ಆಗ ಶ್ರೀರಾಮಕೃಷ್ಣರು ನರೇಂದ್ರನಿಗೆ ಅದರ ಮರ್ಮವನ್ನು ವಿವರಿಸುತ್ತ ಹೇಳುತ್ತಾರೆ: "ಈ ತಂತ್ರಸಾಧಕರಿಗೆ ತಮ್ಮ ಸಾಧನೆಯಲ್ಲಿ ಸರಿಯಾದ ರೀತಿಯಲ್ಲಿ ಮುನ್ನಡೆಯಲು ಸಾಧ್ಯವಾಗುವುದಿಲ್ಲ. ಅವರಲ್ಲಿ ಹೆಚ್ಚಿನವರೆಲ್ಲ ಸಾಧನೆಯ ಹೆಸರಿನಲ್ಲಿ ತಮ್ಮ ಕೀಳು ಕಾಮನೆಗಳನ್ನು ತೃಪ್ತಿಪಡಿಸಿಕೊಳ್ಳುತ್ತಾರೆ ಅಷ್ಟೆ. ಆದರೆ ನೋಡು ನರೇನ್, ನೀನು ಈ ವಿಷಯಗಳನ್ನೆಲ್ಲ ತಿಳಿದುಕೊಂಡು ತಲೆಕೆಡಿಸಿಕೊಳ್ಳಬೇಕಾಗಿಲ್ಲ. ನನ್ನ ಮಾರ್ಗವೇನು ಗೊತ್ತೆ? ನನ್ನದು ಸಂತಾನಭಾವ. ಸಮಸ್ತ ಸ್ತ್ರೀಯರನ್ನೂ ಜಗನ್ಮಾತೆಯ ಸ್ವರೂಪ ರೆಂದು ತಿಳಿಯುವವನು ನಾನು. ಇದು ಅತ್ಯಂತ ಪರಿಶುದ್ಧವಾದ ಮನೋಭಾವ. ಇದರಲ್ಲಿ ಅಪಾಯಕ್ಕೆ ಅವಕಾಶವೇ ಇಲ್ಲ. ಸ್ತ್ರೀಯನ್ನು ಸೋದರಿ ಎಂದು ತಿಳಿಯುವುದ ರಲ್ಲೂ ತಪ್ಪಿಲ್ಲ. ಆದರೆ ಇನ್ನುಳಿದ ಭಾವನೆಗಳು ಬಹಳ ಅಪಾಯಕರ. ತಂತ್ರಶಾಸ್ತ್ರದ ನಾಯಕ-ನಾಯಕೀಭಾವದ ಸಾಧನೆಯ ಮೂಲಕ ಧ್ಯೇಯವನ್ನು ಮುಟ್ಟುವುದು ತೀರಾ ಕಷ್ಟದ ಕೆಲಸ. ಭಗವಂತನನ್ನು ಸೇರಲು ನಾನಾ ಮಾರ್ಗಗಳಿವೆ. ಈ ತಂತ್ರ ಸಾಧನೆಯ ಮಾರ್ಗಗಳು ಮಾತ್ರ ಜಾಡಮಾಲಿ ಪ್ರವೇಶಮಾಡುವ ಹಿತ್ತಲ ದಾರಿ ಯಂತೆ. ಮನೆಯನ್ನು ಮುಂಭಾಗದಲ್ಲಿರುವ ಹೆಬ್ಬಾಗಿಲ ದಾರಿಯಾಗಿ ಪ್ರವೇಶ ಮಾಡು ವುದೇ ಒಳ್ಳೆಯದಲ್ಲವೆ?"

ಹೀಗೆನ್ನುತ್ತ ಉನ್ನತ ಭಾವದಲ್ಲಿ ಹೇಳತೊಡಗಿದರು:

"ನೋಡು, ನಾನಾ ಮತಗಳಿವೆ; ನಾನಾ ಮಾರ್ಗಗಳಿವೆ. ಆದರೆ ಅವು ಯಾವುವೂ ನನಗೀಗ ರುಚಿಸಲಾರವು. ಈ ಭಿನ್ನ ಭಿನ್ನ ಮಾರ್ಗಗಳ ಅನುಯಾಯಿಗಳು ತಮ್ಮತಮ್ಮಲ್ಲಿ ಹೊಡೆದಾಡಿಕೊಳ್ಳುತ್ತಾರೆ. ನೀವು ನನ್ನ ಸ್ವಂತದವರು; ಇಲ್ಲಿ ಪರ ಕೀಯರು ಯಾರೂ ಇಲ್ಲ. ನಾನೊಂದು ವಿಷಯವನ್ನು ಹೇಳುತ್ತೇನೆ ಕೇಳಿ: ನಾನು ಸ್ಪಷ್ಟವಾಗಿ ಕಾಣುತ್ತಿದ್ದೇನೆ—ಅವನು ಪ್ರಭು, ನಾನವನ ದಾಸ ಎಂದು. ಇನ್ನು ಕೆಲವು ಸಲ ಕಾಣುತ್ತೇನೆ—ಭಗವಂತ ಪೂರ್ಣ, ನಾನು ಅವನ ಅಂಶ ಎಂದು. ಮತ್ತೆ ಕೆಲ ವೊಮ್ಮೆ ಕಾಣುತ್ತೇನೆ—ನಾನೇ ಅವನು, ಅವನೇ ನಾನು ಎಂದು."

ಹೀಗೆ ದ್ವೈತ, ವಿಶಿಷ್ಟಾದ್ವೈತ, ಅದ್ವೈತ—ಈ ಮೂರು ತತ್ತ್ವಗಳೂ ಸಮಾನ ವಾಗಿ ಸತ್ಯ ಎಂದು ಸೂಚಿಸುತ್ತಿದ್ದಾರೆ, ಶ್ರೀರಾಮಕೃಷ್ಣರು. ನರೇಂದ್ರ ಈ ಎಲ್ಲ ಮಾತು ಗಳನ್ನೂ ಗಮನವಿಟ್ಟು ಕೇಳುತ್ತಿದ್ದ. ಅವರ ಈ ದಿವ್ಯ, ಅನುಭವಪೂರ್ಣ ವಾಕ್ಯಗಳು ಅವನ ಮೇಲೆ ಅತೀವ ಪ್ರಭಾವ ಬೀರಿದುವು. ತಾನು ಬ್ರಾಹ್ಮಸಮಾಜದಲ್ಲಿ ಕಲಿತದ್ದೆಲ್ಲ ಎಷ್ಟು ಸಂಕುಚಿತ ದೃಷ್ಟಿಯದು ಎನ್ನುವುದು ಈಗ ಅವನಿಗೆ ಅರ್ಥವಾಗತೊಡಗಿತ್ತು. ಕ್ರೈಸ್ತ, ಬ್ರಾಹ್ಮ ಮೊದಲಾದ ಸಿದ್ಧಾಂತಗಳಲ್ಲಿ 'ಪಾಪ' 'ಪಾಪವಿಮೋಚನೆ' ಇಂತಹ ತತ್ತ್ವಗಳಿಗೆ ಬಹುಮುಖ್ಯ ಸ್ಥಾನ. 'ಮಾನವನು ಹುಟ್ಟಿನಿಂದಲೇ ಪಾಪಿ, ಆದರೆ ಅವನು ಪಾಪವನ್ನು ಕಳೆದುಕೊಂಡು ಪರಿಶುದ್ಧನಾಗಬೇಕು' ಎಂದು ಅವುಗಳ ಬೋಧನೆ. ಆದರೆ ಶ್ರೀರಾಮಕೃಷ್ಣರು 'ಪಾಪ' ಎಂಬ ಪದವನ್ನು ಕೇಳಲೂ ಇಷ್ಟಪಡುತ್ತಿರಲಿಲ್ಲ. ಅವರ ಶಬ್ದಕೋಶದಲ್ಲಿ 'ಜನ್ಮತಃ ಪಾಪಿ' ಎಂಬ ಮಾತೇ ಇರಲಿಲ್ಲ. ಮಾನವನಿಗೆ ಹುಟ್ಟಿನಿಂದಲೇ ಕೆಲವು ಇತಿಮಿತಿಗಳಿರುತ್ತವೆ, ದೌರ್ಬಲ್ಯಗಳಿರುತ್ತವೆ ಎಂಬುದನ್ನು

ಅವರು ಒಪ್ಪುತ್ತಿದ್ದರು. ಆದರೆ ಅವರು ಮಾನವನ ಈ ಇತಿಮಿತಿಗಳನ್ನೇ ಒತ್ತಿ ಹೇಳುವವರಲ್ಲ. ಈ ಇತಿಮಿತಿಗಳನ್ನು, ಬಂಧನಗಳನ್ನು ಮೀರಿ ನಡೆಯುವುದೇ ಮಾನವಜನ್ಮದ ಗುರಿ ಎಂಬುದನ್ನು ಅವರು ತೋರಿಸಿಕೊಡುತ್ತಿದ್ದರು. ಹೀಗೆ ಅವರು ತಮ್ಮ ಶಿಷ್ಯರ ಮನೋಭಾವವನ್ನು ಸಂಪೂರ್ಣವಾಗಿ ಪರಿವರ್ತಿಸುತ್ತಿದ್ದರು.

ಒಂದು ದಿನ ನರೇಂದ್ರ, ಮಹೇಂದ್ರನಾಥನ ಮುಂದೆ ಕಾಲೇಜು ಯುವಕರ ದುರಾಚಾರಗಳ ವಿಚಾರವಾಗಿ ಟೀಕೆ ಮಾಡುತ್ತಿದ್ದ. ಅದನ್ನು ಕೇಳಿಸಿಕೊಂಡ ಶ್ರೀರಾಮ ಕೃಷ್ಣರು ಒಡನೆಯೇ ಹೇಳುತ್ತಾರೆ: "ಇಂತಹ ಅಲ್ಪ ವಿಚಾರಗಳ ಬಗ್ಗೆ ಏಕೆ ಮಾತ ನಾಡುತ್ತೀಯೆ? ಭಗವಂತನ ವಿಚಾರವಾಗಿ ಮಾತ್ರ ಮಾತನಾಡು. ಬೇರೆ ಯಾವ ವಿಷಯವೂ ಬೇಡ." ಆಗಾಗಲೇ ಕಂಡ ತಪ್ಪುಗಳನ್ನು ಅಲ್ಲಲ್ಲೇ ತಿದ್ದಿ ಸರಿಪಡಿಸುವ ಅವರ ಶಿಕ್ಷಣಕೌಶಲವನ್ನು ಇಲ್ಲಿ ನಾವು ಕಾಣಬಹುದಾಗಿದೆ.

ಶ್ರೀರಾಮಕೃಷ್ಣರ ಬೋಧನೆಯ ಮರ್ಮವನ್ನು, ಅವರ ಮಾತುಗಳ ಅಂತ ರಾರ್ಥವನ್ನು ಗ್ರಹಿಸುವಲ್ಲಿ ನರೇಂದ್ರ ಮಿಕ್ಕೆಲ್ಲ ಶಿಷ್ಯರಿಗಿಂತ ಹೆಚ್ಚು ಪ್ರವೀಣ. ಅವರ ದಿವ್ಯವಾಣಿಯ ಆಧ್ಯಾತ್ಮಿಕ ಭಾವಗಳಿಗೆ ಅವನ ಹೃದಯ ಸರಿಸಮನಾಗಿ ಸ್ಪಂದಿಸುತ್ತಿತ್ತು. ಶ್ರೀರಾಮಕೃಷ್ಣರ ಜೀವನವೆಂಬುದು ಅವರ ಸಾಕ್ಷಾತ್ಕಾರಗಳಿಂದ ಹಾಗೂ ಸಂದೇಶ ಗಳಿಂದ ಕೂಡಿದ ಒಂದು ಭವ್ಯ ಗ್ರಂಥದಂತೆ. ಅವರ ಇತರ ಶಿಷ್ಯರು ಆದರ ಎಲ್ಲೋ ಒಂದೊಂದು ಪುಟವನ್ನು ಓದಿ ಅರ್ಥ ಮಾಡಿಕೊಳ್ಳುತ್ತಿದ್ದರೆ, ನರೇಂದ್ರ ಆ ಗ್ರಂಥದ ಸಂಪುಟ ಸಂಪುಟಗಳನ್ನೇ ಅರಗಿಸಿಕೊಳ್ಳುತ್ತಿದ್ದ. ಅವನ ಭಾವಗ್ರಹಣ ಸಾಮರ್ಥ್ಯ ಅಷ್ಟು ತೀಕ್ಷ್ಣ. ಒಮ್ಮೆ ಶ್ರೀರಾಮಕೃಷ್ಣರು ತಮ್ಮ ಕೋಣೆಯಲ್ಲಿ ನರೇಂದ್ರಾದಿ ಶಿಷ್ಯರೊಂದಿಗೆ ಕುಳಿತಿದ್ದಾರೆ; ವೈಷ್ಣವ ಸಿದ್ಧಾಂತದ ವಿಷಯವಾಗಿ ಸಂಭಾಷಣೆ ನಡೆಯುತ್ತಿದೆ. ಶ್ರೀರಾಮ ಕೃಷ್ಣರು ಚೈತನ್ಯ ಮಹಾಪ್ರಭುವಿನ ಸಿದ್ಧಾಂತದ ರೂಪುರೇಷೆಗಳ ಕುರಿತಾಗಿ ಹೇಳು ತ್ತಿದ್ದಾರೆ:

"ಚೈತನ್ಯನ ಬೋಧನೆಯ ಪ್ರಕಾರ ಅವನ ಅನುಯಾಯಿಗಳು ಮೂರು ಮುಖ್ಯವಾದ ಅಂಶಗಳನ್ನು ಅಭ್ಯಾಸ ಮಾಡಬೇಕು: ಒಂದು—ಭಗವನ್ನಾಮದಲ್ಲಿ ಅಭಿರುಚಿ; ಎರಡು—ವೈಷ್ಣವ ಭಕ್ತರ ಸೇವೆ; ಮೂರು—ಜೀವರಲ್ಲಿ ದಯೆ. ಭಗವಂತ ಮತ್ತು ಅವನ ಹೆಸರು ಬೇರೆಬೇರೆಯಲ್ಲ; ಆದ್ದರಿಂದ ಸದಾ ಅವನ ನಾಮವನ್ನು ಜಪಿಸುತ್ತಿರಬೇಕು. ಅಂತೆಯೇ ಭಗವಂತ ಮತ್ತು ಭಕ್ತ, ಎಂದರೆ ವಿಷ್ಣು ಮತ್ತು ವೈಷ್ಣವ—ಇವರಲ್ಲಿ ಪರಸ್ಪರ ಭೇದವಿಲ್ಲ; ಆದ್ದರಿಂದ ಪ್ರತಿಯೊಬ್ಬ ವೈಷ್ಣವನನ್ನೂ ಪೂಜ್ಯಬುದ್ಧಿಯಿಂದ ಗೌರವಿಸಿ ಸತ್ಕರಿಸಬೇಕು. ಇನ್ನು ಈ ಇಡೀ ಜಗತ್ತೇ ಭಗವಂತನಿಗೆ ಸೇರಿರುವುದರಿಂದ ಸಕಲ ಜೀವರಲ್ಲೂ ದಯೆ ತೋರಬೇಕು."

ಹೀಗೆ ನಿಧಾನವಾಗಿ, ಎಲ್ಲರಿಗೂ ಅರ್ಥವಾಗುವಂತೆ ವಿವರಿಸುತ್ತಿದ್ದ ಶ್ರೀರಾಮ ಕೃಷ್ಣರು, 'ಸಕಲ ಜೀವರಲ್ಲಿ ದಯೆ' ಎಂಬ ಈ ಮಾತನ್ನು ಉಚ್ಚರಿಸುತ್ತಿದ್ದಂತೆಯೇ ಸಮಾಧಿಸ್ಥರಾಗಿಬಿಟ್ಟರು. ಶಿಷ್ಯರೆಲ್ಲ, ಅದಕ್ಕೆ ಕಾರಣವೇನೆಂದು ತಿಳಿಯದೆ ಮೌನವಾಗಿ ನೋಡುತ್ತಿದ್ದಾರೆ. ಸ್ವಲ್ಪ ಹೊತ್ತಾದ ಬಳಿಕ ಶ್ರೀರಾಮಕೃಷ್ಣರು ಅರ್ಧಭಾವಾವಸ್ಥೆಗೆ ಇಳಿದು, ತಮ್ಮಷ್ಟಕ್ಕೇ ಎಂಬಂತೆ ಉದ್ಗರಿಸಿದರು: "ಏನು, ಜೀವರಲ್ಲಿ ದಯೆ! ಜೀವರಲ್ಲಿ ದಯೆ! ಎ ಹುಲುಮಾನವ! ಜೀವರಲ್ಲಿ ದಯೆ ತೋರಲು ನೀನು ಯಾರು! ಇಲ್ಲ, ಅದು ಸಾಧ್ಯವಿಲ್ಲ. ಜೀವರಿಗೆ ದಯೆ ತೋರುವುದಲ್ಲ. ಜೀವರಿಗೆ ನೀನು ಮಾಡ

ಬೇಕಾದದ್ದು ಸೇವೆ. ಜೀವನಲ್ಲಿ ಶಿವನನ್ನು ಕಂಡು ಸೇವೆ ಮಾಡಬೇಕು. ಜೀವನಲ್ಲ, ಶಿವ; ಜೀವನಲ್ಲ, ಶಿವ !''

ಶ್ರೀರಾಮಕೃಷ್ಣರು ಅರ್ಧಭಾವಾವಸ್ಥೆಯಲ್ಲಿ ಆಡಿದ ಈ ಕೆಲವು ಮಾತುಗಳನ್ನು ಅಲ್ಲಿ ಕುಳಿತಿದ್ದವರೆಲ್ಲರೂ ಕೇಳಿಸಿಕೊಂಡದ್ದೇನೋ ನಿಜವೇ. ಆದರೆ ಆ ಸ್ಫೂರ್ತಿಯುತ ನುಡಿಗಳ ಗೂಢಾರ್ಥವನ್ನು ಪೂರ್ಣವಾಗಿ ಗ್ರಹಿಸಿದವನು ನರೇಂದ್ರನೊಬ್ಬನೇ. ಬಳಿಕ ಕೋಣೆಯಿಂದ ಹೊರಬಂದಮೇಲೆ ಅವನು ತಾನು ಕಂಡುಕೊಂಡ ವಿನೂತನ ವಿಚಾರಗಳನ್ನು ಇತರರ ಮುಂದೆ ಉತ್ಸಾಹದಿಂದ ಬಣ್ಣಿಸುತ್ತಾನೆ.

"ಆಹ್ ! ಇಂದು ನಾನು ಶ್ರೀರಾಮಕೃಷ್ಣರ ಮಾತಿನಲ್ಲಿ ಅದ್ಭುತವಾದ ಒಂದು ಹೊಸ ಬೆಳಕನ್ನು ಕಂಡುಕೊಂಡೆ. ವೇದಾಂತವು ಬೋಧಿಸುವ ಜ್ಞಾನದ ತತ್ತ್ವದೊಂದಿಗೆ ಭಕ್ತಿಯ ಆದರ್ಶವನ್ನು ಅವರು ಎಷ್ಟು ಸುಮಧುರವಾಗಿ ಸಮನ್ವಯಗೊಳಿಸಿದರು ! ವೇದಾಂತದ ತತ್ತ್ವಗಳೆಲ್ಲ ಶುಷ್ಕ; ಪ್ರೀತಿ ಅನುಕಂಪೆಯೇ ಮೊದಲಾದ ಮಾನವಸಹಜ ಭಾವನೆಗಳು ಆ ತತ್ತ್ವಗಳಿಗೆ ಒಗ್ಗುವುದಿಲ್ಲ ಎಂಬುದು ಸಾಮಾನ್ಯವಾದ ನಂಬಿಕೆ. ಇತರರು ಅವುಗಳನ್ನು ವ್ಯಾಖ್ಯಾನ ಮಾಡುವಾಗಲೂ ಅದು ನಿಜವೆಂದೇ ಭಾಸವಾಗುತ್ತದೆ. ಆದರೆ ಶ್ರೀರಾಮಕೃಷ್ಣರು ನೀಡಿದ ಅರ್ಥ ಎಷ್ಟು ಭವ್ಯವಾಗಿದೆ, ಎಷ್ಟು ಸಹಜ-ಸಮಂಜಸವಾಗಿದೆ, ನೋಡಿ ! ಪ್ರಚಲಿತವಿರುವ ಭಾವನೆಯೇನೆಂದರೆ, ಜ್ಞಾನ ಯೋಗವನ್ನು ಅಭ್ಯಾಸ ಮಾಡಬೇಕಾದರೆ ಸಮಾಜದಿಂದ ದೂರವಿರಬೇಕು, ಪ್ರೇಮ ಭಕ್ತಿ ಅನುಕಂಪೆ ಮೊದಲಾದ ಭಾವನೆಗಳನ್ನೆಲ್ಲ ಬೇರುಸಹಿತ ಕಿತ್ತುಹಾಕಬೇಕು ಎಂದು. ವೇದಾಂತವನ್ನು ಜನ ಅರ್ಥ ಮಾಡಿಕೊಂಡಿರುವ ರೀತಿ ಹೀಗೆ. ಸಾಧಕನಾದವನೂ ಹೀಗೆಯೇ ಅಪಾರ್ಥ ಮಾಡಿಕೊಂಡು, ಈ ಜಗತ್ತು-ಜನಗಳು ತನ್ನ ಸಾಧನೆಗೆ ತೊಡಕಾಗಿರುವ ಕಂಟಕಗಳು ಎಂಬ ಭಾವನೆಯಿಂದ ಅವುಗಳನ್ನೆಲ್ಲ ತಿರಸ್ಕರಿಸುತ್ತಾನೆ. ಆದರೆ ಶ್ರೀರಾಮಕೃಷ್ಣರು ದಿವ್ಯಭಾವದಲ್ಲಿ ನುಡಿದ ಆ ವಿವೇಕವಾಣಿಯನ್ನು ಕೇಳಿದಾಗ ನನಗೆ ಅರ್ಥವಾಯಿತು—ಸಾಧಕರೆನ್ನಿಸಿಕೊಂಡವರು ಸಮಾಜದಿಂದ ದೂರವಿದ್ದುಕೊಂಡು ಸರ್ವಸಂಗ ಪರಿತ್ಯಾಗ ಮಾಡಿ ಯಾವ ಆದರ್ಶಗಳನ್ನು ಅಭ್ಯಾಸ ಮಾಡುತ್ತಾರೋ ಅದೇ ಆದರ್ಶಗಳನ್ನು ಅವರು ತಮ್ಮ ಮನೆಯಲ್ಲಿಯೇ ಇದ್ದುಕೊಂಡು ಅಭ್ಯಾಸ ಮಾಡಬಹುದು, ತಮ್ಮ ನಿತ್ಯಜೀವನದಲ್ಲಿಯೇ ಆಚರಣೆಗೆ ತರಬಹುದು ಎಂದು. ಒಬ್ಬ ಮನುಷ್ಯ ಯಾವ ಕ್ಷೇತ್ರದಲ್ಲೇ ಇರಲಿ, ಯಾವ ಉದ್ಯೋಗವನ್ನೇ ಕೈಗೊಂಡಿರಲಿ, ಅವನು ತಿಳಿದಿರಬೇಕಾದ ಒಂದು ಸತ್ಯವೆಂದರೆ ಸ್ವಯಂ ಭಗವಂತನೇ ಈ ಜಗತ್ತಾಗಿ ಮತ್ತು ಜೀವಕೋಟಿಗಳಾಗಿ ವ್ಯಕ್ತಗೊಂಡಿದ್ದಾನೆ ಎಂದು. ಭಗವಂತ ಈ ಜಗತ್ತಿನಲ್ಲಿ ಅಂತರ್ಗತನಾಗಿಯೂ ಇದ್ದಾನೆ, ಜಗತ್ತಿಗೆ ಅತೀತನಾಗಿಯೂ ಇದ್ದಾನೆ. ನಾವು ಪ್ರೀತಿ ತೋರಿಸುವ, ಗೌರವಿಸುವ ಅಥವಾ ಸೇವೆ ಸಲ್ಲಿಸುವ ಈ ಜೀವಕೋಟಿಗಳು ಸ್ವಯಂ ಭಗವಂತನ ವ್ಯಕ್ತ ರೂಪ. ಮತ್ತು ಹೀಗಿದ್ದರೂ ಅವನು ಇವೆಲ್ಲಕ್ಕೂ ಅತೀತನೂ ಹೌದು. ಈ ಒಂದು ತತ್ತ್ವವನ್ನು ಪ್ರತಿಯೊಬ್ಬನೂ ಮನದಟ್ಟು ಮಾಡಿಕೊಳ್ಳಬೇಕು. ಜನರಲ್ಲಿ ಜನಾರ್ದನನನ್ನು ಕಂಡಾಗ, ಜೀವರಲ್ಲಿ ಶಿವನನ್ನು ಕಂಡಾಗ ನಮ್ಮಲ್ಲಿ ಅಹಂಕಾರ ಉಳಿದುಕೊಳ್ಳಲು ಅವಕಾಶವಾಗುವುದಿಲ್ಲ. ಏಕೆಂದರೆ ಭಗವಂತನ ಮುಂದೆಯೇ ನಮ್ಮ ಅಹಂಕಾರವನ್ನು ತೋರಿಸಲು ಸಾಧ್ಯವೆ ? ಮತ್ತು ನಾವು ಯಾರ ಬಗ್ಗೆಯೂ ದ್ವೇಷಾಸೂಯೆ ತಾಳಲೂ ಸಾಧ್ಯವಿಲ್ಲ. ಪ್ರೇಮಸ್ವರೂಪ

ನಾದ ಭಗವಂತನ ಕುರಿತಾಗಿ ದ್ವೇಷಾಸೂಯೆಗಳನ್ನು ತಾಳಲು ಸಾಧ್ಯವೆ? ಅಂತೆಯೇ ಈ ಪರಮಸತ್ಯವನ್ನು ಅರಿತಾಗ, ಮನುಷ್ಯ ಇತರರ ಮೇಲೆ 'ದಯೆ' ತೋರುವ ಧಿಮಾಕು ಮಾಡುವುದಿಲ್ಲ. ಭಗವಂತನ ಮೇಲೆಯೇ ದಯೆ ತೋರುವುದೆಂದ ರೇನರ್ಥ! ಆದ್ದರಿಂದ ಜೀವರಲ್ಲಿ ದೇವನಿದ್ದಾನೆ ಎಂದು ಅರಿವಾದಾಗ ಸಾಧಕನು ಜೀವರ 'ಸೇವೆ' ಮಾಡುತ್ತಾನೆ, ತನ್ಮೂಲಕ ತನ್ನ ಹೃದಯವನ್ನು ಪರಿಶುದ್ಧಗೊಳಿಸಿ ಕೊಳ್ಳುತ್ತಾನೆ. ಹೀಗೆ ಭಾವದಿಂದ ಸೇವೆ ಮಾಡುವ ಸಾಧಕ ಬಹುಬೇಗ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ."

ಶ್ರೀರಾಮಕೃಷ್ಣರ ದಿವ್ಯವಾಣಿಯನ್ನು ಕೇಳಿ ತನ್ನಲ್ಲುದಿಸಿದ ಭಾವನೆಗಳ ಮಹಾ ಪೂರವನ್ನೇ ಹರಿಸುತ್ತ ನರೇಂದ್ರ ಮುಂದುವರಿಸುತ್ತಾನೆ:

"ನಿಜಕ್ಕೂ ಶ್ರೀರಾಮಕೃಷ್ಣರ ಈ ಮಾತುಗಳು ಭಕ್ತಿಮಾರ್ಗದ ಮೇಲೆ ಒಂದು ಹೊಸ ಬೆಳಕನ್ನೇ ಬೀರುತ್ತವೆ. ಭಗವಂತ ಪ್ರತಿಯೊಬ್ಬರಲ್ಲೂ ಅಂತರ್ಯಾಮಿಯಾಗಿ ದ್ದಾನೆ ಎಂಬ ಸತ್ಯವನ್ನು ಮನಗಾಣುವವರೆಗೆ ನಿಜವಾದ ಭಕ್ತಿಯೆಂಬುದು ಬಹು ದೂರದ ಮಾತು. ಸರ್ವಜೀವರಲ್ಲೂ ದೇವನಿದ್ದಾನೆ ಎಂಬ ಭಾವದಿಂದ ಸೇವೆ ಸಲ್ಲಿಸಿ ದಾಗ ಸಾಧಕನಲ್ಲಿ ನಿಜವಾದ ಭಕ್ತಿ, ನಿಜವಾದ ನಿಷ್ಠೆ ಮೂಡುತ್ತವೆ. ಕರ್ಮಯೋಗಿ ಗಳಾದರೂ ಸರಿಯೆ, ಜ್ಞಾನಯೋಗಿಗಳಾದರೂ ಸರಿಯೆ—ಶ್ರೀರಾಮಕೃಷ್ಣರ ಈ ಮಾತುಗಳನ್ನು ಅರ್ಥಮಾಡಿಕೊಂಡಲ್ಲಿ ಇಬ್ಬರಿಗೂ ಆಧ್ಯಾತ್ಮಿಕ ಉನ್ನತಿಯಾಗುವುದ ರಲ್ಲಿ ಸಂದೇಹವಿಲ್ಲ. ಮಾನವಶರೀರವನ್ನು ಧರಿಸಿ ಬಂದ ಯಾರಿಂದಲೂ ಕ್ಷಣಕಾಲ ವಾದರೂ ಕರ್ಮ ಮಾಡದೆ ಸುಮ್ಮನಿರಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ಚಟುವಟಿಕೆ ಯನ್ನೆಲ್ಲ ಮಾನವರೂಪದಿಂದ ಓಡಾಡುತ್ತಿರುವ ಭಗವಂತನ ಸೇವೆಗೆ ಮೀಸಲಾಗಿಡ ಬೇಕು. ಇದರಿಂದ ಆಧ್ಯಾತ್ಮಿಕ ಪ್ರಗತಿ ವೇಗಗೊಳ್ಳುತ್ತದೆ. ಭಗವಂತನ ಇಚ್ಛೆಯಿದ್ದರೆ, ನಾನು ಈ ಘನಸತ್ಯವನ್ನು ಸಮಸ್ತ ಜಗತ್ತಿಗೇ ಸಾರುವ ದಿನವೊಂದು ಶೀಘ್ರದಲ್ಲೇ ಒದಗಿಬಂದೀತು! ನಾನು ಈ ಮಹಾಸತ್ಯವನ್ನು ಸರ್ವರ ಸ್ವತ್ತಾಗುವಂತೆ ಮಾಡುತ್ತೇನೆ. ಬುದ್ಧಿವಂತರು-ಮೂರ್ಖರು, ಶ್ರೀಮಂತರು-ದರಿದ್ರರು, ಬ್ರಾಹ್ಮಣರು-ಅಸ್ಪೃಶ್ಯರು—ಎಲ್ಲರೂ ಈ ಸತ್ಯವನ್ನು ಅರಿಯುವಂತೆ ಮಾಡುತ್ತೇನೆ."

ಶ್ರೀರಾಮಕೃಷ್ಣರ ಒಂದೆರಡು ಮಾತುಗಳಲ್ಲಿ ಇಷ್ಟೆಲ್ಲ ಗೂಢಾರ್ಥ ಅಡಗಿದೆ ಎಂಬುದನ್ನು ಮನಗಾಣುತ್ತ ಮತ್ತು ನರೇಂದ್ರನ ಆವೇಶಭರಿತ ವಾಗ್ಧಾರೆಯನ್ನು ಆಲಿ ಸುತ್ತ ಸಹಶಿಷ್ಯರೆಲ್ಲ ವಿಸ್ಮಯಮೂಕರಾಗಿ ನಿಂತರು. ನರೇಂದ್ರನು ಶ್ರೀರಾಮಕೃಷ್ಣರ ಉದ್ಗಾರದಲ್ಲಿ ಅಷ್ಟೊಂದು ಅರ್ಥವನ್ನು ಕಂಡುಕೊಂಡದ್ದು ಒಂದು ವಿಚಾರವಾದರೆ, ಈ ಘನಸತ್ಯವನ್ನು ತಾನು ಜಗತ್ತಿನಾದ್ಯಂತ ಪ್ರಸಾರ ಮಾಡುವ ಮುನ್ಸೂಚನೆ ಕೊಡು ತ್ತಿರುವುದು ಇನ್ನೊಂದು ಮುಖ್ಯಾಂಶ. ಭವಿಷ್ಯದ ವಿವೇಕಾನಂದರಾಗಿ, ಶ್ರೀರಾಮಕೃಷ್ಣರ ದಾಯಭಾರಿಯಾಗಿ ಅವನು ಹೇಗೆ ರೂಪುಗೊಳ್ಳುತ್ತಿದ್ದಾನೆ ಎಂಬುದನ್ನು ನಾವಿಲ್ಲಿ ಗಮನಿಸಬಹುದಾಗಿದೆ.

ಶ್ರೀರಾಮಕೃಷ್ಣರ ಜೀವನ-ಸಂದೇಶಗಳೆರಡೂ ಸನಾತನ ಹಿಂದೂ ಧರ್ಮದ ತಿರುಳೇ ಆಗಿವೆ. ಈ ಸನಾತನ ಧರ್ಮವೆಂಬುದು ಸರ್ವ ಭಾವಗಳನ್ನೂ ಒಳಗೊಂಡ ಸಮಗ್ರ ದೃಷ್ಟಿಯ ಧರ್ಮ. ಅದರ ಆದರ್ಶಗಳು ಸಾರ್ವಕಾಲಿಕವಾದವುಗಳು. ಹಿಂದೂ ಧರ್ಮ ಯಾವ ಮತ-ಪಂಥವನ್ನೂ ತಿರಸ್ಕರಿಸುವುದಿಲ್ಲ; ಬದಲಾಗಿ ಪ್ರತಿಯೊಂದಕ್ಕೂ

ಆದರದರ ಸ್ಥಾನವನ್ನು ಕೊಟ್ಟು ಪುರಸ್ಕರಿಸುತ್ತದೆ. ಶ್ರೀರಾಮಕೃಷ್ಣರ ಜೀವನ ಮತ್ತು ಬೋಧನೆಗಳು ಇಂತಹ ವಿಶಾಲ ಭಾವದ ಸನಾತನ ಧರ್ಮವನ್ನು ಪ್ರತಿನಿಧಿಸುತ್ತವೆ. ಆದ್ದರಿಂದ ನರೇಂದ್ರ ಅವರ ಸಂಪರ್ಕಕ್ಕೆ ಬಂದಮೇಲೆ ಹಿಂದೂ ಆಚಾರ-ವಿಚಾರಗಳೆಲ್ಲ ದರಲ್ಲೂ ಒಂದು ಹೊಸ ಬೆಳಕನ್ನೇ ಕಾಣಲಾರಂಭಿಸಿದ್ದ. ಬಾಲ್ಯದಿಂದಲೇ ಅವನಿಗೆ ಹಿರಿಯರಿಂದ ಹಿಂದೂಧರ್ಮದ ಸಿದ್ಧಾಂತಗಳ, ಆಚಾರಗಳ ಪರಿಚಯವಾಗಿತ್ತು ಎಂಬುದನ್ನು ನಾವು ಬಲ್ಲೆವು. ಆಗ ಅವುಗಳನ್ನೆಲ್ಲ ಅವನು ಮರುಪ್ರಶ್ನೆಯೇ ಇಲ್ಲದೆ ಸ್ವೀಕರಿಸಿದ್ದ. ಆದರೆ ದೊಡ್ಡವನಾಗುತ್ತ ಬುದ್ಧಿ ಬೆಳೆದಂತೆಲ್ಲ ಅವುಗಳನ್ನು ಪ್ರಶ್ನಿಸ ಲಾರಂಭಿಸಿದ. ಬುದ್ಧಿ ಜಾಗೃತವಾದಂತೆಲ್ಲ ಹೊಸಹೊಸ ಸಂದೇಹಗಳು ಮೇಲೆದ್ದಿ ದ್ದುವು. ಆದರೆ ಶ್ರೀರಾಮಕೃಷ್ಣರ ಸಂಪರ್ಕಕ್ಕೆ ಬಂದಾಗ, ಅವರಲ್ಲಿ ಹಿಂದೂಧರ್ಮದ ಪ್ರತಿಯೊಂದು ಆದರ್ಶವೂ ಅರ್ಥಪೂರ್ಣವಾಗಿ ಒಡಮೂಡಿರುವುದನ್ನು ಕ್ರಮೇಣ ಕಂಡುಕೊಂಡ. ತದನಂತರವೇ ಅವನು ಹಿಂದೂಧರ್ಮದಲ್ಲಿ ಮಾನವತೆಯನ್ನು ಮುನ್ನಡೆಸಬಲ್ಲ ಸಾಮರ್ಥ್ಯವಡಗಿರುವುದನ್ನು ಅರಿತದ್ದು. ಹಿಂದೂಧರ್ಮದಲ್ಲಿ ಇಂತಹ ಶಕ್ತಿ ಇರಬಹುದೆಂದು ಹಿಂದೆ ಆತ ಊಹಿಸಿಯೂ ಇರಲಿಲ್ಲ. ಶ್ರೀರಾಮಕೃಷ್ಣರ ಹಿಂದೂಧರ್ಮವೆಂದರೆ ಅದು ಸಕಾರಾತ್ಮಕವಾದದ್ದು, ಅನುಷ್ಠಾನಾತ್ಮಕವಾದದ್ದು. ನರೇಂದ್ರ ತನ್ನ ವಿಚಾರಶಕ್ತಿಯ ರಭಸದಲ್ಲಿ ಹಿಂದೂಧರ್ಮದ ಆಧ್ಯಾತ್ಮಿಕ ಆದರ್ಶ ಗಳನ್ನು, ಅಸಂಖ್ಯಾತ ದೇವ-ದೇವಿಯರ ಅಸ್ತಿತ್ವವನ್ನು ಎಷ್ಟೇ ಶಂಕಿಸಿರಬಹುದು, ಆದರೆ ಹಿಂದೂಧರ್ಮದ ಚೈತನ್ಯವೇ ಜ್ವಲಂತವಾಗಿ ಬೆಳಗುತ್ತಿರುವ ಶ್ರೀರಾಮಕೃಷ್ಣರ ಪ್ರಾಮಾಣಿಕತೆಯನ್ನು ಮಾತ್ರ ಅವನಿಂದ ಶಂಕಿಸಲಾಗಲಿಲ್ಲ. ಮೊದಮೊದಲು, ತಾನು ನಂಬಿಕೊಂಡಿದ್ದ ಬ್ರಾಹ್ಮಸಮಾಜವನ್ನೇ ಧರ್ಮಸಂಸ್ಥಾಪನೆ ಮಾಡಬಲ್ಲ ಒಂದು ಮಹಾ ಸಂಸ್ಥೆ ಎಂದು ಅವನು ಭಾವಿಸಿದ್ದ. ಆ ಬ್ರಾಹ್ಮಸಮಾಜದಲ್ಲೂ ಆಧ್ಯಾತ್ಮಿಕವಾಗಿ ಮುಂದುವರಿದ ಸಾಧಕರು ಇರಲಿಲ್ಲವೆಂದಲ್ಲ. ಆದರೆ ಯಾವಾಗ ಅವನು ಶ್ರೀರಾಮ ಕೃಷ್ಣರ ದಿವ್ಯ ಸಂಪರ್ಕಕ್ಕೆ ಬಂದನೋ ಆಗ ಅವನಿಗೆ ಅರ್ಥವಾಯಿತು—ಬ್ರಾಹ್ಮಸಮಾಜ ವೆಂಬುದು ಆಧ್ಯಾತ್ಮಿಕ ಜೀವಕಳೆಯೇ ಇಲ್ಲದ ಒಂದು ಸಾಮಾನ್ಯ ಸಂಸ್ಥೆ ಎಂದು. ಬ್ರಾಹ್ಮಸಮಾಜದ ಪ್ರಮುಖ ಶಕ್ತಿಯಾದ ಕೇಶವಚಂದ್ರ ಸೇನನೂ ಶ್ರೀರಾಮಕೃಷ್ಣರ ಪದತಲದಲ್ಲಿ ಕುಳಿತು ಆಧ್ಯಾತ್ಮಿಕತೆಯ ಪಾಠ ಕಲಿಯುವುದನ್ನು ಅವನು ಕಾಣುತ್ತಿದ್ದ.

ಅವನು ಹಿಂದೂಧರ್ಮದ ಸಾರವನ್ನು ಅರಿತದ್ದೇ ಶ್ರೀರಾಮಕೃಷ್ಣರ ಸನ್ನಿಧಿ ಯಲ್ಲಿ. ಅವರ ಭಾವಪೂರ್ಣವಾದ ಪೂಜೆ, ಮಾತುಕತೆ, ಬೋಧನೆ, ಅವರ ದಿವ್ಯ ಭಾವಗಳು—ಇವುಗಳನ್ನು ವೀಕ್ಷಿಸುವುದರ ಮೂಲಕವೇ ಅವನಿಗೆ ಹಿಂದೂ ಧರ್ಮದ ನಿಜವಾದ ಸ್ವರೂಪ ಅರ್ಥವಾದದ್ದು. ಶ್ರೀರಾಮಕೃಷ್ಣರ ಬೋಧನೆಗಳನ್ನು ಅವನೆಷ್ಟೇ ವಿರೋಧಿಸಿದರೂ ಅವು ಅವನ ಒಳಹೊಕ್ಕುಬಿಟ್ಟುವು. ಅವರು ತಮ್ಮ ಸಾಕ್ಷಾತ್ಕಾರದ ದಿವ್ಯಾನುಭವಗಳನ್ನೆಲ್ಲ ಅವನೊಳಗೆ ಹರಿಸಿದರು. ತಮ್ಮ ಚೇತನವನ್ನೇ ಅವನೊಳಕ್ಕೆ ಸುರಿದರೆಂದರೂ ಅತಿಶಯೋಕ್ತಿಯಲ್ಲ. ಆದರೆ ಅವರಿದನ್ನು ಹೇಗೆ ಸಾಧಿಸಿದರು ಎಂಬುದು ಮಾತ್ರ ಯಾರಿಗೂ ಅರ್ಥವಾಗುವಂತಿಲ್ಲ. ಅಲ್ಲದೆ, ಇದು ವಿವರಿಸಿ ಹೇಳಲೂ ಸಾಧ್ಯವಿಲ್ಲದಷ್ಟು ಸೂಕ್ಷ್ಮವಾದ ವಿಚಾರ. ಅಂತೂ ಸಂಶಯಗ್ರಸ್ತ ನರೇಂದ್ರ ನಾಶವಾಗಿ ಭಕ್ತ ನರೇಂದ್ರ ಉದಿಸಿದ; ಆಧ್ಯಾತ್ಮಿಕ ನರೇಂದ್ರ ಉದಿಸಿದ. 'ನಾಸ್ತಿಕ' ನರೇಂದ್ರ ಮಾಯವಾಗಿ ಆಸ್ತಿಕ ನರೇಂದ್ರನಾದ. ಅಷ್ಟೇಕೆ, ವಿಶ್ವಮಾನವ ವಿವೇಕಾನಂದ

ನಾಗಿ ನಿರ್ವಾಣಗೊಂಡ.

ಮೊದಮೊದಲು ನರೇಂದ್ರನಿಗೆ ತೀವ್ರವಾದ ಸಾಧನೆಗಳ ಬಗ್ಗೆ, ಮತ್ತು ತತ್ಫಲವಾಗಿ ಭಕ್ತಿಭಾವೋತ್ಕಟತೆಯ ಬಗ್ಗೆ ಒಂದು ಬಗೆಯ ಅನಾದರ, ಶಂಕೆ ಇದ್ದಿತು. ಈ ಭಾವಾವೇಶವೆಲ್ಲ ಆರೋಗ್ಯವಂತ ದೃಢ ಮನಸ್ಸಿನ ಲಕ್ಷಣವಲ್ಲ ಎಂಬ ನಂಬಿಕೆ ಅವನದು—ಬ್ರಾಹ್ಮಸಮಾಜದ ಸಂಪರ್ಕದ ಪ್ರಭಾವ! ಈ ತಪ್ಪು ಕಲ್ಪನೆಯನ್ನು ತಿದ್ದಲೋಸುಗ ಒಂದು ದಿನ ಶ್ರೀರಾಮಕೃಷ್ಣರು ಅವನನ್ನು ಕೇಳಿದರು: "ನೋಡು, ಭಗವಂತ ಪಾನಕದ ಸಾಗರವಿದ್ದಂತೆ. ಅದರೊಳಗೆ ಮುಳುಗಲು ನೀನು ಇಷ್ಟಪಡುವುದಿಲ್ಲವೆ? ಈಗ, ಒಂದು ದೊಡ್ಡ ಪಾತ್ರೆಯ ತುಂಬ ಪಾನಕವಿದೆ ಎಂದಿಟ್ಟುಕೊ. ನೀನು ಆ ಪಾನಕವನ್ನು ಹೀರಲು ತವಕಿಸುತ್ತಿರುವ ಒಂದು ನೊಣ ಎಂದು ಭಾವಿಸು. ಈಗ ಹೇಳು, ಆ ರಸವನ್ನು ಹೇಗೆ ಹೀರುತ್ತೀಯೆ?"

ನರೇಂದ್ರ: "ಪಾತ್ರೆಯ ಅಂಚಿನಲ್ಲಿ ಕುಳಿತುಕೊಂಡು ಎಚ್ಚರಿಕೆಯಿಂದ ನಿಧಾನವಾಗಿ ಹೀರುತ್ತೇನೆ."

ಶ್ರೀರಾಮಕೃಷ್ಣರು: "ಏಕೆ, ಅದರೊಳಗೇ ಮುಳುಗಿಬಿಡುವುದಿಲ್ಲವೆ?"

ನರೇಂದ್ರ: "ಅದು ಹೇಗಾದೀತು? ಅದರೊಳಗೆ ಇಳಿದರೆ ಮುಳುಗಿ ಸತ್ತೇ ಹೋದೇನು!"

ಆಗ ಶ್ರೀರಾಮಕೃಷ್ಣರು ಅವನಿಗೆ ವಿವರಿಸುತ್ತಾರೆ: "ಓ, ಅದು ಹಾಗಲ್ಲ, ಭಗವಂತನೆಂದರೆ ಸಚ್ಚಿದಾನಂದ ಸಾಗರ, ಅಮೃತಸಾಗರ! ಅದರಲ್ಲಿ ಮುಳುಗಿದರೆ ಮರಣದ ಭಯವಿಲ್ಲ. ಭಗವಂತನನ್ನು ಪ್ರೀತಿಸುವಲ್ಲಿ ಅತಿರೇಕಕ್ಕೆ ಹೋಗಬಾರದು ಎನ್ನುವವರು ಅಜ್ಞಾನಿಗಳು. ಭಗವಂತನನ್ನು ಪ್ರೀತಿಸಿ, ಅದು ಅತಿರೇಕವಾಗುವುದು ಎಂಬುದೇನಾದರೂ ಇದೆಯೇನು? ಆದ್ದರಿಂದ, ನಾನು ಹೇಳುತ್ತೇನೆ ಕೇಳು—ನಿರ್ಭೀತಿಯಿಂದ ಸಚ್ಚಿದಾನಂದ ಸಾಗರದಲ್ಲಿ ಮುಳುಗಿಬಿಡು."

ಈ ಮಾತು ನರೇಂದ್ರನಿಗೆ ತುಂಬ ಸಹಾಯಕವಾಯಿತು. ಈ ಜಗತ್ತಿನಲ್ಲಿ ಯಾವುದೇ ವಿಷಯವನ್ನು ಅನುಭವಿಸುವಾಗ ಅತಿರೇಕವಾದರೂ ಅದು ದುಃಖಕ್ಕೆ, ನಾಶಕ್ಕೆ ಕಾರಣವಾಗುತ್ತದೆ. ಆಹಾರ-ಪಾನೀಯಗಳೇ ಆಗಲಿ, ಮನರಂಜನೆಯಾಗಲಿ, ಸುಖಭೋಗಗಳಾಗಲಿ ಯಾವುದು ಅತಿಯಾದರೂ ಕೇಡು ತಪ್ಪಿದ್ದಲ್ಲ. ಆದರೆ ಭಗವಂತನನ್ನು ಪ್ರೀತಿಸುವಲ್ಲಿ ಅತಿರೇಕವಾದರೆ ಆನಂದವೂ ಅಧಿಕವಾಗುತ್ತದೆಯೇ ಹೊರತು, ಅದರಿಂದ ದುಃಖವೊದಗುವ ಭಯವಿಲ್ಲ. ಅಂತೂ, ಈ ವಿಷಯ ಮನವರಿಕೆಯಾದ ಮೇಲೆ ಸಾಧನೆಯಲ್ಲಿ ಆಳವಾಗಿ ಮುಳುಗಲು ನರೇಂದ್ರನಿಗೆ ಹೊಸ ಶಕ್ತಿ ದೊರಕಿದಂತಾಯಿತು.

ಈ ಸಮಯದಲ್ಲಿ ಅವನಿಗೆ ಆಗಾಗ ಅನೇಕ ವಿಚಿತ್ರ ಅನುಭವಗಳಾಗುತ್ತಿದ್ದುವು. ಎಷ್ಟೋ ಸಲ ಮನೆಯಲ್ಲಿ ಕುಳಿತು ಗಾಢ ಧ್ಯಾನದಲ್ಲಿ ತೊಡಗಿದ್ದಾಗ, ತನ್ನೆದುರಿನಲ್ಲಿ ಶ್ರೀರಾಮಕೃಷ್ಣರನ್ನು ಸ್ಪಷ್ಟವಾಗಿ ಕಾಣುತ್ತಿದ್ದ. ಒಂದು ದಿನ ರಾತ್ರಿ ಕನಸಿನಲ್ಲಿ ಶ್ರೀರಾಮಕೃಷ್ಣರು ತನ್ನನ್ನು ಕರೆದು, 'ನಾನು ನಿನಗೆ ರಾಧೆಯನ್ನು ತೋರಿಸಿಕೊಡುತ್ತೇನೆ' ಎಂದಂತೆ ಕಂಡ. ನರೇಂದ್ರ ಅವರನ್ನು ಅನುಸರಿಸಿ ಹೋದ. ಸ್ವಲ್ಪ ದೂರ ನಡೆದಮೇಲೆ ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಹಿಂದೆ ತಿರುಗಿ, 'ಇನ್ನೆಲ್ಲಿಗೆ ಹೋಗುತ್ತೀ ನೀನು?' ಎಂದರು. ಹೀಗೆ ಹೇಳಿ, ತಕ್ಷಣವೇ ರಾಧೆಯಾಗಿ ಪರಿವರ್ತನೆಗೊಂಡು ನಿಂತರು! ತನ್ನೆದುರು ಅತಿ

ಸುಂದರವಾದ ರಾಧೆಯು ರೂಪ ಕಂಗೊಳಿಸುತ್ತಿರುವುದನ್ನು ಅವನು ಕಂಡ. ಅವನ ಜಾಗೃತ ಮನಸ್ಸಿನ ಮೇಲೆ ಈ ಘಟನೆ ತೀವ್ರ ಪ್ರಭಾವ ಬೀರಿತು. ಎಷ್ಟರಮಟ್ಟಿಗೆಂದರೆ, ಹಿಂದೆ ಬ್ರಾಹ್ಮಸಮಾಜದ ನಿರಾಕಾರಬ್ರಹ್ಮಪರವಾದ ಹಾಡುಗಳನ್ನು ಮಾತ್ರ ಹಾಡುತ್ತಿದ್ದವನು ಈಗ ರಾಧೆಯ ಉತ್ಕಟ ಪ್ರೇಮಕ್ಕೆ ಸಂಬಂಧಿಸಿದ ಹಾಡುಗಳನ್ನು ಹಾಡಲಾರಂಭಿಸಿದ ! ಈ ಸ್ವಪ್ನದ ವಿಷಯವನ್ನು ತಿಳಿದಾಗ ಸಹಶಿಷ್ಯರಿಗೆಲ್ಲ ಪರಮಾಶ್ಚರ್ಯ. "ನೀನು ಆ ಕನಸನ್ನು ನಿಜಕ್ಕೂ ನಂಬುತ್ತೀಯಾ ?" ಎಂದು ಅವರಲ್ಲೊಬ್ಬರು ಕೇಳಿದಾಗ, "ಖಂಡಿತವಾಗಿ" ಎಂದುತ್ತರಿಸುತ್ತಾನೆ. ಅವನಂತಹ ವಿಚಾರವಾದಿ ಈ ಕನಸನ್ನು ನಿಜವೆಂದು ನಂಬಬೇಕಾದರೆ ಅದೆಷ್ಟು ನೈಜವಾದ ಅನುಭವವಾಗಿರಬೇಕು ! ಹಿಂದೆ ರಾಧಾ-ಕೃಷ್ಣರ ಸಂಬಂಧವನ್ನು ಅಶ್ಲೀಲವೆಂದು ಟೀಕಿಸುತ್ತಿದ್ದ ಅವನೀಗ ಆ ಭಾವವನ್ನು ಪೂಜ್ಯ ದೃಷ್ಟಿಯಿಂದ ನೋಡಲು ಪ್ರಾರಂಭಿಸಿದ್ದಾನೆ. ನಿಜ, ಸ್ಪಷ್ಟವಾದ ಅನುಭವವುಂಟಾದಾಗ ತಿಳಿವಳಿಕೆಯಲ್ಲಿ ಕ್ರಾಂತಿಯುಂಟಾಗುತ್ತದೆ.

ಶ್ರೀರಾಮಕೃಷ್ಣರ ಭಕ್ತರಲ್ಲಿ ನವಗೋಪಾಲ, ಮನಮೋಹನ ಮೊದಲಾದ ಕೆಲವರು ಭಗವನ್ನಾಮವನ್ನು ಉಚ್ಚರಿಸುತ್ತ ಭಾವೋನ್ಮತ್ತರಾಗಿ ನಿಶ್ಚೇಷ್ಟಿತರಾಗಿ ಬಿದ್ದಿರುತ್ತಿದ್ದುದನ್ನು ನರೇಂದ್ರ ನೋಡುತ್ತಿದ್ದ. ಕ್ರಮೇಣ ಅವನಿಗೆ, 'ಇವರೆಲ್ಲ ಭಾಗ್ಯವಂತರು, ಇವರಿಗೆ ಅದೆಷ್ಟು ಸುಲಭವಾಗಿ ಇಂಥ ಆನಂದದ ಸ್ಥಿತಿ ಪ್ರಾಪ್ತವಾಗುತ್ತದೆ ! ಆದರೆ ನನಗೆ ಮಾತ್ರ ಈ ಬಗೆಯ ಭಾವಾವಸ್ಥೆಯುಂಟಾಗುವುದಿಲ್ಲವಲ್ಲ' ಎನ್ನಿಸಿ ದುಃಖವಾಯಿತು. ತಾನೂ ಕೂಡ ಶರೀರಪ್ರಜ್ಞೆಯನ್ನು ಸಂಪೂರ್ಣವಾಗಿ ಮರೆತು ಭಾವೋನ್ಮತ್ತನಾಗಿರಬೇಕು ಎಂಬ ತೀವ್ರ ಹಂಬಲವುಂಟಾಯಿತು. ಶ್ರೀರಾಮಕೃಷ್ಣರಲ್ಲಿ ತನ್ನ ಅಳಲನ್ನೂ ಬಯಕೆಯನ್ನೂ ತೋಡಿಕೊಂಡ. ಆಗ ಶ್ರೀರಾಮಕೃಷ್ಣರು, "ನರೇನ್, ಇಷ್ಟಕ್ಕೆಲ್ಲ ಚಿಂತಿಸಬೇಡ. ಅದೆಲ್ಲ ಏನು ಮಹಾ ಅಂತ ತಿಳಿದುಕೊಂಡೆ ? ನೋಡು, ಒಂದು ಆನೆ ಸಣ್ಣ ಕೊಳದಲ್ಲಿ ಇಳಿದರೆ ಆ ಕೊಳದ ನೀರೆಲ್ಲ ಭಿಲ್ಲೆಂದು ಹೊರಗೆ ಹಾರುತ್ತದೆ. ಆ ಕೊಳದಲ್ಲಿ ಒಂದು ಅಲ್ಲೋಲಕಲ್ಲೋಲವೇ ಆಗಿಬಿಡುತ್ತದೆ. ಆದರೆ ಅದೇ ಆನೆ ಒಂದು ದೊಡ್ಡ ಸರೋವರದಲ್ಲಿ ಇಳಿದರೆ ಅಲ್ಲಿ ಯಾವ ದೊಡ್ಡ ಅಲ್ಲೋಲ ಕಲ್ಲೋಲವೂ ಇರುವುದಿಲ್ಲ. ಈ ಭಕ್ತರೆಲ್ಲ ಸಣ್ಣಪುಟ್ಟ ಕೆರೆಕುಂಟೆಗಳಿದ್ದ ಹಾಗೆ. ಭಗವತ್ಪ್ರೇಮದ ಮಹಾಶಕ್ತಿ ಒಂದು ಸ್ವಲ್ಪ ಅವರಲ್ಲಿ ಪ್ರವೇಶ ಮಾಡಿಬಿಟ್ಟರೂ ಸಾಕು, ಕೆರೆಕುಂಟೆಗಳಿಂದ ನೀರು ಚಿಮ್ಮುವಂತೆ ಅವರು ವರ್ತಿಸುತ್ತಾರೆ. ಆದರೆ ನೀನು ಒಂದು ಮಹಾಸರೋವರದ ಹಾಗೆ. ನಿನ್ನೊಳಗೆ ಭಾವ ಉಂಟಾದರೂ ಅದು ಹೀಗೆ ವ್ಯಕ್ತಗೊಳ್ಳುವುದಿಲ್ಲ. ಆದ್ದರಿಂದ ನೀನು ಇದಕ್ಕಾಗಿ ಕೊರಗಬೇಡ" ಎಂದು ಸಮಾಧಾನ ಹೇಳಿದರು.

ಈ ದಿನಗಳಲ್ಲಿ ನರೇಂದ್ರ ಹೇಗೆ ತ್ಯಾಗ-ವೈರಾಗ್ಯಗಳ ಮತ್ತು ಆಧ್ಯಾತ್ಮಿಕ ಶಕ್ತಿಯ ಜ್ವಲಂತ ಮೂರ್ತಿಯೇ ಆಗಿದ್ದ ಎಂಬುದಕ್ಕೆ ನಿದರ್ಶನವಾದ ಘಟನೆಯೊಂದು ನಡೆಯಿತು. ಒಮ್ಮೆ ಅವನ ಕೆಲವು ಶ್ರೀಮಂತ ಸ್ನೇಹಿತರು ವಿಹಾರದ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಲು ತಮ್ಮ ಉದ್ಯಾನವನಕ್ಕೆ ಆಹ್ವಾನಿಸಿದರು. ನರೇಂದ್ರ ಎಂದಿನಂತೆ ಸಂತೋಷದಿಂದ ಒಪ್ಪಿ ಅವರೊಂದಿಗೆ ಹೋದ. ಆ ಶ್ರೀಮಂತ ಯುವಕರು ವಿಲಾಸಕ್ಕಾಗಿಯೇ ಅಲ್ಲಿ ನೆರೆದಿದ್ದರು. ಕೆಲವರು ಹಾಡುಗಳನ್ನು ಹಾಡಿದರು. ನರೇಂದ್ರ ತಾನೂ ಹಾಡಿ ಗೆಳೆಯರನ್ನು ಸಂತೋಷಪಡಿಸಿದ. ಸ್ವಲ್ಪಹೊತ್ತಿನ ಮೇಲೆ ಅವನಿಗೆ

ಆಯಾಸವಾಯಿತು. ಗೆಳೆಯರಿಂದ ಬೀಳ್ಕೊಂಡು ಅಲ್ಲೇ ಒಂದು ಕೋಣೆಯ ಏಕಾಂತದಲ್ಲಿ ವಿಶ್ರಮಿಸತೊಡಗಿದ. ಆಗ ಅವನ ಸ್ನೇಹಿತರು ಅವನನ್ನು ಖುಷಿಪಡಿಸಲು ಅಲ್ಲಿಗೆ ಒಬ್ಬಳು ವೇಶ್ಯೆಯನ್ನು ಕಳಿಸಿದರು. ಮುಗ್ಧ ಸ್ವಭಾವದ ನರೇಂದ್ರ ಆಕೆಯ ಉದ್ದೇಶವನ್ನರಿಯದೆ ಅವಳನ್ನು ತನ್ನ ಸ್ವಂತ ಸೋದರಿಯಂತೆ ಭಾವಿಸಿ ಮಾತನಾಡಿಸಿದ. ಆಕೆ ತನ್ನ ಜೀವನದ ನೋವು-ನಲಿವುಗಳ ಕಥೆಯನ್ನು ಅವನ ಮುಂದೆ ತೆರೆದಿಟ್ಟಳು. ಕ್ರಮೇಣ ಅವನು ತನ್ನ ಕಡೆಗೆ ಸಹಾನುಭೂತಿ ತಾಳಿ ಗಮನಕೊಟ್ಟಿದ್ದ ಸಮಯ ನೋಡಿಕೊಂಡು ಅವನನ್ನು ಆಕರ್ಷಿಸಿ ಮೋಹಗೊಳಿಸಲು ಯತ್ನಿಸಿದಳು. ಆಗ ನರೇಂದ್ರನಿಗೆ ಅವಳ ದುರುದ್ದೇಶ ತಿಳಿದುಹೋಯಿತು.

ತಕ್ಷಣವೇ ಅವನು ಎದ್ದುನಿಂತ; ಶ್ರೀರಾಮಕೃಷ್ಣರನ್ನು ಸ್ಮರಿಸಿಕೊಂಡ. ಬಳಿಕ ಅವಳಿಗೆ ಗಂಭೀರವಾಗಿ ಹೇಳಿದ: "ನೋಡು, ನಾನೀಗ ಹೋಗಬೇಕಾಗಿದೆ. ನಿನ್ನ ಬಗ್ಗೆ ನನಗೆ ನಿಜವಾಗಿಯೂ ಸಹಾನುಭೂತಿಯಿದೆ. ನಿನಗೆ ಒಳ್ಳೆಯದಾಗಲಿ ಎಂದು ಹಾರೈಸುತ್ತೇನೆ." ಹೀಗೆಂದು ಕೂಡಲೇ ಅಲ್ಲಿಂದ ಹೊರಟುಬಿಟ್ಟ; ಅಪಾಯದಿಂದ ಪಾರಾದ.

ನರೇಂದ್ರನಲ್ಲಿ ಸುಪ್ತವಾಗಿದ್ದ ಅನಂತ ಶಕ್ತಿ-ಸಾಮರ್ಥ್ಯಗಳ ಮೇಲೆ ಶ್ರೀರಾಮಕೃಷ್ಣರಿಗೆ ಸಂಪೂರ್ಣ ವಿಶ್ವಾಸವಿತ್ತು. ಅವನು ಮುಂದೆ ಎಂತಹ ಬೃಹತ್ ಕಾರ್ಯಗಳನ್ನು ಸಾಧಿಸಲಿದ್ದಾನೆ ಎಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು. ಆ ಕುರಿತಾಗಿ ಅವರು ಆಗಾಗ ಅವನ ಮುಂದೆಯೂ ಹೇಳುತ್ತಿದ್ದರು. ಅವರ ಈ ಪ್ರೋತ್ಸಾಹದ ಮಾತುಗಳಿಂದಾಗಿ ನರೇಂದ್ರನಲ್ಲೂ ವಿಶೇಷ ಆತ್ಮವಿಶ್ವಾಸ ಹುಟ್ಟಿತ್ತು. ತಾನು ಈ ಭುವಿಯಲ್ಲಿ ಎಲ್ಲರಂತೆ ಬದುಕಬಂದವನಲ್ಲ ಎಂಬ ನಂಬಿಕೆ ದೃಢವಾಯಿತು. ಒಂದು ಸಲ ಅವನು ತನ್ನ ಸ್ನೇಹಿತರೊಂದಿಗೆ ಮಾತನಾಡುತ್ತ ಹೇಳುತ್ತಾನೆ: "ಏನು, ನೀವೆಲ್ಲ ಮುಂದೆ ಅತಿ ಹೆಚ್ಚೆಂದರೆ ವಕೀಲರಾದೀರಿ, ವೈದ್ಯರಾದೀರಿ ಅಥವಾ ನ್ಯಾಯಾಧೀಶರಾದೀರಿ, ಅಲ್ಲವೆ ? ತಾಳಿ, ನನ್ನ ದಾರಿಯನ್ನು ನಾನು ಬೇರೆಯೇ ರೀತಿಯಲ್ಲಿ ರೂಪಿಸಿಕೊಳ್ಳುವುದನ್ನು ನೀವೇ ನೋಡುವಿರಿ."

ಶ್ರೀರಾಮಕೃಷ್ಣರ ಬಳಿಗೆ ಬರುತ್ತಿದ್ದವರಲ್ಲಿ ಎಷ್ಟೋ ಜನ ಪ್ರಖ್ಯಾತ ವೈದ್ಯರು, ದೊಡ್ಡದೊಡ್ಡ ವಕೀಲರು, ಮಹಾ ಪಂಡಿತರು, ಧಾರ್ಮಿಕ ಮುಖಂಡರು—ಇವರೆಲ್ಲ ಇದ್ದರು. ಆದರೆ ಶ್ರೀರಾಮಕೃಷ್ಣರು ಈ ಎಲ್ಲ ಭಕ್ತರಲ್ಲಿ ನರೇಂದ್ರನೇ ಅತಿ ಶ್ರೇಷ್ಠನಾದವನು ಎಂದು ಘಟಾಘೋಷವಾಗಿ ಸಾರುತ್ತಿದ್ದರು. ಈ ಭಕ್ತರಲ್ಲಿ ಲೌಕಿಕ ದೃಷ್ಟಿಯಿಂದ—ಸಾಮಾಜಿಕವಾಗಿ, ಆರ್ಥಿಕವಾಗಿ, ಸ್ಥಾನಮಾನ-ಕೀರ್ತಿಗಳಲ್ಲಿ — ತನಗಿಂತ ಎಷ್ಟೋ ಉನ್ನತ ಮಟ್ಟದವರಿದ್ದಾರೆಂಬುದು ನರೇಂದ್ರನಿಗೆ ಚೆನ್ನಾಗಿಯೇ ಗೊತ್ತಿತ್ತು. ಹೀಗಿದ್ದರೂ ಶ್ರೀರಾಮಕೃಷ್ಣರು ತನಗೆ ಅತ್ಯುನ್ನತ ಸ್ಥಾನವನ್ನಿತ್ತಿದ್ದಾರೆ ಎಂಬ ಅಂಶ ಅವನ ಹೆಚ್ಚಿನ ಆತ್ಮವಿಶ್ವಾಸಕ್ಕೆ ಕಾರಣವಾಗಿತ್ತು.

ಈ ಮಾತನ್ನು ಹೇಳಿದಾಗ 'ಆದರೆ ಅವನು ಯಾರ ಹೊಗಳಿಕೆ-ತೆಗಳಿಕೆಗೂ ಬೆಲೆ ಕೊಡುವವನೇ ಅಲ್ಲವಲ್ಲ! ಇಂಥವನು ಶ್ರೀರಾಮಕೃಷ್ಣರ ಪ್ರಶಂಸೆಯಿಂದ ಅಷ್ಟೊಂದು ಹಿಗ್ಗಿಹೋದನೆ ?' ಎಂಬ ಪ್ರಶ್ನೆಯೊಂದು ಏಳುವ ಸಂಭವವಿದೆ. ನಿಜಕ್ಕೂ ಅವನು ಶ್ರೀರಾಮಕೃಷ್ಣರ ಮಾತಿಗೆ ಅಷ್ಟೊಂದು ಮಹತ್ವವಿತ್ತು, ಅದರಲ್ಲಿ ನಂಬಿಕೆ ತಳೆದದ್ದಕ್ಕೊಂದು ಬಲವಾದ ಕಾರಣವೇ ಇತ್ತು. ಏನದು ? ಅವರ ಸ್ವಭಾವವನ್ನು ಅವನು ಬಹಳ ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ಅವರೆಂದೂ ಲೌಕಿಕ ದೃಷ್ಟಿಯಿಂದ ವ್ಯಕ್ತಿ

ಗಳನ್ನು ಅಳೆಯುತ್ತಿದ್ದವರಲ್ಲ. ಅವರಿಗೆ ತಮ್ಮದೇ ಆದ ಮಾನದಂಡವಿತ್ತು. ಒಬ್ಬ ವ್ಯಕ್ತಿಯಲ್ಲಿ ನಿಜವಾದ ಸತ್ತ್ವ ಇದೆಯೆ? ನೈತಿಕ ಬಲವಿದೆಯೆ? ಆಧ್ಯಾತ್ಮಿಕ ಶಕ್ತಿಯಿದೆಯೆ? ಹಾಗಿದ್ದರೆ ಮಾತ್ರ ಅವನೊಬ್ಬ ವ್ಯಕ್ತಿ ಎಂದು ಅವರ ಅಭಿಮತ. ಒಮ್ಮೆ ಅವರ ಬಳಿಗೆ ಒಬ್ಬ ಶ್ರೀಮಂತ ಬರುತ್ತಾನೆ. ಅವನು ಸಾಮಾನ್ಯ ಶ್ರೀಮಂತನಲ್ಲ, ಕೋಟ್ಯಧೀಶ್ವರ. ಇದರಿಂದಾಗಿ ಅವನಿಗೆ 'ರಾಜಾ' ಎಂಬ ಬಿರುದು ಬಂದಿತ್ತು. ಅವನಿಗೆ ಶ್ರೀರಾಮಕೃಷ್ಣರು ಹೇಳುತ್ತಾರೆ: "ನೋಡು, ಜನ ನಿನ್ನನ್ನು 'ರಾಜಾ' ಎಂದು ಕರೆಯಬಹುದು. ಆದರೆ ನಾನು ನಿನ್ನನ್ನು ಹಾಗೆ ಕರೆಯಲಾರೆ! ಹಾಗೆ ಕರೆದರೆ ನಾನು ಸುಳ್ಳಾಡಿದಂತಾಗುತ್ತದೆ." 'ರಾಜ, ಎಂಬ ಮಾತಿಗೆ ಒಂದು ಘನತೆಯಿದೆ. ಒಬ್ಬನನ್ನು ರಾಜನೆಂದು ಕರೆದಾಗ ಅವನಲ್ಲಿ ಗಾಂಭೀರ್ಯ, ತೇಜಸ್ಸು, ಬುದ್ಧಿಶಕ್ತಿ, ಹೃದಯವೈಶಾಲ್ಯ ಮೊದಲಾದ ಸದ್ಗುಣಗಳನ್ನು ನಿರೀಕ್ಷಿಸಬಹುದು; ಆದರೆ ಅವನು ಧನಿಕನೆಂಬ ಒಂದೇ ಕಾರಣದಿಂದ ಅವನನ್ನು ರಾಜನೆಂದು ಕರೆದರೆ ಅದು ಸುಳ್ಳುಮಾತಾಗುತ್ತದೆ, ಆತ್ಮವಂಚನೆಯಾಗುತ್ತದೆ—ಇದು ಶ್ರೀರಾಮಕೃಷ್ಣರ ಅಭಿಪ್ರಾಯ. ಹೀಗೆ ಅವರು ವ್ಯಕ್ತಿಗಳ ಗುಣ, ನಡತೆ, ಯೋಗ್ಯತೆ, ಅಂತಸ್ಸತ್ತ್ವ—ಇವುಗಳನ್ನೆಲ್ಲ ಗಮನಿಸಿ ಯಾವ ಅಭಿಪ್ರಾಯ ಕೊಟ್ಟರೂ ಅದು ಅಷ್ಟು ಪ್ರಾಮಾಣಿಕವಾಗಿರುತ್ತಿತ್ತು. ಆದ್ದರಿಂದ ಅವರು ಲೋಕದೃಷ್ಟಿಯಿಂದ ನೋಡಿದರೆ ಸಾಮಾನ್ಯನಂತೆ ಕಂಡುಬರುತ್ತಿದ್ದ ಯುವಕ ನರೇಂದ್ರನನ್ನು, ತಮ್ಮ ಭಕ್ತರು ಹಾಗೂ ಶಿಷ್ಯರಲ್ಲೆಲ್ಲ ಅಗ್ರಗಣ್ಯನೆಂದು ಹೇಳುತ್ತಿದ್ದುದರಲ್ಲಿ ಸಂಪೂರ್ಣ ಪ್ರಾಮಾಣಿಕತೆಯಿತ್ತು, ಸತ್ಯವಿತ್ತು.

ಶ್ರೀರಾಮಕೃಷ್ಣರ ಮಾರ್ಗದರ್ಶನದಲ್ಲಿ, ಪ್ರೀತಿಪೂರ್ವಕ ಆರೈಕೆಯಲ್ಲಿ ನರೇಂದ್ರನ ವ್ಯಕ್ತಿತ್ವ ಸರ್ವಾಂಗಸುಂದರವಾಗಿ ವಿಕಸಿತವಾಗತೊಡಗಿತ್ತು. ಯುವಕ ನರೇಂದ್ರನ ಶಾರೀರಿಕ ವ್ಯಕ್ತಿತ್ವ ಪ್ರಸನ್ನ-ಗಂಭೀರ. ಮೃಗರಾಜನಾದ ಸಿಂಹದಂತೆ ಅವನ ಚಲನವಲನ. ಅವನ ಮನಸ್ಸು ಸದಾ ಒಂದಲ್ಲ ಒಂದು ಆಲೋಚನೆಯಲ್ಲಿ ಮಗ್ನ; ಆದ್ದರಿಂದ ಅವನ ನಡಿಗೆ ಒಮ್ಮೆ ವೇಗ, ಇನ್ನು ಕೆಲವೊಮ್ಮೆ ನಿಧಾನ. ಆದರೆ ಒಂದು ಬಗೆಯ ಬಾಲಸಹಜವಾದ ಲವಲವಿಕೆಯೂ ಸರಳತೆಯೂ ಅವನಲ್ಲಿತ್ತು. ಇದರಿಂದಾಗಿ ಅವನನ್ನು ಬಲ್ಲವರಿಗೆಲ್ಲ ಅವನೆಂದರೆ ಏನೋ ಸಂತೋಷ. ಸರಾಸರಿಗಿಂತ ಹೆಚ್ಚಾದ ಎತ್ತರ, ಅದಕ್ಕೆ ತಕ್ಕಂತೆ ಭುಜಗಳು ವಿಶಾಲ ಹಾಗೂ ದಷ್ಟಪುಷ್ಟ; ಸುದೃಢವಾದ ಎದೆ. ಸ್ವಲ್ಪ ಉಬ್ಬಿಕೊಂಡಂತಿದ್ದ ಮುಂದಲೆ ಅವನ ಬುದ್ಧಿಶಕ್ತಿಯನ್ನೂ ಪ್ರಬುದ್ಧತೆಯನ್ನೂ ಸೂಚಿಸುತ್ತಿತ್ತು. ಒಟ್ಟಿನಲ್ಲಿ ಅವನದು ಸರ್ವಾಂಗಸುಂದರವಾದ ಶರೀರ. ಅವನ ಪ್ರತಿಯೊಂದು ಚಲನವಲನದಲ್ಲೂ ಶಕ್ತಿ ಸಾಮರ್ಥ್ಯ ತೇಜಸ್ಸು ಎದ್ದು ಕಾಣುತ್ತಿತ್ತು. ಅವನನ್ನು ಸುಂದರಾಂಗನೆಂದು ಸುಲಭವಾಗಿ ಹೇಳಬಹುದಾಗಿತ್ತಾದರೂ ಅವನಲ್ಲಿ ಹೆಣ್ಣಿಗತನ ಕಿಂಚಿತ್ತೂ ಇರಲಿಲ್ಲ. ಅವನ ಇಡೀ ವ್ಯಕ್ತಿತ್ವದಲ್ಲಿ ಎದ್ದುಕಾಣುತ್ತಿದ್ದ ಅಂಶವೆಂದರೆ ಆತನ ನಯನದ್ವಯ. ಕಮಲದ ದಳಗಳಂತೆ ಅವುಗಳ ಆಕಾರ. ಅಷ್ಟು ಎದ್ದುತೋರುತ್ತಿದ್ದರೂ ಅವು ಉಬ್ಬುಗಣ್ಣುಗಳಲ್ಲ. ಅವನ ಭಾವನೆಗಳು ಬದಲಾದಂತೆ ಆ [illegible]ಳಪುಗಣ್ಣುಗಳ ಬಣ್ಣದ ಛಾಯೆಯೂ ಬದಲಾಗುತ್ತಿತ್ತು! ಅವನ ಚುರುಕು ಬುದ್ಧಿಯನ್ನೂ ಸೂಕ್ಷ್ಮಮತಿಯನ್ನೂ ಆ ನೇತ್ರದ್ವಯ ಪ್ರತಿಬಿಂಬಿಸುತ್ತಿತ್ತು. ಅವನು ನೆಟ್ಟನೋಟದಿಂದ ನೋಡುತ್ತಿದ್ದಾಗ ಆ ಕಂಗಳು ಜ್ಯೋತಿಃಪುಂಜವಾಗಿ ಕಾಣುತ್ತಿದ್ದುವು. ಇತರ ಸಮಯಗಳಲ್ಲಿ, ಅವುಗಳಿಂದ ಆನಂದೋತ್ಸಾಹದ ಕಿಡಿಗಳು ಹೊಮ್ಮು

ತ್ತಿದ್ದುವು ! ಅವನು ಯಾರೊಡನೆಯಾದರೂ ಮಾತನಾಡುವಾಗ, ಆಗ ಅಲ್ಲಿರುವುದೆಲ್ಲ ಆ ವ್ಯಕ್ತಿ ಮಾತ್ರವೇ ಏನೋ ಎಂಬಷ್ಟು ತಾದಾತ್ಮ್ಯದಿಂದ ಮಾತನಾಡುತ್ತಿದ್ದ. ಇದರಿಂದಾಗಿ, ಅವನೊಡನೆ ಸಂಭಾಷಿಸುವುದೆಂದರೆ ಎಲ್ಲರಿಗೂ ಒಂದು ವಿಶೇಷ ಸಂತೋಷದ ಅನುಭವವಾಗಿತ್ತು.

ನರೇಂದ್ರನದು ಮಾಂಸಲವಾದ ಜಟ್ಟಿಯ ಮೈಕಟ್ಟಾದರೂ ಅವನ ಮುಖದ ಕಡೆಗೊಮ್ಮೆ ದೃಷ್ಟಿ ಹರಿಸಿದರೆ ಆ ಶರೀರದ ಕಡೆಗಿನ ಗಮನ ಹೊರಟುಹೋಗುತ್ತಿತ್ತು. ತುಂಬಿಕೊಂಡು ಪುಷ್ಟವಾದ ಅವನ ದವಡೆಗಳು ಅವನ ದೃಢನಿಶ್ಚಯದ ಮನೋಭಾವವನ್ನು ಸೂಚಿಸುತ್ತಿದ್ದುವು. ಅವನ ಮುಖವನ್ನು ನೋಡಿದಾಗ ಕೆಲವರಿಗೆ ಅವನೊಬ್ಬ ಭಾವಜೀವಿ ಎನ್ನಿಸುತ್ತಿತ್ತು. ಇನ್ನು ಕೆಲವರು, ಅವನೊಬ್ಬ ತೀವ್ರವಾಗಿ ಆಲೋಚಿಸುವ ಚಿಂತನಶೀಲ ವ್ಯಕ್ತಿ ಎಂದು ಭಾವಿಸುತ್ತಿದ್ದರು. ಮತ್ತೆ ಕೆಲವರಿಗೆ ಆದರ್ಶ ಪ್ರೇಮ-ಸೌಂದರ್ಯ-ಕಲೆಗಳ ಲೋಕದಲ್ಲಿ ವಿಹರಿಸುತ್ತಿರುವ ಯುವಕನಂತೆ ತೋರುತ್ತಿದ್ದ. ಆದರೆ ಅವನೊಬ್ಬ ಸತ್ಕುಲಪ್ರಸೂತನಾದ ಸಂಭಾವಿತ ಎಂಬುದನ್ನು ಎಲ್ಲರೂ ಕಾಣಬಹುದಾಗಿತ್ತು. ಅವನ ಮುಗುಳ್ನಗೆ ತುಂಬ ಮೋಹಕವಾಗಿತ್ತು. ಅದನ್ನು ನೋಡುತ್ತಿದ್ದರೆ ನೋಡುವವರ ಮನಸ್ಸು ಅದರಲ್ಲೇ ಲೀನವಾಗಿಬಿಡುತ್ತಿತ್ತು. ಆದರೆ ಅವನು ಗಂಭೀರನಾಗಿಬಿಟ್ಟನೆಂದರೆ ಅವನ ಮುಖಭಾವವನ್ನು ಕಂಡು ಸ್ನೇಹಿತರೆಲ್ಲ ಸ್ತಬ್ಧರಾಗಿಬಿಡುತ್ತಿದ್ದರು—ಅಂಥ ಗಂಭೀರತೆ ! ಇದೇ ನರೇಂದ್ರ ಇನ್ನು ಕೆಲವು ಸಲ ತನ್ನ ಸೋದರ ಶಿಷ್ಯರಿಗೆ ಒಬ್ಬ ಪುಟ್ಟ ಬಾಲಕನಂತೆ ಕಂಡುಬರುತ್ತಿದ್ದ. ಕೆಲವು ಸಲ ಅವರೊಂದಿಗೆ ಜಗಳವಾಡುತ್ತಿದ್ದ, ಕಿತ್ತಾಡುತ್ತಿದ್ದ, ಹಠ ಮಾಡುತ್ತಿದ್ದ. ಆದರೆ ಅವನ ಈ ಕಿತ್ತಾಟ-ಹಠಮಾರಿತನ ಕೂಡ ಎಷ್ಟು ಚೆನ್ನಾಗಿರುತ್ತಿತ್ತೆಂದರೆ ಅವನ ಗುರುಭಾಯಿಗಳು ಅದರಿಂದ ಸಂತೋಷವನ್ನೇ ಪಡುತ್ತಿದ್ದರು. ಅವನ ಮೇಲೆ ಇನ್ನಷ್ಟು ಪ್ರೀತಿಯನ್ನೇ ತಾಳುತ್ತಿದ್ದರು. ನಿಜಕ್ಕೂ ಇದೊಂದು ವಿಶೇಷವಾದ ಸ್ಥಿತಿ. ಒಬ್ಬನಲ್ಲಿ ಪರಿಶುದ್ಧವಾದ ಹೃದಯ, ನಿಷ್ಕಲ್ಮಶವಾದ ಪ್ರೀತಿ ಇದ್ದಾಗ ಮಾತ್ರ ಇತರರನ್ನು ಹೀಗೆ ಸಂತೋಷವಾಗಿಡಲು ಸಾಧ್ಯ. ನರೇಂದ್ರನ ಕೋಪತಾಪಗಳಲ್ಲಿ ಆ ಬಗೆಯ ಆಕರ್ಷಣೆಯಿತ್ತು. ಆದ್ದರಿಂದಲೇ ಅವನ ಕೋಪತಾಪಗಳನ್ನು ಕಂಡಾಗ ಗುರುಭಾಯಿಗಳಿಗೆ ಅವನ ಮೇಲಿನ ಪ್ರೀತಿ ಇನ್ನಷ್ಟು ಹೆಚ್ಚುತ್ತಿತ್ತು. ಅವನು ವಾದವಿವಾದದಲ್ಲಿ ತೊಡಗಿದಾಗ ರಭಸ ಹೆಚ್ಚಾದರೆ, ಅವನ ಕಣ್ಣುಗಳು ಒಂದು ವಿಶೇಷ ಪ್ರಕಾಶವನ್ನು ಹೊರಸೂಸುತ್ತ ಅವನೊಳಗಿನ ಅಪಾರ ಶಕ್ತಿಯನ್ನು ಸೂಚಿಸುತ್ತಿದ್ದುವು. ಆದರೆ ಅವನು ತನ್ನ ಆಲೋಚನೆಗಳಲ್ಲೇ ಮುಳುಗಿ ಕುಳಿತುಬಿಟ್ಟರೆ ಅವನ ಸುತ್ತ ಒಂದು ಬಗೆಯ ವಿಮುಖತೆಯ ಭಾವ ಆವರಿಸಿಬಿಡುತ್ತಿತ್ತು. ಆಗ ಅವನನ್ನು ಆ ಭಾವದಿಂದ ಕದಲಿಸುವ ಎದೆಗಾರಿಕೆ ಯಾರಿಗೂ ಇರುತ್ತಿರಲಿಲ್ಲ. ನಿಜಕ್ಕೂ ಈ ಬಗೆಯ ತೀವ್ರ ವಿಮುಖತೆಯೆಂಬುದು ಅವನ ವ್ಯಕ್ತಿತ್ವದ ಒಂದು ಪ್ರಧಾನ ಲಕ್ಷಣವೇ ಆಗಿತ್ತು.

ನರೇಂದ್ರ ಸ್ವಭಾವತಃ ಅಸಾಧಾರಣ ಮೇಧಾವಿ. ಅವನ ಮನಸ್ಸಿನಲ್ಲಿ ನಾನಾ ಭಾವನೆಗಳು ಏಳುತ್ತಿದ್ದುವು; ನಾನಾ ಆಲೋಚನೆಗಳು ಸುಳಿಯುತ್ತಿದ್ದುವು; ನಾನಾ ಭಾವಗಳು ಪ್ರಕಾಶಿತವಾಗುತ್ತಿದ್ದುವು. ಕೆಲವೊಮ್ಮೆ ಇದ್ದಕ್ಕಿದ್ದಂತೆ ತನ್ನ ಪ್ರಕೃತ ಪರಿಸರದ ಮೇಲೆ ಒಂದು ಬಗೆಯ ಅಸಹನೆ ತಾಳುತ್ತಿದ್ದ. ಇನ್ನು ಕೆಲವು ಸಲ, ಫಲಿತಾಂಶವನ್ನು ಲೆಕ್ಕಿಸದೆ ಕರ್ಮಯೋಗಿಯಂತೆ ಪ್ರೀತಿಯುತ ಸಹನೆಯಿಂದಿರುತ್ತಿದ್ದ. ಅವನು ಪಡು

ತ್ತಿದ್ದ ಕಷ್ಟಗಳನ್ನೆಲ್ಲ ಎಣಿಸಿದರೆ ಅವನ ಹೃದಯ ಕಲ್ಲಾಗದೆಯಿದ್ದದ್ದೇ ಒಂದು ಆಶ್ಚರ್ಯ. ಈ ಬಗೆಯ ಶಾಂತತೆ, ನಿರ್ಲಿಪ್ತತೆ, ಸಂತೋಷ ಅವನಿಗೆ ಸ್ವಭಾವಸಹಜವಾಗಿ ಪರಿಣಮಿಸಿತು. ಮತ್ತು ಅವನ ಜೀವನವಿಡೀ ಇದನ್ನು ಕಾಣಬಹುದು. ಯಾರಿಗಾಗಿ ಅವನು ಅಷ್ಟೆಲ್ಲ ಕಷ್ಟಗಳನ್ನು ಅನುಭವಿಸಿದನೋ, ಅವರಿಂದಲೂ ಅವನಿಗೆ ಪ್ರತಿಯಾಗಿ ಪ್ರೀತಿ-ವಿಶ್ವಾಸ ದೊರಕಲಿಲ್ಲ. ಆದರೂ ಅವನೆಂದೂ ಮನಸ್ಸಿನ ಸ್ಥಿಮಿತವನ್ನು ಕಳೆದುಕೊಳ್ಳಲಿಲ್ಲ, ಅಶಾಂತನಾಗಲಿಲ್ಲ; ಯಾವಾಗಲೂ ಪ್ರೇಮಭರಿತನಾಗಿಯೇ ಉಳಿದುಕೊಂಡ. ತನ್ನನ್ನು ಇತರರು ಅರ್ಥಮಾಡಿಕೊಳ್ಳಲಿಲ್ಲವೆಂದು ಜುಗುಪ್ಸೆ ತಾಳಲಿಲ್ಲ. ಮುಂದೆ ಸ್ವಾಮಿ ವಿವೇಕಾನಂದರು ಈ ಕುರಿತಾಗಿ ಹೇಳುತ್ತಾರೆ: "ಇತರರು ನನ್ನನ್ನು ಅರ್ಥಮಾಡಿಕೊಳ್ಳಬೇಕು ಅಂತ ನಾನೇಕೆ ತಾನೆ ನಿರೀಕ್ಷಿಸಬೇಕು? ಅವರಿಗೆ ನನ್ನ ಮೇಲೆ ವಿಶ್ವಾಸವೊಂದಿದ್ದರೆ ಬೇಕಾದಷ್ಟಾಯಿತು. ಇಷ್ಟರ ಮೇಲೆ ನಾನಾದರೂ ಏನು ಮಹಾ? ಜಗನ್ಮಾತೆಗೆ ಎಲ್ಲವೂ ಗೊತ್ತು. ತನ್ನ ಕಾರ್ಯವನ್ನು ನೋಡಿಕೊಳ್ಳಲು ಆಕೆ ಸಮರ್ಥಳಲ್ಲವೆ? ನಾನಿಲ್ಲದೆ ಏನೂ ಆಗುವಂತಿಲ್ಲ ಎಂದು ನಾನೇಕೆ ಭಾವಿಸಲಿ?"

ಶ್ರೀರಾಮಕೃಷ್ಣರು ತೋರಿದ ದಿವ್ಯ ಪ್ರೇಮ ನರೇಂದ್ರನಲ್ಲಿ ಹಲವಾರು ಪರಿವರ್ತನೆಗಳನ್ನುಂಟುಮಾಡಿತು. ಅವನಲ್ಲಿ ಉಂಟಾದ ಬುದ್ಧಿ-ಹೃದಯಗಳ ಮಧುರ ಸಾಮರಸ್ಯ ಇವುಗಳಲ್ಲೊಂದು. ಸಾಮಾನ್ಯವಾಗಿ, ಬುದ್ಧಿ ಹೆಚ್ಚಾಗಿರುವವರಲ್ಲಿ ಹೃದಯವಂತಿಕೆ ಕಡಿಮೆ; ಹೃದಯವಂತರಲ್ಲಿ ಬುದ್ಧಿವಂತಿಕೆ ಸ್ವಲ್ಪ ಕಡಿಮೆ. ಇವೆರಡೂ ಸಮಪ್ರಮಾಣದಲ್ಲಿ ಬೆಳೆದಿರುವವರು ತೀರ ವಿರಳ. ನರೇಂದ್ರನಲ್ಲೀಗ ಪ್ರಚಂಡ ಬುದ್ಧಿಶಕ್ತಿಯೊಡನೆ ಪ್ರೇಮ, ಅನುಕಂಪ ಮೊದಲಾದ ಮಧುರ ಭಾವನೆಗಳು ವೃದ್ಧಿಗೊಳ್ಳಲಾರಂಭಿಸಿದ್ದುವು. ಇದನ್ನು ಸಾಧಿಸಿದ್ದುದು ಶ್ರೀರಾಮಕೃಷ್ಣರ ದಿವ್ಯ ಪ್ರೀತಿಯೇ. ನರೇಂದ್ರನಿಗೆ ಅವರು ಏನೇನನ್ನು ಕಲಿಸಿದರೋ, ಅವನ ಮೇಲೆ ಎಷ್ಟೆಷ್ಟು ಪ್ರಭಾವ ಬೀರಿದರೋ, ಅವೆಲ್ಲ ತಮ್ಮ ಪ್ರೀತಿಯ ಮಾಧ್ಯಮದ ಮೂಲಕವೇ. ನರೇಂದ್ರನಂತಹ ಪ್ರಚಂಡ ಬುದ್ಧಿಶಾಲಿಗೆ ಕಲಿಸಬೇಕಾದರೆ ಬುದ್ಧಿಯ ಭಾಷೆ ಕೆಲಸಕ್ಕೆ ಬರುವಂತಿಲ್ಲ; ಪ್ರೀತಿಯ ಭಾಷೆಯೇ ಆಗಬೇಕು. ಸ್ವಭಾವತಃ ನರೇಂದ್ರ ಜಿಜ್ಞಾಸು, ತತ್ತ್ವಜ್ಞಾನಿಯಾಗಿದ್ದ. ಶ್ರೀರಾಮಕೃಷ್ಣರು ಅವನನ್ನು ಒಬ್ಬ ಭಕ್ತನನ್ನಾಗಿಯೂ ಮಾಡಿದರು. ಆದರೆ ಅವನಲ್ಲಿ ಭಕ್ತಿಭಾವವನ್ನು ಮಾತ್ರ ತುಂಬಿದರು ಎಂದಲ್ಲ; ಅವನಿಗೆ ಅತ್ಯುನ್ನತ ಆತ್ಮಜ್ಞಾನದ ಅನುಭವವನ್ನು ನೀಡಿದವರೂ ಅವರೇ. ಅವನ ಬೌದ್ಧಿಕ ಜ್ಞಾನವು ಭಗವದ್ಭಕ್ತಿಯ ಸಂಪರ್ಕದಿಂದ ಮೃದುಗೊಂಡು ಹದಗೊಳ್ಳುವಂತೆ ಮಾಡಿದರು. ಮೇಲ್ನೋಟಕ್ಕೆ ಅವನೊಬ್ಬ ತತ್ತ್ವಜ್ಞಾನಿಯಂತೆ ಕಾಣುತ್ತಿದ್ದನಾದರೂ ವಾಸ್ತವಿಕವಾಗಿ ಅವನು ಭಕ್ತನೇ. ಆತನ ಅಂಗಲಕ್ಷಣಗಳ ಆಧಾರದ ಮೇಲೆ ಅವನನ್ನು ಭಕ್ತನೆಂದು ತೀರ್ಮಾನಿಸಬಹುದು ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. "ಸಾಮಾನ್ಯವಾಗಿ ಜ್ಞಾನಿಗಳ ಶರೀರಲಕ್ಷಣ ಶುಷ್ಕವಾಗಿ ಕಂಡುಬರುತ್ತದೆ. ಆದರೆ ಭಕ್ತರು ಸಾಮಾನ್ಯವಾಗಿ ಪ್ರಿಯದರ್ಶನರಾಗಿರುತ್ತಾರೆ" ಎಂದು ಅವರೆನ್ನುತ್ತಿದ್ದರು. ಮುಂದೆ ಸ್ವಾಮಿ ವಿವೇಕಾನಂದರೇ ಹೇಳಿಕೊಳ್ಳುತ್ತಾರೆ: "ಶ್ರೀರಾಮಕೃಷ್ಣರು ಮೇಲ್ನೋಟಕ್ಕೆ ಸಂಪೂರ್ಣ ಭಕ್ತ; ಆದರೆ ಅವರ ಅಂತರಂಗದಲ್ಲಿ ಜ್ಞಾನ ತುಂಬಿತ್ತು. ನಾನು ಹೊರನೋಟಕ್ಕೆ ಕೇವಲ ಜ್ಞಾನಿಯಾಗಿ ಕಂಡರೂ ನನ್ನೊಳಗಿರುವುದು ಕೇವಲ ಭಕ್ತಿ."

ಆದರೆ ಈ ಜ್ಞಾನ-ಭಕ್ತಿಗಳೆರಡೂ ಬೇರೆಬೇರೆಯಲ್ಲ, ಒಂದೇ ನಾಣ್ಯದ ಎರಡು ಮುಖಗಳು ಎಂಬುದು, ಅನುಭವಕ್ಕೆ ಬಂದಮೇಲೆ ತಿಳಿಯುವ ಸತ್ಯ. ಆದರೆ ಬೌದ್ಧಿಕತೆಗೂ ಆಧ್ಯಾತ್ಮಿಕತೆಗೂ ಬಹಳ ವ್ಯತ್ಯಾಸವಿದೆ. ವಿಚಾರದ ಮೂಲಕ ತಿಳಿಯಬಹುದಾದದ್ದು ಬೌದ್ಧಿಕತೆ; ಆತ್ಮಾನುಭವದ ಮೂಲಕ ತಿಳಿಯಬಹುದಾದದ್ದು ಆಧ್ಯಾತ್ಮಿಕತೆ. ಶ್ರೀರಾಮಕೃಷ್ಣರ ಶಿಕ್ಷಣದಿಂದ ನರೇಂದ್ರ ಈ ಅಂಶವನ್ನು ಮನಗಂಡ.

ನರೇಂದ್ರನ ವ್ಯಕ್ತಿತ್ವದ ಒಂದು ಮುಖವನ್ನು ಬಡತನ-ಕಷ್ಟ ಸಂಕಟಗಳು ರೂಪಿಸಿದರೆ, ಅವನ ಒಡನಾಡಿಗಳಿಂದ ಮತ್ತೊಂದು ಭಾಗ ರೂಪಿತಗೊಂಡಿತ್ತು. ಶ್ರೀರಾಮಕೃಷ್ಣರು ಅವನ ವ್ಯಕ್ತಿತ್ವದ ಈ ಎರಡೂ ಮುಖಗಳನ್ನು ತಿದ್ದಿ, ಅವನನ್ನು ಭವಿಷ್ಯದ ವಿವೇಕಾನಂದನನ್ನಾಗಿ ನಿರ್ಮಿಸಿದರು. ಅವನಿಗೆ ಬಂದ ಬಡತನ ಮತ್ತು ಇತರ ಕಷ್ಟಗಳ ಕುರಿತಾಗಿ ಅವರೆನ್ನುತ್ತಾರೆ: "ನರೇಂದ್ರನಿಗೆ ಯಾವ ಕಷ್ಟಗಳೂ ಬಾರದೆ, ಅವನು ಕೇವಲ ಶ್ರೀಮಂತಿಕೆಯಲ್ಲಿ ಬೆಳೆದುಬಂದಿದ್ದರೆ, ಅವನ ಜೀವನದ ದಿಕ್ಕು ಬೇರೆಯೇ ಆಗಿ ಬಿಡುತ್ತಿತ್ತು" ಎಂದು. ಬಹುಶಃ ಅವನೊಬ್ಬ ದೊಡ್ಡ ರಾಜಕಾರಣಿಯೋ, ವಕೀಲನೋ, ವಾಗ್ಮಿಯೋ ಆಗಬಹುದಾಗಿತ್ತು. ಅಥವಾ ಪ್ರಮುಖ ಸಮಾಜಸುಧಾರಕನಾಗಬಹುದಾಗಿತ್ತು. ಆದರೆ ಬಡತನದ ಬವಣೆಯುನ್ನು ಅವನು ಸ್ವತಃ ಅನುಭವಿಸಿದ್ದರಿಂದಲೇ ಅವನು ಬಡವರಿಗಾಗಿ ಮರುಗುವಂತಾದ.

ನರೇಂದ್ರ ತನ್ನ ತಂದೆಯನ್ನು ಕಳೆದುಕೊಂಡು, ಅವನ ಸಂಸಾರ ನಿರ್ಗತಿಕವಾಗಿದ್ದ ಸಂದರ್ಭ. ಆಗೊಂದು ದಿನ ಶ್ರೀರಾಮಕೃಷ್ಣರು ಭಕ್ತರೊಂದಿಗೆ ಮಾತನಾಡುತ್ತಿದ್ದ ಸಂದರ್ಭದಲ್ಲಿ ಒಬ್ಬ ಶ್ರೀಮಂತನಿಗೆ, "ನೋಡು, ನರೇಂದ್ರನ ತಂದೆ ತೀರಿಹೋಗಿಬಿಟ್ಟರು. ಅವನ ಮನೆಯವರು ಬಹಳ ಕಷ್ಟದಲ್ಲಿದ್ದಾರೆ. ಅವನ ಸ್ನೇಹಿತರು ಈಗ ಅವನಿಗೆ ಏನಾದರೂ ಸಹಾಯ ಮಾಡಲು ಸಾಧ್ಯವಾದರೆ ಒಳ್ಳೆಯದು" ಎಂದು ಹೇಳಿದರು. ನರೇಂದ್ರ ಆಗ ಅಲ್ಲೇ ಇದ್ದನಾದರೂ ಏನೂ ಮಾತನಾಡಲಿಲ್ಲ. ಆದರೆ ಸ್ವಲ್ಪ ಹೊತ್ತಿಗೆ ಆ ಶ್ರೀಮಂತ ಅಲ್ಲಿಂದ ಹೊರಟುಹೋದಮೇಲೆ ಅಸಮಾಧಾನದಿಂದ, "ಮಹಾಶಯರೆ, ನೀವು ಅದನ್ನೆಲ್ಲ ಅವನ ಹತ್ತಿರ ಏಕೆ ಹೇಳಬೇಕಾಗಿತ್ತು?" ಎಂದ. ತನ್ನ ಸ್ವಾಭಿಮಾನಕ್ಕೆ, ಮನೆತನದ ಗೌರವಕ್ಕೆ ಧಕ್ಕೆಯಾಯಿತು ಎಂಬ ಬೇಸರ ಅದರಲ್ಲಿ ವ್ಯಕ್ತವಾಗಿತ್ತು. ಆಗ ಶ್ರೀರಾಮಕೃಷ್ಣರು ಕಂಬನಿದುಂಬಿ ನುಡಿದರು: "ಓ ನರೇನ್, ನಿನಗೋಸ್ಕರ ನಾನು ಏನು ಬೇಕಾದರೂ ಮಾಡಲು ಸಿದ್ಧ ಎಂಬುದು ನಿನಗೆ ಗೊತ್ತಿಲ್ಲವೆ? ಬೇಕೆಂದರೆ ನಿನಗಾಗಿ ನಾನು ಮನೆಮನೆಗೆ ಹೋಗಿ ಭಿಕ್ಷೆ ಬೇಡಿಯೇನು!" ಇದನ್ನು ಕೇಳಿದಾಗ ನರೇಂದ್ರನಿಗೆ ಕಣ್ಣೀರು ಉಕ್ಕಿಬಂತು. ಶ್ರೀರಾಮಕೃಷ್ಣರ ನಿಷ್ಕಾಮ ಪ್ರೇಮಕ್ಕಿಂತಲೂ ಅವನ ಸ್ವಾಭಿಮಾನ ಹೆಚ್ಚೆ! ಆದ್ದರಿಂದಲೇ ಮುಂದೆ ಸ್ವಾಮಿ ವಿವೇಕಾನಂದರು, "ಶ್ರೀರಾಮಕೃಷ್ಣರು ತಮ್ಮ ಅಪಾರ ಪ್ರೀತಿಯಿಂದ ನನ್ನನ್ನು ತಮ್ಮ ದಾಸನನ್ನಾಗಿ ಮಾಡಿಕೊಂಡುಬಿಟ್ಟರು" ಎನ್ನುವುದು. ಇಲ್ಲಿ, ಶ್ರೀರಾಮಕೃಷ್ಣರ ಪ್ರೀತಿ ದೊಡ್ಡದೋ ಅಥವಾ ನರೇಂದ್ರ ಅವರ ಪ್ರೀತಿಯನ್ನು ಅರ್ಥ ಮಾಡಿಕೊಂಡದ್ದು ದೊಡ್ಡದೋ ಎನ್ನುವುದು ಇನ್ನೊಂದು ಅಂಶ. ಏಕೆಂದರೆ ಪ್ರೀತಿಯ ಸೂಕ್ಷ್ಮವನ್ನು ಅರ್ಥಮಾಡಿಕೊಳ್ಳಬೇಕಾದರೆ ಹೃದಯಸೂಕ್ಷ್ಮ ಬೇಕಾಗುತ್ತದೆ. ಕೊಟ್ಟ ಪ್ರೀತಿಯನ್ನು ಸ್ವೀಕರಿಸಿ ಆಸ್ವಾದಿಸಲೂ ಯೋಗ್ಯತೆಯಿರಬೇಕಾಗುತ್ತದೆ.

ಈ ಪ್ರೀತಿಯ ರೀತಿಯಲ್ಲಿ ಎಷ್ಟೋ ಸಲ ಒಂದು ದೋಷ ಸಂಭವಿಸುವುದಿದೆ.

ಏನೆಂದರೆ, ನಾವು ಯಾರನ್ನು ವಿಶೇಷವಾಗಿ ಪ್ರೀತಿಸುತ್ತೇವೆಯೋ ಅವರ ಮೇಲೆ ವಿಶೇಷ ಮಮಕಾರ ಬೆಳೆದು, 'ಪ್ರೀತಿ' ಎಂಬುದು 'ಮೋಹ'ವಾಗಿ ಪರಿಣಮಿಸುತ್ತದೆ. ಆಗ ಅವರು ಮಾಡುವ ತಪ್ಪುಗಳಿಗೆಲ್ಲ ಕಣ್ಣುಮುಚ್ಚಿಕೊಂಡುಬಿಡುತ್ತೇವೆ, ಧೃತರಾಷ್ಟ್ರ ರಾಗಿಬಿಡುತ್ತೇವೆ. ಆದರೆ ಶ್ರೀರಾಮಕೃಷ್ಣರು ನರೇಂದ್ರನನ್ನು ಅಷ್ಟೊಂದು ಪ್ರೀತಿಸುತ್ತಿದ್ದ ರಾದರೂ, ಅವನ ನಡತೆಯಲ್ಲೇನಾದರೂ ದೋಷ ಕಂಡುಬಂದರೆ ತಕ್ಷಣ ಅದನ್ನು ತಿದ್ದದೆ ಬಿಡುತ್ತಿರಲಿಲ್ಲ. ಅವನ ಮನಸ್ಸಿನಲ್ಲಿ ಅವನ ವ್ಯಕ್ತಿತ್ವಕ್ಕೆ ತಕ್ಕುದಲ್ಲದ ಒಂದು ಆಲೋಚನೆ ಒಮ್ಮೆ ಸುಳಿದರೂ ಸಾಕು, ಶ್ರೀರಾಮಕೃಷ್ಣರಿಗೆ ಅದು ಸ್ಪಷ್ಟವಾಗಿ ಗೋಚರಿಸಿ ಬಿಡುತ್ತಿತ್ತು. ಒಮ್ಮೆ ಅವನು ಒಬ್ಬ ವ್ಯಕ್ತಿಯೊಡನೆ ತುಂಬ ಸಲಿಗೆಯಿಂದ ಓಡಾಡು ತ್ತಿರುವುದನ್ನು ಅವರು ಕಂಡರು. ಆ ವ್ಯಕ್ತಿ ಅವರ ಭಕ್ತನೇ. ಆದರೆ ಆತ ಹಿಂದೆ ತುಂಬ ವಿಲಾಸೀ ಜೀವನ ನಡೆಸಿದವನು. ಆದ್ದರಿಂದ ಅವರು ನರೇಂದ್ರನನ್ನು ಕರೆದು ಅವನ ಜೊತೆಯಲ್ಲಿ ಬೆರೆಯದಿರುವಂತೆ ಎಚ್ಚರಿಕೆ ನೀಡಿದರು. ಆಗ ನರೇಂದ್ರ ಅದನ್ನು ಪ್ರತಿ ಭಟಿಸಿ, "ಆದರೆ ಈಗ ಅವನು ತನ್ನ ಮಾರ್ಗವನ್ನು ಬದಲಿಸಿಕೊಂಡು ಒಳ್ಳೆಯ ಜೀವನ ನಡೆಸುತ್ತಿದ್ದಾನಲ್ಲ ?" ಎಂದ. ಅದಕ್ಕೆ ಶ್ರೀರಾಮಕೃಷ್ಣರೆನ್ನುತ್ತಾರೆ: "ನೋಡು, ಬೆಳ್ಳುಳ್ಳಿ ಯಿಟ್ಟಿದ್ದ ಪಾತ್ರೆಯನ್ನು ಎಷ್ಟೇ ತೊಳೆದರೂ ಒಂದು ಸ್ವಲ್ಪವಾದರೂ ವಾಸನೆ ಉಳಿದೇ ಉಳಿಯುತ್ತದೆ. ಹಾಗೆಯೇ ಕಾಮಕಾಂಚನದಲ್ಲಿ ಒಮ್ಮೆ ಮುಳುಗಿದವರ ಹೃದಯವೂ ಕೂಡ. ಆದರೆ ನೀವೆಲ್ಲ ಪರಿಶುದ್ಧಾತ್ಮರು. ನಿಮ್ಮ ಹೃದಯಗಳಿಗೆ ಕಾಮಕಾಂಚನದ ಕಿಲುಬಿನ್ನೂ ತಗಲಿಲ್ಲ. ಕಾಗೆ ಕುಕ್ಕಿದ ಮಾವಿನ ಹಣ್ಣನ್ನು ನೋಡಿಲ್ಲವೇ ? ಅದನ್ನು ದೇವರಿಗೆ ನೈವೇದ್ಯ ಮಾಡುವುದಿರಲಿ, ಮನುಷ್ಯರು ತಿನ್ನಲೂ ಅದು ಯೋಗ್ಯವಲ್ಲ. ಪ್ರಾಪಂಚಿಕ ಭೋಗಗಳನ್ನು ಅನುಭವಿಸಿದ ಭಕ್ತರೆಲ್ಲ ಬೇರೆಯೇ ವರ್ಗಕ್ಕೆ ಸೇರಿದವರು."

ತಾನು ಶ್ರೀರಾಮಕೃಷ್ಣರ ನಿಕಟಸಂಪರ್ಕದಲ್ಲಿದ್ದ ಆ ನಾಲ್ಕೈದು ವರ್ಷಗಳಲ್ಲಿ ನರೇಂದ್ರ ಪಡೆದುಕೊಂಡ ಶಿಕ್ಷಣ ಈ ಬಗೆಯದು. ಆಧ್ಯಾತ್ಮಿಕತೆಯ ಬಗ್ಗೆ ಮತ್ತು ತನ್ನ ಆಧ್ಯಾತ್ಮಿಕ ಭವಿಷ್ಯದ ಬಗ್ಗೆ ನರೇಂದ್ರ ಈ ಹಿಂದೆಯೇ ಕೆಲವು ಕಲ್ಪನೆಗಳನ್ನಿಟ್ಟು ಕೊಂಡಿದ್ದ. ಆದರೆ ಈಗ ಶ್ರೀರಾಮಕೃಷ್ಣರ ದಿವ್ಯ ಪರಿಸರದಲ್ಲಿ ಅವೆಲ್ಲವನ್ನೂ ಮೀರಿ ಬೆಳೆದ. ಅವನು ನಿಖರವಾಗಿ ಯಾವ ಮುಹೂರ್ತದಿಂದ ಅವರನ್ನು ಗುರುವಾಗಿ ಸ್ವೀಕರಿಸಿದ ಎಂದು ಹೇಳುವುದು ಕಷ್ಟ. ಆಧ್ಯಾತ್ಮಿಕಾನುಭವದ ದೃಷ್ಟಿಯಿಂದ ನೋಡಿ ದರೆ, ಶ್ರೀರಾಮಕೃಷ್ಣರ ಪ್ರಥಮ ಸ್ಪರ್ಶದ ಕ್ಷಣದಿಂದಲೇ ಅವನು ಅವರ ಶಿಷ್ಯನಾಗಿಬಿಟ್ಟ ಎನ್ನಬಹುದು. ಆದರೆ ಅವನು ಬುದ್ಧಿಪೂರ್ವಕವಾಗಿ ಅವರನ್ನು ಗುರುವಾಗಿ ಸ್ವೀಕರಿ ಸಿದ್ದು ಅವರು ತನ್ನ ಎಲ್ಲ ಪ್ರಶ್ನೆಗಳಿಗೆ ತೃಪ್ತಿಕರ ಉತ್ತರ ನೀಡಿ ತನ್ನ ಬೌದ್ಧಿಕತೆಗೆ ಸಮಾ ಧಾನವುಂಟುಮಾಡಿದಾಗ ಎನ್ನಬಹುದು. ಮತ್ತು, ತನ್ನ ಪ್ರತಿಯೊಂದು ಪ್ರಶ್ನೆಗೂ ಪ್ರತಿಯೊಂದು ಸಮಸ್ಯೆಗೂ ಸಮಂಜಸವಾದ, ಯುಕ್ತಿಯುಕ್ತವಾದ ಉತ್ತರವನ್ನು ಕೊಟ್ಟು ಶ್ರೀರಾಮಕೃಷ್ಣರು ಅವನನ್ನು ಒಪ್ಪಿಸಿದ್ದರಿಂದಲೇ ಮುಂದೆ ಅವನು ಜಗದ ಜನರನ್ನು ಒಪ್ಪಿಸುವ ಸಾಮರ್ಥ್ಯವನ್ನು ಪಡೆಯುವಂತಾಯಿತು.

ಅಂತೂ ನರೇಂದ್ರನಿಗೆ ಶ್ರೀರಾಮಕೃಷ್ಣರನ್ನು ಗುರುವಾಗಿ ಸ್ವೀಕರಿಸಲು ಸಾಕಷ್ಟು ಸಮಯವೇ ಹಿಡಿಯಿತು ಎನ್ನಬೇಕು. ಆದರೆ ಒಮ್ಮೆ ಸ್ವೀಕರಿಸಿದ ಮೇಲೆ ಮಾತ್ರ ಅವನು ಎಂದೆಂದಿಗೂ ಅವರ ಶಿಷ್ಯನೇ. ಇನ್ನು ಅವರಿಬ್ಬರ ನಡುವಿನ ಗುರು-ಶಿಷ್ಯ

ಸಂಬಂಧ ಎಂಬುದು ಮತ್ತೆ ಸಂದೇಹ ಹಾಗೂ ಅಭಿಪ್ರಾಯಭೇದಗಳಿಂದ ಬಾಧಿತ ವಾಗದು, ದುರ್ಬಲವಾಗದು. ಅವರ ನಡುವಿನ ಈ ನಿಕಟ ಸಂಪರ್ಕ-ಬಾಂಧವ್ಯಗಳು ಐದು ವರ್ಷಗಳ ದೀರ್ಘ ಕಾಲ ಬೆಳೆದುಬಂದವು. ಅವರಿಬ್ಬರ ಪ್ರತಿಯೊಂದು ಭೇಟಿಯೂ ಇಬ್ಬರಿಗೂ ಅಪೂರ್ವ ಸ್ಫೂರ್ತಿ-ಸಂತೋಷಗಳನ್ನು ತಂದಿತು. ಪ್ರತಿಸಲದ ಸಂದರ್ಶನವೂ ಆ ಮಧುರ ಬಾಂಧವ್ಯವನ್ನು ಇನ್ನಷ್ಟು ಮತ್ತಷ್ಟು ನಿಕಟಗೊಳಿಸಿತು, ಬಲವಾಗಿ ಬೆಸೆಯಿತು. ಪ್ರತಿಸಲವೂ ನರೇಂದ್ರ ಹೊಸಹೊಸ ವಿಚಾರಗಳನ್ನು, ಹೊಸ ಹೊಸ ಭಾವನೆಗಳನ್ನು, ಹೊಸಹೊಸ ಆದರ್ಶಗಳನ್ನು ಕಲಿತು ಮೈಗೂಡಿಸಿಕೊಂಡ. ಹೀಗೆ ಬರಬರುತ್ತ ಅವನೀಗ ಆಧ್ಯಾತ್ಮಿಕತೆಯ ವಿಷಯದಲ್ಲಿ ಒಂದು ಪರ್ಯಾಪ್ತ ಸ್ಥಿತಿ ಯನ್ನು ತಲುಪುತ್ತಿದ್ದಾನೆ. ಶ್ರೀರಾಮಕೃಷ್ಣರೂ ತಮ್ಮಲ್ಲಿರುವ ಆಧ್ಯಾತ್ಮಿಕ ಸಂಪತ್ತನ್ನೆಲ್ಲ ಶಿಷ್ಯನಿಗೆ ಧಾರೆಯೆರೆದು ಕೊಡುತ್ತಿದ್ದಾರೆ. ಕಾಮಕಾಂಚನವೆಂಬ ಮಹಾಶತ್ರುಗಳನ್ನು ನಿರ್ನಾಮ ಮಾಡಿ ಆಧ್ಯಾತ್ಮಿಕ ಸಾಮ್ರಾಜ್ಯವನ್ನು ವಶಪಡಿಸಿಕೊಂಡವರು ಶ್ರೀರಾಮ ಕೃಷ್ಣರು. ಈ ಆಧ್ಯಾತ್ಮಿಕ ಸಾಮ್ರಾಜ್ಯವನ್ನು ಜಗತ್ತಿನಲ್ಲಿ ವಿಸ್ತರಿಸಬೇಕಾದವನು ನರೇಂದ್ರ. ಪರಮಾತ್ಮನೆಂಬ ಸಾಗರದ ಆಳಕ್ಕೆ ಮುಳುಗಿ ಆಧ್ಯಾತ್ಮಿಕ ಅನುಭವಗಳ ಅಮೂಲ್ಯ ರತ್ನಗಳನ್ನು ಆರಿಸಿ ತಂದವರು ಶ್ರೀರಾಮಕೃಷ್ಣರು. ಆ ದಿವ್ಯ ರತ್ನಗಳ ಪ್ರಭೆಯನ್ನು ತೋರಿಸಿ ಜಗದ ಜನರನ್ನು ಬೆರಗುಗೊಳಿಸಬೇಕಾದವನು ನರೇಂದ್ರ. ಸಕಲ ಸಾಕ್ಷಾತ್ಕಾರ ಗಳ ಸಾಕಾರಮೂರ್ತಿ ಶ್ರೀರಾಮಕೃಷ್ಣರು; ಆ ಸಾಕ್ಷಾತ್ಕಾರಗಳ ವೈಭವವನ್ನು ಬಣ್ಣಿಸಿ ಪ್ರಸಾರ ಮಾಡಲಿರುವವನು ನರೇಂದ್ರ.

ಶ್ರೀರಾಮಕೃಷ್ಣರ ಭಕ್ತವೃಂದವೆಂಬುದು ೧೮೮೫-೮೬ರ ವೇಳೆಗೆ ಒಂದು ಸ್ಪಷ್ಟ ಆಕಾರ ತಳೆದಿತ್ತು. ಮತ್ತು ಅವರಲ್ಲಿ ಅಂತರಂಗವಲಯಕ್ಕೆ ಮತ್ತು ಬಹಿರಂಗವಲಯಕ್ಕೆ ಸೇರಿದವರೆಂಬ ಎರಡು ವಿಭಿನ್ನ ಗುಂಪುಗಳನ್ನು ಗುರುತಿಸಬಹುದಾಗಿತ್ತು. ಈ ವೇಳೆಗೆ ಭಕ್ತಾದಿಗಳಲ್ಲಿ ಮತ್ತು ಶಿಷ್ಯರಲ್ಲಿ ಒಂದು ಜಿಜ್ಞಾಸೆ ಎದ್ದಿತು—ಶ್ರೀರಾಮಕೃಷ್ಣರು ಅವತಾರಪುರುಷರೋ ಅಲ್ಲವೋ ಎಂದು. ಆದರೆ ನರೇಂದ್ರನ ಗಮನವೇ ಬೇರೆ ದಿಸೆಯಲ್ಲಿ. ಅವನಿಗೆ ಶ್ರೀರಾಮಕೃಷ್ಣರು ಅವತಾರ ಹೌದೋ ಅಲ್ಲವೋ ಎಂಬುದರಲ್ಲಿ ಆಸಕ್ತಿಯಿಲ್ಲ. ಅವನ ಗಮನವೆಲ್ಲ ಶ್ರೀರಾಮಕೃಷ್ಣರ ಶೀಲಪೂರ್ಣ ವ್ಯಕ್ತಿತ್ವದ ಕಡೆಗೆ. ಸಾಕ್ಷಾತ್ಕಾರದ ಹಾದಿಯಲ್ಲಿ ಅತ್ಯಾವಶ್ಯಕವಾದ ಅಂಶವೆಂದರೆ ಈ ಶೀಲ ಅಥವಾ ಚಾರಿತ್ರ್ಯ; ಶಾಸ್ತ್ರಗಳೂ ಅಲ್ಲ, ಸಿದ್ಧಾಂತಗಳೂ ಅಲ್ಲ. ಇತರರೆಲ್ಲರ ದೃಷ್ಟಿಕೋನಕ್ಕಿಂತ ನರೇಂದ್ರನ ದೃಷ್ಟಿಕೋನ ಎಷ್ಟೋ ಪಾಲು ಹೆಚ್ಚು ವಿಶಾಲವಾದದ್ದು. ಉಳಿದವರು ಅವನ ದೃಷ್ಟಿಯಿಂದ ನೋಡಲು ಸಾಧ್ಯವೇ ಇರಲಿಲ್ಲ. ಅವನು ಶ್ರೀರಾಮಕೃಷ್ಣರನ್ನು ಇಂತಹ ವಿಶಾಲ ದೃಷ್ಟಿಕೋನದಿಂದ ನಿರೀಕ್ಷಿಸಿ ಪರೀಕ್ಷಿಸುತ್ತಿದ್ದ. ಅವರ ಸಮಗ್ರ ವ್ಯಕ್ತಿತ್ವವನ್ನು ಅರಿತುಕೊಳ್ಳಬೇಕು ಎಂಬುದು ಆತನ ಅಭಿಲಾಷೆ. ಇತರ ಶಿಷ್ಯರು-ಭಕ್ತರು ಅವರ ಬೋಧನೆಯ ಅಥವಾ ವ್ಯಕ್ತಿತ್ವದ ಯಾವುದೋ ಒಂದಂಶವನ್ನು ಮಾತ್ರ ಒಪ್ಪಿ ಸ್ವೀಕರಿಸುವುದನ್ನು ಕಂಡು ಅವನು ಅಸಹನೆ ತಾಳುತ್ತಿದ್ದ. ಅವನು ಶ್ರೀರಾಮಕೃಷ್ಣರನ್ನು ಕೇವಲ ಅವತಾರತತ್ತ್ವದ ಚೌಕಟ್ಟಿನಲ್ಲಿ ಬಂಧಿಸಲು ಇಷ್ಟಪಡುತ್ತಿರಲಿಲ್ಲ. ಮತ್ತು ಅವರು ಅವತಾರಪುರುಷರೆಂಬ ಒಂದೇ ಮಾತಿನ ಆಧಾರದ ಮೇಲೆ ಅವರಿಗೆ ಗೌರವ ಸಲ್ಲಿಸುವುದನ್ನೂ ಮೆಚ್ಚುತ್ತಿರಲಿಲ್ಲ. ಜಗತ್ತಿನ ಸಮಸ್ತ ಮತ-ಧರ್ಮಗಳ ಆಧ್ಯಾತ್ಮಿಕ ಆದರ್ಶಗಳಿಗೂ ಶ್ರೀರಾಮಕೃಷ್ಣರ ಜೀವನವು ಮಾರ್ಗಸೂಚಿಯಾಗಿದೆ ಎಂದು ಅವನು ಕಂಡುಕೊಂಡಿದ್ದ. ಅಧ್ಯಾತ್ಮ ಜಗತ್ತಿನಲ್ಲಿ ಹೊಸ ಮಾರ್ಗಗಳನ್ನೇ ನಿರ್ಮಿಸಿದವರು ಅವರು ಎಂದೂ ಅರಿತುಕೊಂಡ. ಅವರ ಒಂದೊಂದು ಉದ್ಗಾರವೂ ಆಧ್ಯಾತ್ಮಿಕ ಜೀವನದ ಅತ್ಯುನ್ನತ ಸಾಧ್ಯತೆಗಳನ್ನು ಪ್ರತಿಬಿಂಬಿಸುವುದೆಂದು ತೀರ್ಮಾನಿಸಿದ. ತನ್ನ ಶರೀರ-ಇಂದ್ರಿಯ-ಮನಸ್ಸುಗಳಿಂದ ಸೀಮಾಬದ್ಧನಾದ ಮಾನವನು ತನ್ನ ಜೀವನೋದ್ದೇಶಗಳನ್ನು ವಿಸ್ತರಿಸಿಕೊಳ್ಳುವುದರ ಮೂಲಕ ಸೀಮಾತೀತನಾಗಬಲ್ಲ ಎಂಬ ಸತ್ಯವನ್ನು ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿ ಕಂಡುಕೊಂಡ. ನಿಜಕ್ಕೂ ಜಗತ್ತಿನ ಎಲ್ಲ ಸಂತರ ಪ್ರಯತ್ನವೂ ಇದೇ—ಸಾಂತದಿಂದ ಅನಂತದೆಡೆಗೆ ಧಾವಿಸುವ ಪ್ರಯತ್ನ; ಬಂಧನದಿಂದ ಸ್ವಾತಂತ್ರ್ಯದೆಡೆಗೆ ಧಾವಿಸುವ ಪ್ರಯತ್ನ. ಆದರೆ ಶ್ರೀರಾಮಕೃಷ್ಣರಲ್ಲಿ ಈ ಪ್ರಯತ್ನ ಪರಾಕಾಷ್ಠೆಗೆ ತಲುಪಿರುವುದನ್ನು ಅವನು ನೋಡಿದ. ಅಲ್ಲದೆ ಅವರು ಸನಾತನ ಧರ್ಮದ ಪುನರುದ್ಧಾರಕರು, ಸನಾತನ ಧರ್ಮದ ಪ್ರತಿಷ್ಠಾಪಕರು ಎಂದು ಗುರುತಿಸಿದ. ಅವರಲ್ಲಿ ಒಬ್ಬ ನೂತನ ಬುದ್ಧನನ್ನು, ನೂತನ ಶಂಕರಾಚಾರ್ಯರನ್ನು, ನೂತನ ಚೈತನ್ಯದೇವನನ್ನು—ಅಷ್ಟೇ ಅಲ್ಲ, ಇನ್ನೂ ಹೆಚ್ಚಿನ ಶಕ್ತಿಯನ್ನೂ ಮಹತ್ತ್ವವನ್ನೂ ನರೇಂದ್ರ ಕಂಡುಕೊಂಡ. ನಿಜಕ್ಕೂ ಹದಿನೆಂಟು-ಹತ್ತೊಂಬತ್ತನೆಯ ಶತಮಾನಗಳಲ್ಲಿ

ಸನಾತನ ಧರ್ಮಕ್ಕೆ ಉಂಟಾಗಿದ್ದ ಗ್ಲಾನಿ ಬಹು ದೊಡ್ಡದು. ಏಕೆಂದರೆ ಹಿಂದಿನ ಯುಗಗಳಲ್ಲಿ ಅನೈತಿಕತೆ, ಅನಾಚಾರಗಳಿಂದಾಗಿ ಧರ್ಮಗ್ಲಾನಿಯಾಗುತ್ತಿದ್ದರೆ, ಪ್ರಸ್ತುತ ಸಂದರ್ಭದಲ್ಲಿ ಪರರಾಷ್ಟ್ರೀಯರ, ವಿಧರ್ಮೀಯರ ಆಕ್ರಮಣದಿಂದಾಗಿ ಸನಾತನ ಧರ್ಮವು ಬುಡಸಮೇತ ಲುಪ್ತವಾಗುವ ಅಪಾಯಕ್ಕೆ ಗುರಿಯಾಗಿತ್ತು. ಈ ಹಿನ್ನೆಲೆಯಲ್ಲಿ ಇಂದಿನ ಅವತಾರದ ವಿಶೇಷ ಹೊಣೆಗಾರಿಕೆಯನ್ನು ಅವನು ಸ್ಪಷ್ಟವಾಗಿ ಗುರುತಿಸಿದ. ಹಿಂದಿನ ಯುಗಗಳಲ್ಲಿ ಅವತಾರಪುರುಷರೂ ಆಚಾರ್ಯಪುರುಷರೂ ಭಾರತದಲ್ಲಷ್ಟೇ ಧರ್ಮಸಂಸ್ಥಾಪನೆಯ ಕಾರ್ಯವನ್ನು ಮಾಡಿದ್ದರೆ ಸಾಕಾಗಿತ್ತು. ಭಗವಾನ್ ಬುದ್ಧನ ಕಾಲದಲ್ಲಿ ಧರ್ಮಪ್ರಸಾರಕಾರ್ಯವು ಇತರ ಪೌರ್ವಾತ್ಯ ರಾಷ್ಟ್ರಗಳಲ್ಲೂ ಮುಂದುವರಿಯಿತು. ಆದರೆ ಇಂದು ಶ್ರೀರಾಮಕೃಷ್ಣಾವತಾರದ ಕಾಲದಲ್ಲಿ ಈ ಧರ್ಮಪ್ರಸಾರಕಾರ್ಯವು ವಿಶ್ವದಾದ್ಯಂತ ನಡೆಯಬೇಕಾದ ಆವಶ್ಯಕತೆಯಿದೆ. ಅಲ್ಲದೆ, ಇಂತಹ ಒಂದು ಬೃಹತ್ ಕಾರ್ಯವನ್ನು ಯಶಸ್ವಿಯಾಗಿಸಲು ಬೇಕಾದ ಅನಂತ ಆಧ್ಯಾತ್ಮಿಕ ಶಕ್ತಿ ಶ್ರೀರಾಮಕೃಷ್ಣರಲ್ಲಿದೆ ಎಂಬುದು ಕ್ರಮೇಣ ನರೇಂದ್ರನ ಅರಿವಿಗೆ ಬಂದಿತು. ಈ ಎಲ್ಲ ವಿಚಾರಗಳೂ ನರೇಂದ್ರನಲ್ಲಿ ಹುಟ್ಟಿದುದು ದಕ್ಷಿಣೇಶ್ವರದ ದಿನಗಳಲ್ಲಿ. ಮುಂದೆ ಕಾಶೀಪುರದ ಉದ್ಯಾನವನದ ದಿನಗಳಲ್ಲಿ, ಎಂದರೆ ಶ್ರೀರಾಮಕೃಷ್ಣರ ಜೀವಿತಾವಧಿಯ ಕಡೆಯ ಸುಮಾರು ಒಂದು ವರ್ಷದಲ್ಲಿ ಅವನೊಳಗೆ ಈ ಭಾವನೆಗಳೆಲ್ಲ ಪಕ್ವಗೊಂಡು ನಿಶ್ಚಿತ ರೂಪತಳೆದುವು.

೧೮೮೫ರ ಬೇಸಿಗೆಯಲ್ಲಿ ತೀವ್ರ ಉಷ್ಣದಿಂದಾಗಿ ಶ್ರೀರಾಮಕೃಷ್ಣರಿಗೆ ಅತೀವ ಕಷ್ಟವೆನಿಸಿತು. ಇದನ್ನು ಕಂಡು ಭಕ್ತರು ಅವರಿಗೆ ಮಂಜುಗಡ್ಡೆ ಸೇವಿಸಲು ಸಲಹೆ ಮಾಡಿದರು. ಶ್ರೀರಾಮಕೃಷ್ಣರು ಹಾಗೆಯೇ ಮಾಡಿದರು. ಇದರಿಂದಾಗಿ ಅವರಿಗೆ ಎಷ್ಟೋ ಅನುಕೂಲವಾದಂತೆ ಅನ್ನಿಸಿತು. ಇದನ್ನು ಕಂಡು ಭಕ್ತಾದಿಗಳೆಲ್ಲ ದಕ್ಷಿಣೇಶ್ವರಕ್ಕೆ ಬರುವಾಗ ಮಂಜುಗಡ್ಡೆ ತರಲಾರಂಭಿಸಿದರು. ಶ್ರೀರಾಮಕೃಷ್ಣರು ಆ ಮಂಜುಗಡ್ಡೆ ಬೆರೆಸಿದ ಪಾನಕವನ್ನು ಮುಗ್ಧ ಬಾಲಕನಂತೆ ಸಂತೋಷದಿಂದ ಕುಡಿಯುತ್ತಿದ್ದರು. ಆದರೆ ಸುಮಾರು ಒಂದೆರಡು ತಿಂಗಳ ಬಳಿಕ ಅವರ ಗಂಟಲಲ್ಲಿ ನೋವು ಕಾಣಿಸಿಕೊಂಡಿತು. ಮತ್ತೆರಡು ತಿಂಗಳಾದರೂ ನೋವು ಕಡಿಮೆಯಾಗುವ ಸೂಚನೆಯೇ ಕಂಡುಬರಲಿಲ್ಲ. ಅಲ್ಲದೆ, ಮೇ ತಿಂಗಳ ಹೊತ್ತಿಗೆ ಆ ಕಾಯಿಲೆಯಲ್ಲಿ ಕೆಲವು ಹೊಸ ಲಕ್ಷಣಗಳು ಕಾಣಿಸಿಕೊಂಡುವು. ಜೊತೆಗೆ, ಶ್ರೀರಾಮಕೃಷ್ಣರು ಹೆಚ್ಚಾಗಿ ಮಾತನಾಡಿದಾಗಲೆಲ್ಲ ಹಾಗೂ ಸಮಾಧಿಗೇರಿದಾಗಲೆಲ್ಲ ಗಂಟಲಿನಲ್ಲಿ ಹೆಚ್ಚಿನ ರಕ್ತಸಂಚಾರದಿಂದಾಗಿ ನೋವು ಉಲ್ಬಣಿಸುತ್ತಿತ್ತು. ಇವೆಲ್ಲ ಥಂಡಿಯ ದೆಸೆಯಿಂದ ಉಂಟಾದ ಉರಿಯೂತದ ಪರಿಣಾಮ ಎಂದು ಭಾವಿಸಿ ಅದಕ್ಕೆ ಪಟ್ಟಿಯನ್ನು ಕಟ್ಟಿದರು. ಆದರೆ ಹಲವು ದಿನಗಳು ಕಳೆದರೂ ಅದರಿಂದ ಏನೂ ಪ್ರಯೋಜನ ಕಂಡುಬರಲಿಲ್ಲ. ಆಗ ಒಬ್ಬ ಭಕ್ತ ಕಲ್ಕತ್ತದಿಂದ ಡಾಕ್ಟರ್ ರಾಖಾಲ್ ಎಂಬವರನ್ನು ಕರೆತಂದ. ಅವರು ಚೆನ್ನಾಗಿ ಪರೀಕ್ಷೆ ಮಾಡಿನೋಡಿ ಗಂಟಲ ಒಳಗೂ ಹೊರಗೂ ಹಚ್ಚಲು ಔಷಧವನ್ನು ಕೊಟ್ಟರು. ಬಳಿಕ, ಶ್ರೀರಾಮಕೃಷ್ಣರು ಹೆಚ್ಚಾಗಿ ಮಾತನಾಡದಂತೆ ಮತ್ತು ಸಮಾಧಿಸ್ಥಿತಿಗೆ ಏರದಂತೆ ನೋಡಿಕೊಳ್ಳಬೇಕು ಎಂದು ಅವರ ಆರೈಕೆ ಮಾಡುತ್ತಿದ್ದ ಪರಿಚಾರಕರಿಗೆ ಎಚ್ಚರಿಕೆ ಹೇಳಿದರು. ಪರಿಚಾರಕರು 'ಆಗಲಿ' ಎಂದೇನೋ ಹೇಳಿದರು. ಆದರೆ ಶ್ರೀರಾಮಕೃಷ್ಣರನ್ನು ಸಮಾಧಿಗೇರದಂತೆ ತಡೆಯಲು ಯಾರಿಂದತಾನೆ ಸಾಧ್ಯ!

ಜ್ಯೇಷ್ಠ ಮಾಸದ ತ್ರಯೋದಶಿಯ ದಿನ. (ಮೇ-ಜೂನ್ ತಿಂಗಳು) ಅಂದು ದಕ್ಷಿಣೇಶ್ವರಕ್ಕೆ ಕೆಲವು ಮೈಲಿ ದೂರವಿರುವ ಪಾನಿಹಾಟಿಯಲ್ಲಿ ಜಾತ್ರೆ. ಭಕ್ತರಿಗೆಲ್ಲ ಶ್ರೀರಾಮಕೃಷ್ಣರನ್ನು ಜೊತೆಗೂಡಿಕೊಂಡು ಈ ಜಾತ್ರೆಗೆ ಹೋಗಬೇಕು ಎಂಬ ಇಚ್ಛೆ. ಶ್ರೀರಾಮಕೃಷ್ಣರೂ ಒಪ್ಪಿಕೊಂಡು ಹೊರಟರು; ಅಲ್ಲಿ ಇಡೀ ದಿನವನ್ನು ಭಾವಾವೇಶ ದಲ್ಲೇ ಕಳೆದರು—ಹಾಡಿದರು, ನರ್ತಿಸಿದರು, ಮತ್ತೆಮತ್ತೆ ಸಮಾಧಿಗೇರಿದರು.* ಅಲ್ಲಿನ ಆ ಪ್ರೇಮೋತ್ಸಾಹದ ವಾತಾವರಣದಲ್ಲಿ ಶ್ರೀರಾಮಕೃಷ್ಣರನ್ನು ಭಾವಸ್ಥಿತಿಗೇರ ದಂತೆ ತಡೆಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಆದರೆ ಜಾತ್ರೆ ಮುಗಿಸಿಕೊಂಡು ಬರುತ್ತಿದ್ದಂತೆಯೇ ಗಂಟಲ ಕಾಯಿಲೆ ಹೆಚ್ಚಾಗಿಬಿಟ್ಟಿತು. ವೈದ್ಯರು ಬಂದು ಮತ್ತೆ ಪರೀಕ್ಷೆ ಮಾಡಿನೋಡಿ ಔಷಧ ಬದಲಾಯಿಸಿ ಕೊಟ್ಟರು, ಪಥ್ಯ-ಪಾನ ವಿಧಿಸಿದರು. ಅವರು ಹೇಳಿದ ಎಲ್ಲ ನಿಯಮಗಳನ್ನೂ ಶ್ರೀರಾಮಕೃಷ್ಣರು ಪರಿಪಾಲಿಸಿದರು—ಎರಡು ವಿಷಯಗಳನ್ನು ಬಿಟ್ಟು. ಒಂದು, ಸಮಾಧಿಗೇರುವುದು; ಎರಡು, ಭಕ್ತರೊಡನೆ ಮಾತ ನಾಡುವುದು. ಭಗವತ್ಸಂಬಂಧವಾದ ಮಾತುಕತೆ ನಡೆದಾಗ, ಭಾವಭರಿತವಾದ ಕೀರ್ತನೆಯನ್ನು ಕೇಳಿದಾಗ ತಕ್ಷಣ ಭಾವಸಮಾಧಿಗೇರದಿರಲು ಅವರಿಂದ ಸಾಧ್ಯವೇ ಇಲ್ಲ. ಅಂತೆಯೇ ಆಧ್ಯಾತ್ಮಿಕ ಮಾರ್ಗದರ್ಶನವನ್ನು ಅರಸಿ ಬಂದ, ಜೀವನದಲ್ಲಿ ನೊಂದು ಬೆಂದು ಸಾಂತ್ವನವನ್ನು ಬಯಸಿ ಬಂದ ಜನರನ್ನು ಕಂಡಾಗ ಅವರಿಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳದಿರಲು ಶ್ರೀರಾಮಕೃಷ್ಣರಿಂದ ಸಾಧ್ಯವೇ ಇಲ್ಲ. ಇದರಿಂದ ತಮ್ಮ ಗಂಟಲ ಮೇಲೆ ಎಂತಹ ದುಷ್ಪರಿಣಾಮವಾಗಬಹುದೆಂಬ ಅರಿ ವಿದ್ದರೂ ಮಾತನಾಡುತ್ತಲೇ ಇದ್ದರು—ಭಕ್ತಾನುಕಂಪೆ! ಅಕಾಲದಲ್ಲೆಲ್ಲ ಭಕ್ತರು ಬರು ತ್ತಿದ್ದುದರಿಂದ ಮತ್ತು ಯಾವಾಗೆಂದರೆ ಆಗ ಸಮಾಧಿಸ್ಥಿತಿಯುಂಟಾಗುತ್ತಿದ್ದುದರಿಂದ ಅವರ ಪಥ್ಯ-ಪಾನಗಳು ಸಮಯಕ್ಕೆ ಸರಿಯಾಗಿ ನಡೆಯಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಶ್ರೀರಾಮಕೃಷ್ಣರೆಂದೂ ಬೇಸರಿಸದೆ, ಭಕ್ತರ ಹಿತಕ್ಕಾಗಿ ತಮ್ಮ ಶಕ್ತಿಯ ಪ್ರತಿ ಯೊಂದು ತುಣುಕನ್ನೂ ವ್ಯಯಿಸುತ್ತಲೇ ಹೋದರು.

ದಿನದಿಂದ ದಿನಕ್ಕೆ ಗಂಟಲುಬೇನೆ ಹೊಸ ರೂಪ ತಾಳುತ್ತಿದೆ; ಪರಿಸ್ಥಿತಿ ಗಂಭೀರ ವಾಗುತ್ತಿದೆ. ಭಕ್ತರೆಲ್ಲ ಆತಂಕಗೊಂಡಿದ್ದಾರೆ. ನರೇಂದ್ರ ಶ್ರೀರಾಮಕೃಷ್ಣರ ದೇಹಸ್ಥಿತಿ ಯನ್ನು ಗಮನಿಸುತ್ತಲೇ ಇದ್ದಾನೆ. ಒಂದು ದಿನ, ಅವರ ಗಂಟಲಿನಿಂದ ರಕ್ತಸ್ರಾವವಾಯಿ ತೆಂದು ತಿಳಿದಾಗ ತನ್ನ ಸ್ನೇಹಿತನೊಬ್ಬನ ಬಳಿ ಹೇಳುತ್ತಾನೆ: "ಬಹುಶಃ ನಮ್ಮೆಲ್ಲರ ಪ್ರೀತಿಪಾತ್ರವಾದ ವಸ್ತು ನಮ್ಮ ಕೈತಪ್ಪಿಹೋಗುತ್ತದೆ ಅಂತ ನನಗನ್ನಿಸುತ್ತಿದೆ. ಈ ಕಾಯಿಲೆಯ ಬಗ್ಗೆ ನಾನು ವೈದ್ಯಕೀಯ ಗ್ರಂಥಗಳನ್ನು ಓದಿದ್ದೇನೆ ಮತ್ತು ಕೆಲವು ವೈದ್ಯ ಸ್ನೇಹಿತರನ್ನು ಕೇಳಿದ್ದೇನೆ. ಅವರೆಲ್ಲ ಹೇಳುವ ಪ್ರಕಾರ ಈ ಗಂಟಲುಬೇನೆ ಕ್ಯಾನ್ಸರ್‌ಗೆ ತಿರುಗಿಕೊಂಡರೂ ಆಶ್ಚರ್ಯವಿಲ್ಲ. . . ಕ್ಯಾನ್ಸರ್‌ಗೆ ಔಷಧವನ್ನು ಇನ್ನೂ ಯಾರೂ ಕಂಡುಹಿಡಿದಿಲ್ಲ. . ."

ಶ್ರೀರಾಮಕೃಷ್ಣರ ಕಾಯಿಲೆ ದಕ್ಷಿಣೇಶ್ವರದಲ್ಲಿ ಸುಧಾರಿಸದಿದ್ದುದರಿಂದ ಅವರನ್ನು ಇನ್ನೂ ಉತ್ತಮ ಚಿಕಿತ್ಸೆಗಾಗಿ ಕಲ್ಕತ್ತಕ್ಕೆ ಕರೆದುಕೊಂಡುಹೋಗಬೇಕೆಂದು ಭಕ್ತರು ಯೋಚಿಸಿದರು. ಇದಕ್ಕೆ ಶ್ರೀರಾಮಕೃಷ್ಣರು ಕೂಡಲೇ ಒಪ್ಪಿದರು. ಸರಿ, ಕಲ್ಕತ್ತದ ಬಾಗ್

---

*ಅಂದಿನ ಉತ್ಸವದ ವಿವರಗಳಿಗೆ ನೋಡಿ: 'ಯುಗಾವತಾರ ಶ್ರೀರಾಮಕೃಷ್ಣ' (ಸಂಪುಟ ೪).

ಬಜಾರಿನಲ್ಲಿ ಒಂದು ಪುಟ್ಟ ಮನೆಯನ್ನು ಗೊತ್ತುಮಾಡಿ, ಅಲ್ಲಿಗೆ ಕರೆದುಕೊಂಡು ಹೋಗಲಾಯಿತು. ಆದರೆ ಶ್ರೀರಾಮಕೃಷ್ಣರಿಗೆ ಆ ಮನೆ ಸ್ವಲ್ಪವೂ ಇಷ್ಟವಾಗದೆ, ಕೂಡಲೇ ಅಲ್ಲಿಂದ ಹೊರಟು ತಮ್ಮ ಆಪ್ತ ಭಕ್ತನಾದ ಬಲರಾಮ ಬೋಸನ ಮನೆಗೆ ಬಂದುಬಿಟ್ಟರು. ಬಳಿಕ ಒಂದು ವಾರದಲ್ಲೇ ಶ್ಯಾಮಪುಕುರ ಮೊಹಲ್ಲದಲ್ಲಿ ಒಂದು ಮನೆಯನ್ನು ಬಾಡಿಗೆಗೆ ಗೊತ್ತುಮಾಡಿ, ಶ್ರೀರಾಮಕೃಷ್ಣರನ್ನು ಅಲ್ಲಿಗೆ ಕರೆತರಲಾಯಿತು. ಈ ಮನೆ ತಕ್ಕಮಟ್ಟಿಗೆ ಉತ್ತಮವಾಗಿತ್ತು. ಈಗ ಕಲ್ಕತ್ತದ ಪ್ರಸಿದ್ಧ ಹೋಮಿಯೋಪಥಿ ವೈದ್ಯನಾದ ಡಾ॥ ಮಹೇಂದ್ರಲಾಲ್ ಸರ್ಕಾರ್ ಎಂಬವನು ಶ್ರೀರಾಮಕೃಷ್ಣರಿಗೆ ಚಿಕಿತ್ಸೆ ನೀಡಲು ಒಪ್ಪಿಕೊಂಡ. ನರೇಂದ್ರ ತನ್ನ ಸೋದರಶಿಷ್ಯರ ಸಹಕಾರದಿಂದ ಅವರ ಶುಶ್ರೂಷೆಗೆ ತಕ್ಕ ವ್ಯವಸ್ಥೆ ಮಾಡಿದ. ಊಟೋಪಚಾರಗಳನ್ನು ಮಾಡಲು ದಕ್ಷಿಣೇಶ್ವರ ದಿಂದ ಶ್ರೀಶಾರದಾದೇವಿಯವರನ್ನು ಕರೆತರಲಾಯಿತು. ನರೇಂದ್ರನು ತಮ್ಮ ಗುರು ದೇವನಿಗೆ ಅತೀವ ನಿಷ್ಠೆಯಿಂದ, ಉತ್ಸಾಹದಿಂದ ಸೇವೆ ಮಾಡುವ ಕ್ರಮವನ್ನು ನೋಡಿ ಇತರ ಶಿಷ್ಯರಲ್ಲೂ ಹೊಸ ಶಕ್ತಿ-ಉತ್ಸಾಹಗಳು ಉದಿಸಿದುವು. ಆದರೂ ತಮ್ಮ ಮನೆ ಗಳನ್ನು ಮರೆತು, ತನುಮನಪೂರ್ವಕವಾಗಿ ಗುರುಸೇವೆಯಲ್ಲಿ ತೊಡಗುವ ನಿರ್ಧಾರ ಮಾಡಿದರು. ಮತ್ತು ನರೇಂದ್ರನ ಬುದ್ಧಿವಾದದಂತೆ ಶ್ರದ್ಧಾಭಕ್ತಿಗಳಿಂದ ಗುರುಸೇವೆ ಮಾಡಿ, ತನ್ಮೂಲಕ ಭಗವತ್ಸಾಕ್ಷಾತ್ಕಾರ ಮಾಡಿಕೊಳ್ಳುವ ಪ್ರಯತ್ನದಲ್ಲಿ ನಿರತರಾದರು. ಆದರೆ ಅವರು ಹೀಗೆ ಮನೆ, ಕಾಲೇಜು, ಅಧ್ಯಯನವನ್ನೆಲ್ಲ ಬದಿಗೊತ್ತಿದುದನ್ನು ಕಂಡು ಅಸಮಾಧಾನಗೊಂಡ ತಂದೆತಾಯಂದಿರು ಬಂದು ಅವರನ್ನೆಲ್ಲ ಕರೆದುಕೊಂಡು ಹೋಗುವ ಪ್ರಯತ್ನ ಮಾಡಿದರು. ಬಹುಶಃ ನರೇಂದ್ರನ ಕುಮ್ಮಕ್ಕು-ಪ್ರೋತ್ಸಾಹ ಇಲ್ಲದೆಹೋಗಿದ್ದರೆ ಆ ಶಿಷ್ಯರೆಲ್ಲ ತಂದೆತಾಯಂದಿರ ಬಲವಂತಕ್ಕೆ ಮಣಿದು, ಕೈಗೊಂಡ ಸೇವೆಯನ್ನು ಅಲ್ಲಿಗೇ ಬಿಟ್ಟು ಹೊರಟುಬಿಡುತ್ತಿದ್ದರೇನೋ. ಆದರೆ ನರೇಂದ್ರನ ಬಲದ ಮುಂದೆ ಆ ತಂದೆತಾಯಂದಿರ ಪ್ರಯತ್ನ ನಡೆಯಲಿಲ್ಲ.

ಈ ಶಿಷ್ಯರೇನೋ ತಾಯ್ತಂದೆಯರ ಕರೆಯನ್ನೂ ನಿರಾಕರಿಸಿ ಶ್ಯಾಮಪುಕುರದಲ್ಲೇ ನಿಂತಿರಬಹುದು. ಆದರೆ ಅವರಿಗೆಲ್ಲ ಊಟ-ತಿಂಡಿಗಳ ವ್ಯವಸ್ಥೆಯಾಗಬೇಕಲ್ಲ. ಶ್ರೀರಾಮಕೃಷ್ಣರ ಚಿಕಿತ್ಸೆಗೂ ಹಣ ಬೇಕು, ಇವರೆಲ್ಲರ ಅಶನಾದಿಗಳಿಗೂ ಹಣ ಬೇಕು, ಮನೆಯ ಬಾಡಿಗೆಯನ್ನೂ ಕೊಡಬೇಕು. ಶ್ರೀರಾಮಕೃಷ್ಣರ ಬಳಿ ಕೂಡಿಟ್ಟ ಹಣ ಏದೆಯೆ? ಅವರು ತಿಂಗಳಿಗೆ ಏಳು ರೂಪಾಯಿ ಸಂಬಳದ ಮೇಲೆ ಜೀವಿಸಿದವರು! ಕೆಲವು ಮಂದಿ ಅನುಕೂಲಸ್ಥ ಭಕ್ತರೇನೋ ಇದ್ದರು. ಆದರೆ ಇಷ್ಟೊಂದು ಜನರಿಗೆ ತಿಂಗಳುಗಟ್ಟಲೆ ತಿಂಡಿತೀರ್ಥ ಕೊಟ್ಟು ಪೂರೈಸುವುದು ಸುಲಭವೆ? ಕೆಲವೊಮ್ಮೆ ಭಕ್ತರೂ ಶಿಷ್ಯರೂ ಅಧೈರ್ಯಕ್ಕೊಳಗಾಗುತ್ತಿದ್ದರು; ಮನಸ್ಸು ವಿಚಲಿತಗೊಳ್ಳುತ್ತಿತ್ತು. ಮುಂದೆ ಏನು ಗತಿ ಎಂದು ಚಿಂತಿಸುತ್ತಿದ್ದರು. ಅವರೆಲ್ಲ ಹೀಗೆ ಹೆದರಿ ಅಸಹಾಯಕರಾಗಿರುವಾಗ ಶ್ರೀರಾಮಕೃಷ್ಣರ ದೈವೀಶಕ್ತಿಗೆ ಹೊಸ ಸಾಕ್ಷ್ಯವೊಂದನ್ನು ಕಾಣುತ್ತಿದ್ದರು. ಆಗ ಅವರು ತಮಗೆ ತಾವೇ ಬೈದುಕೊಳ್ಳುತ್ತಿದ್ದರು—"ಛೆ, ಇದೇನಿದು! ನಮ್ಮದು ಇದೆಂತಹ ಅಪ ನಂಬಿಕೆ! ಹಣದ ಬಗ್ಗೆ ನಮಗೇಕೆ ಚಿಂತೆ? ಶ್ರೀರಾಮಕೃಷ್ಣರೇ ಖಂಡಿತವಾಗಿ ಎಲ್ಲ ವನ್ನೂ ಒದಗಿಸಿಕೊಡುತ್ತಾರೆ." ಶ್ರೀರಾಮಕೃಷ್ಣರಿಗೆ ಯಾವುದೇ ರೂಪದಿಂದ ಸೇವೆ ಮಾಡಿದರೂ ಅದರಿಂದ ತಮ್ಮ ಆಧ್ಯಾತ್ಮಿಕ ಉನ್ನತಿಯಾಗುವುದರಲ್ಲಿ ಸಂದೇಹವಿಲ್ಲ ಎಂಬುದು ಅವರಿಗೆಲ್ಲ ಮನದಟ್ಟಾಯಿತು. ಅಲ್ಲದೆ ಶ್ರೀರಾಮಕೃಷ್ಣರಿಗೆ ಈಗ ಬಂದಿರುವ

ಈ ಕಾಯಿಲೆ ತಮ್ಮೆಲ್ಲರಿಗೂ ಯಥಾಶಕ್ತಿ ಗುರುಸೇವೆ ಮಾಡಲು ಒದಗಿರುವ ಒಂದು ಸದವಕಾಶ ಎಂದು ಆ ಭಕ್ತರೂ ಶಿಷ್ಯರೂ ಭಾವಿಸಿದರು. ಆದ್ದರಿಂದ ಈಗ ಗುರುಸೇವೆಗಾಗಿ ಸಾಧ್ಯವಾದಷ್ಟು ತಮ್ಮ ಹಣವನ್ನು ವಿನಿಯೋಗಿಸಲು ಭಕ್ತರು ನಿಶ್ಚಯಿಸಿದರು. ಯುವಕಶಿಷ್ಯರೂ ತಮ್ಮ ಶಕ್ತಿಮೀರಿ ಶ್ರೀರಾಮಕೃಷ್ಣರ ವೈಯಕ್ತಿಕ ಸೇವೆಯಲ್ಲಿ ತೊಡಗಲು ಪಣತೊಟ್ಟು ನಿಂತರು. ಅಲ್ಲದೆ, ಶ್ರೀರಾಮಕೃಷ್ಣರ ಅಪೂರ್ವ ಆಧ್ಯಾತ್ಮಿಕ ಶಕ್ತಿ ವಿಶೇಷವಾಗಿ ಪ್ರಕಟವಾಗುವುದನ್ನು ಕಾಣುತ್ತ ಅವರ ಆನಂದೋತ್ಸಾಹಗಳು ಇಮ್ಮಡಿಯಾದುವು. ಶ್ರೀರಾಮಕೃಷ್ಣರು ದಕ್ಷಿಣೇಶ್ವರದಲ್ಲಿರುವವರೆಗೂ ಎಷ್ಟೋ ಭಕ್ತರಿಗೆ ಅಲ್ಲಿಯವರೆಗೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಈಗ ಶ್ಯಾಮಪುಕುರಕ್ಕೆ ಬಂದು ದರ್ಶನ ಪಡೆದುಕೊಂಡು ಹೋಗಲು ಎಲ್ಲರಿಗೂ ಬಹಳ ಅನುಕೂಲವಾಯಿತು. ಕಾಯಿಲೆಯ ನೆವದಿಂದ ಅವರು 'ಕಾಡಿನಿಂದ ನಾಡಿಗೆ' ಬಂದದ್ದು ಭಕ್ತಜನರ ಭಾಗ್ಯವಾಗಿ ಪರಿಣಮಿಸಿತು.

ಈ ಮಧ್ಯೆ ಭಕ್ತವೃಂದದಲ್ಲೊಂದು ದೊಡ್ಡ ಜಿಜ್ಞಾಸೆಯೆದ್ದಿದೆ—'ಶ್ರೀರಾಮಕೃಷ್ಣರಿಗೆ ಇಂತಹ ಕಾಯಿಲೆ ಏಕಾದರೂ ಬಂದಿರಬಹುದು?' ಎಲ್ಲರೂ ತಮ್ಮತಮ್ಮದೇ ಆದ ರೀತಿಯಲ್ಲಿ ಊಹಿಸುತ್ತಿದ್ದಾರೆ. ಇದು ತೀರ ಸಹಜವೇ. ಏಕೆಂದರೆ, ಪರಮಯೋಗಿಗಳಾದ ಶ್ರೀರಾಮಕೃಷ್ಣರ ಶರೀರಕ್ಕೆ, ಆ ಪರಮ ಪರಿಶುದ್ಧ ಶರೀರಕ್ಕೆ ಕಾಯಿಲೆ ಬರಲು ಹೇಗೆತಾನೆ ಸಾಧ್ಯ! ಆದರೆ ಇದಕ್ಕೊಂದು ಕಾರಣ ಇರಬೇಕಲ್ಲವೆ?—ಎಂಬುದು ಭಕ್ತರ ಕುತೂಹಲ, ಜಿಜ್ಞಾಸೆ. ಅವರಲ್ಲಿ ಒಂದು ಗುಂಪಿನವರು ಹೇಳುತ್ತಿದ್ದರು—"ಇದೆಲ್ಲ ಜಗನ್ಮಾತೆಯ ಇಚ್ಛೆಯಲ್ಲದೆ ಬೇರೇನು! ಶ್ರೀರಾಮಕೃಷ್ಣರು ಸಂಪೂರ್ಣವಾಗಿ ಆಕೆಯ ಮೇಲೆಯೇ ನಿರ್ಭರರಾಗಿ, ಅವಳ ಉಪಕರಣವೇ ಆಗಿಬಿಟ್ಟಿರುವವರಲ್ಲವೆ? ಆದ್ದರಿಂದ, ಯಾವುದೋ ಒಂದು ಉದ್ದೇಶವನ್ನು ಪರಿಪೂರ್ಣಗೊಳಿಸುವುದಕ್ಕೋಸ್ಕರ ಅವಳೇ ಈ ಕಾಯಿಲೆಯನ್ನು ಬರಿಸಿದ್ದಾಳೆ" ಎಂದು. ಇನ್ನೊಂದು ಗುಂಪಿನವರು ಹೇಳುತ್ತಿದ್ದರು: "ಇಲ್ಲ, ಇಲ್ಲ; ಈ ಕಾಯಿಲೆಯನ್ನು ಶ್ರೀರಾಮಕೃಷ್ಣರು ತಾವೇ ತಂದುಕೊಂಡಿದ್ದಾರೆ. ಅವರ ಪ್ರತಿಯೊಂದು ಕ್ರಿಯೆಯೂ ಜನತೆಯ ಹಿತಕ್ಕಾಗಿಯೇ. ಆದ್ದರಿಂದ ಇದನ್ನೂ ಅವರು ತಮ್ಮ ಮೇಲೆ ತಾವೇ ತಂದುಕೊಂಡಿದ್ದಾರೆ, ಅಷ್ಟೆ.' ಆದರೆ ಮೂರನೆಯ ಗುಂಪಿನವರು ಬೇರೆಯೇ ರೀತಿಯಲ್ಲಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಿದ್ದರು—ಏನೆಂದರೆ, ಜನ್ಮ-ಜರಾ-ರೋಗಗಳು ಮನುಷ್ಯಶರೀರಕ್ಕೆ ಸಹಜವಾಗಿಯೇ ಸಂಭವಿಸುವಂಥವುಗಳು; ಇವಕ್ಕೆಲ್ಲ ಅತೀಂದ್ರಿಯವಾದ ಕಾರಣಗಳನ್ನು ಹುಡುಕುವುದಾಗಲಿ, ದೈವಿಕ ಕಾರಣವನ್ನು ಕೊಡುವುದಾಗಲಿ ಅನಗತ್ಯ ಎಂದು. ಈ ರೀತಿಯಾಗಿ ಚಿಂತಿಸಿದವರು ಸುಶಿಕ್ಷಿತರಾದ ಯುವಕಶಿಷ್ಯರು. ಆದರೆ ಅವರು ಈ ಕಾಯಿಲೆ ಮಾನವಸಹಜವಾದದ್ದೆಂದು ನಂಬಿದ್ದರೂ, ಗುರುಮಹಿಮೆಯಲ್ಲಿ ಕಿಂಚಿತ್ತೂ ಅವಿಶ್ವಾಸ ತಾಳದೆ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿ, ಶ್ರೀರಾಮಕೃಷ್ಣರ ಸೇವೆ ಮಾಡಲು ಟೊಂಕ ಕಟ್ಟಿ ನಿಂತಿದ್ದರು. ಹೀಗೆ ಗುರುಸೇವೆಯ ಮೂಲಕವೇ ಭಗವತ್ಸಾಕ್ಷಾತ್ಕಾರವೆಂಬ ಆದರ್ಶವನ್ನು ಸಿದ್ಧಿಸಿಕೊಳ್ಳುವ ಸಂಕಲ್ಪ ಮಾಡಿದ್ದರು. ಇವರಿಗೆಲ್ಲ ನರೇಂದ್ರನೇ ನಾಯಕನೆಂದು ಹೇಳಬೇಕಾಗಿಯೇ ಇಲ್ಲ. ಹೀಗೆ ಈ ಮೂರು ವರ್ಗದ ಭಕ್ತರು ಶ್ರೀರಾಮಕೃಷ್ಣರನ್ನು 'ಭಗವದವತಾರ', 'ಅತಿಮಾನವ' ಮತ್ತು 'ದೇವತಾಮನುಷ್ಯ' ಎಂದು ಬೇರೆಬೇರೆಯಾಗಿ ಪರಿಭಾವಿಸುತ್ತಿದ್ದರಾದರೂ,

ಇವರೆಲ್ಲರಿಗೂ ಒಂದು ವಿಷಯವಂತೂ ಸ್ಪಷ್ಟವಾಗಿತ್ತು. ಅದೇನೆಂದರೆ, ಶ್ರೀರಾಮಕೃಷ್ಣರ ಬೋಧನೆಯನ್ನು ಪರಿಪಾಲಿಸುತ್ತ, ಅವರು ತೋರಿಸಿಕೊಟ್ಟ ಆದರ್ಶಗಳನ್ನು ಅನುಷ್ಠಾನ ಮಾಡುತ್ತ, ಅವರಿಗೆ ಸೇವೆ ಸಲ್ಲಿಸುತ್ತಿದ್ದರೆ ತಾವು ತಮ್ಮ ಗುರಿ ಸೇರುವುದರಲ್ಲಿ ಸಂದೇಹವೇ ಇಲ್ಲ, ಎಂದು.

ಹೆಚ್ಚಿನ ಸಂಖ್ಯೆಯ ಭಕ್ತರು ಶ್ರೀರಾಮಕೃಷ್ಣರನ್ನು ಅವತಾರವೆಂದು ಕರೆಯುತ್ತಿದ್ದರೂ, ಅವರು ಅವತಾರಪುರುಷರೋ ಅಲ್ಲವೋ ಎಂಬುದು ತಮ್ಮ ತಿಳಿವಳಿಕೆಗೆ ಎಟುಕದ ವಿಷಯ ಎಂಬುದು ನರೇಂದ್ರನ ಅಭಿಮತ. ಆದರೆ ಅವನು ಆ ವಿಚಾರದಲ್ಲಿ ಹಟವಾದಿಯಲ್ಲ. ಸಾಮಾನ್ಯ ಮರ್ತ್ಯನಂತೆ ಕಣ್ಣೆದುರಿನಲ್ಲೇ ಕಾಯಿಲೆಯಿಂದ ನರಳುತ್ತ ಮಲಗಿರುವ ಶ್ರೀರಾಮಕೃಷ್ಣರು ಮರುಕ್ಷಣದಲ್ಲೇ ದೈವೀಪುರುಷನಾಗಿ ವ್ಯಕ್ತರಾಗ ಬಲ್ಲರು ಎಂಬುದನ್ನು ಅವನು ಒಪ್ಪಲೇಬೇಕಾಗಿತ್ತು. ಅವರ ವ್ಯಕ್ತಿತ್ವದಲ್ಲಿ ಮಾನವತ್ವ-ದೈವತ್ವಗಳನ್ನು ವಿಂಗಡಿಸಲೇ ಸಾಧ್ಯವಿಲ್ಲದಂತಹ ಸ್ಥಿತಿಯೊಂದನ್ನು ಅವನು ಕಾಣಲಾರಂಭಿಸಿದ್ದ. ನಿಯತ ಸಾಧನೆಯ ಮೂಲಕ ನಮ್ಮನಮ್ಮ ವ್ಯಕ್ತಿತ್ವದ ಸಂಕುಚಿತತೆಯಿಂದ ಪಾರಾಗಿ ಅನಂತತೆಯ ಅನುಭವ ಮಾಡಿಕೊಳ್ಳುವುದೇ 'ಧರ್ಮ' ಎಂಬುದರ ನಿಜವಾದ ಅರ್ಥ: ಇದನ್ನು ಅವನು ಶ್ರೀರಾಮಕೃಷ್ಣರ ಜೀವನದಲ್ಲಿ ಪ್ರತಿದಿನವೆಂಬಂತೆ ಕಾಣತೊಡಗಿದ್ದ. ಹೀಗೆ ಅವರ ಸಾನ್ನಿಧ್ಯದಲ್ಲಿರುತ್ತ ಸಕಲ ವೇದೋಪನಿಷತ್ತುಗಳ ಸಾರವನ್ನೇ ಅವರಲ್ಲಿ ಕಂಡುಕೊಂಡ.

ಆದರೆ ಅವನು ಶ್ರೀರಾಮಕೃಷ್ಣರನ್ನು 'ಅವತಾರ'ವೆಂದೂ ಸಾರಲಿಲ್ಲ, 'ಸಾಮಾನ್ಯ ಮಾನವ'ನೆಂದೂ ಕರೆಯಲಿಲ್ಲ. ಒಮ್ಮೆ ಡಾ॥ ಸರ್ಕಾರ್ ಈ ವಿಷಯದ ಪ್ರಸ್ತಾಪವೆತ್ತಿದಾಗ ಅವನೆನ್ನುತ್ತಾನೆ: "ನಾವು ಶ್ರೀರಾಮಕೃಷ್ಣರನ್ನು 'ಭಗವತ್ಸದೃಶ ವ್ಯಕ್ತಿ' ಎಂದು ಭಾವಿಸುತ್ತೇವೆ. ಇದು ಹೇಗೆಂದರೆ ಸಸ್ಯವಲಯಕ್ಕೂ ಪ್ರಾಣಿವಲಯಕ್ಕೂ ಮಧ್ಯೆ ಒಂದು ಸ್ಥಿತಿ ಇದೆ. ಈ ಮಧ್ಯಂತರ ಸ್ಥಿತಿಯಲ್ಲಿರುವ ಜೀವಿಗಳನ್ನು ಸಸ್ಯವರ್ಗಕ್ಕೆ ಸೇರಿಸಬೇಕೆ ಅಥವಾ ಪ್ರಾಣಿವರ್ಗಕ್ಕೆ ಸೇರಿಸಬೇಕೆ ಎಂಬುದನ್ನು ನಿರ್ಧರಿಸುವುದು ಕಷ್ಟ. ಅದೇ ತರಹ ಮಾನವಪ್ರಪಂಚಕ್ಕೂ ದೈವಪ್ರಪಂಚಕ್ಕೂ ಮಧ್ಯೆ ಒಂದು ಸ್ಥಿತಿಯಿದೆ. ಈ ಮಧ್ಯಂತರ ಸ್ಥಿತಿಯ ವ್ಯಕ್ತಿಯನ್ನು ಮನುಷ್ಯ ಎಂದು ತಿಳಿಯಬೇಕೆ ಅಥವಾ ದೇವರು ಎಂದು ತಿಳಿಯಬೇಕೆ ಅಂತ ನಿರ್ಧರಿಸುವುದು ಬಹಳ ಕಷ್ಟ. ಹಾಗಾಗಿ ನಾನು ಇವರನ್ನು ಭಗವಂತ ಅಂತ ಹೇಳಲಾರೆ. ಆದರೆ ಇವರು ದೇವರಂತಹ ಮನುಷ್ಯ. ಆದ್ದರಿಂದ ನಾವು ಇವರನ್ನು ಪೂಜಿಸುತ್ತಿದ್ದೇವೆ."

ಆದರೆ ಶ್ರೀರಾಮಕೃಷ್ಣರು ನಿಜಕ್ಕೂ ಯಾರು ಎಂಬುದನ್ನು ಅವನು ತಿಳಿಯುವ ಕಾಲ ಶೀಘ್ರದಲ್ಲೇ ಬರಲಿದೆ!

ತಮ್ಮ ಇಹಲೋಕಲೀಲೆಯ ಪರಿಸಮಾಪ್ತಿಯ ದಿನ ಬಹುಬೇಗ ಸಮೀಪಿಸುತ್ತಿದೆಯೆಂಬುದನ್ನು ಕಂಡು ಶ್ರೀರಾಮಕೃಷ್ಣರು ತಮ್ಮ ಶಿಷ್ಯರಲ್ಲಿ ಭಗವತ್ಸಾಕ್ಷಾತ್ಕಾರ ವ್ಯಾಕುಲತೆಯನ್ನು ಪ್ರಜ್ವಲಿಸುವಂತೆ ಮಾಡಲು ಇನ್ನಷ್ಟು ಕಾತರರಾಗಿದ್ದರು. 'ಈ ಜನ್ಮದಲ್ಲೇ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇನೆ' ಎನ್ನುವ ತೀವ್ರ ವ್ಯಾಕುಲತೆಯಿದ್ದರೆ ಮಾತ್ರ ಮನುಷ್ಯ ತನ್ನ ಸಾಧನೆಯನ್ನು ಅಷ್ಟೇ ತೀವ್ರಗೊಳಿಸುತ್ತಾನೆ. ಆದ್ದರಿಂದಲೇ ಶ್ರೀರಾಮಕೃಷ್ಣರ ಆ ಕಾತರ. ಕಾಮಕಾಂಚನಗಳ ಮೇಲಿನ ಮೋಹವನ್ನು ಸಂಪೂರ್ಣ ನಾಶಗೊಳಿಸಿದರೆ ಮಾತ್ರ ಸಾಕ್ಷಾತ್ಕಾರ ಸಾಧ್ಯ ಎಂಬ ಸತ್ಯವನ್ನು ಅವರು

ಮನಸ್ಸಿಗೆ ನಾಟುವಂತೆ ತಿಳಿಸುತ್ತಿದ್ದರು. ಶ್ಯಾಮಪುಕುರವಾಸದ ಈ ದಿನಗಳಲ್ಲಿ ಅವರ ಮಾತುಗಳೆಲ್ಲವೂ ವಿಶೇಷವಾಗಿ ವೈರಾಗ್ಯಪ್ರಚೋದಕವಾಗಿದ್ದುವು. ಅವರ ಅಕಳಂಕ ಜೀವನ, ಅವರ ಶಕ್ತಿಪೂರ್ಣವಾದ ಬೋಧನೆ, ಅವರು ಭಗವದ್ಭಾವದಲ್ಲಿ ಮುಳುಗೇಳುವ ಮತ್ತು ಸಹಜವಾಗಿ ಸಮಾಧಿಸ್ಥಿತಿಗೇರುವ ದೃಶ್ಯ—ಇವೆಲ್ಲವೂ ಉಜ್ವಲ ಜ್ಯೋತಿಯಂತೆ ಶಿಷ್ಯರ ಗಮನವನ್ನು ಭವ್ಯವಾದ ಆಧ್ಯಾತ್ಮಿಕ ಆದರ್ಶದೆಡೆಗೆ ಸೆಳೆಯುತ್ತಿದ್ದುವು. ನಾನಾ ಬಗೆಯ ತುಮುಲಗಳಲ್ಲಿ ಸಿಲುಕಿ ತೊಳಲುತ್ತಿದ್ದ ನರೇಂದ್ರನ ಮನಸ್ಸು ಕೂಡ ಈಗ ಶ್ರೀರಾಮಕೃಷ್ಣರ ವ್ಯಕ್ತಿತ್ವ-ಜೀವನ-ಬೋಧನೆಗಳಲ್ಲೇ ನೆಲೆನಿಲ್ಲುವಂತಾಯಿತು. ಅವರ ಬೋಧನೆಗಳು ಆತನ ಹೃದಯದಲ್ಲಿ ಆಳವಾಗಿ ಬೇರೂರಿ ಸ್ಥಿರವಾಗಿ ನಿಂತುವು.

ಶ್ರೀರಾಮಕೃಷ್ಣರ ಚಿಕಿತ್ಸೆಯನ್ನು ಕೈಗೊಂಡಿದ್ದ ಡಾ॥ ಸರ್ಕಾರ ಮಹಾ ಮೇಧಾವಿ, ವಿಚಾರವಂತ, ಸಹೃದಯಿ. ಶ್ರೀರಾಮಕೃಷ್ಣರನ್ನೂ ಅವರ ಭಕ್ತಗಣವನ್ನೂ ಇವನು ತನ್ನ ಸೂಕ್ಷ್ಮ ವಿಮರ್ಶಾದೃಷ್ಟಿಯಿಂದ ನೋಡುತ್ತ, ಅವರೆಲ್ಲರ ಬಗ್ಗೆ ತನ್ನ ಅನಿಸಿಕೆಗಳನ್ನು ನಿಶ್ಶಂಕೆಯಿಂದ ವ್ಯಕ್ತಪಡಿಸುತ್ತಿದ್ದ. ನರೇಂದ್ರನ ಪರಿಚಯವಾದ ಮೇಲೆ ಇಬ್ಬರ ನಡುವೆ ಆಗಾಗ ಅನೇಕ ವಿಷಯಗಳ ಬಗ್ಗೆ ಮಾತುಕತೆ ನಡೆಯಿತು. ನರೇಂದ್ರನ ಹರಿತ ಬುದ್ಧಿ, ಪ್ರಾಮಾಣಿಕತೆ ಮತ್ತು ಸಂಭಾಷಣಾ ಸಾಮರ್ಥ್ಯಗಳನ್ನು ಕಂಡ ಸರ್ಕಾರ ಬಹಳ ಸಂತೋಷಪಟ್ಟ. ಒಮ್ಮೆಯಂತೂ ಅವನ ಬಾಯಿಂದ ಹಾಡುಗಳನ್ನು ಕೇಳಿ ಆನಂದಾತಿಶಯದಿಂದ ಅವನನ್ನು ಆಲಿಂಗಿಸಿಕೊಂಡುಬಿಟ್ಟ. ಬಳಿಕ ಶ್ರೀರಾಮಕೃಷ್ಣರಿಗೆ ಹೇಳುತ್ತಾನೆ: "ನಿಮ್ಮ ಬಳಿಗೆ ಆಧ್ಯಾತ್ಮಿಕ ಶಿಕ್ಷಣ ಪಡೆಯಲು ಬರುತ್ತಿರುವವರು ಇವನಂತಹ ಯುವಕರು ಎಂಬುದನ್ನು ಕಂಡು ನನಗೆ ಬಹಳ ಸಂತೋಷವಾಗುತ್ತಿದೆ. ನರೇಂದ್ರ ಒಂದು ನಿಜವಾದ ರತ್ನ. ಅವನು ಜೀವನದ ಯಾವುದೇ ಕ್ಷೇತ್ರದಲ್ಲಿ ಕಾಲಿಟ್ಟರೂ ಅಲ್ಲಿ ಬೆಳಗಬಲ್ಲ." ಆಗ ಶ್ರೀರಾಮಕೃಷ್ಣರು ಮೆಚ್ಚುಗೆಯಿಂದ ನರೇಂದ್ರನನ್ನೇ ಈಕ್ಷಿಸುತ್ತ ಹೇಳುತ್ತಾರೆ: "ಅದ್ವೈತಗೋಸ್ವಾಮಿಯ ವ್ಯಾಕುಲ ಭಕ್ತಿಯ ಕರೆಗೆ ಓಗೊಟ್ಟು ಶ್ರೀಕೃಷ್ಣ ಚೈತನ್ಯನು ಅವತಾರ ತಾಳಿದ ಎನ್ನುವ ಮಾತಿದೆ. ಹಾಗೆಯೇ ನರೇಂದ್ರನಿಗಾಗಿ ಇಲ್ಲಿನ ಆವಿರ್ಭಾವ."

ಶ್ರೀರಾಮಕೃಷ್ಣರಾಡಿದ ಈ ಒಂದು ಪುಟ್ಟ ವಾಕ್ಯದ ಭಾವ ಅಗಾಧವಾಗಿದೆ. 'ನರೇಂದ್ರನಿಗಾಗಿ ಇಲ್ಲಿನ ಆವಿರ್ಭಾವ'! ಯಾರನ್ನು ಜಗತ್ತು ಇಂದು ದೇವಮಾನವನೆಂದು, ಅವತಾರವರಿಷ್ಠನೆಂದು ಸ್ತುತಿಸುತ್ತಿದೆಯೋ ಅಂತಹ ಶ್ರೀರಾಮಕೃಷ್ಣರು ಹೇಳುತ್ತಿದ್ದಾರೆ—ತಾವು ಈ ಅವತಾರವನ್ನು ತಾಳಲು ನರೇಂದ್ರನೇ ಕಾರಣ ಎಂದು. ತಮ್ಮ ಅವತಾರ ಕಾರ್ಯೋದ್ದೇಶ ಪೂರ್ಣವಾಗುವುದರಲ್ಲಿ ನರೇಂದ್ರನ ಮಹತ್ವದ ಪಾತ್ರವಿದೆ ಎಂಬುದನ್ನು ಈ ಮೂಲಕ ತಿಳಿಸಿಕೊಡುತ್ತಿದ್ದಾರೆ. ಇದು ಕೇವಲ ಹೊಗಳಿಕೆಯ ಮಾತಲ್ಲ. ಈ ಮಾತಿನ ಪೂರ್ಣ ಸತ್ಯವನ್ನು ಮುಂದೆ ನಾವು ನೋಡಲಿದ್ದೇವೆ.

ವಯಸ್ಸಿನಿಂದ ನರೇಂದ್ರ ಕಿರಿಯನಾದರೂ ತನ್ನ ಅಸಾಧಾರಣ ವಿವೇಚನಾ ಶಕ್ತಿಯಿಂದಲೂ, ಬುದ್ಧಿಮತ್ತೆಯಿಂದಲೂ ಉಳಿದೆಲ್ಲ ಶಿಷ್ಯರಿಗೆ ಹಾಗೂ ಭಕ್ತರಿಗೆ ಸಹಜವಾಗಿಯೇ ನಾಯಕನಾಗಿ, ಅವರಿಗೆ ಮಾರ್ಗದರ್ಶನ ನೀಡಲು ಸಮರ್ಥನಾಗಿದ್ದ. ಅಷ್ಟೇ ಅಲ್ಲದೆ, ಆವಶ್ಯಕತೆ ಕಂಡುಬಂದಾಗ ಅವರನ್ನು ತಿದ್ದಲು ಛೀಮಾರಿ ಹಾಕಿ ಬುದ್ಧಿ ಹೇಳುವ ಸಾಮರ್ಥ್ಯ-ಯೋಗ್ಯತೆ ಅವನಲ್ಲಿತ್ತು. ತನ್ನ ಆ ಸಾಮರ್ಥ್ಯವನ್ನು ಅವನು

ಪ್ರಯೋಗಿಸಬೇಕಾದ ಪ್ರಸಂಗವೊಂದು ಒದಗಿಬಂತು.

ಈ ನಡುವೆ ಭಕ್ತರೆಲ್ಲ ತುಂಬು ಉತ್ಸಾಹ ಶ್ರದ್ಧೆಗಳಿಂದ ಶ್ರೀರಾಮಕೃಷ್ಣರ ಸೇವೆಯಲ್ಲಿ ನಿರತರಾಗಿಬಿಟ್ಟಿದ್ದರು. ಅವರ ದಿವ್ಯ ಸಾನ್ನಿಧ್ಯದ ಪರಿಣಾಮವಾಗಿ ಭಕ್ತರ ಭಕ್ತಿ ಭಾವಾವೇಶ ವೃದ್ಧಿಯಾಗತೊಡಗಿತ್ತು. ಭಕ್ತಿ-ಶ್ರದ್ಧೆಗಳು ಒಳ್ಳೆಯವೇ; ಆದರೆ ಅದರ ಆವೇಶ ಎಂಬುದು ಭಕ್ತರನ್ನು ಅವರ ಅರಿವಿಗೇ ಬಾರದಂತೆ ಅಪಾಯದ ಹಾದಿಯಲ್ಲಿ ನಡೆಸಿಕೊಂಡು ಹೋಗುತ್ತಿತ್ತು. ಶ್ರೀರಾಮಕೃಷ್ಣರ ಸತ್ಸಹವಾಸದ ಸಹಾಯದಿಂದ ಬಹುಬೇಗ ಆಧ್ಯಾತ್ಮಿಕ ಉನ್ನತಿಯನ್ನು ಹೊಂದಬೇಕೆಂಬ ಆವೇಶ ಅವರಲ್ಲುಂಟಾಗಿಬಿಟ್ಟಿತ್ತು. ಆದರೆ ಈ ಉತ್ಸಾಹದ ಭರದಲ್ಲಿ ಅವರಿಗರಿವಿಲ್ಲದಂತೆಯೇ ಅವರಲ್ಲಿ ಭಾವಾವೇಗ ಹೆಚ್ಚುತ್ತಿತ್ತೇ ಹೊರತು ನಿಜವಾದ ಪ್ರಪತ್ತಿಯಾಗಲಿ ಆತ್ಮಸಂಯಮವಾಗಲಿ ಕಂಡುಬರುತ್ತಿರಲಿಲ್ಲ. ಆತ್ಮಸಂಯಮ ಮತ್ತು ಪ್ರೀತಿಪೂರ್ವಕ ಶರಣಾಗತಿ—ಇವೇ ಆಧ್ಯಾತ್ಮಿಕ ಜೀವನದ ಯಶಸ್ಸಿಗೆ ಪ್ರಬಲ ಅಡಿಗಲ್ಲುಗಳು. ಆದರೆ ಈ ಭಕ್ತರು ಭಕ್ತಿಯ ಹೆಸರಿನಲ್ಲಿ ಭಾವಾವೇಗಕ್ಕೆ ಬಲಿಯಾಗಲಾರಂಭಿಸಿದ್ದರು. ಆಧ್ಯಾತ್ಮಿಕ ಸಾಧನೆಯಲ್ಲಿ, ಅದರಲ್ಲೂ ಭಕ್ತಿಸಾಧನೆಯಲ್ಲಿ ಭಾವೋತ್ಕರ್ಷಕ್ಕೂ ಒಂದು ಸ್ಥಾನವಿದೆ, ಇಲ್ಲವೆಂದಲ್ಲ. ಆದರೆ ಈ ಭಾವಾವೇಗವನ್ನೇ ಪ್ರಧಾನವಾಗಿ ಮಾಡಿಕೊಂಡುಬಿಟ್ಟರೆ ಗುರಿ ತಪ್ಪುವುದೇ ಖಂಡಿತ. ಸಾಮಾನ್ಯವಾಗಿ ಸಾಧಕರೂ ಸಾಧಕರಲ್ಲದವರೂ ಈ ಬಗೆಯ ಭಾವಾವೇಗವನ್ನೇ ಆಧ್ಯಾತ್ಮಿಕತೆಯೆಂದು ಭ್ರಮಿಸುವ ಸಂಭವ ಹೆಚ್ಚು. ಸಾಮಾನ್ಯ ಜನರು, ಸಾಧನೆಗಿಳಿದಾಗಲೂ ಕೂಡ ಇಂದ್ರಿಯಗಳ ಬಯಕೆಗಳನ್ನು ನಿರೋಧಿಸಿ ಉದಾತ್ತೀಕರಿಸುವ ಕಷ್ಟವನ್ನು ಇಷ್ಟಪಡುವುದಿಲ್ಲ. ಅವರು ಇಂದ್ರಿಯಗಳ ಅಭಿಲಾಷೆಗೆ ಅನುಕೂಲಕರವಾದ ಮಾರ್ಗವನ್ನೇ ಬಯಸುತ್ತಾರೆ. ಆದ್ದರಿಂದ ಭಗವಂತ ಹಾಗೂ ಪ್ರಪಂಚ—ಇವೆರಡರ ನಡುವಿನ ಒಂದು ಮಾರ್ಗವನ್ನು ಕಂಡುಕೊಳ್ಳುತ್ತಾರೆ. ನಿಜವಾದ ತ್ಯಾಗಕ್ಕೆ ಅವರ ಮನಸ್ಸು ಒಪ್ಪದಿರುವುದರಿಂದ ಪ್ರಾಪಂಚಿಕ ಭೋಗ ಮತ್ತು ಆಧ್ಯಾತ್ಮಿಕ ಯೋಗಗಳ ಮಧ್ಯದ ಮಾರ್ಗವೊಂದು ಅವರಿಗೆ ಬೇಕು. ಈ ಭೋಗ-ಯೋಗಗಳ ನಡುವಿನ ಮಾರ್ಗವೇ ಭಾವಾವೇಗ! ಆದರೆ ಭಾವಾವೇಗದ ಆಧಿಕ್ಯದಿಂದ ಎಂತಹ ವಿಪರೀತ ಹಾಗೂ ವಿರುದ್ಧ ಪರಿಣಾಮವುಂಟಾದೀತೆಂಬ ಕಲ್ಪನೆಯೇ ಅವರಿಗಿರುವುದಿಲ್ಲ. ಈ ಭಾವಾವೇಗದ ಸಹಾಯದಿಂದ ಒಂದಿಷ್ಟು ತಾತ್ಕಾಲಿಕ ಸುಖ ಲಭಿಸಿದರೆ ಅಷ್ಟಕ್ಕೇ ತೃಪ್ತರಾಗಿಬಿಡುತ್ತಾರೆ. ಆದ್ದರಿಂದಲೇ ಶ್ರೀರಾಮಕೃಷ್ಣರು ತಮ್ಮ ಬಳಿಗೆ ಬರುತ್ತಿದ್ದ ಜಿಜ್ಞಾಸುಗಳನ್ನು, ಭಕ್ತರನ್ನು ಚೆನ್ನಾಗಿ ಪರೀಕ್ಷಿಸಿ ನೋಡುತ್ತಿದ್ದರು—'ಇವರೇನು ಅನುಕೂಲಕರ ವೇದಾಂತ ಬೇಕೆಂಬವರೋ ಅಥವಾ ಕಟ್ಟುನಿಟ್ಟಿನ ಸಾಧನೆ ಮಾಡಲು ಸಿದ್ಧರಾಗಿ ಬಂದವರೋ' ಎಂದು. ತಮ್ಮ ಪ್ರಾಪಂಚಿಕ ಭೋಗಕ್ಕೆ ಧಕ್ಕೆ ಬಾರದಂತೆ ಯೋಗವನ್ನು ಕಲಿಸಿಕೊಡಬೇಕು ಎಂದು ಬಯಸುವವರಾದರೆ, ಅಂಥವರಿಗೆ ಶ್ರೀರಾಮಕೃಷ್ಣರು ಸಂಪೂರ್ಣ ತ್ಯಾಗವನ್ನು ಬೋಧಿಸುತ್ತಿರಲಿಲ್ಲ. ಅವರಿಂದ ಆಧ್ಯಾತ್ಮಿಕ ಆದರ್ಶಗಳನ್ನು ಎಷ್ಟರಮಟ್ಟಿಗೆ ಗ್ರಹಿಸಿ ಪಾಲಿಸಿಕೊಂಡು ಬರಲು ಸಾಧ್ಯವೋ ಅಷ್ಟನ್ನು ಮಾತ್ರ ಬೋಧಿಸುತ್ತಿದ್ದರು. ಆದ್ದರಿಂದಲೇ ಶ್ರೀರಾಮಕೃಷ್ಣರು ಕಾಮಕಾಂಚನದಿಂದ ಕಲುಷಿತರಾಗದ ಯುವಕಶಿಷ್ಯರಿಗೆ ನೀಡುತ್ತಿದ್ದ ಬೋಧನೆಗಿಂತ ಗೃಹಸ್ಥರಿಗೆ ನೀಡುತ್ತಿದ್ದ ಬೋಧನೆ ಭಿನ್ನವಾಗಿರುತ್ತಿತ್ತು, ಇದಲ್ಲದೆ ಸಾಮಾನ್ಯವಾಗಿ ಎಲ್ಲರೂ ಅನುಸರಿಸಬಹುದಾದಂತಹ ಬೋಧನೆಗಳನ್ನೂ ನೀಡುತ್ತಿದ್ದರು. ಉದಾಹರಣೆಗೆ, ಅವರು ಕೆಲವೊಮ್ಮೆ

ಹೇಳುತ್ತಿದ್ದರು: "ಕಲಿಯುಗದಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳಲು ನಾಮಸಂಕೀರ್ತನೆಯೇ ಸುಲಭದ ದಾರಿ; ನಾರದೀಯ ಭಕ್ತಿಮಾರ್ಗವೇ ಸುಲಭೋಪಾಯ" ಎಂದು. ಈ ಪ್ರಾತಿನ ಸಂಪೂರ್ಣ ಅರ್ಥ-ಮಹತ್ವ ಹೆಚ್ಚಿನ ಭಕ್ತರಿಗೆ ತಿಳಿಯಲಿಲ್ಲವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ನಾರದೀಯ ಭಕ್ತಿಮಾರ್ಗವು ಬೋಧಿಸುವುದಾದರೂ ಭಗವತ್ಪ್ರೇಮದ ಮೂಲಕ ಸಂಪೂರ್ಣ ತ್ಯಾಗವನ್ನೇ. ನಾರದೀಯ ಭಕ್ತಿಮಾರ್ಗದ ಪ್ರಕಾರ, ಎಂತಹ ಭೋಗಿಗಳೇ ಆದರೂ ಭಗವನ್ನಾಮ ಸಂಕೀರ್ತನೆಯ ಮೂಲಕ ಕೊನೆಗೊಂದು ದಿನ ತ್ಯಾಗದ ಆದರ್ಶವನ್ನೇ ಮುಟ್ಟುತ್ತಾರೆ. ನಾಮಸಂಕೀರ್ತನೆ ಮಾಡುತ್ತ ಹೋದಂತೆ ಭಗವಂತನಲ್ಲಿ ಅನುರಕ್ತಿಯುಂಟಾಗುತ್ತದೆ. ಭಗವಂತನಲ್ಲಿ ಅನುರಕ್ತಿಯುಂಟಾದಂತೆಲ್ಲ ಪ್ರಾಪಂಚಿಕ ಭೋಗಗಳಲ್ಲಿ ವಿರಕ್ತಿಯುಂಟಾಗುತ್ತದೆ. ಆದ್ದರಿಂದ ನಾರದೀಯ ಭಕ್ತಿಮಾರ್ಗದಲ್ಲಿ ಪರ್ಯಾಯವಾಗಿ ತ್ಯಾಗವೈರಾಗ್ಯಗಳನ್ನೇ ಬೋಧಿಸಲಾಗಿದೆ.

ಈ ಭಕ್ತರು ಭಾವಾವೇಗದ ಆಕರ್ಷಣೆಗೆ ಬಲಿಯಾಗಲು ಇನ್ನೊಂದು ಕಾರಣವೂ ಇತ್ತು. ಇವರೆಲ್ಲ ಶ್ರೀರಾಮಕೃಷ್ಣರು ಭಾವಾವೇಶಭರಿತರಾಗಿ ನರ್ತಿಸುವುದನ್ನು ಕಂಡವರು; ಭಗವನ್ನಾಮ ಸಂಕೀರ್ತನೆಯನ್ನು ಕೇಳಿ ಕಣ್ಣೀರು ಸುರಿಸುವುದನ್ನು ಕಂಡವರು; ಅವರು ಆನಂದಭರಿತರಾಗಿ ನಗುವುದನ್ನು, ಸಮಾಧಿಗೇರುವುದನ್ನು ದಿನನಿತ್ಯವೆಂಬಂತೆ ಕಂಡವರು. ಆದರೆ ಶ್ರೀರಾಮಕೃಷ್ಣರ ತಪೋಮಯ ಜೀವನವನ್ನು ಸಮಗ್ರವಾಗಿ ಕಂಡವರಲ್ಲ, ಕಾಣುವ ಯತ್ನವನ್ನೂ ಮಾಡಿದವರಲ್ಲ. ಅವರ ಭಾವಾವೇಶವೆಂಬುದು ಇತರರ ಅಗ್ಗದ ಭಾವಾವೇಶದಂತಲ್ಲ, ಅದರ ಹಿನ್ನೆಲೆಯಲ್ಲಿ ಅದ್ಭುತ ತಪಸ್ಸು ಇತ್ತು, ಮಹಾ ತ್ಯಾಗವಿತ್ತು ಎಂಬುದು ಇವರಿಗೆ ತಿಳಿಯದು. ಆದರೆ ಶ್ರೀರಾಮಕೃಷ್ಣರು ನರ್ತಿಸುವುದನ್ನು ನೋಡಿ ತಾವೂ ನರ್ತಿಸಲಾರಂಭಿಸಿದರು; ಅವರು ಕಣ್ಣೀರು ಸುರಿಸುವುದನ್ನು ನೋಡಿ ತಾವೂ ಕಣ್ಣೀರು ಸುರಿಸಲಾರಂಭಿಸಿದರು; ಅವರು ನಗುವುದನ್ನು ನೋಡಿ ತಾವೂ ನಗಲಾರಭಿಸಿದರು. ಆದರೆ ಇವರು ಅವರಂತೆ ಆಧ್ಯಾತ್ಮಿಕ ಜೀವನದ ಅಂತಿಮಾವಸ್ಥೆಯಾದ ಸಮಾಧಿಸ್ಥಿತಿಯನ್ನು ಮುಟ್ಟಬಲ್ಲರೆ! ಅದಕ್ಕೆ ವರ್ಷಾಂತರಗಳ, ಜನ್ಮಾಂತರಗಳ ತಪಸ್ಸು ಬೇಕು, ಶಿಸ್ತುಬದ್ಧ ಸಾಧನೆ ಬೇಕು. ಆದರೆ ಈ ಭಕ್ತರ ಹತ್ತಿರ ಇದ್ದುದೆಲ್ಲ ಬರಿಯ ಭಾವಾವೇಗ!

ಈ ಮಧ್ಯೆ, ಪರಮಭಕ್ತನಾದ ಗಿರೀಶಚಂದ್ರ ಘೋಷ್ ಶ್ರೀರಾಮಕೃಷ್ಣರನ್ನು ಭಗವಂತನ ಅವತಾರ ಎಂದು ಘಟಾಘೋಷವಾಗಿ ಸಾರಲಾರಂಭಿಸಿದ. ಅಲ್ಲದೆ ಇತರರನ್ನೂ ತನ್ನ ನಂಬಿಕೆಯಲ್ಲಿ ಸಹಭಾಗಿಗಳಾಗುವಂತೆ ಪ್ರಚೋದಿಸಿದ. ಇದರಿಂದ ಭಕ್ತಾದಿಗಳಲ್ಲಿ ಒಂದು ಹೊಸ ಆವೇಶವುಂಟಾಯಿತು. ಗಿರೀಶನಂತಹ ಮಹಾಭಕ್ತನೇ ಹೇಳುತ್ತಿರುವಾಗ ಇನ್ನೇನು ಎಂದು ತಾವೂ ಅಹುದಹುದೆಂದು ತಲೆದೂಗಿದರು. ಆದರೆ ಗಿರೀಶನ ವಿಷಯವೇ ಬೇರೆ. ಅವನ ಶ್ರದ್ಧೆಯ ಮಟ್ಟವೇ ಬೇರೆ. ಭಕ್ತರನೇಕರಲ್ಲಿ ಅವನಲ್ಲಿದ್ದಂತಹ ಪ್ರಾಮಾಣಿಕ ಶ್ರದ್ಧೆಯಿರಲಿಲ್ಲ. ಆದರೆ ಅವನಂತೆಯೇ ತಾವೂ ಶ್ರೀರಾಮಕೃಷ್ಣರಿಗೆ ತಮ್ಮ ಆಧ್ಯಾತ್ಮಿಕ ಜೀವನದ ವಕಾಲತ್ತನ್ನು ವಹಿಸಿಬಿಟ್ಟಿರುವುದಾಗಿಯೂ, ಆದ್ದರಿಂದ ತಾವಿನ್ನು ಯಾವ ಸಾಧನೆಯನ್ನು ಮಾಡಬೇಕಾಗಿಲ್ಲ ಎಂಬುದೂ ಹೇಳಿಕೊಂಡು ತಿರುಗಲಾರಂಭಿಸಿದರು.

ಇದೆಲ್ಲದರ ಜೊತೆಗೆ ಬ್ರಾಹ್ಮಸಮಾಜದ ಮುಖಂಡರಲ್ಲೊಬ್ಬನಾದ ವಿಜಯಕೃಷ್ಣ

ಗೋಸ್ವಾಮಿ ಶ್ರೀರಾಮಕೃಷ್ಣರ ಕುರಿತಾಗಿ ವ್ಯಕ್ತಪಡಿಸಿದ ಅಭಿಪ್ರಾಯದಿಂದಾಗಿ ಭಕ್ತಜನರಲ್ಲಿ ಒಂದು ಕೋಲಾಹಲವೇ ಎದ್ದಿತು. ಈತ ಅನೇಕ ವರ್ಷಗಳಿಂದಲೂ ಅವರ ವಿಶ್ವಾಸಿಗನಾಗಿದ್ದವನೇ. ಆದರೆ ಈಗ ಅವನಿಗೆ ಅವರ ವಿಚಾರದಲ್ಲಿದ್ದ ಭಕ್ತಿ-ಗೌರವ ಇದ್ದಕ್ಕಿದ್ದಂತೆ ತೀವ್ರವಾಗತೊಡಗಿತ್ತು. ಇದಕ್ಕೆ ಮುಖ್ಯ ಕಾರಣ ಆತ ದರ್ಶನವೊಂದರಲ್ಲಿ ಅವರನ್ನು ಕಂಡದ್ದು. ಆತ ಶ್ರೀರಾಮಕೃಷ್ಣರ ಬಳಿಗೆ ಬಂದು ತನ್ನ ದರ್ಶನಾನುಭವವನ್ನು ಬಣ್ಣಿಸಿ, "ನೀವು ನಿಜಕ್ಕೂ ಆಧ್ಯಾತ್ಮಿಕತೆಯ ತುದಿಗೇರಿದರು ಎಂದು ನನಗೆ ಭರವಸೆಯುಂಟಾಗಿದೆ. ನಾನು ಕಂಡಿರುವ ಯಾವ ಸಾಧು-ಸಂತರೂ ನಿಮ್ಮ ಮಟ್ಟಕ್ಕೆ ಬರಲಾರರು. ಆದರೆ ನಿಮ್ಮ ನಿಜಸ್ವರೂಪವನ್ನು ಜನಗಳು ಅರಿತುಕೊಂಡಿಲ್ಲ, ಅಷ್ಟೇ" ಎಂದು ನುಡಿದ. ಸ್ವತಃ ಶ್ರೀರಾಮಕೃಷ್ಣರು ಅವನ ಮಾತನ್ನು ಸಮರ್ಥಿಸಲಿಲ್ಲವಾದರೂ ಭಕ್ತರಿಗೆಲ್ಲ ಅದು ಸಂಪೂರ್ಣ ಸಮ್ಮತವಾಯಿತು.

ಹೀಗೆ ಶ್ರೀರಾಮಕೃಷ್ಣರು ಅವತಾರಪುರುಷರೆಂಬ ನಂಬಿಕೆ ಬಹುಬೇಗ ಹರಡಿತು. ಕೆಲವರಂತೂ ಶ್ರೀರಾಮಕೃಷ್ಣರು ತಮ್ಮ ಅಲೌಕಿಕ ಶಕ್ತಿಯನ್ನು ವ್ಯಕ್ತಪಡಿಸುವ ಪವಾಡವನ್ನೇನಾದರೂ ಎಸಗಬಹುದೆಂಬ ನಿರೀಕ್ಷೆಯಲ್ಲೇ ಸದಾ ಇರತೊಡಗಿದರು. ಇನ್ನು ಕೆಲವರು ಭಗವತ್ಸಂಬಂಧವಾದ ಹಾಡುಗಳನ್ನು, ಮಾತುಗಳನ್ನು ಕೇಳಿದೊಡನೆ ಭಾವಾವೇಶಭರಿತರಾಗಿ ಅರೆಪ್ರಜ್ಞಾವಸ್ಥೆಯನ್ನು ತಾಳಲಾರಂಭಿಸಿದರು.

ನರೇಂದ್ರ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಭಕ್ತರೆಲ್ಲ ಆತ್ಮಸಂಯಮಪೂರ್ಣವಾದ ಸಾಧನೆಯನ್ನು ಬದಿಗೊತ್ತಿ ಕೇವಲ ಭಾವಾವೇಗಕ್ಕೆ ಬಲಿಯಾಗುತ್ತಿರುವುದರ ಅಪಾಯವನ್ನು ಅವನು ನಿಚ್ಚಳವಾಗಿ ಕಂಡ. ತಾನೀಗ ಪರಿಸ್ಥಿತಿಯನ್ನು ಕೈಗೆತ್ತಿಕೊಳ್ಳದಿದ್ದರೆ ಇದೆಲ್ಲ ವಿಕೋಪಕ್ಕೆ ಹೋಗಬಹುದು ಎಂದು ಊಹಿಸಿದ. ಹಿರಿಯರನ್ನು ತಿದ್ದುವುದು ಕಷ್ಟಸಾಧ್ಯವಾದ್ದರಿಂದ ಯುವಕರನ್ನಾದರೂ ಈ ಅಪಾಯದಿಂದ ಪಾರುಮಾಡಬೇಕು ಎಂದು ಆಲೋಚಿಸಿ ತನ್ನ ಯುವಮಿತ್ರರಿಗೆ ಎಚ್ಚರಿಕೆ ಹೇಳಿದ:

"ನೋಡಿ, ನಮ್ಮ ವ್ಯಕ್ತಿತ್ವದಲ್ಲಿ ಸತ್‌ಪರಿವರ್ತನೆಯನ್ನು ಉಂಟುಮಾಡಲಾಗದ ಈ ಕೇವಲ ಭಾವಾವೇಗದಿಂದ ಏನೂ ಪ್ರಯೋಜನವಿಲ್ಲ. ಮನುಷ್ಯನು ಭಾವಾವೇಗ ಕೆರಳಿದ ಕ್ಷಣದಲ್ಲಿ ಸಾಕ್ಷಾತ್ಕಾರಕ್ಕಾಗಿ ವ್ಯಾಕುಲತೆಯನ್ನು ವ್ಯಕ್ತಪಡಿಸಬಹುದು. ಆದರೆ, ಕಾಮಕಾಂಚನಾಸಕ್ತಿಯಿಂದ ಬಿಡುಗಡೆ ಹೊಂದಬಲ್ಲ ಸಾಮರ್ಥ್ಯವನ್ನು ತಂದುಕೊಡದಿದ್ದರೆ ಅದರಲ್ಲಿ ಏನೇನೂ ಸತ್ತ್ವವಿಲ್ಲ ಎಂಬುದನ್ನು ತಿಳಿದುಕೊಳ್ಳಿ. ಆದ್ದರಿಂದ ಇಂತಹ ಭಾವಾವೇಗದಿಂದ ಆಧ್ಯಾತ್ಮಿಕ ಜೀವನಕ್ಕೆ ಯಾವ ಸಹಾಯವೂ ಇಲ್ಲ, ಪ್ರಯೋಜನವೂ ಇಲ್ಲ. ಈ ಭಾವಾವೇಗದ ಪರಿಣಾಮವಾಗಿ ಕೆಲವರಿಗೆ ಕಣ್ಣೀರು ಸುರಿಯಬಹುದು; ರೋಮಾಂಚನದ ಅನುಭವವಾಗಬಹುದು; ಅಥವಾ ತಾತ್ಕಾಲಿಕವಾಗಿ ಶರೀರಪ್ರಜ್ಞೆ ಕೂಡ ತಪ್ಪಬಹುದು. ಆದರೆ, ನಾನು ಸ್ಪಷ್ಟವಾಗಿ ಹೇಳುತ್ತೇನೆ ಕೇಳಿ, ಇದೆಲ್ಲ ಕೇವಲ ನರದೌರ್ಬಲ್ಯದ ಲಕ್ಷಣಗಳೇ ಹೊರತು ನಿಜವಾದ ಆಧ್ಯಾತ್ಮಿಕ ಅನುಭವಗಳಲ್ಲವೇ ಅಲ್ಲ. ಮತ್ತು ಇವು ಕೇವಲ ಕೃತಕ, ಅಸಹಜ. ಒಂದು ವೇಳೆ ಮನುಷ್ಯನಿಗೆ ತನ್ನ ಭಾವೋದ್ರೇಕವನ್ನು ಹತೋಟಿಯಲ್ಲಿಡಲು ಸಾಧ್ಯವಾಗದೆ ಹೋದರೆ ಅವನು ನಿಸ್ಸಂಕೋಚವಾಗಿ ವೈದ್ಯರ ಸಲಹೆ ಪಡೆಯಬೇಕು, ಪೌಷ್ಟಿಕ ಆಹಾರವನ್ನು ಸೇವಿಸಿ ಶರೀರವನ್ನು ಬಲಪಡಿಸಿಕೊಳ್ಳಬೇಕು. ನಮ್ಮ ಮನಸ್ಸಿನ ಮೇಲೆ ನಮಗೆ

ಒಂದು ಬಲವಾದ ಹತೋಟಿ ಸಿಕ್ಕಾಗ ಮಾತ್ರ ನಮ್ಮಲ್ಲಿ ಉದಿಸುವ ಭಾವಗಳು ಪ್ರಾಮಾಣಿಕವಾದವುಗಳು ಎನ್ನಬಹುದು, ಅವುಗಳಲ್ಲಿ ಸತ್ತ್ವವಿದೆ ಎನ್ನಬಹುದು. ಎಲ್ಲೋ ಕೆಲವು ವ್ಯಕ್ತಿಗಳಲ್ಲಿ ಮಾತ್ರ ಅವರ ಪ್ರಬಲವಾದ ಆಧ್ಯಾತ್ಮಿಕ ಭಾವಲಹರಿಯು ಅವರೆಷ್ಟೇ ತಡೆಹಿಡಿದರೂ ಕೂಡ ಹೊರಹೊಮ್ಮಿ ಬಂದೀತು. ಆಗ ಅವರಲ್ಲಿ ರೋಮಾಂಚ, ಆನಂದಬಾಷ್ಪ, ಭಾವಪರವಶತೆ—ಇವುಗಳನ್ನೆಲ್ಲ ಕಾಣಬಹುದು, ತಾತ್ಕಾಲಿಕವಾಗಿ ಬಾಹ್ಯಪ್ರಜ್ಞೆ ತಪ್ಪುವುದನ್ನೂ ಕಾಣಬಹುದು. ಆದರೆ ಅಲ್ಪಬುದ್ಧಿಯ ಸಾಮಾನ್ಯ ಜನ ಇದನ್ನೇ ವಿಪರೀತವಾಗಿ ಅರ್ಥಮಾಡಿಕೊಂಡು, ಹೀಗೆಲ್ಲ ಆದರೆ ಮಾತ್ರವೇ ಅದು ಉನ್ನತ ಆಧ್ಯಾತ್ಮಿಕ ಸ್ಥಿತಿ ಎಂದು ಭಾವಿಸುತ್ತಾರೆ. ಮತ್ತು ತಾವೂ ಅಂಥ ಲಕ್ಷಣಗಳನ್ನೆಲ್ಲ ತೋರಿಸಲು ತೊಡಗುತ್ತಾರೆ. ತಮ್ಮಲ್ಲಿ ಆಧ್ಯಾತ್ಮಿಕ ಉನ್ನತಿ ಆಗಿರುವುದನ್ನು ಇತರರು ತಿಳಿದುಕೊಳ್ಳಬೇಕು ಎನ್ನುವುದೇ ಅವರ ಉದ್ದೇಶ. ಕಾಲ ಕ್ರಮದಲ್ಲಿ ಅವರಿಗೆ ಈ ವರ್ತನೆಗಳೆಲ್ಲ ಒಗ್ಗಿಹೋಗುತ್ತದೆ; ಇದರ ಪರಿಣಾಮವಾಗಿ ಅವರ ನರಮಂಡಲ ದುರ್ಬಲಗೊಂಡು ಸ್ವಲ್ಪ ಭಾವಪ್ರಚೋದನೆಯಾದರೂ ಸಾಕು—ತನ್ನಷ್ಟಕ್ಕೇ ಕಣ್ಣಲ್ಲಿ ನೀರು ಬಂದುಬಿಡುತ್ತದೆ, ರೋಮಾಂಚನವಾಗಿಬಿಡುತ್ತದೆ! ಕ್ರಮೇಣ ಅವರು ಇನ್ನಷ್ಟು ದುರ್ಬಲರಾಗಿ ಬುದ್ಧಿಸ್ವಾಸ್ಥ್ಯವನ್ನು ಕಳೆದುಕೊಂಡು ನಿಷ್ಪ್ರಯೋಜಕರಾಗುತ್ತಾರೆ. ಹೀಗೆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನ ಮಾಡುವವ ರಲ್ಲಿ ನೂರಕ್ಕೆ ಎಂಬತ್ತು ಜನ ಬೂಟಾಟಿಕೆ ದಾಸಯ್ಯಗಳಾಗಿಬಿಡುತ್ತಾರೆ, ಹದಿನೈದು ಜನ ತಲೆಕೆಡಿಸಿಕೊಂಡು ಹುಚ್ಚರಾಗುತ್ತಾರೆ. ಇನ್ನುಳಿದ ಐದು ಜನ ಮಾತ್ರ ಸಾಕ್ಷಾತ್ಕಾರ ಮಾಡಿಕೊಂಡು ಕೃತಾರ್ಥರಾಗುತ್ತಾರೆ, ಆದ್ದರಿಂದ ಎಚ್ಚರಿಕೆಯಿರಲಿ!"

ಮೊದಮೊದಲು ಉಳಿದ ತರುಣ ಶಿಷ್ಯರು ನರೇಂದ್ರನ ಈ ಅಭಿಪ್ರಾಯಗಳನ್ನು ಒಪ್ಪಲಿಲ್ಲ. ಇದೆಲ್ಲ ಅವನ ಕಲ್ಪನೆಗಳು ಮಾತ್ರ ಎಂದುಕೊಂಡರು. ಆದರೆ ಕೆಲವು ಭಕ್ತರನ್ನು ಸೂಕ್ಷ್ಮವಾಗಿ ಗಮನಿಸಿ ನೋಡಿದಾಗ ಗುಟ್ಟೆಲ್ಲ ಹೊರಗೆ ಬಂತು! ಇವರುಗಳು ಕಣ್ಣಲ್ಲಿ ನೀರು ಸುರಿಸುವುದನ್ನು, ಭಾವಪರವಶರಾದಂತೆ ಬೀಳುವುದನ್ನು ಮನೆಯಲ್ಲಿ ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಬರುತ್ತಿದ್ದರು! ಇನ್ನು ಕೆಲವರು ಸುಮ್ಮನೆ ಇತರರನ್ನು ಅನುಕರಿಸುತ್ತಿದ್ದರು. ನರೇಂದ್ರನ ಸಸ್ನೇಹ ಬುದ್ಧಿವಾದಕ್ಕೆ ಕಿವಿ ಗೊಟ್ಟು ಪೌಷ್ಟಿಕ ಆಹಾರವನ್ನು ಸೇವಿಸಿ, ಆತ್ಮಸಂಯಮವನ್ನು ಅಭ್ಯಾಸ ಮಾಡಿದಾಗ ಇವರಲ್ಲಿ ಒಂದಿಬ್ಬರ ಭಾವೋದ್ರೇಕವೆಲ್ಲ ಉಪಶಮನವಾದುದನ್ನು ಶಿಷ್ಯರು ಕಂಡರು. ಆದರೆ ಇನ್ನು ಕೆಲವರ ಬಳಿ ಈ ಉಪಾಯಗಳೂ ಫಲಿಸಲಿಲ್ಲ. ಅವರು ಭಾವೋದ್ರೇಕದ ಪ್ರದರ್ಶನವನ್ನು ನಿಲ್ಲಿಸಲೇ ಇಲ್ಲ. ಆಗ ನರೇಂದ್ರ ಅಂಥವರನ್ನು ಸ್ವಲ್ಪ ರೇಗಿಸುವುದರ ಮೂಲಕ ಸರಿದಾರಿಗೆ ತರಲು ಪ್ರಯತ್ನಿಸಿದ. ಈ ಸೋಗುಗಾರಿಕೆಯ ಬದಲಾಗಿ ತಮ್ಮ ಅಂತಶ್ಶಕ್ತಿಯನ್ನು ಬೆಳೆಸಿಕೊಳ್ಳುವಂತೆ ಅವರಿಗೆ ಬೋಧಿಸಿದ. ಆ ಯುವಕರನ್ನೆಲ್ಲ ಸೇರಿಸಿ ಜ್ಞಾನ-ಭಕ್ತಿ-ವಿವೇಕ-ವೈರಾಗ್ಯಪರವಾದ ಹಾಡುಗಳನ್ನು ಹೇಳಿಸುತ್ತಿದ್ದ. ತನ್ಮೂಲಕ ಅವ ರಲ್ಲಿ ಧ್ಯಾನ ಜಪ ತಪಗಳ ಆದರ್ಶಗಳನ್ನು ಜ್ವಲಂತಗೊಳಿಸಿದ. ಪ್ರಾಪಂಚಿಕ ಭೋಗಗಳ ವಿಚಾರದಲ್ಲಿ ವೈರಾಗ್ಯ ತಾಳುವಂತೆ ಪ್ರಚೋದಿಸಿದ. ಕೆಲವೊಮ್ಮೆ ಶ್ರೀರಾಮಕೃಷ್ಣರ ಅದ್ಭುತ ಭಕ್ತಿಯ ದ್ಯೋತಕವಾದ ಅವರ ಜೀವನದ ಘಟನೆಗಳನ್ನು ಅತ್ಯಂತ ವರ್ಣಮಯವಾಗಿ, ಮನನಾಟುವಂತೆ ಚಿತ್ರಿಸುತ್ತಿದ್ದ. ಅವರ ದಿವ್ಯತೆಯನ್ನು ಅವನು ವರ್ಣಿಸುವ ಕ್ರಮವನ್ನು ಕಂಡೇ ಅವನ ಸ್ನೇಹಿತರು ಬೆಕ್ಕಸ ಬೆರಗಾಗುತ್ತಿದ್ದರು. ಇನ್ನು

ಕೆಲವು ಬಾರಿ Imitation of Christ ಎಂಬ ಪುಸ್ತಕದ ಸಾಲುಗಳನ್ನು ಉದಾಹರಿಸಿ ಹೇಳುತ್ತಿದ್ದ, "ಯಾವನು ಭಗವಂತನನ್ನು ನಿಜವಾಗಿಯೂ ಪ್ರೀತಿಸುತ್ತಾನೆಯೋ ಅಂಥವನ ಜೀವನವೂ ಸ್ವಯಂ ಭಗವಂತನ ರೀತಿಯಲ್ಲಿಯೇ ರೂಪುಗೊಳ್ಳುತ್ತದೆ. ಎಂದರೆ, ಆ ದೈವೀ ಗುಣಗಳು ಅವನಲ್ಲೂ ಪ್ರಕಟಗೊಳ್ಳುತ್ತವೆ. ಆದ್ದರಿಂದ, ನಾವು ಶ್ರೀರಾಮಕೃಷ್ಣರನ್ನು ನಿಜವಾಗಿಯೂ ಪ್ರೀತಿಸುತ್ತೇವೆಯೋ ಇಲ್ಲವೋ ಎಂಬುದು ಈ ಒಂದು ಪರೀಕ್ಷೆಯಿಂದಲೇ ಗೊತ್ತಾಗಿಬಿಡುತ್ತದೆ. ನಮಗೆ ಅವರಲ್ಲಿ ನಿಜವಾದ ಭಕ್ತಿ-ಪ್ರೀತಿ ಇರುವುದಾದಲ್ಲಿ, ನಾವು ಅವರನ್ನು ಸುಮ್ಮನೆ ಸ್ತುತಿಸಿದರೆ ಆಗಲಿಲ್ಲ; ಬದಲಾಗಿ ಅವರ ಆ ಪರಮಾದ್ಭುತ ಗುಣವಿಶೇಷಗಳನ್ನು ನಾವೂ ಕಿಂಚಿತ್ತಾದರೂ ಅಳವಡಿಸಿ ಕೊಂಡು ತೋರಿಸಬೇಕು." ಮತ್ತು, ಶ್ರೀರಾಮಕೃಷ್ಣರು ಆಗಾಗ ಹೇಳುತ್ತಿದ್ದ ಈ ಅರ್ಥಗರ್ಭಿತ ಮಾತನ್ನು ನೆನಪಿಸಿಕೊಡುತ್ತಿದ್ದ: "ಮೊತ್ತಮೊದಲು ಅದ್ವೈತಜ್ಞಾನವನ್ನು ನಿಮ್ಮ ಬಟ್ಟೆಯ ತುದಿಗೆ ಗಂಟುಕಟ್ಟಿಕೊಳ್ಳಿ; ಅನಂತರ ನಿಮಗೆ ಇಷ್ಟಬಂದಂತೆ ಮಾಡಿ." ಶ್ರೀರಾಮಕೃಷ್ಣರ ಭಾವಸಮಾಧಿಯ ಹಿನ್ನೆಲೆಯಲ್ಲಿ ಈ ಅದ್ವೈತಜ್ಞಾನವೆಂಬುದು ಹೇಗೆ ನೆಲೆಗೊಂಡಿದೆ ಎಂಬುದನ್ನು ಅವರಿಗೆ ವಿವರಿಸಿ, "ನಾವೂ ಆ ಬಗೆಯ ಜ್ಞಾನವನ್ನು ಮೊದಲು ಪಡೆದುಕೊಳ್ಳುವ ಪ್ರಯತ್ನ ಮಾಡಬೇಕು!" ಎಂದು ಸಹಶಿಷ್ಯರನ್ನು ಪ್ರೇರೇಪಿಸುತ್ತಿದ್ದ.

ಹೀಗೆ ನರೇಂದ್ರ ತನ್ನ ಯುವಸ್ನೇಹಿತರ ಶೀಲವನ್ನು ತಿದ್ದುತ್ತ ಅವರ ಜೀವಗಳನ್ನು ರೂಪಿಸುತ್ತಿದ್ದ; ಜೊತೆಗೆ ತಾನೂ ಸಾಧನಾನಿರತನಾಗಿದ್ದು, ಗುರುಸೇವೆಯನ್ನೂ ಮಾಡುತ್ತ ಬಂದ. ಆದರೆ ಈ ಕಡೆ ಶ್ರೀರಾಮಕೃಷ್ಣರ ದೇಹಾರೋಗ್ಯ ಉತ್ತಮಗೊಳ್ಳುವುದರ ಬದಲಿಗೆ ದಿನದಿಂದ ದಿನಕ್ಕೆ ಕೆಡುತ್ತಲೇ ಬಂತು. ಔಷಧಗಳಾವುವೂ ಪರಿಣಾಮಕಾರಿಯಾಗದೆಹೋದುವು. ಇದನ್ನು ಗಮನಿಸಿದ ಡಾಕ್ಟರ್ ಮಹೇಂದ್ರಲಾಲ್ ಸರ್ಕಾರ ಆಲೋಚಿಸಿದ—ಬಹುಶಃ ಕಲ್ಕತ್ತದ ಮಲಿನ ವಾತಾವರಣವೇ ಇದಕ್ಕೆ ಕಾರಣ; ಅವರನ್ನು ಯಾವುದಾದರೂ ಉದ್ಯಾನಗೃಹದಲ್ಲಿಟ್ಟರೆ ಅವರು ಗುಣಮುಖರಾಗಲು ಅನುಕೂಲವಾದೀತು ಎಂದು. ಭಕ್ತರಿಗೆಲ್ಲ ಇದು ಒಪ್ಪಿಗೆಯಾಯಿತು. ಸರಿ, ಕೂಡಲೇ ಎಲ್ಲರೂ ಅಂತಹ ಒಂದು ಜಾಗಕ್ಕಾಗಿ ಹುಡುಕಾಟ ನಡೆಸಿ ಉತ್ತರ ಕಲ್ಕತ್ತದ ಕಾಶೀಪುರ ಎಂಬಲ್ಲಿನ ಉದ್ಯಾನಗೃಹವೊಂದನ್ನು ಗೊತ್ತುಮಾಡಿದರು. ೧೮೮೫ರ ಡಿಸೆಂಬರ್ ತಿಂಗಳಲ್ಲಿ ಶ್ರೀರಾಮಕೃಷ್ಣರನ್ನು ಇಲ್ಲಿಗೆ ಕರೆತರಲಾಯಿತು. ಈ ಮನೆ, ಗಿಡಮರಬಳ್ಳಿಗಳ ನಡುವೆ, ವಿಶಾಲವಾದ ಹಜಾರಗಳಿಂದ ಕೂಡಿದ್ದು ಬಹಳ ಸುಂದರವಾಗಿತ್ತು. ಇಲ್ಲಿನ ಶುದ್ಧವಾದ ಗಾಳಿ, ಪ್ರಶಾಂತವಾದ ವಾತಾವರಣ ಇವುಗಳಿಂದ ಅವರಿಗೆ ಎಷ್ಟೋ ಹಿತವೆನಿಸಿತು.

ಆದರೆ ಈ ಕಾಶೀಪುರದ ಉದ್ಯಾನಗೃಹವಾಸವೇ ಶ್ರೀರಾಮಕೃಷ್ಣರ ಜೀವನ ನಾಟಕದ ಕೊನೆಯ ದೃಶ್ಯ. ಅವರು ಗಂಟಲು ಬೇನೆಯಿಂದ ಅಧಿಕವಾಗಿ ನರಳಿದ್ದೂ ಇಲ್ಲೇ. ಹಾಗೆಯೇ ಭಕ್ತವೃಂದದ ಪಾಲಿಗೆ ಆನಂದಮಯವಾದ ಕೆಲವು ದಿನಗಳನ್ನು ಕಳೆದದ್ದೂ ಈ ಸ್ಥಳದಲ್ಲೇ. ಅವರು ತಮ್ಮ ಅವತಾರೋದ್ದೇಶದ ಕಾರ್ಯವನ್ನು ಪೂರ್ಣಗೊಳಿಸಿದ್ದೂ ಈ ದಿನಗಳಲ್ಲೇ. ಮತ್ತು ಮುಂದೆ ತಮ್ಮ ದಿವ್ಯಸಂದೇಶಗಳನ್ನು ಸಾರಲಿರುವಂತಹ ಸರ್ವಸಂಗ ಪರಿತ್ಯಾಗಿಗಳಾದ ಯುವಕರನ್ನು ಸೇರಿಸಿ ಸಂಘಟನೆ ಮಾಡಿದ್ದೂ ಈ ಸ್ಥಳದಲ್ಲೇ. ಈಗ ಅವರ ನಿರೀಕ್ಷೆ-ಭರವಸೆಗಳೆಲ್ಲ ನರೇಂದ್ರನಲ್ಲೇ ಕೇಂದ್ರೀಕೃತವಾಗಿವೆ. ತಾವು ಮರಣಶಯ್ಯೆಯಲ್ಲಿ ಮಲಗಿದ್ದರೂ ನರೇಂದ್ರ ಹಾಗೂ ಇತರ ಶಿಷ್ಯರನ್ನು, ಮಹಾಕಾರ್ಯವೆಸಗಬಲ್ಲ ಮಹಿಮಾವಂತರನ್ನಾಗಿ ಸಿದ್ಧಗೊಳಿಸುವ ಕಾರ್ಯದಲ್ಲಿ ಅವರೀಗ ನಿರತರಾದರು.

ತಮ್ಮ ಅವತಾರಸಮಾಪ್ತಿಯ ಕಾಲದ ಬಗ್ಗೆ ಹಿಂದೆ ಅವರೇ ಅನೇಕ ಸೂಚನೆಗಳನ್ನು ಕೊಟ್ಟಿದ್ದರು: "ಯಾವಾಗ ಅಸಂಖ್ಯಾತ ಜನರು ಇಲ್ಲಿನ (ತಮ್ಮ) ಮಹಿಮೆಯ ಕುರಿತಾಗಿ ಮಾತನಾಡಿಕೊಳ್ಳಲು ತೊಡಗುತ್ತಾರೆಯೋ ಆಗ ಜಗನ್ಮಾತೆ ಈ ಶರೀರವನ್ನು ಹಿಂದೆಗೆದುಕೊಂಡುಬಿಡುತ್ತಾಳೆ." "ನಾನು ಹೊರಡುವ ಮೊದಲು ಎಲ್ಲವನ್ನೂ (ಎಂದರೆ ತಮ್ಮ ದಿವ್ಯತೆಯನ್ನು) ಬಹಿರಂಗ ಪಡಿಸುತ್ತೇನೆ." "ನನ್ನ ಜೀವನದ ಕೊನೆಯ ದಿನಗಳಲ್ಲಿ ಭಕ್ತರು ಎರಡು ಗುಂಪುಗಳಾಗಿ ಬೇರ್ಪಡೆಯಾಗುತ್ತಾರೆ—ಒಂದು ಗುಂಪು ನನ್ನ ಅಂತರಂಗಕ್ಕೆ ಸೇರಿದವರದು, ಇನ್ನೊಂದು ಗುಂಪು ಬಹಿರಂಗ ವಲಯಕ್ಕೆ ಸೇರಿದವರದು." ಈ ಬಗೆಯಲ್ಲಿ ಅವರೇ ನೀಡಿದ ಹಲವಾರು

ಮುನ್ಸೂಚನೆಗಳು ಒಂದೊಂದಾಗಿ ನಿಜವಾಗುತ್ತ ಬರುವುದನ್ನು ಶಿಷ್ಯರು ಅಸಹಾಯಕರಾಗಿ ನೋಡುತ್ತಿದ್ದರು.

ತಮ್ಮ ಈ ಅಪಾರ ಯಾತನೆಯ ನಡುವೆಯೂ ಶ್ರೀರಾಮಕೃಷ್ಣರು ನರೇಂದ್ರನಿಗೆ ವಿಶೇಷ ಆಧ್ಯಾತ್ಮಿಕ ತರಬೇತಿ ನೀಡುತ್ತಿದ್ದರು. ನರೇಂದ್ರನ ಆಧ್ಯಾತ್ಮಿಕ ಶಕ್ತಿ ವೃದ್ಧಿಯಾಗುತ್ತಿದ್ದಂತೆಯೇ ಅವರ ಶರೀರಶಕ್ತಿ ಕುಂದಿಹೋಗುತ್ತಿತ್ತು. ಆದರೆ ದೈವಿಕತೆ ಮಾತ್ರ ಇನ್ನಷ್ಟು ಹೆಚ್ಚಾಗಿಯೇ ಪ್ರಕಟವಾಗುತ್ತಿತ್ತು ಎನ್ನಬಹುದು. ಇಂತಹ ಘೋರ ವ್ಯಾಧಿಯ ಸಮಯದಲ್ಲೂ ಅವರಿಂದ ಅಪರಿಮಿತ ಆಧ್ಯಾತ್ಮಿಕ ಶಕ್ತಿ-ಆಧ್ಯಾತ್ಮಿಕ ಆನಂದ ಹೊರ ಸೂಸುತ್ತಿರುವುದನ್ನು ಪ್ರತ್ಯಕ್ಷವಾಗಿ ಕಂಡು ಅನುಭವಿಸುತ್ತ ಭಕ್ತರಲ್ಲಿ ಹೊಸ ಉತ್ಸಾಹ ಉಕ್ಕುತ್ತಿತ್ತು. ಯುವಶಿಷ್ಯರು ಗುರುವಿನ ಸೇವೆಯನ್ನು ಹೃತ್ಪೂರ್ವಕವಾಗಿ ಪೂಜೆಯೋಪಾದಿಯಲ್ಲಿ ಮಾಡಿಕೊಂಡು ಬರುತ್ತಿದ್ದರು. ಆದರೆ ದಿನದಿನಕ್ಕೆ ಉಲ್ಬಣಿಸುತ್ತಿದ್ದ ಗಂಟಲ ಬೇನೆಯನ್ನು ತಡೆಗಟ್ಟಲು ಮಾತ್ರ ಯಾರಿಂದಲೂ ಸಾಧ್ಯವಿರಲಿಲ್ಲ. ಶ್ರೀರಾಮಕೃಷ್ಣರು ಮಾತನಾಡಿ ಗಂಟಲಿಗೆ ಆಯಾಸ ಮಾಡಿಕೊಳ್ಳಬಾರದು ಎಂದು ಡಾಕ್ಟರು ಪುನಃ ಪುನಃ ಎಚ್ಚರಿಕೆ ಹೇಳುತ್ತಲೇ ಇದ್ದರು. ಆದರೆ ಹಗಲಿರುಳೆನ್ನದೆ ಧಾವಿಸಿ ಬಂದು ಮುತ್ತುತ್ತಿರುವ ಮುಮುಕ್ಷುಗಳಿಗೆ, ತಮ್ಮ ಅನಂತ ಆಧ್ಯಾತ್ಮಿಕ ಜ್ಞಾನವನ್ನು, ಆನಂದವನ್ನು ಹಂಚಿಕೊಡದೆ ಸುಮ್ಮನಿರಲು ಶ್ರೀರಾಮಕೃಷ್ಣರಿಂದ ಹೇಗೆ ತಾನೆ ಸಾಧ್ಯವಾದೀತು ?

ನರೇಂದ್ರನ ನೇತೃತ್ವದಲ್ಲಿ ನಿರಂತರ ಸೇವೆಯಲ್ಲಿ ತೊಡಗಿದ್ದ ಯುವಶಿಷ್ಯರು ಕಾಶೀಪುರದ ಮನೆಯಲ್ಲೇ ಉಳಿದುಕೊಳ್ಳಬೇಕಾಗಿ ಬಂತು. ಇದರಿಂದಾಗಿ ಸಹಜವಾಗಿಯೇ ಅವರ ತಾಯ್ತಂದೆಯರಿಗೆ ಬಹಳ ಅಸಮಾಧಾನವಾಯಿತು. ಹುಡುಗರು ಓದುಬರಹ ಬಿಟ್ಟು ಗುರುಸೇವೆ ಮಾಡುತ್ತೇವೆಂದು ಅಲ್ಲಿಯೇ ಕುಳಿತುಬಿಟ್ಟದ್ದು ಅವರಿಗೆ ಇಷ್ಟವಾಗಲಿಲ್ಲ; ಪ್ರತಿಭಟಿಸಿದರು. ಆದರೂ ಯುವಕರು ಜಗ್ಗಲಿಲ್ಲ. ಈ ನಡುವೆ ನರೇಂದ್ರನಿಗೂ ಕಾನೂನು ಪರೀಕ್ಷೆ ಸನ್ನಿಹಿತವಾಗುತ್ತಿತ್ತು. ಜೊತೆಗೆ ಮನೆಗೆ ಸಂಬಂಧಿಸಿದ ಕೋರ್ಟು ವ್ಯವಹಾರ ಬೇರೆ ನಡೆಯುತ್ತಿತ್ತು. ಆದ್ದರಿಂದ ಅವನು ಆಗಾಗ ಕಲ್ಕತ್ತಕ್ಕೆ ಹೋಗಿಬರಬೇಕಾಗುತ್ತಿತ್ತು. ಹೀಗಿದ್ದರೂ ಅವನು ಶ್ರೀಗುರುಸೇವೆಯನ್ನೇ ತನ್ನ ಆದ್ಯ ಕರ್ತವ್ಯವೆಂದು ಭಾವಿಸಿ ಕಾಶೀಪುರದಲ್ಲಿ ದೃಢಮನಸ್ಕನಾಗಿ ನಿಂತುಬಿಟ್ಟ. ಬಿಡುವಿನ ವೇಳೆಯಲ್ಲಿ ಓದಿ ಪರೀಕ್ಷೆಗೆ ತಯಾರಿ ಮಾಡಿಕೊಳ್ಳುತ್ತಿದ್ದ.

ಈಗ ಶ್ರೀರಾಮಕೃಷ್ಣರು ಕಾಶೀಪುರದ ಉದ್ಯಾನಗೃಹದಲ್ಲಿ ಕೇವಲ ತಮ್ಮ ಅಂತರಂಗ ಶಿಷ್ಯರ ನಡುವೆ ವಾಸವಾಗಿದ್ದಾರೆ. ಎಲ್ಲರೂ ಬಿಸಿರಕ್ತದ ಯುವಕರು. ಅವರಲ್ಲಿ ಮುಖ್ಯರಾದ ಹನ್ನೆರಡು ಜನರೆಂದರೆ ನರೇಂದ್ರ, ರಾಖಾಲ, ಬಾಬುರಾವ್, ನಿರಂಜನ, ಯೋಗೀಂದ್ರ, ಲಾಟು, ತಾರಕನಾಥ, ಕಾಳೀಪ್ರಸಾದ, ಹಿರಿಯ ಗೋಪಾಲ (ಇವರೊಬ್ಬರೇ ವಯಸ್ಕರು), ಶಶಿಭೂಷಣ, ಶರಚ್ಚಂದ್ರ ಮತ್ತು ಕಿರಿಯ ಗೋಪಾಲ. ಶ್ರೀರಾಮಕೃಷ್ಣರ ಸೇವೆಗಾಗಿ ತಮ್ಮ ಮನೆಮಂದಿಯನ್ನೂ ಶಾಲಾಕಾಲೇಜುಗಳನ್ನೂ ತೊರೆದುಬರುವಂತೆ ಇವರನ್ನೆಲ್ಲ ಪ್ರೋತ್ಸಾಹಿಸಿದ್ದು ನರೇಂದ್ರನೇ. ಅತ್ತ ಶ್ರೀರಾಮಕೃಷ್ಣರ ಸೆಳೆತ ಇದ್ದೇ ಇದೆ, ಜೊತೆಗೆ ಇತ್ತ ನರೇಂದ್ರನಿಂದಲೂ ಸ್ಫೂರ್ತಿ ಸಿಗುತ್ತಿದೆ. ಎಲ್ಲರೂ ಬಿಡುವಾಗಿದ್ದಾಗಲೆಲ್ಲ ಅವನು ಅವರನ್ನು ಒಟ್ಟುಗೂಡಿಸಿ ವೇದಶಾಸ್ತ್ರಗಳ ಅಧ್ಯಯನ ನಡೆಸುತ್ತಿದ್ದ, ಸಂಕೀರ್ತನೆ ಮಾಡಿಸುತ್ತಿದ್ದ. ಅವರು ಶ್ರೀರಾಮಕೃಷ್ಣರ ಜೀವನ-ವ್ಯಕ್ತಿತ್ವ-ಬೋಧನೆಗಳ ಕುರಿತಾಗಿ ಸಮಾಲೋಚಿಸುತ್ತಿದ್ದರು. ಹೀಗೆ ತಮ್ಮ ಬೌದ್ಧಿಕ-ಆಧ್ಯಾತ್ಮಿಕ

ಉನ್ನತಿಗಾಗಿ ಶ್ರಮಿಸುತ್ತಿದ್ದರು. ಆ ಯುವಕರ ಕೌಟುಂಬಿಕ ಹಿನ್ನೆಲೆಗಳು, ಸಂಸ್ಕಾರಗಳು, ಅಭಿರುಚಿಗಳು ಎಲ್ಲ ಬೇರೆಬೇರೆ. ಆದರೆ ನರೇಂದ್ರ ತನ್ನ ಉಜ್ವಲ-ಪ್ರಖರ ವ್ಯಕ್ತಿತ್ವದ ಕಾವಿನಿಂದ ಇಂತಹ ವಿಭಿನ್ನ ವ್ಯಕ್ತಿತ್ವಗಳನ್ನು ಬೆಸೆದು, ಅವರಲ್ಲೊಂದು ಮಧುರ ಸಮರಸತೆಯನ್ನು ತರಲೆತ್ನಿಸಿದ. ತ್ಯಾಗದಲ್ಲಾಗಲಿ, ಶ್ರದ್ಧಾಭಕ್ತಿಗಳಲ್ಲಾಗಲಿ ಒಬ್ಬರಿಗಿಂತ ಒಬ್ಬರು ಶ್ರೇಷ್ಠರು. ಇಂತಹ ಆ ತೇಜಸ್ವೀ ಯುವಕರನ್ನೆಲ್ಲ ಒಟ್ಟುಗೂಡಿಸಿ, ಅವರೆಲ್ಲ ಒಂದೇ ಶರೀರ ಒಂದೇ ಆತ್ಮ ಎಂಬಂತೆ ಮಾಡಿಬಿಟ್ಟ ನರೇಂದ್ರ. ಮುಂದೆ ಇವರೊಂದಿಗೇ ಸಂನ್ಯಾಸ ಸ್ವೀಕರಿಸಿದ ಇತರ ಮೂರ್ನಾಲ್ಕು ಯುವಶಿಷ್ಯರು ಮನೆಯವರ ಒತ್ತಡ ಹೆಚ್ಚಾದುದರಿಂದ ಈಗ ಮನೆಗಳಿಗೆ ಹಿಂದಿರುಗಿದ್ದರಾದರೂ ಆಗಾಗ ಬಂದುಹೋಗು ತ್ತಿದ್ದರು.

ಶ್ರೀರಾಮಕೃಷ್ಣರ ಇಹಜೀವನ ಕೊನೆಗೊಳ್ಳುತ್ತಿದ್ದಂತೆ ನರೇಂದ್ರನಲ್ಲಿ ಭಗವತ್ಸಾಕ್ಷಾ ತ್ಕಾರದ ಹಂಬಲ ಭುಗಿಲೆದ್ದುಬಿಟ್ಟಿತು. ಒಂದು ದಿನ, ರಾತ್ರಿಯ ಕೆಲಸಕಾರ್ಯಗಳನ್ನೆಲ್ಲ ಮುಗಿಸಿ ಮಲಗಿಕೊಳ್ಳಲು ಸಿದ್ಧನಾದ; ಬೆಳಗಾಗೆದ್ದು ಮನೆಗೆ ಹಿಂದಿರುಗಿ ಒಂದೆರಡು ದಿನಗಳ ಮಟ್ಟಿಗೆ ಇದ್ದು, ಕೆಲವು ತುರ್ತು ಕೆಲಸಗಳನ್ನು ಮುಗಿಸಿಕೊಂಡು ಬರ ಬೇಕೆಂದು ನಿಶ್ಚಯಿಸಿದ್ದ. ಆದರೆ ಮಲಗಿಕೊಂಡರೆ ನಿದ್ರೆಯೇ ಬರುತ್ತಿಲ್ಲ. ಆಗ ಅವನು, ಇನ್ನೂ ಎಚ್ಚರವಾಗಿದ್ದ ಶರತ್, ಕಿರಿಯ ಗೋಪಾಲ ಮತ್ತಿತರ ಗೆಳೆಯರನ್ನು ಎಬ್ಬಿಸಿ, "ಬನ್ನಿ, ಇಲ್ಲೇ ತೋಟದಲ್ಲಿ ಸ್ವಲ್ಪ ಸುತ್ತಾಡೋಣ" ಎಂದು ಕರೆದ. ಹಾಗೇ ಅಡ್ಡಾಡುತ್ತ ಮಾತನಾಡಲಾರಂಭಿಸಿದ: "ಶ್ರೀರಾಮಕೃಷ್ಣರ ಕಾಯಿಲೆ ನಿಜಕ್ಕೂ ತುಂಬ ಗಂಭೀರ ವಾಗಿದೆ. ಅವರು ತಮ್ಮ ದೇಹವನ್ನು ತ್ಯಜಿಸಿಬಿಡುವ ನಿರ್ಧಾರ ಮಾಡದಿರಲಿ! ಆದರೆ ಪರಿಸ್ಥಿತಿ ಕೈಮೀರುವ ಮೊದಲೇ ನಾವು ಅವರ ಸೇವೆಯನ್ನು ಮಾಡುವುದರ ಮೂಲಕ ಮತ್ತು ಪ್ರಾರ್ಥನೆ-ಧ್ಯಾನಗಳನ್ನು ತೀವ್ರಗೊಳಿಸುವುದರ ಮೂಲಕ, ಭಗವಂತನ ಸಾಕ್ಷಾ ತ್ಕಾರವನ್ನು ಮಾಡಿಕೊಂಡುಬಿಡಬೇಕು. ಶ್ರೀರಾಮಕೃಷ್ಣರು ಶರೀರ ಬಿಟ್ಟು ಹೋದ ಮೇಲೆ ಎಷ್ಟೇ ಪಶ್ಚಾತ್ತಾಪ-ಪರಿತಾಪ ಪಟ್ಟರೂ ಪ್ರಯೋಜನವಿಲ್ಲ. 'ಈ ಕೆಲಸವನ್ನು ಮಾಡಿ ಮುಗಿಸಿಬಿಡುತ್ತೇನೆ; ಆದೊಂದು ಕೆಲಸ ಬಾಕಿ ಇದೆ, ಅದನ್ನು ಮುಗಿಸಿದ ಮೇಲೆ ಸಮಯ ಮಾಡಿಕೊಂಡು ಜಪ-ಧ್ಯಾನ ಮಾಡೋಣ' ಅಂತ ಯೋಚಿಸು ತ್ತಿದ್ದೇವೆ. ಆದರೆ ಇದು ಕೇವಲ ಭ್ರಮೆ. ಹೀಗೆ ಭ್ರಮಿಸುತ್ತ ಅತ್ಯಮೂಲ್ಯವಾದ ಸಮಯವನ್ನು ವ್ಯರ್ಥ ಮಾಡುತ್ತಿದ್ದೇವೆ. ಅಲ್ಲದೆ ಆಶಾಪಾಶಗಳು ನಮ್ಮನ್ನು ಇನ್ನಷ್ಟು ಬಲವಾಗಿ ಬಿಗಿಯುತ್ತವೆ. ಈ ಆಸೆಗಳೇ ಮೃತ್ಯು. ಆದ್ದರಿಂದ ಈ ಆಸೆಗಳನ್ನು ಬೇರು ಸಹಿತ ಕಿತ್ತುಹಾಕಿ ಮುಕ್ತರಾಗೋಣ."

ಅದೊಂದು ಚಳಿಗಾಲದ ರಾತ್ರಿ; ಆಗಸ ನಿರ್ಮಲವಾಗಿದೆ; ನಕ್ಷತ್ರಗಳು ಮಿನುಗು ತ್ತಿವೆ. ಆ ಪ್ರಶಾಂತ ವಾತಾವರಣದಲ್ಲಿ, ಧ್ಯಾನಮಗ್ನರಾಗಿ ಕುಳಿತುಬಿಡಬೇಕೆಂಬ ತೀವ್ರ ಬಯಕೆ ಅವರಲ್ಲಿ ಜಾಗೃತವಾಯಿತು. ಹತ್ತಿರದಲ್ಲಿ ಬಿದ್ದಿದ್ದ ಒಣ ಕಡ್ಡಿ-ಕೊಂಬೆಗಳನ್ನು ನೋಡಿದಾಗ ನರೇಂದ್ರನಿಗೊಂದು ಆಲೋಚನೆ ಹೊಳೆಯಿತು. ತನ್ನ ಮಾತನ್ನು ಮುಂದುವರಿಸುತ್ತ ಅವನೆಂದ: "ಈ ಒಣ ಕಡ್ಡಿಗಳಿಗೆ ಬೆಂಕಿ ಹೊತ್ತಿಸಿ ಕುಳಿತು ಕೊಳ್ಳೋಣ. ಸಂನ್ಯಾಸಿಗಳು ಧುನಿಯನ್ನು* ಹಚ್ಚಿಕೊಂಡು ಧ್ಯಾನ ಮಾಡುವುದೂ ಈ

* ನೋಡಿ : ಅನುಬಂಧ ೩.

ಹೊತ್ತಿನಲ್ಲೇ. ನಾವೂ ಹಾಗೆಯೇ ಧುನಿ ಹೊತ್ತಿಸಿಕೊಂಡು ನಮ್ಮ ಆಸೆ-ಆಕಾಂಕ್ಷೆಗಳನ್ನು ಅದರೊಳಗೆಸೆದು ಸುಟ್ಟುಬಿಡೋಣ!" ಅಂತೆಯೇ ಧುನಿಯನ್ನು ಹಚ್ಚಿಕೊಂಡು ಯುವಶಿಷ್ಯರೆಲ್ಲರೂ ಅದರ ಸುತ್ತ ಕುಳಿತರು. ಧಗಧಗಿಸುತ್ತಿದ್ದ ಆ ಬೆಂಕಿಯನ್ನು ನೋಡುತ್ತ, 'ನಮ್ಮ ಸಮಸ್ತ ಆಸೆಗಳನ್ನು ಅಗ್ನಿಯಲ್ಲಿ ಆಹುತಿಕೊಟ್ಟು ಹೋಮ ಮಾಡಿಬಿಟ್ಟೆವು; ಈಗ ನಮ್ಮ ಮನಸ್ಸಿನಿಂದ ಎಲ್ಲ ಕುಸಂಸ್ಕಾರಗಳು, ಎಲ್ಲ ಪಾಪಗಳು ಸುಟ್ಟುಹೋಗಿ ಮನಸ್ಸು ಪರಮ ಪರಿಶುದ್ಧವಾಗಿಬಿಟ್ಟಿದೆ' ಎಂಬ ಭಾವನೆ ಅವರಲ್ಲಿ ತಾನೇತಾನಾಗಿ ಉಂಟಾಯಿತು. ಇದು ಅವರ ಪಾಲಿಗೊಂದು ಹೊಸ, ಉತ್ತೇಜನಕರ ಅನುಭವ.

ನರೇಂದ್ರನಿಗೆ ಶ್ರೀರಾಮಕೃಷ್ಣರು ಹಲವಾರು ಬೋಧನೆಗಳನ್ನು ನೀಡಿ ಹಲವಾರು ಆಧ್ಯಾತ್ಮಿಕ ಅನುಭವಗಳನ್ನು ಮಾಡಿಸಿಕೊಟ್ಟಿದ್ದರೂ, ಅವನಿಗೆ ಮಂತ್ರದೀಕ್ಷೆ ಕೊಟ್ಟಿರಲಿಲ್ಲ. ಪ್ರಾಯಶಃ ಈಗ ಅದಕ್ಕೆ ಸೂಕ್ತ ಕಾಲ ಸನ್ನಿಹಿತವಾಗಿತ್ತು. ಈ ದಿನಗಳಲ್ಲೊಮ್ಮೆ ಅವರು ನರೇಂದ್ರನನ್ನು ಕುಳ್ಳಿರಿಸಿಕೊಂಡು ರಾಮಮಂತ್ರವನ್ನು ಉಪದೇಶ ಮಾಡುತ್ತ, "ಇಗೋ, ಇದು ನಿನ್ನ ಇಷ್ಟಮಂತ್ರ. ಇದು ನನಗೆ ನನ್ನ ಗುರುವಿನಿಂದ ಸಿಕ್ಕಿದ ಮಂತ್ರ" ಎಂದು ತಿಳಿಸಿದರು. ಆ ಮಂತ್ರವನ್ನು ಸ್ವೀಕರಿಸಿದಾಗ ಅವನಲ್ಲುಂಟಾದ ಪರಿಣಾಮ ಮಹಾದ್ಭುತವಾಗಿತ್ತು. ಸ್ವತಃ ಆ ಮಂತ್ರವೋ ಸಿದ್ಧಮಂತ್ರ; ಅದನ್ನು ಉಪದೇಶಿಸಿದವರೋ ಮಂತ್ರಸಿದ್ಧರು; ಆ ಮಂತ್ರವನ್ನು ಪಡೆದವನೋ ನಿತ್ಯಸಿದ್ಧ! ಹೀಗಿರುವಾಗ ಅಲ್ಲಿ ಅದ್ಭುತವಾದ ಪರಿಣಾಮವುಂಟಾದುದರಲ್ಲಿ ಆಶ್ಚರ್ಯವೇನಿದೆ? ಮಂತ್ರವನ್ನು ಪಡೆದುಕೊಂಡ ಕೂಡಲೇ ಅವನಲ್ಲಿ ಆಧ್ಯಾತ್ಮಿಕ ಭಾವವನ್ನು ಬಡಿದೆಬ್ಬಿಸಿದಂತಾಯಿತು. ಅಂದು ಸಂಜೆಯೆಲ್ಲ ಅವನು ರಾಮನಾಮವನ್ನು ಗಟ್ಟಿಯಾಗಿ ಉಚ್ಚರಿಸುತ್ತ ಉದ್ಯಾನ ಗೃಹದ ಸುತ್ತ ಪ್ರದಕ್ಷಿಣೆ ಹಾಕಲಾರಂಭಿಸಿದ! ಒಂದೇ ಸಮನೆ 'ರಾಮ, ರಾಮ' ಎನ್ನುತ್ತ ಆನಂದೋತ್ಸಾಹಭರಿತನಾಗಿ ಮತ್ತೆಮತ್ತೆ ಸುತ್ತುಬರತೊಡಗಿದ. ನೋಡಿದರೆ ಬಾಹ್ಯ ಪ್ರಜ್ಞೆಯನ್ನೇ ಕಳೆದುಕೊಂಡಂತೆ ತೋರುತ್ತಿತ್ತು. ಇದನ್ನು ಕಂಡ ಗುರುಭಾಯಿಗಳಿಗೆ ಅತ್ಯಾಶ್ಚರ್ಯ. ಅವರಿಗೆ ಅವನನ್ನು ಸಮೀಪಿಸಲೂ ಧೈರ್ಯ ಸಾಲದು. ಶ್ರೀರಾಮಕೃಷ್ಣರಿಗೆ ಈ ವಿಷಯವನ್ನು ತಿಳಿಸಿದಾಗ ಅವರು, "ಇರಲಿ, ಇರಲಿ. ಎಲ್ಲ ಸರಿಹೋಗುತ್ತದೆ" ಎಂದುತ್ತರಿಸಿದರು. ನರೇಂದ್ರ ಅದೇ ಆನಂದಭರಿತ ಸ್ಥಿತಿಯಲ್ಲಿ ರಾಮಮಂತ್ರವನ್ನುಚ್ಚರಿಸುತ್ತ ಕೆಲವು ಗಂಟೆಗಳ ಕಾಲ ಮತ್ತೆಮತ್ತೆ ಪ್ರದಕ್ಷಿಣೆ ಬರುತ್ತಲೇ ಇದ್ದ. ಆಮೇಲೆ ಅವನ ಉನ್ಮತ್ತತೆ ನಿಧಾನವಾಗಿ ಇಳಿಯುತ್ತ ಬಂತು. ಬಳಿಕ ಅವನು ಎಂದಿನಂತಾದ.

ಕಾಶೀಪುರದ ಉದ್ಯಾನಗೃಹ ಈ ಶಿಷ್ಯರ ಪಾಲಿಗೆ ಒಂದು ದೇವಾಲಯವೂ ಆಗಿದೆ; ಒಂದು ವಿಶ್ವವಿದ್ಯಾಲಯವೂ ಆಗಿದೆ. ಕೆಲವೊಮ್ಮೆ ಅಲ್ಲಿ ತತ್ತ್ವಶಾಸ್ತ್ರಗಳ ಅಧ್ಯಯನ ನಡೆದರೆ, ಇನ್ನು ಕೆಲವೊಮ್ಮೆ ಭಕ್ತಿಭಾವದ ಹೊನಲು ಹರಿಯುತ್ತದೆ. ನರೇಂದ್ರನೂ ಅವನ ಸ್ನೇಹಿತರೂ ಸೇರಿ ಭಜನೆ-ಪ್ರಾರ್ಥನೆ-ಧ್ಯಾನ ಮಾಡುತ್ತಾರೆ; ವೇದೋಪನಿಷತ್ತುಗಳ ಕುರಿತಾಗಿ ಸಂಭಾಷಣೆ ನಡೆಸುತ್ತಾರೆ. ಶಿಷ್ಯರೆಲ್ಲ ಹೀಗೆ ಸಾಧನೆ ಮಾಡಿ ಭಗವಂತನ ಕೃಪೆಯನ್ನು ಬೇಡಿದಾಗ, ಆ 'ದೇವಾಲಯ'ದ ದೇವಮೂರ್ತಿ ಶ್ರೀರಾಮಕೃಷ್ಣರು ಅನುಗ್ರಹ ಮಾಡುವ ರೀತಿ ಅಪೂರ್ವ! ನೋಡುವವರ ಕಣ್ಣಿಗೆ ರೋಗಗ್ರಸ್ತ ದೀನ ವ್ಯಕ್ತಿಯಾಗಿ ಕಂಡುಬಂದರೂ ಅವರು ಸಕಲರಿಗೂ ಆನಂದವನ್ನು ಕರುಣಿಸಬಲ್ಲ ಆನಂದಮೂರ್ತಿ. ಆ ಕರುಣಾಮಯನ ಕೃಪಾಪ್ರವಾಹ ವಿಶೇಷವಾಗಿ

ಹರಿದು, ಕೃಪಾಕಾಂಕ್ಷಿಗಳಾದ ಭಕ್ತರೆಲ್ಲ ಆ ಪ್ರವಾಹದಲ್ಲಿ ಮಿಂದು ಪುನೀತರಾದಂತಹ ರೋಮಾಂಚಕಾರಿಯಾದ ಘಟನೆಯೊಂದು ಕಾಶೀಪುರದ ತೋಟದ ಮನೆಯಲ್ಲಿ ನಡೆಯಿತು.

ಅಂದು ೧೮೮೬ನೇ ಇಸವಿಯ ಜನವರಿ ಒಂದನೇ ತಾರೀಕು. ಕೆಲದಿನಗಳ ಹಿಂದೆ ತಾನೆ ಕಲ್ಕತ್ತದ ಪ್ರಸಿದ್ಧ ಹೋಮಿಯೋಪತಿ ವೈದ್ಯರಾದ ರಾಜೇಂದ್ರಲಾಲ್ ದತ್ತ ಎಂಬವರು ಶ್ರೀರಾಮಕೃಷ್ಣರ ದೇಹಸ್ಥಿತಿಯನ್ನು ಚೆನ್ನಾಗಿ ಪರೀಕ್ಷೆಮಾಡಿ ಹೊಸದೊಂದು ಔಷಧಿಯನ್ನು ಕೊಟ್ಟಿದ್ದರು. ಇದರ ಪರಿಣಾಮವಾಗಿ ಕಾಯಿಲೆ ಎಷ್ಟೋ ಉಪಶಮನ ವಾದಂತಿತ್ತು. ಹೀಗೆ ದೇಹಸ್ಥಿತಿ ಸ್ವಲ್ಪ ಸುಧಾರಿಸಿದ್ದರಿಂದ ಶ್ರೀರಾಮಕೃಷ್ಣರು ಉದ್ಯಾನ ವನದಲ್ಲಿ ಸ್ವಲ್ಪ ಅಡ್ಡಾಡಿಕೊಂಡು ಬರುವ ಇಚ್ಛೆಯನ್ನು ವ್ಯಕ್ತಪಡಿಸಿದರು. ಆಗ ಅಪರಾಹ್ನ ಮೂರು ಗಂಟೆಯ ಸಮಯ. ಯುವಶಿಷ್ಯರು ರಾತ್ರಿಯ ವೇಳೆಯಲ್ಲಿ ಸೇವಾಕಾರ್ಯಗಳಲ್ಲೂ ಸಾಧನೆಗಳಲ್ಲೂ ನಿರತರಾಗಿ ಬಹಳ ಹೊತ್ತು ಎದ್ದಿರುತ್ತಿದ್ದುದ ರಿಂದ ಈಗ ಕೆಳಗೆ ಹಜಾರದಲ್ಲಿ ವಿಶ್ರಮಿಸುತ್ತಿದ್ದರು. ಜನವರಿ ಒಂದನೇ ತಾರೀಕು ಇಂಗ್ಲಿಷ್ ವರ್ಷದ ಮೊದಲನೇ ದಿನ; ಆದ್ದರಿಂದ ಅಂದು ಎಲ್ಲರಿಗೂ ರಜಾದಿನ. ಹಲವಾರು ಜನ ಗೃಹಸ್ಥರು ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಕಾಶೀಪುರಕ್ಕೆ ಬಂದಿದ್ದರು. ಗಿರೀಶಚಂದ್ರನೂ ಬಂದಿದ್ದ; ಅಲ್ಲೇ ಮಾವಿನಮರದ ಬುಡದಲ್ಲಿ ಕುಳಿತುಕೊಂಡು ರಾಮಚಂದ್ರ ದತ್ತ ಹಾಗೂ ಇನ್ನಿತರ ಭಕ್ತರೊಂದಿಗೆ ಮಾತನಾಡುತ್ತಿದ್ದ. ಆಗ ಅಲ್ಲಿಗೆ ಶ್ರೀರಾಮಕೃಷ್ಣರು ಕೆಲವು ಭಕ್ತರೊಡನೆ ಮೆಲ್ಲಗೆ ನಡೆದು ಬಂದರು. ಗಿರೀಶನನ್ನು ಕಂಡು ಇದ್ದಕ್ಕಿದ್ದಂತೆ ನುಡಿದರು:

"ಗಿರೀಶ್, ನೀನು ನನ್ನ ವಿಷಯವಾಗಿ ಎಲ್ಲರೆದುರಿನಲ್ಲೂ ಏನೇನೋ (ಅವರು ಅವತಾರ ಪುರುಷರು ಎಂದು) ಸಾರುತ್ತಿದ್ದೀಯಲ್ಲ, ನೀನು ಅಂಥಾದ್ದೇನನ್ನು ಕಂಡೆ ನನ್ನಲ್ಲಿ?"

ಶ್ರೀರಾಮಕೃಷ್ಣರ ದೈವತ್ವದಲ್ಲಿ ಅಪಾರ ಶ್ರದ್ಧೆಯಿಟ್ಟಿದ್ದ ಗಿರೀಶ ತಕ್ಷಣ ಕೈ ಜೋಡಿಸಿ, ಭಾವಭರಿತನಾಗಿ ಗದ್ಗದ ಸ್ವರದಿಂದ ಉದ್ಗರಿಸಿದ:

"ಯಾರ ಮಹಿಮೆಯನ್ನು ವರ್ಣಿಸುವಲ್ಲಿ ವ್ಯಾಸ-ವಾಲ್ಮೀಕಿಗಳೂ ಅಸಮರ್ಥ ರಾಗಿದ್ದಾರೋ ಅಂತಹ ಮಹಾಮಹಿಮನ ವಿಚಾರವಾಗಿ ನನ್ನಂಥವನು ಏನುತಾನೆ ಹೇಳಬಲ್ಲ!"

ಗಿರೀಶಚಂದ್ರನ ಮಾತು ನಿಜಕ್ಕೂ ಎಷ್ಟು ಅದ್ಭುತ! ಹಿಂದೆ ವಾಲ್ಮೀಕಿ-ವ್ಯಾಸ ಮಹರ್ಷಿಗಳು ರಾಮಾಯಣ-ಮಹಾಭಾರತಗಳೆಂಬ ಅಮರಗ್ರಂಥಗಳಲ್ಲಿ ಭಗವಾನ್ ವಿಷ್ಣುವಿನ ಅವತಾರಗಳಾದ ಶ್ರೀರಾಮನ ಮತ್ತು ಶ್ರೀಕೃಷ್ಣನ ಗುಣ-ಮಹಿಮೆಗಳನ್ನು ನಾನಾವಿಧವಾಗಿ ವರ್ಣಿಸಿ ದಣಿದರೂ ಆ ಗುಣಕಥನ ಮುಗಿಯಲಿಲ್ಲ. ಅಂತಹ ರಾಮ-ಕೃಷ್ಣರೇ ಈಗ ಶ್ರೀರಾಮಕೃಷ್ಣರಾಗಿ ಅವತಾರ ತಾಳಿರುವಾಗ ಅವರ ಮಹಿಮೆಯನ್ನು ತನ್ನಂಥ ಪಾಮರನೇನು ವರ್ಣಿಸಬಲ್ಲ?—ಎಂಬುದು ಅವನ ಮಾತಿನ ಅಭಿಪ್ರಾಯ. ಅದನ್ನು ಕೇಳಿದ ತಕ್ಷಣ ಶ್ರೀರಾಮಕೃಷ್ಣರಲ್ಲಿ ಭಾವವುಕ್ಕಿ ಬಂದು ಗಾಢ ಸಮಾಧಿಸ್ಥರಾಗಿ ಬಿಟ್ಟರು. ಗಿರೀಶ ಇದನ್ನು ಕಂಡು ಆನಂದಭರಿತನಾಗಿ "ಜೈ ರಾಮಕೃಷ್ಣ! ಜೈ ರಾಮ ಕೃಷ್ಣ!" ಎಂದು ಘೋಷಿಸುತ್ತ ಮತ್ತೆಮತ್ತೆ ಅವರ ಪಾದಧೂಳಿಯನ್ನು ತೆಗೆದುಕೊಂಡು ಹಣೆಗಿಟ್ಟುಕೊಂಡ. ಆಗ ಶ್ರೀರಾಮಕೃಷ್ಣರು ಅರೆಸಹಜಾವಸ್ಥೆಗಿಳಿದು ಮಂದಸ್ಮಿತವದನ

ರಾಗಿ, "ನಾನಿನ್ನೇನು ತಾನೆ ಹೇಳಲಿ! ನಿಮಗೆಲ್ಲರಿಗೂ ಆಧ್ಯಾತ್ಮಿಕ ಜಾಗೃತಿಯುಂಟಾಗಲಿ!" ಎಂದುದ್ಗರಿಸಿದರು. ಸುತ್ತ ನೆರೆದಿದ್ದ ಭಕ್ತಾದಿಗಳೆಲ್ಲ ಶ್ರೀರಾಮಕೃಷ್ಣರ ಆಶೀರ್ವಾದರೂಪದ ಈ ವಾಣಿಯನ್ನು ಕೇಳಿ ಆನಂದೋದ್ರೇಕದಿಂದ "ಜೈ ರಾಮಕೃಷ್ಣ, ಜೈ ರಾಮಕೃಷ್ಣ!" ಎಂದು ಉದ್ಗಾರ ಮಾಡುತ್ತ ಅವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಕೆಲವರು ಉದ್ಯಾನದಿಂದ ಹೂವುಗಳನ್ನು ಕಿತ್ತುತಂದು ಅವರ ಪಾದಗಳಿಗೆ ಸಮರ್ಪಿಸಿ ಪೂಜಿಸಿದರು. ಇನ್ನು ಕೆಲವರು ಸ್ತೋತ್ರ-ಮಂತ್ರಗಳನ್ನು ಉಚ್ಚರಿಸುತ್ತ ಅವರ ಪಾದಧೂಳಿಯನ್ನು ತೆಗೆದುಕೊಂಡರು. ಶ್ರೀರಾಮಕೃಷ್ಣರು ತಮ್ಮ ಬಳಿಗೆ ಬಂದ ಪ್ರತಿಯೊಬ್ಬನ ಎದೆಯನ್ನೂ ಮುಟ್ಟಿ "ನಿನಗೆ ಆತ್ಮಜಾಗೃತಿಯುಂಟಾಗಲಿ" ಎಂದು ಹರಸಿದರು. ಅವರ ಆ ದಿವ್ಯಸ್ಪರ್ಶದಿಂದಾಗಿ ಪ್ರತಿಯೊಬ್ಬರಿಗೂ ಒಂದೊಂದು ಬಗೆಯ ಅದ್ಭುತ ಆಧ್ಯಾತ್ಮಿಕಾನುಭವವಾಯಿತು! ಕೆಲವರು ಆ ಆನಂದಾನುಭವದ ಉತ್ಕಟತೆಯನ್ನು ತಾಳಲಾರದೆ ಕುಸಿದುಬಿದ್ದರೆ, ಇನ್ನು ಕೆಲವರು ಹಾಡುತ್ತ ನರ್ತಿಸಲಾರಂಭಿಸಿದರು! ನಿಮಿಷಾರ್ಧದಲ್ಲಿ ಅಲ್ಲೊಂದು ಆನಂದದ ಸಂತೆಯೇ ನಿರ್ಮಾಣವಾಯಿತು. ಹೀಗೆ ಭಕ್ತರೆಲ್ಲ ತಮ್ಮ ಮನೋರಥಗಳನ್ನು ಪೂರೈಸುವ ಕಲ್ಪತರುವಿನ ಕೃಪೆಗೆ ಪಾತ್ರರಾದರು. (ಇಂದಿಗೂ ಜನವರಿ ಒಂದರಂದು ಕಾಶೀಪುರದ ಆ ದಿವ್ಯ ಉದ್ಯಾನದಲ್ಲಿ ಲಕ್ಷಗಟ್ಟಲೆ ಜನ ಸೇರಿ ಅತ್ಯುತ್ಸಾಹದಿಂದ 'ಕಲ್ಪತರು ದಿನಾಚರಣೆ'ಯನ್ನು ನೆರವೇರಿಸುತ್ತಾರೆ.)

ತಾನು ಕೆಲವು ವರ್ಷಗಳವರೆಗಾದರೂ ವಕೀಲನಾಗಿ ದುಡಿದು, ಚೆನ್ನಾಗಿ ಹಣ ಸಂಪಾದಿಸಿ, ತನ್ನ ಮನೆಮಂದಿಯ ಜೀವನೋಪಾಯಕ್ಕಾಗಿ ವ್ಯವಸ್ಥೆ ಮಾಡಿಟ್ಟು, ಅನಂತರ ಸಂಸಾರತ್ಯಾಗ ಮಾಡಿ ಸಂನ್ಯಾಸಿಯಾಗಬೇಕು ಎಂಬ ಆಕಾಂಕ್ಷೆ ನರೇಂದ್ರನದಾಗಿತ್ತು. ಆದರೆ ಶ್ರೀರಾಮಕೃಷ್ಣರ ದಿವ್ಯಸಾನ್ನಿಧ್ಯದಲ್ಲಿ ಬದುಕುತ್ತ, ದಿನ ಕಳೆದಂತೆ ಅವನ ಮನೋಭಾವದಲ್ಲಿ ತೀವ್ರ ಬದಲಾವಣೆಯುಂಟಾಗಿಬಿಟ್ಟಿತು. ಪ್ರಾಪಂಚಿಕ ಬಂಧನಗಳನ್ನೆಲ್ಲ ಕಡಿದುಕೊಂಡು ಧ್ಯಾನ-ಸಮಾಧಿಯ ಆನಂದದಲ್ಲಿ ಮುಳುಗಿಬಿಡಲು ಹಾತೊರೆಯಲಾರಂಭಿಸಿದ. ಅದನ್ನು ಗುರುತಿಸಿದ ಶ್ರೀರಾಮಕೃಷ್ಣರು ಒಂದು ದಿನ (ಜನವರಿ ನಾಲ್ಕರಂದು) ಅವನನ್ನು ಅರ್ಧಹಾಸ್ಯವಾಗಿ ಕೇಳುತ್ತಾರೆ: "ಏನು, ನಿನ್ನ ಅಧ್ಯಯನವನ್ನು ಮುಂದುವರಿಸುವುದಿಲ್ಲವೆ?" ಆಗ ಅವನು ಗಂಭೀರವಾಗಿ ಉತ್ತರಿಸುತ್ತಾನೆ: "ಮಹಾಶಯರೇ, ನಾನು ಈಗಾಗಲೇ ಓದಿರುವುದನ್ನೆಲ್ಲ ಮರೆತುಬಿಡುವಂತೆ ಮಾಡುವ ಔಷಧಿಯೇನಾದರೂ ಇದ್ದಿದ್ದರೆ ಅದನ್ನು ತೆಗೆದುಕೊಂಡು ನೆಮ್ಮದಿಯಿಂದಿರುತ್ತಿದ್ದೆ!"

ಅದೇ ದಿನ ಸಾಯಂಕಾಲ ಮಹೇಂದ್ರನಾಥ ಗುಪ್ತನ ಜೊತೆಯಲ್ಲಿ ಏಕಾಂತದಲ್ಲಿ ಮಾತನಾಡುತ್ತಿರುವಾಗ ಅವನು ತನ್ನ ಚಡಪಡಿಕೆಯನ್ನು ತೋಡಿಕೊಳ್ಳುತ್ತಾನೆ:

ನರೇಂದ್ರ: "ಕಳೆದ ಶನಿವಾರ (ಜನವರಿ ೨, ೧೮೮೬) ಧ್ಯಾನ ಮಾಡುತ್ತಿದ್ದಾಗ ನನ್ನ ಎದೆಯಲ್ಲಿ ಏನೋ ಒಂದು ವಿಚಿತ್ರ ಸಂವೇದನೆಯು ಅನುಭವವಾಯಿತು."

ಮಹೇಂದ್ರನಾಥ: "ಕುಂಡಲಿನಿ ಜಾಗೃತವಾಗಿದ್ದಿರಬೇಕು."

ನರೇಂದ್ರ: "ಇರಬಹುದೇನೋ. ನಾನು ಇಡಾ-ಪಿಂಗಳಾ ನಾಡಿಗಳ ಮಿಡಿತವನ್ನು ಸ್ಪಷ್ಟವಾಗಿ ಅನುಭವಿಸಿದೆ. ಆಗ ಅಲ್ಲಿದ್ದ ಹಾಜರಾನಿಗೆ ಹೇಳಿದೆ—ನನ್ನ ಎದೆಯನ್ನು ಮುಟ್ಟಿನೋಡು ಅಂತ. ನಿನ್ನೆ ಶ್ರೀರಾಮಕೃಷ್ಣರಿಗೂ ಈ ವಿಷಯವನ್ನು ತಿಳಿಸಿದೆ. ಬಳಿಕ

ಹೇಳಿದೆ—'ಅಂದು ಒಂದನೇ ತಾರೀಖಿನಂದು, ಎಲ್ಲರಿಗೂ ಸಾಕ್ಷಾತ್ಕಾರದ ಅನುಭವವಾಯಿತು. ಈಗ ನನಗೂ ಸ್ವಲ್ಪ ಸಾಕ್ಷಾತ್ಕಾರ ಮಾಡಿಸಿಕೊಡಿ. ಎಲ್ಲರಿಗೂ ಸಿದ್ಧಿಯಾಯಿತು, ನನಗೆ ಮಾತ್ರ ಏನೂ ಇಲ್ಲವೆ?' ಎಂದು. ಅದಕ್ಕೆ ಅವರು, 'ಮೊದಲು ನಿನ್ನ ಮನೆಯವರಿಗೆ ಒಂದು ವ್ಯವಸ್ಥೆ ಮಾಡಿಟ್ಟು ಬಾ. ಆಮೇಲೆ ನಿನಗೇನೇನು ಬೇಕೋ ಎಲ್ಲವೂ ದೊರೆಯುತ್ತದೆ. ನಿನಗೀಗ ಬೇಕಾದುದಾದರೂ ಏನು ಹೇಳು?' ಎಂದರು. ನಾನೆಂದೆ—'ನನಗೆ ಒಟ್ಟಿಗೆ ಮೂರು-ನಾಲ್ಕು ದಿನಗಳಾದರೂ ಸತತ ಸಮಾಧಿಸ್ಥಿತಿಯಲ್ಲೇ ಇದ್ದುಬಿಡಬೇಕೆನ್ನುವ ಆಸೆ. ಯಾವಾಗಲಾದರೂ ಒಂದೊಂದು ಸಲ, ಶರೀರರಕ್ಷಣೆಗಾಗಿ ಸ್ವಲ್ಪ ಆಹಾರ ತೆಗೆದುಕೊಳ್ಳುವುದಕ್ಕೋಸ್ಕರ ಮಾತ್ರ ಸಮಾಧಿಯಿಂದ ಇಳಿದು ಬರುವಂತಾದರೆ ಸಾಕು' ಅಂತ. ಆಗ ಅವರು, 'ಎಂಥಾ ಸಣ್ಣ ಬುದ್ಧಿ ನಿನ್ನದು! ಆ ಸಮಾಧಿಸ್ಥಿತಿಗಿಂತಲೂ ಉನ್ನತವಾದ ಒಂದು ಸ್ಥಿತಿ ಇದೆ. "ಜಗತ್ತಿನಲ್ಲಿರುವುದೆಲ್ಲ ಆ ಭಗವಂತನೊಬ್ಬನೇ" ಎಂಬರ್ಥದ ಹಾಡನ್ನು ಯಾವಾಗಲೂ ಹೇಳುತ್ತಿರುತ್ತೀಯ! ಮೊದಲು ನಿನ್ನ ಮನೆಯ ವ್ಯವಹಾರಗಳನ್ನೆಲ್ಲ ಮುಗಿಸಿಕೊಂಡು, ಆಮೇಲೆ ಇಲ್ಲಿಗೆ ಬಾ. ಸಮಾಧಿಗಿಂತಲೂ ಎತ್ತರದ ಸ್ಥಿತಿಗೇರುವೆಯಂತೆ' ಎಂದು ಛೇಡಿಸಿ ಬುದ್ಧಿ ಹೇಳಿದರು.

"ಇವತ್ತು ಬೆಳಗ್ಗೆ ಮನೆಗೆ ಹೋಗಿದ್ದೆ. ಮನೆಯಲ್ಲಿ ಎಲ್ಲರೂ ನನ್ನನ್ನು ಬೈದರು. 'ಯಾಕೆ ಸುಮ್ಮನೆ ನಿಷ್ಪ್ರಯೋಜಕನಂತೆ ಅಲೆದಾಡುತ್ತಿದ್ದೀಯ? ನಿನ್ನ 'ಲಾ' ಪರೀಕ್ಷೆ ಸಮೀಪಿಸುತ್ತಿದೆ; ಆದರೆ ನೀನು ಮಾತ್ರ ಓದಿನ ಕಡೆಗೆ ಸ್ವಲ್ಪವೂ ಗಮನ ಕೊಡುತ್ತಿಲ್ಲವಲ್ಲ? ಸುಮ್ಮನೆ ಗೊತ್ತುಗುರಿಯಿಲ್ಲದೆ ಸುತ್ತಾಡುತ್ತಿದ್ದೀಯ!' ಅಂತ ಛೀಮಾರಿ ಹಾಕಿದರು. ನಾನು ಪುಸ್ತಕಗಳನ್ನು ಹಿಡಿದುಕೊಂಡು ಓದುವುದಕ್ಕೆ ಅಂತ ಅಜ್ಜಿಯ ಮನೆಗೆ ಹೋದೆ. ಪುಸ್ತಕ ತೆರೆದು ಓದಲು ಪ್ರಯತ್ನಪಟ್ಟೆ. ಆದರೆ ಯಾಕೋ ನನ್ನನ್ನು ಒಂದು ವಿಚಿತ್ರವಾದ ಭಯ ಆವರಿಸಿಕೊಂಡಿತು. ಇದನ್ನು ಓದುವುದೇ ಒಂದು ಭಯಂಕರ ಅಪರಾಧ ಅಂತ ಅನ್ನಿಸಿಬಿಟ್ಟಿತು. ನನ್ನ ಎದೆಯೊಳಗೆಲ್ಲ ಏನೋ ತಳಮಳ! ಒಂದೇ ಸಮನೆ ಅಳತೊಡಗಿದೆ. ನನ್ನ ಜೀವಮಾನದಲ್ಲೇ ಎಂದೂ ಆ ರೀತಿ ಅತ್ತಿರಲಿಲ್ಲ ನಾನು. ಪುಸ್ತಕಗಳನ್ನೆಲ್ಲ ಅಲ್ಲೇ ಎಸೆದು ಅಲ್ಲಿಂದೆದ್ದು ಓಡಿದೆ. ಆ ರಭಸಕ್ಕೆ ಪಾದರಕ್ಷೆಗಳು ದಾರಿಯಲ್ಲೆಲ್ಲೋ ಕಳಚಿ ಬಿದ್ದುಹೋದುವು. ಹುಲ್ಲುಬಣವೆಗಳ ಸಂದಿಗೊಂದಿಯಲ್ಲೆಲ್ಲ ನುಗ್ಗಿದ್ದರಿಂದ ತಲೆ ಮೈ ಕೈಗೆಲ್ಲ ಹುಲ್ಲುಗರಿಗಳು ಸಿಕ್ಕಿಕೊಂಡುಬಿಟ್ಟವು. ಒಂದೇ ಸಮನೆ ಓಡಿ, ಇಲ್ಲಿಗೆ ಬಂದು ನಿಂತೆ."

ನರೇಂದ್ರನ ಚಡಪಡಿಕೆಯನ್ನೂ ವೈರಾಗ್ಯದ ತೀವ್ರತೆಯನ್ನೂ ಗಮನಿಸಿ ಮಹೇಂದ್ರನಾಥ ಅವಾಕ್ಕಾಗಿ ನಿಂತಿದ್ದ. ನರೇಂದ್ರ ತನ್ನ ಮಾತನ್ನು ಮುಂದುವರಿಸಿದ: "ವಿವೇಕ ಚೂಡಾಮಣಿಯನ್ನು ಓದಿದ ಮೇಲಂತೂ ನನ್ನ ಮನಸ್ಸು ಪೂರ್ತಿ ಕಲಕಿಹೋಗಿಬಿಟ್ಟಿದೆ. ಆದರಲ್ಲಿ ಶಂಕರಾಚಾರ್ಯರು ಹೇಳಿದ್ದಾರೆ: ಮನುಷ್ಯಜನ್ಮ, ಮುಮುಕ್ಷುತ್ವ ಮತ್ತು ಮಹಾಪುರುಷರ ಸಂಸರ್ಗ—ಇವು ಮೂರು ಲಭಿಸಬೇಕಾದರೆ, ಕಠಿಣ ತಪಸ್ಸಿನ ಮತ್ತು ಪೂರ್ವಜನ್ಮದ ಸತ್ಕರ್ಮಗಳ ಫಲದಿಂದ ಮಾತ್ರವೇ ಸಾಧ್ಯ ಅಂತ. ನನಗೆ ನಾನೇ ಹೇಳಿಕೊಂಡೆ: 'ನನಗೆ ಇವು ಮೂರೂ ದೊರೆತಿವೆ—ಮಹಾತಪಸ್ಸಿನ ಬಲದಿಂದ ನನಗೆ ಮನುಷ್ಯಜನ್ಮ ದೊರೆತಿದೆ; ನನ್ನ ಹೃದಯ ಮುಕ್ತಿಗಾಗಿ ತವಕಿಸುತ್ತಿದೆ. ಇಂಥ ಮಹಾಪುರುಷರ ಸಂಶ್ರಯವೂ ದೊರಕಿದೆ' ಅಂತ... ಸಂಸಾರಜೀವನ ನನಗೆ

ರುಚಿಸುತ್ತಿಲ್ಲ. ಒಬ್ಬಿಬ್ಬರನ್ನು ಬಿಟ್ಟರೆ ಉಳಿದ ಸಂಸಾರಿಗಳ ಸಹವಾಸವೂ ನನಗೆ ಹಿಡಿಸುತ್ತಿಲ್ಲ. . . ನನ್ನ ಜೀವ ಒಂದೇ ಸಮನೆ ತಳಮಳಗುಟ್ಟುತ್ತಿದೆ."

ಅದೇ ದಿನ ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ನಿರಂಜನ ಮತ್ತು ಶಶಿಭೂಷಣ ಶ್ರೀರಾಮಕೃಷ್ಣರ ಬಳಿ ಕುಳಿತಿದ್ದರು. ಶ್ರೀರಾಮಕೃಷ್ಣರು ಮಾತುಮಾತಿಗೂ ನರೇಂದ್ರನ ವಿಷಯವಾಗಿ ಹೇಳುತ್ತಿದ್ದರು: "ಈಗೀಗ ಅವನ ಮನಸ್ಥಿತಿ ಎಷ್ಟು ಅದ್ಭುತ ವಾಗಿದೆ, ನೋಡಿ! ಇದೇ ನರೇಂದ್ರ ಹಿಂದೆ ದೇವರ ಸಾಕಾರತ್ವವನ್ನು ಸುತರಾಂ ನಂಬು ತ್ತಿರಲಿಲ್ಲ. ಆದರೆ ಈಗ ನೋಡಿ, ದೇವರಿಗಾಗಿ ಎಷ್ಟು ವ್ಯಾಕುಲನಾಗಿದ್ದಾನೆ! ಭಗವಂತನಿ ಗಾಗಿ ನಿಮ್ಮ ಜೀವ ತೀವ್ರ ವ್ಯಾಕುಲಗೊಂಡಾಗ, ಆತನ ದರ್ಶನಕ್ಕಾಗಿ ನೀವಿನ್ನು ಹೆಚ್ಚು ದಿನ ಕಾಯಬೇಕಾಗಿಲ್ಲ. ದಿಗಂತದಲ್ಲಿ ಅರುಣೋದಯವಾದ ಮೇಲೆ ಸೂರ್ಯ ಉದಯಿಸಲು ಇನ್ನು ಹೆಚ್ಚು ಹೊತ್ತೇನೂ ಇಲ್ಲ."

ಈ ಮಾತಿನ ಮೂಲಕ ಅವರು, ನರೇಂದ್ರ ಶೀಘ್ರದಲ್ಲೇ ತನ್ನ ಗುರಿಯನ್ನು ಸಿದ್ಧಿಸಿಕೊಳ್ಳುವವನಿದ್ದಾನೆ ಎಂಬುದನ್ನು ಸೂಚಿಸುತ್ತಿದ್ದಾರೆ.

ಸಮಾಧಿಸ್ಥಿತಿಗಾಗಿ ನರೇಂದ್ರ ತೀವ್ರವಾಗಿ ಹಂಬಲಿಸುತ್ತಿರುವಾಗ ಶ್ರೀರಾಮ ಕೃಷ್ಣರು ಅವನ ಆ ಬಯಕೆಯನ್ನು ಪ್ರೋತ್ಸಾಹಿಸದಿರುವುದನ್ನು ಕಂಡು ನಮಗೆ ಅಚ್ಚರಿ ಯೆನಿಸಬಹುದು. ನಿಜಕ್ಕೂ ಅವನ ಹಂಬಲಿಕೆಯಲ್ಲಿ ಅಸಹಜವಾದದ್ದೇನೂ ಇಲ್ಲ. ಪ್ರಾಮಾಣಿಕರಾದ ಆಧ್ಯಾತ್ಮಸಾಧಕರು ಸಮಾಧಿಯ ಮೂಲಕ ಭಗವದಾನಂದದಲ್ಲಿ ಮುಳುಗಿರಲು ಹಂಬಲಿಸುವುದನ್ನು ಯುಗಯುಗಗಳಿಂದಲೂ ಕಾಣಬಹುದು. ಆದರೆ ನರೇಂದ್ರ ಜನ್ಮ ತಾಳಿರುವುದು ಕೇವಲ ಸಮಾಧಿಯನ್ನು ಗಳಿಸುವುದಕ್ಕಲ್ಲ. ಅವನು ಕೇವಲ ಸಿದ್ಧಪುರುಷನಾಗಿಬಿಟ್ಟರೆ ಸಾಲದು. ಅವನು ಜಗದೋದ್ಧಾರಕನೂ ಆಗಬೇಕಾ ಗಿದೆ. ಮಾಯಾಸಾಗರವನ್ನು ತಾನೊಬ್ಬನೇ ದಾಟಿಬಿಟ್ಟರೆ ಸಾಲದು, ಇತರರೂ ದಾಟಲು ಅವನು ನೆರವಾಗಬೇಕಾಗಿದೆ. ಆದ್ದರಿಂದ ಅವನು ತಾನೊಬ್ಬ ಮಾತ್ರ ಮುಕ್ತಿಯನ್ನು ಸಂಪಾದಿಸಿಕೊಂಡುಬಿಟ್ಟರೆ ಅದರಲ್ಲೇನೂ ಹೆಚ್ಚುಗಾರಿಕೆಯಿಲ್ಲ, ಅದರಲ್ಲೇನೂ ಮಹತ್ವ ವಿಲ್ಲ. ನರೇಂದ್ರ ಮಾಡಿಕೊಳ್ಳಬೇಕಾದ ಆಧ್ಯಾತ್ಮಿಕ ಅನುಭವವು ಎಷ್ಟು ಉನ್ನತ ವಾದುದೋ, ಅವನು ಮಾಡಬೇಕಾಗಿರುವ ಕಾರ್ಯವೂ ಅಷ್ಟೇ ವಿಶಾಲವಾದುದು. ಅಲ್ಲದೆ ತನಗೆ ಸಮಾಧಿಸ್ಥಿತಿಯನ್ನು ದೊರಕಿಸಿಕೊಡುವಂತೆ ಶ್ರೀರಾಮಕೃಷ್ಣರನ್ನು ಕೇಳಿ ಕೊಂಡಾಗ ಅವರು ಅವನಿಗೆ ಅದಕ್ಕಿಂತಲೂ ಉನ್ನತವಾದ ಸ್ಥಿತಿಯನ್ನು ಸಿದ್ಧಿಸಿಕೊಡು ವುದಾಗಿ ಹೇಳಿದ್ದನ್ನು ನೋಡಿದೆವು. ಯಾವುದಿರಬಹುದು ಅದು ? ಅದು ವಿಜ್ಞಾನಸ್ಥಿತಿ. ಶ್ರೀರಾಮಕೃಷ್ಣರೇ ಹೇಳುವಂತೆ, ಹಾಲನ್ನು ಕಣ್ಣಿನಿಂದ ನೋಡಿ ಅದರ ಬಾಹ್ಯ ಗುಣಗಳ ಪರಿಚಯ ಮಾಡಿಕೊಳ್ಳುವುದು ಜ್ಞಾನವಾದರೆ, ಹಾಲನ್ನು ಕುಡಿದು ಪುಷ್ಟಿಯಾಗಿ ಬೆಳೆಯುವುದು ವಿಜ್ಞಾನ. ಅಂತೆಯೇ ಸಮಾಧಿಗೇರಿ ತನ್ನೊಳಗೆ ಭಗವಂತನನ್ನು ಕಾಣು ವುದು ಜ್ಞಾನ; ಸಮಾಧಿಯಿಂದಿಳಿದು, ಕಣ್ತೆರೆದು, ಸಕಲ ಜೀವಜಂತುಗಳಲ್ಲೂ ಅದೇ ಭಗವಂತನನ್ನು ಕಾಣುವುದೇ ವಿಜ್ಞಾನಸ್ಥಿತಿ. ಆದ್ದರಿಂದಲೇ ನರೇಂದ್ರ ಸಮಾಧಿಸ್ಥಿತಿ ಯನ್ನು ಬಯಸಿದಾಗ ಅವರು ಅವನಿಗೆ ಅದಕ್ಕಿಂತಲೂ ಉನ್ನತವಾದ ಸ್ಥಿತಿಯ ಅನುಭವ ಮಾಡಿಸಿಕೊಡುವುದಾಗಿ ಹೇಳುತ್ತಾರೆ.

ಈ ನಡುವೆ ನರೇಂದ್ರ ಜಪ-ತಪ-ಧ್ಯಾನಗಳನ್ನು ಇನ್ನಷ್ಟು ತೀವ್ರಗೊಳಿಸಿದ್ದ. ಪ್ರತಿರಾತ್ರಿಯೂ ದಕ್ಷಿಣೇಶ್ವರಕ್ಕೆ ಹೋಗಿ ಪಂಚವಟಿಯಲ್ಲಿ ಧುನಿ ಹೊತ್ತಿಸಿಕೊಂಡು

ಧ್ಯಾನನಿರತನಾಗಿಬಿಡುತ್ತಿದ್ದ. ಶ್ರೀರಾಮಕೃಷ್ಣರು ಅವನಿಗೆ ಹಲವಾರು ಆಧ್ಯಾತ್ಮಿಕ ಸಾಧನಾ ವಿಧಾನಗಳನ್ನು ಬೋಧಿಸುತ್ತಿದ್ದರು. ಆ ಸೂಚನೆಗಳನ್ನು ಅನುಸರಿಸುತ್ತ ಅವನು ಯಶಸ್ವಿಯಾಗಿ ಮುಂದುವರಿಯುತ್ತಿದ್ದ.

ಇದರೊಂದಿಗೆ ಅವರು ಮೆಲ್ಲನೆ ನರೇಂದ್ರನನ್ನು ಉಳಿದೆಲ್ಲ ಯುವಶಿಷ್ಯರ ನಾಯಕನನ್ನಾಗಿ ಸಿದ್ಧಗೊಳಿಸುತ್ತಿದ್ದರು. ತಾವೆಲ್ಲರೂ ಭವ್ಯ ಆಧ್ಯಾತ್ಮಿಕ ವ್ಯಕ್ತಿತ್ವಗಳನ್ನು ರೂಪಿಸಿಕೊಂಡು ಸರ್ವಸಂಗ ಪರಿತ್ಯಾಗ ಮಾಡಿ ಶ್ರೀರಾಮಕೃಷ್ಣರ ಉದಾತ್ತ ಸಂದೇಶ ಗಳನ್ನು ಜಗತ್ತಿನಲ್ಲಿ ಪ್ರಸಾರ ಮಾಡಬೇಕಾಗಿದೆ ಎಂಬುದು ನರೇಂದ್ರನೂ ಸೇರಿದಂತೆ ಆ ಯುವಕರಾರಿಗೂ ಗೊತ್ತಿರಲಿಲ್ಲ. ಶ್ರೀರಾಮಕೃಷ್ಣರ ದಿವ್ಯದೃಷ್ಟಿಗೆ ಮಾತ್ರ ಇವೆಲ್ಲವೂ ಹಗಲಿನಷ್ಟು ಸ್ಪಷ್ಟ. ಆದರೆ ಆ ಯುವಕರೇನಾದರೂ ಹರಿಹಂಚಿಹೋದರೆ, ಬಳಿಕ ಅವರೆಲ್ಲ ತಮ್ಮ ಪಾಡಿಗೆ ತಾವು ಸಾಧನೆ ಮಾಡಿ ಎಂತಹ ಮಹಾತ್ಮರೇ ಆದರೂ, ಅವರಿಂದ ಲೋಕಕಲ್ಯಾಣಕಾರ್ಯವೆಂಬುದು ಸಾಧ್ಯವಾಗುವುದಿಲ್ಲ; ಅವರೆಲ್ಲರೂ ಒಗ್ಗಟ್ಟಿನಿಂದಿರಬೇಕಾದರೆ ಅವರೆಲ್ಲರನ್ನೂ ಮನವರಿತು ನಡೆಸಿಕೊಂಡು ಹೋಗಬಲ್ಲ ಒಬ್ಬ ನಾಯಕ ಬೇಕೇಬೇಕು; ಮತ್ತು ಆ ಶಕ್ತಿ-ಸಾಧ್ಯತೆಗಳನ್ನುಳ್ಳವನು ನರೇಂದ್ರನೇ ಎಂಬುದೂ ಅವರಿಗೆ ತಿಳಿದಿತ್ತು. ಆದ್ದರಿಂದ ಮುಂದೆ ಅವನು ಆ ಶಿಷ್ಯರನ್ನೆಲ್ಲ ಸಮರ್ಥ ರೀತಿಯಲ್ಲಿ ಒಂದುಗೂಡಿಸಿ, ಮುನ್ನಡೆಸಿ, ಅವರಿಂದ ಮಹಾಕಾರ್ಯಗಳನ್ನು ಸಾಧಿಸು ವಂತೆ ಶ್ರೀರಾಮಕೃಷ್ಣರು ಅವನನ್ನು ತಯಾರುಗೊಳಿಸುತ್ತಿದ್ದರು. ಒಂದು ದಿನ ಅವರು ನರೇಂದ್ರನನ್ನು ಕರೆದು, "ನೋಡು, ನಾನು ಇವರನ್ನೆಲ್ಲ ನಿನ್ನ ರಕ್ಷಣೆಯಲ್ಲಿ ಬಿಟ್ಟು ಹೋಗುತ್ತಿದ್ದೇನೆ. ನಾನು ಶರೀರತ್ಯಾಗ ಮಾಡಿದ ಮೇಲೂ ಇವರು ಆಧ್ಯಾತ್ಮಿಕ ಸಾಧನೆ ಮಾಡುವಂತೆ ಮತ್ತು ಮನೆಗಳಿಗೆ ಹಿಂದಿರುಗಿ ಹೋಗದಂತೆ ನೋಡಿಕೋ" ಎಂಬ ಸ್ಪಷ್ಟ ಸೂಚನೆಯನ್ನಿತ್ತರು.

ಅವರೆಲ್ಲರೂ ಮುಂದೆ ಸರ್ವಸಂಗ ಪರಿತ್ಯಾಗ ಮಾಡಿ ಸಂನ್ಯಾಸಿಗಳಾಗಬೇಕು ಎಂಬುದೇ ಶ್ರೀರಾಮಕೃಷ್ಣರ ಉದ್ದೇಶ. ಧರ್ಮಪ್ರಸಾರ ಮಾಡಬೇಕಾದವರಲ್ಲಿ ಇರ ಬೇಕಾದ ಪ್ರಧಾನ ಯೋಗ್ಯತೆಯೇ ತ್ಯಾಗ. ಜನಸಾಮಾನ್ಯರು ತಾವೇ ಸ್ವತಃ ತ್ಯಾಗ ಮಾಡಲು ಸಿದ್ಧರಾಗಿರದಿದ್ದರೂ ತ್ಯಾಗ ಮಾಡಿದವರನ್ನು ಕಂಡು ಮೆಚ್ಚಿಕೊಳ್ಳುವ ಗುಣ ಅವರಲ್ಲಿರುತ್ತದೆ. ಸ್ವತಃ ತಾವೇ ಭೋಗಿಗಳಾಗಿ ವಿಲಾಸದಲ್ಲೇ ಮುಳುಗಿರುವವರೂ ಕೂಡ ತಮಗೆ ಧರ್ಮವನ್ನು ಬೋಧಿಸುವವರು ತ್ಯಾಗಿಗಳಾಗಿರಬೇಕು ಎಂದು ನಿರೀಕ್ಷಿ ಸುತ್ತಾರೆ. ಇದು ತೀರ ಸಹಜ. ಭೋಗವನ್ನು ಅನುಭವಿಸುವವನು ಯೋಗದ ಮಾತ ನಾಡಿದರೆ ಯಾರು ಕೇಳುತ್ತಾರೆ? ಆದ್ದರಿಂದ ಯೋಗವನ್ನು ಬೋಧಿಸುವವರು ತ್ಯಾಗಿ ಗಳಾಗಿರಬೇಕಾಗುತ್ತದೆ. ಅಲ್ಲದೆ ಜನಸೇವೆ ಮಾಡಬೇಕಾದರೂ ತ್ಯಾಗಿಗಳಾಗಿರಬೇಕಾಗು ತ್ತದೆ. ಹೀಗೆ, ತ್ಯಾಗವಿಲ್ಲದೆ ಯಾವ ಮಹಾಕಾರ್ಯವನ್ನೂ ಸಾಧಿಸಲಾಗುವುದಿಲ್ಲ. ಅದರಲ್ಲೂ ಧರ್ಮಪ್ರಸಾರಕ್ಕಂತೂ ತ್ಯಾಗಮಯ ವ್ಯಕ್ತಿತ್ವವೇ ಬೇಕು. ಆದ್ದರಿಂದಲೇ ಶ್ರೀರಾಮಕೃಷ್ಣರು ಪರಿಶುದ್ಧ ಹೃದಯದ ಆ ಯುವಕರನ್ನು ಮನೆಗಳಿಗೆ ಹಿಂದಿರುಗ ಗೊಡದೆ ತ್ಯಾಗಿಗಳನ್ನಾಗಿ ಮಾಡುತ್ತಿದ್ದಾರೆ.

ಇಲ್ಲಿ ಇನ್ನೊಂದು ಬಹುಮುಖ್ಯವಾದ ಅಂಶವನ್ನು ಗಮನಿಸಬೇಕಾದದ್ದಿದೆ. ಏನೆಂದರೆ, ಅಂತಹ ಯೌವನಭರಿತರಾದ, ಶಕ್ತಿಶಾಲಿಗಳಾದ ಯುವಕರನ್ನು ಭೋಗ ವಿಮುಕ್ತರನ್ನಾಗಿಸಿ ತ್ಯಾಗಿಗಳನ್ನಾಗಿ ಪರಿವರ್ತಿಸಬೇಕಾದರೆ ಶ್ರೀರಾಮಕೃಷ್ಣರ ಆಕರ್ಷಣಾ

ಶಕ್ತಿ ಎಷ್ಟು ಪ್ರಬಲವಾಗಿದ್ದಿರಬೇಕು!.. ಅಲ್ಲದೆ, ಅವರ ನಿರ್ಯಾಣಾನಂತರ ಆ ಯುವಕರನ್ನು ತ್ಯಾಗಿಗಳನ್ನಾಗಿಯೇ ಉಳಿಸಿ ಹಿಡಿದಿಟ್ಟುಕೊಳ್ಳಬೇಕಾದರೆ ನರೇಂದ್ರನಲ್ಲಿ ಎಂತಹ ಸಾಮರ್ಥ್ಯ ಇದ್ದಿರಬೇಕು! ಪ್ರಾಯಪ್ರಬುದ್ಧರಾದ ಯುವಕರು ತಮ್ಮ ಭವಿಷ್ಯ ಜೀವನದ ಸುಂದರ ಸ್ವಪ್ನಗಳನ್ನು ಕಾಣುತ್ತಿರುವುದೇ ಸಾಮಾನ್ಯ. ಅಲ್ಲದೆ ಅವರಿಗೆ ತಮ್ಮ ತಾಯ್ತಂದೆಯರ, ಕುಟುಂಬವರ್ಗದವರ ಪ್ರೀತಿ-ವಿಶ್ವಾಸದ ಬಂಧನ ಸಾಕಷ್ಟು ಬಲವಾಗಿಯೇ ಇರುತ್ತದೆ. ಹೀಗಿರುವಾಗ, ಶ್ರೀರಾಮಕೃಷ್ಣರು ಆ ಯುವಕರ ಸುಂದರ ಸ್ವಪ್ನಗಳನ್ನೆಲ್ಲ ಚೆದರಿಸಿ, ಸ್ವಜನಪ್ರೇಮದ ಬಂಧನದಿಂದ ಬಿಡಿಸಿ, ತಮ್ಮ ಧರ್ಮಪ್ರಸಾರ ಕಾರ್ಯಕ್ಕೆ ಅವರನ್ನು ನಿಯೋಜಿಸಬೇಕಾದರೆ ಅದೆಂತಹ ಆಕರ್ಷಣೆ, ಅದೆಂತಹ ವ್ಯಕ್ತಿತ್ವ ಶ್ರೀರಾಮಕೃಷ್ಣರದ್ದಾಗಿರಬೇಕು!

ಶ್ರೀರಾಮಕೃಷ್ಣರು ತಮ್ಮ ಶಿಷ್ಯರನ್ನು ಮೆಲ್ಲನೆ ಸಂನ್ಯಾಸಜೀವನಕ್ಕೆ ಅಣಿಗೊಳಿಸುತ್ತಿದ್ದರು. ಅವರಲ್ಲಿ ಸೂಕ್ಷ್ಮರೂಪದಲ್ಲಿರಬಹುದಾದ ದೊಡ್ಡಸ್ತಿಕೆ, ಜಂಬ ಇವುಗಳನ್ನು ಹೋಗಲಾಡಿಸಿ, ಸಂನ್ಯಾಸದ ಕಷ್ಟ-ಕಾರ್ಪಣ್ಯಗಳ ಪರಿಚಯ ಮಾಡಿಕೊಡುವ ಉದ್ದೇಶದಿಂದ, ಒಂದು ದಿನ ಅವರನ್ನೆಲ್ಲ ಕರೆದು, ಮನೆಮನೆಗೆ ಹೋಗಿ ಭಿಕ್ಷೆ ಪಡೆದುಕೊಂಡು ಬರುವಂತೆ ಆದೇಶಿಸಿದರು. (ಸಾಧು-ಸಂನ್ಯಾಸಿಗಳು ಹೀಗೆ ಭಿಕ್ಷೆ ಬೇಡುವುದು ಭಾರತದಲ್ಲಿ ಅನಾದಿಕಾಲದಿಂದ ಬಂದಿರುವ ಪದ್ಧತಿ. ಇದಕ್ಕೆ ಶಾಸ್ತ್ರಗಳಲ್ಲಿ 'ಮಧುಕರೀ ಭಿಕ್ಷೆ'* ಎಂಬ ಹೆಸರಿದೆ.) ಕೂಡಲೇ ಆ ಶಿಷ್ಯರೆಲ್ಲ ಉತ್ಸಾಹದಿಂದ ಸಿದ್ಧರಾದರು. ಅವರೆಲ್ಲ ಒಳ್ಳೇ ವಿದ್ಯಾವಂತರು; ಅನುಕೂಲಸ್ಥ ಕುಟುಂಬಗಳಿಂದ ಬಂದವರು. ಆದರೂ ನಾಚಿಕೆ-ಕಸಿವಿಸಿ ಪಟ್ಟುಕೊಳ್ಳದೆ, ಭಿಕ್ಷಾಪಾತ್ರೆ ಹಿಡಿದು ಹೊರಟು ಕಾಶೀಪುರದ ಕೆಲವು ಮನೆಗಳ ಮುಂದೆ ನಿಂತು 'ನಾರಾಯಣ ಹರಿ!' ಎನ್ನುತ್ತ ಭಿಕ್ಷೆ ಯಾಚಿಸಿದರು. ಆದರೆ ಒಂದನೆಯದಾಗಿ, ಅವರಾರೂ ಕಾವಿ ಧರಿಸಿರಲಿಲ್ಲ. ಎರಡನೆಯದಾಗಿ, ಗಟ್ಟಿ ಮುಟ್ಟಾದ ಯುವಕರು! ಆದ್ದರಿಂದ ಕೆಲವು ಮನೆಯವರು, "ಏನ್ರಯ್ಯ, ಒಳ್ಳೆ ಕಟ್ಟುಮಸ್ತಾಗಿ ಬೆಳೆದಿದ್ದೀರಿ, ಭಿಕ್ಷೆ ಕೇಳಲು ಬರುತ್ತೀರಲ್ಲ! ನಾಚಿಕೆಯಾಗುವುದಿಲ್ಲವೆ? ಹೋಗಿ ಹೋಗಿ, ದುಡಿದು ತಿನ್ನಿ" ಎಂದು ಬೈದು ಅಟ್ಟಿದರು. ಇನ್ನು ಕೆಲವು ತಾಯಂದಿರು ಇವರನ್ನು ಕಂಡು "ಅಯ್ಯೋ! ಇಂತಹ ಕುಲವಂತ ಹುಡುಗರಿಗೆ ಭಿಕ್ಷೆ ಬೇಡುವ ಗತಿ ಏಕಾದರೂ ಬಂತೋ!" ಎಂದು ಕಣ್ಣೀರು ಸುರಿಸಿದರು. ಅಂತೂ ಈ ಶಿಷ್ಯರೆಲ್ಲ ಸೇರಿ ಒಂದಿಷ್ಟು ಅಕ್ಕಿ-ಬೇಳೆಕಾಳುಗಳ ಭಿಕ್ಷೆ ಸಂಗ್ರಹಿಸಿ ತಂದರು. ಅದನ್ನು ಬೇಯಿಸಿ ಅಡಿಗೆ ಮಾಡಿ ಶ್ರೀರಾಮಕೃಷ್ಣರಿಗೆ ಸಮರ್ಪಿಸಿದರು. ಅವರು ಬಹಳ ಆನಂದ ಪಡುತ್ತ ಒಂದೆರಡು ಅಗುಳನ್ನು ಬಾಯಿಗೆ ಹಾಕಿಕೊಂಡು "ಆಹ್! ಬಹಳ ಒಳ್ಳೆಯ ಕೆಲಸ ಮಾಡಿದಿರಿ; ಇದು ಅತ್ಯಂತ ಪರಿಶುದ್ಧವಾದ ಆಹಾರ" ಎಂದು ಉದ್ಗರಿಸಿದರು. ಬಳಿಕ ಯುವಕರೆಲ್ಲ ಆ ಭಿಕ್ಷಾನ್ನವನ್ನು ಹಂಚಿಕೊಂಡರು.

ಕಾಶೀಪುರದ ತೋಟದ ಮನೆಯ ವಾಸದ ಈ ಸಂದರ್ಭದಲ್ಲಿ ತನಗುಂಟಾದ ಒಂದು ಅಲೌಕಿಕ ಅನುಭವವನ್ನು ತಾರಕನಾಥ (ಮುಂದೆ ಸ್ವಾಮಿ ಶಿವಾನಂದ) ಅನೇಕ ವರ್ಷಗಳ ಬಳಿಕ ಹೊರಗೆಡಹುತ್ತಾನೆ. ಶಿಷ್ಯರೆಲ್ಲ ಪ್ರತಿರಾತ್ರಿ ಒಟ್ಟಾಗಿಯೇ ಮಲಗುತ್ತಿದ್ದರು. ಹಾಸಿಗೆ ಬಟ್ಟೆಗಳ ಅನುಕೂಲತೆಯೂ ಹೆಚ್ಚಾಗಿರಲಿಲ್ಲ. ಆದ್ದರಿಂದ ಒಂದೇ

*ನೋಡಿ: ಅನುಬಂಧ ೪.

ಸೊಳ್ಳೆಪರದೆಯೊಳಗೆ ಅನೇಕರು ಒಟ್ಟಾಗಿ ಮಲಗುತ್ತಿದ್ದರು. ಒಂದು ರಾತ್ರಿ ಎಂದಿನಂತೆ ತಾರಕ, ಶಶಿ, ನರೇಂದ್ರ ಮತ್ತಿತರು ಹೀಗೇ ಒಟ್ಟಾಗಿ ಮಲಗಿದ್ದಾರೆ. ಮಧ್ಯರಾತ್ರಿಯಲ್ಲಿ ತಾರಕನಿಗೆ ಅದೇಕೋ ಇದ್ದಕ್ಕಿದ್ದಂತೆ ಎಚ್ಚರವಾಯಿತು. ಕಣ್ತೆರೆದು ನೋಡುತ್ತಾನೆ, ಪರದೆಯ ಒಳಗೆಲ್ಲ ಏನೋ ಒಂದು ಅಲೌಕಿಕ ಬೆಳಕು! ಪಕ್ಕಕ್ಕೆ ನೋಡಿದರೆ ಅಲ್ಲೇ ಮಲಗಿದ್ದ ನರೇಂದ್ರ ಈಗ ಕಾಣುತ್ತಲೇ ಇಲ್ಲ; ಬದಲಾಗಿ ಶಿವನ ತದ್ರೂಪಿಗಳಾದ ಏಳೆಂಟು ವರ್ಷ ವಯಸ್ಸಿನ ಹಲವಾರು ಪುಟ್ಟಪುಟ್ಟ ಬಾಲಕರು ಮಲಗಿ ನಿದ್ರಿಸುತ್ತಿದ್ದಾರೆ! ಎಲ್ಲರೂ ದಿಗಂಬರರಾಗಿ, ಜಟಾಜೂಟಧಾರಿಗಳಾಗಿ, ಶ್ವೇತವರ್ಣದಿಂದ ವಿರಾಜಿಸುತ್ತಿದ್ದಾರೆ! ಪರದೆಯ ಒಳಗೆ ಹರಡಿಕೊಂಡಿರುವ ಬೆಳಕು ಇವರಿಂದಲೇ ಹೊಮ್ಮುತ್ತಿದೆ! ತಾರಕನಿಗೆ ಮೊದಲು ತನ್ನ ನಿದ್ದೆಗಣ್ಣಿಗೆ ಏನೋ ಕಾಣಿಸುತ್ತಿರಬೇಕು ಎನ್ನಿಸಿತು. ಆದರೆ ಕಣ್ಣುಜ್ಜಿಕೊಂಡು ಪೂರ್ತಿ ಎಚ್ಚರಿಕೆಯಿಂದ ದಿಟ್ಟಿಸಿ ನೋಡಿದಾಗಲೂ ಅದೇ ದೃಶ್ಯ ಮತ್ತಷ್ಟು ಸ್ಪಷ್ಟವಾಗಿ ಕಾಣುತ್ತಿದೆ! ತಾರಕ ಕಿಂಕರ್ತವ್ಯವಿಮೂಢನಾಗಿ ಹಾಗೇ ಕುಳಿತುಬಿಟ್ಟ. ಮತ್ತೆ ಮಲಗಲು ಮನಸ್ಸಾಗಲಿಲ್ಲ. ನಿದ್ರೆ ಆವರಿಸಿ, ಎಚ್ಚರ ತಪ್ಪಿ ಅವರಿಗೆ ತನ್ನ ಕಾಲು ತಗಲಿಬಿಟ್ಟರೆ!—ಎಂಬ ಭಯವುಂಟಾಯಿತು. ಬಳಿಕ ಅವನು ಆ ರಾತ್ರಿಯೆಲ್ಲ ಧ್ಯಾನ ಮಾಡುತ್ತ ಕುಳಿತಿದ್ದುಬಿಟ್ಟ. ಅರುಣೋದಯದ ವೇಳೆಗೆ ಕಣ್ತೆರೆದು ನೋಡುತ್ತಾನೆ—ಪಕ್ಕದಲ್ಲಿ ನರೇಂದ್ರ ರಾತ್ರಿ ಹೇಗೆ ಮಲಗಿದ್ದನೋ ಹಾಗೇ ಮಲಗಿದ್ದಾನೆ! ಆದರೆ ತಾನು ಕಂಡದ್ದು ಶತಪಾಲು ಸತ್ಯವೆಂದು ತಾರಕನಿಗೆ ದೃಢವಾಗಿ ಬಿಟ್ಟಿತ್ತು. ನರೇಂದ್ರ ಎದ್ದಮೇಲೆ ತನ್ನ ಅನುಭವವನ್ನು ಅವನಿಗೆ ತಿಳಿಸಿದ. ಎಲ್ಲವನ್ನೂ ಕೇಳಿ ನರೇಂದ್ರ ಸುಮ್ಮನೆ ಗಟ್ಟಿಯಾಗಿ ನಕ್ಕುಬಿಟ್ಟ.

ಈ ನಡುವೆ ಶ್ರೀರಾಮಕೃಷ್ಣರ ಅನಾರೋಗ್ಯ ಕ್ರಮೇಣ ಉಲ್ಬಣವಾಗುತ್ತಲೇ ಬಂತು. ಕ್ಯಾನ್ಸರ್ ರೋಗವನ್ನು ಗುಣಪಡಿಸಬಲ್ಲ ಚಿಕಿತ್ಸೆ ಇಂದಿಗೂ ಲಭ್ಯವಿಲ್ಲ, ಆಗಂತೂ ಇರಲೇ ಇಲ್ಲ. ಜೊತೆಗೆ ರೋಗದ ಬಗೆಗಿನ ಜನರ ತಿಳಿವಳಿಕೆಯೂ ಅಷ್ಟಕ್ಕಷ್ಟೇ. ಹೀಗಿರುವಾಗ ಒಂದು ದಿನ ಇದ್ದಕ್ಕಿದ್ದಂತೆ ವದಂತಿಯೊಂದು ಕೇಳಿಬಂತು—ಶ್ರೀರಾಮಕೃಷ್ಣರ ವ್ಯಾಧಿ ಸಾಂಕ್ರಾಮಿಕವಾದದ್ದು ಎಂದು! ಈ ಸುದ್ದಿಯನ್ನು ಹುಟ್ಟು ಹಾಕಿದವರು ಯಾರೋ ತಿಳಿಯದು. ಆದರೆ ಅದರ ಪರಿಣಾಮ ಮಾತ್ರ ಭಯಂಕರವಾಗಿತ್ತು. ತಮ್ಮ ಪ್ರಿಯ ಗುರುದೇವನ ಕಾಯಿಲೆ ವಾಸಿಯಾಗುವುದಿರಲಿ, ತಮಗೇ ಆ ಕಾಯಿಲೆ ಅಂಟಿಕೊಂಡರೇನು ಗತಿ ಎಂದು ಅನೇಕರು ಹೆದರಿ, ಮೆಲ್ಲನೆ ಹಿಂಜರಿಯಲಾರಂಭಿಸಿದರು. ಇದನ್ನು ಕಂಡ ನರೇಂದ್ರನ ಎದೆಯಲ್ಲಿ ಭಾವಗಳ ಜ್ವಾಲಾಮುಖಿ ಸ್ಫೋಟಿಸಿತು. ಕೂಡಲೇ ಸಹಶಿಷ್ಯರನ್ನೆಲ್ಲ ಒಟ್ಟುಗೂಡಿಸಿಕೊಂಡು ಶ್ರೀರಾಮಕೃಷ್ಣರ ಕೋಣೆಗೆ ಹೋದ. ಶ್ರೀರಾಮಕೃಷ್ಣರು ಕುಡಿದು ಉಳಿಸಿದ್ದ, ಅವರ ಎಂಜಲು ಬೆರೆತಿದ್ದ ಗಂಜಿಯ ಬಟ್ಟಲು ಅಲ್ಲಿತ್ತು. ನರೇಂದ್ರ ಒಂದು ಮಾತನ್ನೂ ಆಡದೆ, ಬಟ್ಟಲನ್ನೆತ್ತಿ, ಅದರಲ್ಲಿದ್ದ ಗಂಜಿಯನ್ನೆಲ್ಲ ಕುಡಿದುಬಿಟ್ಟ! 'ಒಂದು ವೇಳೆ ಶ್ರೀರಾಮಕೃಷ್ಣರ ಕಾಯಿಲೆ ಅಂಟುರೋಗವೇ ಆಗಿದ್ದು, ನಮಗೂ ತಗಲುವ ಸಂಭವವಿದ್ದರೆ, ಅದಕ್ಕೆ ಮೊತ್ತ ಮೊದಲು ಬಲಿಯಾಗಲು ಇದೋ, ನಾನು ಸಿದ್ಧನಿದ್ದೇನೆ' ಎಂದು ಅವನ ವರ್ತನೆ ಸಾರಿ ಹೇಳುವಂತಿತ್ತು. ಇದನ್ನು ಕಂಡ ಶಿಷ್ಯರೆಲ್ಲ ಸ್ತಂಭೀಭೂತರಾಗಿ ನಿಂತುಬಿಟ್ಟರು. ಬಳಿಕ ನಾಚಿಕೆಯಿಂದ ತಲೆತಗ್ಗಿಸಿ ಪಶ್ಚಾತ್ತಾಪದ ಕಂಬನಿ ಹರಿಸಿದರು.

ನರೇಂದ್ರನು ತಮ್ಮೆಲ್ಲರಿಗಿಂತ ಹೇಗೆ ಶ್ರೇಷ್ಠನಾದವನು ಎಂಬುದನ್ನು ಮನ

ಗಾಣಲು ಇತರ ಯುವಕರಿಗೆಲ್ಲ ಇದೊಂದು ಉದಾಹರಣೆಯುಷ್ಟೆ. ಅವನು ಬುದ್ಧಿಶಕ್ತಿ, ವಿಚಾರಶಕ್ತಿ, ಜ್ಞಾನಶಕ್ತಿ ಹಾಗೂ ಶ್ರದ್ಧಾಭಕ್ತಿಗಳಲ್ಲಿ ತಮ್ಮೆಲ್ಲರನ್ನೂ ಮೀರಿಸಿದವನು ಎಂಬುದನ್ನು ಅವರೆಲ್ಲ ಅರಿತಿದ್ದರು. ಅಲ್ಲದೆ, ಅವನು ತನ್ನನ್ನು ಮೇಲೆತ್ತಿಕೊಳ್ಳುವುದರ ಜೊತೆಗೆ, ತನ್ನ ಸೋದರಶಿಷ್ಯರನ್ನೂ ತಮ್ಮೆಲ್ಲರ ಜೀವನಾದರ್ಶವನ್ನೂ ಎತ್ತಿಹಿಡಿಯು ತ್ತಿದ್ದ. ತನ್ನ ಧೀರ ಗಂಭೀರ ವ್ಯಕ್ತಿತ್ವದಿಂದ ಇತರ ಶಿಷ್ಯರ ಆಧ್ಯಾತ್ಮಿಕ ಜ್ವಾಲೆಯನ್ನೂ ಇನ್ನಷ್ಟು ಪ್ರಖರಗೊಳಿಸುತ್ತಿದ್ದ. ಆ ಯುವಕರ ತ್ಯಾಗ-ವೈರಾಗ್ಯ ಪ್ರವೃತ್ತಿಯ ಕುರಿತಾಗಿ ಇತರರು ಯಾರಾದರೂ ಹಗುರವಾಗಿ ಮಾತನಾಡಿದರೆ, ಅಥವಾ ಶ್ರೀರಾಮಕೃಷ್ಣರ ಬೋಧನೆಗಳನ್ನು ಟೀಕಿಸಿದರೆ, ಅವನು ತನ್ನ ಪ್ರಖರವಾದ ವಾಗ್ಸಾಮರ್ಥ್ಯದಿಂದ ಅಂಥವರ ಬಾಯಿ ಮುಚ್ಚಿಸಿಬಿಡುತ್ತಿದ್ದ.

ಹೀಗೆ ಅವನು ಶಿಷ್ಯಸಮುದಾಯದ ಸಮರ್ಥ ನಾಯಕನಾಗಿ ವ್ಯಕ್ತವಾಗುತ್ತಿದ್ದ. ಶ್ರೀರಾಮಕೃಷ್ಣರೂ ಅವನ ನಾಯಕತ್ವವನ್ನು ನಾನಾ ಬಗೆಯಲ್ಲಿ ಪ್ರೋತ್ಸಾಹಿಸಿ ಬಲಪಡಿ ಸುತ್ತಿದ್ದರು. "ನರೇಂದ್ರನೇ ನಿಮ್ಮ ನಾಯಕ. ಅವನ ಆಧ್ಯಾತ್ಮಿಕ ಶಕ್ತಿ ಹಾಗೂ ಆಧ್ಯಾತ್ಮಿಕ ಜ್ಞಾನವೇ ಮುಂದೆ ನಿಮಗೆ ಮಾರ್ಗದರ್ಶಕವಾಗಿ ನಿಲ್ಲುತ್ತವೆ" ಎಂದು ಅವರು ಇತರ ಯುವಕರಿಗೆ ಎಷ್ಟೋ ಸಲ ಹೇಳಿದ್ದರು. ನಿಜಕ್ಕೂ ಈ ಯುವಕರು ಶ್ರೀರಾಮಕೃಷ್ಣರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾದದ್ದು ಕೂಡ ನರೇಂದ್ರನ ಮೂಲಕವೇ.

ಈ ಎಲ್ಲ ವಿವಿಧ ಚಟುವಟಿಕೆ-ಸಾಧನೆಗಳ ಮಧ್ಯದಲ್ಲೂ ಅವನು, ತಾನು ಭಗವಂತನ ಸಾಕ್ಷಾತ್ಕಾರ ಪಡೆದುಕೊಳ್ಳಬೇಕಾದರೆ ಶ್ರೀರಾಮಕೃಷ್ಣರ ಕೃಪೆಯಿಂದ ಮಾತ್ರವೇ ಸಾಧ್ಯ ಎಂಬ ಸತ್ಯವನ್ನು ಯಾವಾಗಲೂ ನೆನಪಿಟ್ಟುಕೊಂಡಿದ್ದ. ತನ್ನನ್ನು ಸಾಕ್ಷಾತ್ಕಾರದ ಹಾದಿಯಲ್ಲಿ ನಿರಂತರವಾಗಿ ಮುನ್ನಡೆಸುತ್ತಿರುವವರು ಅವರೇ ಎಂಬು ದನ್ನು ಆತ ಚೆನ್ನಾಗಿ ಮನಗಂಡಿದ್ದ. ತನ್ನ ಸರ್ವಸ್ವವೂ ಆಗಿದ್ದ ಶ್ರೀರಾಮಕೃಷ್ಣರ ಕಾಯಿ ಲೆಯ ವಿಚಾರ ಅವನ ಮನಸ್ಸನ್ನು ಸದಾ ಕಾಡುತ್ತಲೇ ಇತ್ತು. ಒಂದು ದಿನ, ಶ್ರೀರಾಮ ಕೃಷ್ಣರ ಒಬ್ಬ ಮಹಾಭಕ್ತನಾದ ಶಶಧರ ತರ್ಕಚೂಡಾಮಣಿ ಎಂಬ ಪಂಡಿತ ಕಾಶೀ ಪುರಕ್ಕೆ ಬಂದಿದ್ದ. ಆತ ಶ್ರೀರಾಮಕೃಷ್ಣರ ರೋಗದ ತೀವ್ರತೆಯನ್ನು ಕಂಡು ಬಹಳ ಸಂಕಟಪಟ್ಟ. ಜೊತೆಗೆ ಅವನಿಗೆ ತುಂಬ ಆಶ್ಚರ್ಯ ಕೂಡ. ಅವನು ಕೇಳಿದ:

"ಮಹಾಶಯರೆ, ನಿಮ್ಮಂತಹ ಮಹಾತ್ಮರು ಇಂತಹ ಕಾಯಿಲೆಗಳನ್ನೆಲ್ಲ ಕೇವಲ ಇಚ್ಛಾಮಾತ್ರದಿಂದ ವಾಸಿ ಮಾಡಿಕೊಳ್ಳಬಹುದು ಎಂದು ಶಾಸ್ತ್ರಗಳಲ್ಲಿ ಬರೆದಿದೆ. ನೀವು ಆ ಕಾಯಿಲೆಯ ಜಾಗದಲ್ಲಿ ನಿಮ್ಮ ಮನಸ್ಸನ್ನು ಏಕಾಗ್ರಗೊಳಿಸಿಕೊಂಡು, 'ಇದು ವಾಸಿ ಯಾಗಿಬಿಡಲಿ' ಎಂದು ದೃಢವಾಗಿ ಸಂಕಲ್ಪಿಸಿದರಾಯಿತು—ಕಾಯಿಲೆ ವಾಸಿಯಾಗಿ ಬಿಡುತ್ತದೆ. ನೀವೇಕೆ ಹಾಗೆ ಮಾಡಲೊಲ್ಲಿರಿ?"

ಆಗ ಶ್ರೀರಾಮಕೃಷ್ಣರು ಕೂಡ ಅಷ್ಟೇ ಆಶ್ಚರ್ಯದಿಂದ ಮರುಪ್ರಶ್ನೆ ಹಾಕಿದರು: "ಏನಯ್ಯ, ನೀನು ಇಂಥಾ ಮಹಾಪಂಡಿತ! ಆದರೂ ಇಂತಹ ಅವಿವೇಕದ ಸಲಹೆ ಕೊಡುತ್ತೀಯಲ್ಲ! ನಾನು ನನ್ನ ಮನಸ್ಸನ್ನು ಒಮ್ಮೆ ಭಗವಂತನಿಗೆ ಕೊಟ್ಟುಬಿಟ್ಟಾಗಿದೆ. ಈಗ ಆ ಮನಸ್ಸನ್ನು ಹಿಂದೆಗೆದುಕೊಂಡು, ಮತ್ತೆ ಅದನ್ನು ಈ ಕೊಳೆತು ನಾರುವ ರಕ್ತಮಾಂಸಗಳ ಗೂಡಿನ ಮೇಲಿಡಲೇ?" ಪಂಡಿತನಿಗೆ ಆ ಮಾತಿನ ಸತ್ಯತೆ ಮನವರಿಕೆ ಯಾಗಿರಬೇಕು; ಆದ್ದರಿಂದ ಮರುಮಾತಾಡಲಿಲ್ಲ. ಆದರೆ ನರೇಂದ್ರಾದಿ ಶಿಷ್ಯರಿಗೆ ಆತನ ಸಲಹೆ ತುಂಬ ಮೆಚ್ಚಿಗೆಯಾಗಿತ್ತು. ಆತ ಅಲ್ಲಿಂದ ನಿರ್ಗಮಿಸುತ್ತಿದ್ದಂತೆಯೇ ಇವರೆಲ್ಲ

ಶ್ರೀರಾಮಕೃಷ್ಣರನ್ನು ಒತ್ತಾಯಪಡಿಸಲಾರಂಭಿಸಿದರು, "ಮಹಾಶಯರೆ, ಕನಿಷ್ಠಪಕ್ಷ ನಮಗೋಸ್ಕರವಾದರೂ ನೀವು ಈ ಕಾಯಿಲೆಯನ್ನು ವಾಸಿಮಾಡಿಕೊಳ್ಳಬೇಕು" ಎಂದು.

ಶ್ರೀರಾಮಕೃಷ್ಣರು (ನರೇಂದ್ರನಿಗೆ): "ಏನಪ್ಪ, ಈ ಕಾಯಿಲೆಯನ್ನು ನಾನಾಗಿಯೇ ನನ್ನ ಮೇಲೆ ತಂದುಕೊಂಡೆ ಅಂತ ತಿಳಿದೆಯಾ? ನನಗೇನೋ ಇದು ವಾಸಿಯಾಗಲಿ ಅಂತಲೇ ಇಷ್ಟ. ಆದರೂ ಅದು ವಾಸಿಯಾಗುತ್ತಿಲ್ಲ. ಇದೆಲ್ಲ ಜಗನ್ಮಾತೆಯ ಇಚ್ಛೆ—ಅವಳ ಲೀಲೆ."

ನರೇಂದ್ರ: "ಹಾಗಾದರೆ ಈ ಕಾಯಿಲೆಯನ್ನು ಗುಣಪಡಿಸುವಂತೆ ಜಗನ್ಮಾತೆಯನ್ನೇ ಕೇಳಿಕೊಳ್ಳಿ. ಅವಳು ನಿಮ್ಮ ಪ್ರಾರ್ಥನೆಯನ್ನು ಕೇಳದಿರಲು ಸಾಧ್ಯವೇ ಇಲ್ಲ."

ಶ್ರೀರಾಮಕೃಷ್ಣರು: "ನೀನೇನೋ ಸುಲಭವಾಗಿ ಹಾಗೆ ಹೇಳಿಬಿಡಬಹುದು. ಆದರೆ ನಾನು ಇಂಥ ವಿಷಯಗಳನ್ನೆಲ್ಲ ತಾಯಿಯ ಬಳಿ ಕೇಳಿಕೊಳ್ಳಲಾರೆ."

ನರೇಂದ್ರ: "ಅದೆಲ್ಲ ಆಗುವುದಿಲ್ಲ. ನೀವು ಆಕೆಯನ್ನು ಕೇಳಿಕೊಳ್ಳಲೇ ಬೇಕು. ಕಡೆಯಪಕ್ಷ, ನಮಗೋಸ್ಕರವಾದರೂ ಕೇಳಿಕೊಳ್ಳಲೇ ಬೇಕು."

ಕೊನೆಗೆ ಶ್ರೀರಾಮಕೃಷ್ಣರು ತಮ್ಮ ಪ್ರಿಯಶಿಷ್ಯನ ಒತ್ತಾಯಕ್ಕೆ ಕಟ್ಟುಬಿದ್ದು, "ಆಗಲಿ, ಏನಾಗುತ್ತದೋ ನೋಡೋಣ" ಎಂದರು.

ನರೇಂದ್ರಾದಿಗಳು ಅಲ್ಲಿಂದೆದ್ದು ಹೊರಟುಹೋದರು. ಒಂದೆರಡು ಗಂಟೆಗಳ ಬಳಿಕ ನರೇಂದ್ರ ಹಿಂದಿರುಗಿ ಬಂದವನೇ ಕಾತರದಿಂದ ಕೇಳಿದ: "ಕಾಯಿಲೆ ಹೋಗಲಾಡಿಸುವಂತೆ ಜಗನ್ಮಾತೆಯನ್ನು ಕೇಳಿಕೊಂಡಿರಾ? ಆಕೆ ಏನು ಹೇಳಿದಳು?"

ಶ್ರೀರಾಮಕೃಷ್ಣರು: "ಜಗನ್ಮಾತೆಗೆ ನನ್ನ ಗಂಟಲನ್ನು ತೋರಿಸಿ ಹೇಳಿದೆ—'ಅಮ್ಮಾ ಈ ಕಾಯಿಲೆಯ ದೆಸೆಯಿಂದ ನಾನು ಏನನ್ನೂ ತಿನ್ನುವುದಕ್ಕೇ ಸಾಧ್ಯವಾಗುತ್ತಿಲ್ಲ; ಸ್ವಲ್ಪ ಆಹಾರ ತೆಗೆದುಕೊಳ್ಳುವುದಕ್ಕಾದರೂ ಅನುಕೂಲ ಮಾಡಿಕೊಡು' ಅಂತ. ಆದರೆ ಅವಳು ನಿಮ್ಮೆಲ್ಲರ ಕಡೆ ಬೆರಳುಮಾಡಿ ತೋರಿಸಿ, 'ಏಕೆ! ನೀನು ಅಷ್ಟೊಂದು ಬಾಯಿಗಳ ಮೂಲಕ ಈಗ ತಿನ್ನುತ್ತಿಲ್ಲವೇ?' ಅಂತ ಕೇಳಿಬಿಟ್ಟಳು. ನನಗೆ ಅದನ್ನು ಕೇಳಿ ಎಷ್ಟು ನಾಚಿಕೆಯಾಯಿತೆಂದರೆ ಇನ್ನೊಂದು ಮಾತನ್ನೂ ಆಡಲು ಸಾಧ್ಯವಾಗಲಿಲ್ಲ."

ಇದನ್ನು ಕೇಳಿ ನರೇಂದ್ರ ಆಶ್ಚರ್ಯಚಕಿತನಾದ. ಕಿಂಚಿತ್ತೂ ದೇಹಬುದ್ಧಿಯಾಗಲಿ ಸ್ವಾರ್ಥತೆಯಾಗಲಿ ಇಲ್ಲದ ಎಂತಹ ಅದ್ಭುತ ಸ್ಥಿತಿ ಇದು! ನಿಜವಾದ ಅದ್ವೈತ ಭಾವವೆಂದರೆ ಇದೇ ಅಲ್ಲವೆ! 'ಶ್ರೀರಾಮಕೃಷ್ಣರ ಸಾಕ್ಷಾತ್ಕಾರಗಳೆಲ್ಲ ಎಷ್ಟು ಪರಿಪೂರ್ಣವಾದವುಗಳು!' ಎಂದು ಆಲೋಚಿಸುತ್ತ ಅವನ ಬಾಯಿ ಕಟ್ಟಿಹೋಯಿತು.

ದಿನ ಕಳೆದಂತೆ ನರೇಂದ್ರನಲ್ಲಿ ಧ್ಯಾನಭಾವ ಹೆಚ್ಚು ಆಳವಾಗುತ್ತ, ಹೆಚ್ಚು ಸಹಜವಾಗುತ್ತ ಬಂದಿತು. ಅವನು ಯಾವುದೇ ವಿಷಯದ ಕುರಿತಾಗಿ ಚಿಂತಿಸುವಾಗ ತೀವ್ರ ಏಕಾಗ್ರತೆಯಿಂದ ಅದರ ಆಳಕ್ಕೆ ಮುಳುಗುವುದು ಕಂಡುಬರುತ್ತಿತ್ತು. ಧ್ಯಾನಕ್ಕೆ ಕುಳಿತನೆಂದರೆ ಗಾಢ ಧ್ಯಾನದಲ್ಲಿ ಮಗ್ನನಾಗಿಬಿಡುತ್ತಿದ್ದ. ಕೆಲವೊಮ್ಮೆ ಅವನು ಧ್ಯಾನ ಮುಗಿದ ಮೇಲೆ ತನ್ನ ಬಳಿಯಲ್ಲಿ ತನ್ನಂತೆಯೇ ಇರುವ ಇನ್ನೊಬ್ಬ ವ್ಯಕ್ತಿಯನ್ನು ಕಂಡು, 'ಯಾರಿರಬಹುದು ಈತ!' ಎಂದು ಅಚ್ಚರಿಗೊಳ್ಳುತ್ತಿದ್ದ. ಕನ್ನಡಿಯೊಳಗಿನ ಪ್ರತಿಬಿಂಬ ನಮ್ಮ ಪ್ರತಿಯೊಂದು ಚಲನವಲನವನ್ನೂ ಅನುಕರಿಸುವಂತೆ, ತನ್ನ ಈ ಪ್ರತಿರೂಪವೂ ತನ್ನಂತೆಯೇ ನಡೆದುಕೊಳ್ಳುವುದನ್ನು ನೋಡುತ್ತಿದ್ದ. ಕೆಲವು ಸಲವಂತೂ ಈ 'ವ್ಯಕ್ತಿ' ಒಂದು ಗಂಟೆಗಿಂತಲೂ ಹೆಚ್ಚು ಕಾಲ ತನ್ನೊಂದಿಗೇ ಇದ್ದಂತೆ ಅನುಭವವಾಗುತ್ತಿತ್ತು.

ಆವನು ಈ ವಿಷಯುವನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದಾಗ ಅವರು, "ಇವೆಲ್ಲ ಧ್ಯಾನ ಜೀವನದಲ್ಲಿ ಪ್ರಗತಿ ಹೊಂದುತ್ತ ಬರುವಾಗ ಕಂಡುಬರುವಂತಹ ಸಂಗತಿಗಳಷ್ಟೆ, ಇದಕ್ಕೆಲ್ಲ ವಿಶೇಷ ಗಮನ ಕೊಡಬೇಕಾಗಿಲ್ಲ" ಎಂದು ಹೇಳಿ ಆ ವಿಷಯುವನ್ನು ಅಲ್ಲೇ ತೇಲಿಸಿಬಿಟ್ಟರು.

ಬರಬರುತ್ತ ತನ್ನಲ್ಲಿ ಆಧ್ಯಾತ್ಮಿಕ ಶಕ್ತಿ ಅಭಿವೃದ್ಧಿ ಹೊಂದುತ್ತಿರುವುದನ್ನು ನರೇಂದ್ರ ತಾನೇ ಕಂಡುಕೊಳ್ಳುತ್ತಿದ್ದ. ಅವನ ಆಲೋಚನಾಶಕ್ತಿಯೆಂಬುದು ಇತರರನ್ನೂ ಪರಿವರ್ತಿಸಬಲ್ಲ ಒಂದು ಪ್ರಬಲ ಶಕ್ತಿಯಾಗಿತ್ತು. ಈ ಶಕ್ತಿಯನ್ನು ಪ್ರಯೋಗಿಸಿ ನೋಡುವ ಬಾಲಿಶ ಕುತೂಹಲದಲ್ಲಿ, ಒಮ್ಮೆ ಅದನ್ನು ವ್ಯಕ್ತಪಡಿಸಿಯೂಬಿಟ್ಟ.

ಅಂದು ೧೮೮೬ರ ಶಿವರಾತ್ರಿಯ ದಿನ. ಆ ದಿನವನ್ನೆಲ್ಲ ವಿಶೇಷ ಪೂಜೆ ಪ್ರಾರ್ಥನೆ ಧ್ಯಾನಾದಿಗಳಲ್ಲಿ ಕಳೆಯಬೇಕೆಂದು ಶಿಷ್ಯರು ಸಂಕಲ್ಪಿಸಿದ್ದರು. ನರೇಂದ್ರ ಮೂರು-ನಾಲ್ಕು ಜನ ಸಹಶಿಷ್ಯರೊಂದಿಗೆ ಉದ್ಯಾನಗೃಹದ ಒಂದು ಕೋಣೆಯಲ್ಲಿ ಮಾತನಾಡುತ್ತಿದ್ದ. ಸ್ವಲ್ಪ ಹೊತ್ತಿನ ಮೇಲೆ ಕಾಳೀಪ್ರಸಾದನೊಬ್ಬನನ್ನುಳಿದು ಮಿಕ್ಕವರೆಲ್ಲ ಆ ಕೋಣೆಯಿಂದಾಚೆಗೆ ಹೊರಟುಹೋದರು. ಈಗ ನರೇಂದ್ರ ಧ್ಯಾನಕ್ಕೆ ಕುಳಿತ. ಸ್ವಲ್ಪ ಹೊತ್ತಿನಲ್ಲೇ ತನ್ನಲ್ಲೇನೋ ಒಂದು ಶಕ್ತಿಯು ಆವಿರ್ಭಾವವಾಗುತ್ತಿರುವಂತೆ ಭಾಸವಾಯಿತು. ಆಗ ಅವನು ಬಳಿಯಲ್ಲೇ ಕುಳಿತಿದ್ದ ಕಾಳೀಪ್ರಸಾದನಿಗೆ, "ನೋಡು, ಇನ್ನು ಸ್ವಲ್ಪ ಹೊತ್ತಿನಲ್ಲಿ ನನ್ನನ್ನು ಮುಟ್ಟು" ಎಂದು ಹೇಳಿ ಧ್ಯಾನಮಗ್ನನಾಗಿ ಕುಳಿತ. ಸ್ವಲ್ಪ ಹೊತ್ತಿನ ಮೇಲೆ, ಹೊರಗಡೆ ಹೋಗಿದ್ದ ಮತ್ತೊಬ್ಬ ಶಿಷ್ಯ ಬಂದು ನೋಡುತ್ತಾನೆ—ನರೇಂದ್ರ ಗಾಢ ಧ್ಯಾನಲೀನನಾಗಿ ಸ್ಥಿರವಾಗಿ ಕುಳಿತಿದ್ದಾನೆ; ಕಾಳೀಪ್ರಸಾದ ತನ್ನ ಬಲಗೈಯಿಂಗ ಆತನ ಬಲ ಮೊಳಕಾಲನ್ನು ಸ್ಪರ್ಶಿಸುತ್ತ ಕಣ್ಮುಚ್ಚಿ ಕುಳಿತಿದ್ದಾನೆ, ಅವನ ಕೈ ಒಂದೇ ಸಮನೆ ನಡುಗುತ್ತಿದೆ. ಒಂದೆರಡು ನಿಮಿಷಗಳಾದ ಮೇಲೆ ನರೇಂದ್ರ ಕಣ್ತೆರೆದು ನುಡಿದ: "ಸಾಕು, ಬಿಡು. ನಿನಗೆ ಹೇಗೆನ್ನಿಸಿತು ?" ಆಗ ಕಾಳೀಪ್ರಸಾದ, "ನನಗೆ ವಿದ್ಯುತ್ ಆಘಾತವಾಗುತ್ತಿದ್ದ ಹಾಗಿತ್ತು! ನನ್ನ ಕೈ ಒಂದೇ ಸಮನೆ ನಡುಗುತ್ತಿತ್ತು. ಕೈಯನ್ನು ಸ್ಥಿರವಾಗಿಟ್ಟುಕೊಳ್ಳಲು ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ" ಎಂದುತ್ತರಿಸಿದ.

ರಾತ್ರಿಯ ಎರಡನೆ ಜಾವದ ಮೇಲೆ ಶಿಷ್ಯರೆಲ್ಲ ಸೇರಿ ಶಿವನ ಪೂಜೆ, ಧ್ಯಾನಗಳಲ್ಲಿ ತೊಡಗಿದರು. ಆ ಸಮಯದಲ್ಲಿ ಕಾಳೀಪ್ರಸಾದ ಅತ್ಯಂತ ಗಾಢವಾದ ಧ್ಯಾನದಲ್ಲಿ ತಲ್ಲೀನನಾಗಿಬಿಟ್ಟ. ಅವನು ಇಲ್ಲಿಯವರೆಗೆ ಅಂತಹ ಗಾಢ ಧ್ಯಾನವನ್ನು ಅನುಭವಿಸಿದವನೇ ಅಲ್ಲ. ಅವನ ಇಡೀ ಶರೀರ ಸ್ಥಿರವಾಗಿಬಿಟ್ಟಿತ್ತು. ಸ್ವಲ್ಪವೂ ಬಾಹ್ಯಪ್ರಜ್ಞೆ ಇರುವಂತೆ ಕಾಣುತ್ತಿರಲಿಲ್ಲ. ಇದನ್ನು ಕಂಡವರಿಗೆಲ್ಲ ಆಶ್ಚರ್ಯವಾಯಿತು. ಸ್ವಲ್ಪ ಹೊತ್ತಿನ ಹಿಂದೆ ಅವನು ನರೇಂದ್ರನನ್ನು ಸ್ಪರ್ಶಿಸಿದ್ದೇ ಅವನ ಈ ಸ್ಥಿತಿಗೆ ಕಾರಣವಿರಬೇಕೆಂದು ಅವರು ಊಹಿಸಿದರು. ನರೇಂದ್ರನೂ ಇದನ್ನು ಗಮನಿಸಿದ.

ಬೆಳಗ್ಗೆ ನಾಲ್ಕು ಗಂಟೆಯ ಹೊತ್ತಿಗೆ ಪೂಜಾದಿಗಳೆಲ್ಲ ಮುಗಿದುವು. ಆ ಸಮಯಕ್ಕೆ ಶಶಿಭೂಷಣ ಅಲ್ಲಿಗೆ ಬಂದು, "ಶ್ರೀರಾಮಕೃಷ್ಣರು ನಿನ್ನನ್ನು ಕರೆಯುತ್ತಿದ್ದಾರೆ. ಈಗಲೇ ಹೋಗಿ ನೋಡಬೇಕಂತೆ" ಎಂದು ನರೇಂದ್ರನಿಗೆ ಹೇಳಿದ. ಕೂಡಲೇ ನರೇಂದ್ರ ಶಶಿಯ ಜೊತೆಯಲ್ಲಿ ಮಹಡಿಯ ಮೇಲಕ್ಕೆ ಹೋದ. ಅವನನ್ನು ನೋಡಿದ ತಕ್ಷಣ ಶ್ರೀರಾಮಕೃಷ್ಣರು ಗಂಭೀರವಾಗಿ ನುಡಿದರು: "ಏನಿದೆಲ್ಲ? ಸಂಪಾದಿಸುವ ಮೊದಲೇ ಖರ್ಚು ಮಾಡಲು ಶುರುಮಾಡಿಬಿಟ್ಟೆಯಾ? ಆಧ್ಯಾತ್ಮಿಕ ಶಕ್ತಿಯನ್ನು

ಮೊದಲು ನೀನು ಸಾಕಷ್ಟು ಸಂಪಾದಿಸಿ ಶೇಖರಿಸಿಕೊ. ಆಮೇಲೆ ಅದನ್ನು ಎಲ್ಲಿ, ಹೇಗೆ ವಿನಿಯೋಗಿಸಬೇಕು ಎನ್ನುವುದು ನಿನಗೇ ತಿಳಿಯುತ್ತದೆ. ಸ್ವತಃ ಜಗನ್ಮಾತೆಯೇ ನಿನಗೆ ಅದನ್ನೆಲ್ಲ ತಿಳಿಸಿಕೊಡುತ್ತಾಳೆ. ನೀನೀಗ ನಿನ್ನ ಮನೋಭಾವವನ್ನು ಕಾಳೀಪ್ರಸಾದನಲ್ಲಿ ಪ್ರಚೋದಿಸಿಬಿಟ್ಟೆಯಲ್ಲ, ಅದರಿಂದ ಅವನಿಗೆ ಎಂತಹ ಅಪಾಯ ಸಂಭವಿಸಿದೆ ಎಂಬುದು ನಿನಗೆ ಗೊತ್ತಿದೆಯೆ ? ಇಲ್ಲಿಯವರೆಗೆ ಅವನಲ್ಲಿ ಆಧ್ಯಾತ್ಮಿಕ ಭಾವ ಯಾವುದೋ ಒಂದು ನಿರ್ದಿಷ್ಟ ಕ್ರಮದಿಂದ ಬೆಳೆದುಕೊಂಡು ಬರುತ್ತಿತ್ತು. ಈಗ ಅದೆಲ್ಲ ನಾಶವಾಗಿಹೋಯಿತು. ಹೋಗಲಿ, ಆದದ್ದಾಯಿತು. ಇನ್ನು ಮೇಲಾದರೂ ಇಂತಹ ಅವಿವೇಕದ ಕೆಲಸ ಮಾಡಬೇಡ. ಹುಡುಗನ ಅದೃಷ್ಟ ಚೆನ್ನಾಗಿತ್ತು, ಆದ್ದರಿಂದ ಹೆಚ್ಚೇನೂ ಹಾನಿಯಾಗಲಿಲ್ಲ.'' ತಾನೆಸಗಿದ ತಪ್ಪಿನ ಅರಿವಾಗಿ ನರೇಂದ್ರ ತಲೆತಗ್ಗಿಸಿದ. ಅದಕ್ಕಿಂತ ಹೆಚ್ಚಾಗಿ, ತಾವು ಮಾಡಿದ್ದನ್ನೆಲ್ಲ ಶ್ರೀರಾಮಕೃಷ್ಣರು ಯಾರೂ ಹೇಳದೆಯೇ ತಿಳಿದುಕೊಂಡುಬಿಟ್ಟಿರುವುದನ್ನು ಕಂಡು ಅವನು ಆಶ್ಚರ್ಯಚಕಿತನಾದ.

ಈ ಘಟನೆಯಲ್ಲಿ ನಾವು ಹಲವಾರು ವಿಚಾರಗಳನ್ನು ಗಮನಿಸಬಹುದಾಗಿದೆ. ಆಧ್ಯಾತ್ಮಿಕ ಶಕ್ತಿಯನ್ನು ಸಂಪೂರ್ಣವಾಗಿ ಸಿದ್ಧಿಸಿಕೊಂಡ ಮೇಲೆ ಅದನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸಬೇಕಾದರೂ ಸಾಕಷ್ಟು ವಿವೇಕ ಇರಬೇಕಾಗುತ್ತದೆ. ಆಧ್ಯಾತ್ಮಿಕ ಶಕ್ತಿಯುನ್ನು ಪಡೆದುಕೊಳ್ಳುವುದಕ್ಕೂ ಭಗವಂತನ ಅನುಗ್ರಹ ಬೇಕು; ಹಾಗೆಯೇ ಅದನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸುವುದಕ್ಕೂ ಭಗವಂತನ ಮಾರ್ಗ ದರ್ಶನ-ನಿರ್ದೇಶನ ಬೇಕು.

* * * *

ಶ್ರೀರಾಮಕೃಷ್ಣರ ಶರೀರ ದಿನೇದಿನೇ ಕುಗ್ಗಿಹೋಗುತ್ತಿತ್ತು. ಇದನ್ನು ಕಂಡು ಭಕ್ತರು ಅತೀವ ಕಳವಳಗೊಂಡು ಇನ್ನಷ್ಟು ಶ್ರದ್ಧೆಯಿಂದ, ಹೆಚ್ಚಿನ ಪರಿಶ್ರಮ ವಹಿಸಿ ಸೇವೆ ಮಾಡುತ್ತ ಬಂದರು. ಯುವಕ ಶಿಷ್ಯರಂತೂ ತಮ್ಮ ಮನೆಯವರ ಒತ್ತಾಯ ವನ್ನು ಸ್ವಲ್ಪವೂ ಲೆಕ್ಕಿಸದೆ ಕಾಶೀಪುರದ ತೋಟದ ಮನೆಯಲ್ಲೇ ನೆಲೆನಿಂತುಬಿಟ್ಟಿದ್ದರು. ಗೃಹಸ್ಥಭಕ್ತರು ಸ್ವಲ್ಪವೂ ಹಿಂಜರಿಯದೆ, ಲೆಕ್ಕಾಚಾರ ಹಾಕದೆ, ಔಷಧೋಪಚಾರಗಳ ಸಮಸ್ತ ವೆಚ್ಚವನ್ನೂ ವಹಿಸಿಕೊಂಡಿದ್ದರು. ಆದರೆ ತಮ್ಮ ಜೀವನಾಧಾರ ಕಣ್ಮರೆಯಾಗು ವುದೇ ಖಂಡಿತ ಎಂದು ಎಲ್ಲರಿಗೂ ಅನ್ನಿಸುತ್ತಿತ್ತು. ರೋಗ ಉಲ್ಬಣಿಸಿ ಶ್ರೀರಾಮಕೃಷ್ಣರ ಗಂಟಲಿನಿಂದ ರಕ್ತಸ್ರಾವವಾಗುವ ದೃಶ್ಯವನ್ನು ಕಂಡಾಗಲಂತೂ ಭಕ್ತರ ಎದೆ ತಲ್ಲಣಿಸಿ ಹೋಗುತ್ತಿತ್ತು.

ಶ್ರೀರಾಮಕೃಷ್ಣರು ಮಾತ್ರ ಆ ಅಸಹನೀಯ ಯಾತನೆಯ ನಡುವೆಯೂ ಆನಂದ ಮೂರ್ತಿಯಾಗಿಯೇ ತೋರುತ್ತಿದ್ದರು. ಆದರೆ ಕೆಲವು ಸಲ ನೋವು ವಿಪರೀತವಾಗಿ ಬಿಡುತ್ತಿತ್ತು. ಆಗ ಅವರು ಮುಗುಳ್ನಗುತ್ತ ತಮಗೆ ತಾವೇ ಹೇಳಿಕೊಳ್ಳುತ್ತಿದ್ದರು: ''ಈ ಶರೀರವೂ ನೋವೂ ಪರಸ್ಪರ ಕಿತ್ತಾಡಿಕೊಳ್ಳುತ್ತಿರಲಿ; ಓ ಮನಸ್ಸೇ, ನಿನ್ನ ಪಾಡಿಗೆ ನೀನು ಆನಂದದಿಂದಿದ್ದುಬಿಡು !'' ಅವರಿಗೆ ಆ ಭಯಂಕರ ಯಾತನೆಯ ಅನುಭವ ಆಗುತ್ತಿರಲಿಲ್ಲವೆಂದಲ್ಲ; ಆದರೆ ಸಹಿಸಿಕೊಳ್ಳುತ್ತಿದ್ದರು. ನೋವನ್ನು ಶರೀರಕ್ಕೆ ಬಿಟ್ಟು ತಾವು ನಿಶ್ಚಿಂತರಾಗಿದ್ದುಬಿಟ್ಟಿದ್ದರು ! ಒಂದು ದಿನ ರಾತ್ರಿ ಅವರು ಮಹೇಂದ್ರನಾಥನಿಗೆ ಹೇಳುತ್ತಾರೆ: ''ನೋಡು, ನಾನಿದನ್ನೆಲ್ಲ ಸಹಿಸಿಕೊಳ್ಳುತ್ತಿರುವುದು ಏಕೆ ಗೊತ್ತೇನು ? ಇಲ್ಲದಿದ್ದರೆ ನೀವೆಲ್ಲ ಅಳುತ್ತ ಕುಳಿತುಬಿಡುತ್ತೀರಿ. ನೀವೆಲ್ಲರೂ ಈಗ, ಈ ಶರೀರ ಹೀಗೆ

ಸುಮ್ಮನೆ ಯಾತನೆಪಡುವುದಕ್ಕಿಂತ ಹೊರಟುಹೋದರೇ ಒಳ್ಳೆಯದು ಎನ್ನುವುದಾದರೆ ಅದು ಹೊರಟುಹೋಗಿಬಿಡುತ್ತದೆ." ಮಹೇಂದ್ರನಾಥ ಈ ಮಾತಿಗೆ ಏನೆಂದು ಉತ್ತರಿಸಿಯಾನು ? ಸುಮ್ಮನೆ ತಲೆತಗ್ಗಿಸಿಕೊಂಡು ನಿಂತ.

ಅಂದು ಮಾರ್ಚ್ ತಿಂಗಳ ಹದಿನೈದನೆಯ ದಿನ, ಬೆಳಗ್ಗೆ ಸುಮಾರು ಏಳು ಗಂಟೆ. ಹಿಂದಿನ ರಾತ್ರಿಯಂತೂ ಅವರ ಯಾತನೆ ತುಂಬ ತೀವ್ರವಾಗಿಬಿಟ್ಟಿತ್ತು. ಅವರೇನೋ ಅದನ್ನು ಬ್ರಹ್ಮಭಾವದಿಂದ ಸಹಿಸಿಕೊಂಡಿರಬಹುದು, ಆದರೆ ಯಾತನೆ ಯಾತನೆಯೇ. ಈಗ ಅವರು ಸ್ವಲ್ಪ ಸುಧಾರಿಸಿದಂತೆ ಕಂಡುಬರುತ್ತಿದ್ದರು. ನರೇಂದ್ರ, ರಾಖಾಲ, ಲಾಟು, ಮಹೇಂದ್ರ, ಹಿರಿಯ ಗೋಪಾಲ ಮತ್ತಿತರರು ಅಲ್ಲಿದ್ದರು. ಎಲ್ಲರ ಮನಸ್ಸೂ ಖಿನ್ನವಾಗಿತ್ತು. ಶ್ರೀರಾಮಕೃಷ್ಣರು ಮಾತ್ರ ತಮ್ಮ ದಿವ್ಯ ಭಾವದಲ್ಲೇ ಇದ್ದರು. ಸುತ್ತಲಿದ್ದ ಯುವಶಿಷ್ಯರ ಕಡೆಗೆ ನೋಡುತ್ತ ಮೆಲುದನಿಯಲ್ಲಿ, ಕೆಲವೊಮ್ಮೆ ಕೇವಲ ಸಂಜ್ಞೆಗಳ ಮೂಲಕ ಮಾತನಾಡಲಾರಂಭಿಸಿದರು:

"ನಾನೀಗ ಈ ಕ್ಷಣದಲ್ಲಿ ಏನು ಕಾಣುತ್ತಿದ್ದೇನೆ ಗೊತ್ತೆ? ಸಕಲವೂ ನನಗೆ ಸಾಕ್ಷಾತ್ ಭಗವಂತನಂತೆಯೇ ಕಾಣುತ್ತಿದೆ! ಜನರೂ ಜೀವಕೋಟಿಗಳೆಲ್ಲರೂ ಕೇವಲ ಚರ್ಮದ ಚೀಲಗಳು; ಆ ಚೀಲಗಳ ಒಳಗೆ ಭಗವಂತ ವಾಸವಾಗಿದ್ದುಕೊಂಡು, ಕೈ ಕಾಲು ತಲೆಗಳನ್ನೆಲ್ಲ ಆಡಿಸುತ್ತಿದ್ದಾನೆ ಎಂಬಂತೆ ನನಗೆ ಕಾಣಿಸುತ್ತಿದೆ. ಹಿಂದೊಮ್ಮೆ ನನಗೆ ಇದೇ ರೀತಿಯ ದರ್ಶನವಾಗಿತ್ತು. ಆಗ ನನಗೆ ಮನೆಗಳು ಉದ್ಯಾನಗಳು ರಸ್ತೆಗಳು ಜನಗಳು ದನಕರುಗಳು—ಎಲ್ಲವೂ ಒಂದೇ ರೀತಿಯ ವಸ್ತುವಿನಿಂದ ಮಾಡಲ್ಪಟ್ಟಂತೆ ಕಂಡುಬಂದುವು; ಅವುಗಳೆಲ್ಲವೂ ಮೇಣದಿಂದ ತಯಾರಾದವೋ ಎಂಬಂತಿತ್ತು.

"ನ್ಯಾಯಾಧೀಶ, ಅಪರಾಧಿ, ಗಲ್ಲುಗಂಬ ಎಲ್ಲವೂ ಭಗವಂತನೇ ಆಗಿದ್ದಾನೆ ಎನ್ನುವುದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ."

ಹೀಗೆ ಶಿಷ್ಯರ ಮುಂದೆ ತಮ್ಮ ಅಲೌಕಿಕ ಅನುಭವಗಳನ್ನು ವರ್ಣಿಸುತ್ತಿದ್ದಂತೆ, ಸರ್ವವ್ಯಾಪಿಯಾದ ಭಗವಂತನ ಲೀಲೆಯನ್ನು ನೆನೆದು ಶ್ರೀರಾಮಕೃಷ್ಣರ ಮನಸ್ಸು ಅದೇ ಭಾವದಿಂದ ರಂಜಿತವಾಯಿತು; "ಆಹಾ! ಎಂಥ ದರ್ಶನ!" ಎಂದು ಉದ್ಗರಿಸುತ್ತ ಗಾಢ ಸಮಾಧಿಮಗ್ನರಾಗಿಬಿಟ್ಟರು. ಅವರಿಗೀಗ ಶರೀರದ ಪರಿವೆಯೂ ಇಲ್ಲ, ಬಾಹ್ಯ ಜಗತ್ತಿನ ಪರಿವೆಯೂ ಇಲ್ಲ. ಇಂತಹ ದಾರುಣ ಯಾತನೆಯ ಸ್ಥಿತಿಯಲ್ಲೂ ಅವರು ಹೀಗೆ ಸಮಾಧಿಸ್ಥರಾದುದನ್ನು ಕಂಡ ಭಕ್ತರೆಲ್ಲ ಆಶ್ಚರ್ಯದಿಂದ ದಿಙ್ಮೂಢರಾಗಿ ಕುಳಿತುಬಿಟ್ಟರು. ಸ್ವಲ್ಪ ಹೊತ್ತಿನಲ್ಲೇ ಶ್ರೀರಾಮಕೃಷ್ಣರಿಗೆ ಅರ್ಧಬಾಹ್ಯಪ್ರಜ್ಞೆ ಮರಳಿತು. "ಈಗ ನನಗೆ ಯಾವ ನೋವೂ ಇಲ್ಲ. ನಾನೀಗ ಮೊದಲಿನಂತೆಯೇ ಇದ್ದೇನೆ" ಎಂದು ಉದ್ಗರಿಸಿದರು. ಅಲ್ಲೇ ಕುಳಿತಿದ್ದ ಲಾಟುವಿನ ಕಡೆಗೆ ದೃಷ್ಟಿ ಹರಿಸಿ ನುಡಿದರು: "ಅಗೋ, ಅಲ್ಲಿ ಲಾಟು ತಲೆಗೆ ಕೈಕೊಟ್ಟುಕೊಂಡು ಕುಳಿತಿದ್ದಾನೆ. ಹಾಗೆ ಕುಳಿತಿರುವುದು ಸಾಕ್ಷಾತ್ ಭಗವಂತನೇ ಎಂಬಂತೆ ನನಗೆ ಕಾಣುತ್ತಿದೆ."

ಈಗ ಅವರು ತಮ್ಮ ಸುತ್ತ ಕುಳಿತಿದ್ದ ಭಕ್ತರೆಡೆಗೆ ದೃಷ್ಟಿ ಹರಿಸಿದರು. ಆ ನೋಟದಲ್ಲಿ ಅವರ ಪ್ರೀತಿ ಪ್ರವಾಹದೋಪಾದಿಯಲ್ಲಿ ಹರಿದು ಬರುವಂತಿತ್ತು. ತಾಯಿ ಅಕ್ಕರೆಯಿಂದ ಮಕ್ಕಳನ್ನು ಮುದ್ದಿಸುವಂತೆ, ಪರಮವಾತ್ಸಲ್ಯದಿಂದ ನರೇಂದ್ರ ಹಾಗೂ ರಾಖಾಲರ ಮುಖಗಳನ್ನು ನೇವರಿಸಿದರು. ಕೆಲವು ನಿಮಿಷಗಳಾದ ಮೇಲೆ ಮಹೇಂದ್ರನನ್ನುದ್ದೇಶಿಸಿ ನುಡಿದರು: "ಈ ಶರೀರ ಇನ್ನೂ ಕೆಲವು ದಿನ ಹೆಚ್ಚಿಗೆ ಉಳಿ

ದಿದ್ದರೆ, ಇನ್ನೂ ಹಲವಾರು ಜನ ಇದರ ಮೂಲಕ ಆಧ್ಯಾತ್ಮಿಕ ಜಾಗೃತಿ ಮಾಡಿಕೊಳ್ಳ ಬಹುದಾಗಿತ್ತು."

ಸ್ವಲ್ಪ ಹೊತ್ತು ಸುಮ್ಮನಿದ್ದು, ಮತ್ತೆ: "...ಆದರೆ ಅದು ಹಾಗಾಗುವುದಿಲ್ಲ. ಈ ಸಲ ಇನ್ನು ಇದು ಉಳಿಯುವುದಿಲ್ಲ."

ಶ್ರೀರಾಮಕೃಷ್ಣರು ಈಗ ಇನ್ನೇನು ಹೇಳಬಹುದು ಎಂದು ಭಕ್ತರೆಲ್ಲ ಕತ್ತು ಚಾಚಿ ಕೊಂಡು ಕಾತರರಾಗಿ ಕುಳಿತಿದ್ದಾರೆ.

ಶ್ರೀರಾಮಕೃಷ್ಣರು: "ಇಲ್ಲ, ಈ ಶರೀರ ಉಳಿಯುವುದು ಭಗವಂತನಿಗೆ ಇಷ್ಟವಿಲ್ಲ. ಇನ್ನವನು ಇದನ್ನು ಉಳಿಯಗೊಡುವುದಿಲ್ಲ. ಏಕೆಂದರೆ ನನ್ನ ಮುಗ್ಧತೆ ಯನ್ನು, ಸರಳತೆಯನ್ನು ಕಂಡು ಜನ ನನ್ನನ್ನು ದುರುಪಯೋಗಪಡಿಸಿಕೊಳ್ಳುವಂತಾಗ ದಿರಲಿ, ಅಲ್ಲದೆ ನಾನೂ ನನ್ನ ಸರಳ ಸ್ವಭಾವದಿಂದಾಗಿ ಯಾರೆಂದರೆ ಅವರಿಗೆ ಎಲ್ಲ ವನ್ನೂ ಕೊಟ್ಟುಬಿಡದಂತಾಗಲಿ ಅಂತ... ಈ ಕಲಿಯುಗದಲ್ಲಿ ಯಾರಿಗೂ ಜಪಧ್ಯಾನ ಮಾಡಲು ಇಷ್ಟವಿಲ್ಲ."

ರಾಖಾಲ (ಕಾತರತೆಯಿಂದ): "ನಿಮ್ಮ ಶರೀರವನ್ನು ಇನ್ನೂ ಕೆಲಕಾಲ ಉಳಿಸು ವಂತೆ ದಯವಿಟ್ಟು ನೀವು ಭಗವಂತನಿಗೆ ಹೇಳಿ."

ಶ್ರೀರಾಮಕೃಷ್ಣರು: "ಅದು ಉಳಿಯುವುದೂ ಬಿಡುವುದೂ ಅವನ ಇಚ್ಛೆಯನ್ನು ಅವಲಂಬಿಸಿದೆ."

ನರೇಂದ್ರ: "ಆದರೆ ನಿಮ್ಮ ಇಚ್ಛೆಯೂ ಭಗವಂತನ ಇಚ್ಛೆಯೂ ಒಂದೇ ಆಗಿ ಬಿಟ್ಟಿದೆಯಲ್ಲ?"

ಶ್ರೀರಾಮಕೃಷ್ಣರು ಈಗ ಏನೋ ಆಲೋಚನೆ ಮಾಡುವವರಂತೆ ಮೌನ ತಾಳಿ ದರು. ಬಳಿಕ ನುಡಿದರು: "ಈಗ ನಾನು ಭಗವಂತನಿಗೆ ಹೇಳಿದರೂ ಅದರಿಂದೇನೂ ಪ್ರಯೋಜನವಾಗುವಂತಿಲ್ಲ. ಏಕೆಂದರೆ, ಈಗ ನಾನೂ ಆತನೂ ಒಂದಾಗಿಬಿಟ್ಟಿರುವಂತೆ ಸ್ಪಷ್ಟವಾಗಿ ಕಾಣುತ್ತಿದ್ದೇನೆ..."

ಹೀಗೆ ಹೇಳಿ ಮೌನ ತಾಳಿದರು. ಅರೆ ಘಳಿಗೆ ಬಿಟ್ಟು ಮತ್ತೆ ನುಡಿದರು:

"ಈ ಶರೀರದಲ್ಲಿ ಇಬ್ಬರು ವ್ಯಕ್ತಿಗಳಿದ್ದಾರೆ. ಒಬ್ಬಳು ಜಗನ್ಮಾತೆ... ಹೌದು, ಒಬ್ಬಳು ಆಕೆ; ಇನ್ನೊಬ್ಬ ಆಕೆಯ ಭಕ್ತ. ಹಿಂದೆ ಕೈಮುರಿದುಕೊಂಡಿದ್ದವನು *ಆ ಭಕ್ತನೇ. ಈಗ ಕಾಯಿಲೆ ಅನುಭವಿಸುತ್ತಿರುವವನೂ ಆ ಭಕ್ತನೇ. ಏನು, ಅರ್ಥವಾಯಿತೇ?"

ಭಕ್ತಾದಿಗಳೆಲ್ಲ ಉಸಿರು ಹಿಡಿದು ಕುಳಿತಿದ್ದಾರೆ.

ಶ್ರೀರಾಮಕೃಷ್ಣರು: "ಆಹಾ! ನಾನು ಇದನ್ನೆಲ್ಲ ನೀವಲ್ಲದೆ ಇನ್ಯಾರ ಹತ್ತಿರ ಹೇಳಲಿ? ಯಾರು ನನ್ನನ್ನು ಅರ್ಥ ಮಾಡಿಕೊಳ್ಳಬಲ್ಲರು? ನೋಡಿ, ಭಗವಂತ ತನ್ನ ಭಕ್ತರ ಜೊತೆಗೂಡಿಕೊಂಡು ಮನುಷ್ಯರೂಪದಿಂದ ಈ ಭೂಮಿಗೆ ಬರುತ್ತಾನೆ. ಅವನು ಹೊರಟುಹೋಗುವಾಗ ಈ ಭಕ್ತರೂ ಅವನ ಜೊತೆಯಲ್ಲೇ ಹೊರಟುಬಿಡುತ್ತಾರೆ."

ತಕ್ಷಣ ರಾಖಾಲನೆಂದ: "ಆದ್ದರಿಂದಲೇ ನಾವು ನಿಮ್ಮನ್ನು ಕೇಳಿಕೊಳ್ಳುತ್ತಿರು ವುದು—ನಮ್ಮನ್ನೆಲ್ಲ ಬಿಟ್ಟು ನೀವು ಹೊರಟುಹೋಗಬಾರದು ಅಂತ."

---

* ಆಗ ಎರಡು ವರ್ಷಗಳ ಕೆಳಗೆ ಶ್ರೀರಾಮಕೃಷ್ಣರೊಮ್ಮೆ ಭಾವಾವಸ್ಥೆಯಲ್ಲಿದ್ದಾಗ ಬಿದ್ದು ಕೈಮೂಳೆ ಮುರಿದುಕೊಂಡಿದ್ದರು.

ಶ್ರೀರಾಮಕೃಷ್ಣರು (ಮುಗುಳ್ನಕ್ಕು): "ಎಲ್ಲಿಂದಲೋ ಒಂದು ಗಾಯಕರ ಮೇಳದವರು ಬಂದರು, ಹಾಡಿದರು, ಕುಣಿದರು; ಬಳಿಕ ಹೇಗೆ ಬಂದರೋ ಹಾಗೇ ಇದ್ದಕ್ಕಿದ್ದಂತೆ ಮಾಯವಾದರು. ಅವರು ಬರುತ್ತಾರೆ, ಹೊರಟುಹೋಗುತ್ತಾರೆ. ಆದರೆ ಯಾರೂ ಅವರನ್ನು ಗುರುತಿಸುವುದಿಲ್ಲ."

ಇದನ್ನು ಕೇಳಿ ಭಕ್ತರೂ ಮುಗುಳ್ನಕ್ಕರು.

ನರೇಂದ್ರ: "ಮಹಾಶಯರೆ, ನಾನು ತ್ಯಾಗದ ಮಾತೆತ್ತಿದರೆ ಕೆಲವರು ಕೋಪಿಸಿಕೊಳ್ಳುತ್ತಾರಲ್ಲ?"

ಶ್ರೀರಾಮಕೃಷ್ಣರು: "ತ್ಯಾಗ ತುಂಬ ಆವಶ್ಯಕವಾದದ್ದು. ಒಂದು ವಸ್ತುವಿನ ಮೇಲೆ ಇನ್ನೊಂದು ವಸ್ತು ಇದೆ ಅಂತ ಇಟ್ಟುಕೊ. ಈಗ ನಿನಗೆ ಆ ಕೆಳಗಿನ ವಸ್ತು ಬೇಕಿದ್ದರೆ, ಅದರ ಮೇಲಿರುವ ವಸ್ತುವನ್ನು ಎತ್ತಿ ತೆಗೆಯಲೇಬೇಕು. ಮೇಲಿರುವ ವಸ್ತುವನ್ನು ತೆಗೆಯದೆಯೇ ಕೆಳಗಿರುವ ವಸ್ತುವನ್ನು ತೆಗೆದುಕೊಳ್ಳಲು ಸಾಧ್ಯವೇ?"

ನರೇಂದ್ರ: "ಹೌದು, ನೀವೆನ್ನುವುದು ನಿಜ."

ತ್ಯಾಗದ ಆವಶ್ಯಕತೆಯನ್ನು ಮನಗಾಣಿಸಲು ಶ್ರೀರಾಮಕೃಷ್ಣರು ಕೊಟ್ಟ ಉದಾಹರಣೆ ತುಂಬ ಅದ್ಭುತವಾಗಿದೆ. ಭಗವಂತನನ್ನು ಕಾಣಲು ನಮಗೆ ಬೇಕಾದ ವಸ್ತು ಯೋಗ. ಆದರೆ ಈ ಯೋಗದ ಮೇಲೆ ಭೋಗ ಹೇರಿಕೊಂಡಿದೆ. ಈಗ ನಮಗೆ ಬೇಕಾದ ಯೋಗವನ್ನು ಪಡೆದುಕೊಳ್ಳಬೇಕಾದರೆ ಮೇಲಿರುವ ಭೋಗವನ್ನು ಎತ್ತಿ ಸರಿಸಲೇಬೇಕಾಗುತ್ತದೆ. ಹೀಗೆ ಭೋಗವನ್ನು ಎತ್ತಿ ಸರಿಸುವುದಕ್ಕೇ ತ್ಯಾಗ ಎಂದು ಹೆಸರು. ಭೋಗವನ್ನು ತ್ಯಾಗ ಮಾಡಿದಾಗ ಯೋಗ ಲಭಿಸುತ್ತದೆ ಎಂಬುದನ್ನೇ ಶ್ರೀರಾಮಕೃಷ್ಣರು ಈ ಎರಡು ವಸ್ತುಗಳ ಉದಾಹರಣೆಯನ್ನಿತ್ತು ವಿವರಿಸುತ್ತಾರೆ.

ಶ್ರೀರಾಮಕೃಷ್ಣರು ವಾತ್ಸಲ್ಯ ತುಂಬಿದ ದೃಷ್ಟಿಯಿಂದ ನರೇಂದ್ರನನ್ನೊಮ್ಮೆ ದಿಟ್ಟಿಸಿದರು; ಬಳಿಕ ಇತರರೆಡೆಗೆ ತಿರುಗಿ ಉದ್ಗರಿಸಿದರು: "ಅದ್ಭುತ!"

ನರೇಂದ್ರ: "ಏನದು ಅದ್ಭುತ?"

ಶ್ರೀರಾಮಕೃಷ್ಣರು: "ಒಳ್ಳೇ ಭರದಿಂದ ತಯಾರಿ ನಡೆಯುತ್ತಿದೆ ಅದ್ಭುತವಾದ ತ್ಯಾಗಕ್ಕೆ!"

ನರೇಂದ್ರಾದಿಗಳು ಅದ್ಭುತವಾದ ಮಹಾತ್ಯಾಗಕ್ಕೆ ಮನಸ್ಸು ಮಾಡಿರುವುದನ್ನು ಅವರು ಸ್ಫುಟವಾಗಿ ಕಾಣುತ್ತಿದ್ದರು. ಎಲ್ಲರೂ ಮೌನವಾಗಿ ಶ್ರೀರಾಮಕೃಷ್ಣರನ್ನೇ ದಿಟ್ಟಿಸುತ್ತಿದ್ದಾರೆ.

ರಾಖಾಲ: "ನರೇಂದ್ರ ಈಗೀಗ ನಿಮ್ಮನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತಿದ್ದಾನೆ."

ಶ್ರೀರಾಮಕೃಷ್ಣರು (ನಗುತ್ತ): "ಹೌದುಮತ್ತೆ! ಅವನು ಮಾತ್ರವೇ ಅಲ್ಲ, ಇನ್ನೂ ಹಲವರೆಲ್ಲ ಅರ್ಥ ಮಾಡಿಕೊಳ್ಳುತ್ತಿದ್ದಾರೆ!"

ಸ್ವಲ್ಪ ಹೊತ್ತಿನ ಮೇಲೆ ಶ್ರೀರಾಮಕೃಷ್ಣರೆಂದರು: "ಪ್ರತಿಯೊಂದು ವಸ್ತುವೂ—ಈ ಜಗತ್ತಿನಲ್ಲಿ ಏನೇನಿದೆಯೋ ಅವೆಲ್ಲವೂ—ಇದರೊಳಗಿಂದಲೇ ಹೊರಬಂದಿದೆ."

'ಇದರೊಳಗಿಂದಲೇ' ಎನ್ನುವಾಗ ಅವರು ತೋರಿಸಿದ್ದು ತಮ್ಮ ಶರೀರವನ್ನು. ಬಳಿಕ ನರೇಂದ್ರನನ್ನು ಸಂಜ್ಞೆಯಿಂದಲೇ ಕೇಳಿದರು: "ಏನು, ನಿನಗೇನು ಅರ್ಥವಾಯಿತು?"

ನರೇಂದ್ರ: "ಸೃಷ್ಟಿಯ ಪ್ರತಿಯೊಂದು ವಸ್ತುವೂ ನಿಮ್ಮೊಳಗಿಂದಲೇ ಬಂದಿದೆ."

ನರೇಂದ್ರನ ಈ ಉತ್ತರವನ್ನು ಕೇಳಿ ಶ್ರೀರಾಮಕೃಷ್ಣರ ಮುಖ ಆನಂದದಿಂದ ಬೀಗಿತು. ರಾಖಾಲನಿಗೆಂದರು: "ಕೇಳಿಸಿಕೊಂಡೆಯಾ ಅವನು ಹೇಳಿದ್ದನ್ನು?"

ಶ್ರೀರಾಮಕೃಷ್ಣರ ಈ ನುಡಿಗಳನ್ನು ಕೇಳುತ್ತಿದ್ದಂತೆ ನರೇಂದ್ರನಿಗೆ ಅನೇಕ ಹೊಸ ವಿಚಾರಗಳು ತಿಳಿದುಬಂದುವು. ಅವನು ಶ್ರೀರಾಮಕೃಷ್ಣರ ಬಳಿಗೆ ಬರುವಾಗಲೇ ಹಲವಾರು ಸಂಶಯುಗಳನ್ನೆಲ್ಲ ಹೊತ್ತು ತಂದಿದ್ದ. ಅವನಿಗೆ ಭಗವಂತನ ಅಸ್ತಿತ್ವದಲ್ಲಿಯೇ ತೀವ್ರ ಸಂಶಯ; ಒಂದು ವೇಳೆ ಭಗವಂತ ಇರುವುದೇ ನಿಜವಾದರೂ ಅವನ ಸ್ವಭಾವ-ಸ್ವರೂಪಗಳ ವಿಷಯದಲ್ಲಿ ಸಂಶಯ—ಹೀಗೆ ಸಂಶಯಗಳ ರಾಶಿಯನ್ನೇ ಹೊತ್ತು ತಂದಿದ್ದ. ಶ್ರೀರಾಮಕೃಷ್ಣರು ಮೊತ್ತಮೊದಲು ತಮ್ಮ ಸ್ಪರ್ಶಮಾತ್ರದಿಂದ ಅವನ ಮನಸ್ಸನ್ನು ಸಮಾಧಾನಗೊಳಿಸಿದರು. ಬಳಿಕ ಬೌದ್ಧಿಕವಾಗಿ ಪರಮಾತ್ಮನ ವಿಷಯವನ್ನು ತಿಳಿಯಹೇಳಿದರು. ಸೂಕ್ಷ್ಮಬುದ್ಧಿಯ ನರೇಂದ್ರ ಅವೆಲ್ಲವನ್ನೂ ಅರಗಿಸಿಕೊಂಡ. ಆದರೆ ಕೇವಲ ಬೌದ್ಧಿಕವಾಗಿ ತಿಳಿಯುವುದಕ್ಕಿಂತ ಹೆಚ್ಚಾಗಿ, ಆ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳುವುದರ ಮೂಲಕ, ನೇರ ಅನುಭವ ಮಾಡಿಕೊಳ್ಳಲು ಹಾತೊರೆದ. ತನ್ನಾತ್ಮದಲ್ಲೇ ತಾನು ಮುಳುಗಿ ಸಮಾಧಿಮಗ್ನನಾಗಿದ್ದುಬಿಡಬೇಕೆಂದು ಹಂಬಲಿಸಿದ. ಆದರೆ ಶ್ರೀರಾಮಕೃಷ್ಣರು ಅವನಿಗೆ ಅದಕ್ಕಿಂತಲೂ ಉನ್ನತವಾದ ಸ್ಥಿತಿಯ ಅನುಭವ ಮಾಡಿಸಿಕೊಡುವುದಾಗಿ ಹೇಳಿದರು. 'ಸರ್ವಂ ಖಲ್ವಿದಂ ಬ್ರಹ್ಮ'—ಎಂದರೆ, ಏನೇನಿದೆಯೋ ಅದೆಲ್ಲವೂ ಬ್ರಹ್ಮವೇ ಆಗಿದೆ; ಯಾವ ಪರಬ್ರಹ್ಮವಸ್ತುವು ಎಲ್ಲಕ್ಕೂ ಅತೀತವಾಗಿದೆಯೋ ಅದೇ ಪರಬ್ರಹ್ಮವಸ್ತುವೇ ಅಂತರ್ಯಾಮಿಯಾಗಿಯೂ ಇದೆ—ಎಂಬ ಅನುಭವವಾದಾಗ, ಅದೇ ಪರಮಾರ್ಥಸತ್ಯವೇ ಈ ವ್ಯಾವಹಾರಿಕ ಜಗತ್ತಾಗಿ ವ್ಯಕ್ತವಾಗಿದೆ ಎನ್ನುವ ಅರಿವಾಗುತ್ತದೆ. ಯಾರಿಗೆ ಈ ಬಗೆಯ ಅತ್ಯುನ್ನತ ಅನುಭವವಾಗುತ್ತದೆಯೋ ಅವರು ಆ ಪಾರಮಾರ್ಥಿಕ ಸತ್ಯದ ಎತ್ತರಕ್ಕೂ ಏರಬಲ್ಲರು, ಈ ವ್ಯಾವಹಾರಿಕ ಜಗತ್ತಿಗೂ ಇಳಿದುಬರಬಲ್ಲರು. ಶ್ರೀರಾಮಕೃಷ್ಣರು ನರೇಂದ್ರನಿಗೆ ಇಂತಹ ಅತ್ಯುನ್ನತ ಆಧ್ಯಾತ್ಮಿಕ ಅನುಭವವನ್ನು ಮಾಡಿಸಿಕೊಡುವುದಾಗಿ ಹೇಳಿದರು. ನರೇಂದ್ರ ಈಗೀಗ ಆಲೋಚಿಸತೊಡಗಿದ್ದ—'ನಿರಾಕಾರವಾದ ಪರಬ್ರಹ್ಮವೇ ಈ ಜಗತ್ತಾಗಿ ವ್ಯಕ್ತಗೊಂಡಿದೆಯೆಂದಮೇಲೆ, ಅದು ಮಾನವರೂಪದಿಂದ ವ್ಯಕ್ತವಾಗಲು ಸಾಧ್ಯವಿಲ್ಲವೆ?' ಎಂದು. ಈ ಜಗದ್ಭಾವವನ್ನು ಅತಿಕ್ರಮಿಸಿ ಬ್ರಹ್ಮಭಾವವನ್ನು ತಲುಪಿದ ಮೇಲೆ ಪುನಃ ಕೆಳಗಿಳಿದು ಜಗದಾತ್ಮಭಾವದಿಂದಿರುವುದೇ ಉನ್ನತವಾದ ಸ್ಥಿತಿ ಎಂದು ಅವನು ಕಂಡುಕೊಂಡ. ಮತ್ತೂ ಮುಂದುವರಿದು, ಭಕ್ತಿ ಮತ್ತು ಜ್ಞಾನ ಇವೆರಡೂ ಒಂದೇ ಗುರಿಗೆ ಒಯ್ಯುವ ಎರಡು ಮಾರ್ಗಗಳು ಎಂಬ ಬಹು ಮುಖ್ಯ ಅಂಶವನ್ನು ಅವನು ಮನಗಂಡ. ಅಲ್ಲದೆ, ಅತ್ಯುನ್ನತ ಸಾಕ್ಷಾತ್ಕಾರದ ಪರಾಕಾಷ್ಠೆಯೇ ಪರಮಪ್ರೇಮ ಎಂಬುದೂ ಅವನಿಗೆ ತಿಳಿಯಿತು.

ಈಗ ಸುಮಾರು ಒಂದು ವರ್ಷದಿಂದಲೂ ಅವನ ಮನಸ್ಸು ಭಗವಾನ್ ಬುದ್ಧನಿಂದ ತೀವ್ರವಾಗಿ ಆಕರ್ಷಿತವಾಗಿಬಿಟ್ಟಿತ್ತು. ಬುದ್ಧನ ಜೀವನ-ಸಂದೇಶಗಳ ಬಗ್ಗೆ ಅವನೂ ಇತರ ಯುವಶಿಷ್ಯರೂ ಆಳವಾಗಿ ಚರ್ಚಿಸುತ್ತ ಹೊಸ ಸ್ಫೂರ್ತಿ ಗಳಿಸುತ್ತಿದ್ದರು. ನರೇಂದ್ರನಂತೂ ಒಂದು ವಿಧದಲ್ಲಿ ಬುದ್ಧನ ಅನುಯಾಯಿಯೇ ಆಗಿಬಿಟ್ಟಿದ್ದ ಎನ್ನಬೇಕು—ಅಷ್ಟರ ಮಟ್ಟಿಗೆ ಆತ ಬುದ್ಧನ, ಬೌದ್ಧಧರ್ಮದ ಚಿಂತನೆಯಲ್ಲಿ ಮುಳುಗಿ ಹೋಗಿದ್ದ. ಬುದ್ಧನ ಪರ್ವತೋಪಮವಾದ ಬುದ್ಧಿಮತ್ತೆ, ಸುಸಂಬದ್ಧ ವಿಚಾರದೃಷ್ಟಿ,

ಅವನ ಸತ್ಯಸಾಕ್ಷಾತ್ಕಾರದ ಅದಮ್ಯ ಆಕಾಂಕ್ಷೆ, ಉಜ್ವಲ ತ್ಯಾಗಬುದ್ಧಿ, ಕರುಣಾಪೂರ್ಣ ಹೃದಯ, ಅವನ ಮಧುರ-ಗಂಭೀರ ತೇಜೋಮಯ ವ್ಯಕ್ತಿತ್ವ, ಉದಾತ್ತ ನಿಷ್ಕಳಂಕ ಚಾರಿತ್ರ್ಯ, ಇಂದ್ರಿಯಗ್ರಾಹ್ಯವಲ್ಲದ ಆಧ್ಯಾತ್ಮಜೀವನದ ಹಾಗೂ ಮಾನುಷಜೀವನದ ಮಧ್ಯೆ ಅವನು ಸಮತೋಲ-ಸಾಮರಸ್ಯಗಳನ್ನು ತೋರಿಸಿದ ರೀತಿ ಇವುಗಳೆಲ್ಲ ನರೇಂದ್ರನಲ್ಲಿ ಒಂದು ಪ್ರಚಂಡ ಭಾವತರಂಗವನ್ನೇ ಎಬ್ಬಿಸಿಬಿಟ್ಟಿದ್ದುವು. ಈ ಭಾವೋತ್ಸಾಹವೆಂಬುದು ಅವನ ಇತರ ಸ್ನೇಹಿತರಲ್ಲೂ ಆ ಭಾವವನ್ನು ಜಾಗೃತಗೊಳಿಸಿಬಿಟ್ಟಿತ್ತು. ಬುದ್ಧಭಗವಂತನಂತೆಯೇ ತಾವೂ ಪ್ರಾಣದ ಹಂಗು ತೊರೆದಾದರೂ ಸಾಕ್ಷಾತ್ಕಾರ ಮಾಡಿಕೊಳ್ಳಲೇಬೇಕು ಎಂಬ ಛಲ ಅವರಲ್ಲುಂಟಾಗಿತ್ತು. ತಾವು ಧ್ಯಾನಮಾಡುತ್ತಿದ್ದ ಕೋಣೆಯ ಗೋಡೆಯ ಮೇಲೆ ಬುದ್ಧನ ಈ ಮಾತನ್ನು ದೊಡ್ಡ ಅಕ್ಷರಗಳಲ್ಲಿ ಬರೆದಿಟ್ಟುಕೊಂಡಿದ್ದರು: *"ಈ ದೇಹವು ಇದೇ ಆಸನದ ಮೇಲೆ ಒಣಗಿಹೋಗಲಿ, ಮೂಳೆಮಾಂಸಗಳು ಕರಗಿಹೋಗಲಿ, ಒಂದು ಯುಗವೇ ಕಳೆದುಹೋಗಲಿ —ಸತ್ಯಸಾಕ್ಷಾತ್ಕಾರವಾಗುವವರೆಗೆ ಈ ದೇಹ ಮಾತ್ರ ತನ್ನ ಆಸನವನ್ನು ಬಿಟ್ಟು ಏಳುವುದಿಲ್ಲ!"* ಗೌತಮ ಬುದ್ಧನು ಈ ದೃಢಸಂಕಲ್ಪವನ್ನು ಮಾಡಿ ಕುಳಿತು ಸತ್ಯಸಾಕ್ಷಾತ್ಕಾರ ಮಾಡಿಕೊಂಡದ್ದು ಬುದ್ಧಗಯೆಯಲ್ಲಿ. ಆದ್ದರಿಂದ ನರೇಂದ್ರನ ಮನಸ್ಸು ಬುದ್ಧಗಯೆಯ ಕಡೆಗೆ ವಿಶೇಷವಾಗಿ ಆಕರ್ಷಿತವಾಗುತ್ತಿತ್ತು. ತಾನೂ ಒಮ್ಮೆ ಆ ಪವಿತ್ರ ಸ್ಥಳಕ್ಕೆ ಹೋಗಿ, ಬೋಧಿವೃಕ್ಷದಡಿಯಲ್ಲಿ ಧ್ಯಾನನಿರತನಾಗಬೇಕು ಎಂಬ ಹಂಬಲ ಅವನಲ್ಲಿದ್ದೇ ಇತ್ತು. ಈ ವಿಷಯವನ್ನು ತಾರಕನಾಥ ಹಾಗೂ ಕಾಳೀಪ್ರಸಾದ ಇವರಿಬ್ಬರಿಗೆ ಮಾತ್ರ ತಿಳಿಸಿದ್ದ.

ಈಗ ಭಗವತ್ಸಾಕ್ಷಾತ್ಕಾರದ ಹಂಬಲ ನರೇಂದ್ರನಲ್ಲಿ ಭುಗಿಲೆದ್ದುಬಿಟ್ಟಿದೆ. ಆದ್ದರಿಂದ ೧೮೮೬ರ ಏಪ್ರಿಲ್‌ನಲ್ಲಿ ತಾರಕನಾಥ ಮತ್ತು ಕಾಳೀಪ್ರಸಾದರನ್ನು ಜೊತೆಗೂಡಿಕೊಂಡು ಬುದ್ಧಗಯೆಗೆ ಹೊರಟೇಬಿಟ್ಟ. ಗಂಗಾನದಿಯನ್ನು ದಾಟಿ, ಬಾಲಿ ಎಂಬಲ್ಲಿ ಗಯೆಗೆ ಹೋಗುವ ಟ್ರೈನು ಹತ್ತಿದರು. ಮೂವರ ಪ್ರಯಾಣದ ವೆಚ್ಚವನ್ನೂ ತಾರಕನಾಥನೇ ವಹಿಸಿಕೊಂಡಿದ್ದ. ತಾವು ಎಲ್ಲಿಗೆ ಹೋಗುತ್ತಿದ್ದೇವೆಂಬುದನ್ನು ಮಾತ್ರ ಅವರು ಯಾರಿಗೂ ಹೇಳಿರಲಿಲ್ಲ. ಆದರೆ ಆ ಮೂವರೂ 'ಕಾವಿ ಬಟ್ಟೆ ಧರಿಸಿ, ತಪಸ್ಸು ಮಾಡಲು ಬುದ್ಧಗಯೆಗೆ ಹೋಗಿದ್ದಾರೆ' ಎಂಬ ಸುದ್ದಿ ಉಳಿದವರಿಗೆ ಹೇಗೋ ತಿಳಿದು ಬಂತು. ಆಗ ಅವರೆಲ್ಲ, ಮೂವರೂ ಪರಿವ್ರಾಜಕ ಸಂನ್ಯಾಸಿಗಳಾಗಿ ಹೊರಟು ಬಿಟ್ಟರೇನೋ, ಇನ್ನು ಅವರು ಹಿಂದಿರುಗಿ ಬರುವುದೇ ಇಲ್ಲವೇನೋ ಎಂದು ಭಾವಿಸಿ ಕಳವಳಗೊಂಡರು.

ಇತ್ತ ಈ ಮೂವರು ಗೆಳೆಯರು ರೈಲಿನಲ್ಲಿ ಗಯೆಗೆ ಬಂದು ತಲುಪಿದರು. ಅಲ್ಲಿಂದ ಬುದ್ಧನಿಗೆ ಜ್ಞಾನೋದಯವಾದ ಸ್ಥಳಕ್ಕೆ ಏಳು ಮೈಲಿ ದೂರ; ಅಲ್ಲಿಗೆ ನಡೆದುಕೊಂಡೇ ಹೋದರು. ಆ ಸ್ಥಳವನ್ನು ತಲುಪಿದಾಗ ಅವರಿಗಾದ ಆನಂದ ಅಪಾರ. ತುಂಬ ಪ್ರಶಾಂತವಾದ ಪ್ರದೇಶ; ಪರಮ ಪವಿತ್ರ ವಾತಾವರಣ. ಪ್ರತಿ ನಿಮಿಷವೂ ಬುದ್ಧನ ಪವಿತ್ರ ಸ್ಮರಣೆಯನ್ನು ತಂದುಕೊಡುವ ಆ ದಿವ್ಯಧಾಮದ ಸಾನ್ನಿಧ್ಯದಲ್ಲಿ ಅವರ ಮನಸ್ಸು ಭಾವದುಂಬಿ ಮೌನ ತಾಳಿತು. ಕೆಲವು ದಿನವಾದರೂ ಅಲ್ಲೇ ಇದ್ದು ಆನಂದವನ್ನು ಸವಿಯಲು ಉದ್ದೇಶಿಸಿ, ಅಲ್ಲಿನ ದೇವಸ್ಥಾನದ ಮಹಂತರ ಮನೆಯಲ್ಲಿ ಇಳಿದುಕೊಂಡರು.

ಒಂದು ದಿನ ಸಂಜೆ; ಮೊದಲೇ ಪ್ರಶಾಂತವಾಗಿದ್ದ ಆ ಸ್ಥಳ ಇನ್ನಷ್ಟು ನೀರವ

ವಾಗಿದೆ. ಮೂವರೂ ಬೋಧಿವೃಕ್ಷದ ಕೆಳಗೆ ಕಲ್ಲಿನ ಆಸನದ ಮೇಲೆ ಕುಳಿತು ಧ್ಯಾನ ಮಗ್ನರಾಗಿದ್ದಾರೆ. ನರೇಂದ್ರನ ಮನಸ್ಸು ವಿಶೇಷ ಭಾವರಂಜಿತವಾಗಿದೆ. ಬುದ್ಧಭಗ ವಂತನ ಗುಣ-ಮಹಿಮೆಗಳನ್ನು ಭಾವಿಸುತ್ತ ಧ್ಯಾನಿಸುತ್ತ ಅವನ ಹೃದಯಾಂತರಾಳ ದಿಂದ ಭಾವದಲೆಗಳು ರಭಸದಿಂದ ಉಕ್ಕಿಬಂದುವು. ಆ ಭಾವದುಬ್ಬರವನ್ನು ತಾಳ ಲಾರದೆ ಅವನು ಅಶ್ರುಧಾರೆಯನ್ನು ಹರಿಸುತ್ತ, ಪಕ್ಕದಲ್ಲೇ ಕುಳಿತಿದ್ದ ತಾರಕನನ್ನು ಬಳಸಿ ತಬ್ಬಿಕೊಂಡುಬಿಟ್ಟ. ಚಕಿತಗೊಂಡ ತಾರಕ, "ನರೇನ್, ಏಕೆ, ಏನಾಯಿತು ?" ಎನ್ನುತ್ತ ಅವನನ್ನು ಸಾಂತ್ವನಗೊಳಿಸಲೆತ್ನಿಸಿದ. ಆಗ ನರೇಂದ್ರನೆಂದ: "ನಾನು ಧ್ಯಾನ ಮಾಡುತ್ತಿದ್ದಂತೆಯೇ ನನ್ನ ಕಣ್ಣಮುಂದೆ ಬುದ್ಧನ ಉದಾತ್ತ ವ್ಯಕ್ತಿತ್ವ, ಅವನ ಅದ್ಭುತ ಕರುಣೆ, ಅವನ ಮಾನವೀಯವಾದ ಬೋಧನೆಗಳು, ಅವನಿಂದಾಗಿ ಭಾರತದಲ್ಲಿ ಉಂಟಾದ ಅದ್ಭುತ ಪರಿವರ್ತನೆ—ಇವೆಲ್ಲ ಸ್ಪಷ್ಟವಾಗಿ, ತೇಜೋಮಯವಾಗಿ ಮೂಡಿ ಬರಲಾರಂಭಿಸಿದುವು. ಆದರಿಂದ ನನ್ನೊಳಗೆ ಒತ್ತಿಬಂದ ಭಾವಲಹರಿಯನ್ನು ನನ್ನಿಂದ ತಡೆದುಕೊಳ್ಳಲಾಗಲಿಲ್ಲ."

ಬುದ್ಧನ ವ್ಯಕ್ತಿತ್ವ ನರೇಂದ್ರನ ಮೇಲೆ ಇಂತಹ ಅಗಾಧವಾದ ಪ್ರಭಾವ ಬೀರಿದೆ ! ಇದೇಕಿರಬಹುದು ? ಬಹುಶಃ ಬುದ್ಧ ಅಂದು ಹರಿಸಿದ ಕರುಣಾಪ್ರವಾಹ ಇಂದು ಇವನ ಮೂಲಕ ಮತ್ತೆ ಧರೆಯಲ್ಲಿ ಹರಿದು ಜೀವರೆದೆಗಳನ್ನು ತಂಪುಗೊಳಿಸ ಬೇಕಾದ್ದಿದೆ ಎಂಬಂತೆ ತೋರುತ್ತಿದೆ. ನರೇಂದ್ರ ಹರಿಸಿದ ಕಣ್ಣೀರು ಅದರ ಪೂರ್ವ ಸೂಚನೆಯಾಗಿರುವಂತಿದೆ.

ಇತ್ತ ಕಾಶೀಪುರದಲ್ಲಿ ಉಳಿದ ಯುವಶಿಷ್ಯರಿಗೆ ನರೇಂದ್ರನಿಲ್ಲದ ದಿನಗಳು ಅಸಹನೀಯವಾಗಿ ತೋರುತ್ತಿದ್ದುವು. ನರೇಂದ್ರ ಅವರ ಮನಸ್ಸನ್ನು ಎಷ್ಟು ಸೂರೆ ಗೊಂಡಿದ್ದನೆಂದರೆ ಅವರಿಗೆ ಕ್ಷಣವೊಂದೊಂದೂ ಯುಗವಾಗಿ ತೋರುತ್ತಿತ್ತು. ಅವರಲ್ಲಿ ಕೆಲವರಂತೂ ತಾವೂ ಅವನನ್ನು ಹಿಂಬಾಲಿಸಿ ಬುದ್ಧಗಯೆಗೆ ಹೋಗುವ ವಿಚಾರ ಮಾಡುತ್ತಿದ್ದರು. ಅಲ್ಲದೆ, ಅವನು ಪರಿವ್ರಾಜಕನಾಗಿ ಹೊರಟೇಹೋಗಿಬಿಡಬಹುದು ಎಂಬ ಭಯ ಎಲ್ಲರೊಳಗೂ. ಈ ವಿಷಯವೆಲ್ಲ ಶ್ರೀರಾಮಕೃಷ್ಣರ ಕಿವಿಗೂ ಬಿತ್ತು. ಹಿಂದೆ, ಕೆಲವು ದಿನಗಳವರೆಗೆ ನರೇಂದ್ರ ಕಾಣಿಸಿಕೊಳ್ಳದಿದ್ದರೆ ಶ್ರೀರಾಮಕೃಷ್ಣರು ಹೇಗೆ ಚಡಪಡಿಸುತ್ತಿದ್ದರು ಎಂಬುದನ್ನು ನಾವು ಬಲ್ಲೆವು. ಈಗ, ನರೇಂದ್ರ ಮತ್ತೆ ಬಾರದೆಯೇ ಇದ್ದುಬಿಟ್ಟಾನು ಎಂದು ಶಂಕಿಸುವಂತಹ ಸಂದರ್ಭವೊದಗಿದೆ. ಎಂದಮೇಲೆ, ಅವ ರೆಷ್ಟು ಕಾತರರಾಗಿರಬೇಕಿತ್ತು ! ಆದರೆ ಹಾಗಾಗಲಿಲ್ಲ. ಅವರು ಶಿಷ್ಯರನ್ನೆಲ್ಲ ಕರೆದು ನುಡಿದರು: "ಅವನಿಗೋಸ್ಕರ ನೀವು ಅಷ್ಟೊಂದೇಕೆ ಕಾತರರಾಗಿದ್ದೀರಿ ? ಅವನು ಎಲ್ಲಿಗೆ ತಾನೆ ಹೋದಾನು ? ಎಷ್ಟು ದಿನ ಅಂತ ನಮ್ಮಿಂದ ದೂರವಿದ್ದಾನು ? ನೋಡು ತ್ತಿರಿ, ಅವನು ಖಂಡಿತವಾಗಿಯೂ ಬೇಗನೆ ಹಿಂದಿರುಗಿ ಬಂದುಬಿಡುತ್ತಾನೆ." ಬಳಿಕ ಸ್ವಲ್ಪ ತಡೆದು ಹೇಳಿದರು: "ನೋಡಿ, ನೀವು ಜಗತ್ತಿನ ನಾಲ್ಕು ಮೂಲೆಗಳಿಗೂ ಹೋಗ ಬಹುದು. ಆದರೆ ನಿಮಗೆ ಎಲ್ಲೂ ಏನೂ ಸಿಗುವುದಿಲ್ಲ. ಅಲ್ಲೆಲ್ಲ ಏನನ್ನು ಪಡೆಯ ಬಹುದೋ ಅದು ಇಲ್ಲಿಯೇ ಇದೆ." 'ಇಲ್ಲಿಯೇ' ಎಂಬುದನ್ನು ಶ್ರೀರಾಮಕೃಷ್ಣರು ತಮ್ಮ ಕಡೆ ಬೆರಳು ಮಾಡಿ ತೋರಿಸುತ್ತ ಹೇಳಿದರು. ಅದನ್ನು ಎರಡು ರೀತಿಯಲ್ಲಿ ಅರ್ಥೈಸಬಹುದಾಗಿತ್ತು. ಮೊದಲನೆಯದು: ಆಧ್ಯಾತ್ಮಿಕ ಶಕ್ತಿ, ಆಧ್ಯಾತ್ಮಿಕ ಪ್ರಕಾಶಗಳು

ಆಗ ಶ್ರೀರಾಮಕೃಷ್ಣರಲ್ಲಿ ಅಭಿವ್ಯಕ್ತವಾದಷ್ಟು ಪ್ರಮಾಣದಲ್ಲಿ ಇನ್ನೆಲ್ಲಿಯೂ ಪ್ರಕಟವಾಗಿರಲಿಲ್ಲ; ಆದ್ದರಿಂದ ಆಧ್ಯಾತ್ಮಿಕತೆಯನ್ನು ಹುಡುಕಿಕೊಂಡು ಯಾರೂ ಹಲವು ಹದಿನೆಂಟು ಕಡೆ ಹೋಗಬೇಕಾದದ್ದಿಲ್ಲ ಎಂಬರ್ಥದಲ್ಲಿ 'ಇಲ್ಲಿ' ಎಂದು ನಿರ್ದೇಶಿಸಿರಬಹುದು. ಎರಡನೆಯ ಅರ್ಥವೇನೆಂದರೆ—ಭಗವಂತ ಪ್ರತಿಯೊಬ್ಬನ ಹೃದಯದಲ್ಲೂ ವಾಸವಾಗಿದ್ದಾನೆ, ಭಕ್ತಿಯೊಂದು ಜಾಗ್ರತವಾಗಿಬಿಟ್ಟರೆ ಅವನನ್ನು ಇಲ್ಲೇ—ತಮ್ಮತಮ್ಮ ಹೃದಯದಲ್ಲೇ—ಕಾಣಬಹುದು; ಭಕ್ತಿ ಉದಯಿಸದೆಹೋದರೆ ಹೊರಗೆ ಎಲ್ಲೆಲ್ಲಿ ಸುತ್ತಿದರೂ ಅದರಿಂದೇನೂ ಪ್ರಯೋಜನವಿಲ್ಲ—ಎಂದು. ಶಿಷ್ಯರು ಶ್ರೀರಾಮಕೃಷ್ಣರ ಈ ಮಾತನ್ನು ಮೊದಲನೆಯ ರೀತಿಯಲ್ಲಿ ಅರ್ಥಮಾಡಿಕೊಂಡರು. ಶ್ರೀರಾಮಕೃಷ್ಣರಲ್ಲಿ ವಿಜೃಂಭಿಸುತ್ತಿರುವಂತೆ ಆಧ್ಯಾತ್ಮಿಕಶಕ್ತಿಯು ಇನ್ನೆಲ್ಲೂ ಪ್ರಕಾಶಗೊಂಡಿಲ್ಲ; ಆ ಶಕ್ತಿಯ ಆಕರ್ಷಣೆಯನ್ನು ಮೀರಿ ಹೋಗಲಾರದೆ ನರೇಂದ್ರ ಹಿಂದಿರುಗಿ ಬಂದೇ ಬರುತ್ತಾನೆ ಎಂಬುದು ಅವರಿಗೆ ಮತ್ತಷ್ಟು ದೃಢವಾಯಿತು.

ನಿಜಕ್ಕೂ ನರೇಂದ್ರ ಹಾಗೆ ಹೋದದ್ದರಿಂದ ಶ್ರೀರಾಮಕೃಷ್ಣರಿಗೆ ಒಂದು ರೀತಿಯಲ್ಲಿ ಸಂತೋಷವೇ ಆಗಿತ್ತು. ಏಕೆಂದರೆ, ಈ ಅನುಭವವನ್ನು ಪಡೆದಮೇಲೆ ಅವನು ತಮ್ಮನ್ನು ಇನ್ನಷ್ಟು ಚೆನ್ನಾಗಿ ಅರ್ಥಮಾಡಿಕೊಂಡು, ತನ್ಮೂಲಕ ಇನ್ನಷ್ಟು ಹೆಚ್ಚು ಮೆಚ್ಚಿಕೊಳ್ಳುತ್ತಾನೆ ಎಂದು ಅವರು ಮನಗಂಡಿದ್ದರು.

ಇನ್ನೂ ಒಂದೆರಡು ದಿನ ಕಳೆಯಿತು. ಈ ಮಧ್ಯೆ ಯುವಶಿಷ್ಯರು, ನರೇಂದ್ರ ಇನ್ನೂ ಹಿಂದಿರುಗಿ ಬಾರದಿದ್ದುದನ್ನು ಕಂಡು, ತಮ್ಮ ಕಾತರತೆಯನ್ನು ಇನ್ನು ತಾಳಲಾರದೆ, "ದಯವಿಟ್ಟು ನರೇಂದ್ರನನ್ನು ಹಿಂದಿರುಗುವ ಹಾಗೆ ಮಾಡಿ" ಎಂದು ಶ್ರೀರಾಮಕೃಷ್ಣರ ಬಳಿ ಮೊರೆಯಿಟ್ಟರು. ಆಗ ಶ್ರೀರಾಮಕೃಷ್ಣರು ನೆಲದ ಮೇಲೆ ವೃತ್ತಾಕಾರವಾಗಿ ಒಂದು ಗೆರೆ ಎಳೆದು, "ಅವನು ಇದರಿಂದಾಚೆಗೆ ಹೋಗಲಾರ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಶ್ರೀರಾಮಕೃಷ್ಣರ ಸಂಕಲ್ಪವನ್ನು ಮೀರಿ ನರೇಂದ್ರ ದೂರ ಹೋಗಲಾರ ಎಂದು ಅರ್ಥ ಮಾಡಿಕೊಂಡು ಶಿಷ್ಯರು ಸಮಾಧಾನಗೊಂಡರು. ಅದು ನಿಜಕ್ಕೂ ಹಾಗೆಯೇ ಆಯಿತು.

ಇತ್ತ ನರೇಂದ್ರನೂ ಅವನ ಇಬ್ಬರು ಸಂಗಡಿಗರೂ ಗಯೆಯಲ್ಲಿ ಮೂರ್ನಾಲ್ಕು ದಿನಗಳನ್ನು ಕಳೆದಿರಬಹುದು, ಅಷ್ಟರಲ್ಲೇ ಅವರ ಮನಸ್ಸಿಗೆ ಶ್ರೀರಾಮಕೃಷ್ಣರನ್ನು ನೋಡಬೇಕೆಂಬ ಕಾತರ ಹತ್ತಿಕೊಂಡಿತು. ಮೂವರೂ ವಾಪಸು ಹೊರಡುವ ಮನಸ್ಸು ಮಾಡಿದರು. ಆದರೆ ದಾರಿಖರ್ಚಿಗೆ ಯಾರ ಕೈಯಲ್ಲೂ ಹಣವಿರಲಿಲ್ಲ. ಆಗ ಅವರು ಉಳಿದುಕೊಂಡಿದ್ದ ದೇವಸ್ಥಾನದ ಪಾರುಪತ್ಯಗಾರ ಸ್ವಲ್ಪಮಟ್ಟಿನ ಖರ್ಚನ್ನು ವಹಿಸಿಕೊಂಡ. ಅವರು ಅಲ್ಲಿಂದ ಗಯಾಪಟ್ಟಣಕ್ಕೆ ಬಂದರು. ಅಲ್ಲಿ ನರೇಂದ್ರನಿಗೆ ಅವನ ತಂದೆಯ ಹಳೆಯ ಸ್ನೇಹಿತನೊಬ್ಬನೊಂದಿಗೆ ಭೇಟಿಯಾಯಿತು. ಅಂದು ಆತನ ಆತಿಥ್ಯ ಸ್ವೀಕರಿಸಿ, ಮರುದಿನವೇ ಕಲ್ಕತ್ತದ ಕಡೆಗೆ ಹೊರಟರು. ಉಳಿದ ಖರ್ಚನ್ನು ಆ ಸ್ನೇಹಿತನೇ ತುಂಬಿಕೊಟ್ಟ. ಅಂತೂ, ಮೂವರೂ ಕಾಶೀಪುರಕ್ಕೆ ಬಂದು ತಲುಪಿದರು.

ಶ್ರೀರಾಮಕೃಷ್ಣರಿಗೆ ತಮ್ಮ ಪ್ರೀತಿಯ ನರೇಂದ್ರನನ್ನು ನೋಡಿ ಅತ್ಯಾನಂದವಾಯಿತು. ಅವನು ಬುದ್ಧಗಯೆಯಲ್ಲಿ ಏನೇನು ಕಂಡ, ಏನೇನು ಭಾವಿಸಿದ ಎಂಬುದನ್ನೆಲ್ಲ ವಿವರವಾಗಿ ಕೇಳಿ ತಿಳಿದುಕೊಂಡರು. ಅವನು ಹಿಂದಿರುಗಿ ಬಂದದ್ದರಿಂದ ಇತರ

ಯುವಶಿಷ್ಯರಿಗಂತೂ ಹಿಡಿಸಲಾರದ ಹಿಗ್ಗು. ಬುದ್ಧಗಯೆಯ ಅನುಭವಗಳು ನರೇಂದ್ರನ ಮೇಲೆ ಎಷ್ಟು ಆಳವಾದ ಪ್ರಭಾವವನ್ನುಂಟುಮಾಡಿದ್ದವೆಂದರೆ, ಅನೇಕ ದಿನಗಳವರೆಗೆ ಅವನು ಬುದ್ಧನ ವಿಚಾರವಾಗಿಯೇ ಮಾತನಾಡುತ್ತಿದ್ದ.

ನರೇಂದ್ರ ಗಯೆಯಿಂದ ಹಿಂದಿರುಗಿ ಬಂದು ಕೆಲವೇ ದಿನಗಳಾಗಿವೆ. ಅವನೊಂದಿಗೆ ಲಾಟು, ಮಹೇಂದ್ರನಾಥ, ಶಶಿ, ರಾಖಾಲ ಹಾಗೂ ಇತರರು ಶ್ರೀರಾಮಕೃಷ್ಣರ ಸಮ್ಮುಖದಲ್ಲಿ ಕುಳಿತಿದ್ದಾರೆ.

ಶ್ರೀರಾಮಕೃಷ್ಣರು (ಮುಗುಳ್ನಗುತ್ತ) ಮಹೇಂದ್ರನಿಗೆ: "ಇವನು ಅಲ್ಲಿಗೆ (ಬುದ್ಧಗಯೆಗೆ) ಹೋಗಿದ್ದ."

ಮಹೇಂದ್ರ (ನರೇಂದ್ರನಿಗೆ): "ಬುದ್ಧನ ಮೂಲಭೂತ ತತ್ತ್ವಗಳೇನು ?"

ನರೇಂದ್ರ: "ನಿಜಕ್ಕೂ, ತಾನು ಆಧ್ಯಾತ್ಮಿಕ ಸಾಧನೆ ಮಾಡಿ ಯಾವ ಸಾಕ್ಷಾತ್ಕಾರ ಮಾಡಿಕೊಂಡನೋ, ಅದನ್ನು ಮಾತಿನಿಂದ ವರ್ಣಿಸಲು ಅವನಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಜನ ಅವನನ್ನು ನಾಸ್ತಿಕ ಎಂದು ಪರಿಗಣಿಸಿದರು."

ಶ್ರೀರಾಮಕೃಷ್ಣರು ಈ ಮಾತನ್ನು ಅನುಮೋದಿಸುತ್ತ ನುಡಿದರು: "ಅವನೇಕೆ ನಾಸ್ತಿಕನಾದಾನು ? ಅವನು ನಾಸ್ತಿಕನಲ್ಲ. ಅವನಿಗೆ ತನ್ನ ಅನುಭವಗಳನ್ನು ಶಬ್ದಗಳ ಮೂಲಕ ವ್ಯಕ್ತಪಡಿಸುವುದಕ್ಕಾಗಲಿಲ್ಲ, ಅಷ್ಟೆ. 'ಬುದ್ಧ' ಎಂಬುದರ ಅರ್ಥ ಗೊತ್ತೇನು ನಿನಗೆ ? ಯಾರಿಗೆ ಶುದ್ಧಚೈತನ್ಯದ ಬೋಧೆಯಾಗಿದೆಯೋ ಅವನೇ ಬುದ್ಧ. ಅಂತಹ ವ್ಯಕ್ತಿ ತಾನೂ ಶುದ್ಧಚೈತನ್ಯನೇ ಆಗಿಬಿಡುತ್ತಾನೆ."

ಹೀಗೇ ಸ್ವಲ್ಪಹೊತ್ತು ಮಾತುಕತೆ ನಡೆಯಿತು. ಬಳಿಕ ಶ್ರೀರಾಮಕೃಷ್ಣರು ನರೇಂದ್ರನನ್ನುದ್ದೇಶಿಸಿ ಕೇಳಿದರು: "ಬುದ್ಧ ಏನೇನು ಬೋಧಿಸಿದ ?"

ನರೇಂದ್ರ ಉತ್ಸಾಹದಿಂದ ಹೇಳತೊಡಗಿದ: "ಅವನು ಭಗವಂತನ ಅಸ್ತಿತ್ವ-ನಾಸ್ತಿತ್ವದ ವಿಷಯವಾಗಿ ಏನೂ ಮಾತನಾಡಲೇ ಇಲ್ಲ. ಅವನು ತನ್ನ ಜೀವನವಿಡೀ ಸುಮ್ಮನೆ ಎಲ್ಲರಿಗೂ ಕರುಣೆ ತೋರುತ್ತ ಬಂದ. ಅವನದು ಎಂಥ ಅದ್ಭುತವಾದ ತ್ಯಾಗ ! ರಾಜಕುಮಾರನಾಗಿ ಹುಟ್ಟಿಯೂ ಎಲ್ಲವನ್ನೂ ತ್ಯಾಗ ಮಾಡಿಬಿಟ್ಟ. ಕೈಯಲ್ಲಿ ಕಾಸಿಲ್ಲದವನು ತ್ಯಾಗ ಮಾಡಿದ್ದೇನೆಂದರೆ ಅದಕ್ಕೇನರ್ಥ ?

"ಆತ್ಮಸಾಕ್ಷಾತ್ಕಾರ ಮಾಡಿಕೊಂಡಮೇಲೆ ಒಮ್ಮೆ ಅವನು ತನ್ನ ಹಿಂದಿನ ಅರಮನೆಗೆ ಬಂದಿದ್ದ. ಆಗ ಅವನು ತನ್ನ ಹೆಂಡತಿ, ಮಗ ಹಾಗೂ ರಾಜಮನೆತನದ ಇನ್ನೂ ಅನೇಕರನ್ನು ಕೂಡ ತ್ಯಾಗಜೀವನವನ್ನು ಸ್ವೀಕರಿಸುವಂತೆ ಪ್ರೋತ್ಸಾಹಿಸುತ್ತಾನೆ ! ಅವನ ತ್ಯಾಗದಲ್ಲಿ ಎಂತಹ ತೀವ್ರತೆಯಿತ್ತು ! ಆದರೆ ವ್ಯಾಸನ ಬುದ್ಧಿಯನ್ನು ನೋಡಿ. ತ್ಯಾಗ ಮಾಡಲು ಹೊರಟ ಮಗನನ್ನು ತಡೆದು ಹೇಳುತ್ತಾನೆ—'ಬೇಡಪ್ಪ, ಗೃಹಸ್ಥನಾಗಿದ್ದುಕೊಂಡೇ ಸಾಧನೆ ಮಾಡು' ಅಂತ."

ಸಂದರ್ಭವೊದಗಿದಾಗಲೆಲ್ಲ ನರೇಂದ್ರ ಬುದ್ಧನ ಗುಣ-ವ್ಯಕ್ತಿತ್ವ-ತತ್ತ್ವಗಳನ್ನು ಹೀಗೆಯೇ ಮುಕ್ತಕಂಠದಿಂದ ವರ್ಣಿಸುತ್ತಿದ್ದ.

ತಮ್ಮ ಯುವಶಿಷ್ಯರ ವೈರಾಗ್ಯವನ್ನು ಜ್ವಲಂತವಾಗಿರಿಸಲು ಮತ್ತು ತಮ್ಮ ನಿರ್ಯಾಣಾನಂತರ ಅವರೆಲ್ಲ ಸಂನ್ಯಾಸ ಸ್ವೀಕರಿಸುವಂತಾಗಲು ಶ್ರೀರಾಮಕೃಷ್ಣರು ನಾನಾ ರೀತಿಯಲ್ಲಿ ಯತ್ನಿಸುತ್ತಿದ್ದರು. ಈ ಯುವಕರಿಗೆ ಅವರು ತಾವಾಗಿಯೇ ಸಾಂಕೇತಿಕವಾಗಿ ಸಂನ್ಯಾಸ ಕೊಡಲು ಒಂದು ಸಂದರ್ಭವೊದಗಿತು.

ಬಂಗಾಳದಲ್ಲಿ ಗಂಗೆ ಸಾಗರವನ್ನು ಸೇರುವ ಒಂದು ಸ್ಥಳವಿದೆ. ಇದೊಂದು ತೀರ್ಥಕ್ಷೇತ್ರ. ಇಲ್ಲಿ ವಾರ್ಷಿಕೋತ್ಸವ ನಡೆಯುತ್ತದೆ. ಈ ಉತ್ಸವಕ್ಕೆ ಹೋಗುವ ಅನೇಕ ಸಾಧು-ಸಂನ್ಯಾಸಿಗಳು ಕಲ್ಕತ್ತದ ಮೂಲಕ ಹೋಗುತ್ತಾರೆ. ಹಿರಿಯ ಗೋಪಾಲ ಈ ಸಾಧುಗಳಿಗೆ ಕಾಷಾಯವಸ್ತ್ರವನ್ನು ಹಾಗೂ ರುದ್ರಾಕ್ಷಿಮಾಲೆಯನ್ನು ಕೊಡಬೇಕೆಂಬ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದ. ಶ್ರೀರಾಮಕೃಷ್ಣರಿಗೆ ಈ ವಿಷಯ ತಿಳಿದಾಗ ಅವನನ್ನು ಕರೆದು ನರೇಂದ್ರಾದಿ ಯುವಶಿಷ್ಯರನ್ನು ತೋರಿಸುತ್ತ ಹೇಳಿದರು: "ಇಲ್ಲಿದ್ದಾರೆ ನೋಡು, ತ್ಯಾಗಭರಿತರಾದ ಯುವಕರು. ಇವರಿಗಿಂತ ಪರಿಶುದ್ಧ ವ್ಯಕ್ತಿಗಳನ್ನು ಹುಡುಕಿಕೊಂಡು ಎಲ್ಲಿಗೆ ಹೋಗುತ್ತಿ? ಆ ವಸ್ತುಗಳನ್ನು ಇವರಿಗೇ ಕೊಡು. ನಿನಗೆ ಶ್ರೇಯಸ್ಸುಂಟಾಗುತ್ತದೆ." ಅದಕ್ಕೊಪ್ಪಿ ಆತ ಹನ್ನೆರಡು ಜೊತೆ ಕಾವಿಬಟ್ಟೆ ಹಾಗೂ ರುದ್ರಾಕ್ಷಿಮಾಲೆಗಳನ್ನು ತಂದು ಶ್ರೀರಾಮಕೃಷ್ಣರ ಕೈಯಲ್ಲಿಟ್ಟ. ಅವರು ಅದನ್ನು ಆಗ ಅಲ್ಲಿದ್ದ ನರೇಂದ್ರ, ರಾಖಾಲ, ಬಾಬುರಾಮ, ನಿರಂಜನ, ಯೋಗೀಂದ್ರ, ತಾರಕನಾಥ, ಶಶಿಭೂಷಣ, ಶರಚ್ಚಂದ್ರ, ಕಾಳೀಪ್ರಸಾದ, ಲಾಟು ಹಾಗೂ ಹಿರಿಯ ಗೋಪಾಲ (ಶಿಷ್ಯರ ಪೈಕಿ ಇವರೊಬ್ಬರೇ ವಯಸ್ಕರು) ಇವರಿಗೆ ತಮ್ಮ ಕೈಯಾರೆ ಹಂಚಿದರು. ಇನ್ನೊಂದು ಜೊತೆಯನ್ನು ಗಿರೀಶನಿಗಾಗಿ ಎತ್ತಿರಿಸಿದರು. ನಿಜಕ್ಕೂ, ಈ ಮೂಲಕ ಭವಿಷ್ಯದ ಶ್ರೀರಾಮಕೃಷ್ಣ ಮಹಾಸಂಘದ ಸಂಸ್ಥಾಪನೆಯೇ ಆಯಿತು ಎನ್ನಬಹುದು.

ಈ ದಿನಗಳಲ್ಲೇ ನರೇಂದ್ರನ ಆಧ್ಯಾತ್ಮಿಕ ಸಾಧನೆಯ ತೀವ್ರತೆ ಹೆಚ್ಚುತ್ತ ಪರಾಕಾಷ್ಠೆಯನ್ನು ಮುಟ್ಟುತ್ತಿತ್ತು. ಈಗ ಒಂದು ಬಯಕೆ ಅವನೊಳಗೆ ಭೂತದಂತೆ ಹೊಕ್ಕು ಬಿಟ್ಟಿದೆ; ಹಗಲಿರುಳೂ ಕಾಳ್ಗಿಚ್ಚಿನಂತೆ ಉರಿಯುತ್ತಿದೆ. ಏನದು ? ಅದ್ವೈತ ಸಾಧನೆಯ ಅತ್ಯುನ್ನತ ಸ್ಥಿತಿಯಾದ ನಿರ್ವಿಕಲ್ಪ ಸಮಾಧಿಯ ಆನಂದವನ್ನು ಅನುಭವಿಸಬೇಕೆಂಬ ಹಂಬಲ! ಈ ಜಗತ್ತು, ತನ್ನ ದೇಹ, ಮನಸ್ಸು, ಬುದ್ಧಿಗಳೆಲ್ಲವನ್ನೂ ಮರೆತು, ಆತ್ಮದಲ್ಲಿ ಲೀನನಾಗಿ ಸುಖಿಸುತ್ತಿರಬೇಕೆಂಬ ಆಸೆ! ಮತ್ತು ಚಿರಮುಕ್ತನಾಗಿಬಿಡಬೇಕು ಎನ್ನುವ ಕಾತರ. ತನಗೆ ಅದನ್ನು ಶ್ರೀರಾಮಕೃಷ್ಣರು ಸಂಕಲ್ಪಮಾತ್ರದಿಂದ ಕೊಡಿಸಬಲ್ಲರು ಮತ್ತು ಆ ಶಕ್ತಿ ಇರುವುದು ಅವರೊಬ್ಬರಿಗೇ ಎಂಬ ಅರಿವು ಅವನಿಗೆ ಚೆನ್ನಾಗಿತ್ತು. ಅವರ ಮುಂದೆ ಎಷ್ಟೋ ಸಲ ತನ್ನ ಬಯಕೆಯನ್ನು ತೋಡಿಕೊಂಡಿದ್ದ. ಆಗೆಲ್ಲ ಅವರು ನಾನಾ ಬಗೆಯಿಂದ ಸಮಾಧಾನ ನೀಡಿ ಸುಮ್ಮನಾಗಿಸಿದ್ದರು. ಆದರೆ ಇನ್ನು ಅವನಿಗೆ ತಡೆಯಲು ಸಾಧ್ಯವಿಲ್ಲವಾಯಿತು. ಒಂದು ದಿನ ಇದ್ದಕ್ಕಿದ್ದಂತೆ ಶ್ರೀರಾಮಕೃಷ್ಣರ ಕೋಣೆಯೊಳಕ್ಕೆ ನುಗ್ಗಿ, ಅವರೆದುರು ನಿಂತು ನುಡಿದ:

"ಸ್ವಾಮಿ, ನೀವು ನನಗೆ ನಿರ್ವಿಕಲ್ಪ ಸಮಾಧಿಯನ್ನು ಕೊಡಿಸಲೇಬೇಕು."

ಶ್ರೀರಾಮಕೃಷ್ಣರು ಒಂದು ಕ್ಷಣ ವಿಚಲಿತರಾದರೂ ಶಾಂತವಾಗಿಯೇ ನುಡಿದರು:

"ಆಗಲಿ, ನಾನು ಗುಣಹೊಂದಿದ ಮೇಲೆ ನೀನೇನು ಕೇಳುತ್ತೀಯೋ ಅದನ್ನು ಕೊಡಿಸುತ್ತೇನೆ."

ಆದರೆ ಅವನು ಹಟ ಬಿಡದೆ ಮತ್ತೆಮತ್ತೆ ಕಾಡಿದ. ನಿರಂತರವಾಗಿ ಸಮಾಧಿಯಲ್ಲಿ ಮುಳುಗಿದ್ದು, ಎಲ್ಲೋ ಆಗೊಮ್ಮೆ ಈಗೊಮ್ಮೆ ಮಾತ್ರ, ದೇಹರಕ್ಷಣೆಗಾಗಿ ಪ್ರಕೃತಿಸ್ಥನಾಗಬೇಕು ಎಂಬ ತನ್ನ ಬಯಕೆಯನ್ನು ಪುನರುಚ್ಚರಿಸಿದ. ಆಗ ಶ್ರೀರಾಮಕೃಷ್ಣರು ಅಸಹನೆಗೊಂಡು ಅವನಿಗೆ ಛೀಮಾರಿ ಹಾಕಿದರು:

"ಛಿ! ನಾಚಿಗೆಗೇಡು! ನೀನೊಂದು ಮಹಾ ಆಶ್ರಯಸ್ಥಾನವಾಗಿ ಇರಬೇಕಾ

ದವನು. ನಿನ್ನ ಯೋಗ್ಯತೆಗೆ ಇಂಥ ಮಾತು ಒಪ್ಪುತ್ತದೆಯೆ? ನಾನೆಣಿಸಿದ್ದೆ—ನೀನೊಂದು ದೊಡ್ಡ ಆಲದಮರದ ಹಾಗಾಗುತ್ತೀ ಮತ್ತು ಅಸಂಖ್ಯಾತ ದೀನಾರ್ತರಿಗೆ ನಿನ್ನ ನೆರಳಿನಲ್ಲಿ ಆಶ್ರಯ ಕೊಡುತ್ತೀ ಅಂತ. ಈಗ ನೋಡಿದರೆ ನೀನು ನಿನ್ನ ಸ್ವಂತ ಸುಖವನ್ನು, ಸ್ವಂತ ಮುಕ್ತಿಯನ್ನು ಬಯಸುತ್ತಿದ್ದೀಯಲ್ಲ!... ಮಗೂ, ಈ ಮುಕ್ತಿ ಎನ್ನುವುದು ಅತ್ಯಂತ ಕ್ಷುದ್ರವಾದುದು. ಬೇಡ, ಇಂತಹ ಸಂಕುಚಿತ ದೃಷ್ಟಿಯಿಟ್ಟುಕೊಳ್ಳ ಬೇಡ. ಭಗವಂತನನ್ನು ಎಲ್ಲೆಡೆಗಳಲ್ಲೂ ಎಲ್ಲ ಬಗೆಗಳಿಂದಲೂ ನೋಡುವುದೇ ನನ್ನ ವೈಶಿಷ್ಟ್ಯ. ಯಾವ ಭಗವಂತನನ್ನು ನಾನು ಸಮಾಧಿಸ್ಥಿತಿಯಲ್ಲಿ ಪರಬ್ರಹ್ಮನಂತೆ ಕಾಣು ತ್ತೇನೋ ಅದೇ ಭಗವಂತನೇ ವಿವಿಧ ಮಾನವರೂಪಗಳಲ್ಲಿ ವಿರಾಜಿಸುತ್ತಿರುವುದನ್ನು ಜಾಗೃತಸ್ಥಿತಿಯಲ್ಲೂ ಕಂಡು ಆನಂದಿಸುತ್ತೇನೆ. ಇಂತಹ ಅತ್ಯುನ್ನತ ಅನುಭವವನ್ನು ನಿನಗೆ ಮಾಡಿಸಿ ಕೊಡಲು ನಾನು ಸಿದ್ಧನಿರುವಾಗ, ನೀನು ಅಂತಹ ಕ್ಷುದ್ರ ವಸ್ತುವಿಗಾಗಿ ಹಾತೊರೆಯುತ್ತಿದ್ದೀಯಲ್ಲ!"

ಏನೇ ಹೇಳಿದರೂ ನರೇಂದ್ರನಿಗೆ ಪೂರ್ತಿ ಒಪ್ಪಿಗೆಯಾಗಲಿಲ್ಲ.

ಇದಾಗಿ ಕೆಲದಿನಗಳಾಗಿರಬಹುದು. ಒಂದು ಅಪರಾಹ್ನ ಅವನು ಎಂದಿನಂತೆ ಮಲಗಿರುವ ಸ್ಥಿತಿಯಲ್ಲೇ ಧ್ಯಾನಮಗ್ನನಾಗಿದ್ದ. ಆಗ ಅವನಿಗೆ ಅತ್ಯಂತ ಅನಿರೀಕ್ಷಿತವಾಗಿ ಒಂದು ಅನಿರ್ವಚನೀಯ ಅನುಭವವಾಯಿತು. ಮೊದಲು ಅವನು ತನ್ನ ತಲೆಯ ಹಿಂಭಾಗದಲ್ಲಿ ಉಜ್ವಲ ಜ್ಯೋತಿಯೊಂದನ್ನು ಕಂಡ. ಒಡನೆಯೇ ಅವನನ್ನು ಭೌತಿಕ ಪ್ರಪಂಚಕ್ಕೆ ಬಂಧಿಸಿದ್ದ ಕಟ್ಟುಗಳೆಲ್ಲ ಹರಿದುಹೋದಂತಾಗಿ, ಅವನ ಮನಸ್ಸು ಅತ್ಯುನ್ನತ ಸ್ಥಿತಿಗೆ ಏರಿಹೋಯಿತು. ಆ ಅನುಭವವನ್ನು ಅವನಿಂದಲೇ ಕೇಳಿ ತಿಳಿದ ಗೆಳೆಯ ಶರಚ್ಚಂದ್ರ ಮುಂದೆ ಅದನ್ನು ಬಣ್ಣಿಸುತ್ತಾನೆ:

"ನರೇಂದ್ರನ ಆತ್ಮ ಪ್ರಚಂಡ ಭಾವಾವೇಶದ ಬಿರುಗಾಳಿಗೆ ಸಿಲುಕಿಕೊಂಡಿತು. ಅಲ್ಲಿಂದ ಅದು ಒಂದು ವಿಧವಾದ ದಿಗ್ಭ್ರಮೆಯ ದಿವ್ಯಾವಸ್ಥೆಯನ್ನು ಮುಟ್ಟಿತು. ಆ ಅವಸ್ಥೆಯಲ್ಲಿ ಸಕಲ ನಾಮರೂಪಗಳೂ ಭಾವನೆಗಳೂ ತನ್ನ ಮನಸ್ಸಿನಿಂದ ಕಳಚಿ ಬೀಳುತ್ತಿರುವಂತೆ ಅವನಿಗೆ ಭಾಸವಾಯಿತು. ಬಳಿಕ ಅವನ ಆತ್ಮ ಆ ಸ್ಥಿತಿಯಿಂದಲೂ ಮೇಲೇರಿ ಅತ್ಯಾನಂದದ ಹಂತವೊಂದನ್ನು ತಲುಪಿತು. ಆಗ ಅವನಿಗೆ ತನ್ನ ಸಂಪೂರ್ಣ ವ್ಯಕ್ತಿತ್ವವೇ ದಿವ್ಯತೆಯ ದೀಪ್ತಿಯಿಂದ ತುಂಬಿಹೋದಂತಹ ಅನುಭವವಾಯಿತು. ಕಡೆಗೆ ಆ ವ್ಯಕ್ತಿತ್ವವೂ ಕರಗಿಹೋಗಿ ದಿವ್ಯತೆಯೊಂದೇ ಉಳಿಯಿತು. ಈ ಎಲ್ಲ ಅನುಭವಗಳ ಪರಾಕಾಷ್ಠೆಯೆಂಬಂತೆ ಅವನ ಆತ್ಮ ಒಂದು ಮಹಾಜ್ಯೋತಿಯ ರೂಪದಿಂದ ಆ ಉತ್ಕಟ ಆನಂದದ ಸ್ಥಿತಿಯನ್ನೂ ಅತಿಕ್ರಮಿಸಿ ಅನಂತ ಶಾಂತಿಯ ನೀರವತೆಯನ್ನು ಪ್ರವೇಶಿಸಿತು."

ಶ್ರೀರಾಮಕೃಷ್ಣರ ಇಚ್ಛಾಮಾತ್ರದಿಂದ ನರೇಂದ್ರ ಇಂತಹ ಅತ್ಯಪೂರ್ವ ನಿರ್ವಿಕಲ್ಪ ಸಮಾಧಿಯ ಅನುಭವವನ್ನು ಹೊಂದಿ ಬೇರೆಯೇ ಲೋಕದಲ್ಲಿ ವಿಹರಿಸುತ್ತಿದ್ದಾನೆ. ಆದರೆ ಇತರರಿಗೆ ಮಾತ್ರ, ಅವನು ಅಂಗಾತ ಮಲಗಿದ್ದಾನೆ ಎನ್ನುವುದಲ್ಲದೆ ಬೇರೇನೂ ತಿಳಿಯುವಂತಿಲ್ಲ. ಆ ಕೋಣೆಯಲ್ಲಿ ಹಿರಿಯ ಗೋಪಾಲನೊಬ್ಬನೇ ಧ್ಯಾನನಿರತನಾಗಿ ಕುಳಿತಿದ್ದಾನೆ. ಉಳಿದವರು ಅಲ್ಲಿ-ಇಲ್ಲಿ ಬೇರೆಬೇರೆ ಕೆಲಸಕಾರ್ಯಗಳಲ್ಲಿ ತೊಡಗಿದ್ದಾರೆ. ಬಹಳ ಹೊತ್ತಿನ ಮೇಲೆ ಈಗ ಶ್ರೀರಾಮಕೃಷ್ಣರ ಸಂಕಲ್ಪದಿಂದ ಮತ್ತೆ ನರೇಂದ್ರನ ಪ್ರಜ್ಞೆ ಕೆಳಸ್ತರಕ್ಕೆ ಇಳಿದು ಬರಲಾರಂಭಿಸಿತು. ಸ್ವಲ್ಪ ಎಚ್ಚರಗೊಂಡ ನರೇಂದ್ರ ಮೆಲ್ಲನೆ

ಕಣ್ತೆರೆದು ನೋಡಿದ; ಇಂದ್ರಿಯ ಪ್ರಪಂಚಕ್ಕೆ ಹೊಂದಿಕೊಳ್ಳುವ ಪ್ರಯತ್ನ ಮಾಡಿದ. ಆದರೆ ಅವನಿಗೆ ತನ್ನ ಮುಖದ ಅಸ್ತಿತ್ವ ಮಾತ್ರ ಗೊತ್ತಾಗುತ್ತಿದೆ; ಇತರ ಅವಯವಗಳ ಮೇಲಿನ ಪ್ರಜ್ಞೆ ಮರಳಿಲ್ಲ. ಎಂಥ ಭಯಂಕರ ಸ್ಥಿತಿ! ಸ್ವಲ್ಪ ದೂರದಲ್ಲಿ ಕುಳಿತಿದ್ದ ಹಿರಿಯ ಗೋಪಾಲನನ್ನು ಕಂಡು ಅವನು ಜೋರಾಗಿ ಕೂಗಿಕೊಳ್ಳುವ ಪ್ರಯತ್ನ ಮಾಡಿದ, "ಓ ಗೋಪಾಲ್ ದಾ! ನನ್ನ ದೇಹ ಎಲ್ಲಿ? ನನ್ನ ದೇಹ ಎಲ್ಲಿ?" ಎಂದು. ಆದರೆ ಆ ಸ್ವರ ಗುಹೆಯೊಳಗಿಂದ ಬಂದಂತೆ ಕ್ಷೀಣವಾಗಿತ್ತು. ಗೋಪಾಲನಿಗೆ ಆಶ್ಚರ್ಯ ವಾಯಿತು. ಆತ ಕೂಡಲೇ ಎದ್ದು ಬಂದು, "ಯಾಕೆ ನರೇನ್, ಇಲ್ಲೇ ಇದೆಯಲ್ಲ!" ಎಂದು ಗಟ್ಟಿಯಾಗಿ ಹೇಳುತ್ತ, ಅವನ ಮೈಮುಟ್ಟಿ ನೋಡುತ್ತಾನೆ—ಅದು ಮರದ ಕೊರಡಿನಂತಾಗಿಬಿಟ್ಟಿದೆ! ಒಂದೆರಡು ಬಾರಿ ಮಾತನಾಡಿದ ನರೇಂದ್ರ ಮತ್ತೆ ಪ್ರಜ್ಞೆ ಕಳೆದುಕೊಂಡುಬಿಟ್ಟ. ಗೋಪಾಲ ಕಂಗಾಲಾದ. "ಬೇಗ ಬನ್ನಿ, ಬೇಗ ಬನ್ನಿ! ನರೇಂದ್ರ ನಿಗೆ ಏನೋ ಆಗಿಬಿಟ್ಟಿದೆ!" ಎಂದು ಕೂಗಿಕೊಂಡ. ಗುರುಭಾಯಿಗಳೆಲ್ಲ ಓಡೋಡಿ ಬಂದರು. ನರೇಂದ್ರ ನಿಶ್ಚೇಷ್ಟಿತನಾಗಿ ಬಿದ್ದಿದ್ದಾನೆ; ಉಸಿರಾಟವಿಲ್ಲ, ಅಂಗಾಂಗಗಳ ಮೇಲೆ ನಿಯಂತ್ರಣವಿಲ್ಲ! ಎಲ್ಲೋ ಕುಟುಕು ಜೀವ ಮಾತ್ರ ಇದ್ದಂತಿದೆ. ಆ ಅವಸ್ಥೆ ಯನ್ನು ನೋಡಿ ಎಲ್ಲರೂ ಭಯವಿಹ್ವಲರಾದರು. ಕೆಲವರು ಅವನ ಕೈಕಾಲುಗಳನ್ನು ತಿಕ್ಕಿದರು; ಕೃತಕ ಉಸಿರಾಟದ ಪ್ರಯೋಗದ ಮೂಲಕ ಶರೀರವನ್ನು ಚೇತನಗೊಳಿಸುವ ಪ್ರಯತ್ನ ಮಾಡಿದರು. ಏನೂ ಪ್ರಯೋಜನವಾಗಲಿಲ್ಲ. ಆತಂಕ ಮಿತಿಮೀರಿತು. "ನನಗೆ ಯಾಕೋ ಭಯವಾಗುತ್ತಿದೆ..." ಎಂದೊಬ್ಬ ಪಿಸುಗುಟ್ಟಿದ. ಇನ್ನೊಬ್ಬನೆಂದ, "ಬನ್ನಿ, ಠಾಕೂರರಿಗೆ ಹೇಳೋಣ!" ತಕ್ಷಣವೇ ಒಂದಿಬ್ಬರನ್ನು ಬಿಟ್ಟು ಉಳಿದವರೆಲ್ಲ ಮೇಲಕ್ಕೋಡಿದರು.

ಅಲ್ಲಿ ಹೋಗಿ ನೋಡಿದರೆ, ಶ್ರೀರಾಮಕೃಷ್ಣರು ತಮಗೆ ಎಲ್ಲ ವಿಷಯವೂ ತಿಳಿದೇ ಇದೆ ಎನ್ನುವಂತೆ ಗಂಭೀರ ಮುಖಮುದ್ರೆ ಧರಿಸಿ ಕುಳಿತಿದ್ದಾರೆ! ಯುವಶಿಷ್ಯರು ಕಳವಳದಿಂದ 'ನರೇಂದ್ರನಿಗೆ ಏನೋ ಆಗಿಬಿಟ್ಟಿರುವುದನ್ನು' ಬಣ್ಣಿಸಿದಾಗ ಅವರು, "ಇರಲಿ, ಇರಲಿ, ಸ್ವಲ್ಪ ಹೊತ್ತು ಹಾಗೇ ಇರಲಿ. ಅದಕ್ಕಾಗಿ ಅವನು ನನಗೆ ಸಾಕಷ್ಟು ತೊಂದರೆ ಕೊಟ್ಟಿದ್ದಾನೆ" ಎಂದು ಶಾಂತವಾಗಿ ನುಡಿದರು.

ಈ ಮಾತನ್ನು ಕೇಳಿದ ಮೇಲೆ ಶಿಷ್ಯರಿಗೆ ಎಷ್ಟೋ ಸಮಾಧಾನವಾಯಿತು. ನರೇಂದ್ರನಿದ್ದ ಕೋಣೆಗೆ ಮರಳಿ ಬಂದು, ಅವನನ್ನೇ ಗಮನಿಸತೊಡಗಿದರು. ಸುಮಾರು ಒಂದೆರಡು ಗಂಟೆಗಳ ಬಳಿಕ ಅವನಿಗೆ ಮೆಲ್ಲನೆ ಪ್ರಜ್ಞೆ ಮರಳತೊಡಗಿತು. ಕಡೆಗೆ ಯಾವುದೋ ಒಂದು ಶಕ್ತಿ ತನ್ನನ್ನು ಬಲವಾಗಿ ಹೊರದೂಡಿದಂತಾಗಿ ಇದ್ದ ಕ್ಕಿದ್ದಂತೆ ಎಚ್ಚರಗೊಂಡ. ಆದರೆ ಇನ್ನೂ ಮಬ್ಬು ಕವಿದಂತಿತ್ತು. ಬಳಿಕ ನಿಧಾನವಾಗಿ ತಾನು ಸವಿದ ದಿವ್ಯಾನಂದದ ಮಧುರ ಸ್ಮೃತಿ ಮರುಕಳಿಸಲಾರಂಭಿಸಿತು. ಒಳಗೆ ತುಂಬಿಕೊಂಡಿದ್ದ ಪ್ರಚಂಡ ಭಾವೋದ್ವೇಗ ಸ್ಫೋಟಗೊಂಡಂತಾಗಿ, ಧನ್ಯತೆಯ ಕಣ್ಣೀರು ಸುರಿಸುತ್ತ "ಆಹಾ! ಏನಾಗಿಹೋಯಿತು!" ಎಂದು ಉದ್ಗರಿಸಿದ.

ಈಗ ಅವನು ಮೇಲೆದ್ದ; ತನಗರಿವಿಲ್ಲದಂತೆಯೇ ಮಹಡಿಯ ಮೇಲಕ್ಕೆ ಹೋಗಿ, ಮೌನವಾಗಿ ಶ್ರೀರಾಮಕೃಷ್ಣರ ಮುಂದೆ ನಿಂತ. ಅವನ ಕಂಗಳಲ್ಲಿ ತಮ್ಮ ದೃಷ್ಟಿ ಯನ್ನು ನೆಟ್ಟು ಶ್ರೀರಾಮಕೃಷ್ಣರು ಗಂಭೀರವಾಗಿ ನುಡಿದರು:

"ಜಗನ್ಮಾತೆ ನಿನಗೆ ಎಲ್ಲವನ್ನೂ ತೋರಿಸಿದಳಷ್ಟೆ? ಆದರೆ ನೋಡು, ಅಮೂಲ್ಯ

ವಸ್ತುವೊಂದನ್ನು ಸಂದೂಕದಲ್ಲಿಟ್ಟು ಭದ್ರಪಡಿಸಿದಂತೆ, ನಿನ್ನ ಈ ಅನುಭವಕ್ಕೆ ಬೀಗ ಮುದ್ರೆ ಹಾಕಿಡಲಾಗುತ್ತದೆ. ಮತ್ತು ಅದರ ಕೀಲಿಕೈ ನನ್ನ ಬಳಿಯಿರುತ್ತದೆ. ನೀನು ಸಾಧಿಸಬೇಕಾದ ಕೆಲಸಗಳು ಇನ್ನೂ ಬಹಳಷ್ಟಿವೆ. ಅವುಗಳನ್ನೆಲ್ಲ ನೀನು ಮಾಡಿ ಮುಗಿಸಿದ ಮೇಲೆ ಮತ್ತೆ ಆ ಬೀಗವನ್ನು ತೆರೆಯಲಾಗುತ್ತದೆ. ಆಗ ಆ ನಿಧಿ ಮತ್ತೆ ನಿನ್ನದಾಗುತ್ತದೆ. ಎಲ್ಲವೂ ಪುನಃ ನಿನಗೆ ಈಗ ಕಂಡಂತೆಯೇ ಅನುಭವಕ್ಕೆ ಬರುತ್ತದೆ."

ಆದರೆ ತಾನು ಒಮ್ಮೆ ಸವಿದ ಆನಂದವನ್ನು ಮೆಲುಕು ಹಾಕುತ್ತ ನರೇಂದ್ರ ಗೋಗರೆದ: "ನಾನು ಸಮಾಧಿಯಲ್ಲಿ ತುಂಬ ಆನಂದದಿಂದಿದ್ದೆ. ನನ್ನನ್ನು ಅದೇ ಸ್ಥಿತಿಯಲ್ಲಿರಿಸುವ ಕೃಪೆ ಮಾಡಬೇಕು."

ಅವನ ಸ್ವಾರ್ಥಬುದ್ಧಿಯನ್ನು ಶ್ರೀರಾಮಕೃಷ್ಣರು ಪುನಃ ಖಂಡಿಸಿದರು. ಆದರೆ ಬಳಿಕ ಅತಿ ಮಹತ್ವಪೂರ್ಣವಾದ ಈ ಮಾತುಗಳನ್ನು ನುಡಿದರು:

"ಜಗನ್ಮಾತೆಯ ಕೃಪೆಯಿಂದ, ಮುಂದೆ ನಿನಗೆ ಈ ಅನುಭವ ಎಷ್ಟು ಸಹಜವಾಗಿಬಿಡುತ್ತದೆಯೆಂದರೆ, ಜಾಗೃದವಸ್ಥೆಯಲ್ಲೇ ನೀನು ಸಕಲ ಜೀವಿಗಳಲ್ಲೂ ಆ ದಿವ್ಯತೆಯನ್ನು ಕಾಣಲು ಸಮರ್ಥನಾಗುವೆ. ಜಗತ್ತಿನಲ್ಲಿ ನೀನು ಮಹಾಕಾರ್ಯಗಳನ್ನು ಸಾಧಿಸುತ್ತೀಯೆ. ಜನಕೋಟಿಯಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನುಂಟುಮಾಡಿ, ದೀನದರಿದ್ರರ ಕಷ್ಟಕೋಟಲೆಗಳನ್ನು ದೂರ ಮಾಡುವೆ."

ಬಳಿಕ, ಸಕಲ ಆಧ್ಯಾತ್ಮಿಕ ರಹಸ್ಯಗಳಲ್ಲೂ ಪರಿಣತರಾದ ಶ್ರೀರಾಮಕೃಷ್ಣರು ಅವನಿಗೆ, ಇನ್ನು ಕೆಲವು ಕಾಲ ತನ್ನ ಶರೀರದ ಕಡೆಗೆ ಎಚ್ಚರದಿಂದಿರುವಂತೆ ಮತ್ತು ಮನೆಯಲ್ಲೇ ತಯಾರಾದ ಪರಿಶುದ್ಧ ಆಹಾರವನ್ನು ಮಾತ್ರ ಸೇವಿಸುವಂತೆ ಸೂಚನೆಯಿತ್ತರು.

ತರುವಾಯ ಅವರು ಇತರ ಆಪ್ತ ಶಿಷ್ಯರೆದುರು ನರೇಂದ್ರನ ಬಗೆಗಿನ ಅನೇಕ ಗುಪ್ತ ವಿಚಾರಗಳನ್ನು ಬಯಲುಪಡಿಸುತ್ತಾರೆ:

"ಅವನು ಇಚ್ಛಾಮರಣಿ—ಯಾವಾಗ ತನ್ನ ನಿಜಸ್ವರೂಪವನ್ನು ಕಂಡುಕೊಳ್ಳುತ್ತಾನೋ ಆಮೇಲೆ ಕ್ಷಣಕಾಲವೂ ಶರೀರದಲ್ಲಿರಲು ಇಷ್ಟಪಡದೆ ಸ್ವೇಚ್ಛೆಯಿಂದ ದೇಹವನ್ನು ಬಿಟ್ಟುಬಿಡುತ್ತಾನೆ. ಮುಂದೊಂದು ಕಾಲ ಬರುತ್ತದೆ, ಆಗ ಅವನು ತನ್ನ ಅಪರಿಮಿತ ಬುದ್ಧಿಶಕ್ತಿ, ಆಧ್ಯಾತ್ಮಿಕ ಶಕ್ತಿಗಳಿಂದ ಜಗತ್ತನ್ನೇ ಬುಡಸಹಿತ ಅಲುಗಾಡಿಸಿಬಿಡುತ್ತಾನೆ! ಅವನಿಂದ ಬಹಳಷ್ಟು ಕೆಲಸವಾಗಬೇಕಾದ್ದಿದೆ. ಆದ್ದರಿಂದ ಅವನ ಅದ್ವೈತ ಸಾಕ್ಷಾತ್ಕಾರದ ಮೇಲೆ ಪರದೆಯನ್ನು ಎಳೆದುಬಿಡುವಂತೆ ಜಗನ್ಮಾತೆಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡಿದ್ದೇನೆ. ಆದರೆ ಆ ಪರದೆ ತುಂಬ ಸೂಕ್ಷ್ಮ; ಎಷ್ಟರ ಮಟ್ಟಿಗೆಂದರೆ ಅದು ಯಾವಾಗ ಬೇಕಾದರೂ ಹರಿದುಹೋಗಬಹುದು."

ತಮ್ಮ ಸಂಗಡಿಗನೂ ಪ್ರಿಯನಾಯಕನೂ ಆದ ನರೇಂದ್ರನ ಕುರಿತಾಗಿ ಶ್ರೀರಾಮಕೃಷ್ಣರ ಬಾಯಿಂದ ಇಂಥ ಪರಮಾದ್ಭುತ ಭವಿಷ್ಯವಾಣಿಯನ್ನು ಆಲಿಸಿದ ಶಿಷ್ಯರೆಲ್ಲ ಮೂಕವಿಸ್ಮಿತರಾದರು. ಆದರೆ ಅನೇಕ ವರ್ಷಗಳ ಬಳಿಕ ಆ ಪ್ರತಿಯೊಂದು ಮಾತೂ ಅಕ್ಷರಶಃ ಸತ್ಯವಾಗಿ ಪರಿಣಮಿಸಿದುದನ್ನು ಕಣ್ಣಾರೆ ನೋಡುವವರೆಗೂ ಅವುಗಳ ಬಗ್ಗೆ ಅವರ ಶಂಕೆ ಪೂರ್ಣವಾಗಿ ದೂರವಾಗಿರಲಿಲ್ಲ.

ಶ್ರೀರಾಮಕೃಷ್ಣರು ಹೀಗೆ ಬೀಗ ಹಾಕಿಟ್ಟರೂ, ನರೇಂದ್ರನಿಗೆ ಮುಂದೆ ಅನೇಕ ಬಾರಿ ನಿರ್ವಿಕಲ್ಪ ಸಮಾಧಿ ಪ್ರಾಪ್ತವಾಗಿತ್ತೆಂಬ ವಿಷಯ ತಿಳಿದುಬರುತ್ತದೆ. ಮುಂದೆ

ಸ್ವಾಮಿ ವಿವೇಕಾನಂದರಿಗೆ ಅಮೆರಿಕೆಯ ಶಿಕಾಗೋದ ಮಿಚಿಗನ್ ಸರೋವರದ ತೀರದಲ್ಲಿ, ನ್ಯೂಹ್ಯಾಂಪ್‌ಷೈರಿನ ಕ್ಯಾಂಪ್‌ಪರ್ಸಿ ಎಂಬಲ್ಲಿ ಮತ್ತು ಸಹಸ್ರದ್ವೀಪೋದ್ಯಾನ ಎಂಬಲ್ಲಿ ಇಂತಹ ಅನುಭವವಾದುದನ್ನು ಕಂಡವರಿದ್ದಾರೆ.* ಶ್ರೀರಾಮಕೃಷ್ಣರೇ ಹೇಳಿದಂತೆ, ನರೇಂದ್ರನ ಮೇಲಿದ್ದ ಮಾಯೆಯ ಪರದೆ ಎಷ್ಟು ತೆಳುವೆಂದರೆ ಅದು ಯಾವಾಗಲಾದರೂ ಹರಿದುಹೋಗಬಹುದಾಗಿತ್ತು. ಹೀಗೆ ಇಂತಹ ಸಂದರ್ಭಗಳಲ್ಲಿ ಅದು ಆಗಾಗ ಹರಿದುಹೋಗುತ್ತಿತ್ತು ಎಂದು ನಾವು ಊಹಿಸಬಹುದು. ಆದರೆ ಈ ಮೂರು ಸ್ಥಳಗಳಲ್ಲಿ ಮಾತ್ರವಲ್ಲದೆ ಅವರಿಗೆ ಇನ್ನೆಲ್ಲೆಲ್ಲಿ ಎಷ್ಟೆಷ್ಟು ಸಲ ಈ ಅನುಭವವಾಗಿತ್ತೋ ಬಲ್ಲವರಾರು ?

ಶ್ರೀರಾಮಕೃಷ್ಣರ ದರ್ಶನಕ್ಕಾಗಿ ಜನ ಗುಂಪುಗುಂಪಾಗಿ ಧಾವಿಸಿ ಬರಲಾರಂಭಿಸಿದ್ದರು. ಅದನ್ನು ನೋಡಿದವರಿಗೆಲ್ಲ ಅವರ ಲೀಲಾಸಮಾಪ್ತಿಯ ದಿನ ಬಹಳ ವೇಗವಾಗಿ ಸಮೀಪಿಸುತ್ತಿದೆ ಎಂದೆನಿಸುತ್ತಿತ್ತು. ನರೇಂದ್ರನಂತೂ ಅದನ್ನು ಸ್ಪಷ್ಟವಾಗಿ ಕಾಣುತ್ತಿದ್ದ. ಅಗಲುವಿಕೆಯ ದುಃಖದೊಂದಿಗೆ, ತಾನು ಶ್ರೀರಾಮಕೃಷ್ಣರಿಂದ ಪಡೆದ ಅಮೂಲ್ಯ ಆಧ್ಯಾತ್ಮಿಕ ಅನುಭವಗಳ ಮಧುರಸ್ಮೃತಿಯೂ ಉಕ್ಕಿಬರುತ್ತಿತ್ತು. ಅಲ್ಲದೆ, ಅವರ ನಿರ್ಯಾಣದ ಬಳಿಕ ಅವರ ಆಧ್ಯಾತ್ಮಿಕ ಸಂಪತ್ತಿಗೆ ಅಧಿಕಾರಿಯಾಗಬೇಕಾದವನು ತಾನೇ ಎಂಬ ಅರಿವಿನಿಂದ ಆ ಹೊಣೆಗಾರಿಕೆಯನ್ನು ಹೊರಲು ಬೇಕಾದ ಹೊಸ ಶಕ್ತಿಯೊಂದು ಅವನಲ್ಲಿ ಉದ್ಭವಿಸುತ್ತಿತ್ತು.

ಇಲ್ಲಿ ನಾವು ಕುತೂಹಲಕರ ಅಂಶವೊಂದನ್ನು ಗಮನಿಸಬಹುದು; ಏನೆಂದರೆ, ನರೇಂದ್ರನು ಜಗನ್ಮಾತೆಯನ್ನು ಒಪ್ಪಿಕೊಂಡು, ಜಗನ್ಮಾತೆಗೆ ಅವನ ಜವಾಬ್ದಾರಿಯನ್ನು ವಹಿಸಿಕೊಡುವಂತಾಗಲು ಶ್ರೀರಾಮಕೃಷ್ಣರು ಮೂರ್ನಾಲ್ಕು ವರ್ಷಗಳೇ ಕಾಯಬೇಕಾಯಿತು. ಹೀಗೆ ಮಾಡಲು ಸಾಧ್ಯವಾದ ಮೇಲೆಯೇ ಅವರು ತಮ್ಮ ಆಧ್ಯಾತ್ಮಿಕ ಸಂಪತ್ತನ್ನು ಅವನಿಗೆ ಧಾರೆಯೆರೆದು ಶರೀರತ್ಯಾಗ ಮಾಡಲು ಸಿದ್ಧರಾಗಿರುವುದು. ಈ ವಿಷಯವಾಗಿ ನರೇಂದ್ರನೇ ಮುಂದೆ ಹೇಳುತ್ತಾನೆ: "ಶ್ರೀರಾಮಕೃಷ್ಣರು ನನ್ನನ್ನು ಜಗನ್ಮಾತೆಗೆ ಒಪ್ಪಿಸಿಕೊಟ್ಟಮೇಲೆ ಅವರು ಆರೋಗ್ಯದಿಂದಿದ್ದುದು ಆರು ತಿಂಗಳು ಮಾತ್ರ. ಆಮೇಲೆ ಅವರು ಕಾಯಿಲೆ ಬಿದ್ದುಬಿಟ್ಟರು." ನಿಜಕ್ಕೂ ಇನ್ನುಮುಂದೆ ಶ್ರೀರಾಮಕೃಷ್ಣರ ಶಕ್ತಿತರಂಗವು ಹೊಸ ಕಾಲುವೆಯೊಂದರ ಮೂಲಕ ಹರಿದುಬರಲಿತ್ತು. ನರೇಂದ್ರನೇ ಈ ಹೊಸ ಕಾಲುವೆ. ನಾಲ್ಕು ವರ್ಷಗಳ ಸುದೀರ್ಘ ಪರಿಶ್ರಮದಿಂದ ಈ ಕಾಲುವೆಯನ್ನು ಶ್ರೀರಾಮಕೃಷ್ಣರು ಸಿದ್ಧಪಡಿಸಿದ್ದರು.

ಶ್ರೀರಾಮಕೃಷ್ಣರು ನಿರ್ವಿಕಲ್ಪ ಸಮಾಧಿಯ ಅನುಭವವನ್ನು ಮಾಡಿಸಿಕೊಟ್ಟ ಮೇಲೆ ನರೇಂದ್ರನ ಧ್ಯಾನದ ತೀವ್ರತೆ ಇನ್ನೂ ಹೆಚ್ಚಾಗಿಬಿಟ್ಟಿತ್ತು. ಒಂದು ದಿನ ಅವನೂ ಗಿರೀಶಚಂದ್ರ ಘೋಷನೂ ಒಂದು ಮರದ ಕೆಳಗೆ ಧ್ಯಾನಕ್ಕೆ ಕುಳಿತಿದ್ದರು. ಆದರೆ ಅಲ್ಲಿ ಅಸಂಖ್ಯಾತ ಸೊಳ್ಳೆಗಳು. ಸೊಳ್ಳೆಗಳ ಕಾಟ ತಡೆಯಲಾರದೆ ಗಿರೀಶ ಎದ್ದುಬಿಟ್ಟ. ಆ ಸೊಳ್ಳೆಗಳು ನರೇಂದ್ರನನ್ನು ಮಾತ್ರ ಕಚ್ಚಲೇ ಇಲ್ಲವೆ ? ಗಿರೀಶ ನೋಡುತ್ತಾನೆ—ಸೊಳ್ಳೆಗಳು ನರೇಂದ್ರನ ಮೈಯನ್ನು ಹೇಗೆ ಮುತ್ತಿಕೊಂಡಿದ್ದುವೆಂದರೆ, ಅವನೊಂದು ಕರೀ ಕಂಬಳಿಯನ್ನು ಹೊದ್ದು ಕುಳಿತಿರುವಂತೆ ಕಾಣುತ್ತಿತ್ತು ! ಆದರೆ ಅವನು ಮಾತ್ರ ಆದರ

* 'ವಿಶ್ವಮಾನವ ವಿವೇಕಾನಂದ' (ಸಂ. ೩) ಗ್ರಂಥದಲ್ಲಿ ಈ ಬಗ್ಗೆ ಇನ್ನಷ್ಟು ವಿವರವಾಗಿ ಓದಬಹುದು.

ಪರಿವೆಯೇ ಇಲ್ಲದೆ ಗಾಢ ಧ್ಯಾನದಲ್ಲಿ ಮುಳುಗಿಹೋಗಿದ್ದ.

ಯುವಶಿಷ್ಯರೆಲ್ಲ ತನುಮನಪೂರ್ವಕವಾಗಿ ಗುರುಸೇವೆಯನ್ನು ಮಾಡಿಕೊಂಡು ಬರುತ್ತಿದ್ದಾರೆ. ಆದರೆ ತನುಮನಗಳೊಂದಿಗೆ ಧನವೂ ಬೇಕಲ್ಲ! ವಿದ್ಯಾರ್ಥಿಗಳಾದ ಆ ಯುವಕರ ಕೈಯಲ್ಲಿ ಧನವೆಲ್ಲಿಂದ ಬರಬೇಕು? ಶ್ರೀರಾಮಕೃಷ್ಣರ ಶುಶ್ರೂಷೆಯ ಹಾಗೂ ಅಲ್ಲಿರುವವರೆಲ್ಲರ ಊಟೋಪಚಾರಗಳ ವೆಚ್ಚಕ್ಕೆ ಮತ್ತು ಮನೆ ಬಾಡಿಗೆಗೆ ಹಣ ಕೊಡುತ್ತಿದ್ದವರು ಗೃಹೀಭಕ್ತರು. ಅವರಲ್ಲಿ ರಾಮಚಂದ್ರ ದತ್ತ, ಕಾಳೀಪದ ಘೋಷ್ ಹಾಗೂ ಸುರೇಂದ್ರನಾಥ ಮಿತ್ರ—ಇವರು ಪ್ರಧಾನವಾಗಿ ವಂತಿಗೆ ಕೊಡು ತ್ತಿದ್ದವರು. ಈ ಯುವಕರು ಹಣವನ್ನು ಹದವರಿತು, ಬೇಕಾದಷ್ಟನ್ನು ಮಾತ್ರವೇ ವೆಚ್ಚ ಮಾಡುತ್ತಿದ್ದರು. ಹಿರಿಯ ಗೋಪಾಲ ಈ ಹಣದ ಲೆಕ್ಕವಿಡುತ್ತಿದ್ದ, ರಾಮಚಂದ್ರ ದತ್ತ ಆಗಾಗ ಆ ಲೆಕ್ಕವನ್ನು ಪರಿಶೋಧಿಸಿ ನೋಡುತ್ತಿದ್ದ. ಒಂದು ಸಲ ಈ ಖರ್ಚು ಸ್ವಲ್ಪ ಹೆಚ್ಚಾಗಿ ಕಂಡುಬಂದಿರಬೇಕು. ಗೃಹೀಭಕ್ತರು ಅಸಮಾಧಾನಗೊಂಡು ಖಾರವಾಗಿ ಮಾತಾಡಿಬಿಟ್ಟರು. ಗುರುಭಕ್ತಿ ಎಷ್ಟೇ ಇದ್ದಿರಬಹುದು, ಆದರೆ ಹಣ ಹೆಚ್ಚಾಗಿ ಖರ್ಚಾಗುತ್ತಿದೆ ಎಂದು ಅನ್ನಿಸಿದಾಗ ಅವರಿಗೆ ಹೊಟ್ಟೆ ಚುರುಗುಟ್ಟಿದ್ದು ಸಹಜವೇ. ಆದರೆ ಸ್ವಾಭಿಮಾನಿಗಳಾದ ಯುವಕರ ಪಾಲಿಗೆ ಈ ಮಾತು ಸ್ವಲ್ಪ ಹೆಚ್ಚಾಯಿತು. ಅವರಾದರೂ ತಮ್ಮ ಸ್ವಂತಕ್ಕೋಸ್ಕರ ಖರ್ಚುಮಾಡಿಕೊಳ್ಳುತ್ತಿದ್ದಾರೆಯೆ! ನರೇಂದ್ರ ಬೇರೆ ದಾರಿಗಾಣದೆ ಶ್ರೀರಾಮಕೃಷ್ಣರ ಬಳಿಗೇ ಹೋಗಿ ವಿಷಯವನ್ನೆಲ್ಲ ತಿಳಿಸಿದ. ಅವನ ಮಾತನ್ನು ಸಹಾನುಭೂತಿಯಿಂದ ಆಲಿಸಿದ ಶ್ರೀರಾಮಕೃಷ್ಣರು ತಕ್ಷಣವೇ ನುಡಿದರು: "ನರೇನ್, ನೀನು ನನ್ನನ್ನು ನಿನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಎಲ್ಲಿಗೆ ಕರೆದು ಕೊಂಡು ಹೋಗುತ್ತೀಯೋ ಅಲ್ಲಿಗೆ ಬರುತ್ತೇನೆ; ನೀನು ನನ್ನನ್ನು ಹೇಗಿರಿಸಿದರೆ ಹಾಗಿರು ತ್ತೇನೆ." ಅಂಥ ಅಸಹಾಯಕ ಪರಿಸ್ಥಿತಿಯಲ್ಲೂ ಶ್ರೀರಾಮಕೃಷ್ಣರ ಮಾತಿನಲ್ಲಿ ಎಂತಹ ದೃಢತೆ, ಯುವಶಿಷ್ಯರ ಬಗ್ಗೆ ಎಂತಹ ವಿಶ್ವಾಸ, ಪ್ರೀತಿ! ಆದರೆ ಅವರ ಆ ಮಾತನ್ನು ಕೇಳಿ ಯುವಕರಿಗೆಲ್ಲ ಚಿಂತೆ ಹುಟ್ಟಿತು. ಶ್ರೀರಾಮಕೃಷ್ಣರೇನೋ ಹೃತ್ಪೂರ್ವಕವಾಗಿಯೇ ಹಾಗೆಂದಿದ್ದರು. ಆದರೆ ಈ ಯುವಕರು ಅವರನ್ನು ಎಲ್ಲಿಗೆ ಕರೆದೊಯ್ದಾರು? ಅಷ್ಟೊಂದು ಖರ್ಚನ್ನು ಹೇಗೆ ನಿಭಾಯಿಸಿಯಾರು? ಈ ವಿಚಾರವೆಲ್ಲ ಲಕ್ಷ್ಮೀನಾರಾ ಯಣ ಮಾರ್ವಾಡಿ ಎಂಬ ಶ್ರೀಮಂತ ಭಕ್ತನಿಗೆ ತಿಳಿಯಿತು. ಅವನು ತಕ್ಷಣ ಧನ ಸಹಾಯ ನೀಡಲು ಮುಂದಾದ. ಆದರೆ ಶ್ರೀರಾಮಕೃಷ್ಣರು ಅದನ್ನು ಸ್ವೀಕರಿಸಲು ಒಪ್ಪ ಲಿಲ್ಲ. ಬದಲಾಗಿ ಗಿರೀಶನನ್ನು ಕರೆದು, "ನೋಡು, ನೀನೊಬ್ಬನೇ ಎಲ್ಲ ಖರ್ಚನ್ನೂ ವಹಿಸಿಕೋ" ಎಂದು ಹೇಳಿಬಿಟ್ಟರು. ಗಿರೀಶ ಅಂಥ ಶ್ರೀಮಂತನೇನೂ ಅಲ್ಲ. ಆದರೆ ಶ್ರೀರಾಮಕೃಷ್ಣರು ಕೇವಲ ಹಣವನ್ನು ನೋಡುವವರಲ್ಲ. ಹಣದೊಂದಿಗೆ ಭಕ್ತಿ-ವಿಶ್ವಾಸ ಇರಬೇಕು. ಆದ್ದರಿಂದ ಗಿರೀಶ ಏನು ಕೊಟ್ಟರೆ ಅದೇ ಸಾಕು. ಶ್ರೀರಾಮಕೃಷ್ಣರು ತನ್ನಂಥವನನ್ನು ವಿಶ್ವಾಸಕ್ಕೆ ತೆಗೆದುಕೊಂಡು ಕೇಳುವ ಕೃಪೆ ಮಾಡಿದರಲ್ಲ ಎಂದು ಗಿರೀಶನಿಗೆ ಹೃದಯುದುಂಬಿಬಂತು. ಕೂಡಲೇ ಅವನು ಭಾವಭರಿತನಾಗಿ, "ಅಗತ್ಯ ಬಿದ್ದರೆ ನನ್ನ ಆಸ್ತಿ-ಮನೆಯನ್ನೇ ಮಾರಿಬಿಡುತ್ತೇನೆ" ಎಂದು ನುಡಿದ. ಆದರೆ ಅಂತಹ ಪರಿಸ್ಥಿತಿ ಒದಗಲಿಲ್ಲ, ಹೇಗೋ ನಿಭಾವಣೆಯಾಯಿತು. ಅಂದಿನಿಂದ ಆ ಯುವಕರು ಮಾತ್ರ ಆ ಮೂವರು ಗೃಹಸ್ಥಭಕ್ತರಿಂದ ಯಾವ ಧನ ಸಹಾಯವನ್ನೂ ಪಡೆಯಲಿಲ್ಲ. ಅಷ್ಟೇ ಅಲ್ಲ, ಅವರನ್ನು ಶ್ರೀರಾಮಕೃಷ್ಣರ ದರ್ಶನ ಮಾಡಲೂ ಕೆಲದಿನ ಬಿಡಲಿಲ್ಲ!

ಆದರೆ ಈ ವೈಮನಸ್ಯ ಹೆಚ್ಚು ದಿನ ಮುಂದುವರಿಯಲಿಲ್ಲ. ಶ್ರೀರಾಮಕೃಷ್ಣರು ಎರಡು ಕಡೆಯವರನ್ನೂ ಸಮಾಧಾನಪಡಿಸಿ ಹೊಂದಿಕೊಳ್ಳುವಂತೆ ಮಾಡಿದರು. ಏಕೆಂದರೆ, ಯಾವ ಮನುಷ್ಯನೂ ಪರಿಪೂರ್ಣನಲ್ಲ; ಪ್ರತಿಯೊಬ್ಬನಲ್ಲೂ ಒಂದಲ್ಲ ಒಂದು ಬಗೆಯ ದೋಷ ಇದ್ದೇ ಇರುತ್ತದೆ ಎಂದು ಅವರಿಗೆ ಚೆನ್ನಾಗಿ ಗೊತ್ತಿತ್ತು.

ತಮ್ಮ ಜೀವನದ ಅಂತ್ಯಕ್ಕೆ ಕೆಲವೇ ದಿನಗಳು ಉಳಿದಿರುವುದನ್ನು ಕಂಡು ಶ್ರೀರಾಮಕೃಷ್ಣರು ಇನ್ನಷ್ಟು ಉತ್ಸಾಹದಿಂದ ಶಿಷ್ಯರಿಗೆ ಮಾರ್ಗದರ್ಶನ ನೀಡತೊಡಗಿದ್ದರು; ಅವರ ವ್ಯಕ್ತಿತ್ವವನ್ನು ತಿದ್ದುತ್ತಿದ್ದರು. ಅದರಲ್ಲೂ ನರೇಂದ್ರನನ್ನು ಪ್ರತಿದಿನ ಸಂಜೆಯ ಹೊತ್ತು ತಮ್ಮ ಕೋಣೆಗೆ ಬರಮಾಡಿಕೊಂಡು, ಸುಮಾರು ಎರಡು-ಮೂರು ಗಂಟೆಗಳ ಕಾಲ ವೈಯಕ್ತಿಕವಾಗಿ ಬೋಧನೆಗಳನ್ನು ನೀಡುತ್ತಿದ್ದರು; ಹಲವಾರು ಬಗೆಯ ಆಧ್ಯಾತ್ಮಿಕ ಸಾಧನೆಗಳ ಮರ್ಮವನ್ನು ತಿಳಿಸಿಕೊಡುತ್ತಿದ್ದರು. ಜೊತೆಗೆ, ಅವನು ಇತರ ಶಿಷ್ಯರನ್ನು ಮುಂದೆ ಹೇಗೆ ನೋಡಿಕೊಳ್ಳಬೇಕು, ಸಾಧನೆಯಲ್ಲಿ ಮುಂದುವರಿದು ತ್ಯಾಗಮಯ ಜೀವನವನ್ನು ನಡೆಸುವಂತೆ ಅವರಿಗೆ ಹೇಗೆ ತರಬೇತಿ ಕೊಡಬೇಕು ಎಂಬುದನ್ನು ವಿವರಿಸುತ್ತಿದ್ದರು.

ಒಂದು ದಿನ ಅವರು, ನರೇಂದ್ರನನ್ನು ಬಿಟ್ಟು ಉಳಿದ ಯುವಶಿಷ್ಯರನ್ನೆಲ್ಲ ತ್ವರಿತದ ಕರೆ ಕೊಟ್ಟು ಬಳಿಗೆ ಕರೆಯಿಸಿಕೊಂಡು, "ಮುಂದೆ ನೀವು ಯಾವಾಗಲೂ ನರೇಂದ್ರನ ಕಡೆಗೆ ವಿಶೇಷ ಗಮನ ಕೊಡಬೇಕು. ಅವನ ಆರೋಗ್ಯಕ್ಕೆ, ಅನುಕೂಲತೆಗೆ ಏನೇನು ಮಾಡಲು ಸಾಧ್ಯವೋ ಅದೆಲ್ಲವನ್ನೂ ನೀವು ಮಾಡಿಕೊಡಬೇಕು" ಎಂದು ಸ್ಪಷ್ಟವಾಗಿ ಆದೇಶ ನೀಡಿದರು. ಬಳಿಕ ನರೇಂದ್ರನೊಬ್ಬನನ್ನೇ ಕರೆದು, "ನರೇನ್! ನಾನು ಈ ಹುಡುಗರನ್ನೆಲ್ಲ ನಿನ್ನ ವಶಕ್ಕೆ ಬಿಟ್ಟುಹೋಗುತ್ತಿದ್ದೇನೆ. ಅವರನ್ನೆಲ್ಲ ರಕ್ಷಿಸುವ ಜವಾಬ್ದಾರಿ ನಿನ್ನದು" ಎಂದು ನೆನಪಿಸಿದರು. 'ನರೇಂದ್ರನೇ ನಾಯಕ, ಉಳಿದವರೆಲ್ಲ ಅವನನ್ನು ಅನುಸರಿಸಬೇಕು' ಎಂಬ ಮಾತನ್ನು ಶ್ರೀರಾಮಕೃಷ್ಣರು ಹಿಂದೆ ಅನೇಕ ಸಲ ಹೇಳಿದ್ದುಂಟು. ಆದರೆ ಈ ಸಂದರ್ಭದಲ್ಲಿ ಅದನ್ನೇ ಮತ್ತೆ ಒತ್ತಿ ಹೇಳಿದ್ದಕ್ಕೆ ಒಂದು ವಿಶೇಷ ಕಾರಣವಿದೆ. ಏನೆಂದರೆ, ಮರಣಕಾಲದಲ್ಲಿ ಹೇಳಿದ ಮಾತುಗಳು ಮನಸ್ಸಿನಲ್ಲಿ ವಿಶೇಷವಾಗಿ ನಿಲ್ಲುತ್ತವೆ. ಅಲ್ಲದೆ, ಮನುಷ್ಯರು ಎಷ್ಟೇ ಒಳ್ಳೆಯವರಾದರೂ ಅವರನ್ನು ಒಂದುಗೂಡಿಸಿ ಕೆಲಸ ಮಾಡಿಸುವುದು ಸುಲಭವಲ್ಲ. ಅದರಲ್ಲೂ ದೀರ್ಘಕಾಲದವರೆಗೆ ಅವರನ್ನೆಲ್ಲ ಒಂದುಗೂಡಿಸಿ ಒಗ್ಗಟ್ಟಾಗಿಡುವುದು ಇನ್ನೂ ಕಷ್ಟದ ಕೆಲಸ. ಬುದ್ಧಿವಂತರಾದವರು ಒಗ್ಗಟ್ಟಾಗಿರುವುದು ಮತ್ತೂ ಕಷ್ಟ! ಅವರೆಲ್ಲ ಒಗ್ಗಟ್ಟಾಗಿರದಿದ್ದರೆ ಅವರ ಮೂಲಕ ಮಹತ್ಕಾರ್ಯಗಳನ್ನು ಸಾಧಿಸುವುದು ಅಸಂಭವನೀಯ. ಶ್ರೀರಾಮಕೃಷ್ಣರು ತಮ್ಮ ಅಸಾಮಾನ್ಯ ಜೀವನದ ಮೂಲಕ ಇಡೀ ಜಗತ್ತಿಗೇ ಮಹತ್ತರವಾದ ಸಂದೇಶಗಳನ್ನು ನೀಡಿ, ಜಗತ್ತಿನ ವಿಚಾರಧಾರೆಗೆ ಒಂದು ಹೊಸ ಚೈತನ್ಯವನ್ನು ಕೊಡುವುದಕ್ಕಾಗಿ ಬಂದಿದ್ದಾರೆ. ಈ ಕೆಲಸ ಅವರ ನಿರ್ಯಾಣದ ಬಳಿಕ ಈ ನವಯುವಕರ ಮೂಲಕವೇ ಆಗಬೇಕಾಗಿದೆ. ಆದ್ದರಿಂದಲೇ ಮರಣಶಯ್ಯೆಯಲ್ಲೂ ಈ ಯುವಕರನ್ನೆಲ್ಲ ಕರೆಸಿಕೊಂಡು, ಅವರೆಲ್ಲ ನರೇಂದ್ರನ ಮುಂದಾಳತ್ವದಲ್ಲಿ ಒಗ್ಗಟ್ಟಾಗಿರಬೇಕೆಂಬ ಮಾತನ್ನು ಮನದಟ್ಟು ಮಾಡಿಸುತ್ತಿದ್ದಾರೆ.

ತಮ್ಮ ಜೀವಿತಾವಧಿಯ ಈ ಕೊನೆಯ ದಿನಗಳಲ್ಲೇ ಒಮ್ಮೆ ಶ್ರೀರಾಮಕೃಷ್ಣರು ಇನ್ನೊಂದು ಬಹು ಮುಖ್ಯವಾದ ವಿಷಯವನ್ನು ವ್ಯಕ್ತಪಡಿಸಿದರು. ಗಂಟಲನೋವಿ

ನಿಂದಾಗಿ ಅವರಿಗೆ ಮಾತನಾಡಲೂ ಸಾಧ್ಯವಿರದ ಪರಿಸ್ಥಿತಿಯಲ್ಲೂ ಒಂದು ದಿನ ನರೇಂದ್ರನನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿಕೊಂಡು, ಒಂದು ತುಂಡು ಕಾಗದದಲ್ಲಿ ಒಂದು ಚಿತ್ರ ಬರೆದು, ಅದರ ಪಕ್ಕದಲ್ಲಿ 'ನರೇನ್ ಸ್ವದೇಶದಲ್ಲೂ ವಿದೇಶಗಳಲ್ಲೂ ಧರ್ಮಬೋಧನೆ ಮಾಡುತ್ತಾನೆ' ಎಂದು ಬರೆದು ತೋರಿಸಿದರು. [ಈ ಚಿತ್ರವನ್ನೂ ಅದರ ವಿವರಣೆಯನ್ನೂ ಗ್ರಂಥದ ಪ್ರಾರಂಭದಲ್ಲಿ ನೋಡಬಹುದು.] ಈ ಭವಿಷ್ಯವಾಣಿಯನ್ನು ಕೇಳಿ ಎಲ್ಲರಿಗೂ ಅದೆಷ್ಟು ಆಶ್ಚರ್ಯವಾಗಿರಬೇಕು! ಆದರೆ ನರೇಂದ್ರನಿಗೆ ತುಂಬ ಸಂಕೋಚವಾಯಿತು. "ನಾನದನ್ನು ಮಾಡಲಾರೆ" ಎಂದುಬಿಟ್ಟ. ಆದರೆ ಶ್ರೀರಾಮಕೃಷ್ಣರು ಬಿಟ್ಟಾರೆಯೆ! ಮುಗುಳ್ನಕ್ಕು, "ನೀನು ಮಾಡಲೇಬೇಕಾಗುತ್ತದೆ" ಎಂದರು. ಆಗ ಅವನು ಸುಮ್ಮನಾಗಬೇಕಾಯಿತು. ಈ ಮೂಲಕ ಶ್ರೀರಾಮಕೃಷ್ಣರು ಅವನನ್ನು ಅಧಿಕೃತ ಧರ್ಮಪ್ರಸಾರಕನನ್ನಾಗಿ ನೇಮಿಸುತ್ತಿದ್ದಾರೆ. "ಒಬ್ಬ ಮನುಷ್ಯ ಧರ್ಮಪ್ರಸಾರ ಮಾಡಬೇಕಾದರೆ ಭಗವಂತನಿಂದ ಅಧಿಕೃತನಾಗಿರಬೇಕು; ಭಗವಂತ 'ಇವನಿಂದ ಧರ್ಮಪ್ರಸಾರ ನಡೆಯಲಿ' ಎಂದು ಇಚ್ಛಿಸಿದರೆ ಮಾತ್ರ ಅವನು ಮಾಡುವ ಬೋಧನೆಯನ್ನು ಜನ ಕೇಳುತ್ತಾರೆ, ಕೇಳಿ ಪ್ರಭಾವಿತರಾಗುತ್ತಾರೆ, ಅನುಷ್ಠಾನ ಮಾಡುತ್ತಾರೆ. ಭಗವಂತನ ಕೃಪಾಶೀರ್ವಾದ ಇಲ್ಲದೆ ಹೋದರೂ ಮನುಷ್ಯ ಗಂಟಲು ಕಿತ್ತುಕೊಳ್ಳಬಹುದು; ಆದರೆ ಜನ ಅದಕ್ಕೆ ಮನ್ನಣೆ ಕೊಡುವುದಿಲ್ಲ" ಎಂದು ಅವರು ಪದೇಪದೇ ಹೇಳುತ್ತಿದ್ದರು. ಈಗ ಅವರು ನರೇಂದ್ರನನ್ನು ಧರ್ಮದೂತನನ್ನಾಗಿ ತಾವೇ ಸ್ವತಃ ನೇಮಕ ಮಾಡುತ್ತಿರುವುದರಿಂದ, ಅದಕ್ಕೆ ಭಗವಂತನ ಸಮ್ಮತಿ-ಅನುಗ್ರಹ ಇದ್ದೇ ಇದೆಯೆಂದೇ ತಾತ್ಪರ್ಯ. ಇದಲ್ಲದೆ, ಹಿಂದೆಯೋ ಅವರೊಮ್ಮೆ ನರೇಂದ್ರನಿಗೆ, "ನನ್ನ ಸಿದ್ಧಿಗಳೆಲ್ಲ ಮುಂದೆ ಸಕಾಲದಲ್ಲಿ ನಿನ್ನ ಮೂಲಕ ಪ್ರಕಟಗೊಳ್ಳುತ್ತವೆ" ಎಂದು ಹೇಳಿದ್ದರು. ಮುಂದೆ ಆತ ಸ್ವಾಮಿ ವಿವೇಕಾನಂದರಾಗಿ ಧರ್ಮಪ್ರಸಾರ ಕಾರ್ಯವನ್ನು ಪ್ರಾರಂಭಿಸಿದಾಗ ಅವರ ಮೂಲಕ ಅಪಾರ ಆಧ್ಯಾತ್ಮಿಕ ಶಕ್ತಿಯೂ ಸಿದ್ಧಿಗಳೂ ನಾನಾ ವಿಧದಲ್ಲಿ ಪ್ರಕಟಗೊಳ್ಳಲಿರುವುದನ್ನು ನಾವು ಕಾಣಲಿದ್ದೇವೆ.

ಶ್ರೀರಾಮಕೃಷ್ಣರ ಮಹಾಸಮಾಧಿಗೆ ಮೂರ್ನಾಲ್ಕು ದಿನಗಳಿರುವಾಗ ಅತ್ಯಂತ ಮಹತ್ತರವಾದ ಒಂದು ಘಟನೆ ನಡೆಯಿತು. ಅವರು ನರೇಂದ್ರನನ್ನು ಕರೆದು ಎದುರಿಗೆ ಕುಳ್ಳಿರಿಸಿಕೊಂಡರು. ಮಾತನ್ನೇನೂ ಆಡಲಿಲ್ಲ; ಆದರೆ ಅವನನ್ನೇ ನೆಟ್ಟನೋಟದಿಂದ ದಿಟ್ಟಿಸಲಾರಂಭಿಸಿದರು. ನೋಡನೋಡುತ್ತ ಹಾಗೇ ಗಾಢಸಮಾಧಿಸ್ಥರಾಗಿಬಿಟ್ಟರು. ಆಗ ಅವನಿಗೆ ವಿದ್ಯುತ್ ಪ್ರವಾಹದಂತೆ ಏನೋ ಒಂದು ಸೂಕ್ಷ್ಮಶಕ್ತಿ ತನ್ನೊಳಗೆ ಪ್ರವೇಶ ಮಾಡುತ್ತಿರುವಂತೆ ಅನುಭವವಾಯಿತು; ಬಾಹ್ಯಪ್ರಜ್ಞೆ ತಪ್ಪಿಹೋಯಿತು. ಬಳಿಕ ಮೈ ತಿಳಿದಾಗ ಅವನು ನೋಡುತ್ತಾನೆ, ಶ್ರೀರಾಮಕೃಷ್ಣರು ಕಣ್ಣೀರ್ಗರೆಯುತ್ತಿದ್ದಾರೆ! ನರೇಂದ್ರ ಆಶ್ಚರ್ಯಪಡುತ್ತ ಕಣ್ಣೀರಿಗೆ ಕಾರಣವೇನೆಂದು ಕೇಳಿದ. ಶ್ರೀರಾಮಕೃಷ್ಣರೆನ್ನುತ್ತಾರೆ: "ಓ ನರೇನ್, ಇಂದು ನಾನು ನಿನಗೆ ನನ್ನ ಸರ್ವಸ್ವವನ್ನೂ ಕೊಟ್ಟುಬಿಟ್ಟೆ. ಈಗ ನಾನು ಕೇವಲ ಫಕೀರನಾಗಿಬಿಟ್ಟೆ, ಬರಿಗೈ ಭಿಕಾರಿಯಾಗಿಬಿಟ್ಟೆ! ಇರಲಿ, ನಾನೀಗ ನಿನ್ನೊಳಗೆ ಹರಿಯಿಸಿದ ಶಕ್ತಿಯಿಂದ ಮುಂದೆ ನಿನ್ನ ಮೂಲಕ ದೊಡ್ಡದೊಡ್ಡ ಕಾರ್ಯಗಳೆಲ್ಲ ನಡೆಯುತ್ತವೆ. ಅವೆಲ್ಲ ಮುಗಿದಮೇಲೆಯೇ ನೀನು ನಿನ್ನ ಸ್ವಸ್ಥಳಕ್ಕೆ ಹಿಂದಿರುಗುವುದು."

ಈ ಮಾತುಗಳ ಮರ್ಮವನ್ನು ಪೂರ್ಣವಾಗಿ ಗ್ರಹಿಸಲಾರದೆ ನರೇಂದ್ರ ಆಶ್ಚರ್ಯಚಕಿತನಾದ.

೧೫ನೇ ಆಗಸ್ಟ್ ೧೮೮೬; ಶ್ರೀರಾಮಕೃಷ್ಣರು ರುಗ್ಣಶಯ್ಯೆಯಲ್ಲಿ ಮಲಗಿದ್ದಾರೆ. ಅವರ ಶರೀರ ಸಂಪೂರ್ಣವಾಗಿ ಜರ್ಝರಿತವಾಗಿಬಿಟ್ಟಿದೆ. ಅಲುಗಾಡಲೂ ಶಕ್ತಿಯಿಲ್ಲ ದಂತಾಗಿದೆ. ಶಿಷ್ಯರೂ ಭಕ್ತರೂ ಸುತ್ತ ಮೌನವಾಗಿ ನಿಂತಿದ್ದಾರೆ. ನರೇಂದ್ರನ ಮನಸ್ಸಿನಲ್ಲಿ ಮಾತ್ರ ಮಂಥನ ನಡೆಯುತ್ತಿದೆ; ಸಂದೇಹ ಸುಳಿದಾಡುತ್ತಿದೆ. 'ನಮ್ಮೆಲ್ಲರ ಕಣ್ಣೆದುರಿಗೆ ಒಬ್ಬ ಸಾಮಾನ್ಯ ಮರ್ತ್ಯನಂತೆ ಮೃತ್ಯುಶಯ್ಯೆಯಲ್ಲಿ ಮಲಗಿರುವ ಈ ಶ್ರೀರಾಮಕೃಷ್ಣರು ಯಾರು ? ಇವರೇನೋ ಹಲವಾರು ಬಾರಿ ಹೇಳಿದ್ದಾರೆ, ತಾವು ಭಗವಂತನ ಅವತಾರವೆಂದು. ಇನ್ನೂ ಎಷ್ಟೋ ಜನ ಹಾಗೆಯೇ ಹೇಳಿದ್ದಾರೆ. ನನಗೆ ಮಾತ್ರ ಅದಿನ್ನೂ ಒಪ್ಪಿಗೆಯಾಗಿಲ್ಲ. ಆದರೆ ಈ ಪ್ರಾಣೋತ್ಕ್ರಮಣದ ಸಮಯದಲ್ಲಿ, ಶರೀರ ಸಂಪೂರ್ಣ ದುರ್ಬಲಗೊಂಡು ಯಾತನೆಯನ್ನು ಅನುಭವಿಸುತ್ತಿರುವ ಇಂತಹ ಸಮಯದಲ್ಲಿ ಇವರು ಹೇಳಲಿ, "ನಾನು ಭಗವಂತನ ಅವತಾರ" ಅಂತ. ಆಗ ನಾನದನ್ನು ನಂಬಿಯೇನು.' ಅವನ ಮನಸ್ಸಿನಲ್ಲಿ ಈ ಆಲೋಚನೆ ಸುಳಿದದ್ದೇ ತಡ, ಶ್ರೀರಾಮಕೃಷ್ಣರು ತಮ್ಮ ಸರ್ವಶಕ್ತಿಯನ್ನೂ ಒಗ್ಗೂಡಿಸಿಕೊಂಡು ಅವನೆಡೆಗೆ ತಿರುಗಿ ಉದ್ಗರಿಸಿದರು: "ಓ ನನ್ನ ನರೇನ್, ನಿನಗಿನ್ನೂ ನಂಬಿಕೆಯಾಗಲಿಲ್ಲವೆ ? ಹಿಂದೆ ಯಾರು ರಾಮನಾಗಿದ್ದನೋ ಯಾರು ಕೃಷ್ಣನಾಗಿದ್ದನೋ ಅವನೇ ಈಗ ಈ ಶರೀರದಲ್ಲಿ ರಾಮಕೃಷ್ಣನಾಗಿ ಅವತರಿಸಿದ್ದಾನೆ. ಆದರೆ ಇದು ಕೇವಲ ನಿನ್ನ ವೇದಾಂತದ ದೃಷ್ಟಿಯಿಂದಲ್ಲ, ನಿಜವಾಗಿಯೂ."

ನರೇಂದ್ರ ಸಿಡಿಲು ಬಡಿದವನಂತೆ ಬೆಚ್ಚಿಬಿದ್ದ. ಶ್ರೀರಾಮಕೃಷ್ಣರ ಈ ಹಠಾತ್ ಉದ್ಗಾರವನ್ನು ಕೇಳಿ ಅಲ್ಲಿದ್ದ ಇನ್ನಿತರರೂ ಆಶ್ಚರ್ಯಗೊಂಡರು. ಆದರೆ ಅದು ನರೇಂದ್ರನ ಮನದಾಳದಲ್ಲೆದ್ದಿದ್ದ ಪ್ರಶ್ನೆಗೆ ಉತ್ತರ ಎನ್ನುವುದನ್ನು ಅವರು ಹೇಗೆ ಊಹಿಸಿಯಾರು ! ನರೇಂದ್ರನಿಗೆ ಅತ್ಯಾಶ್ಚರ್ಯ, ಜೊತೆಗೆ ಅಷ್ಟೇ ನಾಚಿಕೆ. ಇಲ್ಲಿಯವರೆಗೂ ತಾನು ಶ್ರೀರಾಮಕೃಷ್ಣರನ್ನು ಪರೀಕ್ಷಿಸಿದ ಪರಿಗಳೆಷ್ಟು ! ಅವರು ತನಗೆ ಮಾಡಿಸಿಕೊಟ್ಟ ಅನುಭವಗಳೆಷ್ಟು ! ದರ್ಶನಗಳೆಷ್ಟು ! ಇಷ್ಟೆಲ್ಲ ಆದಮೇಲೂ, ಈ ಘಳಿಗೆಯಲ್ಲಿ ತಾನು ಅವರ ದೈವತ್ವವನ್ನು ಸಂದೇಹಿಸಿದೆನಲ್ಲ—ಎಂಬ ಪರಿತಾಪ. ಆದರೆ ಅವರು ತನ್ನ ಸಂದೇಹಕ್ಕೆ, ದ್ವಂದ್ವಕ್ಕೆಡೆಯಿಲ್ಲದಂತಹ ಉತ್ತರ ನೀಡಿದ್ದರಿಂದ ಅಷ್ಟೇ ಸಮಾಧಾನ ಮತ್ತು ಸಂತೋಷ ಕೂಡ.

ಒಂದು ದೃಷ್ಟಿಯಲ್ಲಿ ನರೇಂದ್ರನ ಮನಸ್ಸಿನಲ್ಲಿ ಅಂತಹ ಸಂಶಯವೆದ್ದುದು ನಿರರ್ಥಕವೇನಲ್ಲ. ಅದರಿಂದಾಗಿಯೇ ಈ ಸಂದರ್ಭದಲ್ಲಿ ಶ್ರೀರಾಮಕೃಷ್ಣರು ತಮ್ಮ ಅವತಾರತ್ವವನ್ನು ಘಂಟಾಘೋಷವಾಗಿ ಬಹಿರಂಗಪಡಿಸುವಂತಾಯಿತಲ್ಲವೆ ? ವೀರಾಧಿವೀರನಾದ ಅರ್ಜುನ ಯುದ್ಧಭೂಮಿಯಲ್ಲಿ ಸಂದೇಹದಿಂದ ಗಲಿಬಿಲಿಗೊಳಗಾಗಿರದಿದ್ದರೆ ಶ್ರೀಕೃಷ್ಣನು ಗೀತಾಮೃತವನ್ನು ವರ್ಷಿಸಲು ಅವಕಾಶವೆಲ್ಲಿರುತ್ತಿತ್ತು !

ಅಲ್ಲದೆ, ಇಲ್ಲಿ ಶ್ರೀರಾಮಕೃಷ್ಣರಾಡುವ ಮಾತು ತುಂಬ ಗಹನವಾದ ಅರ್ಥದಿಂದ ಕೂಡಿದೆ. ಅವರು 'ನಾನೊಬ್ಬ ಅವತಾರಪುರುಷ' ಎಂದಷ್ಟೇ ಹೇಳಲಿಲ್ಲ. ಅಥವಾ, 'ಹೇಗೆ ರಾಮನೂ ಕೃಷ್ಣನೂ ಅವತಾರಪುರುಷರೋ ಹಾಗೆಯೇ ನಾನೂ ಒಬ್ಬ ಅವತಾರ ಪುರುಷ' ಎಂದೂ ಹೇಳಲಿಲ್ಲ. ಬದಲಾಗಿ, 'ಹಿಂದೆ ಯಾರು ರಾಮನಾಗಿದ್ದನೋ ಯಾರು ಕೃಷ್ಣನಾಗಿದ್ದನೋ ಅವನೇ ಈಗ ರಾಮಕೃಷ್ಣನಾಗಿ ಅವತರಿಸಿದ್ದಾನೆ' ಎಂದು ಸಂಶಯಕ್ಕೆಡೆಯಿಲ್ಲದಂತೆ ಹೇಳುತ್ತಿದ್ದಾರೆ. ಜೊತೆಗೆ, ಮತ್ತೆ ಸ್ಪಷ್ಟಪಡಿಸುತ್ತಿದ್ದಾರೆ,

'ಇದು ಕೇವಲ ನಿನ್ನ ವೇದಾಂತದ ದೃಷ್ಟಿಯಿಂದಲ್ಲ' ಎಂದು. ಇದೂ ಕೂಡ ಅಷ್ಟೇ ಅರ್ಥಪೂರ್ಣವಾದದ್ದು. ಹೇಗೆಂದರೆ, ಅದ್ವೈತವೇದಾಂತದ ಪ್ರಕಾರ ಎಲ್ಲ ಜೀವಿಗಳೂ ಸತ್-ಚಿತ್-ಆನಂದಸ್ವರೂಪನಾದ ಪರಬ್ರಹ್ಮನ ಆವಿರ್ಭಾವಗಳೇ. ಎಂದರೆ, ಮನುಷ್ಯ ರೆಲ್ಲರೂ ಭಗವತ್ಸ್ವರೂಪಿಗಳೇ, ಅವತಾರರೇ. ಆದರೆ ತಾವು ಅವತಾರವೆಂಬುದು ಈ ಅರ್ಥದಲ್ಲಲ್ಲ ಎಂಬುದನ್ನು ಶ್ರೀರಾಮಕೃಷ್ಣರು ತಾವಾಗಿಯೇ ಸ್ಪಷ್ಟಪಡಿಸುತ್ತಿದ್ದಾರೆ.

ಇನ್ನೊಂದು ಗಮನಾರ್ಹ ಅಂಶವಿದೆ ಇಲ್ಲಿ. ಶ್ರೀರಾಮಕೃಷ್ಣರು ಸಾಮಾನ್ಯ ಭಾವ ದಲ್ಲಿದ್ದಾಗ, ಇತರರು ತಮ್ಮನ್ನು 'ಗುರು' 'ಭಗವಾನ್' ಇತ್ಯಾದಿ ವಿಶೇಷಣಗಳಿಂದ ಸಂಬೋಧಿಸುವುದನ್ನು ಸಹಿಸುತ್ತಿರಲಿಲ್ಲ. ತಾವೊಬ್ಬ ಅತಿ ಸಾಮಾನ್ಯ ವ್ಯಕ್ತಿಯೆಂಬಂತೆ ಅವರ ಪ್ರತಿಯೊಂದು ನಡೆನುಡಿಯೂ ಕೂಡ. ಆದ್ದರಿಂದ ಉನ್ನತ ದೈವೀಭಾವದಲ್ಲಿರು ವಾಗಲಲ್ಲದೆ ಬೇರೆ ಸಮಯದಲ್ಲಿ ಅವರ ಬಾಯಿಂದ ಇಂತಹ ಅದ್ಭುತ ನುಡಿಗಳು ಹೊರಬರಲು ಸಾಧ್ಯವಿರಲಿಲ್ಲ. ಈಗಿನ ಅವರ ಸ್ಥಿತಿಯೋ, ಕರುಣಾಜನಕ! ಪ್ರಾಣೋ ತ್ಕ್ರಮಣ ಕಾಲ ಸನ್ನಿಹಿತವಾಗಿದೆ. ಶರೀರವೆಲ್ಲ ಸೊರಗಿಹೋಗಿದೆ. ಗಂಟಲಲ್ಲಿ ಅಪಾರ ವೇದನೆ. ಇನ್ನೆರಡೇ ದಿನಗಳಲ್ಲಿ ಅವರ ಶರೀರ ಒಬ್ಬ ಸಾಮಾನ್ಯ ಮರ್ತ್ಯನ ಶರೀರದಂತೆ ಭಸ್ಮವಾಗಲಿದೆ. ಇಂತಹ ಸ್ಥಿತಿಯಲ್ಲಿ ಅವರು ತಮ್ಮ ಅವತಾರತ್ವವನ್ನು ಘೋಷಿಸು ತ್ತಿದ್ದಾರೆ! ಮತ್ತೂ ಕುತೂಹಲದ ಸಂಗತಿಯೆಂದರೆ, ಇತರರ ದೃಷ್ಟಿಗೆ ಅತ್ಯಂತ ಅಸಹಾಯಕ ಸ್ಥಿತಿಯಲ್ಲಿರುವಂತೆ ಕಾಣುತ್ತಿದ್ದ ಅವರು ಆ ಕ್ಷಣದಲ್ಲೂ ನರೇಂದ್ರನ ಮನದಲ್ಲಿ ಹಾದುಹೋದ ಭಾವನೆಯನ್ನು ಗ್ರಹಿಸಿ, ಒಡನೆಯೇ ಸಂದೇಹ ನಿವಾರಣೆ ಮಾಡಲು ಸಮರ್ಥರಾಗಿದ್ದುದು! ಶ್ರೀರಾಮಕೃಷ್ಣರ ನಿಜಸ್ವರೂಪವನ್ನು ಅರಿತು ಕೊಳ್ಳಲು ಈ ಅಂಶಗಳು ನಮಗೆ ನೆರವಾಗುತ್ತವೆ.*

ಶ್ರೀರಾಮಕೃಷ್ಣರೀಗ ಶರೀರತ್ಯಾಗ ಮಾಡಲು ಸಿದ್ಧರಾಗಿದ್ದಾರೆ. ಅದಕ್ಕೆ ಸೂಕ್ತವಾದ ದಿನವನ್ನು ಅವರು ಮೊದಲೇ ಗೊತ್ತುಮಾಡಿಟ್ಟುಕೊಂಡಿದ್ದರು. ಆಗಸ್ಟ್ ತಿಂಗಳ ಆರಂಭದಲ್ಲೇ ಒಂದು ದಿನ ಶಿಷ್ಯನೊಬ್ಬನನ್ನು ಕರೆದು ಬಂಗಾಳಿ ಪಂಚಾಗವನ್ನು ಓದಲು ಹೇಳಿದ್ದರು. ಶಿಷ್ಯ ಪ್ರತಿದಿನದ ತಿಥಿ, ನಕ್ಷತ್ರ, ವಾರಗಳನ್ನು ಓದುತ್ತ ಬಂದ. ಶ್ರಾವಣ ಮಾಸದ ಕೊನೆಯ ದಿನದ, ಎಂದರೆ ಆಗಸ್ಟ್ ೧೫ನೇ ತಾರೀಖಿನ, ವಿವರಗಳನ್ನು ಹೇಳಿ ದಾಗ ಅವನಿಗೆ ಓದುವುದನ್ನು ನಿಲ್ಲಿಸಲು ಹೇಳಿದ್ದರು. ಈಗ ಆ ದಿನ ಸನ್ನಿಹಿತವಾಗಿದೆ.

ಸಂಜೆಯ ಹೊತ್ತಿಗೆ ಶ್ರೀರಾಮಕೃಷ್ಣರು ತಮಗೆ ಉಸಿರಾಡಲು ಕಷ್ಟವಾಗುತ್ತಿದೆ ಎಂದರು; ಬಳಿಕ ತಕ್ಷಣವೇ ಸಮಾಧಿಸ್ಥರಾಗಿಬಿಟ್ಟರು. ಆದರೆ ಈ ಸಲ ಅವರ ಸಮಾಧಿ ಎಂದಿನಂತಿರಲಿಲ್ಲ. ಇದನ್ನು ಕಂಡು ಎಲ್ಲರೂ ಆತಂಕಗೊಂಡರು. ಅವರನ್ನು ಎಚ್ಚರ ಗೊಳಿಸಲು ಎಲ್ಲರೂ 'ಹರಿ ಓಂ ತತ್ ಸತ್' ಮಂತ್ರವನ್ನು ಉಚ್ಚರಿಸುವಂತೆ ನರೇಂದ್ರ ಹೇಳಿದ. ಬಹಳ ಹೊತ್ತು ಎಲ್ಲರೂ ಅದನ್ನು ಘೋಷಿಸಿದರು. ಮಧ್ಯರಾತ್ರಿಯ ವೇಳೆಗೆ ಶ್ರೀರಾಮಕೃಷ್ಣರಿಗೆ ಬಾಹ್ಯಪ್ರಜ್ಞೆ ಮರಳಿತು. 'ಹಸಿವು' ಎಂದರು. ಸ್ವಲ್ಪ ರವೆಗಂಜಿಯನ್ನು ಕುಡಿಸಲಾಯಿತು. ಆಗ ಸ್ವಲ್ಪ ಸುಧಾರಿಸಿದಂತೆ ಕಂಡುಬಂದರು. ಅವರನ್ನು ಐದಾರು ದಿಂಬುಗಳ ಮೇಲೆ ಒರಗಿಸಿ ಕುಳ್ಳಿರಿಸಲಾಯಿತು. ಆ ಸ್ಥಿತಿಯಲ್ಲೇ ಅವರು ಪಿಸುದನಿ ಯಲ್ಲಿ ತಮ್ಮ ಕೊನೆಯ ಕ್ಷಣದವರೆಗೂ ಸೂಚನೆ-ಸಂದೇಶಗಳನ್ನು ನೀಡಿದರು.

*ನೋಡಿ: ಅನುಬಂಧ ೫.

ಹಲವಾರು ನಿಮಿಷಗಳವರೆಗೆ ಇದು ನಡೆಯಿತು. ಬಳಿಕ 'ಕಾಳಿ ! ಕಾಳಿ ! ಕಾಳಿ !' ಎಂದು ಮೂರು ಸಲ ಉಚ್ಚರಿಸುತ್ತ ದಿಂಬಿನ ಮೇಲೆ ನಿಧಾನವಾಗಿ ಒರಗಿಕೊಂಡರು. ಆಗ ಸಮಯ ರಾತ್ರಿ ಒಂದು ಗಂಟೆ ಎರಡು ನಿಮಿಷ. ಇದ್ದಕ್ಕಿದ್ದಂತೆ ಅವರ ಶರೀರದಲ್ಲಿ ಒಂದು ಕಂಪನವುಂಟಾಯಿತು. ಕಣ್ಣುಗಳೆರಡೂ ನಾಸಿಕಾಗ್ರದಲ್ಲಿ ನೆಟ್ಟುವು. ರೋಮಗಳೆಲ್ಲ ನಿಮಿರಿ ನಿಂತುವು. ಮುಖದಲ್ಲಿ ದಿವ್ಯವಾದ ಮುಗುಳ್ನಗೆ ಬೆಳಗಿತು. ಅವರು ಮತ್ತೊಮ್ಮೆ ಗಾಢ ಸಮಾಧಿಗೇರಿದರು. ಅದು ಹಿಂದಿರುಗಿ ಬರಲು ಸಾಧ್ಯವಿಲ್ಲದಂತಹ ಮಹಾಸಮಾಧಿಯಾಗಿತ್ತು.

ಆದರೆ, ಅವರು ಎಂದಿನಂತೆಯೇ ಸಮಾಧಿಯಿಂದ ಇಳಿದು ಬರಬಹುದು ಎಂಬ ಆಶಾಪೂರ್ಣ ನಿರೀಕ್ಷೆ ಭಕ್ತರದು. ನರೇಂದ್ರ ಉಚ್ಚ ಕಂಠದಿಂದ 'ಹರಿ ಓಂ ತತ್ ಸತ್' ಎಂದು ಉಚ್ಚರಿಸಲಾರಂಭಿಸಿದ. ಇತರರೂ ಅವನ ಜೊತೆ ಸೇರಿಕೊಂಡರು. ಮಂತ್ರೋಚ್ಚಾರಣೆ ರಾತ್ರಿಯುದ್ದಕ್ಕೂ ನಡೆಯಿತು. ಆದರೆ ಶ್ರೀರಾಮಕೃಷ್ಣರಲ್ಲಿ ಮಾತ್ರ ಬಾಹ್ಯಪ್ರಜ್ಞೆ ಮರಳುವ ಸೂಚನೆಗಳು ಕಾಣದೆ ಭಕ್ತರ ಕಳವಳ ಹೆಚ್ಚಿತು. ಶ್ರೀರಾಮಕೃಷ್ಣರ ಶರೀರದಲ್ಲಿ ಬಿಸಿಯೇರುವಂತೆ ಮಾಡಲು ಅವರ ಬೆನ್ನಿಗೆ ಹಸುವಿನ ತುಪ್ಪವನ್ನು ತಿಕ್ಕಿದರು. ಯಾರೇನು ಮಾಡಿದರೂ ಪ್ರಯೋಜನವಾಗಲಿಲ್ಲ. ಬೆಳಗಾದ ಮೇಲೆ, ಸುದ್ದಿ ತಿಳಿದು ಬಂದ ಡಾ. ಸರ್ಕಾರ ಶರೀರವನ್ನು ಪರೀಕ್ಷೆ ಮಾಡಿ ನೋಡಿ, "ಶ್ರೀರಾಮಕೃಷ್ಣರು ಶರೀರವನ್ನು ಬಿಟ್ಟುಬಿಟ್ಟಿದ್ದಾರೆ" ಎಂದು ಪ್ರಕಟಿಸಿದ. ಮಹಾನ್ ಆಧ್ಯಾತ್ಮಿಕ ಜೀವನವೊಂದರ ಮೇಲೆ ಅಂಕದ ಪರದೆ ಇಳಿಬಿದ್ದಿತ್ತು. ಅನಂತವಾದ ಅಮರ ಆತ್ಮ ಇಲ್ಲಿಯವರೆಗೆ ಯಾವ ನಾಮ-ರೂಪಗಳ ಕೋಶದೊಳಗೆ ನಿಬದ್ಧವಾಗಿತ್ತೋ, ಅದೀಗ ಸಕಲ ಬಂಧನಗಳನ್ನೂ ಭೇದಿಸಿಕೊಂಡು ಅನಂತಾತ್ಮದಲ್ಲಿ ಲಯವಾಗಿಬಿಟ್ಟಿತ್ತು. ದೇಶಕಾಲಗಳೆಂಬ ಕಟ್ಟುಗಳು ಕತ್ತರಿಸಿ ಹೋದುವು. ಇಲ್ಲಿಯವರೆಗೆ ಬಂಗಾಳ ರಾಜ್ಯಕ್ಕೆ ಮಾತ್ರ ಸೇರಿದ್ದ ಅವರು ಈಗ ಎಲ್ಲೆಡೆಗೂ ಸೇರಿದವರಾದರು. ಇಲ್ಲಿಯವರೆಗೆ ಅವರು ಕೇವಲ ಹತ್ತೊಂಬತ್ತನೆಯ ಶತಮಾನಕ್ಕೆ ಸೇರಿದವರಾಗಿದ್ದರು; ಈಗ ಎಲ್ಲ ಶತಮಾನಗಳಿಗೂ ಸೇರಿದವರಾಗಿಬಿಟ್ಟರು. ಅವರು ಶರೀರದಲ್ಲಿರುವವರೆಗೂ ಕಲ್ಕತ್ತದ ಕೆಲವರಿಗೆ ಮಾತ್ರ ಮಾರ್ಗದರ್ಶಕರಾಗಿದ್ದರು; ಈಗ ಸರ್ವರಿಗೂ ಬೆಳಕ ತೋರುವ ವಿಶ್ವಜ್ಯೋತಿಯಾದರು. ಆ ಭಕ್ತ-ಶಿಷ್ಯರಿಗೆ ಇವೆಲ್ಲ ಗೊತ್ತಿಲ್ಲವೆಂದಲ್ಲ. ಆದರೆ ಉಕ್ಕಿಬರುವ ದುಃಖವನ್ನು ಹತ್ತಿಕ್ಕಲಾದೀತೆ ? ಇಲ್ಲಿಯವರೆಗೆ ಅವರನ್ನೆಲ್ಲ ಬಂಧಿಸಿಟ್ಟಿದ್ದ ಆ ಮನಮೋಹಕ ಮಂದಹಾಸ ಮರೆಯಾಗಿದೆ; ಅವರಿಗೆಲ್ಲ ಸ್ಫೂರ್ತಿಯ ಸೆಲೆಯಾಗಿದ್ದ ಆ ದಿವ್ಯ ಮುಖಮಂಡಲ ಇನ್ನಿಲ್ಲ. ಅವರೊಂದಿಗೆ ಅತ್ಯುನ್ನತ ಜ್ಞಾನ ಭಕ್ತಿ ಪ್ರೇಮಗಳ ಮಧುರನುಡಿಗಳನ್ನಾಡುತ್ತಿದ್ದ ಆ ತುಟಿಗಳಿಗೆ ಮೃತ್ಯುವಿನ ಬೀಗಮುದ್ರೆ ಬಿದ್ದಿದೆ.

ಶ್ರೀಶಾರದಾದೇವಿಯವರನ್ನು ಮೆಲ್ಲನೆ ಮಹಡಿಯ ಮೇಲಕ್ಕೆ ಕರೆತರಲಾಯಿತು. ಪತಿಯ ನಿಶ್ಚೇಷ್ಟಿತ ಶರೀರವನ್ನು ಕಂಡು ಅವರು, "ಅಮ್ಮ ಕಾಳಿ ! ಎಲ್ಲಿ ಹೋದೆ ನೀನು ?" ಎಂದು ಎದೆಬಿರಿದು ಕೂಗಿದರು. ಈ ಹೃದಯವಿದ್ರಾವಕ ದೃಶ್ಯ ಅಲ್ಲಿದ್ದವರೆಲ್ಲರ ಅಂತಃಕರಣವನ್ನು ಕಲುಕಿತು. ಆದರೆ ಶಾರದಾದೇವಿಯವರು ಬೇಗನೆ ತಮ್ಮನ್ನು ನಿಯಂತ್ರಿಸಿಕೊಂಡು ಶಾಂತಚಿತ್ತರಾದರು. ಸಂಜೆಯ ಹೊತ್ತಿಗೆ ಅವರು ಹಿಂದೂ ಸಂಪ್ರದಾಯದಂತೆ ತಮ್ಮ ಕುಂಕುಮವನ್ನು ಅಳಿಸಿಕೊಂಡು, ಸೀರೆಯ ಕೆಂಪು ಅಂಚನ್ನು ಹರಿದು, ಬಳೆಗಳನ್ನೂ ತೆಗೆಯಲು ಹೊರಟರು. ಆಗ ಶ್ರೀರಾಮಕೃಷ್ಣರು ಅವರೆದುರಿಗೆ

ಪ್ರಕಟರಾಗಿ "ನಾನೆಲ್ಲಿಗೆ ಹೋದೆ ಅಂತ ತಿಳಿದುಕೊಂಡೆ? ನಾನಿಲ್ಲೇ ಇದ್ದೇನೆ. ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಬಂದಿದ್ದೇನೆ ಅಷ್ಟೇ" ಎಂದರು. ಈ ಸ್ಪಷ್ಟ ದರ್ಶನಾನುಭವದಿಂದ ಶಾರದಾದೇವಿಯವರು ಆಶ್ಚರ್ಯಗೊಂಡರು. ಅಂದಿಗೆ ಅವರು ಬಳೆಗಳನ್ನು ತೆಗೆಯಲಿಲ್ಲ. ಆದರೆ ತಮಗಾದ ಈ ಅನುಭವ ತಮ್ಮ ಮನಸ್ಸಿನ ಭ್ರಮೆಯಿರಬಹುದು ಎಂದು ಭಾವಿಸಿ ಮತ್ತೆ ಎರಡು ಸಲ ಅವುಗಳನ್ನು ತೆಗೆದಿಡುವ ಪ್ರಯತ್ನ ಮಾಡಿದರು. ಆದರೆ ಎರಡು ಸಲವೂ ಮತ್ತೆ ಶ್ರೀರಾಮಕೃಷ್ಣರು ಪ್ರಕಟರಾಗಿ ಅವರನ್ನು ತಡೆದರು. ಕಡೆಗೆ ಶಾರದಾದೇವಿಯವರು ತಮ್ಮ ಆ ಪ್ರಯತ್ನವನ್ನು ಕೈಬಿಡಬೇಕಾಯಿತು. ಅನಂತರ ಅವರು ತಮ್ಮ ಉಳಿದ ಜೀವಿತಾವಧಿಯಿಡೀ ಬಳೆಗಳನ್ನು ಧರಿಸುತ್ತಿದ್ದರು ಮತ್ತು ಅಂಚಿನ ಸೀರೆಯನ್ನೇ ಉಡುತ್ತಿದ್ದರು.

ಡಾ. ಸರ್ಕಾರನು ಬಂದು ತನ್ನ ನಿರ್ಧಾರವನ್ನು ಹೇಳುವ ಮೊದಲೇ ಶ್ರೀರಾಮಕೃಷ್ಣರ ನಿರ್ಯಾಣದ ವಾರ್ತೆ ಎಲ್ಲೆಡೆ ಹರಡಿತ್ತು. ಭಕ್ತರೆಲ್ಲರೂ ಕಾಶೀಪುರದ ಉದ್ಯಾನ ಗೃಹಕ್ಕೆ ಬಂದು ಸೇರಿದರು. ಶ್ರೀರಾಮಕೃಷ್ಣರ ಶರೀರವನ್ನು ಹೂಹಾರಗಳಿಂದ ಅಲಂಕರಿಸಿದರು, ಭಜನೆ ಮಾಡಿದರು. ಸಂಜೆ ಸುಮಾರು ಐದು ಗಂಟೆಯ ಹೊತ್ತಿಗೆ ಮೆರವಣಿಗೆ ಹೊರಟಿತು. ಸ್ಮಶಾನಘಟ್ಟದಲ್ಲಿ ಶ್ರೀರಾಮಕೃಷ್ಣರ ಪವಿತ್ರ ಶರೀರಕ್ಕೆ ಗಂಗಾಜಲದಿಂದ ಸ್ನಾನ ಮಾಡಿಸಿ, ಕಾಷಾಯವಸ್ತ್ರವನ್ನು ತೊಡಿಸಲಾಯಿತು. ಮತ್ತೊಮ್ಮೆ ಹೂಹಾರಗಳಿಂದ ಅಲಂಕರಿಸಿ ಪೂಜಿಸಲಾಯಿತು. ಅನಂತರ ಶ್ರೀರಾಮಕೃಷ್ಣರ ಆ ಸುಕೋಮಲ ಶರೀರವನ್ನು ನಿಧಾನವಾಗಿ ಚಿತೆಯ ಮೇಲಿರಿಸಲಾಯಿತು. ಚಿತೆಗೆ ಅಗ್ನಿಸ್ಪರ್ಶ ಮಾಡಿದರು. ತುಪ್ಪ, ಗಂಧ, ಧೂಪಗಳನ್ನು ಅಗ್ನಿಗೆ ಸುರಿದರು. ಒಂದೆರಡು ಗಂಟೆಗಳಲ್ಲಿ ಎಲ್ಲ ಮುಗಿದುಹೋಯಿತು.

ಅಸ್ಥಿ-ಭಸ್ಮಗಳನ್ನು ತಾಮ್ರದ ಪಾತ್ರೆಯೊಂದರಲ್ಲಿ ಶೇಖರಿಸಿ ಕಾಶೀಪುರದ ಉದ್ಯಾನಗೃಹದಲ್ಲಿರಿಸಲಾಯಿತು. ಬೇರೊಂದು ಜಾಗಕ್ಕೆ ಸ್ಥಳಾಂತರಗೊಳಿಸುವವರೆಗೂ ಪ್ರತಿದಿನ ಅದನ್ನು ಅಲ್ಲೇ ಪೂಜಿಸುತ್ತಿದ್ದರು.

ಕ್ರಮೇಣ ಶಿಷ್ಯರ ಹಾಗೂ ಭಕ್ತರ ಹೃದಯದಲ್ಲಿ ಒಂದು ಬಗೆಯ ಶಾಂತ-ಶರಣಾಗತಿ ಭಾವ ತಾನೇತಾನಾಗಿ ಆವರಿಸಿತು; ಶ್ರೀರಾಮಕೃಷ್ಣರ ಮಧುರಸ್ಮೃತಿ ಅವರ ಮನಸ್ಸನ್ನು ತುಂಬಿಬಿಟ್ಟಿತು. ಇದರ ಪರಿಣಾಮವಾಗಿ ಅವರ ಶೋಕ-ದುಃಖಗಳು ಶಾಂತಿ-ಆನಂದಗಳಾಗಿ ಪರಿವರ್ತನೆಗೊಂಡುವು.

ನಿಜಕ್ಕೂ, ಭಗವತ್ಸಾಕ್ಷಾತ್ಕಾರ ಮಾಡಿಕೊಂಡ ಮಹಾತ್ಮರ ಮರಣವೆಂಬುದು ಮರಣವೇ ಅಲ್ಲ. ಅಂಥವರು ದೇಹತ್ಯಾಗ ಮಾಡಿದಾಗ ಅವರ ಭಕ್ತರಿಗೆ, ಅನುಚರರಿಗೆ ತಾತ್ಕಾಲಿಕವಾಗಿ ದುಃಖವಾಗಬಹುದು, ಇಲ್ಲವೆಂದಲ್ಲ. ಆದರೆ ಆ ಮಹಾತ್ಮರ ಜೀವನ ದರ್ಶನದಿಂದ ಮುಮುಕ್ಷುಗಳಾದವರಲ್ಲಿ ಭಗವತ್ಸಾಕ್ಷಾತ್ಕಾರದ ಹಂಬಲ ಇನ್ನಷ್ಟು ತೀವ್ರಗೊಳ್ಳುತ್ತದೆ. ಶ್ರೀರಾಮಕೃಷ್ಣರ ಮಹಾಸಮಾಧಿಯ ಅನಂತರವೂ ಹಾಗೆಯೇ ಆಯಿತು. ಅವರ ಶಿಷ್ಯರಲ್ಲಿ ಅತ್ಯುನ್ನತ ಆಧ್ಯಾತ್ಮಿಕ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ತೀವ್ರ ವ್ಯಾಕುಲತೆ ಉದ್ದೀಪನಗೊಂಡಿತು. ಈಗ ತಮ್ಮೊಳಗೆ ಏನೋ ಒಂದು ಹೊಸ ಶಕ್ತಿ-ಉತ್ಸಾಹ ಜಾಗೃತವಾಗಿರುವಂತೆ ಅವರಿಗೆ ಭಾಸವಾಯಿತು. ಅದು ತಮ್ಮ ಪ್ರಿಯ ಗುರು ಶ್ರೀರಾಮಕೃಷ್ಣರ ಸಾನ್ನಿಧ್ಯದಿಂದಾಗಿಯೇ ಉಂಟಾದ ಸ್ಫೂರ್ತಿ ಎಂಬ ಅರಿವೂ ಅವರಿಗುಂಟಾಗುತ್ತಿತ್ತು. ಶ್ರೀರಾಮಕೃಷ್ಣರು ಯಾವ ಉದ್ದೇಶವನ್ನಿಟ್ಟುಕೊಂಡು ಈ ಜಗತ್ತಿನಲ್ಲಿ ಜನ್ಮತಾಳಿದರೋ, ಯಾವ ಕಾರ್ಯಗಳನ್ನು ಸಾಧಿಸಬೇಕೆಂದು ಇಲ್ಲಿಗೆ ಆಗಮಿಸಿದರೋ ಆ ಕಾರ್ಯಗಳೆಲ್ಲ ಅವರ ದೇಹಾವಸಾನದೊಂದಿಗೇ ಮುಕ್ತಾಯ ಗೊಳ್ಳುವಂಥವಲ್ಲ ಎಂಬುದು ಈ ಶಿಷ್ಯರಿಗೆ ತಿಳಿದಿತ್ತು. ಶ್ರೀರಾಮಕೃಷ್ಣರ ಅವತಾರೋ ದ್ದೇಶವೆಂಬುದು ಆಧ್ಯಾತ್ಮಿಕ ಜೀವನಗಳ ಹಾಗೂ ಆಧ್ಯಾತ್ಮಿಕ ಜ್ಞಾನದ ರೂಪದಲ್ಲಿ ಮುಂದೆ ನಿರಂತರವಾಗಿ ಪ್ರವಹಿಸಲಿದೆ. ಅವರ ಭಕ್ತರು ಹಾಗೂ ಶಿಷ್ಯರೇ—ಅದರಲ್ಲೂ ಶ್ರೀರಾಮಕೃಷ್ಣರ ಹೆಸರಿನಲ್ಲಿ ತ್ಯಾಗಮಾಡಿ ಬರಲಿರುವ ಈ ಯುವಕರೇ—ಆ ಪ್ರವಾಹ ವನ್ನು ಒಯ್ಯಲಿರುವ ಪ್ರಮುಖ ಕಾಲುವೆಗಳಾಗಬೇಕಾಗಿದೆ.

ಆದರೆ ಮೊದಮೊದಲಿಗೆ ಶ್ರೀರಾಮಕೃಷ್ಣರು ಕಣ್ಮರೆಯಾದ್ದರಿಂದ ಈ ಶಿಷ್ಯರೂ ದಿಗ್ಭ್ರಾಂತರಾದರು. ಮುಂದೇನು ಮಾಡಬೇಕೆಂದು ಬಗೆಗಾಣದೆ ಕಂಗಾಲಾದರು. ಶ್ರೀರಾಮಕೃಷ್ಣರ ದೇಹಾವಸಾನವು ಅನಿರೀಕ್ಷಿತವಾದದ್ದೇನಲ್ಲ. ಆದರೂ ಅದು ಆಕಸ್ಮಿಕ ವಾಗಿ ನಡೆದುಹೋಯಿತೋ ಎಂಬಂತೆ ಅಸಹಾಯಕರಾದರು. ತಾವೀಗ ಸಂಸಾರವನ್ನು ತ್ಯಾಗಮಾಡಿ ಬಂದರೂ ಇರುವುದೆಲ್ಲಿ, ತಮಗೆ ದಿಕ್ಕು ತೋರುವವರಾರು ? ಅಲ್ಲದೆ ಕಾಶೀಪುರದ ಉದ್ಯಾನಗೃಹವಾದರೋ ಬಾಡಿಗೆ ಮನೆ. ಆಗಸ್ಟ್ ತಿಂಗಳ ಅಂತ್ಯದವರೆ ಗಿನ ಬಾಡಿಗೆಯನ್ನು ಮಾತ್ರ ಮುಂದಾಗಿ ಪಾವತಿ ಮಾಡಿದ್ದಾಗಿದೆ. ಶಿಷ್ಯರಿಗೇನೋ ಆ ಉದ್ಯಾನಗೃಹದಲ್ಲೇ ಉಳಿದುಕೊಂಡು ಶ್ರೀರಾಮಕೃಷ್ಣರನ್ನು ಪೂಜಿಸುತ್ತ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗುವ ಆಸೆ. ಆದರೆ ಮನೆಯ ಬಾಡಿಗೆ ಕೊಡುವವರಾರು ? ತಾವೆಲ್ಲ ಸಂಘಟಿತರಾಗಿ, ಅಲ್ಲೇ ವಾಸಿಸುತ್ತ ತ್ಯಾಗಜೀವನ ನಡೆಸುವುದಾಗಿ ನರೇಂದ್ರ ಹೇಳಿದ. ಆದರೆ ಗೃಹೀಭಕ್ತರಲ್ಲಿ ಹೆಚ್ಚಿನವರಿಗೆ ಅದು ಒಪ್ಪಿಗೆಯಾಗಲಿಲ್ಲ. "ಸುಮ್ಮನೆ ನಿಮ್ಮನಿಮ್ಮ ಮನೆಗಳಿಗೆ ಹೋಗಿ; ಓದಿ ಬುದ್ಧಿವಂತರಾಗಿ. ಇದರಿಂದ ನಿಮಗೂ ಹಿತ, ಹೆತ್ತವರಿಗೂ ಸಂತೋಷ" ಎಂದು ಬೋಧಿಸಿದರು. ತಾವು ಇಷ್ಟು ದಿನ ನೀಡುತ್ತಿದ್ದ ನೆರವನ್ನು ನಿಲ್ಲಿಸಿಬಿಟ್ಟರು. ಮತ್ತು, "ಸಂಸಾರಜೀವನವೇ ಶ್ರೇಷ್ಠ ಅಂತಲೇ ಶ್ರೀರಾಮ ಕೃಷ್ಣರು ಹೇಳುತ್ತಿದ್ದುದು. ಅವರೇ ಸ್ವತಃ ಗೃಹಸ್ಥರಾಗಿದ್ದವರಲ್ಲವೆ !" ಎಂದೂ ಕೆಲವು

ಭಕ್ತರು ತರ್ಕಮಾಡಿದರು. ಆದರೆ ನರೇಂದ್ರ ಈ ವಾದವನ್ನೆಲ್ಲ ಧಿಕ್ಕರಿಸಿ, ತಾವೆಲ್ಲ ತ್ಯಾಗಜೀವನವನ್ನೇ ಕೈಗೊಳ್ಳುವವರು, ಮತ್ತು ಶ್ರೀರಾಮಕೃಷ್ಣರು ತಮಗೆ ತೋರಿಸಿ ಕೊಟ್ಟ ಮಾರ್ಗವೂ ಅದೇ ಎಂದು ಖಡಾಖಂಡಿತವಾಗಿ ಹೇಳಿಬಿಟ್ಟ. ಬಲರಾಮ, ಮಾಸ್ಟರ್, ಸುರೇಂದ್ರ ಮೊದಲಾದ ಕೆಲವೇ ಮಂದಿ ಭಕ್ತರಿಗೆ ಮಾತ್ರ ಅವನ ಮಾತಿನ ತಥ್ಯ ಮನವರಿಕೆಯಾಯಿತು. ಅವರುಗಳು ಶಿಷ್ಯರ ಬೆಂಬಲಕ್ಕೆ ನಿಂತರು.

ಶ್ರೀರಾಮಕೃಷ್ಣರೇ ಇಚ್ಛಿಸಿದ್ದಂತೆ, ಅವರ ಅವಶೇಷಗಳನ್ನು ಪ್ರತಿಷ್ಠಾಪಿಸಲು ಗಂಗೆಯ ದಡದ ಮೇಲೆ ಒಂದು ಕಟ್ಟಡವನ್ನು ನಿರ್ಮಿಸಬೇಕೆಂದು ಈ ಶಿಷ್ಯರು ಮನಸ್ಸು ಮಾಡಿದ್ದರು. ಈಗ ಈ ಬಗ್ಗೆ ಶಿಷ್ಯರ ಹಾಗೂ ಗೃಹೀಭಕ್ತರ ನಡುವೆ ಭಿನ್ನಾಭಿಪ್ರಾಯ ತಲೆದೋರಿತು. ಕೊನೆಗೆ, ಗಂಗಾತೀರದಲ್ಲಿ ಒಂದು ಜಾಗವನ್ನು ಕೊಂಡು, ಅಲ್ಲಿ ಕಟ್ಟಡ ಕಟ್ಟಬೇಕು; ಅಲ್ಲಿಯವರೆಗೂ ಅವಶೇಷಗಳನ್ನು ಕಾಶೀಪುರದ ಉದ್ಯಾನ ಗೃಹದಲ್ಲೇ ಇಟ್ಟಿರುವುದು ಎಂಬ ತೀರ್ಮಾನಕ್ಕೆ ಬಂದರು. ಆದರೆ ಈ ತೀರ್ಮಾನವೂ ಶೀಘ್ರದಲ್ಲೇ ಬಿದ್ದುಹೋಯಿತು. ಏಕೆಂದರೆ ಜಾಗವನ್ನು ಕೊಂಡುಕೊಳ್ಳಲು, ಕಟ್ಟಡ ಕಟ್ಟಿಸಲು ಹಣ ಕೊಡುವವರು ಯಾರು? ಪ್ರಾಯಶಃ, ನರೇಂದ್ರ ವಿವೇಕಾನಂದರಾಗಿ, ಅಮೆರಿಕೆಗೆ ಹೋಗಿ ಜಯಭೇರಿ ಬಾರಿಸಿ ಹಿಂದಿರುಗಿದ ಮೇಲೆಯೇ ಗಂಗೆಯ ದಡದ ಮೇಲೆ ಕಟ್ಟಡ ನಿರ್ಮಾಣವಾಗಬೇಕು ಎಂಬುದು ಶ್ರೀರಾಮಕೃಷ್ಣರ ಇಚ್ಛೆಯಾಗಿತ್ತೇನೋ, ಯಾರು ಬಲ್ಲರು! ಈಗಂತೂ ರಾಮಚಂದ್ರ ದತ್ತನ ಮುಖಂಡತ್ವದಲ್ಲಿ ದೇವೇಂದ್ರನಾಥ ಮಜುಮದಾರ್, ನಿತ್ಯಗೋಪಾಲನೇ ಮೊದಲಾದ ಗೃಹಸ್ಥರು ಆ ಅವಶೇಷಗಳನ್ನು ಕಾಂಕುರ್‌ಗಾಚಿಯಲ್ಲಿದ್ದ ರಾಮಚಂದ್ರ ದತ್ತನ ಉದ್ಯಾನದಲ್ಲೇ ಪ್ರತಿಷ್ಠಾಪಿಸುವುದೆಂದು ತೀರ್ಮಾನಿಸಿದರು.

ಆದರೆ ಈ ಯುವಕಶಿಷ್ಯರು ಅವಶೇಷವನ್ನು ಅವರ ಕೈಗೊಪ್ಪಿಸಲು ನಿರಾಕರಿಸಿಬಿಟ್ಟರು. ಆಗ ಆ ಗೃಹಸ್ಥಭಕ್ತರಿಗೆಲ್ಲ ಸಿಟ್ಟೇರಿತು. "ಎಲಾ, ಇವರೆಲ್ಲ ನಮ್ಮ ಕಣ್ಮುಂದೆಯೇ ಬೆಳೆದ ಹುಡುಗರು. ಈಗ ನಮ್ಮ ಮಾತಿಗೇ ಎದುರಾಡುತ್ತಾರಲ್ಲ!" ಎಂದು ಕೋಪಗೊಂಡರು. ಆದರೆ ಯುವಶಿಷ್ಯರಿಗೆ, "ಶ್ರೀರಾಮಕೃಷ್ಣರು ನಮ್ಮ ಪ್ರೀತಿಯ ಗುರು. ನಮ್ಮ ಮೂಲಕ ಅವರು ಧರ್ಮಪ್ರಸಾರ ಕಾರ್ಯ ಮಾಡಿಸುವ ಉದ್ದೇಶವನ್ನಿಟ್ಟುಕೊಂಡಿದ್ದರು. ಆದ್ದರಿಂದ ಈ ಅವಶೇಷ ನಮ್ಮ ವಶದಲ್ಲೇ ಇರಬೇಕಾದದ್ದು" ಎಂಬ ಹಟ. ಹೀಗೆ ಅವರ ಕೋಪ, ಇವರ ಹಟ ಸೇರಿ ಝಟಾಪಟಿ ಶುರುವಾಯಿತು. ಈ ಕಡೆ ಶಶಿ ಮತ್ತು ನಿರಂಜನ ಆ ಅವಶೇಷಕ್ಕೆ ಬಲವಾದ ಕಾವಲಾಗಿ ನಿಂತಿದ್ದರು. ಇಬ್ಬರೂ ಬಲಿಷ್ಠರೇ—ನಿರ್ಧಾರದಲ್ಲಿ ಶಶಿ ಬಲಿಷ್ಠನಾದರೆ, ಆಕಾರ-ಗಾತ್ರದಲ್ಲಿ ನಿರಂಜನ. ಏನೇ ಆಗಲಿ ಅವಶೇಷವನ್ನು ಮಾತ್ರ ಬಿಟ್ಟುಕೊಡಬಾರದು ಎಂದು ಸ್ಥಿರವಾಗಿ ನಿಂತುಬಿಟ್ಟಿದ್ದರು. ಉಳಿದ ಯುವಕಶಿಷ್ಯರೂ ಇವರಿಗೆ ಬೆಂಬಲವಾಗಿದ್ದರು. ಆಗ ಗೃಹಸ್ಥ ಭಕ್ತರು ನರೇಂದ್ರನ ಬಳಿಗೆ ಬಂದು, ಅದನ್ನು ತಮಗೆ ಕೊಡಿಸುವಂತೆ ಕೇಳಿಕೊಂಡರು. ಆಗ ನರೇಂದ್ರ ತನ್ನ ಸೋದರಶಿಷ್ಯರನ್ನೆಲ್ಲ ಕರೆದು, "ಸೋದರರೇ, ನಾವೀಗ ಸ್ವಲ್ಪ ವಿಚಾರ ಮಾಡಿ ನೋಡಬೇಕಾಗುತ್ತದೆ. ನಾವು ಈ ರೀತಿ ಜಗಳವಾಡಿಕೊಳ್ಳಬಾರದು. ಇಲ್ಲದೆಹೋದರೆ ಮುಂದೆ ಜನಗಳು 'ಶ್ರೀರಾಮಕೃಷ್ಣರ ಶಿಷ್ಯರು ಅವರ ಅವಶೇಷಕ್ಕಾಗಿ ಬಡಿದಾಡಿಕೊಂಡರು' ಅಂತ ಮಾತನಾಡಿಕೊಳ್ಳುತ್ತಾರೆ. ಅಲ್ಲದೆ, ನಾವೆಲ್ಲ ಮುಂದೆ ಎಲ್ಲಿ ಉಳಿದುಕೊಳ್ಳುವುದು ಎನ್ನುವುದೇ ನಿರ್ಧಾರವಾಗಿಲ್ಲ. ಆದ್ದರಿಂದ ಅಸ್ಥಿಯನ್ನು

ಅವರೇ ಇಟ್ಟುಕೊಳ್ಳಲಿ. ಇಷ್ಟರ ಮೇಲೆ, ರಾಮ್‌ಬಾಬುವಾದರೂ ಆ ಅಸ್ಥಿಯನ್ನು ಶ್ರೀರಾಮಕೃಷ್ಣರ ಹೆಸರಿನಲ್ಲೇ ಪ್ರತಿಷ್ಠಾಪಿಸಿ ಪೂಜಿಸುತ್ತಾನಲ್ಲವೆ ? ಅದೂ ಒಳ್ಳೆಯದೇ ! ನಾವೂ ಅಲ್ಲಿಗೆ ಹೋಗಿ ಪೂಜೆ ಸಲ್ಲಿಸಬಹುದು. ಈ ಅಸ್ಥಿಗೆ ಬದಲಾಗಿ ನಾವು ಶ್ರೀರಾಮ ಕೃಷ್ಣರ ಬೋಧನೆಗಳನ್ನು ಕೈಗೆತ್ತಿಕೊಂಡು ಅವುಗಳಿಗನುಸಾರವಾಗಿ ನಮ್ಮ ಜೀವನವನ್ನು ರೂಪಿಸಿಕೊಳ್ಳೋಣ. ನಾವು ಅವರ ಆದರ್ಶಗಳನ್ನು ಪ್ರಾಮಾಣಿಕ ಭಾವದಿಂದ ಸ್ವೀಕರಿಸಿ, ಅವುಗಳಿಗೆ ತಕ್ಕಂತೆ ಬದುಕಿದರೆ, ಈ ಅವಶೇಷಗಳನ್ನು ಪೂಜೆ ಮಾಡುವುದ ಕ್ಕಿಂತಲೂ ಎಷ್ಟೋ ಪಾಲು ಉತ್ತಮವಾದ ಕೆಲಸವನ್ನು ಮಾಡಿದಂತಾಗುತ್ತದೆ'' ಎಂದು ಬುದ್ಧಿ ಹೇಳಿದ.

ಆದರೆ ಯುವಕಶಿಷ್ಯರು ಯೋಚಿಸಿದರು—ಶ್ರೀರಾಮಕೃಷ್ಣರ ಪವಿತ್ರ ಅವಶೇಷ ಗಳನ್ನು ಗೃಹಸ್ಥಭಕ್ತರಿಗೆ ಕೊಡಲೇಬೇಕು ಎನ್ನುವುದಾದರೆ, ಖಂಡಿತವಾಗಿ ಪೂರ್ತಿ ಯಾಗಂತೂ ಕೊಡಬಾರದು; ತಾವು ಒಂದಿಷ್ಟನ್ನು ಇಟ್ಟುಕೊಂಡು ಉಳಿದದ್ದನ್ನು ಕೊಡೋಣ, ಎಂದು. ಈ ವಿಷಯವನ್ನು ನರೇಂದ್ರನೊಂದಿಗೆ ಚರ್ಚಿಸಿ ಒಂದು ತೀರ್ಮಾನಕ್ಕೆ ಬಂದರು. ಅದರಂತೆ, ಅರ್ಧಕ್ಕಿಂತಲೂ ಹೆಚ್ಚಿನ ಅಸ್ಥಿ-ಭಸ್ಮಗಳನ್ನು ಇನ್ನೊಂದು ಪಾತ್ರೆಗೆ ಹಾಕಿಟ್ಟುಕೊಂಡರು. ಆ ಪವಿತ್ರ ಭಸ್ಮದ ಒಂದು ಕಣದಷ್ಟನ್ನು ಎಲ್ಲರೂ ಬಾಯಿಗೆ ಹಾಕಿಕೊಂಡರು. ಅದರ ಪರಿಣಾಮವಾಗಿ ಆ ರಾತ್ರಿ ಎಲ್ಲರೂ ಗಾಢಧ್ಯಾನದಲ್ಲಿ ಮುಳುಗಿಹೋದರು. ತಾವು ತೆಗೆದಿಟ್ಟುಕೊಂಡ ಅಸ್ಥಿ-ಭಸ್ಮದ ಪಾತ್ರೆಯ ಮುಚ್ಚಳವನ್ನು ಬೆಸುಗೆ ಹಾಕಿ ಬಲರಾಮ ಬಾಬುವಿನ ಮನೆಗೆ ಗುಟ್ಟಾಗಿ ಕಳಿಸಿಕೊಟ್ಟರು. ಬಲರಾಮ ಗೃಹಸ್ಥನಾದರೂ ಅವನು ಈ ಯುವಕರ ಪರ. ಅವನ ಮನೆಯಲ್ಲೇ ಈ ಪವಿತ್ರ ಅವಶೇಷಗಳಿಗೆ ಪ್ರತಿದಿನ ಪೂಜೆ ನಡೆಯುತ್ತಬಂತು. ಒಂದಲ್ಲ ಒಂದು ದಿನ ಗಂಗೆಯ ದಡದಲ್ಲಿ ಒಂದು ಜಾಗವನ್ನು ಕೊಂಡು, ಅಲ್ಲಿ ಈ ಪವಿತ್ರ ಅವಶೇಷವನ್ನು ಪ್ರತಿಷ್ಠಾಪಿಸಲೇಬೇಕು ಎಂದು ಆ ಯುವಕಶಿಷ್ಯರು ದೃಢನಿರ್ಧಾರ ಮಾಡಿಬಿಟ್ಟರು. ಮತ್ತು, ಏನೂ ಆಗಲಿಲ್ಲವೆಂಬಂತೆ ಇನ್ನೊಂದು ಅವಶೇಷದ ಪಾತ್ರೆ ಯನ್ನು ರಾಮಚಂದ್ರ ದತ್ತನಿಗೆ ಒಪ್ಪಿಸಿಕೊಟ್ಟರು. ಬಳಿಕ ಎಲ್ಲರೂ ಸೇರಿ, ಆ ಅವ ಶೇಷವನ್ನು ಶ್ರೀಕೃಷ್ಣಜನ್ಮಾಷ್ಟಮಿಯ ದಿನದಂದು, ಎಂದರೆ ಆಗಸ್ಟ್ ೨೩ರಂದು ಕಾಂಕುರ್‌ಗಾಚಿಯ ಉದ್ಯಾನದಲ್ಲಿ ಪ್ರತಿಷ್ಠಾಪಿಸುವುದು ಎಂದು ತೀರ್ಮಾನಿಸಿದರು.

ಕೃಷ್ಣಜನ್ಮಾಷ್ಟಮಿಗೆ ಇನ್ನೂ ಒಂದು ವಾರವಿತ್ತು. ಈಗ ಕಾಶೀಪುರದ ಉದ್ಯಾನ ಗೃಹದಲ್ಲಿ ಲಾಟು, ತಾರಕನಾಥ ಮತ್ತು ಹಿರಿಯ ಗೋಪಾಲ ಮಾತ್ರ ಉಳಿದು ಕೊಂಡಿದ್ದು, ಉಳಿದವರೆಲ್ಲ ತತ್ಕಾಲಕ್ಕೆ ತಮ್ಮತಮ್ಮ ಮನೆಗಳಿಗೆ ಹಿಂದಿರುಗಿದ್ದರು. ಆದರೆ ಪ್ರತಿದಿನ ಭಕ್ತ-ಶಿಷ್ಯರೆಲ್ಲರೂ ಉದ್ಯಾನಗೃಹದಲ್ಲಿ ಒಟ್ಟಾಗಿ ಸೇರಿ ಧ್ಯಾನ-ಭಜನೆ ಗಳಲ್ಲಿ ತೊಡಗುತ್ತಿದ್ದರು. ತಮ್ಮ ಪ್ರಾಣಪ್ರಿಯರಾದ ಶ್ರೀರಾಮಕೃಷ್ಣರ ಸ್ಮರಣೆಯಲ್ಲಿ ತೊಡಗುತ್ತಿದ್ದರು. ತಮ್ಮ ಗುರುದೇವನ ಕೊನೆಯ ದಿನಗಳ ಹಲವು ಘಟನೆಗಳನ್ನು, ಮಾತುಕತೆಗಳನ್ನು ಮತ್ತು ದಕ್ಷಿಣೇಶ್ವರದ ದಿವ್ಯಾನಂದದ ದಿನಗಳನ್ನು ಮೆಲುಕುಹಾಕು ತ್ತಿದ್ದರು. ನರೇಂದ್ರ ಶ್ರೀರಾಮಕೃಷ್ಣರ ಅಲೌಕಿಕ ವ್ಯಕ್ತಿತ್ವವನ್ನು ಮತ್ತು ಅವರ ಜೀವನದ ಹಲವಾರು ಅದ್ಭುತ ಘಟನೆಗಳನ್ನು ವಿವರಿಸುತ್ತ ಅವರನ್ನೆಲ್ಲ ಸ್ಫೂರ್ತಿಗೊಳಿಸುತ್ತಿದ್ದ.

ಈ ಸಂದರ್ಭದಲ್ಲೇ ಒಮ್ಮೆ, ಶ್ರೀರಾಮಕೃಷ್ಣರಿನ್ನೂ ತಮ್ಮೊಡನೆಯೇ ಇದ್ದಾರೆ ಎಂಬುದನ್ನು ಅವರಿಗೆ ಮನವರಿಕೆ ಮಾಡಿಸುವ ಅಪೂರ್ವ ಘಟನೆಯೊಂದು ನಡೆ

ಯಿತು. ಒಂದು ದಿನ ನರೇಂದ್ರನೂ ಹರೀಶ ಎಂಬ ಸೋದರಶಿಷ್ಯನೂ ಉದ್ಯಾನದ ಕೊಳದ ಬದಿಯಲ್ಲಿ ನಿಂತು ಮಾತನಾಡುತ್ತಿದ್ದರು—ಬಹುಶಃ ಶ್ರೀರಾಮಕೃಷ್ಣರ ಕುರಿತಾಗಿಯೇ ಇರಬೇಕು. ರಾತ್ರಿ ಸುಮಾರು ಎಂಟು ಗಂಟೆಯ ಸಮಯ. ಆಗ ಇದ್ದಕ್ಕಿದ್ದಂತೆ ನರೇಂದ್ರನಿಗೆ ಅಲ್ಲೊಬ್ಬ ಜ್ಯೋತಿರ್ಮಯನಾದ ವ್ಯಕ್ತಿ ನಿಂತಿರುವಂತೆ ಕಂಡಿತು. ಆ ವ್ಯಕ್ತಿ ಮೈತುಂಬ ವಸ್ತ್ರ ಹೊದ್ದು, ಗೇಟಿನ ಕಡೆಯಿಂದ ಅವರ ಬಳಿಗೇ ಮೆಲ್ಲನೆ ನಡೆದುಕೊಂಡು ಬರುತ್ತಿರುವಂತಿತ್ತು. ನರೇಂದ್ರ ಕಣ್ಣಗಲಿಸಿಕೊಂಡು ಅತ್ತಲೇ ನೋಡುತ್ತಿದ್ದಾನೆ. ಅದು ಅಗಲಿದ ತಮ್ಮ ಗುರುದೇವನೇ ಆಗಿರಬಹುದೆ. . .! ಆದರೆ ತನಗೇನೋ ಭ್ರಮೆಯಾಗುತ್ತಿರಬೇಕು ಎಂದುಕೊಂಡು ಸುಮ್ಮನೆಯೇ ಇದ್ದ. ಆದರೆ ಜೊತೆಯಲ್ಲಿದ್ದ ಹರೀಶ ಉದ್ವೇಗದ ದನಿಯಲ್ಲಿ, "ಅದೇನದು! ನರೇನ್, ಅಲ್ಲಿ ನೋಡು, ಅಲ್ಲಿ ನೋಡು!" ಎಂದು ಪಿಸುಗುಟ್ಟಿದ. ಎಂದರೆ, ಅವನಿಗೂ ಈ ದೃಶ್ಯ ಗೋಚರವಾಗಿಬಿಟ್ಟಿದೆ! ಈಗ ನರೇಂದ್ರ ಗಟ್ಟಿಯಾಗಿ "ಯಾರದು ?" ಎಂದು ಕೂಗಿದ. ಅದನ್ನು ಕೇಳಿ ಮನೆಯೊಳಗಿದ್ದವರೆಲ್ಲ ಹೊರಗೆ ಓಡಿಬಂದರು. ಅಷ್ಟರಲ್ಲಿ ಆ ವ್ಯಕ್ತಿ ಇವರಿಬ್ಬರು ನಿಂತಲ್ಲಿಂದ ಸುಮಾರು ಹತ್ತು ಗಜ ದೂರದಲ್ಲಿದ್ದ ಮಲ್ಲಿಗೆ ಪೊದೆಯೊಂದರ ಬಳಿಗೆ ಬಂದು ಅದೃಶ್ಯವಾಯಿತು. ಎಲ್ಲರೂ ಲಾಟೀನುಗಳನ್ನು ತಂದು ಮೂಲೆಮೂಲೆಗಳನ್ನು ಹುಡುಕಿ ನೋಡಿದರು. ಎಲ್ಲೂ ಏನೂ ಕಾಣಲಿಲ್ಲ. ನರೇಂದ್ರನ ಮನಸ್ಸಿನಲ್ಲಿ ಮಾತ್ರ ಈ ಸ್ಪಷ್ಟ ದರ್ಶನ ತನ್ನ ಚಿರಮುದ್ರೆಯನ್ನೊತ್ತಿಬಿಟ್ಟಿತು.

ಶ್ರೀಕೃಷ್ಣಾಷ್ಟಮಿಯ ದಿನ ಬಂದಿತು. ಭಕ್ತರೆಲ್ಲರೂ ಸೇರಿ ಶ್ರೀರಾಮಕೃಷ್ಣರ ಅವಶೇಷವನ್ನು ಕಾಂಕುರ್‌ಗಾಚಿಗೆ ಕೊಂಡೊಯ್ಯಲು ಸಿದ್ಧರಾದರು. ನರೇಂದ್ರನ ಮುಂದಾಳ್ತನದಲ್ಲಿ ಮೆರವಣಿಗೆ ಹೊರಟಿತು. ಅವಶೇಷದ ಪಾತ್ರೆಯನ್ನು ಶಶಿ ತಲೆಯ ಮೇಲೆ ಹೊತ್ತು ನಡೆದ. ಅವನ ಹಿಂದೆ ರಾಮಚಂದ್ರ ದತ್ತ ಇನ್ನಿತರರು ಸಾಗಿದರು. ದಾರಿಯುದ್ದಕ್ಕೂ ಭಗವನ್ನಾಮಸಂಕೀರ್ತನೆ ಮಾಡುತ್ತ ಮುನ್ನಡೆದು ಕಾಂಕುರ್‌ಗಾಚಿಯ ಉದ್ಯಾನವನ್ನು ತಲುಪಿದರು. ಅಲ್ಲಿ ಶ್ರೀರಾಮಕೃಷ್ಣರ ಅವಶೇಷವನ್ನು ವಿಧಿಯುಕ್ತವಾಗಿ ಪ್ರತಿಷ್ಠಾಪಿಸಲಾಯಿತು. ಕಾಲಾಂತರದಲ್ಲಿ ಆ ಸ್ಥಳದಲ್ಲಿ ಒಂದು ಮಂದಿರವನ್ನು ಕಟ್ಟಲಾಯಿತು. ಈಗ ಈ ಸ್ಥಳ 'ಯೋಗೋದ್ಯಾನ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇಲ್ಲಿ ಪ್ರತಿವರ್ಷವೂ ಆ ದಿನದಂದು ಶ್ರೀರಾಮಕೃಷ್ಣರ ಉತ್ಸವ ನಡೆದುಕೊಂಡು ಬರುತ್ತಿದೆ.

ಅವಶೇಷದ ಪ್ರತಿಷ್ಠಾಪನೆಗೆ ಎರಡು ದಿನ ಮೊದಲೇ ಬಲರಾಮಬಾಬು ಶಾರದಾದೇವಿಯವರನ್ನು ತನ್ನ ಮನೆಗೆ ಕರೆತಂದಿದ್ದ. ಪತಿವಿಯೋಗದ ದುಃಖವನ್ನು ಶಮನಗೊಳಿಸಲು ಅವರಿಗಾಗಿ ಆತ ತೀರ್ಥಯಾತ್ರೆಯ ಏರ್ಪಾಡು ಮಾಡಿದ. ಆಗಸ್ಟ್ ೩೦ರಂದು ಶಾರದಾದೇವಿಯವರು ಲಾಟು, ಕಾಳೀಪ್ರಸಾದ, ಯೋಗೀಂದ್ರ ಹಾಗೂ ಕೆಲವು ಭಕ್ತೆಯರ ಜೊತೆಯಲ್ಲಿ ಬೃಂದಾವನಯಾತ್ರೆ ಹೊರಟರು.

ಕಾಶೀಪುರದ ಉದ್ಯಾನಗೃಹವನ್ನು ಬಿಟ್ಟುಬಿಡುವ ಮೊದಲೇ ಯುವಕಶಿಷ್ಯರು ಶ್ರೀರಾಮಕೃಷ್ಣರ ಹಾಸಿಗೆ, ಬಟ್ಟೆಗಳು, ಪೀಠೋಪಕರಣಗಳು, ಪಾತ್ರೆ-ಪಡಗಗಳು ಮೊದಲಾದವುಗಳನ್ನೆಲ್ಲ ಬಲರಾಮ ಬಾಬುವಿನ ಮನೆಗೆ ಸಾಗಿಸಿಬಿಟ್ಟಿದ್ದರು. ಮುಂದೆ ಅವರು ತಮ್ಮ ವಾಸಸ್ಥಳವನ್ನು ಬದಲಾಯಿಸಿದಾಗಲೆಲ್ಲ ಆ ಅಮೂಲ್ಯ ವಸ್ತುಗಳನ್ನು ತಮ್ಮೊಂದಿಗೆ ಕೊಂಡೊಯ್ಯುತ್ತಿದ್ದರು. ಈ ವಸ್ತುಗಳನ್ನೆಲ್ಲ ಇಂದಿಗೂ ಬೇಲೂರು

ಮಠದಲ್ಲಿ ಶ್ರೀರಾಮಕೃಷ್ಣರ ಜನ್ಮೋತ್ಸವದ ದಿನಗಳಲ್ಲಿ ನೋಡಲು ಅವಕಾಶವಿದೆ.

ಆಗಸ್ಟ್ ತಿಂಗಳ ಅಂತ್ಯಕ್ಕೆ ಉದ್ಯಾನಗೃಹವನ್ನು ತೆರವು ಮಾಡಬೇಕಾಗಿತ್ತು. ಯುವಶಿಷ್ಯರಲ್ಲಿ ಮೂವರು ಈಗಾಗಲೇ ಶ್ರೀಮಾತೆಯವರ ಜೊತೆಯಲ್ಲಿ ತೀರ್ಥ ಯಾತ್ರೆಗೆ ಹೋಗಿದ್ದರು. ಉಳಿದವರು ತಮ್ಮತಮ್ಮ ಮನೆಗಳಿಗೆ ಹಿಂದಿರುಗಿ ಕಾಲೇಜು ವಿದ್ಯಾಭ್ಯಾಸದಲ್ಲಿ ಮತ್ತೆ ತೊಡಗಿದ್ದರು. ಆದರೆ, ಒಂದು ದೃಷ್ಟಿಯಲ್ಲಿ, ಶ್ರೀರಾಮ ಕೃಷ್ಣರು ಅವರನ್ನೆಲ್ಲ ಆದಾಗಲೇ ಸಂನ್ಯಾಸಿಗಳನ್ನಾಗಿ ಮಾಡಿಯಾಗಿತ್ತು. ಅಲ್ಲದೆ ಅವರು ನರೇಂದ್ರನಿಗೆ ಸ್ಪಷ್ಟವಾಗಿ ಹೇಳಿದ್ದರು: 'ಈ ಹುಡುಗರು ಮನೆಗಳಿಗೆ ಹಿಂದಿರುಗದಂತೆ ಮತ್ತು ಅವರು ಸಾಧನೆಯಲ್ಲಿ ತೊಡಗುವಂತೆ ಮಾಡುವ ಜವಾಬ್ದಾರಿ ನಿನ್ನದು' ಎಂದು. ಈಗ ಅವರ ಮುಂದಿನ ದಾರಿಯೇನು? ನೆಲೆನಿಲ್ಲಲು ಅವರಿಗೆ ಸ್ಥಳವಾದರೂ ಎಲ್ಲಿದೆ? ಏನೇ ಆದರೂ ಅವರನ್ನೆಲ್ಲ ಕರೆತಂದು ಸಂನ್ಯಾಸಜೀವನ ನಡೆಸುವಂತೆ ಮಾಡಲೇಬೇಕು ಎಂದು ನರೇಂದ್ರನಂತೂ ದೃಢನಿರ್ಧಾರ ಮಾಡಿಬಿಟ್ಟಿದ್ದ. ಆದರೆ ಎಷ್ಟೋ ಮಂದಿ ಗೃಹಸ್ಥಭಕ್ತರಿಗೆ ಇದು ಒಪ್ಪಿಗೆಯಾಗಲಿಲ್ಲ. "ಈ ಹುಡುಗರು ಮನೆ ಗಳನ್ನು ಬಿಟ್ಟುಬಂದರೆ ಜೀವನ ನಡೆಸುವುದಾದರೂ ಹೇಗೆ? ಇವರು ಸಾಧಾರಣ ಬೈರಾಗಿಗಳ ಹಾಗೆ ಅಲೆದಾಡಿಕೊಂಡಿರುವಂತೆ ಬಿಟ್ಟುಬಿಡಲು ನಮ್ಮಿಂದಂತೂ ಸಾಧ್ಯ ವಿಲ್ಲ! ಇವರಿಗೆಲ್ಲ ಉಜ್ಜ್ವಲವಾದ ಭವಿಷ್ಯವಿದೆ. ಆದ್ದರಿಂದ ಸುಮ್ಮನೆ ಮನೆಗಳಲ್ಲೇ ಉಳಿದುಕೊಳ್ಳಲಿ, ಅದೇ ಬುದ್ಧಿವಂತಿಕೆಯ ಕೆಲಸ. ಹಾಗೆ ಮಾಡಿದರೆ ಇವರೂ ಸಂತೋಷವಾಗಿರಬಹುದು, ಮನೆಯವರೂ ಸಂತೋಷಪಡುತ್ತಾರೆ" ಎಂದು ಭಾವಿಸಿ ಅವರಿಗೆ ಬುದ್ಧಿವಾದ ಹೇಳಿದರು. ಶ್ರೀರಾಮಕೃಷ್ಣರ ಅವಶೇಷದ ವಿಷಯವಾಗಿ ಈಗಾಗಲೇ ಜಗಳವಾಗಿದ್ದುದರಿಂದ ಆ ಭಕ್ತರಲ್ಲಿ ಹೆಚ್ಚಿನವರಿಗೆ ಈ ಯುವಕರ ಮೇಲೆ ಸಹಾನುಭೂತಿಯಿರಲಿಲ್ಲ. ಆದರೆ ಅವರ ಪೈಕಿ ಬಲರಾಮ ಬಾಬು, ಸುರೇಂದ್ರನಾಥ, ಮಹೇಂದ್ರನಾಥ ಗುಪ್ತ ಮೊದಲಾದ ಕೆಲವೇ ಮಂದಿ ಗೃಹಸ್ಥ ಭಕ್ತರು ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಂಡರು. ಮಹಾತ್ಯಾಗದ ಆದರ್ಶವನ್ನು ತಮ್ಮೊಳಗೆ ತುಂಬಿ ಕೊಂಡು ಮನೆಗಳನ್ನು ಆದಾಗಲೇ ತ್ಯಜಿಸಿರುವ ಈ ಹುಡುಗರು ಪುನಃ ಮನೆಗಳಿಗೆ ಹಿಂದಿರುಗುವುದು ಸಾಧ್ಯವೇ ಇಲ್ಲ; ಮತ್ತು ಈಗ ಮನೆಗಳಿಗೆ ಹಿಂದಿರುಗಿರುವವರೂ ಕೂಡ ಎಲ್ಲರಂತೆ ವಿದ್ಯಾಭ್ಯಾಸವನ್ನು ಮುಂದುವರಿಸಲಾರರು ಎಂಬುದನ್ನು ಅವರು ಸ್ಪಷ್ಟವಾಗಿ ಕಂಡರು.

ಈ ಸಂದಿಗ್ಧ ಕಾಲವನ್ನು ನೆನಪಿಸಿಕೊಂಡು ಮುಂದೆ ಸ್ವಾಮಿ ವಿವೇಕಾನಂದರು ತಮ್ಮ ಗುರುಭಾಯಿಯಾದ ಸ್ವಾಮಿ ಬ್ರಹ್ಮಾನಂದರಿಗೆ ಒಂದು ಪತ್ರದಲ್ಲಿ ಬರೆಯುತ್ತಾರೆ: "...ರಾಖಾಲ್, ಅಂದು ಶ್ರೀರಾಮಕೃಷ್ಣರು ಶರೀರತ್ಯಾಗ ಮಾಡಿದ ಮೇಲೆ, ಆ ಗೃಹಸ್ಥ ರೆಲ್ಲ ನಮ್ಮನ್ನು ನಿಷ್ಪ್ರಯೋಜಕ ಉಡಾಳರು ಅಂತ ಕಡೆಗಣಿಸಿದ್ದು ನಿನಗೆ ನೆನಪಿರಬೇಕು. ಕೇವಲ ಬಲರಾಮ್, ಸುರೇಶ್ ಮಿತ್ರ, ಮಾಸ್ಟರ್ ಮಹಾಶಯ, ಚುನಿಬಾಬು— ಇಷ್ಟು ಜನ ಮಾತ್ರ ಆ ಕಷ್ಟದ ದಿನಗಳಲ್ಲಿ ನಮ್ಮ ಸ್ನೇಹಿತರಾಗಿ ಉಳಿದುಕೊಂಡರು. ಇವರಿಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು." ಅಮೆರಿಕದ ಪಸಾಡೆನದಲ್ಲಿ ಭಾಷಣ ಮಾಡುತ್ತ ವಿವೇಕಾನಂದರು ಹೇಳುತ್ತಾರೆ: "...ಶ್ರೀರಾಮಕೃಷ್ಣರ ನಿರ್ಯಾಣದ ಬಳಿಕ ನಾವು ಕಷ್ಟದ ದಿನಗಳನ್ನು ಎದುರಿಸಬೇಕಾಯಿತು. ನಮಗೆ ಸ್ನೇಹಿತರು-ಹಿತೈಷಿ ಗಳು ಯಾರೂ ಇರಲಿಲ್ಲ. ಅರ್ಥಂಬರ್ಥ ತಿಳಿವಳಿಕೆಯು, ಕೇವಲ ಭಾವರಾಜ್ಯದಲ್ಲಿ

ಚರಿಸುತ್ತಿರುವ ಕೆಲವು ಹುಡುಗರ ಮಾತನ್ನು ಯಾರು ಕೇಳುತ್ತಾರೆ? ಯೋಚಿಸಿ ನೋಡಿ—ಒಂದು ಹತ್ತು-ಹನ್ನೆರಡು ಹುಡುಗರು, ದೊಡ್ಡದೊಡ್ಡ ವಿಚಾರಗಳನ್ನು ಜನರ ಮುಂದೆ ಬಣ್ಣಿಸುತ್ತ, ತಾವು ತಮ್ಮ ಜೀವನದಲ್ಲಿ ಅವುಗಳನ್ನೆಲ್ಲ ಸಾಧಿಸಿ ತೋರಿಸುವುದಾಗಿ ಹೇಳುತ್ತಿದ್ದಾರೆ! ಇದನ್ನು ಕೇಳಿದವರೆಲ್ಲ ನಕ್ಕರು; ಬಳಿಕ ನಗೆ ನಿಲ್ಲಿಸಿ ಸಿಟ್ಟಿಗೆದ್ದರು, ಛೀಮಾರಿ ಹಾಕಿದರು. ಅಲ್ಲದೆ ನಮಗೆ ತೊಂದರೆ ಕೊಡಲೂ ಶುರುಮಾಡಿದರು. ಕೇವಲ ಒಬ್ಬ ಹುಡುಗನ ಕಲ್ಪನೆಗಳ ಬಗ್ಗೆ ಯಾರು ಸಹಾನುಭೂತಿ ತೋರುತ್ತಾರೆ—ಅದರಲ್ಲೂ ಆ ಕಲ್ಪನೆಗಳಿಂದ ಇತರ ಎಷ್ಟೋ ಜನರಿಗೆ 'ತೊಂದರೆ'ಯಾಗುತ್ತಿರುವಾಗ! ನನ್ನ ಬಗ್ಗೆ ಸಹಾನುಭೂತಿ ತೋರುವವರು ಯಾರಿದ್ದರು? ಯಾರೂ ಇಲ್ಲ, ಒಬ್ಬರನ್ನು ಬಿಟ್ಟು. . ."

ನಾವು ನೋಡಲಿರುವಂತೆ, ಆ 'ಒಬ್ಬರು' ಬೇರೆ ಯಾರೂ ಅಲ್ಲ, ಶ್ರೀಮಾತೆ ಶಾರದಾದೇವಿಯರು.

ಗೃಹಸ್ಥಭಕ್ತರು ನರೇಂದ್ರಾದಿಗಳ ಬಗ್ಗೆ ಸಹಾನುಭೂತಿ ತೋರದಿದ್ದುದಕ್ಕೆ ಇನ್ನೂ ಒಂದು ಪ್ರಮುಖ ಕಾರಣವಿತ್ತು. ಅದೇನೆಂದರೆ, ಅವರು ಶ್ರೀರಾಮಕೃಷ್ಣರ ಬೋಧನೆಗಳನ್ನು ಅರ್ಥ ಮಾಡಿಕೊಂಡ ಬಗೆಯೇ ಇವರಿಗಿಂತ ಸಂಪೂರ್ಣ ವಿಭಿನ್ನವಾಗಿತ್ತು. "ಶ್ರೀರಾಮಕೃಷ್ಣರು ಸಂನ್ಯಾಸದ ಆದರ್ಶವನ್ನು ಬೋಧಿಸಲೇ ಇಲ್ಲ; ಸಂಸಾರಜೀವನವೇ ಶ್ರೇಷ್ಠ ಅಂತಲೇ ಅವರು ಹೇಳುತ್ತಿದ್ದುದು. ಅವರೇ ಸ್ವತಃ ಗೃಹಸ್ಥರಾಗಿ ಗೃಹಸ್ಥಧರ್ಮವನ್ನು ಎತ್ತಿ ಹಿಡಿಯಲಿಲ್ಲವೆ! ಹಾಗಿರುವಾಗ ನೀವುಗಳು ಸಂನ್ಯಾಸಿಗಳಾಗಿ ಮಠವನ್ನು ಸ್ಥಾಪಿಸಬೇಕಾದ ಅಗತ್ಯವೇ ಇಲ್ಲ" ಎಂದು ವಾದಿಸಿದರು.* ಬಲರಾಮ, ಮಾಸ್ಟರ್ ಮಹಾಶಯ, ಸುರೇಂದ್ರ ಮೊದಲಾದ ಕೆಲವೇ ಭಕ್ತರು ಯುವಶಿಷ್ಯರ ಬೆಂಬಲಕ್ಕೆ ನಿಂತರು.

ಇವರಲ್ಲದೆ ಶಿಷ್ಯರ ನಿಲುವನ್ನು ಸಂಪೂರ್ಣವಾಗಿ ಸಮರ್ಥಿಸಿದ ಮತ್ತೊಬ್ಬರೆಂದರೆ ಶ್ರೀಶಾರದಾದೇವಿಯವರು. ತಮ್ಮ ಆಧ್ಯಾತ್ಮಿಕ ಸುತರ ಶ್ರೇಯಸ್ಸಿಗಾಗಿ ಅವರು ಶ್ರೀರಾಮಕೃಷ್ಣರಲ್ಲಿ ಕಂಬನಿಗರೆದು ಮೊರೆಯಿಟ್ಟರು: "ಪ್ರಭು, ನೀವು ನರವೇಷಧಾರಿಯಾಗಿ ಬಂದಿರಿ; ಲೀಲೆಯಾಡಿದಿರಿ; ಈ ಕೆಲವು ಮಂದಿಯೊಂದಿಗೆ ಒಡನಾಡಿದಿರಿ. ಆದರೆ ಇಷ್ಟಕ್ಕೇ ಎಲ್ಲವೂ ಮುಗಿದುಹೋಗಬೇಕೆ? ಇಷ್ಟೇ ಆದರೆ ನೀವು ಈ ದುಃಖಪೂರ್ಣ ಜಗತ್ತಿಗೆ ಅವತರಿಸಿ ಬಂದದ್ದಾದರೂ ಏಕೆ? ಆಹಾರಕ್ಕಾಗಿ ಒಂದೆಡೆಯಿಂದ ಇನ್ನೊಂದೆಡೆಗೆ ಅಲೆದಾಡುವ ಸಾಧುಗಳು ಬಹಳ ಮಂದಿ ಇದ್ದಾರೆ. ಆದರೆ ನಿಮ್ಮ ಹೆಸರಿನಲ್ಲಿ ಮನೆಬಿಟ್ಟು ಬಂದಿರುವ ನನ್ನ ಮಕ್ಕಳು ತುತ್ತು ಅನ್ನಕ್ಕಾಗಿ ಪರದಾಡುವುದನ್ನು ನಾನು ಸಹಿಸಲಾರೆ. ನಿಮ್ಮನ್ನು ಕೈಮುಗಿದು ಬೇಡಿಕೊಳ್ಳುತ್ತೇನೆ. ನಿಮ್ಮ ಹೆಸರಿನಲ್ಲಿ ತ್ಯಾಗ ಮಾಡಿ ಬಂದವರಿಗೆ ಜೀವನಾಧಾರಕ್ಕೆ ಏನೇನೂ ಕೊರತೆಯಾಗಲೇಬಾರದು. ಅವರೆಲ್ಲ ಒಟ್ಟಿಗೆ ಇದ್ದು ನಿಮ್ಮ ಧ್ಯೇಯಾದರ್ಶಗಳನ್ನು ಅನುಷ್ಠಾನ ಮಾಡಿಕೊಂಡಿರುವಂತಾಗಬೇಕು. ಮುಂದೆ, ಪ್ರಪಂಚದ ತಾಪತ್ರಯಗಳಲ್ಲಿ ತೊಳಲಿ ಬೆಂಡಾದ ಜನ ತಮ್ಮ ಬಳಿಗೆ ಬಂದಾಗ, ಇವರು ನಿಮ್ಮ ಜೀವನ-ಸಂದೇಶಗಳನ್ನು ತಿಳಿಸಿ, ಅವರಿಗೆ ಸಾಂತ್ವನ ನೀಡುವಂತಾಗಬೇಕು. ಈ ಉದ್ದೇಶಕ್ಕಾಗಿ ಬಂದವರಲ್ಲವೆ ನೀವು? ಆದರೆ

* ನೋಡಿ: ಅನುಬಂಧ ೬.

ನನ್ನ ಮಕ್ಕಳು ಹೀಗೆ ಅಲೆದಾಡುವುದನ್ನು ಕಂಡಾಗ ನನ್ನ ಹೃದಯ ಹಿಂಡಿದಂತಾಗುತ್ತದೆ.''

ಶ್ರೀಶಾರದಾದೇವಿಯವರ ವಾತ್ಸಲ್ಯಪೂರ್ಣ ಹೃದಯದಿಂದ ಹೊರಹೊಮ್ಮಿದ ಈ ಪ್ರಾರ್ಥನೆಯನ್ನು ಶ್ರೀರಾಮಕೃಷ್ಣರು ನಡೆಸಿಕೊಡದಿದ್ದಾರೆಯೆ? ಒಂದು ದಿನ ಸುರೇಂದ್ರನಾಥ ಆಫೀಸಿನಿಂದ ಮನೆಗೆ ಹಿಂದಿರುಗಿ ಎಂದಿನಂತೆ ಧ್ಯಾನಕ್ಕೆ ಕುಳಿತಿದ್ದಾನೆ; ಆಗ ಶ್ರೀರಾಮಕೃಷ್ಣರು ಅವನ ಮುಂದೆ ಕಾಣಿಸಿಕೊಂಡು ನುಡಿದರು: "ಓ! ಏನು ಮಾಡುತ್ತಿದ್ದೀಯ ನೀನು? ಅಲ್ಲಿ ನನ್ನ ಮಕ್ಕಳೆಲ್ಲ ಬೀದಿಯಲ್ಲಿ ಅಲೆದಾಡುತ್ತಿದ್ದಾರೆ. ಅವರ ಅವಸ್ಥೆಯನ್ನು ನೋಡು! ಹೋಗು, ತಡಮಾಡದೆ ಅವರಿಗೊಂದು ವ್ಯವಸ್ಥೆ ಮಾಡು.'' ತಕ್ಷಣ ಸುರೇಂದ್ರ ದಡಬಡಿಸಿ ಎದ್ದು ನರೇಂದ್ರನ ಮನೆಗೆ ಓಡಿದ. ತನಗಾದ ದರ್ಶನವನ್ನು ಬಣ್ಣಿಸಿ ಅಶ್ರುಭರಿತನಾಗಿ ಹೇಳಿದ: "ನರೇನ್, ನೀವೆಲ್ಲ ಎಲ್ಲಿಗೆ ಹೋಗುತ್ತೀರಿ? ನಾವೀಗ ಒಂದು ಬಾಡಿಗೆ ಮನೆ ಹಿಡಿಯೋಣ. ನೀವು ಹುಡುಗರೆಲ್ಲ ಅದರಲ್ಲಿ ವಾಸವಾಗಿರಿ. ಆ ಮನೆ ಶ್ರೀರಾಮಕೃಷ್ಣರ ಮಂದಿರವಾಗಿರಲಿ. ನಾವು ಗೃಹಸ್ಥರು ಆಗಾಗ ಬಂದು ನಿಮ್ಮೊಡನಿದ್ದು, ನಿಮ್ಮ ಆಧ್ಯಾತ್ಮಿಕ ಆನಂದದಲ್ಲಿ ಭಾಗಿಗಳಾಗುತ್ತೇವೆ, ಮತ್ತು ತಾಪತ್ರಯಗಳಿಂದ ಬೆಂದ ನಮ್ಮ ಹೃದಯಕ್ಕೆ ಶಾಂತಿ ತಂದುಕೊಳ್ಳುತ್ತೇವೆ. ಇದುವರೆಗೂ ನಾನು ಶ್ರೀರಾಮಕೃಷ್ಣರಿಗಾಗಿ ಒಂದಿಷ್ಟು ಹಣವನ್ನು ಖರ್ಚುಮಾಡುತ್ತಿದ್ದೆ. ಇನ್ನುಮೇಲೆ ಅದನ್ನೇ ಸಂತೋಷದಿಂದ ನಿಮಗೆ ಕೊಡುತ್ತೇನೆ.'' ಇದನ್ನು ಕೇಳುತ್ತಿದ್ದಂತೆಯೇ ನರೇಂದ್ರನಿಗೆ ಶ್ರೀರಾಮಕೃಷ್ಣರೇ ಹಿನ್ನೆಲೆಯಲ್ಲಿದ್ದುಕೊಂಡು ತಮ್ಮನ್ನು ಮುನ್ನಡೆಸುತ್ತಿದ್ದಾರೆ ಎನ್ನುವುದು ಗೋಚರವಾಯಿತು. ಹನಿಗೂಡಿದ ಕಂಗಳಿಂದ ಅವನು ಸುರೇಂದ್ರನಿಗೆ ಧನ್ಯವಾದ ತಿಳಿಸಿ ಮುಂದಿನ ಕಾರ್ಯದಲ್ಲಿ ತೊಡಗಿದ.

ದಕ್ಷಿಣೇಶ್ವರ-ಕಲ್ಕತ್ತಗಳ ನಡುವಿನ ಬಾರಾನಾಗೋರ್ (ವರಾಹನಗರ) ಎಂಬಲ್ಲಿ ಗಂಗಾತೀರದಲ್ಲೇ ಮನೆಯೊಂದು ಸಿಕ್ಕಿತು. ನಿಜಕ್ಕೂ, ಆ ಮನೆಯನ್ನು ಬಾಡಿಗೆಗೆ ಹಿಡಿಯುವವರು ಒಳ್ಳೇ ಧೀರರೇ ಆಗಿರಬೇಕಾಗಿತ್ತು. ಅದೊಂದು ಪಾಳುಬಿದ್ದಿದ್ದ, ಎಲ್ಲರೂ ಕೈಬಿಟ್ಟಿದ್ದ ಮಹಡಿ ಮನೆ. ಈಗಲೋ ಆಗಲೋ ಕುಸಿದು ಬೀಳಲು ಸಿದ್ಧವಾದಂತಿತ್ತು. ಜೊತೆಗೆ, 'ದೆವ್ವದ ಮನೆ' ಎಂಬ ಕೀರ್ತಿ ಬೇರೆ ಅದಕ್ಕೆ! ನೆಲ ಅಂತಸ್ತು ಹಾವು ಹಲ್ಲಿಗಳ ಆವಾಸಸ್ಥಾನ. ಕಾಂಪೌಂಡಿನ ಗೇಟು ಬಿದ್ದುಹೋಗಿ ಎಷ್ಟೋ ವರ್ಷವಾಗಿತ್ತು. ಮೇಲಿನ ಮಾಳಿಗೆ ಇದ್ದುದರಲ್ಲಿ ವಾಸಿಯೇನೋ. ಆದರೆ ಅಲ್ಲೊಂದು ಉದ್ದನೆಯ ಜಗಲಿಯಿದ್ದು ಅದೂ ಶಿಥಿಲವಾಗಿತ್ತು. ಈ ಯುವಕರ ವಾಸಕ್ಕೆಂದು ಗೊತ್ತುಪಡಿಸಿದ ಕೋಣೆಯೂ ಅಷ್ಟೆ. ಮನುಷ್ಯರ ವಾಸಕ್ಕಂತೂ ಯೋಗ್ಯವಾಗಿರಲಿಲ್ಲ! ಬಹುಶಃ ಆ ಯುವಸಂನ್ಯಾಸಿಗಳಲ್ಲದೆ ಬೇರೆ ಯಾರೂ ಅಲ್ಲಿ ವಾಸಿಸುವಂತಹ ಧೈರ್ಯ ಮಾಡಿದ್ದಿರಲಾರರು. ಮನೆಯ ಒಂದು ಬದಿಯಲ್ಲಿ ಕಳೆಗಿಡಗಳು ಬಳ್ಳಿಗಳು ಹೇರಳವಾಗಿ ಬೆಳೆದುಕೊಂಡು ಕಾಡಿನಂತಿತ್ತು. ಹಿಂಬಾಗದಲ್ಲೊಂದು ಕೊಳ—ಅದು ಹಚ್ಚಹಸಿರಾದ ಪಾಚಿಯಿಂದ ತುಂಬಿದ್ದುದಲ್ಲದೆ ಲಕ್ಷಗಟ್ಟಲೆ ಸೊಳ್ಳೆಗಳಿಗೆ ಉಗಮಸ್ಥಾನವಾಗಿತ್ತು. ಒಟ್ಟಿನಲ್ಲಿ ಆ ಮನೆಯು ಒಳಹೊರಗೆಲ್ಲ ಎಂಥದೋ ಪ್ರೇತಕಳೆ! ಇದೇ ಶ್ರೀರಾಮಕೃಷ್ಣ ಮಹಾಸಂಘದ ಮೊಟ್ಟಮೊದಲ 'ಮಠ'. ಆದರೆ ಎಲ್ಲ ಬಿಟ್ಟು ಈ ಕಟ್ಟಡವನ್ನೇಕೆ ಹಿಡಿದರು? ಕಾರಣ ತುಂಬ ಸರಳ—ಬಾಡಿಗೆ ಬಹಳ ಕಡಿಮೆ; ತಿಂಗಳಿಗೆ ಹನ್ನೊಂದು ರೂಪಾಯಿ. ಜೊತೆಗೆ ಇನ್ನೂ ಕೆಲವು ಅನುಕೂಲಗಳಿದ್ದುವು—ಇದು ಗಂಗಾನದಿಗೆ

ಹತ್ತಿರದಲ್ಲೇ ಇದ್ದುದರಿಂದ ಸ್ನಾನಾದಿಗಳಿಗೆ ಬಹಳ ಅನುಕೂಲವಾಗಿತ್ತು. ಅಲ್ಲದೆ ಶ್ರೀರಾಮಕೃಷ್ಣರ ಅಂತ್ಯಕ್ರಿಯೆ ನಡೆದ ಪವಿತ್ರ ಸ್ಥಳವೂ ಇಲ್ಲಿಗೆ ಹತ್ತಿರ. ಜೊತೆಗೆ ಇದು ನಗರದ ಗಡಿಬಿಡಿ ಗಲಾಟೆಗಳಿಂದ ದೂರದಲ್ಲಿದ್ದು ತುಂಬ ಪ್ರಶಾಂತವಾಗಿತ್ತು. ಆದ್ದರಿಂದ ಯುವಶಿಷ್ಯರು ಸಂತೋಷದಿಂದಲೇ ಈ ಮನೆಯನ್ನು ತಮ್ಮದನ್ನಾಗಿ ಮಾಡಿಕೊಂಡರು.

ಯುವಶಿಷ್ಯರು ಒಬ್ಬೊಬ್ಬರಾಗಿ ಬಂದು ಈ ಮಠದಲ್ಲಿ ವಾಸಿಸಲಾರಂಭಿಸಿದರು. ವಾರಾಣಸಿಯಲ್ಲಿದ್ದ ತಾರಕನಾಥನಿಗೆ ನರೇಂದ್ರ ತಂತಿ ಕೊಟ್ಟು ಕರೆಸಿದ. ಅವನು ಬಂದು ಹಿರಿಯಗೋಪಾಲನೊಡನೆ ಮಠದಲ್ಲಿ ವಾಸಿಸಲಾರಂಭಿಸಿದ. ಸುಮಾರು ಒಂದು ತಿಂಗಳ ಬಳಿಕ ಮಠದ ವಿಚಾರ ತಿಳಿದು ಕಾಳೀಪ್ರಸಾದನೂ ಬೃಂದಾವನದಿಂದ ಹಿಂದಿರುಗಿ ಬಂದ. ಹೀಗೆ ಶ್ರೀರಾಮಕೃಷ್ಣರು ದೇಹತ್ಯಾಗ ಮಾಡಿದ ಆರು ವಾರಗಳಲ್ಲಿ ಮಠ ಅಸ್ತಿತ್ವಕ್ಕೆ ಬಂದಿತು.

ಪ್ರಾರಂಭದಲ್ಲಿ ಮಠದಲ್ಲೇ ವಾಸವಾಗಿದ್ದವರೆಂದರೆ ತಾರಕನಾಥ, ಹಿರಿಯ ಗೋಪಾಲ ಮತ್ತು ಕಾಳೀಪ್ರಸಾದ ಈ ಮೂವರು. ಉಳಿದವರೆಲ್ಲ ಆಗಾಗ ಬಂದು ಹೋಗುತ್ತಿದ್ದರು. ಕೆಲವರು ತಮ್ಮ ಕಾಲೇಜು ವಿದ್ಯಾಭ್ಯಾಸವನ್ನು ಪುನರಾರಂಭಿಸಿದ್ದರು. ಮಠವನ್ನು ಸೇರುವುದೋ ಬಿಡುವುದೋ ಎಂದು ಅನೇಕರ ಮನಸ್ಸು ಇನ್ನೂ ಹೊಯ್ದಾಡುತ್ತಿತ್ತು. ನರೇಂದ್ರ ತನ್ನ ಈ ಸ್ನೇಹಿತರ ಮನೆಗಳಿಗೇ ಹೋಗಿ, ತಕ್ಷಣ ಹೊರಟುಬಂದು ಮಠವನ್ನು ಸೇರಿಕೊಳ್ಳುವಂತೆ ತನ್ನ ಪ್ರಖರ ವಿಚಾರಧಾರೆಯಿಂದ ಅವರನ್ನು ಸ್ಫೂರ್ತಿಗೊಳಿಸಲಾರಂಭಿಸಿದ. ಅವರೊಂದಿಗೆ ಹಲವಿಧವಾಗಿ ಚರ್ಚಿಸಿ, ತ್ಯಾಗಜೀವನವೇ ಪರಮಶ್ರೇಷ್ಠವಾದದ್ದು ಎಂದು ಮನಮುಟ್ಟುವಂತೆ ವಿವರಿಸಿದ. ಶ್ರೀರಾಮಕೃಷ್ಣರ ಜೀವನ ಮತ್ತು ಸಂದೇಶಗಳನ್ನು ಉಜ್ವಲವಾಗಿ ವರ್ಣಿಸಿ ಅವರ ಮನಸ್ಸನ್ನೂ ಹೃದಯವನ್ನೂ ಗೆದ್ದುಕೊಳ್ಳುವ ಪ್ರಯತ್ನ ಮಾಡಿದ.

ಇದೇ ಸಂದರ್ಭದಲ್ಲಿ ಈ ಯುವಕರೆಲ್ಲರ ವೈರಾಗ್ಯ ಮನೋಭಾವವೂ ಸುದೃಢಗೊಂಡು ಒಂದು ನಿಶ್ಚಿತ ನಿಲುವಿಗೆ ಬಂದು ನಿಲ್ಲುವಂಥ ಪ್ರಸಂಗವೊಂದು ತಾನಾಗಿಯೇ ಒದಗಿಬಂತು. ಶಿಷ್ಯರಲ್ಲೊಬ್ಬನಾದ ಬಾಬುರಾಮನ ತಾಯಿ ಮಾತಂಗಿನೀದೇವಿ ಶ್ರೀರಾಮಕೃಷ್ಣರ ಪರಮಭಕ್ತೆ. ಈ ತರುಣ ಶಿಷ್ಯರ ಬಗ್ಗೆ ಅವಳಿಗೆ ವಿಶೇಷ ಆದರ, ಅಭಿಮಾನ. ಅವಳು ತ್ಯಾಗಜೀವನವನ್ನು ಸ್ವೀಕರಿಸಿದ್ದ ನರೇಂದ್ರ ಹಾಗೂ ಇನ್ನಿಬ್ಬರು ಮೂವರನ್ನು ತನ್ನ ಹಳ್ಳಿಯ ಮನೆಗೆ ಬಂದು ಆತಿಥ್ಯ ಸ್ವೀಕರಿಸುವಂತೆ ಕೋರಿದಳು. ಈ ಸುದ್ದಿ ತಿಳಿದಾಗ ಇನ್ನೂ ಅನೇಕರು ನರೇಂದ್ರನೊಂದಿಗೆ ತಾವೂ ಹೋಗಲು ಉತ್ಸಾಹ ತಾಳಿದರು. ಕಡೆಗೆ ಅದು ಸಾಕಷ್ಟು ದೊಡ್ಡ ಗುಂಪೇ ಆಯಿತು. ೧೮೮೬ರ ಡಿಸೆಂಬರಿನಲ್ಲೊಂದು ದಿನ ನರೇಂದ್ರ, ಬಾಬುರಾಮ, ಶರಚ್ಚಂದ್ರ, ಶಶಿಭೂಷಣ, ತಾರಕನಾಥ, ಕಾಳೀಪ್ರಸಾದ, ನಿರಂಜನ, ಗಂಗಾಧರ, ಶಾರದಾಪ್ರಸನ್ನ—ಇಷ್ಟು ಜನ ರೈಲುಮಾರ್ಗವಾಗಿ ಹೊರಟರು. ತಮ್ಮೊಡನೆ ತಾಳ ತಂಬೂರಿ ತಬಲ ಮೊದಲಾದ ವಾದ್ಯಗಳನ್ನು ಒಯ್ದಿದ್ದರು. ಉದ್ದಕ್ಕೂ ಭಜನೆ ಮಾಡುತ್ತ, ಭಗವದಾನಂದವನ್ನು ಸವಿಯುತ್ತ ಪ್ರಯಾಣ ಮಾಡಿದರು. ಹರಿಪಾಲ ನಿಲ್ದಾಣದಲ್ಲಿ ಇಳಿದು ಅಲ್ಲಿಂದ ಬಾಬುರಾಮನ ಊರಾದ ಆಂಟ್‌ಪುರಕ್ಕೆ ಗಾಡಿಯಲ್ಲಿ ಸಾಗಿದರು. ಎಲ್ಲರನ್ನೂ ಮಾತಂಗಿನೀ ದೇವಿ ವಾತ್ಸಲ್ಯದಿಂದ ಬರಮಾಡಿಕೊಂಡಳು.

ಆಂಟ್‌ಪುರ ಒಂದು ಸುಂದರ ಗ್ರಾಮ. ಆ ನೀರವ ಪ್ರಶಾಂತ ವಾತಾವರಣದಲ್ಲಿ, ಈ ಯುವಸಾಧಕರೊಳಗಿನ ಆಧ್ಯಾತ್ಮಿಕ ಜ್ವಾಲೆ ಪ್ರಜ್ವಲಿಸಲಾರಂಭಿಸಿತು. ಆ ಜ್ವಾಲೆಗೆ ನರೇಂದ್ರನ ಉತ್ಸಾಹದ ಬೀಸಣಿಗೆ ಗಾಳಿ ಬೇರೆ! ಸ್ವಯಂ ಶ್ರೀರಾಮಕೃಷ್ಣರ ಚೈತನ್ಯವೇ ಅವನ ಮೂಲಕ ಮಾತನಾಡುತ್ತಿದೆಯೋ, ಅವನ ಮೂಲಕ ಕೆಲಸ ಮಾಡುತ್ತಿದೆಯೋ ಎನ್ನುವಂತಿತ್ತು. ಸಂನ್ಯಾಸಜೀವನದ ದರ್ಶನ ಅವನ ಕನಸು ಮನಸ್ಸುಗಳನ್ನೆಲ್ಲ ತುಂಬಿ ಬಿಟ್ಟಿತ್ತು. ಆದ್ದರಿಂದ ಅವನು ಆಗಾಗ ಗುಡುಗುತ್ತಿದ್ದ: "ಸಿಂಹಸದೃಶ ವ್ಯಕ್ತಿತ್ವ ನಿರ್ಮಾಣವೇ ನಮ್ಮ ಜೀವನದ ಧ್ಯೇಯವಾಗಲಿ. ಅದೇ ನಮ್ಮ ಏಕಮಾತ್ರ ಆಧ್ಯಾತ್ಮಿಕ ಸಾಧನೆಯೂ ಆಗಲಿ. ನೀರಸ-ನಿರರ್ಥಕ ಅಧ್ಯಯನವನ್ನೆಲ್ಲ ಬಿಟ್ಟುಬಿಡಿ. ಜಗತ್ತಿನ ಥಳಕಿನ ವಿಲಾಸಗಳು ನಮ್ಮ ಮನಸ್ಸನ್ನು ಕ್ಷಣಕಾಲವೂ ಸೆಳೆಯದಿರಲಿ. ಭಗವಂತನ ಸಾಕ್ಷಾತ್ಕಾರವೇ ನಮ್ಮ ಜೀವನದ ಏಕಮಾತ್ರ ಗುರಿ. ನಮ್ಮ ಗುರುದೇವರು ತಮ್ಮ ಜೀವನದ ಮೂಲಕ ತೋರಿಸಿಕೊಟ್ಟ ಆದರ್ಶವೇ ಇದು—ನಾವು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲೇ ಬೇಕು."

ಅವನ ಈ ಸ್ಫೂರ್ತಿಯ ಕರೆಯನ್ನು ಕೇಳಿ ಗುರುಭಾಯಿಗಳೆಲ್ಲ ಒಮ್ಮತದಿಂದ ಸಾಧನೋನ್ಮುಖರಾದರು. ತಮ್ಮನ್ನೆಲ್ಲ ಯಾವುದೋ ಅದ್ಭುತ ಶಕ್ತಿ ಒಂದುಗೂಡಿಸುತ್ತಿರುವಂತೆ ಅವರಿಗೆ ಭಾಸವಾಗುತ್ತಿತ್ತು. ತಾವೆಲ್ಲ ಒಂದೇ ಶರೀರ, ಒಂದೇ ಮನಸ್ಸು, ಒಂದೇ ಆತ್ಮವಾಗಿ ಬೆಳೆಯುತ್ತಿರುವ ಅನುಭವವಾಯಿತು. ಹಗಲಿರುಳೂ ಸಾಧನೆಯಲ್ಲಿ ಮುಳುಗಿಹೋದರು. ಅವರ ಮನಸ್ಸಿನಲ್ಲಿ ಶ್ರೀರಾಮಕೃಷ್ಣರೂಪ; ನಾಲಿಗೆಯಲ್ಲಿ ಶ್ರೀರಾಮಕೃಷ್ಣನಾಮ! ಅವರೆಲ್ಲರ ಮನಸ್ಸಿನಲ್ಲೂ ತ್ಯಾಗಜೀವನದ ಆದರ್ಶ ಜಾಗೃತವಾಗಿಬಿಟ್ಟಿತು; ಸಂನ್ಯಾಸಜೀವನವನ್ನು ಸ್ವೀಕರಿಸುವ ಇಚ್ಛೆ ಪ್ರಜ್ವಲಿಸಲಾರಂಭಿಸಿತು. ಈಗ ಅವರಲ್ಲಿ, ತಮ್ಮ ಉದ್ಧಾರಕ್ಕಾಗಿ ಮಾತ್ರವಲ್ಲದೆ ಪರಹಿತಕ್ಕಾಗಿ ಸಂನ್ಯಾಸಜೀವನವನ್ನು ಕೈಗೊಳ್ಳಬೇಕೆಂಬ ಆಕಾಂಕ್ಷೆ ಕ್ರಮೇಣ ಬಲವಾಯಿತು. ಪ್ರತಿಯೊಬ್ಬನ ನಿರ್ಧಾರಕ್ಕೆ ಇತರರು ಸಾಕ್ಷಿಗಳಾಗಿರುವಂತೆ, ಎಲ್ಲರೂ ಒಟ್ಟಾಗಿ ಸಂನ್ಯಾಸ ಸ್ವೀಕರಿಸುವ ಮನಸ್ಸು ಮಾಡಿದರು. ಪ್ರತಿಯೊಬ್ಬನೂ ತನ್ನ ಸೋದರಶಿಷ್ಯರಲ್ಲಿ ಅಪಾರ ಆಧ್ಯಾತ್ಮಿಕ ಶಕ್ತಿ ವ್ಯಕ್ತವಾಗಿರುವುದನ್ನು ಕಾಣುತ್ತಿದ್ದ. ಇದರಿಂದ ಅವರಲ್ಲಿ ಪರಸ್ಪರ ಪ್ರೀತಿ, ಗೌರವ ಪೂಜ್ಯತೆಯ ಭಾವ ನೂರ್ಮಡಿಗೊಂಡಿತು. ಅವರ ಪರಸ್ಪರ ಬಂಧನ ಮತ್ತಷ್ಟು ಬಲಗೊಳ್ಳತೊಡಗಿತು. ಇದು ತೀರ ಸಹಜವೇ ಎನ್ನಬೇಕು. ಏಕೆಂದರೆ, ಅವರೆಲ್ಲರ ಹೃದಯಗಳಲ್ಲೂ ಈಗ ಶ್ರೀರಾಮಕೃಷ್ಣರೇ ನೆಲಸಿಬಿಟ್ಟಿದ್ದರು.

ಅದೊಂದು ನಿರ್ಮಲಾಕಾಶದ ರಾತ್ರಿ; ಎಲ್ಲೆಲ್ಲೂ ಮಹಾಮೌನ ತಾನೇತಾನಾಗಿದೆ. ಈ ಯುವಸಾಧಕರೆಲ್ಲ ಸೇರಿ ಒಂದು ಧುನಿಯನ್ನು ಹೊತ್ತಿಸಿಕೊಂಡು ಸುತ್ತಲೂ ಕುಳಿತು ಧ್ಯಾನಮಗ್ನರಾಗಿದ್ದಾರೆ. ಧ್ಯಾನ ನಿರಾತಂಕವಾಗಿ ಸಾಗಿದೆ. ಬಹಳ ಹೊತ್ತಿನ ಮೇಲೆ ಈಗ ಎಲ್ಲರೂ ಬಹಿರ್ಮುಖರಾದರು. ನರೇಂದ್ರ ತನ್ನ ಗುರುಭಾಯಿಗಳ ಮುಂದೆ ತ್ಯಾಗಜೀವನದ ಘನತೆಯನ್ನು ಬಣ್ಣಿಸಲಾರಂಭಿಸಿದ. ಆಗ ಅವನಲ್ಲಿ ಮಹಾಕಾರುಣಿಕ ಏಸುಕ್ರಿಸ್ತನ ಸ್ಫುರಣೆಯಾಗಿಬಿಟ್ಟಿತು. ಅವನು ಏಸುವಿನ ಅದ್ಭುತ ಜೀವನ ಕಥೆಯನ್ನು ಸ್ಫೂರ್ತಿಯುತನಾಗಿ ವಿವರಿಸತೊಡಗಿದ. ಕ್ರಿಸ್ತನ ಜನನದಿಂದಾರಂಭಿಸಿ, ಅವನ ಸಂಪೂರ್ಣ ಜೀವನ, ಪರಿನಿರ್ಯಾಣ ಹಾಗೂ ಪುನರುತ್ಥಾನ—ಇವುಗಳನ್ನೆಲ್ಲ ಮನಮುಟ್ಟುವಂತೆ ತಿಳಿಸಿದ. ಎಲ್ಲ ಅಡಚಣೆಗಳನ್ನೂ ಎದುರಿಸಿ, ಏಸುಕ್ರಿಸ್ತನ

ಜೀವನ-ಬೋಧನೆಗಳನ್ನು ಜಗತ್ತಿನಾದ್ಯಂತ ಪ್ರಸಾರ ಮಾಡುವಂತೆ ಸಂತ ಪಾಲ್‌ನನ್ನು ಪ್ರೇರೇಪಿಸಿದ ಶಕ್ತಿ-ಉತ್ಸಾಹಗಳು, ಈಗ ಈ ಯುವಸಾಧಕರಲ್ಲೂ ಸ್ವಲ್ಪಮಟ್ಟಿಗೆ ಜಾಗೃತವಾಗುವಂತೆ ಮಾಡಿಬಿಟ್ಟಿತು—ನರೇಂದ್ರನ ಆ ಅದ್ಭುತ ವಾಗ್ವೈಖರಿ! ಅವರಲ್ಲೆಲ್ಲ ನವೋತ್ಸಾಹ ಉತ್ಪನ್ನವಾಗುವಂತೆ ಅವನು ನುಡಿದ: "ನೀವು ಪ್ರತಿಯೊಬ್ಬರೂ ಏಸುಕ್ರಿಸ್ತರೇ ಆಗಿಬಿಡಬೇಕು. ಮತ್ತು ಅವನಂತೆಯೇ ಜಗತ್ತಿನ ನೊಂದ ಜನತೆಯನ್ನು ಸಾಂತ್ವನಗೊಳಿಸುವ ಪ್ರಯತ್ನ ಮಾಡಬೇಕು. ಕ್ರಿಸ್ತನಂತೆಯೇ ನೀವೂ ನಿಮ್ಮ ಸ್ವಾರ್ಥವನ್ನು ತ್ಯಜಿಸಬೇಕು. ಮತ್ತು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು."

ಉರಿಯುತ್ತಿರುವ ಧುನಿಯ ಮುಂದೆ ಕುಳಿತ ಅವರೆಲ್ಲರ ಮುಖಗಳು ಅಗ್ನಿತೇಜದಿಂದ ಬೆಳಗುತ್ತಿವೆ. ಉರಿಯುವ ಕಟ್ಟಿಗೆಯ ಚಟಪಟ ಸದ್ದನ್ನು ಬಿಟ್ಟರೆ ನೀರವ ಮೌನದ ಆ ರಾತ್ರಿಯಲ್ಲಿ ಎಲ್ಲರೂ ಪರಸ್ಪರರ ಸಮ್ಮುಖದಲ್ಲಿ ಹಾಗೂ ಸರ್ವಸಾಕ್ಷಿಯಾದ ಭಗವಂತನ ಸಮ್ಮುಖದಲ್ಲಿ ಸಂನ್ಯಾಸದ ವ್ರತವನ್ನು ಕೈಗೊಂಡರು. ಹೀಗೆ ಮಹಾತ್ಯಾಗ ಮೈದಳೆಯಿತು ಆ ಹಳ್ಳಿಯಲ್ಲಿ; ಮಹಾತ್ಯಾಗದ ಫಲವಾದ ಮಹಾನಂದ ಹಾಗೂ ಅಮೃತತ್ವದ ಅಲೆ ಅಲ್ಲೆಲ್ಲ ವ್ಯಾಪಿಸಿತು.

ಬಳಿಕ ಅವರಿಗೆ ತಿಳಿದುಬಂತು—ಇವೆಲ್ಲ ನಡೆದದ್ದು ಕ್ರಿಸ್‌ಮಸ್ ಈವ್ ದಿನದಂದು (ಎಂದರೆ, ಕ್ರಿಸ್‌ಮಸ್ ಹಬ್ಬದ ಹಿಂದಿನ ದಿನವಾದ ಡಿಸೆಂಬರ್ ೨೪ರಂದು) ಎಂದು. ತನಗರಿವಿಲ್ಲದಂತೆಯೇ ಅಂದು ನರೇಂದ್ರ ಕ್ರಿಸ್ತಭಾವದಿಂದ ರಂಜಿತನಾಗಿದ್ದ; ಕ್ರಿಸ್ತನ ಜೀವನದಿಂದ ಸ್ಫೂರ್ತಿಗೊಂಡಿದ್ದ; ಅಲ್ಲದೆ, ಅದನ್ನೇ ಇತರರಿಗೂ ತಿಳಿಸಿ ಅವರಲ್ಲೂ ಸ್ಫೂರ್ತಿಯುಂಟುಮಾಡಿದ್ದ. ಇದೊಂದು ಅಪೂರ್ವ ಸಂಯೋಗವೇ ಸರಿ.

ಮುಂದೊಮ್ಮೆ ಸ್ವಾಮಿ ಶಿವಾನಂದರು (ತಾರಕನಾಥ) ಈ ದಿನಗಳನ್ನು ನೆನಪಿಸಿಕೊಂಡು ಹೇಳುತ್ತಾರೆ: "ನಿಜಕ್ಕೂ ನಾವೆಲ್ಲರೂ ಸೇರಿ ಸುಸಂಘಟಿತರಾದದ್ದೇ ಆಂಟ್‌ಪುರದಲ್ಲಿ. ಶ್ರೀರಾಮಕೃಷ್ಣರು ಹಿಂದೆಯೇ ನಮ್ಮನ್ನೆಲ್ಲ ಸಂನ್ಯಾಸಿಗಳನ್ನಾಗಿ ಮಾಡಿದ್ದರಾದರೂ ಆ ತ್ಯಾಗ-ವೈರಾಗ್ಯ ಭಾವ ಆಂಟ್‌ಪುರದಲ್ಲಿ ದೃಢಪಟ್ಟಿತು."

ಈ ಯುವಕರು ಆಂಟ್‌ಪುರದಲ್ಲಿ ಸುಮಾರು ಒಂದು ವಾರ ಇದ್ದು, ಹಿಂದಿರುಗಿ ಬರುವಾಗ ತಾರಕೇಶ್ವರಕ್ಕೆ ಹೋಗಿ, ಅಲ್ಲಿ ಸಂನ್ಯಾಸಿಗಳ ದೇವನಾದ ಶಿವನನ್ನು ಪೂಜಿಸಿ ಕಲ್ಕತ್ತಕ್ಕೆ ಮರಳಿದರು.

ಇದಾದ ಕೆಲವೇ ದಿನಗಳಲ್ಲಿ ಶಶಿಭೂಷಣ, ಶರಚ್ಚಂದ್ರ, ಶಾರದಾಪ್ರಸನ್ನ, ನಿರಂಜನ, ಸುಬೋಧ ಹಾಗೂ ಬಾಬುರಾಮ—ಇವರೆಲ್ಲ ಒಬ್ಬೊಬ್ಬರಾಗಿ ಬಂದು ಬಾರಾನಾಗೋರ್ ಮಠದಲ್ಲಿ ನೆಲಸಿದರು. ಇಷ್ಟು ದಿನ ವೋಂಘೀರ್ ಎಂಬಲ್ಲಿದ್ದ ರಾಖಾಲನೂ ಜನವರಿಯ ವೇಳೆಗೆ ಹಿಂದಿರುಗಿದ. ಗಂಗಾಧರ ಈ ವೇಳೆಗಾಗಲೇ ಸಂಘಕ್ಕೆ ಸೇರಿಕೊಂಡಿದ್ದನಾದರೂ ಮರು ವರ್ಷ ಟಿಬೆಟ್ಟಿಗೆ ಯಾತ್ರಿಕನಾಗಿ ಹೋಗಿ, ಮೂರು ವರ್ಷಗಳ ಬಳಿಕ ಹಿಂದಿರುಗಿದ ಮೇಲಷ್ಟೇ ಮಠದಲ್ಲಿ ನೆಲೆನಿಂತ. ಬೃಂದಾವನಕ್ಕೆ ಹೋಗಿದ್ದ ಲಾಟು ಆರು ತಿಂಗಳ ಬಳಿಕ, ಮತ್ತು ಶಾರದಾದೇವಿಯವರ ಜೊತೆಯಲ್ಲಿ ಯಾತ್ರೆ ಹೋಗಿದ್ದ ಯೋಗೀಂದ್ರ ಒಂದು ವರ್ಷದ ಮೇಲೆ ಮಠಕ್ಕೆ ಸೇರಿದರು. ಹರಿನಾಥನೂ ೧೮೮೭ರ ಸುಮಾರಿಗೆ ಸೇರಿಕೊಂಡ. ಹರಿಪ್ರಸನ್ನ ಕಾರಣಾಂತರದಿಂದ ತುಂಬ ತಡವಾಗಿ, ಎಂದರೆ, ೧೮೯೫ರಲ್ಲಿ ಸೇರಿದ.

ಹೀಗೆ ನರೇಂದ್ರನ ನಾಯಕತ್ವದಲ್ಲಿ ರಾಮಕೃಷ್ಣಸಂಘವೆಂಬುದು ಒಂದು

ರೂಪಕ್ಕೆ ಬಂದಿತು. ಈ ಮಧ್ಯೆ ಅವನು ತನ್ನ ಮನೆಯ ಕಡೆಗೂ ಗಮನ ಹರಿಸ ಬೇಕಾಗಿತ್ತು. ಅವನ ಮನೆಗೆ ಸಂಬಂಧಿಸಿದ ಮೊಕದ್ದಮೆ ನ್ಯಾಯಾಲಯದಲ್ಲಿ ನಡೆಯುತ್ತಲಿದ್ದು ಅವನೇ ಓಡಾಡಬೇಕಾಗಿತ್ತು. ಆದರೆ ತಿಂಗಳಲ್ಲಿ ಹೆಚ್ಚಿನ ದಿನಗಳನ್ನು ಮಠದಲ್ಲೇ ಕಳೆಯುತ್ತಿದ್ದ. ಹೀಗೆ ಅವನು ಆಗಾಗ ಕೆಲವು ದಿನಗಳ ಮಟ್ಟಿಗೆ ಅಲ್ಲಿ ಇಲ್ಲಿ ಹೋಗಿಬರುತ್ತಿದ್ದನಾದರೂ ಮುಂದೆ ಪರಿವ್ರಾಜಕ ಸಂನ್ಯಾಸಿಯಾಗಿ ಸುದೀರ್ಘ ಪ್ರಯಾಣ ಕೈಗೊಳ್ಳುವವರೆಗೂ, ಸುಮಾರು ಮೂರು ವರ್ಷಗಳ ಕಾಲ ನಿರಂತರವಾಗಿ ತನ್ನ ಸೋದರಶಿಷ್ಯರಿಗೆ ಮಾರ್ಗದರ್ಶನ ನೀಡುತ್ತಿದ್ದ; ಅವರಲ್ಲಿ ಮತ್ತೆಮತ್ತೆ ಸ್ಫೂರ್ತಿ ತುಂಬುತ್ತಿದ್ದ.

ಬಾರಾನಾಗೋರ್ ಮಠದಲ್ಲಿ, ಶ್ರೀರಾಮಕೃಷ್ಣರು ಜೀವಂತವಾಗಿದ್ದುಕೊಂಡು ಸದಾ ತಮ್ಮನ್ನು ಹರಸುತ್ತಿರುವಂತೆ ಆ ಯುವಸಂನ್ಯಾಸಿಗಳಿಗೆ ಭಾಸವಾಗುತ್ತಿತ್ತು. ಪ್ರತಿದಿನವೂ ಶ್ರೀರಾಮಕೃಷ್ಣರಿಗೆ ಭಕ್ತಿಯುತ ಪೂಜೆ ನೆರವೇರುತ್ತಿತ್ತು. ಅಂತಸ್ಸತ್ವವನ್ನು ಬಡಿದೆಬ್ಬಿಸುವಂತಹ ಭಜನೆ-ವೇದಘೋಷಗಳು ನಡೆಯುತ್ತಿದ್ದುವು. ಶ್ರೀರಾಮಕೃಷ್ಣರಿಗೆ ಪುಷ್ಪಾಲಂಕಾರ ಮಾಡಿ, ಧೂಪದೀಪಾದಿಗಳನ್ನು ಹಚ್ಚಿ, ಆರತಿ ಬೆಳಗಿ, ಶಂಖ-ಜಾಗಟೆ ಗಳನ್ನು ಮೊಳಗಿಸುತ್ತ ದಿವ್ಯಪೂಜೆಯನ್ನು ಮಾಡುತ್ತಿದ್ದರು. ಅಲ್ಲದೆ ಪ್ರತಿದಿನವೂ ಮಡಿಯಲ್ಲಿ ತಯಾರಿಸಿದ ಆಹಾರವನ್ನು ನೈವೇದ್ಯ ಮಾಡುತ್ತಿದ್ದರು. ಸಂಜೆ ಆರತಿಯ ವೇಳೆಗೆ ಎಲ್ಲರೂ ಸೇರಿ,

*ಜಯ ಶಿವ ಓಂಕಾರ ಭಜ ಶಿವ ಓಂಕಾರ*
*ಬ್ರಹ್ಮವಿಷ್ಣು ಸದಾಶಿವ ಹರಹರ ಮಹಾದೇವ*

ಎಂಬ ನಾಮಾವಳಿಯನ್ನು ಉಚ್ಚ ಕಂಠದಿಂದ ಆನಂದೋತ್ಸಾಹಭರಿತರಾಗಿ ಹಾಡು ತ್ತಿದ್ದರು.

ಈ ಯುವಸಾಧಕರೆಲ್ಲ ಅಂದು ಆಂಟ್‌ಪುರದಲ್ಲಿ ಧುನಿಯ ಮುಂದೆ ಕುಳಿತು ಸಂನ್ಯಾಸವ್ರತವನ್ನು ಕೈಗೊಂಡಿದ್ದರೂ ಅದು ಶಾಸ್ತ್ರೋಕ್ತವಾಗಿ, ನಿಯಮಗಳಿಗನುಸಾರ ವಾಗಿ ನಡೆದಿರಲಿಲ್ಲ. ಆದ್ದರಿಂದ ಈಗ ತಾವು ವಿಧಿವತ್ತಾಗಿ ಸಂನ್ಯಾಸ ಸ್ವೀಕರಿಸುವ ಬಗ್ಗೆ ನರೇಂದ್ರ ತನ್ನ ಸೋದರಶಿಷ್ಯರ ಅಭಿಪ್ರಾಯ ಕೇಳಿದ. ಅವರೆಲ್ಲರೂ ಅದಕ್ಕೆ ಹೃತ್ಪೂ ರ್ವಕವಾಗಿ ಸಮ್ಮತಿಸಿದರು. ವಿರಜಾ ಹೋಮದ ಹಾಗೂ ಸಂನ್ಯಾಸಸ್ವೀಕಾರಕ್ಕೆ ಸಂಬಂಧ ಪಟ್ಟ ಇತರ ಕ್ರಮ-ನಿಯಮಗಳನ್ನು ಕಾಳೀಪ್ರಸಾದ ತಿಳಿದುಕೊಂಡು ಬಂದಿದ್ದ. ಜನವರಿ ಮೂರನೇ ವಾರದಲ್ಲಿ ಒಂದು ದಿನವನ್ನು ಗೊತ್ತುಪಡಿಸಲಾಯಿತು. ಅಂದು ಮುಂಜಾನೆ ಶಿಷ್ಯರೆಲ್ಲ ಗಂಗೆಯಲ್ಲಿ ಮಿಂದು, ಶ್ರೀರಾಮಕೃಷ್ಣರ ಅವಶೇಷ ಹಾಗೂ ಭಾವಚಿತ್ರ ವನ್ನಿರಿಸಿ ಪೂಜಿಸುತ್ತಿದ್ದ ಕೋಣೆಯಲ್ಲಿ ಸೇರಿದರು. ಶಶಿ ಎಂದಿನಂತೆ ಶ್ರೀರಾಮಕೃಷ್ಣರ ಪೂಜೆ ಮಾಡಿದ. ಬಳಿಕ ವಿರಜಾ ಹೋಮ ಪ್ರಾರಂಭ. ಹೋಮಕ್ಕೆ ಸಂಬಂಧಿಸಿದ ಮಂತ್ರಗಳನ್ನು ಕಾಳೀಪ್ರಸಾದ ಉಚ್ಚರಿಸುತ್ತಿದ್ದಂತೆ ಒಬ್ಬೊಬ್ಬನಾಗಿ ಎಲ್ಲರೂ ಎಳ್ಳು-ತುಪ್ಪ ಸೇರಿಸಿದ ಬಿಲ್ವಪತ್ರೆಯನ್ನು ಅಗ್ನಿಕುಂಡದಲ್ಲಿ ಆಹುತಿ ಕೊಟ್ಟರು. ಮೊದಲು ನರೇಂದ್ರ, ಬಳಿಕ ರಾಖಾಲ, ನಿರಂಜನ, ಶಶಿ ಹಾಗೂ ಇತರರು ಮಂತ್ರವನ್ನುಚ್ಚರಿಸುತ್ತ ಆಹುತಿ ನೀಡಿದರು. ಹಿಂದೆ ಶ್ರೀರಾಮಕೃಷ್ಣರೇ ಇವರಿಗೆಲ್ಲ ಕಾಷಾಯವಸ್ತ್ರಗಳನ್ನು ನೀಡಿ ಸಂನ್ಯಾಸಿಗಳನ್ನಾಗಿಸಿದ್ದರು. ಈಗ ಈ ವಿಧ್ಯುಕ್ತ ಕರ್ಮಗಳಿಂದ ಅದು ಮತ್ತೊಮ್ಮೆ

ದೃಢಪಟ್ಟಿತು, ಅಷ್ಟೆ. ವಿಧಿಗಳೆಲ್ಲ ಮುಗಿದ ಮೇಲೆ ನರೇಂದ್ರ ತನ್ನ ಸೋದರಶಿಷ್ಯರಿಗೆ ಹೊಸ ಸಂನ್ಯಾಸನಾಮಗಳನ್ನು ಕೊಟ್ಟ. ಅವು ಹೀಗಿವೆ:

| | | |
|---|---|---|
| ನರೇಂದ್ರ | — | ಸ್ವಾಮಿ ವಿವೇಕಾನಂದ |
| ರಾಖಾಲ | — | ಸ್ವಾಮಿ ಬ್ರಹ್ಮಾನಂದ |
| ಬಾಬುರಾಮ | — | ಸ್ವಾಮಿ ಪ್ರೇಮಾನಂದ |
| ಶಶಿಭೂಷಣ | — | ಸ್ವಾಮಿ ರಾಮಕೃಷ್ಣಾನಂದ |
| ಶರಚ್ಚಂದ್ರ | — | ಸ್ವಾಮಿ ಶಾರದಾನಂದ |
| ನಿರಂಜನ | — | ಸ್ವಾಮಿ ನಿರಂಜನಾನಂದ |
| ಕಾಳೀಪ್ರಸಾದ | — | ಸ್ವಾಮಿ ಅಭೇದಾನಂದ |
| ಶಾರದಾಪ್ರಸನ್ನ | — | ಸ್ವಾಮಿ ತ್ರಿಗುಣಾತೀತಾನಂದ |

ಇನ್ನುಳಿದ ಗುರುಭಾಯಿಗಳು ಆಮೇಲೆ ಬೇರೆಬೇರೆ ಸಮಯಗಳಲ್ಲಿ ಸಂನ್ಯಾಸ ದೀಕ್ಷೆಯನ್ನು ವಿಧಿವತ್ತಾಗಿ ಪಡೆದುಕೊಂಡರು. ಅವರ ಹೊಸ ಹೆಸರುಗಳು ಇವು:

| | | |
|---|---|---|
| ತಾರಕನಾಥ | — | ಸ್ವಾಮಿ ಶಿವಾನಂದ |
| ಹಿರಿಯ ಗೋಪಾಲ | — | ಸ್ವಾಮಿ ಅದ್ವೈತಾನಂದ |
| ಲಾಟು | — | ಸ್ವಾಮಿ ಅದ್ಭುತಾನಂದ |
| ಯೋಗೀಂದ್ರ | — | ಸ್ವಾಮಿ ಯೋಗಾನಂದ |
| ಹರಿನಾಥ | — | ಸ್ವಾಮಿ ತುರೀಯಾನಂದ |
| ಗಂಗಾಧರ | — | ಸ್ವಾಮಿ ಅಖಂಡಾನಂದ |
| ಸುಬೋಧ | — | ಸ್ವಾಮಿ ಸುಬೋಧಾನಂದ |
| ಹರಿಪ್ರಸನ್ನ | — | ಸ್ವಾಮಿ ವಿಜ್ಞಾನಾನಂದ |

'ರಾಮಕೃಷ್ಣಾನಂದ' ಎಂಬ ಹೆಸರನ್ನು ತಾನೇ ಇಟ್ಟುಕೊಳ್ಳಲು ನರೇಂದ್ರ ಬಯಸಿದ್ದ. ಆದರೆ ಶಶಿಗೆ ಶ್ರೀರಾಮಕೃಷ್ಣರಲ್ಲಿದ್ದ ಅದ್ಭುತ ಭಕ್ತಿ-ಪ್ರೇಮಗಳನ್ನು ಕಂಡು ಅವನಿಗೇ ಆ ಹೆಸರನ್ನು ಕೊಟ್ಟು ತಾನು ವಿವೇಕಾನಂದ ಎಂಬ ಹೆಸರನ್ನಿಟ್ಟುಕೊಂಡ. ಆದರೆ ಮೊದಮೊದಲು ನರೇಂದ್ರ ಆ ಹೆಸರಿನಿಂದ ಕರೆಯಲ್ಪಡುತ್ತಿದ್ದುದು ಅಪರೂಪ. ಮುಂದೆ ಪರಿವ್ರಾಜಕನಾಗಿ ಹೊರಟ ಮೇಲಂತೂ ತನ್ನ ಹೆಸರನ್ನು ಸಚ್ಚಿದಾನಂದ, ವಿವಿದಿಶಾನಂದ ಎಂಬಿತ್ಯಾದಿಯಾಗಿ ಬದಲಿಸಿಕೊಳ್ಳುತ್ತಲೇ ಇದ್ದ. ಸೋದರಸಂನ್ಯಾಸಿಗಳು ತನ್ನ ಸುಳಿವು ಹಿಡಿದು ಅನುಸರಿಸಿ ಬರಬಾರದು ಎನ್ನುವುದು ಆದರ ಉದ್ದೇಶ. (ಆದರೆ ಮುಂದೆ ೧೮೯೩ರಲ್ಲಿ ಸ್ವಾಮೀಜಿ ಅಮೆರಿಕೆಗೆ ಹೊರಟಾಗ ತಮ್ಮ ಶಿಷ್ಯನಾದ ಖೇತ್ರಿ ಮಹಾರಾಜನ ಅಪೇಕ್ಷೆಯಂತೆ ಸ್ವಾಮಿ ವಿವೇಕಾನಂದ ಎಂಬ ಹೆಸರನ್ನೇ ಸ್ಥಿರವಾಗಿರಿಸಿಕೊಂಡರು.)

ಈಗ ಈ ಯುವಸಾಧಕರು ವಿಧಿವತ್ತಾಗಿ ಸಂನ್ಯಾಸ ಸ್ವೀಕರಿಸಿದ್ದರೂ ಅವರು ಮಠದೊಳಗಿದ್ದಾಗ ಮಾತ್ರ ಕಾವಿವಸ್ತ್ರವನ್ನು ಧರಿಸುತ್ತಿದ್ದರು. ಹೊರಗೆ ಹೋಗುವಾಗ ಲೆಲ್ಲ ತಮ್ಮ ಎಂದಿನ ಉಡುಗೆಯನ್ನೇ ತೊಡುತ್ತಿದ್ದರು. ಅಲ್ಲದೆ, ಹೊಸ ಹೆಸರುಗಳನ್ನಿಟ್ಟುಕೊಂಡರೂ ಬಹಳ ವರ್ಷಗಳವರೆಗೆ ತಮ್ಮನ್ನು ಹಳೆಯ ಹೆಸರುಗಳಿಂದಲೇ ಕರೆದುಕೊಳ್ಳುತ್ತಿದ್ದರು. ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಆ ದಿನಗಳಲ್ಲಿ ಬಂಗಾಳದಲ್ಲಿ

ಇವರು ಅನುಸರಿಸುತ್ತಿದ್ದ ದಶನಾಮೀ ಪದ್ಧತಿಯ ಸಂನ್ಯಾಸ ಸಂಪ್ರದಾಯ ರೂಢಿಯಲ್ಲಿರಲಿಲ್ಲ. ಅಲ್ಲದೆ ಸಂನ್ಯಾಸಿಗಳ ಬಗ್ಗೆ ಸಮಾಜದಲ್ಲಿ ಗೌರವವಿರಲಿಲ್ಲ. ಆದ್ದರಿಂದ ಜನ ಇವರ ಬಗ್ಗೆ ವಿಚಿತ್ರವಾಗಿ ಭಾವಿಸಿ ತೊಂದರೆ ಕೊಡುವ ಸಂಭವವಿತ್ತು. ಕೆಲವೊಮ್ಮೆ ತೊಂದರೆ ಆಗಿಯೂ ಇತ್ತು. ಜೊತೆಗೆ, ಸ್ವಾತಂತ್ರ್ಯ ಹೋರಾಟದ ಆ ಕಾಲದಲ್ಲಿ ಸಂನ್ಯಾಸಿಗಳನ್ನು ಕಂಡರೆ, ಅವರು ವೇಷಪಲ್ಲಟ ಮಾಡಿಕೊಂಡ ಚಳವಳಿಗಾರರೇ ಇರಬೇಕೆಂದು ಶಂಕಿಸಿ, ಅವರನ್ನು ಹಿಡಿದು ಬಂಧಿಸುವ ಪ್ರಸಂಗಗಳೂ ನಡೆಯುತ್ತಿದ್ದುವು. ಸಾಲದ್ದಕ್ಕೆ ಇವರೆಲ್ಲ ಇನ್ನೂ ೨೦-೨೫ರ ನವಯುವಕರು. ಜನ ಇವರ ಸಂನ್ಯಾಸನಿಷ್ಠೆಯನ್ನು ಶಂಕಿಸಿದ್ದರೂ ಆಶ್ಚರ್ಯವಿರಲಿಲ್ಲ. ನರೇಂದ್ರನ ವಿಷಯದಲ್ಲಿ ಇನ್ನೂ ಒಂದು ತೊಂದರೆಯಿತ್ತು. ಏನೆಂದರೆ, ಅವನು ಆಗಾಗ ಮನೆಗೂ ಕೋರ್ಟುಕಛೇರಿಗಳಿಗೂ ಹೋಗಬೇಕಾಗುತ್ತಿತ್ತು. ಅಂತೂ, ಕಾಲಕ್ರಮೇಣ ಈ ನವಸಂನ್ಯಾಸಿಗಳು ಸದಾ ಕಾಷಾಯ ವಸ್ತ್ರಧಾರಿಗಳಾಗಿ ಓಡಾಡುವ ಸ್ಥಿತಿಗೆ ಬಂದರು.

ಶಿಷ್ಯನಾಗಿದ್ದ ತರುಣ ನರೇಂದ್ರ, ಜಗದ್ವಿಖ್ಯಾತ ವಿವೇಕಾನಂದಗುರುವಾಗಿ ಹೊಂದಿದ ಪರಿವರ್ತನೆ ಒಂದು ರಾತ್ರಿಯಲ್ಲಿ ನಡೆದದ್ದಲ್ಲ. ಅವನು ಉಪವಾಸ-ವನವಾಸಗಳನ್ನು ಅನುಭವಿಸಬೇಕಾಯಿತು; ನಾನಾ ವಿಧವಾದ ಶಾರೀರಿಕ-ಮಾನಸಿಕ ಯಾತನೆಗಳನ್ನು ಸಹಿಸಬೇಕಾಯಿತು; ಕಷ್ಟಪರಂಪರೆಯನ್ನೇ ಎದುರಿಸಬೇಕಾಯಿತು. ಆದ್ದರಿಂದ ಅದೊಂದು ಪವಾಡದೋಪಾದಿಯಲ್ಲಿ ನಡೆದುಹೋದ ಘಟನೆಯಲ್ಲ; ಕ್ರಮಾಗತವಾಗಿ ಬೆಳೆದುಬಂದ ಪ್ರಕ್ರಿಯೆ. ಸ್ವಾಮಿ ವಿವೇಕಾನಂದರ ಬೌದ್ಧಿಕ-ಆಧ್ಯಾತ್ಮಿಕ ಶಕ್ತಿಗಳು ಆಗಸದೆತ್ತರಕ್ಕೆ ಬೆಳೆದು ನಿಲ್ಲುವುದನ್ನು ಕಂಡಾಗ ಸಾಧಕರು, ಸತ್ಯಶೋಧಕರು ವಿಸ್ಮಯಮೂಕರಾಗುತ್ತಾರೆ. ಆದರೆ ಅವರ ಜೀವನವು ಅಷ್ಟೇ ಮಾನವೀಯವಾಗಿರುವುದನ್ನು ಕಂಡಾಗ, ಪ್ರತಿಯೊಬ್ಬ ಸಾಮಾನ್ಯನೂ ಕೂಡ ಅವರ ಬಗ್ಗೆ ಪ್ರೀತಿ-ಆದರ ತಾಳುವುದರಲ್ಲಿ ಸಂಶಯವಿಲ್ಲ. ಇನ್ನು ಮುಂದೆ ನಾವು ಕಾಣಲಿರುವುದು, ವ್ಯಕ್ತಿಯೊಬ್ಬನ ಅಂತಶ್ಶಕ್ತಿಯು ಮಹಾಪೂರವಾಗಿ ಹೊರಹೊಮ್ಮಿ ಅವನನ್ನು ತ್ರಿವಿಕ್ರಮಗಾತ್ರಕ್ಕೆ ಹಿಗ್ಗಿಸಿ, ಮಹಾತ್ಮನನ್ನಾಗಿಸಿದ ರೋಮಾಂಚಕಾರೀ ಕಥೆಯನ್ನು.

ಬಾರಾನಾಗೋರ್ ಮಠನಿವಾಸಿಗಳಾದ ಯುವಸಂನ್ಯಾಸಿಗಳು ತೀವ್ರತರ ಸಾಧನಾ ಜೀವನವನ್ನು ಕೈಗೊಂಡಿದ್ದರು. ಮುಂಜಾನೆ ಮೂರು ಗಂಟೆಗೇ ಎದ್ದು ಮುಖ ತೊಳೆದು ಅಥವಾ ಸ್ನಾನ ಮಾಡಿ ಧ್ಯಾನಕ್ಕೆ ಕುಳಿತುಬಿಡುತ್ತಿದ್ದರು. ಅವರಲ್ಲಿ ಭುಗಿಲೆದ್ದಿದ್ದ ವೈರಾಗ್ಯ ಅದೆಷ್ಟು ತೀವ್ರ! ಈ ಪ್ರಪಂಚ ಇದೆಯೋ ಇಲ್ಲವೋ ಎಂಬುದರ ಪರಿವೆಯಾದರೂ ಅವರಿಗಿತ್ತೇನು! ಅವರ ಪೈಕಿ, ಸ್ವಾಮಿ ರಾಮಕೃಷ್ಣಾನಂದರಿಗೆ ಮಾತ್ರ ಗುರುದೇವನ ಕೈಂಕರ್ಯವೇ ಪರಮಸಾಧನೆ. ಅವರ ಪಾಲಿಗೆ ಶ್ರೀರಾಮಕೃಷ್ಣರ ಭಾವಚಿತ್ರ ಒಂದು ನಿರ್ಜೀವ ವಸ್ತುವಲ್ಲ. ಅಲ್ಲಿ ಸಾಕ್ಷಾತ್ ಶ್ರೀರಾಮಕೃಷ್ಣರು ಸಶರೀರಿಯಾಗಿ ಇರುವರೆಂದೇ ಅವರ ಅವಿಚಲ ನಂಬಿಕೆ. ಗುರುದೇವನ ಪೂಜೆ-ಕೈಂಕರ್ಯಗಳೊಂದಿಗೆ ತಮ್ಮ ಸೋದರಸಂನ್ಯಾಸಿಗಳ ಯೋಗಕ್ಷೇಮದ ಭಾರವನ್ನೂ ಅವರೇ ಹೊತ್ತಿದ್ದರು. ಮನೆಗೆ ತಾಯಿ ಹೇಗೋ ಹಾಗೆ ಮಠಕ್ಕೆ ಸ್ವಾಮಿ ರಾಮಕೃಷ್ಣಾನಂದರು. ಶ್ರೀರಾಮಕೃಷ್ಣರ ನೈವೇದ್ಯಕ್ಕೂ, ಸೋದರ ಸಂನ್ಯಾಸಿಗಳ ಊಟಕ್ಕೂ, ಆಹಾರ ಪದಾರ್ಥಗಳನ್ನು—ಸಾಮಾನ್ಯವಾಗಿ ಭಿಕ್ಷೆ ಬೇಡಿ—ತರುತ್ತಿದ್ದವರು ಇವರೇ. ಇತರರೆಲ್ಲ ಬೆಳಗ್ಗೆ ಧ್ಯಾನಕ್ಕೆ ಕುಳಿತರೆ ಕೆಲವೊಮ್ಮೆ ಏಳುವಾಗ ಸಾಯಂಕಾಲ ನಾಲ್ಕು ಅಥವಾ ಐದು ಗಂಟೆ

ಯಾಗಿರುತ್ತಿತ್ತು. ರಾಮಕೃಷ್ಣಾನಂದರು ಅವರಿಗಾಗಿ ಅಡಿಗೆ ಮಾಡಿ ಕಾದು ಕುಳಿತಿರುತ್ತಿದ್ದರು. ಕಾದೂ ಕಾದೂ ಕೊನೆಗೂ ಎದ್ದು ಬಾರದಿದ್ದರೆ, ತಾವೇ ಅವರನ್ನು ಬಲಾತ್ಕಾರದಿಂದ ಎಬ್ಬಿಸಿ ಒತ್ತಾಯ ಮಾಡಿ ಎರಡು ತುತ್ತು ಊಟ ಮಾಡಿಸುತ್ತಿದ್ದರು. ಶ್ರೀರಾಮಕೃಷ್ಣರ ಮೇಲೂ, ತಮ್ಮ ಸೋದರಸಂನ್ಯಾಸಿಗಳ ಮೇಲೂ ಅವರಿಗಿದ್ದ ಭಕ್ತಿ-ವಿಶ್ವಾಸಗಳು ಅದ್ವಿತೀಯ.

ಬಾರಾನಾಗೋರ್ ಮಠದಲ್ಲಿನ ಜೀವನ ನಿಜಕ್ಕೂ ತೀರಾ ಬಡತನದ ಜೀವನ. ಆದರೆ ಬಡತನಕ್ಕೆ ಹೆದರುವವರು ಯಾರು! ಶ್ರೀರಾಮಕೃಷ್ಣರು ತೋರಿಸಿಕೊಟ್ಟ ಆಧ್ಯಾತ್ಮಿಕ ಸಾಧನಾಮಾರ್ಗದಲ್ಲಿ ಮುನ್ನಡೆಯುವುದೊಂದೇ ಆಲೋಚನೆ ಅವರಿಗೆ. ಆದ್ದರಿಂದ ಎಷ್ಟೋ ದಿನ ನಿದ್ರೆಯನ್ನೂ ಮರೆತು ರಾತ್ರಿಯೆಲ್ಲ ಧ್ಯಾನಮಗ್ನರಾಗಿ ಕುಳಿತುಬಿಡುತ್ತಿದ್ದರು. ಧ್ಯಾನದಲ್ಲಿ ಎಂತಹ ಆನಂದವೆಂದರೆ ಎದ್ದು ಭಿಕ್ಷೆಗೆ ಹೋಗಲೂ ಮನಸ್ಸಿಲ್ಲ! ಭಗವಂತನ ಇಚ್ಛೆಯಿಂದ ತಾನಾಗಿಯೇ ಏನು ಬರುತ್ತದೆಯೋ ಅದರಲ್ಲೇ ಜೀವನ. ಮಠಕ್ಕೆ ಸಂಬಂಧಪಟ್ಟ ಪ್ರತಿಯೊಂದು ಸಣ್ಣಪುಟ್ಟ ಕೆಲಸವನ್ನು ಮಾಡಲೂ 'ನಾಮುಂದು ತಾಮುಂದು' ಎಂಬ ಸ್ಪರ್ಧೆ. ಎಷ್ಟೋ ದಿನ ಅವರಿಗೆ ಊಟಕ್ಕೆ ಏನೂ ಇರುತ್ತಿರಲಿ. ಆದರೆ ತಮಗೊಂದು ಶರೀರವಿದೆ ಎಂಬುದನ್ನೂ ಮರೆತು ಧ್ಯಾನ ಮಾಡುತ್ತಿದ್ದರು, ಭಜನೆ ಮಾಡುತ್ತಿದ್ದರು, ಶಾಸ್ತ್ರವಿಚಾರ ಮಾಡುತ್ತಿದ್ದರು. ಅವರಲ್ಲಿದ್ದ ಉಡುಗೆಯೆಂದರೆ ಒಂದು ಕೌಪೀನ; ಜೊತೆಗೆ ಒಂದೆರಡು ತುಂಡು ಕಾವಿ ಬಟ್ಟೆಗಳು. ಮತ್ತು ಅವರಷ್ಟೂ ಮಂದಿಗೆ ಸೇರಿದಂತೆ ಒಂದು ಪಂಚೆ, ಒಂದು ಶಲ್ಯ. ಈ ಪಂಚೆ-ಶಲ್ಯಗಳನ್ನು ತಂತಿಯ ಮೇಲೆ ತೂಗುಹಾಕಿರುತ್ತಿದ್ದರು. ಪೇಟೆಗೋ ನಗರಕ್ಕೋ ಹೋಗಬೇಕಾದವರು ಸಭ್ಯರಂತೆ ಕಾಣಿಸಿಕೊಳ್ಳಬೇಕಾದ್ದರಿಂದ ಈ ವಸ್ತ್ರಗಳನ್ನು ಧರಿಸಿಕೊಂಡು ಹೋಗುತ್ತಿದ್ದರು. ನೆಲದ ಮೇಲೊಂದು ಚಾಪೆ ಹಾಸಿಕೊಂಡರೆ ಅದೇ ಅವರ ಹಾಸಿಗೆ. ಜಪಮಾಲೆ ಹಾಗೂ ಒಂದು ತಂಬೂರಿ—ಇವೇ ಅವರ ಆಸ್ತಿ. ಆ ಶಿಥಿಲ ಗೋಡೆಗಳ ಮೇಲೆಯೇ ದೇವದೇವಿಯರ ಹಾಗೂ ಸಾಧುಸಂತರ ಕೆಲವು ಪಟಗಳನ್ನು ತೂಗುಹಾಕಿದ್ದರು. ಎಲ್ಲರಿಗೂ ಸೇರಿದಂತೆ ಸುಮಾರು ಒಂದು ನೂರು ಪುಸ್ತಕಗಳ 'ಗ್ರಂಥಾಲಯ'ವೂ ಇತ್ತು. ಇಷ್ಟೇ ಆ ಮಠದ ಸರ್ವಸ್ವ. ಗೃಹೀಭಕ್ತ ಸುರೇಂದ್ರನಾಥ ಇವರಿಗೆ ತಿಂಗಳಿಗೆ ಮೂವತ್ತು ರೂಪಾಯಿ ಕೊಡುತ್ತಿದ್ದ. ಇದು ಸಾಲದಿರುವುದನ್ನು ಕಂಡು, ತಿಂಗಳಿಗೆ ನೂರು ರೂಪಾಯಿ ಕೊಡಲಾರಂಭಿಸಿದ. ಅದರಿಂದಲೂ ಅವನಿಗೆ ತೃಪ್ತಿಯಾಗಲಿಲ್ಲ. ಅಲ್ಲಿನ ಪರಿಸ್ಥಿತಿಯನ್ನು ಇತರ ಭಕ್ತರಿಗೂ ಗುಟ್ಟಾಗಿ ತಿಳಿಸಿ ಒಂದಿಷ್ಟು ವಂತಿಗೆ ಎತ್ತಿ, ಆಗಾಗ ಸ್ವಲ್ಪ ಹೆಚ್ಚಿಗೆ ಹಣವನ್ನೋ ಬೇಳೆಕಾಳುಗಳನ್ನೋ ಮಠಕ್ಕೆ ಕಳಿಸಿಕೊಡುತ್ತಿದ್ದ. ಇದರಿಂದಾಗಿ ಮಠದ ಕಡುಬಡತನ ಎಷ್ಟೋ ಕಡಿಮೆಯಾಯಿತು.

ಈ ಮಠಕ್ಕೆ ಗೃಹೀಭಕ್ತರು ಕೆಲವರು ಆಗಾಗ ಬಂದುಹೋಗುತ್ತಿದ್ದರು. ಇವರಲ್ಲದೆ ಕೆಲವರು ಅನಪೇಕ್ಷಿತ ಅತಿಥಿಗಳೂ ಒಮ್ಮೊಮ್ಮೆ ಬರುತ್ತಿದ್ದರು. ಅವರು ಯಾರೆಂದರೆ ಆ ಯುವಸಂನ್ಯಾಸಿಗಳ ತಾಯ್ತಂದೆಯರು ಮತ್ತು 'ಹಿತೈಷಿ'ಗಳು. ಈ ಯುವಕರನ್ನು ಹೇಗಾದರೂ ಮಾಡಿ ವಾಪಸು ಮನೆಗೆ ಕರೆದುಕೊಂಡು ಹೋಗುವ ಆಸೆಯಿಂದ ಅವರು ಬರುತ್ತಿದ್ದರು. ತಮ್ಮ ಮಕ್ಕಳನ್ನು ಮನೆಗೆ ಹಿಂದಿರುಗುವಂತೆ ಕಣ್ಣೀರ್ಗರೆದು ಕೇಳಿಕೊಳ್ಳುತ್ತಿದ್ದರು. ಕಣ್ಣೀರಿಗೂ ಕರಗದಿದ್ದರೆ ಗದರಿಸಿ ಹೆದರಿಸಿ ನೋಡುತ್ತಿದ್ದರು. ಆದರೆ ಯಾರೇನು ಮಾಡಿದರೂ ಈ ಯುವಸಂನ್ಯಾಸಿಗಳನ್ನು ಕದಲಿಸಲು ಸಾಧ್ಯ

ವಾಗುತ್ತಿರಲಿಲ್ಲ. ಇವರದ್ದು ಅಭಾವ ವೈರಾಗ್ಯವಲ್ಲ; ಪರಿಪೂರ್ಣ ವೈರಾಗ್ಯ. ಆದ್ದರಿಂದ ತಾಯ್ತಂದೆಯರ ಆಜ್ಞಾರೂಪದ ಮಾತುಗಳನ್ನೂ ಲೆಕ್ಕಿಸಲಿಲ್ಲ. ಆದರೆ ಇವರು ತಾಯ್ತಂದೆಯರೊಡನೆ ವಾದಮಾಡುವ ಬದಲಾಗಿ ಮೌನವಾಗಿಯೇ ಇದ್ದುಬಿಡು ತ್ತಿದ್ದರು. ಇಲ್ಲವೆ ಅವರಿಂದ ತಪ್ಪಿಸಿಕೊಂಡು ತಿರುಗುತ್ತಿದ್ದರು. ತಮ್ಮ ಚತುರೋಪಾಯ ಗಳೂ ವಿಫಲವಾದದ್ದನ್ನು ಕಂಡ ತಾಯ್ತಂದೆಯರ ಸಿಟ್ಟು ಈಗ ನರೇಂದ್ರನ ಮೇಲೆ ತಿರುಗಿತು. "ಅವನೇ ಈ ಎಲ್ಲ ಅನಿಷ್ಟಗಳಿಗೂ ಮೂಲಕಾರಣ. ರಾಮಕೃಷ್ಣರು ಹೊರಟುಹೋದ ಮೇಲೆ ನಮ್ಮ ಹುಡುಗರು ಮನೆಗೆ ಬಂದು ಓದುಬರಹದ ಕಡೆಗೆ ಗಮನ ಹರಿಸಿದ್ದರು. ಆದರೆ ಆ ನರೇಂದ್ರ ಬಂದು ಎಲ್ಲ ಬುಡಮೇಲು ಮಾಡಿಬಿಟ್ಟ" ಎಂದು ಬೈದುಕೊಳ್ಳುತ್ತ ಹಿಂದಿರುಗಿದರು.

ಇನ್ನು ಕೆಲವರಿಗೆ, ಇಷ್ಟು ಸಣ್ಣ ವಯಸ್ಸಿನ ಯುವಕರು ಸಂನ್ಯಾಸಿಗಳಾದರಲ್ಲ ಎಂದು ಆಶ್ಚರ್ಯ. ಕೆಲವು ಗೃಹಸ್ಥರು ಒಂದು ಬಗೆಯ ಕುಹಕದಿಂದ ಅವರನ್ನು ಕೇಳು ವುದಿತ್ತು, "ಏನು, ನೀವೆಲ್ಲ ಸಂನ್ಯಾಸ ತೆಗೆದುಕೊಂಡಿರಲ್ಲ, ಏನು ಸಾಧಿಸಿದಿರಿ ?" ಆಗ ನರೇಂದ್ರ ಖಾರವಾಗಿಯೇ ಹೇಳುತ್ತಿದ್ದ, "ಒಂದು ವೇಳೆ ಸಾಕ್ಷಾತ್ಕಾರ ಆಗದೆ ಯಿದ್ದರೂ ಏನೀಗ ? ಇನ್ನೂ ಸಾಕ್ಷಾತ್ಕಾರವಾಗಲಿಲ್ಲ ಎಂದಮಾತ್ರಕ್ಕೆ ನಾವು ಒಮ್ಮೆ ಉಗುಳಿಬಿಟ್ಟ ಇಂದ್ರಿಯಜೀವನಕ್ಕೇ ಹಿಂದಿರುಗಿ ಹೋಗೋಣವೆ ? ನಮ್ಮ ಉನ್ನತ ಆದರ್ಶದಿಂದ ಕೆಳಗೆ ಜಾರೋಣವೆ ?"

ಬಾರಾನಾಗೋರ್ ಮಠವಾಸಿಗಳಾದ ಯುವಸಾಧಕರು ಭಗವಂತನ ಸಾಕ್ಷಾತ್ಕಾರ ಕ್ಕಾಗಿ ತೀವ್ರವಾಗಿ ಹಂಬಲಿಸುತ್ತಿದ್ದರು. ನರೇಂದ್ರನಂತೂ ಅತ್ಯುನ್ನತ ಸತ್ಯಸಾಕ್ಷಾತ್ಕಾರ ಕ್ಕಾಗಿ, ನಿರ್ವಿಕಲ್ಪ ಸಮಾಧಿಸುಖಕ್ಕಾಗಿ ವ್ಯಾಕುಲಿತನಾಗಿದ್ದ. ಕೆಲವೊಮ್ಮೆ ಅವನು ಉದ್ಗರಿ ಸುತ್ತಿದ್ದ, "ನನಗಾದ ಆ ಅನುಭವಗಳಿಂದೆಲ್ಲ ಏನು ಪ್ರಯೋಜನ ? ಸುವರ್ಣಾಕ್ಷರ ಗಳಲ್ಲಿ ಪ್ರಕಾಶಮಾನವಾಗಿ ಬೆಳಗುತ್ತಿರುವ ಮಂತ್ರವನ್ನು ಕಂಡಿದ್ದೇನೆ. ಕಾಳಿ ಹಾಗೂ ಇತರ ದೇವದೇವಿಯರನ್ನು ದರ್ಶಿಸಿದ್ದೇನೆ. ಆದರೆ ಆಹಾ, ಈಗ ಆ ಸಮಾಧಿಯ ಶಾಂತಿಯೆಲ್ಲಿ ! ಸಮಾಧಿಯ ಆನಂದವೆಲ್ಲಿ ! ನನಗೆ ಯಾವುದೂ ಬೇಡವಾಗಿದೆ. ಭಕ್ತರ ಜೊತೆಯಲ್ಲಿ ಮಾತನಾಡುವುದೂ ಬೇಸರವಾಗಿದೆ. ದೇವರೇ ಇಲ್ಲವೋ ಏನೋ ಎನ್ನಿಸುತ್ತದೆ ! ನನ್ನಿಂದ ಸತ್ಯಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಾಗದೆ ಹೋದರೆ, ಉಪವಾಸ ಮಾಡಿ ಪ್ರಾಣತ್ಯಾಗ ಮಾಡಿಬಿಡುತ್ತೇನೆ." ಸಾಮಾನ್ಯ ಸಾಧಕರಾದರೆ ಒಂದು ಸಣ್ಣ ಅನುಭವವಾದರೂ, ಸಾಕ್ಷಾತ್ಕಾರವೇ ಆಗಿಬಿಟ್ಟಿತು—ಇನ್ನೇನೂ ಆಗ ಬೇಕಾದದ್ದಿಲ್ಲ ಎನ್ನುವಷ್ಟರ ಮಟ್ಟಿಗೆ ತೃಪ್ತರಾಗಿಬಿಡುತ್ತಾರೆ. ಆದರೆ ನರೇಂದ್ರನಿಗೆ ಅಂತಹ ಅಪೂರ್ವ ಅನುಭವಗಳೆಲ್ಲ ಆಗಿದ್ದರೂ ಇನ್ನೂ ಸಂತೋಷವಿಲ್ಲ, ತೃಪ್ತಿಯಿಲ್ಲ. ಏಕಿರಬಹುದು ? ಅವನು ಆದಾಗಲೇ ಶ್ರೀರಾಮಕೃಷ್ಣರ ಕೃಪೆಯಿಂದ ಒಮ್ಮೆ ನಿರ್ವಿಕಲ್ಪ ಸಮಾಧಿಯ ಅಮೃತವನ್ನುಂಡವನಲ್ಲವೆ ! ಆ ಅನುಭವದ ಮುಂದೆ ಉಳಿದೆಲ್ಲ ಅನುಭವಗಳೂ ನೀರಸವಾಗಿ ಕಾಣುತ್ತಿವೆ.

ಬಾರಾನಾಗೋರ್ ಮಠದಲ್ಲಿನ ಜೀವನವೆಂದರೆ ಅದೊಂದು ಅಪೂರ್ವ ಸಾಧನಾಮಯ ಜೀವನ. ಎಷ್ಟೋ ದಿನ ಮುಂಜಾನೆ ನಾಮಸಂಕೀರ್ತನೆ ಪ್ರಾರಂಭ ವಾದರೆ, ಸಂಜೆಯುವರೆಗೂ ಮುಂದುವರಿಯುತ್ತಿತ್ತು. ಊಟ ವಿಶ್ರಾಂತಿಗಳ ನೆನಪೇ ಆಗುತ್ತಿರಲಿಲ್ಲ, ಭಗವದ್ದರ್ಶನದ ಹಂಬಲ ಅವರಲ್ಲಿ ಎಷ್ಟೊಂದು ತೀವ್ರವಾಗಿತ್ತೆಂದರೆ,

ಧ್ಯಾನ ಮಾಡುತ್ತ ಕುಳಿತವರು ಹಾಗೇ ಪ್ರಾಯೋಪವೇಶ* ಮಾಡಿದ್ದರೂ ಆಶ್ಚರ್ಯ ವಿಲ್ಲ! ಅನೇಕ ವರ್ಷಗಳ ಬಳಿಕ ಸ್ವಾಮಿ ವಿವೇಕಾನಂದರು ತಮ್ಮ ಶಿಷ್ಯನೊಬ್ಬನ ಮುಂದೆ ಹೇಳುತ್ತಾರೆ: "ಆ ದಿನಗಳಲ್ಲಿ ಎಷ್ಟೋ ಬಾರಿ ನಮಗೆ ಊಟಕ್ಕೆ ಏನೇನೂ ಇರುತ್ತಿರಲಿಲ್ಲ. ಕೆಲವು ಸಲ ಅಕ್ಕಿ ಇರುತ್ತಿತ್ತು. ಆದರೆ ಉಪ್ಪೇ ಇರುತ್ತಿರಲಿಲ್ಲ! ಅನ್ನ, ಉಪ್ಪು ಮತ್ತು ಬೇಯಿಸಿದ ಸೊಪ್ಪು ತಿಂದುಕೊಂಡು ತಿಂಗಳುಗಟ್ಟಲೆ ಜೀವಿಸಿದೆವು. ಆದರೆ ಏನಿತ್ತೋ ಏನಿಲ್ಲವೋ, ನಮಗ್ಯಾರಿಗೂ ಅದರತ್ತ ಲಕ್ಷ್ಯವೇ ಇರಲಿಲ್ಲ. ನಾವು ಸಂನ್ಯಾಸಿಗಳು. ನಾಳಿನ ಚಿಂತೆ ನಮಗೆಲ್ಲಿ? ನಮ್ಮನಮ್ಮ ಆಧ್ಯಾತ್ಮಿಕ ಸಾಧನೆಯ ಪ್ರವಾಹದಲ್ಲಿ ನಾವು ಕೊಚ್ಚಿಕೊಂಡು ಹೋಗುತ್ತಿದ್ದೆವು. ಆಹ್! ಅದೆಂತಹ ದಿನಗಳು! ನಮ್ಮ ತಪಶ್ಚರ್ಯೆಯ ತೀವ್ರತೆಯನ್ನು ಕಂಡು ಮನುಷ್ಯರಿರಲಿ ರಾಕ್ಷಸರೂ ಹೆದರಿ ಓಡಿಹೋಗಬೇಕು! ಒಂದು ವಿಷಯವಂತೂ ನಿಜ. ಪರಿಸ್ಥಿತಿ ನಮಗೆ ಎಷ್ಟೆಷ್ಟು ವಿರುದ್ಧ ವಾಗುತ್ತದೋ ಅಷ್ಟಷ್ಟೂ ನಮ್ಮ ಅಂತಸ್ಸತ್ವ ವ್ಯಕ್ತವಾಗುತ್ತ ಬರುತ್ತದೆ." ವಿವೇಕಾ ನಂದರು ಸಾಮಾನ್ಯವಾಗಿ ಇಂತಹ ವಿಷಯಗಳ ಬಗ್ಗೆ ಯಾರೊಂದಿಗೂ ಮಾತನಾಡು ತ್ತಿರಲಿಲ್ಲ. ಆದರೆ ತಮ್ಮ ಶಿಷ್ಯರಲ್ಲಿ ವೈರಾಗ್ಯ, ತಿತಿಕ್ಷೆಯ ಗುಣಗಳನ್ನು ಉದ್ದೀಪನ ಗೊಳಿಸುವ ಉದ್ದೇಶದಿಂದ ಅವರ ಮುಂದೆ ಬಿಚ್ಚು ಮನಸ್ಸಿನಿಂದ ಇವುಗಳನ್ನೆಲ್ಲ ಹೇಳುವುದಿತ್ತು.

ಈ ಯುವಸಂನ್ಯಾಸಿಗಳು ಪ್ರತಿದಿನದ ಸಾಧನೆ-ಭಜನೆ-ಧ್ಯಾನ-ಅಧ್ಯಯನ ಗಳಲ್ಲದೆ ಶ್ರೀಕೃಷ್ಣಾಷ್ಟಮಿ, ಶಿವರಾತ್ರಿಯೇ ಮೊದಲಾದ ಹಬ್ಬಹರಿದಿನಗಳನ್ನು ಸಂಭ್ರಮ ದಿಂದ ಆಚರಿಸುತ್ತಿದ್ದರು. ಅವರು ಮೊದಲ ಸಲ ಆಚರಿಸಿದ ಶಿವರಾತ್ರಿ ಉತ್ಸವದ ವಿವರಗಳನ್ನು ಮಹೇಂದ್ರನಾಥ ಬರೆದಿಟ್ಟುಕೊಂಡಿದ್ದು, ಅದನ್ನು 'ವಚನವೇದ'ದಲ್ಲಿ ಕಾಣಬಹುದು.

ಅಂದು ೧೮೮೭ ಫೆಬ್ರವರಿ ೨೧ ನೇ ತಾರೀಖು, ಸೋಮವಾರ. ನರೇಂದ್ರ, ರಾಖಾಲ, ನಿರಂಜನ, ಶರಚ್ಚಂದ್ರ, ಶಶಿ, ಕಾಳೀಪ್ರಸಾದ, ಬಾಬುರಾಮ, ತಾರಕನಾಥ, ಹಿರಿಯ ಗೋಪಾಲ, ಶಾರದಾಪ್ರಸನ್ನ, ಹರೀಶ ಮತ್ತು ಮಹೇಂದ್ರನಾಥ—ಇಷ್ಟು ಜನರೂ ಅಂದು ಸೇರಿದ್ದರು. ಮುಂಜಾನೆ ಶಿವನ ಸ್ತೋತ್ರಗಳ ಪಠನದೊಂದಿಗೆ ಉತ್ಸವ ಆರಂಭವಾಯಿತು. ನರೇಂದ್ರನೇ ಈಚೆಗೆ ರಚಿಸಿದ್ದ, 'ತಾಥೈಯ ತಾಥೈಯ ನಾಚೇ ಭೋಲಾ' (ಭೋಲಾ ಎಂದರೆ ಶಿವ) ಎಂಬ ಹಾಡನ್ನು ಹಾಡುತ್ತ ರಾಖಾಲ ಮತ್ತು ತಾರಕನಾಥ ನರ್ತಿಸಿದರು. ಶಶಿ ಎಂದಿನಂತೆ ಶ್ರೀರಾಮಕೃಷ್ಣರ ಪೂಜೆ ಮಾಡಿದ. ಎಲ್ಲರೂ ದಿನವಿಡೀ ಉಪವಾಸವಿದ್ದು ಶಿವನ ಪೂಜೆ-ಧ್ಯಾನಗಳಲ್ಲಿ ನಿರತರಾದರು.

ರಾತ್ರಿಯ ಪೂಜೆಗಾಗಿ ಸಂಜೆಯಿಂದಲೇ ಸಿದ್ಧತೆಗಳು ನಡೆದುವು. ಬಿಲ್ವಪತ್ರೆ ಗಳನ್ನು ಸಂಗ್ರಹಿಸಿ ಹೋಮಕ್ಕೆ ಬಿಲ್ವ-ಸಮಿತ್ತುಗಳನ್ನು ಸಿದ್ಧಪಡಿಸಿಕೊಂಡರು. ಎಲ್ಲ ದೇವದೇವಿಯರ ಮುಂದೆ ಗಂಧದ ಕಡ್ಡಿಗಳನ್ನು ಹಚ್ಚಲಾಯಿತು. ಮಠದ ಕಾಂಪೌಂಡಿ ನಲ್ಲೇ ಇರುವ ಒಂದು ಬಿಲ್ವವೃಕ್ಷದ ಕೆಳಗೆ ಶಿವಪೂಜೆಗೆ ಸಿದ್ಧತೆ ನಡೆದಿದೆ. ಯಾಮ ಕ್ಕೊಂದರಂತೆ ನಾಲ್ಕು ಯಾಮಗಳಲ್ಲಿ (ಯಾಮ =ಜಾವ; ಮೂರು ತಾಸುಗಳ ಅವಧಿ) ನಾಲ್ಕು ಪೂಜೆ ಆಗಬೇಕಾಗಿದೆ. ಸುಮಾರು ಒಂಬತ್ತು ಗಂಟೆಯ ವೇಳೆಗೆ ಎಲ್ಲರೂ

---

* ಪ್ರಾಣತ್ಯಾಗ ಮಾಡಲು ನಿರ್ಧರಿಸಿ ಅನ್ನ-ನೀರು ಬಿಟ್ಟು ಒಂದೆಡೆ ಮಲಗಿಬಿಡುವುದು.

ಮರದ ಬುಡದಲ್ಲಿ ಸೇರಿದರು. ಒಬ್ಬರು ಪೂಜೆ ಪ್ರಾರಂಭಿಸಿದರು. ನರೇಂದ್ರ ಹಾಗೂ ಇತರರು ಮೈಗೆಲ್ಲ ಭಸ್ಮ ಲೇಪಿಸಿಕೊಂಡು ಆಗಾಗ ಬಿಲ್ವವೃಕ್ಷದ ಸುತ್ತ ಹಾಡು ಹೇಳಿಕೊಂಡು ನರ್ತಿಸಿದರು. ಕೆಲವೊಮ್ಮೆ "ಶಿವಗುರು ಶಿವಗುರು ಹರಹರ ವ್ಯೋಂ ವ್ಯೋಂ" ಎಂದು ತಾರಸ್ವರದಲ್ಲಿ ಚಪ್ಪಾಳೆ ತಟ್ಟುತ್ತ ಹಾಡಿದರು. ಅದು ಅಮಾವಾಸ್ಯೆಯ ಮಧ್ಯರಾತ್ರಿ; ಎಲ್ಲೆಲ್ಲೂ ಕಾಳಗತ್ತಲು, ಎಲ್ಲೆಲ್ಲೂ ನೀರವತೆ. ಕಾಷಾಯವಸ್ತ್ರಧಾರಿಗಳಾದ ಈ ಸಂನ್ಯಾಸಿಗಳು ತಮ್ಮ ಯೌವನಭರಿತ ಕಂಠಗಳಿಂದ "ಶಿವಗುರು ಶಿವಗುರು ಹರಹರ ವ್ಯೋಂ ವ್ಯೋಂ" ಎಂದು ಘೋಷಿಸುತ್ತಿದ್ದರೆ, ಸಿಡಿಲಿನಂತಹ ಆ ನಿನಾದ ಸುತ್ತಲೂ ಹರಡಿ ಅನಂತ ಸಚ್ಚಿದಾನಂದಸಾಗರದಲ್ಲಿ ಲೀನವಾಗುತ್ತಿತ್ತು! ಪೂಜಾದಿಗಳು ಮುಗಿದು ಹೋಮದ ಕೊನೆಯಲ್ಲಿ ಪೂರ್ಣಾಹುತಿಯ ವೇಳೆಗೆ, ಸಮಸ್ತ ದೇವದೇವಿಯರ ಹೆಸರಿನಲ್ಲಿ ಹಾಗೂ ವಿಶ್ವದಾದ್ಯಂತ ಜನ್ಮವೆತ್ತಿ ಬಂದ ಸಮಸ್ತ ಅವತಾರಪುರುಷರ ಹೆಸರಿನಲ್ಲಿ ಹೋಮಾಗ್ನಿಗೆ ಆಹುತಿಯನ್ನು ಅರ್ಪಿಸಲಾಯಿತು. ಈಗ ಅರುಣೋದಯಕಾಲ ಸಮೀಪಿಸಿತು. ಪೂರ್ವದಿಗಂತವು ರಕ್ತವರ್ಣದಿಂದ ರಂಜಿತವಾಯಿತು. ಆ ಪವಿತ್ರ ಪ್ರಾತಃಕಾಲದ ಮುಂಬೆಳಕಿನಲ್ಲಿ ಯುವಸಂನ್ಯಾಸಿಗಳು ಗಂಗಾಸ್ನಾನ ಮಾಡಿ ಪೂಜಾ ಗೃಹಕ್ಕೆ ಬಂದು ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಬಳಿಕ ಎಲ್ಲರೂ ಬಂದು ಹಜಾರದಲ್ಲಿ ಸೇರಿದರು. ಅಲ್ಲಿ ತಾನು ಕಂಡ ದೃಶ್ಯವನ್ನು ಮಹೇಂದ್ರನಾಥ ವರ್ಣಿಸುತ್ತಾನೆ:

"ನರೇಂದ್ರನು ನೂತನ ಕಾಷಾಯವಸ್ತ್ರವನ್ನು ಧರಿಸಿದ್ದ. ಆ ವಸ್ತ್ರದ ಉಜ್ವಲ ಕೇಸರಿ ವರ್ಣವು ಅವನ ತೇಜೋಮಯವಾದ ಮುಖ ಹಾಗೂ ಮೈಬಣ್ಣದೊಂದಿಗೆ ಬಹಳ ಚೆನ್ನಾಗಿ ಮಿಳಿತವಾಗಿತ್ತು. ಅವನ ಶರೀರದ ಪ್ರತಿಯೊಂದು ರೋಮಕೂಪ ದಿಂದಲೂ ದಿವ್ಯ ಪ್ರಭೆ ಹೊರಸೂಸುತ್ತಿತ್ತು. ಅವನ ಮುಖಮಂಡಲ ಒಂದು ಪ್ರಖರ ತೇಜಸ್ಸಿನಿಂದ ಶೋಭಿಸುತ್ತಿತ್ತು. ಜೊತೆಗೇ ಒಂದು ಅಪೂರ್ವ ಕಾರುಣ್ಯವೂ ಅಲ್ಲಿ ಕಾಣು ತ್ತಿತ್ತು. ಅವನನ್ನು ನೋಡಿದವರಿಗೆಲ್ಲ ಅನ್ನಿಸುತ್ತಿತ್ತು—ಶ್ರೀರಾಮಕೃಷ್ಣರ ಕಾರ್ಯವನ್ನು ಈಡೇರಿಸಲು ಸಚ್ಚಿದಾನಂದಸಾಗರದಿಂದ ಎದ್ದುಬಂದ ಒಂದು ಅಲೆಯೇ ಇವನು ಎಂದು. ಅವನಿಗೆ ಈಗಷ್ಟೇ ಇಪ್ಪತ್ನಾಲ್ಕು ವರ್ಷ; ಚೈತನ್ಯ ಮಹಾಪ್ರಭುವೂ ಸಂಸಾರ ತ್ಯಾಗ ಮಾಡಿದ್ದು ಈ ವಯಸ್ಸಿನಲ್ಲೇ..."

ಶಿವರಾತ್ರಿಯ ಪೂಜೆ, ಉಪವಾಸ ವ್ರತ, ಗಂಗಾಸ್ನಾನ—ಇವುಗಳನ್ನೆಲ್ಲ ಮುಗಿಸಿ ಆ ಯುವಸಂನ್ಯಾಸಿಗಳು ಹಜಾರದಲ್ಲಿ ಕುಳಿತಿದ್ದಾರೆ. ಆ ಸಮಯಕ್ಕೆ ಸರಿಯಾಗಿ ಬಲರಾಮ ಬೋಸ್ ಅವರಿಗಾಗಿ ಹಣ್ಣುಗಳನ್ನೂ ಸಿಹಿತಿನಿಸನ್ನೂ ಕಳಿಸಿಕೊಟ್ಟಿದ್ದಾನೆ. ನರೇಂದ್ರಾದಿಗಳು ಅದನ್ನು ಆದರದಿಂದ ಸ್ವೀಕರಿಸುತ್ತ ಉದ್ಗರಿಸಿದರು, "ಧನ್ಯ ಬಲ ರಾಮ, ನಿಜಕ್ಕೂ ಧನ್ಯ!"

* * * *

ಈ ಯುವಕರೆಲ್ಲ ಅನುಕೂಲಸ್ಥ ಕುಟುಂಬಗಳಿಂದ ಬಂದವರು; ತಮ್ಮ ತಾಯ್ತಂದೆಯರೊಡನೆ ಸುಖದಲ್ಲಿ ಬೆಳೆದವರು. ಈಗ ಬಡತನ ತಾಂಡವವಾಡು ತ್ತಿರುವ ಈ ಪಾಳುಬಿದ್ದ ಕಟ್ಟಡದಲ್ಲಿ ಎಲ್ಲ ಬಗೆಯ ಅನನುಕೂಲತೆಗಳ ನಡುವೆಯೂ ನೆಮ್ಮದಿಯಿಂದಿದ್ದಾರೆ! ಅವರ ಒಂದೇ ಒಂದು ಚಿಂತೆಯೆಂದರೆ, ಇನ್ನೂ ಭಗವಂತನ ದರ್ಶನವಾಗಲಿಲ್ಲವಲ್ಲ ಎಂದು. ಅದಕ್ಕಾಗಿ ತೀವ್ರತರ ಸಾಧನೆಗಳನ್ನು ಮಾಡುತ್ತಿದ್ದಾರೆ.

ಆದರೆ ತಮ್ಮ ಸಾಧನೆಯಲ್ಲಿ ಅವರಿಗೇ ತೃಪ್ತಿಯಿಲ್ಲ. ಆಗಾಗ ನಿಟ್ಟುಸಿರು ಬಿಡುತ್ತ ಉದ್ಗರಿಸುತ್ತಾರೆ, "ಓಹ್, ನಿಜಕ್ಕೂ ಶ್ರೀರಾಮಕೃಷ್ಣರ ತ್ಯಾಗ, ಭಗವದ್ವ್ಯಾಕುಲತೆ ಅದೆಷ್ಟು ಅದ್ಭುತ ! ಅವರು ಸಾಧಿಸಿದ್ದ ಹದಿನಾರನೇ ಒಂದು ಭಾಗವನ್ನಾದರೂ ಸಾಧಿಸಿ ಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲವಲ್ಲ!"

ಮಠದಲ್ಲಿ ತೀವ್ರ ಆಧ್ಯಾತ್ಮಿಕ ಸಾಧನೆಯೊಂದಿಗೆ ಆಳವಾದ ತತ್ತ್ವಾಭ್ಯಾಸವೂ ನಡೆಯುತ್ತಿತ್ತು. ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರಾದ ಕ್ಯಾಂಟ್, ಹೆಗಲ್, ಸ್ಪೆನ್ಸರ್ ಮುಂತಾ ದವರ ವಾದಗಳನ್ನು, ಅಲ್ಲದೆ ನಾಸ್ತಿಕವಾದಿಗಳ ಹಾಗೂ ಭೌತವಾದಿಗಳ ಸಿದ್ಧಾಂತ ಗಳನ್ನು ಅಧ್ಯಯನ ಮಾಡುತ್ತಿದ್ದರು. ಧರ್ಮದೊಂದಿಗೆ ಇತಿಹಾಸ ಸಮಾಜಶಾಸ್ತ್ರ ಸಾಹಿತ್ಯ ಕಲೆ ವಿಜ್ಞಾನಗಳನ್ನೂ ಅಭ್ಯಾಸಮಾಡಿ ಅವುಗಳ ಕುರಿತಾಗಿ ಚರ್ಚಿಸುತ್ತಿದ್ದರು. ಇಂದು ನರೇಂದ್ರ 'ದೇವರು ಇಲ್ಲವೇ ಇಲ್ಲ; ದೇವರ ಅಸ್ತಿತ್ವವೆಂಬುದೇ ಒಂದು ಮಿಥ್ಯೆ' ಎಂದು ವಾದಿಸಿ ಸಿದ್ಧಪಡಿಸುತ್ತಾನೆ. ಮರುದಿನ, 'ಭಗವಂತನೊಬ್ಬನೇ ಸತ್ಯ' ಎಂದು ವಾದಿಸಿ ಪ್ರಮಾಣೀಕರಿಸುತ್ತಾನೆ ! ಈ ಯುವಸಾಧಕರು ಷಡ್‌ದರ್ಶನಗಳನ್ನು ಚೆನ್ನಾಗಿ ವಿಮರ್ಶಿಸಿ, ಅವುಗಳಲ್ಲಿ ಪರಸ್ಪರ ತಾಳೆಯಾಗುವ ವಿಷಯಗಳು ಯಾವುವು, ಪರಸ್ಪರ ವಿರುದ್ಧವಾದ ವಿಷಯಗಳು ಯಾವುವು ಎಂಬುದನ್ನು ಅರಿಯುತ್ತಿದ್ದರು; ವೇದಾಂತ ತತ್ತ್ವಗಳನ್ನೂ ಬೌದ್ಧತತ್ತ್ವಗಳನ್ನೂ ಹೋಲಿಸಿ ನೋಡುತ್ತಿದ್ದರು; ಇವುಗಳಲ್ಲಿ ಸಾಮಾನ್ಯ ವಾದ ಅಂಶಗಳು ಯಾವುವು, ಬುದ್ಧನ ಉಪದೇಶಗಳ ವೈಶಿಷ್ಟ್ಯವೇನು ಎಂಬುದನ್ನೆಲ್ಲ ವಿಚಾರ ಮಾಡುತ್ತಿದ್ದರು. ಕೆಲವೊಮ್ಮೆ ಕ್ರೈಸ್ತ ಪಾದರಿಗಳು ಬಂದು ಇವರೊಂದಿಗೆ ಚರ್ಚೆ ಮಾಡಿ, ಕ್ರೈಸ್ತಧರ್ಮದ ಹೆಗ್ಗಳಿಕೆಯನ್ನು ಬಣ್ಣಿಸುವುದಿತ್ತು. ಆಗ ನರೇಂದ್ರ ಅವರ ಸಿದ್ಧಾಂತಗಳ ಲೋಪದೋಷಗಳನ್ನು ತೋರಿಸಿಕೊಟ್ಟು, ಅವರು ಸೋಲೊಪ್ಪಿ ಕೊಳ್ಳುವಂತೆ ಮಾಡುತ್ತಿದ್ದ; ಬಳಿಕ ಏಸುಕ್ರಿಸ್ತನ ದಿವ್ಯತೆಯನ್ನು ಮನಮುಟ್ಟುವಂತೆ ಅವರಿಗೇ ವರ್ಣಿಸುತ್ತಿದ್ದ.

ಅವನು ಗುರುಭಾಯಿಗಳೆದುರಿಗೆ ಗುರುದೇವನ ಸಂಬಂಧವಾಗಿ ಒಂದು ಸ್ವತಂತ್ರ ವಿಚಾರಧಾರೆಯನ್ನೇ ಹರಿಯಿಸುತ್ತಿದ್ದ. ಶ್ರೀರಾಮಕೃಷ್ಣರ ಜೀವನ-ಸಂದೇಶಗಳ ಐತಿ ಹಾಸಿಕ ಮಹತ್ವವನ್ನು ಎತ್ತಿತೋರಿಸುತ್ತಿದ್ದ. ಭವಿಷ್ಯದ ಹಿಂದೂ ಜನಾಂಗದ ಮೇಲೆ ಅವರ ಜೀವನ-ಬೋಧನೆಗಳು ಬೀರಬಹುದಾದ ಪ್ರಭಾವವನ್ನು ವಿಶ್ಲೇಷಿಸುತ್ತಿದ್ದ.

ಈ ಯುವಸಾಧಕರ ನಡುವೆ ಎಂತಹ ಸ್ನೇಹ-ಗೌರವಪೂರ್ಣ ಬಾಂಧವ್ಯವಿತ್ತು, ಅವರು ಯಾವ ಬಗೆಯ ಪ್ರಾಮಾಣಿಕತೆಯಿಂದ ಸಾಧನೆ-ಜಿಜ್ಞಾಸೆಗಳಲ್ಲಿ ತೊಡಗಿರು ತ್ತಿದ್ದರು ಎಂಬುದರ ಪರಿಚಯ ಮಾಡಿಕೊಳ್ಳಲು 'ವಚನವೇದ'ದ ಪುಟವೊಂದನ್ನು ನೋಡಬೇಕು.

ಅಂದು ೭ನೇ ಮೇ, ೧೮೮೭. ಸೋದರಸಂನ್ಯಾಸಿಯೊಬ್ಬನು ತನಗಿನ್ನೂ ಭಗ ವಂತನ ಸಾಕ್ಷಾತ್ಕಾರವಾಗಲಿಲ್ಲವಲ್ಲ ಎಂದು ಚಿಂತಾಕ್ರಾಂತನಾಗಿದ್ದಾನೆ. ಅವನಿಗೆ ನರೇಂದ್ರ ಹೇಳುತ್ತಾನೆ:

"ಏನಯ್ಯ, ನೀನು ಗೀತೆಯನ್ನು ಓದಿಲ್ಲವೆ? ಭಗವಂತ ಪ್ರತಿಯೊಬ್ಬನ ಹೃದಯದಲ್ಲೂ ನೆಲೆಸಿದ್ದಾನೆ, ನಮ್ಮನ್ನೆಲ್ಲ ಈ ಜೀವನಚಕ್ರದಲ್ಲಿ ತಿರುಗಿಸುತ್ತಿರುವ ವನೂ ಅವನೇ ಎಂಬುದನ್ನು ನೀನು ಓದಿಲ್ಲವೆ? ಒಂದು ದೃಷ್ಟಿಯಿಂದ ನೋಡಿದರೆ, ನಾವು ಹರಿದಾಡುವ ಹುಳುವಿಗಿಂತಲೂ ಕಡೆ. ಇಂತಹ ನಾವು, ಅನಂತನಾದ

ಭಗವಂತನ ನಿಜಸ್ವರೂಪವನ್ನು ಅರಿಯಲು ಸಾಧ್ಯವೇನು ? ಈ ವಿಶ್ವದಲ್ಲಿ ಮಾನವನ ಸ್ಥಾನವನ್ನು ಸ್ವಲ್ಪ ಭಾವಿಸಿ ನೋಡು. ಆಕಾಶದಲ್ಲಿರುವ ಅಸಂಖ್ಯಾತ ನಕ್ಷತ್ರಗಳೆಲ್ಲವೂ ಒಂದೊಂದು ಸೂರ್ಯಮಂಡಲಗಳು. ನಾವೆಲ್ಲ ಇರುವುದು ಇಂತಹ ಒಂದು ಸೂರ್ಯಮಂಡಲದಲ್ಲಿ. ಸೂರ್ಯನಿಗೆ ಹೋಲಿಸಿದರೆ ನಮ್ಮ ಭೂಮಿ ಎಂಬು ದೊಂದು ಪುಟ್ಟ ಚೆಂಡು. ಈ ಚೆಂಡಿನ ಮೇಲ್ಮೈಯಲ್ಲಿ ಮನುಷ್ಯ ಎನ್ನುವವನು ಒಂದು ಅಣು! ಇಂತಹ ನಾವು, ಆ ಭಗವಂತನನ್ನು ಅರಿತುಕೊಳ್ಳಬಲ್ಲೆವೇನು ?''

ಬಳಿಕ ನರೇಂದ್ರ ಒಂದು ಹಾಡು ಹೇಳಿದ. ಆ ಹಾಡಿನ ಭಾವಾರ್ಥವೇನೆಂದರೆ, 'ಹೇ ದೇವ, ನಾನು ನಿನಗೆ ಸದಾ ಶರಣಾಗಿದ್ದೇನೆ. ನನ್ನನ್ನು ಈ ಜಗತ್ತಿನ ಎಲ್ಲ ಅಪಾಯ ಗಳಿಂದ, ಪ್ರಲೋಭನೆಗಳಿಂದ ಪಾರುಮಾಡಿ ನನಗೆ ನಿರಂತರ ಮಾರ್ಗದರ್ಶನ ನೀಡು' ಎಂದು. ನರೇಂದ್ರ ಮತ್ತೆ ಸೋದರಸಂನ್ಯಾಸಿಗೆ ಹೇಳುತ್ತಾನೆ: ''ಭಗವಂತನಲ್ಲಿ ಸಂಪೂರ್ಣ ಶರಣಾಗು. ಭಗವಂತನ ಪಾದಪದ್ಮಗಳಲ್ಲಿ ನಿನ್ನನ್ನು ನೀನು ಸಂಪೂರ್ಣ ವಾಗಿ ಸಮರ್ಪಿಸಿಕೊಂಡುಬಿಡು. ಶ್ರೀರಾಮಕೃಷ್ಣರು ಹೇಳಿದ ಮಾತು ನಿನಗೆ ನೆನ ಪಿಲ್ಲವೆ ? ಭಗವಂತನೆಂದರೆ ಅವನೊಂದು ದೊಡ್ಡ ಸಕ್ಕರೆ ಬೆಟ್ಟ. ನೀನೊಂದು ಇರುವೆ. ನಿನಗೆ ಆ ಸಕ್ಕರೆ ಬೆಟ್ಟದ ಒಂದು ಕಣವೇ ಬೇಕಾದಷ್ಟಾಯಿತು. ಆದರೆ ನೀನು ಆ ಇಡೀ ಬೆಟ್ಟವನ್ನೇ ಹೊತ್ತುಕೊಂಡುಹೋಗಿ ನಿನ್ನ ಗೂಡಿನಲ್ಲಿಟ್ಟುಕೊಳ್ಳಬೇಕು ಎಂದು ನೋಡು ತ್ತಿದ್ದೀಯೆ! ಅಂತಹ ಆ ಶುಕಮಹರ್ಷಿಯೂ ಹೆಚ್ಚೆಂದರೆ ಒಂದು ದೊಡ್ಡ ಇರುವೆ, ಅಷ್ಟೆ. ಆದ್ದರಿಂದ ನಾನು ಕಾಳೀಪ್ರಸಾದನಿಗೆ ಹೇಳುತ್ತಿರುತ್ತೇನೆ—'ಏನಯ್ಯ, ನೀನು ನಿನ್ನ ಅಡಿಗೋಲಿನಿಂದ ಭಗವಂತನ ಉದ್ದಗಲವನ್ನು ಅಳೆಯುತ್ತೀಯಾ ?' ಅಂತ. ಭಗವಂತ ಅಪಾರವಾದ ದಯಾಸಾಗರ. ಅವನು ನಿನ್ನ ಮೇಲೆ ಕೃಪೆ ಮಾಡಿಯೇ ಮಾಡುತ್ತಾನೆ. 'ಹೇ ಭಗವನ್, ನಮ್ಮನ್ನು ಸದಾ ಕಾಪಾಡು. ಯಾವಾಗಲೂ ನಿನ್ನ ದಯೆ ನಮ್ಮ ಮೇಲಿರಲಿ. ಅಸತ್ಯದಿಂದ ಸತ್ಯದೆಡೆಗೆ, ಕತ್ತಲಿನಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತತ್ವದೆಡೆಗೆ ಸದಾ ನಮ್ಮನ್ನು ಮುನ್ನಡೆಸು' ಎಂದು ಅವನನ್ನು ಪ್ರಾರ್ಥಿಸಿಕೋ.''

ಇನ್ನೊಬ್ಬ ಗುರುಭಾಯಿ ನರೇಂದ್ರನನ್ನು ಕೇಳುತ್ತಾನೆ: ''ಭಗವಂತನನ್ನು ಯಾವ ರೀತಿಯಲ್ಲಿ ಪ್ರಾರ್ಥಿಸಿಕೊಳ್ಳಬೇಕು ?''

ನರೇಂದ್ರ: ''ಭಗವಂತನ ನಾಮವನ್ನು ಉಚ್ಚರಿಸಿದರಾಯಿತು. ಶ್ರೀರಾಮಕೃಷ್ಣರು ನಮಗೆ ಹೇಳಿಕೊಟ್ಟದ್ದು ಹಾಗೆಯೇ ಅಲ್ಲವೆ ?''

ಸೋದರಶಿಷ್ಯ: ''ನೀನು ಈಗೇನೋ ಹೇಳುತ್ತೀ, 'ಭಗವಂತ ಇದ್ದಾನೆ, ಪ್ರಾರ್ಥಿಸಿಕೋ' ಅಂತ. ಆದರೆ ನೀನು ಇನ್ನೊಂದು ಭಾವದಲ್ಲಿರುವಾಗ ಹೇಳುತ್ತೀ, 'ಚಾರ್ವಾಕ ಹಾಗೂ ಇನ್ನು ಕೆಲವು ಸಿದ್ಧಾಂತಗಳ ಪ್ರಕಾರ, ಭಗವಂತ ಇಲ್ಲವೇ ಇಲ್ಲ; ಈ ಪ್ರಪಂಚ ಸೃಷ್ಟಿಯಾಗಲು ಹೊರಗಿನ ಶಕ್ತಿಯೊಂದರ ಆವಶ್ಯಕತೆಯೇನೂ ಇಲ್ಲ; ಅದು ತಾನಾಗಿಯೇ ಹುಟ್ಟುತ್ತದೆ, ಬೆಳೆಯುತ್ತದೆ, ಅಳಿಯುತ್ತದೆ' ಅಂತ !''

ನರೇಂದ್ರ (ಮುಗುಳ್ನಗುತ್ತ): ''ನೀನು ರಸಾಯನ ಶಾಸ್ತ್ರವನ್ನು ಓದಿಲ್ಲವೆ ? ಅದರಲ್ಲಿ, ಜಲಜನಕ-ಆಮ್ಲಜನಕ ಸೇರಿ ನೀರಾಗುತ್ತದೆ, ಆದರೆ ಅವು ಹಾಗೆ ಸೇರ ಬೇಕಾದರೆ ಮಾತ್ರ ಮನುಷ್ಯನ ನೆರವು ಅಥವಾ ಒಂದು ಶಕ್ತಿಯ ನೆರವು ಬೇಕಾಗುತ್ತದೆ ಅಂತ ಹೇಳುವುದಿಲ್ಲವೆ ? ಈ ಜಗತ್ತಿನಲ್ಲಿ ಯಾವುದನ್ನೇ ಆಗಲಿ ಪರಸ್ಪರ ಸೇರಿಸಲು

ಹಿನ್ನೆಲೆಯಲ್ಲಿ ಒಂದು ಚೈತನ್ಯ ಕೆಲಸ ಮಾಡುತ್ತಿರಲೇಬೇಕು ಎಂಬುದನ್ನು ಪ್ರತಿಯೊಬ್ಬರೂ ಒಪ್ಪಿಕೊಳ್ಳುತ್ತಾರೆ. ಈ ಜಗತ್ತನ್ನು ನಡೆಸುವಂತಹ ಆ ಸರ್ವಜ್ಞ ಚೈತನ್ಯವೇ ಭಗವಂತ."

ಸೋದರಶಿಷ್ಯ: "ಆದರೆ ಭಗವಂತ ಕರುಣಾಮಯ ಎಂಬುದನ್ನು ನಾವು ಕಂಡುಕೊಳ್ಳುವುದು ಹೇಗೆ?"

ನರೇಂದ್ರ: "ಇದಕ್ಕೆ ನಿನ್ನ ದಯಾಪೂರ್ಣ ಹೃದಯವೇ ಸಾಕ್ಷಿ! ವೇದಗಳು ಇದನ್ನೇ ಹೇಳುತ್ತವೆ. ಮನುಷ್ಯನ ಹೃದಯದಲ್ಲಿ ಒಂದಿಷ್ಟಾದರೂ ದಯೆಯನ್ನು ಇಟ್ಟಂತಹ ಆ ಭಗವಂತನು ನಿಜಕ್ಕೂ ಕರುಣಾಸಾಗರನೇ ಸರಿ. ಶ್ರೀರಾಮಕೃಷ್ಣರು ಹೇಳುತ್ತಿದ್ದರು—'ಶ್ರದ್ಧೆ ಬಹಳ ಮುಖ್ಯವಾದ ವಿಷಯ' ಅಂತ. ಭಗವಂತ ನಮ್ಮ ಹತ್ತಿರದಲ್ಲೇ ಇದ್ದಾನೆ. ಅವನನ್ನು ಕಾಣಬೇಕಾದರೆ ನಿನಗೆ ಶ್ರದ್ಧೆಯಿರಬೇಕಾಗುತ್ತದೆ."

ಸೋದರಶಿಷ್ಯ (ತಮಾಷೆಯ ದನಿಯಲ್ಲಿ): "ನರೇನ್, ನೀನು ಒಂದು ಸಲ 'ಭಗವಂತ ಇಲ್ಲವೇ ಇಲ್ಲ' ಅಂತ ಹೇಳುತ್ತೀಯೆ. ಇನ್ನೊಂದು ಸಲ, 'ಭಗವಂತ ಇದ್ದಾನೆ' ಎನ್ನುತ್ತೀಯೆ. ನೀನು ಹೀಗೆ ನಿನ್ನ ಅಭಿಪ್ರಾಯಗಳನ್ನು ಬದಲಾಯಿಸುತ್ತಲೇ ಹೋದರೆ ನಿನ್ನ ಮಾತನ್ನು ನಂಬುವುದು ಹೇಗೆ?"

ನರೇಂದ್ರ: "ಆದರೆ ನೋಡು, ನಾನು ಈ ಅಭಿಪ್ರಾಯವನ್ನು ಮಾತ್ರ ಬದಲಾಯಿಸುವುದಿಲ್ಲ; ಏನೆಂದರೆ, ನಾವು ಅಹಂಕಾರದಿಂದ ಮತ್ತರಾಗಿರುವವರೆಗೆ, ನಾವು ಆಸೆಗಳಿಗೆ ಬಲಿಯಾಗಿ ಅಲೆದಾಡುತ್ತಿರುವವರೆಗೆ, ನಮಗೆ ಭಗವಂತನ ಮೇಲೆ ಭಕ್ತಿ-ಶ್ರದ್ಧೆ ಹುಟ್ಟುವುದಿಲ್ಲ."

ಬಳಿಕ ಭಾವಾವೇಶಭರಿತನಾಗಿ ಈ ಅರ್ಥದ ಹಾಡೊಂದನ್ನು ಹಾಡಲಾರಂಭಿಸಿದ: 'ಭಗವಂತನು ಪರಮ ಕರುಣಾಮಯನಾದ ತಂದೆ-ತಾಯಿ. ಅವನಲ್ಲಿ ಶರಣಾಗತರಾದವರೆಲ್ಲರಿಗೂ ಅವನು ಆಶ್ರಯ ಕೊಟ್ಟೇಕೊಡುತ್ತಾನೆ.' ಭಕ್ತಿಭಾವಪೂರ್ಣವಾದ ಆ ಹಾಡು ನರೇಂದ್ರನ ಮಧುಮಿಶ್ರಿತ ಕಂಠಶ್ರೀಯಿಂದ ಹೊರಹೊಮ್ಮುತ್ತಲಿದ್ದವರೆಲ್ಲರನ್ನೂ ಆನಂದಾಮೃತದಲ್ಲಿ ಮುಳುಗಿಸಿತು. "ನಾಗರಹಾವು ಪುಂಗಿಯ ನಾದವನ್ನು ಹೆಡೆಯೆತ್ತಿ ಆಲಿಸುತ್ತ ಮಂತ್ರಮುಗ್ಧವಾಗುವಂತೆ, ನರೇಂದ್ರ ಹಾಡಿದಾಗ ಅಂತರ್ಯಾಮಿಯಾದ ಭಗವಂತನೂ ಮಂತ್ರಮುಗ್ಧನಾಗಿಬಿಡುತ್ತಾನೆ" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದುದು ಮಹೇಂದ್ರನಾಥನಿಗೆ ನೆನಪಾಯಿತು.

ಶ್ರೀರಾಮಕೃಷ್ಣಭಾವವು ಯುವಸಂನ್ಯಾಸಿಗಳೆಲ್ಲರ ಹೃನ್ಮನಗಳನ್ನು ಆವರಿಸಿಬಿಟ್ಟಿತ್ತು. ಶ್ರೀರಾಮಕೃಷ್ಣರ ಸಾಕ್ಷಾತ್ ಸಾನ್ನಿಧ್ಯವನ್ನು ಅಲ್ಲಿ ಕಾಣಬಹುದಾಗಿತ್ತು. ಭಗವತ್ಸಾಕ್ಷಾತ್ಕಾರದ ವ್ಯಾಕುಲತೆಯಿಂದ ಕೂಡಿದ ಈ ಯುವಕರಿಗೆ ಹಗಲೂ ಇರುಳೂ ಒಂದೇ ಆಗಿಬಿಟ್ಟಿತ್ತು. ಸಮಯ ಸರಿದದ್ದೇ ತಿಳಿಯುತ್ತಿರಲಿಲ್ಲ. ಅವರ ಮನಸ್ಸೆಲ್ಲ ಆಧ್ಯಾತ್ಮಿಕ ಸಾಧನೆಯಲ್ಲಿ, ಆಧ್ಯಾತ್ಮಿಕ ಭಾವದಲ್ಲಿ ಮುಳುಗಿಬಿಟ್ಟಿದೆ. ನಿಜಕ್ಕೂ ಅವರೆಲ್ಲ ಹುಚ್ಚರಂತಾಗಿಬಿಟ್ಟಿದ್ದರು—ಭಗವಂತನ ದರ್ಶನಕ್ಕಾಗಿ ಹುಚ್ಚು! ಅವರು ತಮ್ಮ ಪಥದಲ್ಲಿ ಸರಿಯಾದ ರೀತಿಯಲ್ಲಿ ಮುಂದುವರಿಯುತ್ತಿದ್ದಾರೆಂಬುದಕ್ಕೆ ಶುಭಸೂಚನೆಗಳಾಗಿ ಅವರಿಗೆ ನಾನಾ ಬಗೆಯ ಆಧ್ಯಾತ್ಮಿಕ ಅನುಭವಗಳಾಗುತ್ತಿದ್ದುವು. ಕೆಲವರು ತೀವ್ರ ಧ್ಯಾನಮಗ್ನರಾಗಿ, ಅಲುಗಾಡದೆ ಗಂಟೆಗಟ್ಟಲೆ ಕುಳಿತುಬಿಡುತ್ತಿದ್ದರು. ಇನ್ನು ಕೆಲವರು ಭಕ್ತಿಭಾವದಲ್ಲಿ ಮೈಮರೆತು ಹಾಡುಗಳನ್ನು ಹೇಳಿಕೊಳ್ಳುತ್ತಿದ್ದರು. ಮತ್ತೆ

ಕೆಲವರು ರಾತ್ರಿಯ ವೇಳೆಯಲ್ಲಿ ಧುನಿಯ ಮುಂದೆ ಕುಳಿತು, ಇಲ್ಲವೆ ಸಮೀಪದ ಸ್ಮಶಾನದಲ್ಲಿ ಧ್ಯಾನ ಮಾಡುತ್ತಿದ್ದರು. ಕೆಲವರಂತೂ ಹಗಲಿರುಳೂ ಎಡೆಬಿಡದೆ ಜಪ ಮಾಡುತ್ತಲೇ ಇರುತ್ತಿದ್ದರು. ಅಂತೂ, ಪ್ರತಿಯೊಬ್ಬನೂ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಲೇಬೇಕು ಎಂಬ ದೃಢನಿಶ್ಚಯ ಮಾಡಿಬಿಟ್ಟಿದ್ದ.

ನರೇಂದ್ರನೂ ಉಳಿದವರಂತೆಯೇ ತೀವ್ರಸಾಧನೆಯಲ್ಲಿ ನಿರತನಾಗಿದ್ದ. ಆದರೆ ಅವನಿಗೆ ಸಾಧನೆಯ ಜೊತೆಗೆ ಇನ್ನೂ ಒಂದು ಹೊಣೆಗಾರಿಕೆಯಿತ್ತು. ಅದು ತನ್ನ ಸೋದರಸಂನ್ಯಾಸಿಗಳ ಸಾಧನಾದಿಗಳ ಕಡೆಗೂ ಗಮನವಿಟ್ಟಿರುವುದು. ಅವನನ್ನು ಶ್ರೀರಾಮಕೃಷ್ಣರೇ ಈ ಯುವಕರೆಲ್ಲರ ನಾಯಕನೆಂದು ನೇಮಕ ಮಾಡಿದ್ದರೂ, ಅವನು ತನ್ನ ಸ್ವಂತ ಯೋಗ್ಯತೆಯಿಂದಲೂ ಅವರ ನಾಯಕನಾಗಿದ್ದ. ಮಾತ್ರವಲ್ಲ, ಅವನು ಅವರೆಲ್ಲರ ಸೋದರನಂತೆ, ಆತ್ಮೀಯ ಸ್ನೇಹಿತನಂತೆ ಇದ್ದ. ಅವನ ಮೂಲಕ ಮಾತ ನಾಡುವುದು ಸಾಕ್ಷಾತ್ ಶ್ರೀರಾಮಕೃಷ್ಣರೇ ಎಂಬ ಭಾವನೆ ಅವರಲ್ಲಿ ಮತ್ತೆಮತ್ತೆ ಏಳು ತ್ತಿತ್ತು. ಆಧ್ಯಾತ್ಮಿಕವಾಗಿ ಅವನೊಂದು ಮಹಾಸಿಂಹದಂತಿದ್ದ. ಆದ್ದರಿಂದ ಆತನ ಬಗೆಗಿನ ಅವರ ಪ್ರೀತಿಯೆಂಬುದು ಪೂಜ್ಯಭಾವವಾಗಿ ಪರಿವರ್ತಿತವಾಗಿತ್ತು. ಶ್ರೀರಾಮಕೃಷ್ಣರು ಅವನ ಕುರಿತಾಗಿ ಹೇಳಿದ ಮಾತುಗಳೆಲ್ಲ ಅವರ ಕಿವಿಯಲ್ಲಿ ಇನ್ನೂ ಮೊಳಗುತ್ತಿದ್ದುವು. ಅವನ ಜ್ವಲಿಸುವ ಕಣ್ಣುಗಳು, ಪ್ರಫುಲ್ಲವಾದ ಮುಖ, ವಿದ್ಯುತ್ತಿನಂತಹ ಮಾತುಗಳು, ಅವರಲ್ಲಿ ಅವನಿಟ್ಟಿದ್ದ ಪ್ರೀತಿ-ವಿಶ್ವಾಸ, ಅವನ ಸ್ಫೂರ್ತಿಯ ನುಡಿಗಳು, ಅವರನ್ನೆಲ್ಲ ಸದಾ ಉತ್ಸಾಹಭರಿತರನ್ನಾಗಿರಿಸುತ್ತಿದ್ದ ಅವನ ವರ್ತನೆ—ಇವುಗಳಿಂದೆಲ್ಲ ಅವರು ಆತ ನಲ್ಲಿ ಶ್ರೀರಾಮಕೃಷ್ಣರೇ ಆವಿರ್ಭವಿಸಿರುವಂತೆ ಕಾಣುತ್ತಿದ್ದರು. ಎಷ್ಟೋ ಸಲ ಅವನು ಅವರನ್ನು ಗದರಿಸಿ ಬುದ್ಧಿ ಹೇಳಬೇಕಾಗುತ್ತಿತ್ತು. ಅವರೆಲ್ಲ ತಪ್ಪದೆ ಸರಿಯಾಗಿ ಸಾಧನೆ ಮಾಡುತ್ತಾರೋ ಇಲ್ಲವೋ ಎಂದೇನೂ ಅವನು ಗಮನಿಸಬೇಕಾಗಿರಲಿಲ್ಲ; ಆದರೆ ಅವರು ಅತಿಯಾದ ಸಾಧನೆ ಮಾಡಿ ಅಪಾಯಕ್ಕೆ ಗುರಿಯಾಗದಂತೆ ನೋಡಿಕೊಳ್ಳ ಬೇಕಾಗಿತ್ತು. ಯಾರಾದರೂ ಅತಿಯಾದ ಸಾಧನೆ ಮಾಡುವುದು ಕಂಡುಬಂದರೆ, "ಏನು, 'ನಾವೂ ಸಾಧನೆ ಮಾಡಿ ಪರಮಹಂಸರಾಗಿಬಿಡುತ್ತೇವೆ' ಎಂದುಕೊಂಡಿ ದ್ದೀರೋ? ಅದೆಲ್ಲ ಎಂದಿಗೂ ಸಾಧ್ಯವಿಲ್ಲ! ಯುಗಕ್ಕೊಬ್ಬ ರಾಮಕೃಷ್ಣರು ಹುಟ್ಟ ಬಹುದು, ಅಷ್ಟೆ" ಎಂದು ಛೇಡಿಸುತ್ತಿದ್ದ.

ಸ್ವಾಮಿ ವಿವೇಕಾನಂದರ ಪ್ರಥಮ ಸಂನ್ಯಾಸೀಶಿಷ್ಯರಾದ ಸ್ವಾಮಿ ಸದಾನಂದರು* ಮುಂದೆ ಬಾರಾನಾಗೋರ್ ಮಠದ ದಿನಗಳನ್ನು ಸ್ಮರಿಸಿಕೊಂಡು ಹೇಳುತ್ತಾರೆ: "ಆಗ ಸ್ವಾಮೀಜಿಯವರು ದಿನಕ್ಕೆ ಇಪ್ಪತ್ತನಾಲ್ಕು ಗಂಟೆಗಳ ಪ್ರಕಾರ ಕೆಲಸ ಮಾಡುತ್ತಿದ್ದರು. 'ಏಳಿ, ಎದ್ದೇಳಿ! ದಿವ್ಯಾಮೃತವನ್ನು ಪಾನಮಾಡಬೇಕೆಂಬವರೆಲ್ಲ ಎದ್ದೇಳಿ' ಎಂದು ರಾಗವಾಗಿ ಹಾಡುತ್ತ ಸೋದರಸಂನ್ಯಾಸಿಗಳನ್ನೆಲ್ಲ ನಸುಕಿನಲ್ಲೇ ಎಬ್ಬಿಸುತ್ತಿದ್ದರು. ಮತ್ತು, ಅರ್ಧರಾತ್ರಿ ಕಳೆದಮೇಲೂ ಮಠದ ತಾರಸಿಯ ಮೇಲೆ ಗುರುಭಾಯಿ ಗಳೊಂದಿಗೆ ಕುಳಿತು, ಭಾವಾವೇಶದಿಂದ ಭಜನೆಮಾಡುತ್ತಿದ್ದರು. ನೆರೆಹೊರೆಯವರು ಬಂದು ಹಾಡುವುದನ್ನು ನಿಲ್ಲಿಸುವಂತೆ ಕೇಳಿಕೊಂಡರೂ ಭಜನೆಯೇನೂ ನಿಲ್ಲುತ್ತಿರ

---

* ಇವರು ವಿವೇಕಾನಂದರ ಶಿಷ್ಯರಾದ ಮತ್ತು ಮಠಕ್ಕೆ ಸೇರಿದ ಕಥೆಯನ್ನು ಮುಂದಿನ ಅಧ್ಯಾಯದಲ್ಲಿ ನೋಡಲಿದ್ದೇವೆ.

ಲಿಲ್ಲ! ಸ್ವಾಮೀಜಿ ತಮ್ಮ ಸುಮಧುರ ಕಂಠದಿಂದ 'ಸೀತಾರಾಮ್ ಸೀತಾರಾಮ್' ಇಲ್ಲವೆ, 'ರಾಧಾಕೃಷ್ಣ ರಾಧಾಕೃಷ್ಣ' ಎಂಬ ನಾಮಾವಳಿಗಳನ್ನು ಹೇಳಿಕೊಡುತ್ತಿದ್ದರು. ಆ ದಿನಗಳಲ್ಲಿ ಯಾರಿಗೂ ವಿಶ್ರಾಂತಿಯೇ ಇರಲಿಲ್ಲ. ಎಷ್ಟೋ ಜನ ಭಕ್ತಾದಿಗಳು ಬರುತ್ತಿದ್ದರು, ಹೋಗುತ್ತಿದ್ದರು. ಪಂಡಿತರು ಬಂದು ವಾದ ಮಾಡುತ್ತಿದ್ದರು, ಚರ್ಚೆ ಮಾಡುತ್ತಿದ್ದರು. ಆದರೆ ಸ್ವಾಮೀಜಿ ಮಾತ್ರ ಯಾವ ಕಾರಣಕ್ಕೂ ಒಂದು ಕ್ಷಣವೂ ಬೇಸರಿಸುತ್ತಿರಲಿಲ್ಲ."

ಶ್ರೀರಾಮಕೃಷ್ಣ ಮಹಾಸಂಘದ ಇತಿಹಾಸದಲ್ಲಿ ತೀವ್ರ ಆಧ್ಯಾತ್ಮಿಕ ಸಾಧನೆ ಎಂಬುದರ ಇನ್ನೊಂದು ಹೆಸರೇ 'ಬಾರಾನಾಗೋರ್ ಮಠ' ಎಂಬಂತಾಗಿದೆ. ಬಾರಾನಾಗೋರಿನ ಮಠದ ಹೆಸರನ್ನು ಕೇಳಿದರೆ ಸಾಕು, ಆಧ್ಯಾತ್ಮಿಕ ಸಾಧನೆಯು ನೆನಪಾಗುತ್ತದೆ. ಯಾರ್ಯಾರು ಆ ಯುವಸಂನ್ಯಾಸಿಗಳ ಸಂಪರ್ಕಕ್ಕೆ ಬರುತ್ತಿದ್ದರೋ, ಅವರಿಗೆಲ್ಲ ಈ 'ಭಗವಂತನ ಹುಚ್ಚು' ಹಿಡಿಯುತ್ತಿತ್ತು. ನಿರಂತರ ಆಧ್ಯಾತ್ಮಿಕ ಸಾಧನೆಯಿಂದಾಗಿ ಈ ಸಂನ್ಯಾಸಿಗಳ ವ್ಯಕ್ತಿತ್ವವೆಲ್ಲ ಭಗವನ್ಮಯವಾಗಿಬಿಟ್ಟಿತ್ತು. ಶ್ರೀರಾಮಕೃಷ್ಣರು ತಮ್ಮ ಸ್ವಂತದವರನ್ನಾಗಿ ಮಾಡಿಕೊಂಡಿದ್ದ ಆ ಯುವಕರೆಲ್ಲರೂ ಈಗ ತಮ್ಮ ಗುರುದೇವನ ವ್ಯಕ್ತಿತ್ವದ ಒಂದಲ್ಲ ಒಂದು ಅಂಶವನ್ನು ಪ್ರತಿನಿಧಿಸುವಂತಾಗಿದ್ದರು.

ಹೀಗೆ ಈ ಯುವಸಂನ್ಯಾಸಿಗಳು ಪರಿಪೂರ್ಣ ಆಧ್ಯಾತ್ಮಿಕ ಜೀವನವನ್ನು ನಡೆಸುತ್ತ ಬಂದರು. ತನ್ಮೂಲಕ ಶ್ರೀರಾಮಕೃಷ್ಣ ಮಹಾಸಂಘವೂ ಈಗ ಒಂದು ಆಕಾರ ತಳೆಯಿತು. ಈ ಸಂಘದ ಧ್ಯೇಯೋದ್ದೇಶಗಳಿಗೆ ಸಂಬಂಧಿಸಿದಂತೆ ಎರಡು ಅಂಶಗಳನ್ನು ಗಮನಿಸಬಹುದು. ಮೊದಲನೆಯದು: ಸಂನ್ಯಾಸಿಗಳೆಲ್ಲ ಮಠದಲ್ಲಿ ಒಂದೇ ಕಡೆ ಒಮ್ಮತದಿಂದಿದ್ದುಕೊಂಡು, ಶ್ರೀರಾಮಕೃಷ್ಣರ ಸಂದೇಶಗಳನ್ನು ಪ್ರಸಾರ ಮಾಡುವ ಆದರ್ಶ; ಎರಡನೆಯದು: ಸಂನ್ಯಾಸಿಗಳಿಗೆ ಸಹಜವಾದ ಸ್ವತಂತ್ರಮನೋಭಾವದಿಂದ ಪರಿವ್ರಾಜಕರಾಗಿ ತೀರ್ಥಾಟನೆ ಮಾಡುವ ಅಂಶ. ಹೀಗೆ, ಪರಸ್ಪರ ಕಾರ್ಯತಃ ವ್ಯತಿರಿಕ್ತ ವಾದ ಈ ಎರಡೂ ಅಂಶಗಳು ಪ್ರತಿಯೊಬ್ಬ ಸದಸ್ಯನಲ್ಲೂ ಇದ್ದೇ ಇದ್ದುವೆನ್ನಬಹುದು. ಆದರಲ್ಲೂ ಸ್ವಾಮಿ ವಿವೇಕಾನಂದರಲ್ಲಂತೂ (ಇನ್ನುಮುಂದೆ ಅವರನ್ನು ರಾಮಕೃಷ್ಣ ಸಂಘದಲ್ಲಿ ಹಾಗೂ ಭಕ್ತವೃಂದದಲ್ಲಿ ರೂಢಿಯಲ್ಲಿರುವಂತೆ 'ಸ್ವಾಮೀಜಿ' ಎಂದು ಸಂಬೋಧಿಸೋಣ) ಈ ಎರಡೂ ಮನೋಭಾವಗಳೂ ಬಲವತ್ತರವಾಗಿ ಕೆಲಸ ಮಾಡುತ್ತಿದ್ದುವು. ಕೆಲವು ಸಲವಂತೂ ಅವರೊಳಗೆ ಒಂದು ಹೋರಾಟವೇ ಆರಂಭ ವಾಗಿಬಿಡುತ್ತಿತ್ತು—ಮಠದಲ್ಲೇ ನೆಲೆ ನಿಲ್ಲಲೆ, ಅಥವಾ ಪರಿವ್ರಾಜಕನಾಗಿ ಹೊರಟು ಬಿಡಲೆ?—ಎಂದು. ಪರಿವ್ರಾಜಕರಾಗಿ ತೀರ್ಥಾಟನೆ-ದೇಶಸಂಚಾರ ಮಾಡುವುದು ಸಂನ್ಯಾಸಿಗಳಲ್ಲಿ ಬೆಳೆದುಬಂದಿರುವ ಸಂಪ್ರದಾಯ. ಆದ್ದರಿಂದ ಅವರಿಗೆ ಸಹಜವಾದ ಪರಿವ್ರಾಜಕಮನೋಭಾವವು ಈ. ಯುವಸಂನ್ಯಾಸಿಗಳನ್ನು ಮಠ ತ್ಯಜಿಸಿ ದೂರ ಹೋಗುವಂತೆ, ಏಕಾಂತದಲ್ಲಿದ್ದುಕೊಂಡು ಸಾಧನೆ ಮಾಡುವಂತೆ ಪ್ರೇರೇಪಿಸುತ್ತಿತ್ತು. ಇವರಲ್ಲಿ ಒಬ್ಬಿಬ್ಬರನ್ನು ಬಿಟ್ಟು ಮಿಕ್ಕವರೆಲ್ಲ ಒಂದಲ್ಲ ಒಂದು ವೇಳೆಯಲ್ಲಿ ಪರಿವ್ರಾಜಕ ರಾಗಿ ಹೊರಟು ಹಲವಾರು ವರ್ಷಗಳ ಬಳಿಕ ಮಠಕ್ಕೆ ಹಿಂದಿರುಗಿದರು ಎನ್ನುವುದನ್ನು ನೋಡಲಿದ್ದೇವೆ. ಆದರೆ ಒಂದು ಅತಿ ಮುಖ್ಯವಾದ ಅಂಶವೆಂದರೆ, ಮಠದ ಅಸ್ತಿತ್ವಕ್ಕೇ ಧಕ್ಕೆಯಾಗುವಂತಹ ಪರಿಸ್ಥಿತಿ ಎಂದೂ ಬರಲಿಲ್ಲ ಎಂಬುದು. ಯಾವಾಗಲೂ ಸಂನ್ಯಾಸಿ ಗಳ ಒಂದು ಗುಂಪು ಮಠದಲ್ಲಿ ಇದ್ದೇ ಇರುತ್ತಿತ್ತು, ಇವರು ಶ್ರೀರಾಮಕೃಷ್ಣರ ಪೂಜಾದಿ ಗಳನ್ನು, ಆಧ್ಯಾತ್ಮಿಕ ಸಾಧನೆಯನ್ನು ನಡೆಸುತ್ತಲೇ ಇದ್ದು ಮಠದಲ್ಲಿ ಆಧ್ಯಾತ್ಮಿಕ ವಾತಾ ವರಣವನ್ನು ನಿರ್ಮಾಣ ಮಾಡಿದ್ದರು. ಮಠಸ್ಥಾಪನೆಯಾದ ಮೊದಲ ನಾಲ್ಕು ವರ್ಷ ಗಳ ಕಾಲ ಸ್ವಾಮೀಜಿಯವರು ಸಣ್ಣಪುಟ್ಟ ತೀರ್ಥಯಾತ್ರೆಗಳಿಗೆ ಹೋಗಿಬರುತ್ತಿದ್ದರು. ಆದರೆ ಮುಂದಿನ ಏಳು ವರ್ಷಗಳ ದೀರ್ಘಕಾಲ ಅವರು ಮಠಕ್ಕೆ ಹಿಂದಿರುಗದೆ ನಿರಂತರ ಪರಿವ್ರಾಜಕರಾಗಿಯೇ ಉಳಿದರು.

ಹಿಂದೂ ಸಂನ್ಯಾಸಿಗಳಿಗೆ ತೀರ್ಥಾಟನೆಯಲ್ಲಿ ತುಂಬ ಪ್ರೇಮ. ಹಿಂದಿಯಲ್ಲಿ ಒಂದು ಮಾತಿದೆ—'ಬಹ್‌ತಾ ಪಾನಿ, ಚಲ್‌ತಾ ಸಾಧು'. ಹಾಗೆಂದರೆ, ನೀರು ಯಾವಾ ಗಲೂ ಹರಿಯುತ್ತಿರಬೇಕು, ಸಂನ್ಯಾಸಿ ಯಾವಾಗಲೂ ಸಂಚರಿಸುತ್ತಿರಬೇಕು ಎಂದು. ಹೀಗಿದ್ದರೆ ನೀರೂ ನಾರುವುದಿಲ್ಲ, ಸಂನ್ಯಾಸಿಯೂ ಕೆಡುವುದಿಲ್ಲ. ನೀರು ಒಂದೇ ಕಡೆ ನಿಂತರೆ ಪಾಚಿ ಕಟ್ಟುತ್ತದೆ, ಕೊಳೆತು ನಾರುತ್ತದೆ. ಬಳಿಕ ಸೊಳ್ಳೆ-ಕ್ರಿಮಿಕೀಟಗಳೂ

ಹುಟ್ಟಿಕೊಳ್ಳುತ್ತವೆ. ಹಾಗೆಯೇ ಸಂನ್ಯಾಸಿಗಳು ಒಂದೇ ಕಡೆ ಹಲವಾರು ವರ್ಷ ಇರುವುದರಿಂದ ಅವರಿಗೆ ಆ ಸ್ಥಳದ ಮೇಲೆ ಆಸಕ್ತಿ-ಮಮಕಾರ ಹುಟ್ಟಬಹುದು; ಆ ಊರಿನ ವ್ಯಕ್ತಿಗಳ ಮೇಲೆ ಆಸಕ್ತಿ ಬೆಳೆಯುಬಹುದು; ಕೆಲವು ವ್ಯಕ್ತಿಗಳ ಮೇಲೆ ವಿಶೇಷ ವ್ಯಾಮೋಹ ಹುಟ್ಟಿಕೊಳ್ಳಲೂಬಹುದು. ಸಂನ್ಯಾಸಿಗಳೆಂದರೆ ಸರ್ವಸಂಗಪರಿತ್ಯಾಗ ಮಾಡಿದವರು. ಸಂಗತ್ಯಾಗ ಮಾಡಿದರೆ ಮಾತ್ರ ಆಧ್ಯಾತ್ಮಿಕತೆಯಲ್ಲಿ ಪ್ರಗತಿ. ಈ ಕಾರಣದಿಂದಲೇ ಅವರು ಒಂದು ಸ್ಥಳದಲ್ಲಿ ಬಹಳ ಕಾಲ ನಿಲ್ಲದೆ ಸದಾ ಸಂಚಾರ ಮಾಡುತ್ತಿರಬೇಕು. ಆದ್ದರಿಂದಲೇ ಅವರಿಗೆ ಪರಿವ್ರಾಜಕರು ಎಂಬ ಹೆಸರು. ಅಲ್ಲದೆ ತೀರ್ಥಾಟನೆಯೆಂದರೆ ಯಾರಿಗೆ ಇಷ್ಟವಿಲ್ಲ! ಯಾವ ಕ್ಷೇತ್ರಗಳಲ್ಲಿ ಭಗವಂತ ವಿಶೇಷ ವಾಗಿ ಆರಾಧಿಸಲ್ಪಡುತ್ತಿದ್ದಾನೆಯೋ, ಯಾವ ಕ್ಷೇತ್ರಗಳು ಅಸಂಖ್ಯಾತ ಸಾಧು-ಸಂತರ ಸಮಾಗಮದಿಂದ ಮತ್ತಷ್ಟು ಪುನೀತವಾಗಿವೆಯೋ ಅಂಥಲ್ಲಿಗೆ ಹೋಗಲು ಯಾರಿಗೆ ತಾನೆ ಇಷ್ಟವಿಲ್ಲ! ಅದರಲ್ಲೂ ಭಗವಂತನ ಸಾಕ್ಷಾತ್ಕಾರವನ್ನೇ ಜೀವನದ ಏಕೈಕ ಗುರಿ ಯನ್ನಾಗಿಸಿಕೊಂಡು ಸರ್ವಸಂಗಪರಿತ್ಯಾಗ ಮಾಡಿರುವ ವಿರಾಗಿಗಳಿಗೆ ಇಂತಹ ಇಚ್ಛೆ ಯಾದರೆ ಅದರಲ್ಲಿ ಆಶ್ಚರ್ಯವೇನಿದೆ? ಅಂತೆಯೇ ಬಾರಾನಾಗೋರ್ ಮಠದ ನೂತನ ಸಂನ್ಯಾಸಿಗಳಿಗೂ ಆ ಇಚ್ಛೆ ಉಂಟಾಗಿದೆ.

೧೮೮೭ರ ಫೆಬ್ರವರಿ ಅಂತ್ಯದಲ್ಲಿ ಶಾರದಾನಂದ, ಅಭೇದಾನಂದ ಹಾಗೂ ಪ್ರೇಮಾನಂದ—ಇವರು ಪುರೀಕ್ಷೇತ್ರಕ್ಕೆ ಹೊರಟರು. ಅಖಂಡಾನಂದರು ಟಿಬೆಟಿನ ಕಡೆಗೆ ಹೊರಟರು.

ಮೇ ತಿಂಗಳಲ್ಲೊಂದು ದಿನ ತ್ರಿಗುಣಾತೀತಾನಂದರು ತಾವು ಎಲ್ಲಿಗೋ ಹೋಗು ವುದಾಗಿ ಹೇಳಿ ಇದ್ದಕ್ಕಿದ್ದಂತೆ ಕಾಣೆಯಾಗಿಬಿಟ್ಟರು. ತಾವು ಯಾವ ಕಡೆಗೆ ಹೋಗುತ್ತೇವೆ ಎಂಬುದನ್ನು ಯಾರ ಹತ್ತಿರವೂ ಬಾಯಿಬಿಟ್ಟರಲಿಲ್ಲ. ಸ್ವಾಮೀಜಿ ಆ ದಿನ ಮಠದಲ್ಲಿರ ಲಿಲ್ಲ. ಕಾರಣಾಂತರದಿಂದ ಕಲ್ಕತ್ತಕ್ಕೆ ಹೋಗಿದ್ದರು. ಅಲ್ಲಿಂದ ಹಿಂದಿರುಗಿ ಬಂದಾಗ ನೋಡುತ್ತಾರೆ—ತ್ರಿಗುಣಾತೀತಾನಂದರು ನಾಪತ್ತೆ! ಅವರಿಗೆ ತುಂಬ ಕಳವಳ ವಾಯಿತು, ಸಿಟ್ಟೂ ಬಂದಿತು. ಏಕೆಂದರೆ ತ್ರಿಗುಣಾತೀತಾನಂದರು ವಯಸ್ಸಿನಲ್ಲಿ ಬಹಳ ಚಿಕ್ಕವರು (ವಯಸ್ಸು ಸುಮಾರು ೧೮-೧೯ ವರ್ಷ ಅಷ್ಟೆ); ಲೋಕಾನುಭವ ಸಾಲದು. ಯಾರಾದರೂ ದುಷ್ಟರ ಕೈಗೆ ಸಿಕ್ಕಿಕೊಂಡರೇನು ಗತಿ? ಅಥವಾ ಸಾಕ್ಷಾತ್ಕಾರ ಮಾಡಿ ಕೊಳ್ಳಬೇಕೆಂಬ ಉತ್ಸಾಹದಲ್ಲಿ, ಅತಿ ಸಾಧನೆ ಮಾಡಿ ಅಪಾಯಕ್ಕೆ ಗುರಿಯಾದರೇನು ಗತಿ?—ಎಂದು ಸ್ವಾಮೀಜಿ ತಳಮಳಿಸಿದರು. ಆದರೆ ತ್ರಿಗುಣಾತೀತಾನಂದರು ಹೋಗು ವಾಗ ಒಂದು ಪತ್ರವನ್ನು ಬರೆದಿಟ್ಟು ಹೋಗಿದ್ದರು. ದಕ್ಷಿಣೇಶ್ವರಕ್ಕೆ ಹೋಗಿದ್ದ ಬ್ರಹ್ಮಾ ನಂದರು ಅಲ್ಲಿಂದ ಹಿಂದಿರುಗಿದಾಗ ಆ ಪತ್ರವನ್ನು ಸ್ವಾಮೀಜಿಯ ಕೈಗೆ ಕೊಟ್ಟರು. ಆ ಪತ್ರದ ಒಕ್ಕಣೆ ಈ ರೀತಿ ಇತ್ತು: "ನಾನು ಮಠದಲ್ಲಿ ಉಳಿದುಕೊಳ್ಳುವುದು ಅಪಾಯ ಕರ ಎಂದು ತೋರುತ್ತಿದೆ. ಮನೆಯವರಿಂದ ನನಗೆ ತೊಂದರೆಯಿದೆ. ಆದ್ದರಿಂದ ನಾನು ಕಾಲ್ನಡಿಗೆಯಲ್ಲೇ ಬೃಂದಾವನಕ್ಕೆ ಹೋಗುತ್ತಿದ್ದೇನೆ."

ಈಗ ಬ್ರಹ್ಮಾನಂದರು ಸ್ವಾಮೀಜಿಗೆ ಹೇಳುತ್ತಾರೆ: "ನೋಡಿದೆಯಾ, ಅವನು ಹೊರಟುಹೋದದ್ದಕ್ಕೆ ಕಾರಣಗಳು ಇವು. ಅಲ್ಲದೆ ನಾವಾದರೂ ಇಲ್ಲಿ ಉಳಿದು ಕೊಂಡು ಸಾಧಿಸಿದ್ದೇನು? ಶ್ರೀರಾಮಕೃಷ್ಣರು ಯಾವಾಗಲೂ ನಮ್ಮನ್ನು ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುವಂತೆ ಹುರಿದುಂಬಿಸುತ್ತಿದ್ದರು. ನಾವು ಅದರಲ್ಲಿ ಜಯ

ಶಾಲಿಗಳಾಗಿದ್ದೇವೇನು ? ಆದ್ದರಿಂದ ನಾವೆಲ್ಲರೂ ನರ್ಮದಾತೀರಕ್ಕೆ ಹೋಗಿ ಸಾಧನೆ ಮಾಡೋಣ."

ಸ್ವಾಮೀಜಿ: "ಆದರೆ ಅಲ್ಲಿ ಇಲ್ಲಿ ಅಲೆದಾಡುವುದರಿಂದ ನೀನು ಹೇಳುತ್ತಿರುವ ಆ ಬ್ರಹ್ಮಜ್ಞಾನವನ್ನು ಪಡೆದುಕೊಂಡುಬಿಡಬಹುದೇನು ?"

ತಕ್ಷಣ ಅಲ್ಲಿದ್ದ ಒಬ್ಬ ಭಕ್ತ ಕೇಳುತ್ತಾನೆ: "ಹಾಗಾದರೆ ನೀವೆಲ್ಲ ಪ್ರಪಂಚವನ್ನು ತ್ಯಾಗ ಮಾಡಿ ಬಂದದ್ದೇಕೆ ?"

ಬ್ರಹ್ಮಜ್ಞಾನವನ್ನು ಪಡೆದುಕೊಳ್ಳಲು ಸುಲಭವಲ್ಲ ಎಂದಮೇಲೆ, ಸಂಸಾರವನ್ನು ತ್ಯಾಗ ಮಾಡುವುದಾದರೂ ಏಕೆ ? ಮದುವೆ ಮಾಡಿಕೊಂಡು ಹಾಯಾಗಿರಬಹುದಿತ್ತಲ್ಲ ! ಈಗ ನೋಡಿ; ಆ ಕಡೆ ಬ್ರಹ್ಮಾನಂದವೂ ಇಲ್ಲ, ಈ ಕಡೆ ದಾಂಪತ್ಯಸುಖವೂ ಇಲ್ಲ ! ಆದ್ದರಿಂದ ಮದುವೆಮಾಡಿಕೊಂಡು ಹಾಯಾಗಿರುವುದೇ ಒಳ್ಳೆಯದಲ್ಲವೆ ?—ಇದು ಆ ಭಕ್ತನ ಇಂಗಿತ. ಅದಕ್ಕೆ ಸ್ವಾಮೀಜಿ ಹೇಳುತ್ತಾರೆ:

"ರಾಮ ಸಿಕ್ಕಲಿಲ್ಲ ಅಂತ ಶ್ಯಾಮನನ್ನು ಕಟ್ಟಿಕೊಳ್ಳೋಣವೆ ? ಭಗವಂತನ ಸಾಕ್ಷಾತ್ಕಾರವಾಗಲಿಲ್ಲ ಅಂದಮಾತ್ರಕ್ಕೆ ಮದುವೆ ಮಾಡಿಕೊಂಡು ಸಂತಾನೋತ್ಪತ್ತಿ ಮಾಡುತ್ತ ಕುಳಿತುಕೊಳ್ಳಬೇಕೆ ? ಏನು ಹೇಳುತ್ತೀ ನೀನು ?"

ಸ್ವಾಮೀಜಿಯ ಈ ಮಾತಿನಲ್ಲಿ, ಕೈಗೊಂಡ ಆದರ್ಶವನ್ನು ದೃಢಬುದ್ಧಿಯಿಂದ ಪಾಲಿಸಿಕೊಂಡುಬರುವ ಛಲ ಎದ್ದುಕಾಣುತ್ತದೆ.

ಆದರೆ ಅವರೆಲ್ಲರ ಆಶ್ಚರ್ಯಕ್ಕೆ, ತ್ರಿಗುಣಾತೀತಾನಂದರು ಒಂದೆರಡು ದಿನಗಳಲ್ಲೇ ಮಠಕ್ಕೆ ಹಿಂದಿರುಗಿ ಬಂದರು. ಬಹಳ ದೂರ ಹೋಗಲು ಅವರಿಂದ ಸಾಧ್ಯವಾಗಲಿಲ್ಲ.

ಇಲ್ಲಿ ಸ್ವಾಮೀಜಿಯವರು ಪರಿವ್ರಾಜಕ ಜೀವನವನ್ನು ಅನುಮೋದಿಸುವುದಿಲ್ಲ ಎಂಬಂತೆ ತೋರುತ್ತದೆ. ಆದರೆ ಇನ್ನು ಕೆಲವೇ ದಿನಗಳಲ್ಲಿ ಅವರೇ ಪರಿವ್ರಾಜಕರಾಗಿ ದೇಶಸಂಚಾರಕ್ಕೆ ಹೊರಡುವುದನ್ನು ನಾವು ನೋಡುತ್ತೇವೆ. ಹಾಗಾದರೆ ಈಗೇಕೆ ಆ ರೀತಿ ಹೇಳಿದರು ? ಅದಕ್ಕೆ ಉತ್ತರವಿಷ್ಟೆ: ಭಗವಂತನ ಸಾಕ್ಷಾತ್ಕಾರಕ್ಕೆ ನಿಜವಾಗಿಯೂ ಈ ಅಲೆದಾಟವೇನೂ ಸಹಾಯ ಮಾಡುವುದಿಲ್ಲ. ಒಂದು ಕಡೆ ನೆಲೆನಿಂತು ಸಾಧನೆ ಮಾಡಿದರೆ ಮಾತ್ರ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಸ್ವಯಂ ಶ್ರೀರಾಮಕೃಷ್ಣರೇ ಎಲ್ಲೂ ಅಲೆದಾಡಿದವರಲ್ಲ. ಅವರು ದಕ್ಷಿಣೇಶ್ವರದಲ್ಲೇ ನೆಲೆನಿಂತು ಸ್ಥಿರಗತಿಯಿಂದ ಸಾಧನೆ ಮಾಡಿದವರು. ಅವರೇ ಹೇಳುತ್ತಿದ್ದರು—"ಸಾಧಕನಾದವನು ಮೊದಲು 'ಬಹೂದಕ'ನಾಗುತ್ತಾನೆ, ಬಳಿಕ 'ಕುಟೀಚಕ'ನಾಗುತ್ತಾನೆ" ಎಂದು. ಬಹೂದಕನೆಂದರೆ, ಹಲವಾರು ಸ್ಥಳಗಳಲ್ಲಿನ ಹಲವಾರು ಬಾವಿಗಳ-ಕೆರೆಗಳ ನೀರು ಕುಡಿಯುವವನು. ಅರ್ಥಾತ್ ಹಲವು ಹದಿನೆಂಟು ಕಡೆ ತಿರುಗಾಡುವವನು. ಇವನು ಹಲವಾರು ಕಡೆ ತಿರುಗಾಡುವುದೇಕೆಂದರೆ, ಇವನ ಚಂಚಲ ಮನಸ್ಸಿಗೆ ಅನ್ನಿಸುತ್ತದೆ—'ಆಹ್ ! ಹೃಷೀಕೇಶಕ್ಕೆ ಹೋಗಿ ತಪಸ್ಸು ಮಾಡಿದರೆ ಬೇಗ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು' ಎಂದು. ಸರಿ; ಹೃಷೀಕೇಶಕ್ಕೆ ಹೋಗುತ್ತಾನೆ, ಸಾಧನೆ ಮಾಡುತ್ತಾನೆ. ಆದರೆ ಭಗವಂತ ದರ್ಶನ ಕೊಡುವ ಸೂಚನೆ ಕಂಡುಬರುವುದಿಲ್ಲ. ಇವನ ಚಂಚಲ ಮನಸ್ಸಿಗೆ ಆಗ ಹೃಷೀಕೇಶವೂ ರುಚಿಸುವುದಿಲ್ಲ. ಆಗ ಅವನಿಗೆ ರಾಮೇಶ್ವರದ ನೆನಪಾಗುತ್ತದೆ. ಸರಿ, ಹೊರಡುತ್ತಾನೆ. ದಾರಿಯಲ್ಲಿ ಇನ್ನೂ ಹಲವಾರು ತೀರ್ಥಕ್ಷೇತ್ರಗಳ ಹೆಸರುಗಳೆಲ್ಲ ಕಿವಿಗೆ

ಬೀಳುತ್ತವೆ. ಅಲ್ಲಿಗೆಲ್ಲಾ ಹೋಗಿ ನೋಡುತ್ತಾನೆ. ತೀರ್ಥ ಕುಡಿಯುತ್ತಾನೆ. ಹಾಗೇ ರಾಮೇಶ್ವರಕ್ಕೆ ಬರುತ್ತಾನೆ. ಅಲ್ಲಿಯೂ ಸಾಧನೆ ಮಾಡಲಾರಂಭಿಸುತ್ತಾನೆ. ಆದರೆ ಭಗವಂತನ ಸಾಕ್ಷಾತ್ಕಾರ ಮಾತ್ರ ಆಗುವುದಿಲ್ಲ. ಭಗವಂತನ ಸಾಕ್ಷಾತ್ಕಾರವಾಗದಿರುವುದು ಆ ಕ್ಷೇತ್ರದ ಶಕ್ತಿಯ ಅಭಾವದಿಂದಲ್ಲ, ಇವನ ಮನಸ್ಸಿನ ಚಂಚಲತೆಯಿಂದ. ಈ ಸತ್ಯ ಅವನ ಮನಸ್ಸಿಗೆ ಯಾವಾಗ ಗೋಚರಿಸುತ್ತದೆಂದರೆ, ಹಲವಾರು ಕ್ಷೇತ್ರಗಳ ತೀರ್ಥ ಕುಡಿದ ಮೇಲೆ—'ಬಹೂದಕ'ನಾದ ಮೇಲೆ. ಆಗ ಅವನು ಒಂದು ಸ್ಥಳವನ್ನು ಆರಿಸಿಕೊಂಡು, ಒಂದು ಕುಟೀರವನ್ನು ಕಟ್ಟಿಕೊಂಡು, ಅಲ್ಲಿ ಸ್ಥಿರವಾಗಿ ನೆಲೆನಿಂತು ನಿಶ್ಚಲ ಮನಸ್ಸಿನಿಂದ ಸಾಧನೆಗೆ ತೊಡಗುತ್ತಾನೆ. ಹೀಗೆ ಅವನು 'ಕುಟೀಚಕ'ನಾಗುತ್ತಾನೆ. ನಿಜವಾಗಿ ಸಾಧನೆ ಮಾಡಬೇಕೆಂಬವನು ಕೊನೆಗೆ ಕುಟೀಚಕನಾಗಿ ದೃಢವಾಗಿ ನಿಲ್ಲಬೇಕಾಗುತ್ತದೆ. ಕ್ರಮವಾಗಿ, ನಿಯಮಬದ್ಧವಾಗಿ ಸಾಧನೆ ಮಾಡಬೇಕಾದರೆ ಅಲ್ಲಿ ಇಲ್ಲಿ ಅಲೆದಾಡುವುದರಿಂದ ಸಾಧ್ಯವೆ? 'ಹಾಗಾದರೆ, ಸ್ವಾಮಿ ವಿವೇಕಾನಂದರೇ ಏಳು ವರ್ಷಗಳ ಕಾಲ ಭಾರತವಿಡೀ ಸಂಚರಿಸಿದರಲ್ಲಾ!' ಎಂದರೆ, ಅದು ಬೇರೆಯೇ ವಿಚಾರ. ಇಡೀ ಭಾರತದ ಸಾಮಾಜಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಹಿನ್ನೆಲೆಯನ್ನು ಹಾಗೂ ಪ್ರಕೃತ ಪರಿಸ್ಥಿತಿಗಳನ್ನು ಅವರು ಕಣ್ಣಾರೆ ಕಂಡು ಅರಿತುಕೊಳ್ಳಬೇಕಾದ ಆವಶ್ಯಕತೆಯಿತ್ತು. ಭಾರತದಾದ್ಯಂತ ನೂರಾರು ಜನರ ಸ್ನೇಹ-ಪ್ರೇಮ-ಭಕ್ತಿಗಳನ್ನು ಗೆದ್ದು, ಅವರಿಂದ ತಮ್ಮ ಧರ್ಮಪ್ರಸಾರ ಕಾರ್ಯಕ್ಕೆ ನೆರವನ್ನು ಪಡೆಯಬೇಕಾಗಿತ್ತು. ಅಲ್ಲದೆ, ಸ್ವತಃ ವಿವೇಕಾನಂದರ ವ್ಯಕ್ತಿತ್ವ ಕೂಡ ಮತ್ತಷ್ಟು ದೃಢವೂ ಪ್ರೌಢವೂ ಆಗಬೇಕಾಗಿತ್ತು. ಶ್ರೀರಾಮಕೃಷ್ಣರೇ ಹೇಳಿದಂತೆ, ಅವರು ಮುಂದೆ ಲೋಕಶಿಕ್ಷಣ ಕಾರ್ಯ ಕೈಗೊಳ್ಳಬೇಕಾದದ್ದಿದೆ. ಜನತೆಗೆ ಬೋಧನೆ ಮಾಡಬೇಕಾದದ್ದಿದೆ. ಗುಲಾಮಗಿರಿಯಲ್ಲಿ ಮುಳುಗಿ ಹೋಗಿದ್ದ ಭಾರತವನ್ನು ಮೇಲೆತ್ತಬೇಕಾದ ಮಹಾಕಾರ್ಯವಿದೆ. ಆದ್ದರಿಂದ ಅವರು ದೇಶಸಂಚಾರ ಮಾಡಲೇಬೇಕಾಗಿದೆ. ಆದರೆ ಅವರಂತೆಯೇ ಎಲ್ಲರೂ ಬಾರಾನಾಗೋರ್ ಮಠದಿಂದ ಹೊರಟುಬಿಟ್ಟರೆ ಇವರ ಸಂಘವೆನ್ನುವುದು ಹೇಳಹೆಸರಿಲ್ಲದಂತಾಗಿಬಿಡುವ ಸಾಧ್ಯತೆಯಿತ್ತು. ಆದ್ದರಿಂದ ಕೆಲವರಾದರೂ ಅಲ್ಲಿ ಉಳಿದುಕೊಳ್ಳುವಂತೆ ಮಾಡುವ ಉದ್ದೇಶದಿಂದಲೇ ಸ್ವಾಮೀಜಿಯವರು ಸೋದರಸಂನ್ಯಾಸಿಗಳ ವಿಷಯದಲ್ಲಿ ಪರಿವ್ರಾಜಕ ಜೀವನವನ್ನು ಪ್ರೋತ್ಸಾಹಿಸುವುದಿಲ್ಲ.

ದಿನ ಕಳೆದಂತೆ, ಪರಿವ್ರಾಜಕರಾಗಿ ಹೊರಟುಬಿಡಬೇಕೆಂಬ ಹಂಬಲ ಸ್ವಾಮೀಜಿಯಲ್ಲಿ ತೀವ್ರವಾಯಿತು. ಇತರ ಸೋದರ ಸಂನ್ಯಾಸಿಗಳಲ್ಲಿ ಈ ತೀರ್ಥಾಟನೆಯ ಹಂಬಲ ನೂರಕ್ಕೆ ಐವತ್ತರಷ್ಟಿದ್ದರೆ, ಸ್ವಾಮೀಜಿಯಲ್ಲಿ ಅದು ನೂರಕ್ಕೆ ಸಾವಿರದಷ್ಟಿತ್ತು. ಹಿಂದೆ ಅವರು ಸೋದರಸಂನ್ಯಾಸಿಗಳಿಗೆ 'ಸುಮ್ಮನೆ ಅಲೆದಾಡಿ ಏನು ಸಾಧಿಸುತ್ತೀರಿ?' ಎಂದಿದ್ದರೂ ಕೂಡ, ಈಗ ಅದೇ ಪರಿವ್ರಜನದ ಗುಣಗಾನ ಮಾಡುತ್ತಿದ್ದರು. ಈಗ ತಪಸ್ಸಿಗಾಗಿ, ತೀರ್ಥಯಾತ್ರೆಗಾಗಿ ಹೊರಟುನಿಂತ ಸೋದರಸಂನ್ಯಾಸಿಗಳ ಬಗ್ಗೆ ಅವರ ಧೋರಣೆಯೇನೆಂದರೆ—'ಅವರು ತಂತಮ್ಮ ಅನುಭವವನ್ನು ತಾವೇ ಗಳಿಸಿಕೊಳ್ಳಲಿ. ಈ ಮಠದಿಂದ ಬಿಡಿಸಿಕೊಂಡುಹೋಗಿ, ಸ್ವತಂತ್ರರಾಗಿದ್ದು, ತಮ್ಮ ಸತ್ತ್ವಪರೀಕ್ಷೆ ಮಾಡಿಕೊಳ್ಳಲಿ. ಈ ಹೊಸ ಜೀವನಾನುಭವಗಳು ಅವರನ್ನು ಧೀರರನ್ನಾಗಿ, ಅಜೇಯರನ್ನಾಗಿ ಮಾಡುತ್ತವೆ. ಹೀಗೆ ಅವರು ಪುರುಷಸಿಂಹರಾಗುತ್ತಾರೆ' ಎಂಬುದಾಗಿತ್ತು. ಅದನ್ನೇ ತಮ್ಮ ಗುರುಭಾಯಿಗಳ ಮುಂದೆ ವ್ಯಕ್ತಪಡಿಸಿ, ಪರಿವ್ರಾಜಕ ಜೀವನ ಕೈಗೊಳ್ಳುವಂತೆ

ಅವರನ್ನು ಪ್ರೋತ್ಸಾಹಿಸಿದರು. ಆದಾಗಲೇ ಕೆಲವರು ತಪಸ್ಸಿಗಾಗಿ ದೂರಸ್ಥಳಗಳಿಗೆ ಹೋಗಿಯಾಗಿತ್ತು. ಉಳಿದವರಲ್ಲೂ ಆ ಇಚ್ಛೆ ಇದ್ದೇ ಇತ್ತು. ಈಗ ಸ್ವಾಮೀಜಿಯ ಅನುಮತಿ-ಪ್ರೋತ್ಸಾಹ ಸಿಕ್ಕಿದಾಗ ಉಳಿದವರೂ ಒಬ್ಬೊಬ್ಬರಾಗಿ ಹೊರಟರು—ಸ್ವಾಮಿ ರಾಮಕೃಷ್ಣಾನಂದರೊಬ್ಬರನ್ನು ಬಿಟ್ಟು. ರಾಮಕೃಷ್ಣಾನಂದರು ಮಠದಲ್ಲಿ ಶ್ರೀರಾಮ ಕೃಷ್ಣರ ಪೂಜೆಯನ್ನೇ ತಮ್ಮ ಪ್ರಧಾನ ಸಾಧನೆಯನ್ನಾಗಿ ಮಾಡಿಕೊಂಡವರು. ಅವರೂ ತೀರ್ಥಾಟನೆಗಾಗಿ ಅಥವಾ ಸಾಧನೆಗಾಗಿ ದೇಶಾಂತರ ಹೊರಟರೆ ಇಲ್ಲಿ ತಮ್ಮ ಗುರುದೇವನ ಪೂಜಾದಿಗಳನ್ನು ಬಿಡದೆ ಮಾಡುವವರು ಯಾರು ? ಆದ್ದರಿಂದ ಎಷ್ಟೇ ಒತ್ತಾಯ ಮಾಡಿದರೂ ಅವರು ಹೊರಡಲೇ ಇಲ್ಲ. ಸ್ವಾಮೀಜಿ ಈಗ ಅವರನ್ನು ತೀರ್ಥಾಟನೆ ಮಾಡುವಂತೆ ಒತ್ತಾಯಿಸಿದ್ದರೂ, ಮುಂದೆ ತಾವೇ "ನಿಜಕ್ಕೂ ಅವನು ಮಠದ ಬೆನ್ನೆಲುಬು !" ಎಂದು ಕೊಂಡಾಡುತ್ತಾರೆ.

ಸ್ವಾಮೀಜಿಯ ಮನಸ್ಸು ಈಗ, ಮಠದಿಂದ ಹೊರಟು ಪರಿವ್ರಾಜಕರಾಗಿ ದೀರ್ಘ ಕಾಲ ಸುತ್ತಾಡಬೇಕೆಂದು ತುಂಬ ಕಾತರಗೊಂಡಿತ್ತು. ಆದರೆ, ಹಾಗೆ ಮಾಡಲು ಅವರಿಗೆ ಬಹಳ ಕಾಲ ಸಾಧ್ಯವಾಗಲಿಲ್ಲ. ಎಷ್ಟೋ ಸಲ ಹಾಗೆ ಹೊರಟಿದ್ದರೂ, ಕೆಲವೇ ತಿಂಗಳಲ್ಲಿ ಹಿಂದಿರುಗಿ ಬಂದುಬಿಡಬೇಕಾಯಿತು. ಪ್ರತಿ ಸಲ ಹೊರಡುವಾಗಲೂ, "ಇನ್ನು ನಾನು ಹಿಂದಿರುಗುವುದು ಬಹಳ ವರ್ಷಗಳ ಮೇಲೆಯೇ" ಎಂದು ತಮ್ಮ ಗುರುಭಾಯಿಗಳಿಗೆ ಹೇಳುತ್ತಿದ್ದರು. ಆದರೆ ಒಂದಲ್ಲ ಒಂದು ಕಾರಣದಿಂದಾಗಿ ಹಿಂದಿರುಗಬೇಕಾಗುತ್ತಿತ್ತು. ಒಂದು ಸಲ ತೀವ್ರವಾಗಿ ಕಾಯಿಲೆ ಬಿದ್ದದ್ದರಿಂದ ಹಿಂದಿರುಗಿ ಬರಬೇಕಾಯಿತು. ಇನ್ನೊಮ್ಮೆ, ತಮ್ಮ ಸೋದರಸಂನ್ಯಾಸಿಗಳಲ್ಲೇ ಒಬ್ಬರಿಗೆ ಕಾಯಿಲೆ ಎಂಬ ಕಾರಣದಿಂದ ಬರಬೇಕಾಯಿತು. ಮತ್ತೊಮ್ಮೆ, ಶ್ರೀರಾಮಕೃಷ್ಣರ ಗೃಹೀಭಕ್ತನೂ ತಮ್ಮೆಲ್ಲರ ಆಪ್ತನೂ ಆದ ಬಲರಾಮ್ ಬಾಬು ತೀರಿಕೊಂಡನೆಂಬ ಸುದ್ದಿ ತಿಳಿಯಿತು. ಅದನ್ನು ಕೇಳಿ ದುಃಖಿತ ರಾಗಿ, ಆ ಸಂದರ್ಭದಲ್ಲಿ ಬಲರಾಮನ ಕುಟುಂಬದವರನ್ನು ಸಂಧಿಸಿ ಅವರಿಗೆ ಸಾಂತ್ವನ ನೀಡಲು ಹಿಂದಿರುಗಿ ಬರುವುದನ್ನು ನೋಡಲಿದ್ದೇವೆ. ಅಂತೂ, ಮುಂದೆ ೧೮೯೦ರಲ್ಲಿ ಬಾರಾನಾಗೋರ್ ಮಠವನ್ನು ಬಿಟ್ಟು ಹೊರಟು, ಸಮಸ್ತ ಭಾರತದ ಸಂಚಾರವನ್ನೂ, ಪಶ್ಚಿಮ ದೇಶಗಳ ಜೈತ್ರಯಾತ್ರೆಯನ್ನೂ ಮುಗಿಸಿಕೊಂಡು ಹಿಂದಿರುಗುವವರೆಗೆ, ಏಳು ವರ್ಷಗಳ ದೀರ್ಘಕಾಲ ಮಠದಿಂದ ದೂರ ಉಳಿದಿದ್ದರು.

ಆದರೆ ಒಂದು ದೃಷ್ಟಿಯಿಂದ, ಅವರು ಹಾಗೆ ವಾಪಸು ಬರುತ್ತಿದ್ದುದಕ್ಕೆ, ಇವೆಲ್ಲ ನೆಪಮಾತ್ರ ಕಾರಣಗಳು ಎನ್ನಬೇಕು. ನಿಜಕ್ಕೂ, ಸ್ವಾಮೀಜಿಯವರು ತಮ್ಮ ಇತರ ಸೋದರಸಂನ್ಯಾಸಿಗಳಂತೆ ನಿರ್ಯೋಚನೆಯಿಂದ ಹೊರಟುಬಿಡಲು ಸಾಧ್ಯವಿರಲಿಲ್ಲ. ಅವರು ಸಂಘದ ನಾಯಕರಲ್ಲವೆ ? ಆದ್ದರಿಂದ, ಮಠ ಒಂದು ಸುಸಂಘಟಿತ ಸ್ಥಿತಿಗೆ ಬರುವುದಕ್ಕೆ ಮುಂಚೆಯೇ ಅವರು ಒಂದೇ ಸಲಕ್ಕೆ ಹೊರಟುಬಿಟ್ಟಿದ್ದರೆ, ಸಂಘ ನಿರ್ಮಾಣ ಕಾರ್ಯದ ಮಹೋದ್ದೇಶ ಕನಸಾಗಿಯೇ ಉಳಿಯುತ್ತಿತ್ತು. ಆದರೆ ಈ ಮಠ ಹಾಗೂ ಸೋದರಸಂನ್ಯಾಸಿಗಳೊಂದಿಗಿನ ತಮ್ಮ ಸಂಬಂಧವನ್ನು ಅವರು 'ಚಿನ್ನದ ಸರಪಳಿ' ಎಂದು ಕೆಲವೊಮ್ಮೆ ಭಾವಿಸುತ್ತಿದ್ದರು. ಅಂತೂ, ಕಾಲ ಪಕ್ವವಾಗಿದೆ ಎನ್ನುವವರೆಗೆ ಅವರು ಮಠಕ್ಕೆ ಆಗಾಗ ಹಿಂದಿರುಗಿ ಬರುತ್ತಲೇ ಇರಬೇಕಾಯಿತು.

ಪರಿವ್ರಾಜಕ ವಿವೇಕಾನಂದರದು ಎಲ್ಲರ ಕಣ್ಮನ ಸೆಳೆಯುವಂತಹ ವ್ಯಕ್ತಿತ್ವ. ಒಬ್ಬ ಸಾಮಾನ್ಯ ಸಂನ್ಯಾಸಿಯಂತೆ ಕಾವಿಬಟ್ಟೆ ತೊಟ್ಟಿದ್ದರೂ ಅವರಲ್ಲಿ ರಾಜತೇಜಸ್ಸು,

ರಾಜಗಾಂಭೀರ್ಯ ಎದ್ದು ಕಾಣುತ್ತಿತ್ತು. ಅವರ ಸುದೃಢವಾದ ಎತ್ತರದ ಮೈಕಟ್ಟು, ದಷ್ಟಪುಷ್ಟವಾದ ಅಂಗಾಂಗಗಳು, ತೇಜಃಪುಂಜವಾದ ಕಣ್ಣುಗಳು, ಮನೋದಾರ್ಢ್ಯ ವನ್ನು ಪ್ರತಿಬಿಂಬಿಸುವ ಮುಖಲಕ್ಷಣ, ಪ್ರಭಾವಶಾಲಿಯಾದ, ಮಹಿಮೆಯನ್ನು ಸಾರಿ ಹೇಳುವ ಒಟ್ಟು ವ್ಯಕ್ತಿತ್ವ—ಇವುಗಳು ಅವರು ಹೋದಹೋದಲ್ಲೆಲ್ಲ ಜನ ಅವರನ್ನೇ ದಿಟ್ಟಿಸಿ ನೋಡುವಂತೆ ಮಾಡುತ್ತಿದ್ದುವು. ಅವರ ಶರೀರದ ಪ್ರತಿಯೊಂದು ಚಲನ ವಲನವೂ ನಯನಮನೋಹರವಾಗಿತ್ತು. ನೋಡಿದ ಕೂಡಲೇ ಕುತೂಹಲಮಿಶ್ರಿತ ಗೌರವ-ಭಕ್ತಿಗಳ ಭಾವವನ್ನೆಬ್ಬಿಸುವ ವ್ಯಕ್ತಿತ್ವ. ಕೈಯಲ್ಲಿ ದಂಡ, ಕಮಂಡಲು ಹಾಗೂ ಒಂದು ಪುಟ್ಟ ಗಂಟು; ಗಂಟಿನಲ್ಲಿ ಎರಡು ಪುಸ್ತಕಗಳು. ಒಂದು ಭಗವದ್ಗೀತೆ; ಇನ್ನೊಂದು, The Imitation of Christ('ಕ್ರಿಸ್ತನ ಅನುಸರಣೆ'). ಇವಿಷ್ಟನ್ನು ಹಿಡಿದು ಕೊಂಡು, ಕಾಷಾಯವಸ್ತ್ರಧಾರಿಯಾದ ಸ್ವಾಮೀಜಿ, ಶಾಂತವಾಗಿ, ಗಂಭೀರ ಮುಖ ಮುದ್ರೆಯನ್ನು ಧರಿಸಿ, ಆದರೆ ಹೃದಯದಲ್ಲಿ ಪರಮೋಲ್ಲಾಸದಿಂದ ಪರಿವ್ರಾಜಕರಾಗಿ ಸಾಗುತ್ತಿದ್ದರು.

ತಮ್ಮ ಪರಿವ್ರಾಜಕ ದಿನಗಳ ಬಗ್ಗೆ ಸ್ವಾಮೀಜಿ ದಿನಚರಿಯನ್ನಾಗಲಿ, ಇತರ ಟಿಪ್ಪಣೆಗಳನ್ನಾಗಲಿ ಬರೆದಿಡಲಿಲ್ಲ. ಅಲ್ಲದೆ ಅವುಗಳ ಬಗ್ಗೆ ಮುಂದೆ ಇತರರಿಗೆ ತಿಳಿಸಿದ್ದು ಕೂಡ ಅಪರೂಪ. ಯಾವಾಗಲಾದರೂ ಹಗುರವಾಗಿ ಯಾವುದಾದರೊಂದು ವಿಷಯ ವನ್ನು ಪ್ರಸ್ತಾಪಿಸುವುದಿತ್ತು, ಅಷ್ಟೆ. ಈ ದಿನಗಳಲ್ಲಿ ತಮಗಾದ ಆಧ್ಯಾತ್ಮಿಕ ಅನುಭವ ಗಳನ್ನಂತೂ ಅವರು ತಮ್ಮ ಸೋದರಸಂನ್ಯಾಸಿಗಳ ಹತ್ತಿರವೂ ಪ್ರಸ್ತಾಪಿಸುತ್ತಿರಲಿಲ್ಲ. ಆದ್ದರಿಂದ ಅವರ ಪ್ರಯಾಣದ ಅನುಭವಗಳ ವಿಷಯವಾಗಲಿ, ಜನಸಂಪರ್ಕದ ವಿವರಗಳಾಗಲಿ ನಮಗೆ ತಿಳಿದಿರುವುದು ಸ್ವಲ್ಪವೇ. ಹೀಗಿದ್ದರೂ ಅವರ ವಿವಿಧ ಅನುಭವ ಗಳಲ್ಲಿ ಕೆಲವನ್ನು ತಿಳಿಯಲು ಸಾಧ್ಯವಾಗಿದೆ. ಹೇಗೆಂದರೆ, ಎಷ್ಟೋ ಸಲ ಅವರ ಕೆಲವು ಸೋದರಸಂನ್ಯಾಸಿಗಳು ಅವರ ಜೊತೆಯಲ್ಲಿರುತ್ತಿದ್ದರು. ರಾಮಕೃಷ್ಣಾನಂದರನ್ನೂ ಅದ್ಭುತಾನಂದರನ್ನೂ ಬಿಟ್ಟು ಉಳಿದವರೆಲ್ಲರೂ ಮೊದಲ ನಾಲ್ಕು ವರ್ಷಗಳ ಅವಧಿ ಯಲ್ಲಿ ಬೇರೆಬೇರೆ ಸಮಯಗಳಲ್ಲಿ ಸ್ವಾಮೀಜಿಯೊಂದಿಗಿದ್ದರು. ಅದರಲ್ಲೂ ಅಖಂಡಾ ನಂದರು ಹೆಚ್ಚು ಕಾಲ ಇದ್ದರು. ಇವರೆಲ್ಲರ ಮೂಲಕ ಸ್ವಾಮೀಜಿಯ ಜೀವನದ ಈ ದಿನಗಳ ಬಗ್ಗೆ ಕೆಲವು ವಿವರಗಳು ದೊರಕಿವೆ. ಅಲ್ಲದೆ ಮುಂದೆ ಅವರು ಭಾರತದ ಬೇರೆಬೇರೆ ಪ್ರಾಂತಗಳಲ್ಲಿ ತಿರುಗಾಡುವಾಗ, ಅವರ ಸಂಪರ್ಕಕ್ಕೆ ಬಂದು, ಅವರಿಂದ ಗಾಢವಾಗಿ ಪ್ರಭಾವಿತರಾದವರು ನೂರಾರು ಜನ. ಇವರಲ್ಲನೇಕರು ಅವರ ಸಂಬಂಧ ವಾಗಿ ಹಲವಾರು ವಿಷಯಗಳನ್ನು, ಸಂಭಾಷಣೆಗಳನ್ನು ಬರೆದಿಟ್ಟುಕೊಂಡಿದ್ದರು. ಇನ್ನು ಅನೇಕರು ಮುಂದೆ ತಮ್ಮ ನೆನಪುಗಳಿಂದ ಸ್ಮೃತಿಚಿತ್ರವನ್ನು ರಚಿಸಿ ದಾಖಲಿಸಿದರು. ಈ ದಾಖಲೆಗಳ ಮೂಲಕ ನಮಗೆ ಹಲವಾರು ವಿಷಯಗಳು ತಿಳಿದುಬರುತ್ತವೆ. ಇವಲ್ಲದೆ, ಸ್ವಾಮೀಜಿ ತಮ್ಮ ಸೋದರಸಂನ್ಯಾಸಿಗಳಿಗೆ ಹಾಗೂ ಇತರ ಭಕ್ತರಿಗೆ ಆಗಾಗ ಬರೆದ ಹಲವಾರು ಪತ್ರಗಳು ಸಿಕ್ಕಿವೆ. ಈ ಎಲ್ಲ ಆಧಾರಗಳ ಸಹಾಯದಿಂದ ಅವರು ಜಗದ್ವಿಖ್ಯಾತ ಸ್ವಾಮಿ ವಿವೇಕಾನಂದರಾಗುವವರೆಗಿನ ಅವಧಿಯ ಒಂದು ಸ್ಥೂಲ ಚಿತ್ರವನ್ನು ರಚಿಸಬಹುದಾಗಿದೆ.

ಪರಿವ್ರಾಜಕರಾಗಿದ್ದ ಆ ದಿನಗಳಲ್ಲಿ ಸ್ವಾಮೀಜಿ ತಮ್ಮ ಅಪಾರ ವಿದ್ಯೆಯನ್ನೂ ಸಾಮರ್ಥ್ಯಗಳನ್ನೂ ಅಡಗಿಸಿಕೊಂಡು ಒಬ್ಬ ತೀರ ಸಾಮಾನ್ಯ ಸಂನ್ಯಾಸಿಯಂತೆ

ಸುತ್ತಾಡುತ್ತಿದ್ದರು. ಅವರಾಗಿಯೇ ಬಾಯಿಬಿಟ್ಟು ಮಾತನಾಡದಿದ್ದರೆ ಅವರಿಗೆ ಇಂಗ್ಲಿಷ್ ಭಾಷೆಯಲ್ಲಿ ಪ್ರಚಂಡ ಜ್ಞಾನವಿತ್ತು ಎಂಬುದನ್ನು ಊಹಿಸಲು ಯಾರಿಗೂ ಸಾಧ್ಯವಿರಲಿಲ್ಲ. ಕೆಲವೊಮ್ಮೆ ಅವರು ಭಿಕ್ಷೆಗಾಗಿ ಮನೆಮನೆಗೆ ಹೋಗದೆ, ತಾನಾಗಿಯೇ ಏನು ಬರುತ್ತದೆಯೋ ಅಷ್ಟರಲ್ಲೇ ಜೀವಿಸುವುದು ಎಂದು ನಿಶ್ಚಯಿಸುತ್ತಿದ್ದರು. ಆದರೆ ಬಡಪಾಯಿ ಸಂನ್ಯಾಸಿಯುನ್ನು ತಾವಾಗಿಯೇ ಕರೆದು ಊಟ ಬಡಿಸುವವರು ಎಷ್ಟು ಜನರಿದ್ದಾರು ? ಎಷ್ಟೋ ದಿನ ಉಪವಾಸವೇ ಗತಿಯಾಗುತ್ತಿತ್ತು. ಇವರಾಗಿ ಭಿಕ್ಷೆ ಕೇಳುವವರಲ್ಲ; ಜನ ತಾವಾಗಿಯೇ ಭಿಕ್ಷೆ ಹಾಕುವವರಲ್ಲ. ಈ ವ್ರತದಂತೆ ಅವರು ಅತಿ ಹೆಚ್ಚೆಂದರೆ ಐದು ದಿನಗಳವರೆಗೂ ನಿರಂತರವಾಗಿ ಉಪವಾಸವಿದ್ದದ್ದೂ ಉಂಟು ! ಎಷ್ಟೋ ಸಲ ಹಾಳುಬಿದ್ದ ಗುಡಿಯಲ್ಲೋ ಛತ್ರದಲ್ಲೋ ರಾತ್ರಿಯನ್ನು ಕಳೆಯುತ್ತಿದ್ದರು. ಇನ್ನು ಕೆಲವು ಸಲ ಕಾಡಿನ ನಡುವೆ, ಮರದ ಬುಡದಲ್ಲಿ ನಿದ್ರಿಸಿದ್ದೂ ಉಂಟು. ಒಮ್ಮೊಮ್ಮೆ ವಿಶಾಲವಾದ ಮೈದಾನದಲ್ಲಿ ಪ್ರಯಾಣ ಮಾಡುತ್ತಿರುವಾಗಲೇ ಕತ್ತಲಾಗಿ ಬಿಡುತ್ತಿತ್ತು. ಮುಂದೆ ಹೋಗಲು ಸಾಧ್ಯವಿಲ್ಲ, ಹಿಂದೆ ಹೋಗುವಂತೆಯೂ ಇಲ್ಲ. ಆಗ ನೆಲವೇ ಹಾಸುಗೆ, ಗಗನವೇ ಹೊದಿಕೆ ! ಮಳೆ-ಬಿಸಿಲು-ಚಳಿಗೆ ಸಿಕ್ಕಿಕೊಳ್ಳುತ್ತಿದ್ದ ಸಂದರ್ಭಗಳಂತೂ ಹಲವಾರು. ಈ ದಿನಗಳಲ್ಲಿ ಸ್ವಾಮೀಜಿ ಹಣ ಮುಟ್ಟುವುದಿಲ್ಲ ಎಂದು ವ್ರತ ಮಾಡಿದ್ದರು. ಕೆಲವು ಸಲ ಯಾರಾದರೂ ತುಂಬ ಬಲವಂತ ಮಾಡಿದಾಗ, ಅವರಿಂದ ಮುಂದಿನ ಊರಿಗೊಂದು ರೈಲು ಟಿಕೆಟ್ಟನ್ನು ಮಾತ್ರ ಪಡೆದುಕೊಳ್ಳುತ್ತಿದ್ದರು. ಉಳಿದಂತೆ ಸಾಮಾನ್ಯವಾಗಿ ಕಾಲ್ನಡಿಗೆಯಲ್ಲೇ ಪ್ರಯಾಣ. ಇಂತಹ ಎಲ್ಲ ಕಷ್ಟಗಳನ್ನು ತುಟಿಪಿಟಕ್ಕೆನ್ನದೆ ಸಹಿಸಿಕೊಂಡು, ಅಂತರ್ಯದಲ್ಲಿ ಆನಂದವನ್ನು ತುಂಬಿಕೊಂಡು ಮುನ್ನಡೆಯುತ್ತಿದ್ದರು, ವೀರಸಂನ್ಯಾಸಿ ವಿವೇಕಾನಂದರು. ಈ ಸ್ಥಿತಿಯನ್ನೇ ಅವರು ತಮ್ಮ 'ಸಂನ್ಯಾಸಿಗೀತೆ'ಯಲ್ಲಿ (Song of the Sannyasin) ಹೃದಯಂಗಮವಾಗಿ ಬಣ್ಣಿಸುತ್ತಾರೆ—

*ಗಗನವೇ ಮನೆ! ಹಸುರೆ ಹಾಸಿಗೆ! ಮನೆಯು ಸಾಲ್ಪುದೆ ಬಾಗಿಗೆ?*
*ಹಸಿಯೊ ಬಿಸಿಯೊ ಬಿದಿಯು ಕೊಟ್ಟಾಹಾರವನ್ನವು ಯೋಗಿಗೆ!*
*ಏನು ತಿಂದರೆ ಏನು ಕುಡಿದರೆ ಏನು ಆತ್ಮಗೆ ಕೊರತೆಯೆ?*
*ಸರ್ವಪಾಪವ ತಿಂದು ತೇಗುವ ಗಂಗೆಗೇಂ ಕೊಳೆ ಕೊರತೆಯೆ?*
*ನೀನು ಮಿಂಚೈ! ನೀನು ಸಿಡಿಲೈ! ಮೊಳಗು ಸಂನ್ಯಾಸಿ!*

ಓಂ ತತ್ ಸತ್ ಓಂ

ಸುಮಾರು ೧೮೮೭ರ ಮಧ್ಯಭಾಗದಲ್ಲಿ ಸ್ವಾಮೀಜಿ ಮೊಟ್ಟಮೊದಲ ಬಾರಿ ಬಾರಾನಾಗೋರ್ ಮಠದಿಂದ ಹೊರಟು, ಸ್ವಾಮಿ ಪ್ರೇಮಾನಂದರು ಹಾಗೂ ಫಕೀರ ಬಾಬು ಎಂಬ ಒಬ್ಬ ಗೃಹಸ್ಥಭಕ್ತನೊಡನೆ ವಾರಾಣಸಿಗೆ ಬಂದರು. ಈ ವಾರಾಣಸೀ (ವಾರಣಾಸೀ, ಕಾಶೀ) ಕ್ಷೇತ್ರ ಪುರಾತನ ಕಾಲದಿಂದಲೂ ಪರಮಪಾವನಕರವಾದದ್ದೆಂಬ ಪ್ರಸಿದ್ಧಿಯನ್ನು ಗಳಿಸಿದೆ. ಇದು ಸಾಧು-ಸಂನ್ಯಾಸಿಗಳ ನೆಲೆವೀಡು; ಆಧ್ಯಾತ್ಮಿಕ ವಿದ್ಯೆಯ ಮಹಾಕೇಂದ್ರ. ಇದು ಕಾಶೀವಿಶ್ವನಾಥನ ಮಹಾಪೀಠ. ಪಕ್ಕದಲ್ಲೇ ಪವಿತ್ರ ಗಂಗೆ ಹರಿಯುತ್ತಿದ್ದಾಳೆ. ಅಸಂಖ್ಯಾತ ಭಕ್ತರು ಅರ್ಘ್ಯ ಕೊಡುತ್ತ ಪ್ರಾರ್ಥನೆ ಸಲ್ಲಿಸುತ್ತಿರುತ್ತಾರೆ. ಅನೇಕಾನೇಕ ದೇವಸ್ಥಾನಗಳ, ಅದರಲ್ಲೂ ಜಗತ್ಪ್ರಸಿದ್ಧವಾದ ವಿಶ್ವನಾಥ,

ಅನ್ನಪೂರ್ಣೆ, ದುರ್ಗೆಯರ ದೇವಸ್ಥಾನಗಳ ನಗರ ವಾರಾಣಸಿ. ಭಗವಾನ್ ಗೌತಮ ಬುದ್ಧನೂ ಶ್ರೀಆದಿಶಂಕರರೂ ಧರ್ಮಬೋಧನೆಯನ್ನು ಮಾಡಿದ ತಾಣ ಇದು. ಈ ಎಲ್ಲ ಪವಿತ್ರ ದೃಶ್ಯಗಳು, ಭಾವನೆಗಳು ಸ್ವಾಮೀಜಿಯ ಮನಸ್ಸಿನ ಮೇಲೆ ಆಳವಾದ ಪರಿಣಾಮವನ್ನುಂಟುಮಾಡಿದುವು.

ಒಂದು ದಿನ ಬೆಳಗ್ಗೆ ಸ್ವಾಮೀಜಿ, ಶ್ರೀದುರ್ಗೆಯ ದರ್ಶನ ಮಾಡಿಕೊಂಡುಬರುತ್ತಿದ್ದಾರೆ. ದಾರಿಯ ಒಂದು ಪಕ್ಕದಲ್ಲಿ ಎತ್ತರದ ಗೋಡೆ, ಇನ್ನೊಂದು ಪಕ್ಕಕ್ಕೆ ವಿಶಾಲವಾದ ಸರೋವರ. ಆಗ ಕೋತಿಗಳ ಹಿಂಡೊಂದು ಎದುರಾಗಿ ಅವರನ್ನು ಮುತ್ತಿಕೊಂಡಿತು. ಅವು ಅವರನ್ನು ಆ ದಾರಿಯಾಗಿ ಮುಂದುವರಿಯಲು ಬಿಡುವಂತೆ ಕಾಣಲಿಲ್ಲ. ಸ್ವಾಮೀಜಿ ಬೇಗ ದಾಪುಗಾಲು ಹಾಕುತ್ತ ಅಲ್ಲಿಂದ ಹಿಂದಿರುಗಲು ನೋಡಿದರು. ಆದರೆ ಆ ಕೋತಿಗಳು—ಬನಾರಸಿನ ಮೂರುವರೆ-ನಾಲ್ಕು ಅಡಿ ಎತ್ತರದ ರಾಕ್ಷಸ ಕೋತಿಗಳು—ಗಟ್ಟಿಯಾಗಿ ಕಿರಿಚುತ್ತ, ವಿಚಿತ್ರವಾಗಿ ಹಲ್ಲುಕಿರಿಯುತ್ತ ಅಟ್ಟಿಸಿಕೊಂಡು ಬಂದುವು, ಅವರ ಕಾಲುಹಿಡಿದು ಎಳೆಯಲು ಪ್ರಯತ್ನಿಸಿದುವು! ಆಗ ಸ್ವಾಮೀಜಿ ಓಡಲಾರಂಭಿಸಿದರು. ಅವರು ಓಡಿದಂತೆಲ್ಲ ಕೋತಿಗಳು ಇನ್ನೂ ವೇಗವಾಗಿ ಅಟ್ಟಿಸಿಕೊಂಡು ಬಂದು ಕಚ್ಚಲು ಪ್ರಯತ್ನಿಸಿದುವು! ಸ್ವಾಮೀಜಿ ಇನ್ನು ಓಡದಾದರು; ಅವುಗಳ ಕೈಗೆ ಸಿಕ್ಕಿಬೀಳುವುದೇ ಖಂಡಿತ ಎನ್ನಿಸಿತು. ನಿಸ್ಸಹಾಯಕರಾದರು. ಈ ಸಮಯಕ್ಕೆ ಸರಿಯಾಗಿ ಎದುರುಗಡೆಯಿಂದ ಬಂದ ವೃದ್ಧ ಸಾಧುವೊಬ್ಬರು ಕೂಗಿದ್ದು ಅವರ ಕಿವಿಗೆ ಬಿತ್ತು: "ಆ ಪ್ರಾಣಿಗಳನ್ನು ಎದುರಿಸು!" "Face the brutes!" ಈ ಮಾತು ಮಿಂಚಿನಂತೆ ಕೆಲಸಮಾಡಿತು. ಸ್ವಾಮೀಜಿಗೆ ಏನು ಮಾಡಬೇಕು ಎನ್ನುವುದು ಹೊಳೆಯಿತು. ಕೋತಿಗಳಿಗೆ ಬೆನ್ನುಮಾಡಿ ಓಡುತ್ತಿದ್ದವರು ಇದ್ದಕ್ಕಿದ್ದಂತೆ ಧೈರ್ಯವಾಗಿ ಎದುರಿಸಿ ನಿಂತರು. ಆತ್ಮರಕ್ಷಣೆಗೆ ಸಿದ್ಧರಾಗಿ ನಿಂತು ಅವುಗಳನ್ನು ದುರುಗುಟ್ಟಿ ನೋಡಿದರು. ಏನಾಶ್ಚರ್ಯ! ತಕ್ಷಣ ಆ ಗಡವ ಕೋತಿಗಳು ಓಟಕಿತ್ತುವು! ಅಬ್ಬ, ಎಂತಹ ಬಿಡುಗಡೆ! ವಿಸ್ಮಯ-ಸಂತೋಷಗಳಿಂದ ಸ್ವಾಮೀಜಿ, ಸಕಾಲದಲ್ಲಿ ಸಹಾಯಕ್ಕೊದಗಿದ ಆ ವೃದ್ಧ ಸಾಧುವಿಗೆ ಕೃತಜ್ಞತೆಯಿಂದ ನಮಿಸಿದರು. ಆ ಸಾಧುವೂ ಮುಗುಳ್ನಗುತ್ತ ಪ್ರತಿನಮಸ್ಕಾರ ಮಾಡಿ ಹೊರಟುಹೋದರು.

ಈ ಘಟನೆಯಿಂದ ಸ್ವಾಮೀಜಿ ಒಂದು ಅದ್ಭುತವಾದ ಪಾಠವನ್ನು ಕಲಿತರು. ಮುಂದೆ ಅವರು ನ್ಯೂಯಾರ್ಕ್‌ನಲ್ಲಿ ಭಾಷಣ ಮಾಡುವಾಗ ಈ ಘಟನೆಯನ್ನು ಉದಾಹರಿಸುತ್ತ ಹೇಳುತ್ತಾರೆ: "ನಮ್ಮ ಇಡೀ ಜೀವನಕ್ಕೆ ಅನ್ವಯಿಸುವ ದೊಡ್ಡ ಪಾಠ ಇದು—ಕಷ್ಟಗಳನ್ನು ಎದುರಿಸಿ; ಧೈರ್ಯವಾಗಿ ಎದುರಿಸಿ. ಭಯಂಕರ ಕಷ್ಟಕಾರ್ಪಣ್ಯಗಳನ್ನು ಕಂಡು ಹೆದರಿ ಓಡಿಹೋಗುವ ಬದಲು ಎದುರಿಸಿ ನಿಂತದ್ದೇ ಆದರೆ, ಅವು ಆ ಕೋತಿಗಳಂತೆಯೇ ಪಲಾಯನ ಮಾಡುತ್ತವೆ. ನಾವು ಬಂಧಮುಕ್ತರಾಗಬೇಕು, ಚಿರಸ್ವಾತಂತ್ರ್ಯ ಗಳಿಸಬೇಕು ಎಂದಿದ್ದರೆ—ಅದು ಪ್ರಕೃತಿಯನ್ನು ವಶಮಾಡಿಕೊಳ್ಳುವುದರ ಮೂಲಕವೇ ಹೊರತು ಪ್ರಕೃತಿಗೆ ಶರಣಾಗುವುದರಿಂದಲ್ಲ, ಓಡಿಹೋಗುವುದರಿಂದಲ್ಲ. ಹೇಡಿಗಳು ಎಂದೆಂದಿಗೂ ಜಯಶಾಲಿಗಳಾಗಲಾರರು. ನಮ್ಮಲ್ಲಿರುವ ಭಯ-ಅಜ್ಞಾನಗಳೂ, ನಮ್ಮನ್ನು ಕಿತ್ತುತಿನ್ನುವ ಕಷ್ಟಕಾರ್ಪಣ್ಯಗಳೂ ತೊಲಗಬೇಕಾದರೆ, ನಾವು ಅವುಗಳನ್ನು ಎದುರಿಸಿ ಹೋರಾಡಬೇಕು."

ವಾರಾಣಸಿಯಲ್ಲಿ ಸ್ವಾಮೀಜಿ ದ್ವಾರಕಾದಾಸರೆಂಬವರ ಆಶ್ರಮದಲ್ಲಿ ಉಳಿದು

ಕೊಂಡಿದ್ದರು. ಈ ಆಶ್ರಮಕ್ಕೆ ಅನೇಕ ಸಾಧುಸಂನ್ಯಾಸಿಗಳು, ಪಂಡಿತರು ಬಂದುಹೋಗು ತ್ತಿದ್ದು, ಸ್ವಾಮೀಜಿಗೆ ಇವರೆಲ್ಲರ ಪರಿಚಯವಾಯಿತು. ಭೂದೇವ ಮುಖ್ಯೋಪಾಧ್ಯಾಯ ಎಂಬವರು ಅವರಲ್ಲೊಬ್ಬರು. ಇವರು ಮಹಾ ಪಂಡಿತರು ಹಾಗೂ ಬಂಗಾಳೀ ಲೇಖಕರು. ಸ್ವಾಮೀಜಿ ಈ ಪಂಡಿತರೊಡನೆ ಹಿಂದೂಧರ್ಮದ ಆದರ್ಶಗಳ ಕುರಿತಾಗಿ ಸುದೀರ್ಘ ಸಂಭಾಷಣೆಗಳನ್ನು ನಡೆಸಿದರು. ಬಳಿಕ ಆ ಪಂಡಿತರು ಸ್ವಾಮೀಜಿಯ ಸಂಬಂಧವಾಗಿ ದ್ವಾರಕಾದಾಸರ ಹತ್ತಿರ ಹೇಳುತ್ತಾರೆ: "ಅದ್ಭುತ! ಇಷ್ಟೊಂದು ಸಣ್ಣ ವಯಸ್ಸಿನಲ್ಲಿ ಎಂಥ ವಿಶಾಲ ಅನುಭವ, ಎಂಥ ತೀಕ್ಷ್ಣ ಅಂತರ್ದೃಷ್ಟಿ! ಮುಂದೆ ಇವ ರೊಬ್ಬ ಮಹಾನ್ ವ್ಯಕ್ತಿಯಾಗಿ ಬೆಳಗುವುದರಲ್ಲಿ ನನಗೆ ಸಂದೇಹವೇ ಇಲ್ಲ!"

ಸ್ವಾಮೀಜಿ ಕಾಶಿಯಲ್ಲಿದ್ದಾಗ ಮಹಾ ಸಂತರಾದ ತ್ರೈಲಿಂಗಸ್ವಾಮಿಗಳನ್ನು ಸಂದರ್ಶಿಸಿದರು. ತ್ರೈಲಿಂಗಸ್ವಾಮಿಗಳು ಅಲ್ಲಿನ ಒಂದು ಶಿವದೇವಾಲಯದಲ್ಲಿ ವಾಸ ವಾಗಿದ್ದರು. ಸದಾ ಸಮಾಧಿಸ್ಥಿತಿಯಲ್ಲೇ ಇರುತ್ತಿದ್ದವರು ಅವರು. ಸಮಾಧಿಯಿಂದಿಳಿದು ಬಂದಾಗ ಯಾರಾದರೂ ಒಂದಿಷ್ಟು ಆಹಾರವನ್ನು ತಂದುಕೊಟ್ಟರೆ ತೆಗೆದುಕೊಳ್ಳು ತ್ತಿದ್ದರು; ಇಲ್ಲದಿದ್ದರೆ ಉಪವಾಸ. ತಮ್ಮ ಇಳಿವಯಸ್ಸಿನಲ್ಲಿ ಮಾತ್ರ ಕೆಲವೊಮ್ಮೆ ಸಮಾಧಿಸ್ಥಿತಿಯಿಂದ ಇಳಿದುಬಂದು, ದರ್ಶನಾರ್ಥಿಗಳ ಪ್ರಶ್ನೆಗಳಿಗೆ ಬರವಣಿಗೆಯ ಮೂಲಕ ಉತ್ತರ ಕೊಡುತ್ತಿದ್ದರು. ಶ್ರೀರಾಮಕೃಷ್ಣರೂ ಹಿಂದೆ ಕಾಶಿಗೆ ಬಂದಾಗ ಅವರನ್ನು ಭೇಟಿ ಮಾಡಿದ್ದರು.

ಇನ್ನೊಂದು ದಿನ ಸ್ವಾಮೀಜಿ, ತಪಸ್ವಿಗಳೆಂದೂ ವಿದ್ವಾಂಸರೆಂದೂ ಪ್ರಸಿದ್ಧರಾದ ಸ್ವಾಮಿ ಭಾಸ್ಕರಾನಂದರನ್ನು ಭೇಟಿ ಮಾಡಿದರು. ಇವರು ಮೈಮೇಲೆ ಬಟ್ಟೆಯನ್ನೂ ಧರಿಸುತ್ತಿರಲಿಲ್ಲ. ಸ್ವಾಮೀಜಿ ಇವರೊಂದಿಗೆ ಸಂಭಾಷಣೆ ನಡೆಸುತ್ತಿದ್ದಾಗ ಕಾಮುಕಾಂಚನ ತ್ಯಾಗದ ವಿಷಯ ಬಂದಿತು. ಶ್ರೀರಾಮಕೃಷ್ಣರು ಹೇಳುತ್ತಿದ್ದರು—'ಭಗವಂತನ ಸಾಕ್ಷಾ ತ್ಕಾರವಾಗಬೇಕಾದರೆ ಕಾಮುಕಾಂಚನಗಳ ಮೇಲಿನ ಆಸಕ್ತಿಯನ್ನು ಸಂಪೂರ್ಣ ಜಯಿಸಲೇಬೇಕಾಗುತ್ತದೆ' ಎಂದು. ಮತ್ತು ಅದೇ ಅವರ ಬೋಧನೆಯ ಪಲ್ಲವಿ. ಆದರೆ ಭಾಸ್ಕರಾನಂದರು ಒಂದು ಬಗೆಯ ಅಧಿಕಾರವಾಣಿಯಿಂದ, "ಕಾಮುಕಾಂಚನ ಗಳನ್ನು ಸಂಪೂರ್ಣವಾಗಿ ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ" ಎಂದುಬಿಟ್ಟರು. ಸ್ವಾಮೀಜಿ ಆಶ್ಚರ್ಯದಿಂದ ನುಡಿದರು, "ಸ್ವಾಮಿ! ಏನು ಹೇಳುತ್ತಿದ್ದೀರಿ! ಕಾಮು ಕಾಂಚನಾಸಕ್ತಿಯನ್ನು ಸಂಪೂರ್ಣ ಹೋಗಲಾಡಿಸಿಕೊಂಡವರು ಎಷ್ಟೋ ಜನ ಇದ್ದೇ ಇದ್ದಾರೆ. ನಿಜವಾದ ಸಂನ್ಯಾಸಜೀವನದ ಆಧಾರವೇ ಕಾಮುಕಾಂಚನತ್ಯಾಗವಲ್ಲವೆ! ಅಷ್ಟೇ ಅಲ್ಲ, ಕಡೆಯಪಕ್ಷ ಅಂತಹ ಒಬ್ಬರನ್ನಾದರೂ ನಾನು ಕಣ್ಣಾರೆ ನೋಡಿದ್ದೇನೆ." ಆಗ ಭಾಸ್ಕರಾನಂದರು ಮುಗುಳ್ನಗುತ್ತ, "ನೀವಿನ್ನೂ ಮಗು. ನಿಮಗವೆಲ್ಲ ಏನು ಗೊತ್ತಾಗುತ್ತದೆ!" ಎಂದರು. ಇಂತಹ ಅಸಡ್ಡೆಯ ಮಾತನ್ನು ಕೇಳಿ ಸ್ವಾಮೀಜಿಯ ರಕ್ತ ಕುದಿಯಿತು. 'ನಾನು ಶ್ರೀರಾಮಕೃಷ್ಣರ ಜೀವನವನ್ನು ಕಣ್ಣಾರೆ ಕಂಡವನು. ಅವರ ಪರಮಪರಿಶುದ್ಧ ಪವಿತ್ರ ವ್ಯಕ್ತಿತ್ವವನ್ನು ವರ್ಷಗಟ್ಟಲೆ ಕಂಡು ಅಧ್ಯಯಿಸಿದವನು. ಅಂಥವರ ಬಗ್ಗೆಯೂ ಇವರು ಇಂತಹ ಹಗುರವಾದ ಮಾತುಗಳನ್ನಾಡುತ್ತಾರಲ್ಲ! ಸಂನ್ಯಾಸ ಜೀವನದ ತಳಹದಿಯನ್ನೇ ಪ್ರಶ್ನಿಸುತ್ತಿದ್ದಾರಲ್ಲ! ಇವರು ಶ್ರೀರಾಮಕೃಷ್ಣರ ಹಾಗೂ ಇನ್ನೆಷ್ಟೋ ಶ್ರೇಷ್ಠ ಸಂನ್ಯಾಸಿಗಳ ತ್ಯಾಗ-ವೈರಾಗ್ಯ ನಿಷ್ಠೆಯನ್ನೇ ಅಲ್ಲಗಳೆಯು ತ್ತಿದ್ದಾರಲ್ಲ' ಎಂದು ಅವರಿಗೆ ರೇಗಿತು. ತಕ್ಷಣ ಅವರು ತಮ್ಮ ಪ್ರಖರ ವಾಗ್ವೈ

ಖರಿಯಿಂದ, ತೇಜಸ್ವಿಯಾದ ವಿಚಾರಧಾರೆಯಿಂದ, ತಮ್ಮ ಸ್ವಂತ ಅನುಭವಗಳ ಆಧಾರದ ಮೇಲೆ ಭಾಸ್ಕರಾನಂದರ ವಾದವನ್ನು ಖಂಡಿಸಿದರು. ಭಾಸ್ಕರಾನಂದರು ಮಹಾಸಂತರೆಂದು ಹೆಸರಾದವರು, ವಯೋವೃದ್ಧರು. ಅವರಿಗೆ ಹೋಲಿಸಿದರೆ ಸ್ವಾಮೀಜಿ ಬಹಳ ಕಿರಿಯರೇ ಸರಿ. ಆದರೆ ಬೆಂಕಿಯ ಕಿಡಿ, ಗಾತ್ರದಲ್ಲಿ ಕಿರಿದಾದರೆ ಕಾವಿನಲ್ಲಿ ಕಿರಿದೆ ? ಸ್ವಾಮೀಜಿ ತಮ್ಮ ವಿಚಾರಧಾರೆಯನ್ನು ಮಂಡಿಸುತ್ತಿದ್ದಂತೆ ಸ್ವಾಮಿ ಭಾಸ್ಕರಾನಂದರೂ ಅವರ ಶಿಷ್ಯರೂ ಸ್ತಂಭೀಭೂತರಾಗಿ ಕುಳಿತರು. ಭಾಸ್ಕರಾನಂದರು ತಮ್ಮ ಸುತ್ತ ಕುಳಿತವರತ್ತ ತಿರುಗಿ, "ಈತನ ನಾಲಿಗೆಯಲ್ಲಿ ಸ್ವಯಂ ವಾಗ್ದೇವಿಯೇ ನೆಲೆಸಿದ್ದಾಳೆ! ಈತನ ಬುದ್ಧಿಶಕ್ತಿ ಪ್ರಖರ ಜ್ಯೋತಿಯಂತಿದೆ!" ಎಂದು ಉದ್ಗಾರ ಮಾಡಿದರು. ಆದರೆ ಸ್ವಾಮೀಜಿ ಆ ಮೆಚ್ಚಿಗೆಯ ಮಾತನ್ನು ಲೆಕ್ಕಿಸದೆ, ಜುಗುಪ್ಸೆ ಯಿಂದಲೇ ಅಲ್ಲಿಂದೆದ್ದು ಹೊರಟುಹೋದರು.

ಒಂದು ದಿನ ಅವರು ಕಾಶಿಗೆ ಸಮೀಪದ ಸಾರಾನಾಥಕ್ಕೂ ಭೇಟಿ ನೀಡಿದರು. ಭಗವಾನ್ ಬುದ್ಧನು ತನ್ನ ಸಂದೇಶಗಳನ್ನು ಮೊಟ್ಟಮೊದಲ ಸಲ ಸಾರಿದ ಇಲ್ಲಿನ ಸಾರಂಗವನವನ್ನು ವೀಕ್ಷಿಸಿದರು.

ಪವಿತ್ರ ವಾರಾಣಸಿಯಲ್ಲಿ ಒಂದು ವಾರವನ್ನು ಕಳೆದ ಸ್ವಾಮೀಜಿ ನೇರವಾಗಿ ಬಾರಾನಾಗೋರಿಗೆ ಹಿಂದಿರುಗಿದರು. ಇತ್ತ ವಾರಾಣಸಿಯಲ್ಲಿ ಅವರ ಸಂಪರ್ಕಕ್ಕೆ ಬಂದಿದ್ದ ಅನೇಕ ಸಾಧುಗಳೂ ಭಕ್ತರೂ ಸ್ವಾಮೀಜಿ ಇದ್ದಕ್ಕಿದ್ದಂತೆ ಎಲ್ಲಿಗೆ ಹೋಗಿರ ಬಹುದು ಎಂದು ಆಶ್ಚರ್ಯಪಟ್ಟರು. ಮತ್ತೆ ತಮ್ಮ ಗುರುಭಾಯಿಗಳೊಡನೆ ಸಾಧನೆ-ಅಧ್ಯಯನ ಹಾಗೂ ವಿಚಾರವಿನಿಮಯ ನಡೆಸುವ ಉದ್ದೇಶದಿಂದ ಸ್ವಾಮೀಜಿ ಮಠಕ್ಕೆ ಹಿಂದಿರುಗಿದ್ದರು. ಕೆಲವೊಮ್ಮೆ, ಸೇವಾಸಂಸ್ಥೆಯೊಂದರ ಮೂಲಕ ದೀನದರಿದ್ರರ ಉದ್ಧಾರಕ್ಕಾಗಿ ಶ್ರಮಿಸುವ ದೃಶ್ಯ ಅವರ ಮನಃಪಟಲದ ಮೇಲೆ ಅಸ್ಪಷ್ಟವಾಗಿ ಹಾದು ಹೋಗುತ್ತಿತ್ತು. ಮನುಷ್ಯನನ್ನು ಭಗವಂತನ ಅಂಶ ಎಂದು ಭಾವಿಸಿ ಸೇವೆ ಮಾಡುವ ಭಾವನೆ ಅವರನ್ನು ಸಂಪೂರ್ಣವಾಗಿ ಆವರಿಸಿಬಿಡುತ್ತಿತ್ತು. ವೇದಾಂತದ ತತ್ತ್ವಗಳನ್ನು ನಿಜಜೀವನದಲ್ಲಿ ಕಾರ್ಯಗತಗೊಳಿಸಲು ಇದಕ್ಕಿಂತ ಉತ್ತಮವಾದ ಮಾರ್ಗ ಯಾವುದು! ಧರ್ಮದ ಬಗೆಗಿನ ಈ ಹೊಸ ಕಲ್ಪನೆಯನ್ನು ಮುಂದಿಟ್ಟು ತಮ್ಮ ಸೋದರಸಂನ್ಯಾಸಿಗಳನ್ನು ಉತ್ತೇಜಿಸುವ ಪ್ರಯತ್ನ ಮಾಡುತ್ತಿದ್ದರು. ಅವರೆಲ್ಲ ಆಗಷ್ಟೇ ಸಂನ್ಯಾಸ ಸ್ವೀಕರಿಸಿದ್ದ ಯುವಕರು. ಅಲ್ಲದೆ, ಸಮಾಜದ ಮೇಲೆ ಜಾತಿಪದ್ಧತಿಯ ಹಾಗೂ ಸಂಪ್ರದಾಯಗಳ ಹಿಡಿತ ಇನ್ನೂ ಬಲವಾಗಿದ್ದ ದಿನಗಳು ಅವು. ಅಂತಹ ಸಂದರ್ಭದಲ್ಲಿ ಸ್ವಾಮೀಜಿ, ಹರಿಜನರ ಕೇರಿಗಳಿಗೆ ಹೋಗಿ ಅವರಿಗೆ ಬೋಧನೆ ಮಾಡು ವಂತೆ, ಅವರ ಕಣ್ಣೊರೆಸುವಂತೆ ತಮ್ಮ ಗುರುಭಾಯಿಗಳನ್ನು ಒತ್ತಾಯಿಸುತ್ತಿದ್ದರು. ಆದರೆ ಈ ಗುರುಭಾಯಿಗಳು ಧರ್ಮಬೋಧನೆಯೆಂದರೆ ಹಿಂದೇಟು ಹಾಕುತ್ತಿದ್ದರು. ಅವರ ಮುಂದಿದ್ದ ಮೊದಲ ಗುರಿಯೆಂದರೆ ಭಗವತ್ಸಾಕ್ಷಾತ್ಕಾರ. ಅದು ಸಿದ್ಧಿಸಿದಮೇಲೆ ಧರ್ಮಪ್ರಸಾರದ ಪ್ರಶ್ನೆ ಎಂಬುದು ಅವರ ನಿಲುವು. ಭಗವತ್ಸಾಕ್ಷಾತ್ಕಾರದ ಮೂಲಕ ಧರ್ಮಪ್ರಸಾರಕ್ಕೆ ಬೇಕಾದ ಅರ್ಹತೆಯನ್ನು ಪಡೆದುಕೊಳ್ಳಬೇಕು ಎಂಬ ವಾದವನ್ನು ಸ್ವಾಮೀಜಿಯೂ ಈ ಹಿಂದೆ ಅನುಮೋದಿಸುತ್ತಿದ್ದರು. ಆದರೂ ಕೆಲವೊಮ್ಮೆ ಧರ್ಮ ಪ್ರಸಾರದ ಉತ್ಸಾಹ ಅವರ ಮನಸ್ಸಿನಲ್ಲಿ ಚಿಮ್ಮುತ್ತಿತ್ತು. ಇಂತಹ ಭಾವ ಜಾಗೃತವಾದ ಒಂದು ಸಂದರ್ಭದಲ್ಲಿ, ಅವರು, ಧರ್ಮಪ್ರಸಾರ-ಉಪದೇಶಗಳನ್ನೆಲ್ಲ ವಿರೋಧಿಸು

ತ್ತಿದ್ದ ಒಬ್ಬ ಸೋದರಸಂನ್ಯಾಸಿಗೆ ಹೇಳುತ್ತಾರೆ: "ನೋಡು, ಪ್ರತಿಯೊಬ್ಬನೂ ತನಗೆ ತಿಳಿದೋ ತಿಳಿಯದೆಯೋ ಬೋಧನೆಯನ್ನು ಮಾಡುತ್ತಲೇ ಇರುತ್ತಾನೆ. ಇತರರು ಯಾವುದನ್ನು ತಮಗರಿವಿಲ್ಲದಂತೆಯೇ, ಅನುದ್ದೇಶಪೂರ್ವಕವಾಗಿಯೇ ಮಾಡುತ್ತಾರೋ, ಅದನ್ನೇ ನಾನು ಉದ್ದೇಶಪೂರ್ವಕವಾಗಿ, ಉತ್ಸಾಹದಿಂದ ಮಾಡುತ್ತೇನೆ. ಯಾವ ಅಡೆತಡೆಯನ್ನೂ ಲೆಕ್ಕಿಸುವವನಲ್ಲ ನಾನು. ಕಡೆಗೆ, ನನ್ನ ಸೋದರಸಂನ್ಯಾಸಿಗಳಾದ ನೀವು ಕೂಡ ಅದನ್ನು ಒಪ್ಪದಿದ್ದರೂ ಸರಿಯೆ, ನಾನು ಅಂತ್ಯಜರ ಕೊಳೆಗೇರಿಗಳಿಗೆ ಹೋಗಿ ಬೋಧಿಸುತ್ತೇನೆ. ಬೋಧನೆ ಎಂದರೇನರ್ಥ ? ನಮ್ಮ ಭಾವನೆಗಳನ್ನು ವ್ಯಕ್ತಪಡಿಸುವುದೇ ಬೋಧನೆ. ತ್ರೈಲಿಂಗಸ್ವಾಮಿಗಳು ಮಾತನ್ನೇ ಆಡದೆ ಯಾವಾಗಲೂ ಮೌನವಾಗಿರುತ್ತಾರೆಂಬ ಮಾತ್ರಕ್ಕೆ ಅವರು ಬೋಧನೆಯನ್ನೇ ಮಾಡುವುದಿಲ್ಲ ಎಂದು ಭಾವಿಸಿದಿರೇನು ? ಅವರ ಮೌನವೇ ಒಂದು ಬೋಧನೆ !"

ಮುಂದೆ ಸ್ವಾಮೀಜಿ ಮಾಡಿದ್ದಾದರೂ ಅದನ್ನೇ—ಅಲ್ಲಿಯವರೆಗೆ ಯಾವುದನ್ನು ಇತರ ಸಾಧುಸಂತರು ಮೆಲುದನಿಯಲ್ಲಿ ವೈಯಕ್ತಿಕವಾಗಿ ಬೋಧಿಸಿದ್ದರೋ ಅದನ್ನೇ ಅವರು ಜನಮನ ಮುಟ್ಟುವಂತೆ ತಮ್ಮ ಧೀರಗಂಭೀರ ವಾಣಿಯಿಂದ ಘೋಷಿಸಿದರು. ಅವರ ಈ ಕಾರ್ಯವು ಬಾರಾನಾಗೋರ್ ಮಠದಲ್ಲೇ ಪ್ರಾರಂಭವಾಯಿತು. ಅವರ ಮೊಟ್ಟಮೊದಲ ಶ್ರೋತೃಗಳೆಂದರೆ ಅವರ ಸೋದರಸಂನ್ಯಾಸಿಗಳು ಹಾಗೂ ಕೆಲವು ಮಂದಿ ಗೃಹಸ್ಥಭಕ್ತರು.

ಆದರೆ ಸ್ವಾಮೀಜಿ ಬಾರಾನಾಗೋರ್ ಮಠದಲ್ಲಿ ಹೆಚ್ಚು ದಿನ ಉಳಿದುಕೊಳ್ಳಲಿಲ್ಲ. ಪರಿವ್ರಾಜಕ ಜೀವನದ ಆಕರ್ಷಣೆ ಅವರನ್ನು ಮತ್ತೆ ಸೆಳೆಯಲಾರಂಭಿಸಿತ್ತು. ಆದ್ದರಿಂದ ಮತ್ತೆ ಉತ್ತರಭಾರತದ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಹೊರಟು ವಾರಾಣಸಿಗೆ ಬಂದರು. ಈ ಬಾರಿ ಅವರಿಗೆ ಪ್ರಮದದಾಸ ಮಿತ್ರರೆಂಬ ಪ್ರಸಿದ್ಧ ಸಂಸ್ಕೃತ ವಿದ್ವಾಂಸರ ಭೇಟಿಯಾಯಿತು. ಇವರಿಗೆ ಈಗಾಗಲೇ ಸ್ವಾಮಿ ಅಖಂಡಾನಂದರ ಪರಿಚಯವಾಗಿದ್ದು ಅವರಿಂದ ಸ್ವಾಮೀಜಿಯ ಬಗ್ಗೆ ಕೇಳಿತಿಳಿದಿದ್ದರು. ಈಗ ಸ್ವಾಮೀಜಿಯವರನ್ನು ಪ್ರತ್ಯಕ್ಷ ಕಂಡಾಗ ಇಬ್ಬರ ನಡುವೆ ಗಾಢ ಸ್ನೇಹ ಬೆಳೆಯಿತು.

ವಾರಾಣಸಿಯಲ್ಲಿ ಕೆಲದಿನಗಳಿದ್ದು, ಅಲ್ಲಿಂದ ಸ್ವಾಮೀಜಿ ಅಯೋಧ್ಯೆಯ ಕಡೆಗೆ ಹೊರಟರು. ಅಯೋಧ್ಯೆ ಶ್ರೀರಾಮಚಂದ್ರನ ರಾಜಧಾನಿಯಾಗಿ ಮೆರೆದ ನಗರ. ಸ್ವಾಮೀಜಿ ತಮ್ಮ ಬಾಲ್ಯದಿಂದಲೇ ರಾಮಾಯಣ ಮಹಾಕಥೆಯನ್ನು ಕೇಳಿ ಪ್ರಭಾವಿತರಾದವರು. ಶ್ರೀರಾಮಕೃಷ್ಣರಿಂದ ರಾಮಮಂತ್ರದೀಕ್ಷೆಯನ್ನು ಪಡೆದವರು. ಈಗ ಅಯೋಧ್ಯೆಯನ್ನು ಕಂಡಾಗ ರಾಮಾಯಣದ ದೃಶ್ಯಗಳೂ ಅಯೋಧ್ಯೆಯ ಗತವೈಭವವೂ ಅವರ ಕಣ್ಮುಂದೆ ಹಾದುಹೋದುವು. ಅಲ್ಲಿಂದ ಅವರು ಲಕ್ನೋಗೆ ಬಂದರು. ಇಲ್ಲಿ ನವಾಬರ ಕಾಲದ ಸಂಸ್ಕೃತಿಯ ಅವಶೇಷಗಳನ್ನು ಕಂಡು ಅವುಗಳ ಸೌಂದರ್ಯಕ್ಕೆ ಬೆರಗಾದರು. ಲಕ್ನೋದಿಂದ ಅವರ ಪ್ರಯಾಣ ಆಗ್ರಾಕ್ಕೆ. ಮೊಘಲ್ ಸಾಮ್ರಾಜ್ಯದ ನೆನಪುಗಳನ್ನು ಜೀವಂತವಾಗಿಸಿರುವ ನಗರ ಆಗ್ರಾ. ಇತಿಹಾಸದಲ್ಲಿ ಪರಿಣತರಾದ ಸ್ವಾಮೀಜಿಗೆ ಆಗ್ರಾದ ರಸ್ತೆಗಳಲ್ಲಿ ನಡೆದಾಡುತ್ತಿದ್ದಂತೆ ಮೊಘಲ್ ಸಾಮ್ರಾಜ್ಯದ ದಿನಗಳ ಚಿತ್ರ ಕಣ್ಮುಂದೆ ಕಟ್ಟಿದಂತಾಯಿತು. ಇಲ್ಲಿ ಭಾರತೀಯ ಕಲಾಕಾರರ ಕೌಶಲವನ್ನು ನೋಡುತ್ತ ಸ್ವಾಮೀಜಿ ಆಶ್ಚರ್ಯಚಕಿತರಾದರು. ಅದರಲ್ಲೂ ಜಗತ್ತಿನ ವಿಸ್ಮಯಗಳಲ್ಲೊಂದಾದ ತಾಜ್‌ಮಹಲಿನ ಸೌಂದರ್ಯ ಅವರ ಮನಸ್ಸನ್ನು ಸೆರೆಹಿಡಿದುಬಿಟ್ಟಿತು.

ತಾಜ್‌ಮಹಲನ್ನು ಅವರು ಹಲವು ಸಲ ಬಂದು ನೋಡಿದರು. ಬೇರೆಬೇರೆ ದೃಷ್ಟಿಕೋನ ಗಳಿಂದ ನೋಡಿದರು. ಮುಂಜಾನೆಯ ಮುಂಬೆಳಕಿನಲ್ಲಿ, ಮಧ್ಯಾಹ್ನದ ಬಿಸಿಲಿನಲ್ಲಿ, ಸೂರ್ಯಾಸ್ತದ ಸಂಧ್ಯಾರಾಗದಲ್ಲಿ, ಸುಂದರವಾದ ಬೆಳದಿಂಗಳಿನಲ್ಲಿ—ಹೀಗೆ ಬೇರೆ ಬೇರೆ ಸಮಯಗಳಲ್ಲಿ, ಬೇರೆಬೇರೆ ಭಾವಗಳಲ್ಲಿ ನೋಡಿದರು. ಅಲ್ಲದೆ, ಅದು ತಮ್ಮ ಪ್ರಿಯ ಜನ್ಮಭೂಮಿಯ ಹೆಮ್ಮೆಯ ವಸ್ತು ಎಂಬ ದೃಷ್ಟಿಯಿಂದ ನೋಡಿ ಆನಂದಿಸಿ ದರು. ತಾಜ್‌ಮಹಲಿನ ಕುರಿತಾಗಿ ಅವರೊಮ್ಮೆ ಹೇಳುತ್ತಾರೆ: "ಆ ಭವ್ಯ ಭವನದ ಪ್ರತಿಯೊಂದು ಅಂಗುಲವೂ ಒಂದೊಂದು ದಿನವಿಡೀ ಗಮನಿಸಿ ನೋಡುವಷ್ಟು ಯೋಗ್ಯವಾಗಿದೆ. ನಿಜಕ್ಕೂ ಆ ಭವನದ ಸಮಗ್ರ ಪರಿಚಯ ಮಾಡಿಕೊಳ್ಳಬೇಕಾದರೆ ಕಡಿಮೆಯೆಂದರೆ ಆರು ತಿಂಗಳಾದರೂ ಬೇಕು."

೧೮೮೮ರ ಆಗಸ್ಟ್‌ನ ವೇಳೆಗೆ ಸ್ವಾಮೀಜಿ ಆಗ್ರಾದಿಂದ ಹೊರಟು ಬೃಂದಾವನ ಕ್ಷೇತ್ರದೆಡೆಗೆ ಸಾಗಿದರು. ಹೆಚ್ಚಿನ ಪ್ರಯಾಣವೆಲ್ಲ ರೈಲಿನಲ್ಲಿ. ಆದರೆ ಕಡೆಯ ಮೂವತ್ತು ಮೈಲಿಗಳನ್ನು ಕಾಲ್ನಡಿಗೆಯಲ್ಲೇ ಕ್ರಮಿಸಿದರು. ಬೃಂದಾವನಕ್ಕೆ ಸುಮಾರು ಎರಡು ಮೈಲಿ ಇದೆಯೆನ್ನುವಾಗ, ದಾರಿಯ ಪಕ್ಕದಲ್ಲಿ ಒಬ್ಬ ಮನುಷ್ಯ ಆರಾಮವಾಗಿ ಕುಳಿತುಕೊಂಡು ಹುಕ್ಕಾ ಸೇದುತ್ತಿದ್ದುದು ಅವರ ಕಣ್ಣಿಗೆ ಬಿತ್ತು. ನಡೆದು ನಡೆದು ಆಯಾಸಗೊಂಡಿದ್ದ ಅವರಿಗೆ, ಸ್ವಲ್ಪ ಹುಕ್ಕಾ ಸೇದಿ ದಣಿವಾರಿಸಿಕೊಳ್ಳುವ ಮನಸ್ಸಾ ಯಿತು. ಹತ್ತಾರು ವರ್ಷಗಳ ಅಭ್ಯಾಸವಲ್ಲವೆ! ಸರಿ; ಆ ಮನುಷ್ಯನನ್ನು ಮಾತಾಡಿಸಿ, ಒಂದೆರಡು ಸಲ 'ದಂ' ಎಳೆಯಲು ಕೊಡುವಂತೆ ಕೇಳಿಕೊಂಡರು. ಆದರೆ ಅವನು ತುಂಬ ಅಧೈರ್ಯಗೊಂಡು, "ಇಲ್ಲ ಸ್ವಾಮೀಜಿ! ನಾನೊಬ್ಬ ಜಾಡಮಾಲಿ. ನನ್ನ ಹುಕ್ಕವನ್ನು ಉಪಯೋಗಿಸಿದರೆ ನಿಮಗೆ ಮೈಲಿಗೆಯಾಗಿಬಿಡುತ್ತದೆ" ಎಂದ. ಇದನ್ನು ಕೇಳಿ ಸ್ವಾಮೀಜಿಗೆ ಹೌದೆನ್ನಿಸಿತು. ಅವನ ಕೈಯ ಹುಕ್ಕಾ ಸೇದಲು ಹಿಂಜರಿದು, ಹಾಗೇ ಮುಂದೆ ಸಾಗಿದರು. ಆದರೆ ಸ್ವಲ್ಪದೂರ ಹೋಗುವಷ್ಟರಲ್ಲಿ ಅವರ ಮನಸ್ಸಿನಲ್ಲೊಂದು ಭಾವನೆ ಉದ್ಭವಿಸಿತು: 'ಏನಾಶ್ಚರ್ಯ! ನಾನು ಸಂನ್ಯಾಸ ವ್ರತಧಾರಣೆ ಮಾಡಿದವನು; ಜಾತಿ-ಕುಲಗಳ ಅಭಿಮಾನವನ್ನು ತೊರೆದವನು. ಅಂಥದರಲ್ಲಿ, ಆ ಮನುಷ್ಯ ತಾನೊಬ್ಬ ಜಾಡಮಾಲಿ ಎಂದಾಗ ನನ್ನಲ್ಲಿ ಈ ಜಾತಿಬುದ್ಧಿ ಜಾಗ್ರತವಾಯಿತಲ್ಲ! ಛೆ! ಇದು ಯುಗಯುಗಗಳಿಂದಲೂ ಅಂಟಿಕೊಂಡುಬಂದ ಅಭ್ಯಾಸದ ಪರಿಣಾಮ.' ತಕ್ಷಣ ಅವರು ಹಿಂದಿರುಗಿ, ಅವನ ಬಳಿಗೆ ಬಂದರು. ಆತನ ಪಕ್ಕದಲ್ಲೇ ಕುಳಿತು, "ಅಣ್ಣಾ, ಪರವಾಗಿಲ್ಲ! ನನಗೂ ಸ್ವಲ್ಪ ಹುಕ್ಕ ತಯಾರಿಸಿಕೊಡು" ಎಂದು ಪ್ರೀತಿಯಿಂದ ಕೇಳಿ ಕೊಂಡರು. ಆಗ ಪುನಃ ಆತ ಸಂಕೋಚದಿಂದ ಹಿಂಜರಿಯುತ್ತ, "ಸ್ವಾಮಿ, ನೀವು ಪೂಜ್ಯರು. ನಾನಾದರೋ ಅಂತ್ಯಜ" ಎಂದು ಎಷ್ಟೋ ಹೇಳಿದ. ಆದರೆ ಸ್ವಾಮೀಜಿ ಬಿಡಲೇ ಇಲ್ಲ. ಅವನಿಂದ ಹುಕ್ಕಾ ತಯಾರಿಸಿಕೊಂಡು ಸೇದಿ, ಅವನಿಗೆ ಕೃತಜ್ಞತೆ ಹೇಳಿ ಮುಂದೆ ಸಾಗಿದರು.

ಮುಂದೊಮ್ಮೆ ಗಿರೀಶ್‌ಚಂದ್ರ ಘೋಷ್ ಈ ವಿಷಯವನ್ನು ಕೇಳಿದಾಗ ಅರ್ಧ ಹಾಸ್ಯವಾಗಿ ಹೇಳುತ್ತಾನೆ, "ಸ್ವಾಮೀಜಿ, ನಿಮಗೆ ಹುಕ್ಕಾ ಸೇದುವ ಚಟ ಇದೆಯಲ್ಲವೆ? ಆದ್ದರಿಂದ ನಿಮಗೆ ಆ ಭಂಗಿಯ ಕೈಯಿಂದಲಾದರೂ ಅದನ್ನು ತೆಗೆದುಕೊಂಡು ಸೇದು ವಷ್ಟು ಆಸೆಯಾಗಿಬಿಟ್ಟಿತು, ಅಷ್ಟೆ!" ತಮಗಿಂತ ಹಿರಿಯನೂ ಆತ್ಮೀಯನೂ ಆದ ಗಿರೀಶನ ಈ ತಮಾಷೆಯ ಮಾತಿಗೆ ಸ್ವಾಮೀಜಿ ಉತ್ತರಿಸುತ್ತಾರೆ, "ಇಲ್ಲ ಜಿ. ಸಿ.,

(ಜಿ. ಸಿ. ಎನ್ನುವುದು ಗಿರೀಶ್‌ಚಂದ್ರ ಎಂಬುದರ ಹ್ರಸ್ವರೂಪ) ನಿಜಕ್ಕೂ ನಾನು ನನ್ನನ್ನು ಪರೀಕ್ಷೆಮಾಡಿ ನೋಡಿಕೊಳ್ಳುವುದಕ್ಕೋಸ್ಕರವೇ ಹಾಗೆ ಮಾಡಿದೆ. ಸಂನ್ಯಾಸ ಸ್ವೀಕರಿಸಿದ ಮೇಲೆ ಪ್ರತಿಯೊಬ್ಬನೂ ತನ್ನನ್ನು ತಾನು ಪರೀಕ್ಷೆ ಮಾಡಿ ನೋಡಿಕೊಳ್ಳಬೇಕು—ತಾನು ಜಾತಿ-ಕುಲ-ಗೋತ್ರಗಳ ಬಂಧನದಿಂದ ಪಾರಾಗಿದ್ದೇನೆಯೋ ಇಲ್ಲವೋ ಎಂದು. ಸಂನ್ಯಾಸದ ಆದರ್ಶವನ್ನು ಕಟ್ಟುನಿಟ್ಟಾಗಿ ಪಾಲಿಸುವುದು ಬಹಳ ಕಷ್ಟ. ಮಾತಿಗೂ ಕೃತಿಗೂ ವ್ಯತ್ಯಾಸವಾಗದಂತೆ ನೋಡಿಕೊಳ್ಳಬೇಕು." ಇನ್ನೊಮ್ಮೆ ಇದೇ ಘಟನೆಯನ್ನು ತಿಳಿಸುತ್ತ ಒಬ್ಬ ಶಿಷ್ಯನಿಗೆ ಹೇಳುತ್ತಾರೆ: "ಏನಪ್ಪ, ಸಂನ್ಯಾಸದ ಆದರ್ಶಗಳನ್ನು ನಿತ್ಯ ಜೀವನದಲ್ಲಿ ಪರಿಪಾಲಿಸಿಕೊಂಡು ಬರುವುದು ಸುಲಭದ ಕೆಲಸ ಅಂತಂದು ಕೊಂಡೆಯಾ ? ಸಂನ್ಯಾಸ ಜೀವನದಷ್ಟು ಕಷ್ಟಕರವಾದ ಮಾರ್ಗ ಇನ್ನಾವುದೂ ಇಲ್ಲ. ಅತಿ ಎತ್ತರವಾದ, ಕಡಿದಾದ ಪರ್ವತ ಶಿಖರದ ಮೇಲೆ ನಡೆದುಹೋಗುತ್ತಿರುವಾಗ ಸ್ವಲ್ಪ ಜಾರಿದರೂ ನೀನು ಬೀಳುವುದೆಲ್ಲಿಗೆ ಹೇಳು ? ಕೆಳಗೆ ಆಳವಾದ ಕಣಿವೆಯಲ್ಲಿ! ಯಾವಾಗ ವ್ಯಕ್ತಿಯೊಬ್ಬ ಸಂನ್ಯಾಸದ ಆದರ್ಶವನ್ನು ಸ್ವೀಕಾರ ಮಾಡುತ್ತಾನೋ ಅವನು ಪ್ರತಿದಿನ, ಪ್ರತಿಕ್ಷಣ ತನ್ನನ್ನು ತಾನು ಪರೀಕ್ಷಿಸಿ ನೋಡಿಕೊಳ್ಳುತ್ತಿರಬೇಕಾಗುತ್ತದೆ—ಜಾತ್ಯಭಿಮಾನ, ಕುಲಾಭಿಮಾನವೇ ಮೊದಲಾದ ಬಂಧನಗಳಿಂದ ತಾನು ಪಾರಾಗಿದ್ದೇನೆಯೋ ಎಂದು. ಆ ಘಟನೆ ನನಗೊಂದು ಒಳ್ಳೆಯ ಪಾಠ ಕಲಿಸಿತು—ನಾವು ಯಾರನ್ನೂ ಕಡೆಗಣಿಸಬಾರದು; ಬದಲಾಗಿ ಎಲ್ಲರನ್ನೂ ಸಮಾನದೃಷ್ಟಿಯಿಂದ ಭಗವಂತನ ಮಕ್ಕಳೆಂದು ಭಾವಿಸಬೇಕು ಅಂತ."

ಬೃಂದಾವನಕ್ಕೆ ಬಂದ ಸ್ವಾಮೀಜಿ ಅಲ್ಲಿ ಬಲರಾಮ ಬಾಬುವಿನ ಪೂರ್ವಜರು ಕಟ್ಟಿಸಿದ್ದ ಸತ್ರದಲ್ಲಿ ಇಳಿದುಕೊಂಡರು. ಬೃಂದಾವನಕ್ಕೆ ಬಂದೊಡನೆ ಅವರಲ್ಲೊಂದು ದಿವ್ಯಭಾವ ಉತ್ಪನ್ನವಾಗಿಬಿಟ್ಟಿತು. ತಮ್ಮ ಹೃದಯದ ದ್ವಾರ ಸಂಪೂರ್ಣ ತೆರೆದುಕೊಂಡಂತೆ ಭಾಸವಾಯಿತು. ಶ್ರೀಕೃಷ್ಣನ ದಿವ್ಯ ಆಧ್ಯಾತ್ಮಿಕ ಲೀಲೆ ನಡೆದ ಸ್ಥಳವಲ್ಲವೆ ಅದು ? ಆ ಅದ್ಭುತ ಘಟನೆಗಳೆಲ್ಲ ನೆನಪಿಗೆ ಬಂದು ಅವರ ಹೃದಯ ಭಕ್ತಿಭಾವರಂಜಿತವಾಗಿಬಿಟ್ಟಿತು. ಶ್ರೀ ಕೃಷ್ಣನು ಲೀಲೆಯಾಡಿದ ಪ್ರತಿಯೊಂದು ಸ್ಥಳವನ್ನೂ ಸಂದರ್ಶಿಸುವ ನಿರ್ಧಾರ ಮಾಡಿದರು. ಏಕೆಂದರೆ, ಆ ಪ್ರತಿಯೊಂದು ಸ್ಥಳದ ಪರಿಸರದಲ್ಲೂ ಅವರಿಗೆ ಆ ದಿವ್ಯಲೀಲೆಗಳು ಈಗಲೂ ನಡೆಯುತ್ತಿವೆಯೋ ಎಂಬಷ್ಟು ಸಚೇತನವಾಗಿ ಕಾಣ ತೊಡಗಿತ್ತು.

ಸ್ವಾಮೀಜಿ ಗೋವರ್ಧನ ಪರ್ವತಕ್ಕೆ ಪ್ರದಕ್ಷಿಣೆ ಹಾಕಲು ಹೊರಟರು. ಇದು ಬಹು ದೊಡ್ಡ ಪ್ರದಕ್ಷಿಣೆ. ಈ ಪ್ರದಕ್ಷಿಣೆ ಮಾಡುವ ಕಾಲದಲ್ಲಿ ತಾವು ಭಿಕ್ಷೆ ಬೇಡ ಬಾರದು; ತಾನಾಗಿಯೇ ಏನು ಬರುತ್ತದೋ ಅದನ್ನೇ ಸ್ವೀಕರಿಸಬೇಕು ಎಂದು ತೀರ್ಮಾನಿಸಿದರು. ಮೊದಲ ದಿವಸ ಪ್ರದಕ್ಷಿಣೆ ಹೊರಟಿದ್ದಾರೆ; ಮಧ್ಯಾಹ್ನದ ಹೊತ್ತಿಗೆ ಹಸಿವು ಪ್ರಾರಂಭವಾಯಿತು. ನಡೆದಂತೆಲ್ಲ ಹಸಿವು ಇನ್ನಷ್ಟು ತೀವ್ರವಾಯಿತು. ಜೊತೆಗೆ ಮಳೆ ಬೇರೆ ಸುರಿಯುತ್ತಿದೆ! ಹಸಿವು, ಬಳಲಿಕೆ ಸೇರಿ ಬವಳಿಬಂದು ಬೀಳುವ ಹಾಗಾಯಿತು. ಆದರೂ ಅವಡುಗಚ್ಚಿ ಮುನ್ನಡೆದರು. ಭಿಕ್ಷೆ ಬೇಡಲಾರೆ ಎಂದು ಸಂಕಲ್ಪ ಮಾಡಿದ್ದರಿಂದ ಭಗವಂತನಲ್ಲಿ ಶರಣಾಗತರಾಗಿ ಸಾಗುತ್ತಿದ್ದಾರೆ. ಈ ಹೊತ್ತಿಗೆ ಹಿಂದಿನಿಂದ ಯಾವನೋ ಒಬ್ಬ "ಬಾಬಾಜಿ !" ಎಂದು ಕೂಗಿ ಕರೆದ ಶಬ್ದ ಕೇಳಿಸಿತು. ಆದರೆ ಸ್ವಾಮೀಜಿ ಅತ್ತ ಗಮನ ಕೊಡದೆ ಮುನ್ನಡೆಯುತ್ತಲೇ ಇದ್ದರು. ಕ್ರಮೇಣ ಆ ಧ್ವನಿ

ಇನ್ನಷ್ಟು ಹತ್ತಿರ ಬಂದಿತು. ಆ ಮನುಷ್ಯ ಕೂಗುತ್ತಿದ್ದಾನೆ, "ಬಾಬಾಜಿ, ನಿಮಗೋಸ್ಕರ ಊಟ ತಂದಿದ್ದೇನೆ; ದಯವಿಟ್ಟು ಸ್ವೀಕರಿಸಬೇಕು" ಎಂದು. ನಿಜಕ್ಕೂ ಇದು ಭಗವಂತನೇ ಕಳಿಸಿದ ಭಿಕ್ಷೆ ಎಂಬುದರಲ್ಲಿ ಸಂದೇಹವೇನಿದೆ? ಆದರೂ ಸ್ವಾಮೀಜಿ ಇದನ್ನು ಪರೀಕ್ಷೆ ಮಾಡಿ ನೋಡಿಬಿಡೋಣ ಎಂದು ಓಡಲಾರಂಭಿಸಿದರು. ಆದರೆ ಆ ಮನುಷ್ಯ ಬಿಡದೆ, "ಸ್ವಲ್ಪ ತಾಳಿ, ಸ್ವಲ್ಪ ತಾಳಿ, ಬಾಬಾಜಿ" ಎಂದು ಕೂಗುತ್ತ ತಾನೂ ಓಡಿಬಂದ! ಸ್ವಾಮೀಜಿ ವಿಪರೀತ ಹಸಿದು ಬಳಲಿದ್ದಾರೆ; ಆದರೂ ಶಕ್ತಿಮೀರಿ ಓಡುತ್ತಿದ್ದಾರೆ! ಈ ಓಟದ ಪಂದ್ಯ ಒಂದು ಮೈಲಿಯಷ್ಟು ದೂರ ನಡೆಯಿತು. ಕಡೆಗೂ ಆ ಮನುಷ್ಯ ಪಟ್ಟುಬಿಡದೆ, ಸ್ವಾಮೀಜಿಯನ್ನು ಸಮೀಪಿಸಿ, ಹಿಡಿದು ನಿಲ್ಲಿಸಿ, "ದಯ ವಿಟ್ಟು ಊಟವನ್ನು ಸ್ವೀಕರಿಸಬೇಕು" ಎಂದು ಅಂಗಲಾಚಿ ಬೇಡಿಕೊಂಡ. ಆಗ ಸ್ವಾಮೀಜಿ ಮರುಮಾತಿಲ್ಲದೆ ಊಟ ಮಾಡಿದರು. ಆ ಮನುಷ್ಯ ಹೊರಟ ಕೆಲವೇ ಕ್ಷಣಗಳಲ್ಲಿ ಸ್ವಾಮೀಜಿ ಅವನ ಕಡೆಗೆ ನೋಡುತ್ತಾರೆ—ಅವನು ಮಾಯವಾಗಿಬಿಟ್ಟಿ ದ್ದಾನೆ! ಯಾರಿರಬಹುದು ಅವನು?! ಸ್ವಾಮೀಜಿಗೆ ಭಾವದುಂಬಿ ಬಂದಿತು. ಅನಾಥ ರಕ್ಷಕನಾದ ಭಗವಂತ ತನ್ನ ಭಕ್ತರನ್ನು ನೋಡಿಕೊಳ್ಳುವ ಪರಿಯನ್ನು ಕಂಡು ಅವರ ಕಂಗಳಿಂದ ನೀರು ಧಾರೆಯಾಗಿ ಹರಿಯಿತು. ಭಾವಾವೇಶದಿಂದ "ಜೈರಾಧೆ! ಜೈ ಶ್ರೀಕೃಷ್ಣ!" ಎಂದು ಗಟ್ಟಿಯಾಗಿ ಜಯಕಾರ ಮಾಡಿದರು.

ಗೋವರ್ಧನಗಿರಿಯಿಂದ ಸ್ವಾಮೀಜಿ 'ರಾಧಾಕುಂಡ'ಕ್ಕೆ ಬಂದರು. ಅಲ್ಲಿನ ಕೆರೆ ಯಲ್ಲಿ ಸ್ನಾನಮಾಡಬೇಕೆಂದು ಅವರಿಗೆ ಮನಸ್ಸಾಯಿತು. ಆಗ ಅವರ ಮೈಮೇಲಿದ್ದ ಬಟ್ಟೆಯೆಂದರೆ ಒಂದು ತುಂಡು ಕೌಪೀನ ಮಾತ್ರ. ಆದ್ದರಿಂದ ಸ್ನಾನಕ್ಕೆ ಇಳಿಯುವ ಮೊದಲು ಕೌಪೀನವನ್ನು ಒಗೆದು ಕೆರೆಯ ದಡದ ಮೇಲೆ ಒಣಗಲು ಹಾಕಿದರು. ಆದರೆ ಸ್ನಾನ ಮುಗಿಸಿಕೊಂಡು ಬಂದು ನೋಡುತ್ತಾರೆ—ಕೌಪೀನ ಮಾಯ! ಎಲ್ಲಿಗೆ ಹೋಗಿರಬಹುದು ಅದು? ಗಾಳಿಗೆ ಹಾರಿಹೋಗಿರಬಹುದೆ? ಆ ಕೌಪೀನಕ್ಕೆ ಇನ್ನು ಯಾವ ಕಳ್ಳ ಬಂದಾನು! ಸ್ವಾಮೀಜಿ ಸುತ್ತಮುತ್ತ ನೋಡುತ್ತಾರೆ; ಅಲ್ಲೇ ಒಂದು ಮರದ ಮೇಲೆ ಕುಳಿತ ಒಂದು ಕೋತಿಯ ಕೈಯಲ್ಲಿದೆ ಕೌಪೀನ! ಕೋತಿಯ ಚೇಷ್ಟೆಗೆ ಮಿತಿಯಿದೆಯೆ! ಅಥವಾ... ಸ್ವಾಮೀಜಿಯ ಬ್ರಹ್ಮಚರ್ಯದ ತೇಜಸ್ಸನ್ನು ನೋಡಿ ಅದಕ್ಕೂ ಬ್ರಹ್ಮಚರ್ಯ ಪಾಲನೆ ಮಾಡುವ ಮನಸ್ಸಾಗಿರಬಹುದೆ? ಸ್ವಾಮೀಜಿಗಂತೂ ಬಹಳ ಸಂಕಟವಾಯಿತು. ಆ ಕೋತಿ ಕೌಪೀನವನ್ನು ಬೀಳಿಸುವಂತೆ ಮಾಡಲು ನಾನಾ ಉಪಾಯಗಳನ್ನು ಪ್ರಯೋಗಿಸಿ ನೋಡಿದರು. ಆದರೆ ಕೋತಿ ಯಾಕೋ ದೃಢನಿಶ್ಚಯ ಮಾಡಿದಂತಿತ್ತು. ಕೌಪೀನವನ್ನು ಬೀಳಿಸಲೇ ಇಲ್ಲ. ಆಗ ಸ್ವಾಮೀಜಿಗೆ ಕೋಪ ಬಂದಿತು—ಕೋತಿಯ ಮೇಲಲ್ಲ, ರಾಧೆಯ ಮೇಲೆ! ಅವಳೇ ಅಲ್ಲವೆ ಅಲ್ಲಿನ ಅಧಿಷ್ಠಾತೃ ದೇವತೆ? ಅವಳ ಪ್ರಭಾವ ಇರುವಂತಹ ಈ ಸ್ಥಳದಲ್ಲಿ ಇಂತಹ ಅನ್ಯಾಯ ನಡೆಯಬಹುದೆ ಎಂದು ರಾಧೆಯ ಮೇಲೆ ಕೋಪ. ತಾನಿನ್ನು ನಗರಕ್ಕೆ ಹೋಗುವು ದಿಲ್ಲ; ಬದಲಾಗಿ ಕಾಡಿಗೆ ಹೋಗಿ ಅಲ್ಲೇ ಉಪವಾಸವಿದ್ದು ಪ್ರಾಣತ್ಯಾಗ ಮಾಡಿಬಿಡು ತ್ತೇನೆ ಎಂದು ನಿರ್ಧಾರ ಮಾಡಿಬಿಟ್ಟರು. ತಕ್ಷಣ ಕಾಡಿನ ಕಡೆಗೆ ನಡೆದರು. ಅಷ್ಟರಲ್ಲಿ ಎದುರುಗಡೆಯಿಂದ ಯಾರೋ ಒಬ್ಬ ಅಪರಿಚಿತ—ಇವನು ಆ ಘಟನೆಯನ್ನೆಲ್ಲ ನೋಡಿರಬೇಕು—ಒಂದು ತುಂಡು ಹೊಸ ಕಾವಿಬಟ್ಟೆಯನ್ನೂ ಸ್ವಲ್ಪ ಆಹಾರವನ್ನೂ ತಂದು ಅವರಿಗೆ ಅರ್ಪಿಸಿದ. ಇದನ್ನೆಲ್ಲ ಕಂಡು ಸ್ವಾಮೀಜಿಗೆ ಬಹಳ ಆಶ್ಚರ್ಯ

ವಾಯಿತು; ಇದೊಂದು ಪವಾಡದಂತೆ ತೋರಿತು. ಊಟ ಮುಗಿಸಿಕೊಂಡು ಪುನಃ ಆ ಸರೋವರದ ಬಳಿಗೆ ಬಂದು ನೋಡುತ್ತಾರೆ—ಅವರ ಕೌಪೀನ ಯಥಾ ಸ್ಥಳದಲ್ಲಿ ಬಂದುಬಿದ್ದಿದೆ! ಈಗ ಅವರಿಗೆ ಒಂದು ವಿಷಯ ದೃಢವಾಯಿತು: ಏನೆಂದರೆ, ತಮ್ಮ ಪ್ರೀತಿಯ ಭಗವಂತ ತಮ್ಮನ್ನು ಎಲ್ಲಿಗೆ ಹೋದರೂ ಬಿಡದೆ ಕಾಪಾಡುತ್ತಾನೆ ಎಂದು. ಅಂತೂ ಬೃಂದಾವನಕ್ಕೆ ಬಂದದ್ದರಿಂದ ಸ್ವಾಮೀಜಿಗೆ ಗೋಪಿಕಾವಸ್ತ್ರಾಪಹರಣದ ಒಂದು ಅನುಭವವಾದಂತಾಯಿತು.

ಈಗ ಸ್ವಾಮೀಜಿಯ ಮನಸ್ಸು ಹರಿದ್ವಾರದ* ಕಡೆಗೆ ಹೊರಳಿತು. ಅಲ್ಲಿಂದ ಮುಂದೆ ಹಿಮಾಲಯದಲ್ಲಿರುವ ಬದರಿ ಕೇದಾರಗಳ ಯಾತ್ರೆ ಮಾಡಬೇಕೆಂದು ಅವರು ತೀರ್ಮಾನಿಸಿದರು. ಆದರೆ ತಮ್ಮ ಗುರುಭಾಯಿಯಾದ ಸ್ವಾಮಿ ಅದ್ವೈತಾನಂದರು ಬೃಂದಾವನಕ್ಕೆ ಬರುತ್ತಿದ್ದಾರೆಂಬ ಸುದ್ದಿ ತಲುಪಿದ್ದರಿಂದ ಇನ್ನೂ ಕೆಲವು ದಿನ ಬೃಂದಾವನದಲ್ಲೇ ಉಳಿದುಕೊಂಡು, ಅದ್ವೈತಾನಂದರನ್ನು ಭೇಟಿಮಾಡಿ ಬಳಿಕ ಹಿಮಾಲಯದ ಕಡೆಗೆ ಹೊರಟರು.

ಹರಿದ್ವಾರಕ್ಕೆ ಹೋಗುವ ದಾರಿಯಲ್ಲಿ ಹತ್ರಾಸ್ ರೈಲುನಿಲ್ದಾಣ ಸಿಗುತ್ತದೆ. ಈ ನಿಲ್ದಾಣಕ್ಕೆ ಬಂದು ಒಂದೆಡೆ ಕುಳಿತುಬಿಟ್ಟಿದ್ದಾರೆ ಸ್ವಾಮೀಜಿ. ನಡೆದು ನಡೆದು ಹಸಿವು, ದಣಿವು ಸೇರಿದೆ; ಇದು ಅವರನ್ನು ನೋಡಿದ ಕೂಡಲೇ ತಿಳಿಯುವಂತಿದೆ. ಶರಚ್ಚಂದ್ರ ಗುಪ್ತ ಎಂಬ ಉತ್ಸಾಹೀ ಯುವಕ ಆ ರೈಲುನಿಲ್ದಾಣದ ಅಸಿಸ್ಟೆಂಟ್ ಸ್ಟೇಷನ್ ಮಾಸ್ಟರ್. ಸ್ವಾಮೀಜಿ ದಣಿದು ಕುಳಿತಿರುವ ದೃಶ್ಯ ಅವನ ಕಣ್ಣಿಗೆ ಬಿತ್ತು. ಅವನೊಬ್ಬ ಅದ್ಭುತ ವ್ಯಕ್ತಿಯೆನ್ನಬೇಕು. ಅವನ ಇಡೀ ವ್ಯಕ್ತಿತ್ವವನ್ನು ಮೂರು ಪದಗಳಲ್ಲಿ ಕ್ರೋಡೀಕರಿಸಿ ಹೇಳಿಬಿಡಬಹುದು: ಮಾಧುರ್ಯ, ಪ್ರಾಮಾಣಿಕತೆ ಮತ್ತು ಪೌರುಷ. ಈತ ಸ್ವಾಮೀಜಿಯನ್ನು ಕಂಡ ಪ್ರಥಮ ನೋಟದಲ್ಲೇ ಅವರ ಸುತ್ತ ಒಂದು ಅಲೌಕಿಕ ಆಧ್ಯಾತ್ಮಿಕ ಪ್ರಕಾಶ ಸುತ್ತುವರಿದಿರುವುದನ್ನು ಕಂಡು ಅವರೆಡೆಗೆ ತೀವ್ರವಾಗಿ ಆಕರ್ಷಿತನಾದ. ಸ್ವಾಮೀಜಿ ಸಿದ್ಧಪುರುಷರು; ಸ್ವತಃ ಶರಚ್ಚಂದ್ರನೂ ಶುದ್ಧಹೃದಯದ ಯುವಕ. ಆದ್ದರಿಂದ ಆತ ಅವರ ಆಧ್ಯಾತ್ಮಿಕ ಪ್ರಭೆಯನ್ನು ಗುರುತಿಸಿದ್ದರಲ್ಲಿ ಅಚ್ಚರಿಯೇನಿಲ್ಲ. ಅವರಿಗೆ ತನ್ನಿಂದೇನಾದರೂ ಸೇವೆಯಾಗುವಂತಿದ್ದರೆ ಮಾಡೋಣ ಎಂದು ಅವರ ಹತ್ತಿರಕ್ಕೆ ಬಂದು ನಮಸ್ಕರಿಸಿ, ತನ್ನ ಪರಿಚಯ ಹೇಳಿಕೊಂಡ. ಬಳಿಕ ಕೇಳಿದ, "ಸ್ವಾಮೀಜಿ, ನೀವು ಹಸಿದಿದ್ದೀರಿ, ಅಲ್ಲವೆ?" "ಹೌದು ಹೌದು; ಚೆನ್ನಾಗಿಯೇ ಹಸಿವಾಗಿದೆ!" ಎಂದರು ಸ್ವಾಮೀಜಿ. ಆಗ ಅವನು, "ಹಾಗಾದರೆ, ದಯವಿಟ್ಟು ನನ್ನ ಮನೆಗೆ ಬನ್ನಿ" ಎಂದು ಆಹ್ವಾನಿಸಿದ. ಆದರೆ ಅವನೆಷ್ಟಾದರೂ ಬ್ರಹ್ಮಚಾರಿ; ಮನೆಯಲ್ಲಿ ಅವನೊಬ್ಬನೇ. ಅವನ ಮನೆಯಲ್ಲಿ ಇವರಿಗೇನು ಸಿಕ್ಕೀತು? ಆದ್ದರಿಂದ ಸ್ವಾಮೀಜಿ ಮುಗುಳ್ನಗುತ್ತ ಕೇಳಿದರು, "ನಿಮ್ಮ ಮನೆಗೆ ಬಂದರೆ ತಿನ್ನಲು ನನಗೇನು ಕೊಡುತ್ತೀ?" ತಕ್ಷಣ ಶರಚ್ಚಂದ್ರ ಪಾರಸೀ ಭಾಷೆಯ ಒಂದು ಕವನವನ್ನು ಉದ್ಧರಿಸಿದ. ಅದರ ಭಾವಾರ್ಥ ಇದು: "ಓ ನನ್ನ ಪ್ರಿಯಸಖನೆ, ಅತ್ಯಂತ ವಿಶ್ವಾಸದಿಂದ ನೀನು

---

* ಹಿಮಾಲಯದಲ್ಲಿರುವ ಬದರೀನಾಥ (ಹರಿ) ಕ್ಷೇತ್ರಕ್ಕೂ, ಕೇದಾರನಾಥ (ಹರ) ಕ್ಷೇತ್ರಕ್ಕೂ ಇದರ ಮೂಲಕವೇ ಹೋಗಬೇಕು. ಆದ್ದರಿಂದ ಈ ಸ್ಥಳವನ್ನು ಹರಿದ್ವಾರ, ಹರದ್ವಾರ ಎಂಬ ಎರಡೂ ಹೆಸರುಗಳಿಂದ ಕರೆಯುತ್ತಾರೆ.

ನನ್ನ ಮನೆಗೆ ಬಂದಿರುವೆ; ನಿನಗೆ ನಾನು ನನ್ನ ಹೃದಯದ ಮಾಂಸದಿಂದ ಅತ್ಯಂತ ರುಚಿಯಾದ ಭಕ್ಷ್ಯವನ್ನು ಮಾಡಿ ಬಡಿಸುತ್ತೇನೆ." ಈ ಉತ್ತರದಿಂದ ಸಂತುಷ್ಟರಾದ ಸ್ವಾಮೀಜಿ, ಅವನ ಆಹ್ವಾನವನ್ನು ಮನ್ನಿಸಿ ಅವನೊಂದಿಗೆ ಹೋದರು. ಅವನು ತಯಾರಿಸಿ ಬಡಿಸಿದ ಅಡಿಗೆಯನ್ನು ಸಂತೋಷದಿಂದ ಭುಜಿಸಿದರು.

ಶರಚ್ಚಂದ್ರ ತನ್ನ ಅಂದಿನ ಕೆಲಸಕಾರ್ಯಗಳನ್ನು ಮುಗಿಸಿಕೊಂಡು ಉಳಿದ ಸಮಯವೆಲ್ಲ ಸ್ವಾಮೀಜಿಯ ಬಳಿಯಲ್ಲೇ ಇದ್ದುಬಿಟ್ಟ. ಅವರ ಕಣ್ಣುಗಳೇ ಅವನನ್ನು ಸಂಪೂರ್ಣವಾಗಿ ಸೆರೆಹಿಡಿದುಬಿಟ್ಟಿದ್ದುವು ! ಆ ಆಕರ್ಷಣೆಯಿಂದ ಬಿಡಿಸಿಕೊಳ್ಳುವುದು ಅಸಾಧ್ಯವಾಗಿತ್ತು. ಆದ್ದರಿಂದ, ಕೆಲದಿನಗಳ ಮಟ್ಟಿಗಾದರೂ ತನ್ನ ಮನೆಯಲ್ಲಿದ್ದು ಆತಿಥ್ಯ ಸ್ವೀಕರಿಸಬೇಕು ಎಂದು ಬೇಡಿಕೊಂಡ. ಸ್ವಾಮೀಜಿ ಅದಕ್ಕೊಪ್ಪಿದರು. ಈಗ ಶರಚ್ಚಂದ್ರ, "ಸ್ವಾಮೀಜಿ, ನನಗೆ ಜ್ಞಾನವನ್ನು ಅನುಗ್ರಹಿಸಿ" ಎಂದು ಕೇಳಿಕೊಂಡ. ಅದಕ್ಕುತ್ತರವಾಗಿ ಸ್ವಾಮೀಜಿ, 'ವಿದ್ಯಾ-ಸುಂದರ' ಎಂಬ ಬಂಗಾಳೀ ಕೃತಿಯೊಂದರ ಮಾತನ್ನು ಉದ್ಧರಿಸಿದರು:

"ನಿನಗೆ 'ವಿದ್ಯಾ' ಬೇಕೆನ್ನುವುದಾದರೆ,* ಹೋಗು, ನಿನ್ನ ಸುಂದರ ಮುಖಕ್ಕೆ ಬೂದಿ ಬಳಿದುಕೊಂಡು ಬಾ. ಇಲ್ಲದಿದ್ದರೆ, ನಿನ್ನ ದಾರಿ ನೋಡಿಕೊ."

ಎರಡರ್ಥ ಬರುವಂತೆ ಸ್ವಾಮೀಜಿ ಈ ವಾಕ್ಯವನ್ನು ಬಳಸಿದ್ದರು. ಆದರೆ ಹೆಚ್ಚು ಸಾಹಿತ್ಯ ತಿಳಿಯದ ಶರಚ್ಚಂದ್ರ ಅದನ್ನು ಅಕ್ಷರಶಃ ಸ್ವೀಕರಿಸಿ, ಮುಖಕ್ಕೆ ಬೂದಿ ಬಳಿದುಕೊಂಡೇ ಬಂದುಬಿಟ್ಟ ! ಅದನ್ನು ಕಂಡು ಸ್ವಾಮೀಜಿ ಗಟ್ಟಿಯಾಗಿ ನಕ್ಕುಬಿಟ್ಟರು. ಆದರೆ ಆತನ ಸರಳಶ್ರದ್ಧೆಯನ್ನು ಅವರು ಮೆಚ್ಚಿಕೊಳ್ಳದಿರಲಿಲ್ಲ. ಆದರೆ, ನಿಜಕ್ಕೂ ಶರಚ್ಚಂದ್ರನಿಗೆ ಸಂನ್ಯಾಸದ ಕಲ್ಪನೆ ಹೊಸದೇನೂ ಅಲ್ಲ. ಹಿಂದೆಯೇ ಅವನ ಅಣ್ಣ ಸಂನ್ಯಾಸಿಯಾಗಿ ಹೊರಟುಹೋಗಿಬಿಟ್ಟಿದ್ದ.

ಹತ್ರಾಸಿನಲ್ಲಿ ಬ್ರಜೇನ್‌ಬಾಬು ಎಂಬ ತಮ್ಮ ಹಳೆಯ ಪರಿಚಯಸ್ಥನೊಬ್ಬನು ವಾಸವಾಗಿರುವುದನ್ನು ತಿಳಿದು ಸ್ವಾಮೀಜಿ ತಾವಾಗಿಯೇ ಆವನ ಮನೆಯನ್ನು ಹುಡುಕಿಕೊಂಡು ಹೋದರು. ಆತ ಅವರನ್ನು ತಕ್ಷಣ ಗುರುತಿಸಿ ವಿಶ್ವಾಸದಿಂದ ಸ್ವಾಗತಿಸಿದ ನಲ್ಲದೆ, ತನ್ನ ಮನೆಯಲ್ಲೂ ಕೆಲವು ದಿನ ಇರಬೇಕು ಎಂದು ಕೇಳಿಕೊಂಡ. ಸ್ವಾಮೀಜಿ ಅದಕ್ಕೊಪ್ಪಿ, ಕೆಲವು ದಿನ ಈತನ ಮನೆಯಲ್ಲಿದ್ದು ಹಿಂದಿರುಗುವುದಾಗಿ ಶರಚ್ಚಂದ್ರನಿಗೆ ಹೇಳಿದರು. ಅವರು ಬ್ರಜೇನನ ಮನೆಯಲ್ಲಿ ಉಳಿದುಕೊಂಡಿದ್ದಾಗ ಹತ್ರಾಸ್ ಪಟ್ಟಣದಲ್ಲಿ ವಾಸವಾಗಿದ್ದ ಬಂಗಾಳಿಗಳೆಲ್ಲರೂ ಅವರನ್ನು ನೋಡಲು, ಅವರ ದಿವ್ಯವಾಣಿಯನ್ನು ಕೇಳಲು ಧಾವಿಸಿ ಬರಲಾರಂಭಿಸಿದರು. ಆ ಜನಗಳೊಂದಿಗೆ ಸ್ವಾಮೀಜಿ ಹಿಂದೂ ಧರ್ಮದ ಬಗ್ಗೆ, ಭಾರತದ ಹಿರಿಮೆಯ ಬಗ್ಗೆ ಸ್ಫೂರ್ತಿಯುತವಾಗಿ ಮಾತನಾಡುತ್ತಿದ್ದರು. ಅದರಿಂದ ಈ ಬಂಗಾಳಿಗಳು ಎಷ್ಟು ಸ್ಫೂರ್ತಿಗೊಂಡರೆಂದರೆ, ಅವರ ಮಾತುಗಳನ್ನು ಕೇಳುತ್ತ ಗಂಟೆಗಟ್ಟಲೆ ಕುಳಿತುಬಿಡುತ್ತಿದ್ದರು. ಈ ದಿನಗಳ ಬಗ್ಗೆ ಶರಚ್ಚಂದ್ರನ ಸ್ನೇಹಿತನಾದ ನಟಕೃಷ್ಣ ಎಂಬವನು ಮುಂದೊಮ್ಮೆ ಹೇಳುತ್ತಾನೆ:

"ಸ್ವಾಮೀಜಿಯೊಂದಿಗೆ ನಿರಂತರ ಆಧ್ಯಾತ್ಮಿಕ ಸಂಭಾಷಣೆಯಲ್ಲಿ ಭಾಗವಹಿಸುತ್ತ

---

* ಇದು ಆ ಕಥೆಯಲ್ಲಿ, ಮಾಲಿನಿ ಎಂಬಾಕೆ ಕಥಾನಾಯಕನಾದ ಸುಂದರನಿಗೆ ಹೇಳುವ ಮಾತು. 'ವಿದ್ಯಾ' ಎಂಬುದು ಕಥಾನಾಯಕಿಯ ಹೆಸರು. 'ವಿದ್ಯೆ' ಎನ್ನುವುದಕ್ಕೂ ಬಂಗಾಳಿಯಲ್ಲಿ 'ವಿದ್ಯಾ' ಎಂದೇ ಹೇಳುವುದು.

ಅವರ ಸತ್ಸಹವಾಸದಲ್ಲಿ ಕಳೆದ ಆ ದಿನಗಳು, ನಿಜಕ್ಕೂ ನಮ್ಮ ಜೀವಮಾನದಲ್ಲೇ ಅತ್ಯಂತ ಸಾರ್ಥಕ ದಿನಗಳು. ಅವರ ಪವಿತ್ರ ಸಹವಾಸದ ಪರಿಣಾಮವಾಗಿ ಆ ಊರಿನ ಬಂಗಾಳಿಗಳಲ್ಲಿದ್ದ ಒಳಜಗಳಗಳೆಲ್ಲ ತನ್ನಿಂತಾನೇ ಪರಿಹಾರವಾದುವು. ನಮ್ಮ ಸಮಾಜ ದಲ್ಲಿ, ತಾವು ವಯೋವೃದ್ಧರೆಂದೋ ಉನ್ನತ ಮನೆತನದವರೆಂದೋ ಹೆಮ್ಮೆ ಪಡು ತ್ತಿದ್ದವರೂ ಕೂಡ, ಈ ತರುಣ ಸಂನ್ಯಾಸಿಯ ಮುಂದೆ ಮಕ್ಕಳಂತೆ ಕುಳಿತುಕೊಂಡು, ತಮ್ಮ ಅಧಿಕಾರಮದ, ಕುಲಮದ, ಧನಮದಗಳನ್ನೆಲ್ಲ ಮರೆತು, ಆಧ್ಯಾತ್ಮಿಕ ವಿಚಾರ ಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಸಂಜೆಯ ಹೊತ್ತಿಗೆ ಭಜನೆಯ ಕಾರ್ಯಕ್ರಮ ವಿರುತ್ತಿತ್ತು. ಸ್ವಾಮೀಜಿಯ ಮಧುರ ಕಂಠವನ್ನು ಕೇಳಿ, ಅಲ್ಲಿ ನೆರೆದಿದ್ದವರೆಲ್ಲ ಭಾವ ಪರವಶರಾಗುತ್ತಿದ್ದರು. ಅವರ ಕಂಠಸ್ವರವನ್ನು ಕೇಳಿದವರಿಗೆ ಇನ್ನಷ್ಟು ಕೇಳುವ ಹಂಬಲ; ಕೇಳಿದಷ್ಟೂ ತೃಪ್ತಿಯಿಲ್ಲ.''

ಆಗಾಗ ಸ್ವಾಮೀಜಿ ಯಾವುದೋ ಗಂಭೀರಚಿಂತನೆಯಲ್ಲಿ ಮುಳುಗಿ, ಮ್ಲಾನ ವದನರಾಗಿ ಕುಳಿತುಬಿಡುತ್ತಿದ್ದುದನ್ನು ಶರಚ್ಚಂದ್ರ ಗಮನಿಸುತ್ತಿದ್ದ. ಒಂದು ದಿನ ಅಂತಹ ಸಂದರ್ಭದಲ್ಲಿ ಆತ ಕೇಳಿಯೇಬಿಟ್ಟ, "ಸ್ವಾಮೀಜಿ, ನೀವೇಕೋ ತುಂಬ ಬೇಸರ ದಿಂದಿರುವಂತೆ ಕಾಣುತ್ತಿದ್ದೀರಿ; ಏಕೆ?" ಸ್ವಾಮೀಜಿ ಸ್ವಲ್ಪ ಹೊತ್ತು ಹಾಗೇ ಇದ್ದು, ಬಳಿಕ ನುಡಿದರು: "ಮಗು, ಒಂದು ಮಹಾಕಾರ್ಯವನ್ನು ಸಾಧಿಸಬೇಕಾದ ಹೊಣೆ ನನ್ನದಾಗಿದೆ. ಅದನ್ನು ನಾನು ಸಾಧಿಸಬೇಕೆಂಬುದು ನನ್ನ ಗುರುವಿನ ಆಜ್ಞೆ. ಆದರೆ ನನ್ನ ಅಸಾಮರ್ಥ್ಯವನ್ನೇ ಕಾಣುತ್ತ ನನಗೆ ನಿರಾಶೆಯಾಗಿದೆ. ಅದು ಯಾವ ಕಾರ್ಯ ಗೊತ್ತೇನು? ನಮ್ಮ ಮಾತೃಭೂಮಿಯನ್ನು ಮೇಲೆತ್ತುವ ಬೃಹತ್‌ಕಾರ್ಯ! ಧರ್ಮ, ಆಧ್ಯಾತ್ಮಿಕತೆಗಳು ತೀರಾ ಅಧೋಗತಿಗಿಳಿದಿವೆ. ಎಲ್ಲೆಲ್ಲೂ ಹಸಿವಿನ ಮಾರಿ ತಾಂಡವ ವಾಡುತ್ತಿದೆ. ನನ್ನ ಭಾರತ ಸಶಕ್ತವಾಗಲೇಬೇಕು; ಕ್ರಿಯಾಶೀಲವಾಗಲೇಬೇಕು. ಅದು ತನ್ನ ಆಧ್ಯಾತ್ಮಿಕ ಶಕ್ತಿಯಿಂದ ಇಡೀ ಪ್ರಪಂಚದಲ್ಲೆಲ್ಲ ಪ್ರಭಾವ ಬೀರುವಂತಾಗಬೇಕು."

ಈ ಮಾತುಗಳನ್ನು ಕೇಳಿ ವಿಸ್ಮಯಮೂಕನಾಗಿ ಕುಳಿತ ಶರಚ್ಚಂದ್ರ. ಬಳಿಕ ಅಷ್ಟೇ ರಭಸದಿಂದ, ಅಷ್ಟೇ ಉತ್ಸಾಹದಿಂದ ಹೇಳಿದ, "ಸ್ವಾಮೀಜಿ, ನಾನಿದ್ದೇನೆ! ನನ್ನಿಂದೇನಾಗ ಬೇಕೋ ಹೇಳಿ."

ಸ್ವಾಮೀಜಿ (ಗಂಭೀರವಾಗಿ): "ಕೈಯಲ್ಲಿ ಕಮಂಡಲು ಭಿಕ್ಷಾಪಾತ್ರೆಗಳನ್ನು ಹಿಡಿದು ಮಹೋದ್ದೇಶಕ್ಕಾಗಿ ದುಡಿಯಲು ಸಿದ್ಧನಿರುವೆಯಾ? ಮನೆಮನೆಗೆ ಹೋಗಿ ಭಿಕ್ಷೆ ಎತ್ತಬಲ್ಲೆಯಾ?"

ಶರಚ್ಚಂದ್ರ: "ಓ, ಖಂಡಿತವಾಗಿ ಸ್ವಾಮೀಜಿ!"

ಶರಚ್ಚಂದ್ರನ ಧೈರ್ಯವನ್ನೂ ದೃಢಬುದ್ಧಿಯನ್ನೂ ಕಂಡು ಸ್ವಾಮೀಜಿ ಬಹಳ ಸಂತೋಷಪಟ್ಟರು.

ಈ ಸಂಭಾಷಣೆಯನ್ನು ಕೇಳಿದಾಗ ಒಂದು ಪ್ರಶ್ನೆ ಏಳಬಹುದು. ರಾಷ್ಟ್ರೋದ್ಧಾರ ಮಾಡುವುದಕ್ಕೂ, ಕಮಂಡಲು-ಭಿಕ್ಷಾಪಾತ್ರೆಗಳನ್ನು ಹಿಡಿದುಕೊಂಡು ಸಂನ್ಯಾಸಿ ಯಾಗುವುದಕ್ಕೂ ಏನು ಸಂಬಂಧ? ರಾಷ್ಟ್ರವನ್ನು ಉದ್ಧಾರ ಮಾಡಬೇಕಾದರೆ ಹಣ ಬೇಕು; ಆದ್ದರಿಂದ 'ಚೆನ್ನಾಗಿ ಸಂಪಾದಿಸು' ಎಂದು ಹೇಳಬೇಕಾಗಿತ್ತು ಸ್ವಾಮೀಜಿ. ರಾಷ್ಟ್ರವನ್ನು ಪ್ರಗತಿಯ ಹಾದಿಯಲ್ಲಿ ಕರೆದೊಯ್ಯಲು ಉನ್ನತ ಅಧಿಕಾರ ಬೇಕು; ಆದ್ದರಿಂದ ಐ.ಎ.ಎಸ್. ಪರೀಕ್ಷೆ ಪಾಸುಮಾಡು ಎಂದೋ, ಮಂತ್ರಿಯಾಗು ಎಂದೋ

ಹೇಳಬೇಕಾಗಿತ್ತಲ್ಲವೆ ? ಅದನ್ನು ಬಿಟ್ಟು, 'ಸಂನ್ಯಾಸಿಯಾಗುತ್ತೀಯಾ ?' ಎಂದೇಕೆ ಕೇಳಿದರು ? ಏಕೆಂದರೆ, ಯಾವನು ತ್ಯಾಗ ಮಾಡುತ್ತಾನೋ ಅವನು ಮಾತ್ರ ಮಹಾ ಕಾರ್ಯಗಳನ್ನು ಸಾಧಿಸಬಲ್ಲ. ಬುದ್ಧನು ರಾಜ್ಯಭೋಗವನ್ನು ತ್ಯಾಗಮಾಡಿ ಜ್ಞಾನ ಸಂಪಾದಿಸಿದ್ದರಿಂದ, ರಾಜನಾಗಿ ಮಾಡಬಹುದಾಗಿದ್ದ ಸೇವೆಗಿಂತಲೂ ಹೆಚ್ಚಿನ ಸೇವೆಯನ್ನು ಮಾಡಲು ಸಾಧ್ಯವಾಯಿತು. ಮಹಾತ್ಮಾ ಗಾಂಧೀಜಿಯವರು ಮಹಾತ್ಯಾಗ ಮಾಡಿದಮೇಲೆಯೇ ಸಮಗ್ರ ಭಾರತದ ಜನ ಅವರನ್ನು ಅನುಸರಿಸಿ ನಡೆದರು; ಅವರೊಂದಿಗೆ ಸಹಕರಿಸಿದರು; ಅವರೊಂದಿಗೆ ಪ್ರಾಣ ಕೊಟ್ಟರು; ಸ್ವಾತಂತ್ರ್ಯವನ್ನು ಪಡೆದರು. ಆದ್ದರಿಂದ ನಿಜವಾದ ಮಹಾಕಾರ್ಯವೆಂಬುದೇನಾದರೂ ಸಾಧಿಸಲ್ಪಡಬೇಕಾದರೆ, ನಿಜವಾದ ಸೇವೆ ಸಲ್ಲಬೇಕಾದರೆ, ಅಲ್ಲಿ ಪರಿಪೂರ್ಣವಾದ ತ್ಯಾಗ ಇರಲೇಬೇಕಾಗುತ್ತದೆ. ಆತ್ಮೋದ್ಧಾರ ಮಾಡಿಕೊಳ್ಳಬೇಕಾದರೂ, ರಾಷ್ಟ್ರೋದ್ಧಾರ ಮಾಡಬೇಕಾದರೂ ಸ್ವಸುಖವನ್ನು ತ್ಯಾಗ ಮಾಡಬೇಕಾಗುತ್ತದೆ. ಇದನ್ನೇ ಸ್ವಾಮಿ ವಿವೇಕಾನಂದರು ಮುಂದೆ ಘಂಟಾಘೋಷವಾಗಿ ಸಾರುತ್ತಾರೆ—"ಮಹಾಕಾರ್ಯಗಳು ಮಹಾತ್ಯಾಗದಿಂದ ಮಾತ್ರ ಸಾಧ್ಯ !" ಎಂದು.

ಹರಿದ್ವಾರಕ್ಕೆಂದು ಹೊರಟಿದ್ದ ಸ್ವಾಮೀಜಿ ಹತ್ರಾಸಿಗೆ ಬಂದು ಬಹಳ ದಿನಗಳಾಗಿ ಬಿಟ್ಟಿವೆ. ಆದ್ದರಿಂದ, ತಾವಿನ್ನು ಹೊರಟುಬಿಡಬೇಕೆಂದು ನಿಶ್ಚಯಿಸಿ, ಒಂದು ದಿನ ಶರಚ್ಚಂದ್ರನಿಗೆ ಹೇಳುತ್ತಾರೆ: "ನೋಡು, ನಾನಿನ್ನು ಇಲ್ಲಿ ನಿಲ್ಲಲಾರೆ. ಸಂನ್ಯಾಸಿಯಾದವನು ಒಂದೇ ಸ್ಥಳದಲ್ಲಿ ಬಹಳ ದಿನ ಇರಬಾರದು. ಅಲ್ಲದೆ ನನಗೆ ಈಗಾಗಲೇ ನಿಮ್ಮ ಮೇಲೆಲ್ಲ ಒಂದು ಬಗೆಯ ಆಸಕ್ತಿ ಬೆಳೆಯುತ್ತಿದೆ. ಆಧ್ಯಾತ್ಮಿಕ ಜೀವನದಲ್ಲಿ ಇದೂ ಒಂದು ಬಂಧನ." ಶರಚ್ಚಂದ್ರನಿಗೆ ಸ್ವಾಮೀಜಿಯನ್ನು ಬಿಟ್ಟುಕೊಡಲು ಸ್ವಲ್ಪವೂ ಇಷ್ಟವಿಲ್ಲ. ಆದ್ದರಿಂದ ಅವರನ್ನು ಇನ್ನೂ ಕೆಲವು ದಿನ ಉಳಿದುಕೊಳ್ಳುವಂತೆ ಬೇಡಿಕೊಂಡ. ಅದಕ್ಕೆ ಅವರದೊಂದೇ ಉತ್ತರ: "ನನ್ನನ್ನು ಒತ್ತಾಯಿಸಬೇಡ." ಶರಚ್ಚಂದ್ರನಿಗೆ ಅವರಲ್ಲಿ ಅಪಾರ ಪ್ರೀತಿ-ವಿಶ್ವಾಸ ಬೆಳೆದುಬಿಟ್ಟಿತ್ತು. ಅವರನ್ನು ಬಿಟ್ಟುಕೊಡಲಾರದೆ, "ಸ್ವಾಮೀಜಿ, ನನಗೆ ಮಂತ್ರದೀಕ್ಷೆ ನೀಡಿ ನಿಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಿ" ಎಂದು ಗೋಗರೆದ. ಆಗ ಅವರೆಂದರು, "ಏನು, ನನ್ನ ಶಿಷ್ಯನಾದ ಮಾತ್ರಕ್ಕೆ ಆಧ್ಯಾತ್ಮಿಕ ಜೀವನದಲ್ಲಿ ಎಲ್ಲವನ್ನೂ ಸಿದ್ಧಿಸಿಕೊಂಡುಬಿಡಬಹುದು ಎಂದು ತಿಳಿದುಕೊಂಡೆಯಾ ? ಭಗವಂತನೇ ಎಲ್ಲವೂ ಆಗಿದ್ದಾನೆ ಎಂಬುದನ್ನು ನೆನಪಿಟ್ಟುಕೋ. ಆಗ ನೀನು ಮಾಡಿದ ಪ್ರತಿಯೊಂದು ಕಾರ್ಯವೂ ನಿನ್ನ ಪ್ರಗತಿಗೆ ನೆರವಾಗುತ್ತದೆ. ನಾನು ಆಗಾಗ ಬಂದು ನಿನ್ನ ಜೊತೆಗಿರುತ್ತೇನೆ. ಈಗಂತೂ ನಾನು ಹಿಮಾಲಯದ ಕಡೆಗೆ ಹೋಗಲೇಬೇಕಾಗಿದೆ." ಕಡೆಗೆ ಅವನು, "ಸ್ವಾಮೀಜಿ, ನೀವು ಏನು ಬೇಕಾದರೂ ಹೇಳಿಕೊಳ್ಳಿ; ನೀವು ಎಲ್ಲಿಗೇ ಹೋದರೂ ನಾನೂ ನಿಮ್ಮನ್ನು ಹಿಂಬಾಲಿಸಿ ಬರುವವನೇ" ಎಂದುಬಿಟ್ಟ. ಸ್ವಾಮೀಜಿ ಅವನನ್ನೇ ಒಂದು ಕ್ಷಣ ದಿಟ್ಟಿಸುತ್ತ ನುಡಿದರು, "ನಿಜಕ್ಕೂ ನನ್ನ ಜೊತೆಗೆ ಬರಬಲ್ಲೆಯಾ ? ಹಾಗಾದರೆ ಈಗಲೇ ನನ್ನ ಭಿಕ್ಷಾಪಾತ್ರೆಯನ್ನು ತೆಗೆದುಕೊಂಡು ಹೋಗಿ, ನಿನ್ನ ರೈಲ್ವೇ ಕೂಲಿಗಳ ಹತ್ತಿರ ಭಿಕ್ಷೆಬೇಡಿ ತೆಗೆದುಕೊಂಡು ಬಾ, ನೋಡೋಣ !" ಸ್ವಾಮೀಜಿ ಹೀಗೆಂದದ್ದೇ ತಡ, ಶರಚ್ಚಂದ್ರ ಭಿಕ್ಷಾಪಾತ್ರೆಯನ್ನು ಹಿಡಿದು ರೈಲ್ವೇ ಕೂಲಿಗಳ ವಠಾರಕ್ಕೆ ನಡೆದೇಬಿಟ್ಟ ! ತನ್ನ ಗುರುವಿನ ಆಣತಿಯಂತೆ ಭಿಕ್ಷೆ ಸಂಗ್ರಹಿಸಿ ತಂದ. ಸ್ವಾಮೀಜಿಗೆ ಒಪ್ಪಿಗೆಯಾಯಿತು. ಅವನಿಗೆ ಮಂತ್ರದೀಕ್ಷೆ ನೀಡಿ

ಅನುಗ್ರಹಿಸಿ, ತಮ್ಮ ಮೊಟ್ಟಮೊದಲ ಶಿಷ್ಯನನ್ನಾಗಿ ಸ್ವೀಕರಿಸಿದರು.

ಅವನೀಗ ತನ್ನ ಗುರುವನ್ನು ಅನುಸರಿಸಿ ಹೃಷೀಕೇಶಕ್ಕೆ ಹೊರಡಲು ಸಿದ್ಧನಾದ. ಆದರೆ ಅವನದು ಜವಾಬ್ದಾರಿಯ ಹುದ್ದೆ; ಇದ್ದಕ್ಕಿದ್ದಂತೆ ರಜಾ ಹಾಕಿ ಹೋಗುವಂತಿಲ್ಲ. ಅವನ ಅದೃಷ್ಟಕ್ಕೆ, ಬದಲಿಗನೊಬ್ಬನ ನೇಮಕವಾಯಿತು. ಒಡನೆಯೇ ಅವನು ಸ್ವಾಮೀಜಿಯ ಜೊತೆಯಲ್ಲಿ ಹೃಷೀಕೇಶಕ್ಕೆ ಹೊರಟುಬಿಟ್ಟ. ಶಹರಾನ್‌ಪುರದವರೆಗೆ (೩೬೦ ಮೈಲಿ) ರೈಲುಪ್ರಯಾಣ; ಅನಂತರ ಕಾಲ್ನಡಿಗೆ. ಅವನಿಗೆ ಇಂತಹ ಪ್ರಯಾಸಕರ ಪ್ರಯಾಣದ ಅಭ್ಯಾಸವಿರಲಿಲ್ಲ. ಸಾಲದ್ದಕ್ಕೆ ಹೆಗಲಮೇಲೆ ಭಾರದ ಗಂಟು. ಆದ್ದರಿಂದ ದಣಿವೋ ದಣಿವು. ಪರಿವ್ರಾಜಕ ಜೀವನ ಎಷ್ಟು ಕಠಿಣ ಎಂಬುದರ ಕಲ್ಪನೆಯಾಯಿತು ಅವನಿಗೆ. ಆದರೆ ಸ್ವಾಮೀಜಿಯ ಬಲದಿಂದ, ಅವರ ಪ್ರೇಮದ ಆರೈಕೆಯಿಂದ ಆ ಕಷ್ಟಗಳನ್ನು ಸಹಿಸಿಕೊಳ್ಳಲು ಸಾಧ್ಯವಾಯಿತು. ಸ್ವಾಮೀಜಿಯ ಮಾತುಕತೆಗಳನ್ನು ಆಲಿಸುತ್ತ, ಅವನಿಗೆ ಎಷ್ಟೋ ಸಲ ಪ್ರಯಾಣದ ಆಯಾಸವೆಲ್ಲ ಮರವೆಯಾಗುತ್ತಿತ್ತು. ಮುಂದೆ ಶರಚ್ಚಂದ್ರ ತನ್ನ ಸಂನ್ಯಾಸೀಬಂಧುಗಳ ಬಳಿ ಈ ದಿನಗಳ ಅನುಭವಗಳನ್ನು ವರ್ಣಿಸುತ್ತ ಹೇಳುತ್ತಾನೆ: "ಹಿಮಾಲಯ ಪ್ರದೇಶದಲ್ಲಿ ಸಂಚರಿಸುತ್ತಿದ್ದ ಆ ಸಮಯದಲ್ಲಿ, ಒಂದು ದಿನ ನಾನು ಹಸಿವು-ಬಾಯಾರಿಕೆಗಳಿಂದ ಕಂಗಾಲಾಗಿ ಪ್ರಜ್ಞೆತಪ್ಪಿ ಬಿದ್ದೆ. ಆ ಕೊರತೆದಲ್ಲಿ ನಾನು ಸತ್ತೇಹೋಗಿಬಿಡಬೇಕಾಗಿತ್ತು. ಆದರೆ ಸ್ವಾಮೀಜಿ, ನನ್ನನ್ನು ತಮ್ಮ ಹೆಗಲಮೇಲೆ ಹೊತ್ತು ಸಾಗಿ ರಕ್ಷಣೆ ಮಾಡಿದರು. ಇನ್ನೊಂದು ಸಲ ನಮ್ಮ ಪ್ರಯಾಣಕ್ಕೆ ಯಾರೋ ಒಂದು ಕುದುರೆಯನ್ನು ಕೊಟ್ಟಿದ್ದರು. ನಾವಿಬ್ಬರೂ ಆ ಕುದುರೆಯ ಮೇಲೆ ಕುಳಿತು ಒಂದು ನದಿಯನ್ನು ದಾಟಬೇಕಿತ್ತು. ಅದು ಅಷ್ಟೇನೂ ಆಳವಿರಲಿಲ್ಲ; ಆದರೆ ಬಹಳ ರಭಸದಿಂದ ಹರಿಯುತ್ತಿತ್ತು. ಅಲ್ಲದೆ, ನೆಲವಂತೂ ವಿಪರೀತ ಜಾರುತ್ತಿತ್ತು. ಆದ್ದರಿಂದ ನನ್ನನ್ನು ಕುದುರೆಯ ಮೇಲೆ ಕುಳ್ಳಿರಿಸಿ, ಸ್ವಾಮೀಜಿ ತಾವು ಮುಂದಿನಿಂದ ಕುದುರೆಯನ್ನು ಎಚ್ಚರಿಕೆಯಿಂದ ನಡೆಸಿಕೊಂಡು ಸಾಗಿದರು. ಹೀಗೆ ಹಲವಾರು ಸಲ ತಮ್ಮ ಪ್ರಾಣವನ್ನೇ ಪಣವಾಗಿಸಿ ನನ್ನನ್ನು ಕಾಪಾಡಿದರು. ಸ್ವಾಮೀಜಿಯನ್ನು ನಾನು ಏನೆಂದು ಬಣ್ಣಿಸಲಿ! ಅವರ ವ್ಯಕ್ತಿತ್ವವನ್ನು ವರ್ಣಿಸಲು ನನಗೆ ತಿಳಿದಿರುವ ಶಬ್ದ ಒಂದೇ—ಪ್ರೇಮ, ಪ್ರೇಮ, ಪ್ರೇಮ. ಅವರ ವ್ಯಕ್ತಿತ್ವವೆಲ್ಲ ಪ್ರೇಮಮಯ. ಕೆಲವು ಸಲ ಕಾಯಿಲೆಯಿಂದಾಗಿ ನಾನು ದುರ್ಬಲನಾಗುತ್ತಿದ್ದೆ. ನಡೆಯುವುದಕ್ಕೇ ಕಷ್ಟವಾಗುತ್ತಿತ್ತು. ಆಗ ಸ್ವಾಮೀಜಿಯೇ ನನ್ನ ಸಾಮಾನುಗಳನ್ನೆಲ ಹೊತ್ತು ತರುತ್ತಿದ್ದರು. ಆ ಸಾಮಾನುಗಳಲ್ಲಿ ನನ್ನ ಬೂಟುಗಳೂ ಇರುತ್ತಿದ್ದುವು."

ಮುಂದೆ ಒಂದಾನೊಂದು ಸಂದರ್ಭದಲ್ಲಿ ಶರಚ್ಚಂದ್ರ ಯಾವುದೋ ಕಾರಣದಿಂದಾಗಿ ದುಃಖಗೊಂಡು, "ಸ್ವಾಮೀಜಿ, ನೀವು ನನ್ನ ಕೈಬಿಟ್ಟುಬಿಡುತ್ತೀರಾ?" ಎಂದು ಕೇಳುತ್ತಾನೆ. ಆಗ ಸ್ವಾಮೀಜಿ ಛೇಡಿಸುತ್ತಾರೆ: "ಛಿ ಮೂರ್ಖ, ನಿನ್ನ ಬೂಟುಗಳನ್ನು ಕೂಡ ಹೊತ್ತಿದ್ದೇನೆ ನಾನು, ನೆನಪಿದೆಯಾ?"

ಇನ್ನೊಂದು ಸಲ ಅವರು ಅರಣ್ಯವೊಂದರಲ್ಲಿ ಸಂಚರಿಸುತ್ತಿದ್ದಾಗ, ಅಲ್ಲೊಂದು ಕಡೆ ಮನುಷ್ಯನ ಮೂಳೆಗಳು ಬಿದ್ದಿರುವುದನ್ನು ಕಂಡರು. ಜೊತೆಯಲ್ಲೇ, ಕೊಳೆತು ವಾಸನೆ ಬೀರುತ್ತಿರುವ ಕಾವಿಬಟ್ಟೆಯ ಚೂರುಗಳು! ಎದೆ ತಲ್ಲಣಿಸುವಂತಹ ದೃಶ್ಯ! ಸ್ವಾಮೀಜಿ ಅವುಗಳನ್ನು ತೋರಿಸುತ್ತ ನುಡಿದರು, "ನೋಡಿಲ್ಲಿ, ಯಾರೋ ಒಬ್ಬ ಸಂನ್ಯಾಸಿಯನ್ನು ಒಂದು ಹುಲಿ ತಿಂದುಹಾಕಿರಬೇಕು! ಏನು, ಭಯವಾಗು

ತ್ತದೆಯೇ ?'' ತಕ್ಷಣ, ಶರಚ್ಚಂದ್ರನೆಂದ, "ನೀವಿರುವಾಗ ಭಯವೆಲ್ಲಿ ಸ್ವಾಮೀಜಿ ?'' ಅವರಲ್ಲಿ ಅವನಿಗೆ ಅದೆಷ್ಟು ವಿಶ್ವಾಸ ! ನಿಜ, ವನರಾಜನೇ ಜೊತೆಯಲ್ಲಿರುವಾಗ ಇತರ ಪ್ರಾಣಿಗಳಿಂದ ಭಯವೆಲ್ಲಿಯದು ?

ಹೃಷೀಕೇಶವನ್ನು ತಲುಪಿದ ಸ್ವಾಮೀಜಿ, ಅಲ್ಲಿ ಗುಡಿಸಲೊಂದರಲ್ಲಿ ಇಳಿದುಕೊಂಡು, ಇತರ ಸಾಧು-ಸಂನ್ಯಾಸಿಗಳ ಸಹವಾಸದಲ್ಲಿ ತಮ್ಮ ಶಿಷ್ಯನೊಂದಿಗೆ ಧ್ಯಾನಾದಿಗಳಲ್ಲಿ ನಿರತರಾದರು. ಸುತ್ತಲೂ ಶುಭ್ರ ಹಿಮಾಚ್ಛಾದಿತ ಬೆಟ್ಟಗಳು; ತಿಳಿಯಾಗಿ ಹರಿಯುವ ಗಂಗೆಯ ಕಲರವ; ತಪಶ್ಚರ್ಯೆಕ್ಕೆ ಅತ್ಯಂತ ಸೂಕ್ತವಾದ ಸ್ಥಳ. ಕೆಲವು ದಿನಗಳ ಬಳಿಕ ಅವರು ಬದರಿ-ಕೇದಾರಗಳಿಗೆ ಹೋಗಲು ನಿರ್ಧರಿಸಿದರು. ಹಿಮಾಲಯದ ಉನ್ನತ ಶಿಖರಗಳನ್ನೇರಿ ಹೋಗುವ ಉತ್ಸಾಹ ಅವರಲ್ಲಿ ತುಡಿಯುತ್ತಿತ್ತು. ಆದರೆ ಶರಚ್ಚಂದ್ರನ ಆರೋಗ್ಯ ಸರಿಯಿರಲಿಲ್ಲ. ಪರ್ವತವನ್ನೇರುವ ಕೆಲಸವಂತೂ ಅವನಿಂದ ಸಾಧ್ಯವೇ ಇರಲಿಲ್ಲ. ಆದ್ದರಿಂದ ಅವರು ತಮ್ಮ ಬಯಕೆಯನ್ನು ಒತ್ತಿಹಿಡಿಯಬೇಕಾಯಿತು. ಆದರೆ ಅವರು ಹುಟ್ಟಾಸಂನ್ಯಾಸಿಯಲ್ಲವೆ ? ಸಂನ್ಯಾಸಿಗಳಿಗೂ ಹಿಮಾಲಯದ ಶಿಖರಗಳಿಗೂ ಯುಗಯುಗಗಳ ನಂಟು. ಕೆಲದಿನಗಳಲ್ಲೇ ಆ ಅಭಿಲಾಷೆ ಅವರಲ್ಲಿ ಮತ್ತೊಮ್ಮೆ ಜಾಗೃತವಾಯಿತು. ಇನ್ನು ತಡೆಯಲಾರದೆ ಒಂದು ದಿನ ಇದ್ದಕ್ಕಿದ್ದಂತೆ, "ಛೆ ! ನೀನು ನನ್ನ ಕಾಲಿಗೊಂದು ಸಂಕೋಲೆಯ ತರಹ ಆಗಿಬಿಟ್ಟೆ ! ನಾನೊಬ್ಬನೇ ಹಾಯಾಗಿ ಅಲೆದಾಡಿಕೊಂಡಿದ್ದೆ. ಈಗ ನೀನೊಬ್ಬ ಬಂದು ನನಗೆ ಒಳ್ಳೇ ತಲೆನೋವಾಗಿಬಿಟ್ಟೆ ! ಸಾಕಾಯಿತು ! ನಾನು ನನ್ನ ದಾರಿಹಿಡಿದು ಹೊರಟು ಹೋಗುತ್ತೇನೆ. ಇನ್ನು ನನ್ನಿಂದ ಇಲ್ಲಿರಲು ಸಾಧ್ಯವಿಲ್ಲ'' ಎಂದು ಚೆನ್ನಾಗಿ ರೇಗಾಡಿ, ದಂಡ-ಕಮಂಡಲು ಹಿಡಿದುಕೊಂಡು ಹೊರಟೇಬಿಟ್ಟರು. ಆಗ ಕಿಛುಡಿ (ತೊವ್ವೆ-ಅನ್ನ) ತಯಾರಿಸುತ್ತಿದ್ದ ಶರಚ್ಚಂದ್ರ ಒಂದು ಮಾತನ್ನೂ ಆಡದೆ ಮಂಕುಬಡಿದವನಂತೆ ಕುಳಿತುಬಿಟ್ಟ.

ಸುಮಾರು ಮೂರು-ನಾಲ್ಕು ಗಂಟೆ ಕಳೆದಿರಬಹುದು; ಸ್ವಾಮೀಜಿ ವಾಪಸು ಬಂದುಬಿಟ್ಟರು. ಶಿಷ್ಯನ ಹಿಂದೆ ನಿಂತುಕೊಂಡು ಮೃದುದನಿಯಲ್ಲಿ ನುಡಿದರು, "ಓ ಶರತ್, ನನಗೇನಾದರೂ ಸ್ವಲ್ಪ ತಿನ್ನಲು ಕೊಡುತ್ತೀಯಾ ? ನನಗೆ ಭಯಂಕರ ಹಸಿವು !''

ಶರಚ್ಚಂದ್ರನಿಗೆ ಹೋದ ಜೀವ ಬಂದಂತಾಯಿತು. "ಖಂಡಿತ, ಸ್ವಾಮೀಜಿ, ಈ ಕ್ಷಣ ಕೊಟ್ಟುಬಿಟ್ಟೆ !'' ಎಂದುದ್ಗರಿಸಿದ.

ಸ್ವಾಮೀಜಿ: "ನೀನಿನ್ನೂ ಊಟ ಮಾಡಿಲ್ಲವೆ ?''

ಶರಚ್ಚಂದ್ರ: "ನೀವು ಇಲ್ಲಿಲ್ಲದ ಮೇಲೆ ಹೇಗೆ ಮಾಡಲಿ ?''

ಸ್ವಾಮೀಜಿ: "ನಿಜವಾಗಿಯೂ ನೀನು ನನ್ನ ಕಾಲಿಗೊಂದು ಸಂಕೋಲೆಯಾಗಿಬಿಟ್ಟೆ ಕಣಯ್ಯಾ. ನಾನು ಸಾಕಷ್ಟು ದೂರ ಹೋಗಿದ್ದೆ. ಆದರೆ ಇಲ್ಲೊಬ್ಬ ಮೂರ್ಖ ಒಬ್ಬಂಟಿಗನಾಗಿದ್ದಾನಲ್ಲ ಎನ್ನುವುದು ನೆನಪಾಯಿತು. ಏನು ಮಾಡಿಕೊಂಡುಬಿಡುತ್ತಾನೋ ಎಂದು ಯೋಚನೆಯಾಯಿತು. ನೋಡು, ನಾನು ನಿನಗೋಸ್ಕರ ಹಿಂದಿರುಗಿ ಬಂದೆ.''

ಬಳಿಕ ಶಿಷ್ಯ ಕಿಛುಡಿಯನ್ನು ಬಡಿಸಿದ. ಗುರುಶಿಷ್ಯರಿಬ್ಬರೂ ಕುಳಿತುಕೊಂಡು ಆನಂದದಿಂದ ಊಟ ಮಾಡಿದರು.

ಸ್ವಾಮೀಜಿ ಹಿಂದಿರುಗಿ ಬಂದದ್ದು ಒಳ್ಳೆಯದೇ ಆಯಿತೆನ್ನಬೇಕು. ಏಕೆಂದರೆ

ಮೊದಲೇ ಆರೋಗ್ಯ ಸರಿಯಿಲ್ಲದ್ದರಿಂದ ಶರಚ್ಚಂದ್ರ ತೀವ್ರ ಕಾಯಿಲೆಗೆ ಗುರಿಯಾದ. ಅಲ್ಲಿ ಸರಿಯಾದ ಪಥ್ಯೋಪಚಾರಗಳಿಗೆ ಅವಕಾಶವಿಲ್ಲದ್ದರಿಂದ, ಬೇರೆ ಉಪಾಯ ಗಾಣದೆ ಸ್ವಾಮೀಜಿ ಪುನಃ ಅವನನ್ನು ಹತ್ರಾಸಿಗೇ ಕರೆತರಬೇಕಾಯಿತು. ಅಂತೂ ಅವರು ಬದರೀ-ಕೇದಾರದ ಆಲೋಚನೆಯನ್ನು ಕೈಬಿಡಬೇಕಾಯಿತು. ಆದರೆ ಹತ್ರಾಸಿಗೆ ತಲುಪಿ ದಾಗ ಸ್ವತಃ ಸ್ವಾಮೀಜಿಯೇ ಮಲೇರಿಯಾ ರೋಗಪೀಡಿತರಾದರು. ಗುರುಶಿಷ್ಯರಿಬ್ಬರೂ ಕಾಯಿಲೆಯಿಂದ ಸೊರಗಿ ಸಣ್ಣಗಾಗಿಬಿಟ್ಟರು. ಬಹಳವೇ ಕಷ್ಟವಾಯಿತು. ಈ ವರ್ತ ಮಾನ, ಹೇಗೋ ಏನೋ, ಬಾರಾನಾಗೋರ್ ಮಠದ ಸೋದರಸಂನ್ಯಾಸಿಗಳಿಗೆ ತಲು ಪಿತು. ಅವರು ಸ್ವಾಮೀಜಿಗೆ ಪತ್ರಗಳನ್ನು ಬರೆದು ಕೂಡಲೇ ಮಠಕ್ಕೆ ಹಿಂದಿರುಗಿ ಬರು ವಂತೆ ವಿನಂತಿಸಿಕೊಂಡರು. ಆ ಸಮಯಕ್ಕೆ, ತೀರ್ಥಯಾತ್ರೆ ಮಾಡುತ್ತ ಹತ್ರಾಸಿಗೆ ಬಂದ ಸ್ವಾಮಿ ಶಿವಾನಂದರಿಗೆ ಸ್ವಾಮೀಜಿ ಕಾಯಿಲೆ ಬಿದ್ದಿರುವ ವರ್ತಮಾನ ಸಿಕ್ಕಿತು. ಅವರು ತಮ್ಮ ತೀರ್ಥಯಾತ್ರೆಯನ್ನು ಅಲ್ಲಿಗೇ ಮೊಟಕುಗೊಳಿಸಿ, ಸ್ವಾಮೀಜಿಯನ್ನು ಕರೆದುಕೊಂಡು ಬಾರಾನಾಗೋರ್ ಮಠಕ್ಕೆ ಹಿಂದಿರುಗಿದರು. ಹತ್ರಾಸಿನಿಂದ ಹೊರಡು ವಾಗ ಸ್ವಾಮೀಜಿ, "ಸ್ವಲ್ಪ ಸುಧಾರಿಸಿಕೊಂಡ ತಕ್ಷಣ ಬಾರಾನಾಗೋರ್ ಮಠಕ್ಕೆ ಬಂದು ಬಿಡು" ಎಂದು ಶರಚ್ಚಂದ್ರನಿಗೆ ಆದೇಶಿಸಿದರು. ಆದರಂತೆ ಅವನು ತನ್ನ ಕೆಲಸಕ್ಕೆ ರಾಜೀನಾಮೆ ನೀಡಿ, ಆರೋಗ್ಯ ಸುಧಾರಿಸಿದೊಡನೆ ಬಾರಾನಾಗೋರ್ ಮಠಕ್ಕೆ ಬಂದು ಬಿಟ್ಟ. ಇವನೇ ಸ್ವಾಮಿ ವಿವೇಕಾನಂದರ ಮೊದಲ ಶಿಷ್ಯ. ಮಠದಲ್ಲಿ ಎಲ್ಲರೂ ಇವ ನನ್ನು ಭ್ರಾತೃವಾತ್ಸಲ್ಯದಿಂದ ಸ್ವಾಗತಿಸಿ ಬರಮಾಡಿಕೊಂಡರು. ಸ್ವಾಮೀಜಿ ಅವನಿಗೆ ಸಂನ್ಯಾಸದೀಕ್ಷೆ ನೀಡಿ, 'ಸ್ವಾಮಿ ಸದಾನಂದ' ಎಂಬ ಹೆಸರನ್ನಿತ್ತರು.

ಸ್ವಾಮೀಜಿ ಈ ಬಾರಿ ಬಾರಾನಾಗೋರ್ ಮಠಕ್ಕೆ ಹಿಂದಿರುಗಿದಾಗ (೧೮೮೮ರ ಅಂತ್ಯ ಭಾಗ) ಅನೇಕ ಸೋದರಸಂನ್ಯಾಸಿಗಳು ತೀರ್ಥಾಟನೆಗೆ ಹೊರಟುಹೋಗಿದ್ದರು. ಆದರೆ ಉಳಿದ ಗುರುಭಾಯಿಗಳೂ ಗೃಹಸ್ಥಭಕ್ತರೂ ತಮ್ಮ ನೆಚ್ಚಿನ 'ನರೇನ'ನನ್ನು ಕಂಡು ಬಹಳ ಸಂತಸಗೊಂಡರು. ಈ ಸಲ ಸ್ವಾಮೀಜಿ ಸುಮಾರು ಒಂದು ಇಡೀ ವರ್ಷವನ್ನು ಬಾರಾನಾಗೋರ್ ಮಠದಲ್ಲೇ ಕಳೆಯಲಿದ್ದರು.

ಈ ಅವಧಿಯಲ್ಲಿ ಸ್ವಾಮೀಜಿ, ಎರಡು ಚಿಕ್ಕ ಪ್ರಯಾಣಗಳನ್ನು ಕೈಗೊಂಡರು. ಒಂದು ಸಲ ಅವರು ಶ್ರೀಮಾತೆ ಶಾರದಾದೇವಿಯವರು ಹಾಗೂ ಕೆಲವು ಸೋದರ ಸಂನ್ಯಾಸಿಗಳೊಂದಿಗೆ ಕಾಮಾರಪುಕುರಕ್ಕೆ ಹೊರಟರು. ಆದರೆ ದಾರಿಯಲ್ಲಿ ತಮಗೆ ಜ್ವರ ಹಾಗೂ ವಾಂತಿ ಶುರುವಾದ್ದರಿಂದ ಸ್ವಾಮೀಜಿ ಕಲ್ಕತ್ತಕ್ಕೆ ಹಿಂದಿರುಗಬೇಕಾಯಿತು. ಹೋಮಿಯೋಪಥಿ ಚಿಕಿತ್ಸೆಯಿಂದ ಸ್ವಲ್ಪಮಟ್ಟಿಗೆ ಸುಧಾರಿಸಿಕೊಂಡರು.

ಆದರೂ ಅವರು ತೀರಾ ನಿಶ್ಶಕ್ತರಾಗಿಬಿಟ್ಟಿದ್ದರು. ಆದ್ದರಿಂದ ೧೮೮೯ರ ಬೇಸಿಗೆ ಯಲ್ಲಿ ವೈದ್ಯನಾಥದ ಬಳಿಯಿರುವ ಸಿಮುಲ್‌ತಾಲಾ ಎಂಬಲ್ಲಿಗೆ ಹೋದರು. ಇಲ್ಲಿನ ಹವೆ ತುಂಬ ಆರೋಗ್ಯಕರವಾದದ್ದೆಂದು ಪ್ರಸಿದ್ಧ. ಆದರೆ ಕೆಲವೇ ದಿನಗಳಲ್ಲಿ, ಅಲ್ಲಿ ಅವರಿಗೆ ಆಮಶಂಕೆ ಪ್ರಾರಂಭವಾದ್ದರಿಂದ ಮತ್ತೆ ಮಠಕ್ಕೆ ಮರಳಿದರು.

ಬಾರಾನಾಗೋರ್ ಮಠದಲ್ಲಿ ಸ್ವಾಮೀಜಿ ಪೂಜೆ, ಪ್ರಾರ್ಥನೆ, ಧ್ಯಾನ-ಜಪ ಹಾಗೂ ಶಾಸ್ತ್ರಾಧ್ಯಯನವನ್ನು ತೀವ್ರಗೊಳಿಸಿ ಒಂದು ವಿಶೇಷ ಆಧ್ಯಾತ್ಮಿಕ ವಾತಾವರಣವನ್ನು ನಿರ್ಮಾಣ ಮಾಡಿದರು. ಮುಂದೆ ತಾವೆಲ್ಲ ಶ್ರೀರಾಮಕೃಷ್ಣರ ಸಂದೇಶಗಳನ್ನು ವಿಶ್ವದಾದ್ಯಂತ ಪ್ರಸಾರ ಮಾಡಬೇಕು ಎಂಬ ತಮ್ಮ ಕಾರ್ಯಪ್ರಣಾಳಿಕೆಯನ್ನು ವರ್ಣಿಸುತ್ತ ಸೋದರಸಂನ್ಯಾಸಿಗಳನ್ನು ಸ್ಫೂರ್ತಿಗೊಳಿಸತೊಡಗಿದರು. ಸ್ವಾಮೀಜಿ ಮುಂದೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹಾಗೂ ಸಮಸ್ತ ಭಾರತದಲ್ಲಿ ಯಾವ ದಿವ್ಯ ಸಂದೇಶಗಳನ್ನು ಬಿತ್ತರಿಸಿ ಲೋಕವಿಖ್ಯಾತರಾದರೋ ಅವುಗಳೆಲ್ಲ ಅವರ ಸೋದರಸಂನ್ಯಾಸಿಗಳಿಗೆ ಹೊಸದೇನಾಗಿರಲಿಲ್ಲ. ಏಕೆಂದರೆ, ಅವುಗಳನ್ನೆಲ್ಲ ಸ್ವಾಮೀಜಿ ಬಾರಾನಾಗೋರ್ ಮಠದ ದಿನಗಳಲ್ಲೇ ವಿವರಿಸಿ ಹೇಳಿದ್ದರು. ಭಾರತವನ್ನು ಅಖಂಡ ರಾಷ್ಟ್ರವನ್ನಾಗಿ ಸಮಗ್ರ ದೃಷ್ಟಿಯಿಂದ ನೋಡುವಂತೆ ಅವರ ದೃಷ್ಟಿಕೋನವನ್ನು ಸ್ವಾಮೀಜಿ ವಿಶಾಲಗೊಳಿಸಿದರು. ಆಧುನಿಕ ವಿಚಾರಗಳಿಂದ ಪ್ರಭಾವಿತರಾದ ಜನರ ಮನಸ್ಸಿಗೆ ಒಪ್ಪಿಗೆಯಾಗುವಂತೆ ಹಿಂದೂ ಧರ್ಮವನ್ನು ಅವರ ಮುಂದಿಡಬೇಕೆಂದು ಸ್ವಾಮೀಜಿ ತಮ್ಮ ಸೋದರ ಸಂನ್ಯಾಸಿಗಳಿಗೆ ಒತ್ತಿ ಹೇಳುತ್ತಿದ್ದರು. ಕಾಲಧರ್ಮಕ್ಕನುಗುಣವಾಗಿ ಸನಾತನ ಧರ್ಮವನ್ನು ವಿವರಿಸಿ, ಚಿಂತನಶೀಲ ಮೇಧಾವೀ ಜನವರ್ಗವೂ ಅದನ್ನು ಸ್ವೀಕರಿಸುವಂತೆ ಮಾಡಲು ತಮ್ಮ ಗುರುಭಾಯಿಗಳಿಗೆ ತರಬೇತಿ ಕೊಡುತ್ತಿದ್ದರು. ಅಲ್ಲದೆ ನಾಸ್ತಿಕವಾದಿಗಳ, ಜಡವಾದಿಗಳ ಹಾಗೂ ಮತಾಂಧರ ಟೀಕೆಗಳನ್ನು ಸಮರ್ಥವಾಗಿ ಎದುರಿಸಿ, ನಿಜವಾದ ಹಿಂದೂ ಶ್ರದ್ಧೆಯನ್ನು ಸಂರಕ್ಷಿಸುವಂತೆಯೂ ಅವರಿಗೆ ಶಿಕ್ಷಣ ನೀಡಿದರು.

ಮಠದಲ್ಲಿ ತೀವ್ರ ಗತಿಯಿಂದ ಹಾಗೂ ನಿಯಮಬದ್ಧವಾಗಿ ಶಾಸ್ತ್ರಾಧ್ಯಯನ ಕಾರ್ಯ ನಡೆಯಬೇಕೆಂಬುದು ಸ್ವಾಮೀಜಿಯ ಹಂಬಲ. ಆದರೆ ಮಠದಲ್ಲಿ ಶಾಸ್ತ್ರಗ್ರಂಥಗಳ ಕೊರತೆ. ಕೊಂಡು ತರಲು ಹಣವಿಲ್ಲ. ಅಲ್ಲದೆ ಆಶ್ರಮವಾಸಿಗಳ ಸಂಸ್ಕೃತ ಜ್ಞಾನವೂ ಹೆಚ್ಚಾಗಬೇಕೆಂಬುದನ್ನು ಸ್ವಾಮೀಜಿ ಕಂಡುಕೊಂಡಿದ್ದರು. ಆದ್ದರಿಂದ ಅವರು, ವಾರಾಣಸಿಯಲ್ಲಿದ್ದ ತಮ್ಮ ಸ್ನೇಹಿತ ಪ್ರಮದದಾಸ ಮಿತ್ರರಿಗೆ ಪತ್ರ ಬರೆದು ಕೆಲವು ಅಮೂಲ್ಯ ಗ್ರಂಥಗಳನ್ನು ಎರವಲು ತರಿಸಿಕೊಂಡರು. ಇವುಗಳಲ್ಲಿ ಪಾಣಿನಿಯ ಸಂಸ್ಕೃತ ವ್ಯಾಕರಣವೂ ಒಂದು.

ಈ ಅವಧಿಯಲ್ಲಿ ಸ್ವಾಮೀಜಿ ಸಾಮಾಜಿಕ ಪದ್ಧತಿ-ಸಂಪ್ರದಾಯಗಳನ್ನೂ ಹಲವಾರು ಶಾಸ್ತ್ರವಾಕ್ಯಗಳ ಅಸಂಬದ್ಧತೆಗಳನ್ನೂ ತೀವ್ರವಾಗಿ ವಿಮರ್ಶಿಸಿ ನೋಡುತ್ತಿದ್ದರು. ಈಗಾಗಲೇ ತಮ್ಮ ಪರಿವ್ರಾಜಕ ದಿನಗಳಲ್ಲಿ ಅವರು, ಹಲವಾರು ಅನಿಷ್ಟ ಸಂಪ್ರದಾಯಗಳು ಸಮಾಜದ ಮೇಲೆ ಎಂತಹ ಹೊರೆಯಾಗಿ ನಿಂತಿವೆ ಎಂಬುದನ್ನು ಕಂಡಿದ್ದರು. ಉದಾಹರಣೆಗೆ, ಶೂದ್ರ ಜಾತಿಯವರಿಗೆ ವೇದಾಧ್ಯಯನದ ಹಕ್ಕಿಲ್ಲ ಎನ್ನುತ್ತವೆ ಶಾಸ್ತ್ರಗಳು. ಆದರೆ ರೂಢಿಯಲ್ಲಿ 'ಜಾತಿ'ಯ ಅರ್ಥವೇ ವಿಕೃತಗೊಂಡಿರುವುದನ್ನು ಸ್ವಾಮೀಜಿ ಕಂಡುಕೊಂಡರು. ನಿಜಕ್ಕೂ ಈ 'ಜಾತಿ' ಎಂಬುದು ಒಬ್ಬನ ವೈಯಕ್ತಿಕ ಗುಣ, ಯೋಗ್ಯತೆ ಹಾಗೂ ಕರ್ಮ—ಇವುಗಳನ್ನು ಅವಲಂಬಿಸಿ ನಿರ್ಧಾರವಾಗುವ

ವಿಚಾರ. ಯಾವನು ಯಾವ ಗುಣದವನೋ, ಯಾರದು ಯಾವ ವೃತ್ತಿಯೋ, ಯಾವನ ಮನೋಭಾವ ಎಂಥದೋ ಅದದು ಅವನವನ ಜಾತಿಯನ್ನು ನಿರ್ಧರಿಸುತ್ತದೆ. ಎಂದರೆ, ಬ್ರಾಹ್ಮಣವಂಶದಲ್ಲಿ ಜನಿಸಿದವನು ಬ್ರಾಹ್ಮಣನೆಂದು ಹೇಳಲಾಗದಿರಬಹುದು; ವೃತ್ತಿಯಿಂದ ಆತ ವೈಶ್ಯನೋ ಶೂದ್ರನೋ ಆಗಬಹುದು. . . ಆದರೆ ಕಾಲಕ್ರಮದಲ್ಲಿ, ಯಾವನು ಯಾವ ಜಾತಿಯವರಲ್ಲಿ ಜನಿಸಿದ್ದಾನೋ ಅದೇ ಅವನ ಜಾತಿ ಎಂಬ ರೂಢಿ ಬೆಳೆದುಬಂದುಬಿಟ್ಟಿದೆ. ಈ ಎಲ್ಲ ತಪ್ಪು ಸಂಪ್ರದಾಯಗಳಿಂದ ಪರಸ್ಪರ ದ್ವೇಷ, ತಿರಸ್ಕಾರ ಹುಟ್ಟಿಕೊಳ್ಳುವಂತಾಗಿದೆ. ಸ್ವಾಮೀಜಿ ಇವೆಲ್ಲವುಗಳ ಕುರಿತಾಗಿ ಆಳವಾಗಿ ಆಲೋಚನೆ ಮಾಡಿ ಒಂದು ತೀರ್ಮಾನಕ್ಕೆ ಬಂದರು—ಏನೆಂದರೆ, ಭಾರತವೇನಾದರೂ ಉದ್ಧಾರವಾಗಬೇಕಾದರೆ ಇಲ್ಲಿನ ಜನಸಾಮಾನ್ಯರೆಲ್ಲರೂ ವೇದೋಪನಿಷತ್ತುಗಳ ಸನಾತನ ಸತ್ಯವನ್ನು ತಿಳಿಯುವಂತಾಗಬೇಕು; ಅದಕ್ಕಾಗಿ ಉಪನಿಷತ್ತುಗಳ ಭವ್ಯ ಸಂದೇಶಗಳನ್ನು ವಿಶಾಲ ಜನತೆಯ ಮುಂದೆ ಬಿತ್ತರಿಸಬೇಕು, ಎಂದು.

ಸ್ವಾಮೀಜಿ ಈ ವಿಚಾರಗಳ ಕುರಿತಾಗಿ ತಾವು ಆಲೋಚಿಸುತ್ತಿದ್ದುದಲ್ಲದೆ, ತಮ್ಮ ಸ್ನೇಹಿತರಾದ ಪ್ರಮದದಾಸ ಮಿತ್ರರೊಂದಿಗೆ ವಿಚಾರವಿನಿಮಯ ಮಾಡಿಕೊಳ್ಳುತ್ತಿದ್ದರು. ಇವರು ಬಹಳ ದೊಡ್ಡ ಪಂಡಿತರು; ವೇದ-ಶಾಸ್ತ್ರಗಳಲ್ಲಿ ನಿಖರ ಜ್ಞಾನವಿದ್ದವರು. ವಯಸ್ಸಿನಲ್ಲಿ ಸ್ವಾಮೀಜಿಗಿಂತ ಎಷ್ಟೋ ಹಿರಿಯರು. ವೇದ-ಶಾಸ್ತ್ರಗಳ ಅಧ್ಯಯನಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟವರು ಇವರು. ವೇದಗಳ ಪ್ರಾಮಾಣ್ಯದ ಕುರಿತಾಗಿ, ಕರ್ಮ ನಿಯಮದ ವಿಷಯವಾಗಿ, ವಿವಿಧ ಶಾಸ್ತ್ರವಾಕ್ಯಗಳ ಭಿನ್ನಾಭಿಪ್ರಾಯಗಳ ಕುರಿತಾಗಿ, ಸ್ಮೃತಿಗಳಲ್ಲಿ ಮೇಲ್ನೋಟಕ್ಕೆ ಅರ್ಥರಹಿತವೆಂಬಂತೆ ತೋರಿಬರುವ ಅನೇಕ ವಿಧಿಗಳ ವಿಚಾರವಾಗಿ ಸ್ವಾಮೀಜಿ ಇವರಿಗೆ ಹಲವಾರು ಪತ್ರಗಳನ್ನು ಬರೆದು ತಮ್ಮ ಸಂದೇಹಗಳನ್ನು ಪರಿಹರಿಸಿಕೊಂಡರು. ಆಧ್ಯಾತ್ಮಿಕ ಅನುಭವ ಎಷ್ಟು ಮುಖ್ಯವೋ ಶಾಸ್ತ್ರಜ್ಞಾನವೂ ಅಷ್ಟೇ ಮುಖ್ಯ—ಲೋಕದ ಬಹುತೇಕ ಜನರ ವಿಷಯದಲ್ಲಿ ಈ ಮಾತು ಅನ್ವಯವಾಗುತ್ತದೆ. ಶಾಸ್ತ್ರವಾಕ್ಯಗಳ ಮರ್ಮಗಳನ್ನು ಅರಿಯದಿದ್ದರೆ, ನಮ್ಮ ಜೀವನಕ್ರಮ-ಸಾಧನಾಕ್ರಮಗಳನ್ನು ವ್ಯವಸ್ಥಿತಗೊಳಿಸಿಕೊಂಡು ಸರಿಯಾದ ರೀತಿಯಲ್ಲಿ ಮುನ್ನಡೆಯಲು ಸಾಧ್ಯವಾಗುವುದಿಲ್ಲ. ಅಲ್ಲದೆ, ಶಾಸ್ತ್ರವಾಕ್ಯಗಳನ್ನು ಮನಸ್ಸಿಗೆ ಬಂದಂತೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥೈಸಿ ಪ್ರಸಾರ ಮಾಡಿದ್ದೇ ಹಲವಾರು ಅನರ್ಥಗಳಿಗೆ ಕಾರಣ. ಆದ್ದರಿಂದ ಸ್ವಾಮೀಜಿ ಶಾಸ್ತ್ರಗಳ ನಿಜವಾದ, ನಿಖರವಾದ ಅರ್ಥವನ್ನು ಗ್ರಹಿಸಲು, ಅವುಗಳ ಮಹತ್ವವನ್ನು ಅರಿಯಲು ಪ್ರಯತ್ನಪಡುತ್ತಿದ್ದರು. ಶಾಸ್ತ್ರಗಳನ್ನು ಅರಿಯದವರು ಹೇಳುತ್ತಾರೆ: "ಶಾಸ್ತ್ರಗಳಲ್ಲಿ ಏನಿದೆ ? ಅವುಗಳನ್ನು ಓದುವುದರಿಂದ ಏನು ಪ್ರಯೋಜನ ?" ಎಂದು. ಶಾಸ್ತ್ರಗಳನ್ನೋದಿದ ಪಂಡಿತರೂ ಅವಿವೇಕದಿಂದ ವರ್ತಿಸುವುದನ್ನು ಕಂಡಾಗ ಅವರ ಅನುಮಾನ ಮತ್ತಷ್ಟು ದೃಢವಾಗುತ್ತದೆ. ಆದರೆ ಶಾಸ್ತ್ರವಾಕ್ಯಗಳನ್ನು ಓದಿ, ಅರಿತು, ಆಲೋಚಿಸಿ, ಅನುಷ್ಠಾನಕ್ಕೆ ತಂದರೆ ಮಾತ್ರ ಅವುಗಳ ಪ್ರಯೋಜನ ಅರಿವಿಗೆ ಬರುತ್ತದೆ. ಉಪನಿಷದ್ವಾಕ್ಯಗಳಿಗೆ ಅನುಸಾರವಾಗಿ ಜೀವನವನ್ನು ರೂಪಿಸಿಕೊಳ್ಳಲು ಎಲ್ಲರಿಂದಲೂ ಸಾಧ್ಯವಾಗದಿರಬಹುದು. ಆದರೆ ಹಾಗೆಂದಮಾತ್ರಕ್ಕೆ ಶಾಸ್ತ್ರಗಳಲ್ಲಿ ಏನೂ ತಿರುಳಿಲ್ಲ ಎಂದು ಬಿಡುವುದೆ ? ದ್ರಾಕ್ಷಿ ಕೈಗೆಟುಕದಿದ್ದರೆ 'ಹುಳಿ' ಎಂದುಬಿಡುವುದೆ ? ಆದ್ದರಿಂದ, ಯಾವ ಶಾಸ್ತ್ರಗಳು ವಿವೇಕೀ ಜನವರ್ಗಕ್ಕೆ ಸಕಾಲಿಕ ನೀತಿ-ನಿಯಮ-ನಿರ್ದೇಶನಗಳನ್ನು ಕೊಟ್ಟು

ನಡೆಸಿಕೊಂಡು ಹೋಗುತ್ತಿವೆಯೋ, ಆ ಶಾಸ್ತ್ರಗಳ ಮರ್ಮವನ್ನು, ಮಹತ್ವವನ್ನು ಅರಿತುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ ಸ್ವಾಮೀಜಿ. ಶಾಸ್ತ್ರಗಳಲ್ಲಿ ಕಂಡುಬರುವ ಎಲ್ಲ ವಿರೋಧಾಭಾಸಗಳನ್ನು, ವಿವಾದಾಸ್ಪದ ವಿಷಯಗಳನ್ನು ಸಮರ್ಥವಾಗಿ, ತರ್ಕ ಬದ್ಧವಾಗಿ ವಿವರಿಸಬಲ್ಲ ದೃಷ್ಟಿಕೋನವನ್ನು ಹೊಂದುವ ಪ್ರಯತ್ನ ಮಾಡುತ್ತಿದ್ದಾರೆ. ಅವರು ತಮ್ಮ ಒಂದು ಪತ್ರದಲ್ಲಿ ಪ್ರಮದದಾಸ ಮಿತ್ರರಿಗೆ ಬರೆಯುತ್ತಾರೆ: "ನಾನು ಆ ಮಂಗಳ ಸ್ವರೂಪನಾದ ಭಗವಂತನಲ್ಲಿ ಶ್ರದ್ಧೆಯನ್ನು ಕಳೆದುಕೊಂಡಿಲ್ಲ; ಮುಂದೆಂದೂ ಕಳೆದುಕೊಳ್ಳುವವನೂ ಅಲ್ಲ. ಶಾಸ್ತ್ರಗಳಲ್ಲಿ ನನಗಿರುವ ಶ್ರದ್ಧೆ ಅಚಲ ವಾದದ್ದು. ಆದರೆ ಈ ಆರೇಳು ವರ್ಷಗಳಲ್ಲಿ ಮಾತ್ರ ನನ್ನ ಮನಸ್ಸು ನಾನಾ ಬಗೆಯ ಹೋರಾಟಗಳನ್ನು ಎದುರಿಸಬೇಕಾಯಿತು; ನಾನಾ ಬಗೆಯ ವಿರೋಧಗಳನ್ನು ಎದುರಿಸ ಬೇಕಾಯಿತು. ಈಗ ನನಗೆ ನಿಜವಾದ ಆದರ್ಶಶಾಸ್ತ್ರದ ಅನುಗ್ರಹವಾಗಿದೆ; ನಾನು ನಿಜವಾದ ಆದರ್ಶಮಾನವನನ್ನು ಕಂಡಿದ್ದೇನೆ. ಆದರೂ ಒಂದು ಮಾರ್ಗದಲ್ಲಿ ನಿರಂತರವಾಗಿ ಸಾಗಿ ಗುರಿಮುಟ್ಟಲು ನನ್ನಿಂದ ಸಾಧ್ಯವಾಗಿಲ್ಲ. ಇದೇ ನನ್ನ ಪಾಲಿನ ಒಂದು ಮಹಾವ್ಯಥೆಯಾಗಿ ಪರಿಣಮಿಸಿದೆ." ನಿಜ; ಶಾಸ್ತ್ರವಿಚಾರಗಳೂ ಕ್ಲಿಷ್ಟ, ಜನ ಜೀವನದ ವಿನ್ಯಾಸವೂ ಕ್ಲಿಷ್ಟ. ಆ ಶಾಸ್ತ್ರಗಳಿಗೂ ಈ ಜನಜೀವನಕ್ಕೂ ಹೊಂದಾಣಿಕೆ ಬರುವ ಬಗೆ ಹೇಗೆ? ಸ್ವಾಮೀಜಿ ದೀರ್ಘವಾಗಿ ಆಲೋಚಿಸುತ್ತಿದ್ದಾರೆ.

ಬಾರಾನಾಗೋರ್ ಮಠದಲ್ಲಿ ವಾಸಿಸುತ್ತಿದ್ದ ಸ್ವಾಮೀಜಿಯವರಿಗೆ ಬೇಡಬೇಡ ವೆಂದರೂ ತಮ್ಮ ಮನೆಮಂದಿಯ ದಾರಿದ್ರ್ಯದ ಪರಿಸ್ಥಿತಿ ಕಣ್ಣಿಗೆ ಬೀಳುವಂತಾಗಿತ್ತು. ಶ್ರೀರಾಮಕೃಷ್ಣರು ನೀಡಿದ್ದ ಅಭಯದಂತೆ, ಅವರ ಮನೆಯವರಿಗೆ ಸಾಧಾರಣ ಅನ್ನ ಬಟ್ಟೆಗಳಿಗೆ ಕೊರತೆಯಿರಲಿಲ್ಲ. ಆದರೆ ಕೋರ್ಟು ಮೊಕದ್ದಮೆ ಅವರನ್ನು ತೀರ ಹಣ್ಣು ಗಾಯಿ ಮಾಡಿಬಿಟ್ಟಿತ್ತು. ಇದನ್ನು ಕಂಡು ಸ್ವಾಮೀಜಿಗೆ ಸಹಿಸಲಾರದ ಸಂಕಟವಾಗು ತ್ತಿತ್ತು. ಅವರು ಸರ್ವಸಂಗಪರಿತ್ಯಾಗಿಗಳೆಂಬುದೇನೋ ನಿಜ. ಆದರೆ ದಾರಿದ್ರ್ಯದ ದವ ಡೆಗೆ ಸಿಲುಕಿಕೊಂಡು ದುಃಖಿತರಾದವರನ್ನು ಕಂಡು ಮನಕರಗದಿರುವಷ್ಟು ನಿರ್ದಯಿ ಗಳಲ್ಲವಲ್ಲ! ಒಬ್ಬ ಮಗನಾಗಿ ತಾವು ತಮ್ಮ ತಾಯಿಗೆ ಸಲ್ಲಿಸಬೇಕಾದ ಕರ್ತವ್ಯದ ಋಣವನ್ನು ತೀರಿಸಲಿಲ್ಲ ಎಂಬ ವ್ಯಥೆ ಅವರ ಅಂತರಾಳವನ್ನು ಆಗಾಗ ಚುಚ್ಚುತ್ತಿತ್ತು. ಒಮ್ಮೊಮ್ಮೆ ಅವರ ಮನಸ್ಸು ಭಾವಗಳ ಬಿರುಗಾಳಿಗೆ ಸಿಕ್ಕಿಕೊಂಡು ತುಯ್ದಾಡುತ್ತಿತ್ತು. ಇಂತಹ ಸ್ಥಿತಿಯಲ್ಲಿ ಅವರೊಮ್ಮೆ ಪ್ರಮದದಾಸ ಮಿತ್ರರಿಗೆ ಬರೆಯುತ್ತಾರೆ: "ನಾನು ಕಲ್ಕತ್ತದ ಸಮೀಪದಲ್ಲೇ ಇರುವುದರಿಂದ ಅವರೆಲ್ಲರ ಕಷ್ಟಕಾರ್ಪಣ್ಯಗಳನ್ನು ಕಾಣ ಬೇಕಾಗಿದೆ. ಇದನ್ನೆಲ್ಲ ಕಂಡು ಕೆಲವು ಸಲ ನನ್ನ ರಜೋಗುಣ ಕೆರಳುತ್ತದೆ. ನನ್ನ ಅಹಂ ಬುದ್ಧಿ ಬೃಹತ್ತಾಗಿ ಬೆಳೆದು, ಕಾರ್ಯಮಗ್ನನಾಗುವಂತೆ ನನ್ನನ್ನು ಪ್ರಚೋದಿಸುತ್ತದೆ. ಇಂತಹ ಸಂದರ್ಭಗಳಲ್ಲಿ ನನ್ನ ಮನಸ್ಸು ಭಯಂಕರವಾಗಿ ತುಯ್ದಾಡುತ್ತಿರುತ್ತದೆ. ಆದ್ದ ರಿಂದಲೇ ನಿಮಗೆ ಬರೆದದ್ದು—ನನ್ನ ಮನಸ್ಸು ಉಗ್ರವಾಗಿದೆ, ಎಂದು. ಅಂತೂ ಈಗ ಆ ಕೋರ್ಟಿನ ಮೊಕದ್ದಮೆ ಕೊನೆಗೊಂಡಿದೆ. ಆದ್ದರಿಂದ ಇನ್ನು ಕೆಲವು ದಿನಗಳಲ್ಲಿ ನಾನು ಇಲ್ಲಿನ ಎಲ್ಲ ವ್ಯವಹಾರಗಳನ್ನೂ ಮುಗಿಸಿಕೊಂಡು, ಎಂದೆಂದಿಗೂ ಈ ಸ್ಥಳಕ್ಕೆ ವಿದಾಯ ಹೇಳಿ ಹೊರಟುಹೋಗುವಂತಾಗಲೆಂದು ಹಾರೈಸಿ. ಆ ಭಗವತ್‌ಶಕ್ತಿಯಿಂದ ನನ್ನ ಹೃದಯ ಬಲಿಷ್ಠಗೊಂಡು ಈ ಎಲ್ಲ ಮಾಯಾಪಾಶಗಳನ್ನು ಕತ್ತರಿಸಿ ಮುನ್ನಡೆ ಯಲು ಸಾಧ್ಯವಾಗುವಂತೆ ಆಶೀರ್ವದಿಸಿ."

ಈ ಸಮಯದಲ್ಲಿ ಆಗಾಗ ಸ್ವಾಮೀಜಿಯ ಮನಸ್ಸಿನಲ್ಲಿ ತೀರ್ಥಾಟನೆಯ ಇಚ್ಛೆ ಪ್ರಬಲವಾಗುತ್ತಿತ್ತು. ಪರಮಪಾವನಕರವಾದ ವಾರಾಣಸಿಗೆ ಹೋಗಿ ಅಲ್ಲಿ ವಿಶ್ವನಾಥನ ಸನ್ನಿಧಿಯಲ್ಲಿ ಜಪತಪಗಳಲ್ಲಿ ಮುಳುಗಬೇಕೆಂಬ ತವಕವುಂಟಾಗುತ್ತಿತ್ತು. ಅಲ್ಲದೆ, ಅವರ ವಿಶ್ವಾಸಿಗಳೂ ವಿದ್ವಾಂಸರೂ ಆದ ಪ್ರಮದದಾಸ ಮಿತ್ರರು ಅಲ್ಲಿರುವುದು ಇನ್ನೊಂದು ಆಕರ್ಷಣೆ. ಇವರೊಂದಿಗೆ ಶಾಸ್ತ್ರವಿಚಾರಗಳ ಸೂಕ್ಷ್ಮಗಳನ್ನೆಲ್ಲ ವಿವರವಿವರ ವಾಗಿ ಚರ್ಚಿಸಿ ತಿಳಿದುಕೊಳ್ಳುವ ಕಾತರ ಅವರಿಗೆ. ಈ ಎಲ್ಲ ತುಯ್ದಾಟಗಳ ನಡುವೆ ಅವರಿಗೆ ಕಲ್ಕತ್ತದ ಜೀವನ ಅಸಹನೀಯವಾಗತೊಡಗಿತ್ತು.

ಈ ವೇಳೆಗೆ ಅವರ ಸೋದರಸಂನ್ಯಾಸಿಯಾದ ಸ್ವಾಮಿ ಅಖಂಡಾನಂದರು ಹಿಮಾಲಯ ಪ್ರದೇಶದಲ್ಲಿ ಸಂಚರಿಸುತ್ತಿದ್ದರು. ಎಷ್ಟೋ ಸಲ ಟಿಬೆಟ್ಟಿಗೂ ಹೋದ ಬಗ್ಗೆ ಅವರು ಸ್ವಾಮೀಜಿಗೆ ಪತ್ರ ಬರೆಯುತ್ತಿದ್ದರು; ಅಲ್ಲಿನ ಜನರ ಜೀವನಕ್ರಮಗಳ ಕುರಿತಾಗಿ ತಿಳಿಸುತ್ತಿದ್ದರು. ಇವರಲ್ಲದೆ ಇತರ ನಾಲ್ವರು ಸೋದರಸಂನ್ಯಾಸಿಗಳು ಹಿಮಾಲಯದಲ್ಲೇ ಪರಿವ್ರಾಜಕರಾಗಿ ತಿರುಗಾಡುತ್ತಿದ್ದರು. ಆದ್ದರಿಂದ ಈಗ ಸ್ವಾಮೀಜಿಗೆ ತಾವೂ ಹಿಮಾಲಯಕ್ಕೆ ಹೋಗಿರಬೇಕೆಂಬ ತವಕ ಹುಟ್ಟಿಕೊಂಡಿತು.

ಮಠದಲ್ಲಿ ಸುಮಾರು ಒಂದು ವರ್ಷವನ್ನು ಕಳೆದ ಸ್ವಾಮೀಜಿ, ೧೮೮೮ರ ಡಿಸೆಂಬರ್ ತಿಂಗಳಲ್ಲಿ ಬಾರಾನಾಗೋರನ್ನು ಬಿಟ್ಟು, ವೈದ್ಯನಾಥದ ದಾರಿಯಾಗಿ ಉತ್ತರ ಭಾರತದ ಕಡೆಗೆ ತೀರ್ಥಾಟನೆಗಾಗಿ ಹೊರಟೇಬಿಟ್ಟರು. ಅವರ ಮನಸ್ಸು ವಾರಾಣಸಿಯ ಕಡೆಗೇ ವಿಶೇಷವಾಗಿ ವಾಲಿಕೊಂಡಿತ್ತು. ವೈದ್ಯನಾಥದಿಂದ ಅವರು ಪ್ರಮದದಾಸ ಮಿತ್ರರಿಗೊಂದು ಪತ್ರ ಬರೆಯುತ್ತಾರೆ: "ಕೆಲವು ದಿನ ವಾರಾಣಸಿಯಲ್ಲಿದ್ದುಕೊಂಡು, ನನ್ನ ವಿಷಯದಲ್ಲಿ ವಿಶ್ವನಾಥ ಅನ್ನಪೂರ್ಣೆಯರು ಏನು ಸಂಕಲ್ಪ ಮಾಡಿದ್ದಾರೋ ನೋಡಬೇಕು ಎಂಬುದು ನನ್ನ ಉದ್ದೇಶ. ನನ್ನ ದೃಢ ನಿರ್ಧಾರವೇನೆಂದರೆ, ಒಂದೋ—ನನ್ನ ಜೀವನದ ಧ್ಯೇಯವನ್ನು ಕಾಣಬೇಕು; ಇಲ್ಲವೆ ಈ ಶರೀರವನ್ನು ತ್ಯಾಗ ಮಾಡಿಬಿಡಬೇಕು. ಆದ್ದರಿಂದ ಹೇ ಕಾಶೀನಾಥ, ನನಗೆ ನೆರವಾಗು!"

ಆದರೆ ದೈವೇಚ್ಛೆ ಬೇರೆಯೇ ಆಗಿತ್ತು. ವೈದ್ಯನಾಥದಲ್ಲಿ ಸ್ವಾಮೀಜಿಗೆ, ಅಲಹಾಬಾದಿನಲ್ಲಿದ್ದ ಸ್ವಾಮಿ ಯೋಗಾನಂದರಿಗೆ ಸೀತಾಳೆ ಸಿಡುಬು ತಗಲಿದೆಯೆಂಬ ಸುದ್ದಿ ತಲುಪಿತು. ಒಡನೆಯೇ ಸ್ವಾಮೀಜಿ ಅಲಹಾಬಾದಿನ ಕಡೆಗೆ ಹೊರಟರು. ಆದರೆ ಅವರು ಅಲ್ಲಿಗೆ ತಲುಪುವಷ್ಟರಲ್ಲಿ ಯೋಗಾನಂದರು ಸಂಪೂರ್ಣ ಗುಣ ಹೊಂದಿದ್ದರು. ಅಲಹಾಬಾದಿನಲ್ಲಿ ಸ್ವಾಮೀಜಿಯ ಸಂಪರ್ಕಕ್ಕೆ ಬಂದ ಹಲವಾರು ಬಂಗಾಳೀ ಜನರು, ಅವರ ಅಸಾಮಾನ್ಯ ವ್ಯಕ್ತಿತ್ವವನ್ನೂ ಅಪಾರ ಜ್ಞಾನವನ್ನೂ ಕಂಡು ಬೆರಗಾದರು. ಶೀಘ್ರದಲ್ಲೇ ಅವರ ಕೀರ್ತಿ ಹರಡಿ, ಆ ಊರಿನ ಬಂಗಾಳಿಗಳೆಲ್ಲ ಬರಲಾರಂಭಿಸಿದರು. ಅವರೊಂದಿಗಿನ ಮಾತುಕತೆಗಳಲ್ಲಿ ಸ್ವಾಮೀಜಿ, ಹಿಂದೂಧರ್ಮದಲ್ಲಿ ಆಚರಣೆಯಲ್ಲಿದ್ದ ಹಲವಾರು ಅನ್ಯಾಯಗಳನ್ನು, ಪಕ್ಷಪಾತಗಳನ್ನು ಎತ್ತಿತೋರಿಸಿ, ತೀಕ್ಷ್ಣವಾಗಿ ಟೀಕಿಸಿದರು. ಆದರೆ ಸನಾತನ ಹಿಂದೂ ಧರ್ಮದ ಹಿರಿಮೆ-ಮಹಿಮೆಗಳನ್ನು ಅಷ್ಟೇ ಬಲವಾಗಿ, ಮನ ಮುಟ್ಟುವಂತೆ ಹೇಳಿದರು. ಅವರ ಅಯಸ್ಕಾಂತೀಯ ವ್ಯಕ್ತಿತ್ವದಿಂದ ಆಕರ್ಷಿತರಾದ ಆ ಬಂಗಾಳೀ ಜನರು ಅವರನ್ನು ಒಂದು ತಿಂಗಳ ಮಟ್ಟಿಗಾದರೂ ತಮ್ಮೊಂದಿಗೆ ಉಳಿದುಕೊಳ್ಳುವಂತೆ ಒತ್ತಾಯಿಸಿ ಒಪ್ಪಿಸಿದರು.

ಈ ದಿನಗಳಲ್ಲೇ ಸ್ವಾಮೀಜಿ ಪವಾಹಾರಿ ಬಾಬಾ ಎಂಬ ಪ್ರಖ್ಯಾತ ಸಂತರ ಬಗ್ಗೆ ಕೇಳಿದರು. ಅವರಿದ್ದುದು ಘಾಜೀಪುರದಲ್ಲಿ. ಹಿಂದೆ ದಕ್ಷಿಣೇಶ್ವರದಲ್ಲಿದ್ದಾಗಲೇ ಸ್ವಾಮೀಜಿ ಅವರ ವಿಷಯವಾಗಿ ಕೇಳಿ ಅವರನ್ನು ನೋಡಲು ಬಯಸಿದ್ದರು. ಆದ್ದರಿಂದ ಈಗ ಸ್ವಾಮೀಜಿ ಘಾಜೀಪುರಕ್ಕೆ ಹೊರಟರು.

ಇಲ್ಲಿ ಅವರು ಸತೀಶಚಂದ್ರ ಮುಖರ್ಜಿ ಹಾಗೂ ಗಗನಚಂದ್ರ ರಾಯ್ ಎಂಬವರ ಮನೆಗಳಲ್ಲಿ ಉಳಿದುಕೊಂಡರು. ಸತೀಶಚಂದ್ರ, ಸ್ವಾಮೀಜಿಯ ಹಳೆಯ ನಿಕಟಸ್ನೇಹಿತ; ಶ್ರೀರಾಮಕೃಷ್ಣರ ಗೃಹೀಭಕ್ತನಾದ ಈಶಾನಚಂದ್ರ ಮುಖರ್ಜಿಯ ಮಗ (ಈಶಾನನೀಗ ತನ್ನ ಮಗನೊಂದಿಗೇ ವಾಸಿಸುತ್ತಿದ್ದ). ಸ್ವಾಮೀಜಿ ಇವನ ಮನೆಯಲ್ಲಿದ್ದಾಗ ಅವರನ್ನು ನೋಡಲು ಅನೇಕ ಜನ ಬರಲಾರಂಭಿಸಿದರು. ಆದರೆ ಆ ಜನರೆಲ್ಲ ಹಿಂದೂ ಸಂಸ್ಕೃತಿಯಿಂದ ಜಾರಿ ಪಾಶ್ಚಾತ್ಯರ ಥಳಕಿನ ಸಂಸ್ಕೃತಿಗೆ ಬಲಿಯಾಗಿರುವು

ದನ್ನು ಕಂಡು ಸ್ವಾಮೀಜಿಗೆ ತುಂಬ ಸಂಕಟವಾಯಿತು. ಅವರು ಪ್ರಮದದಾಸ ಮಿತ್ರರಿಗೆ ಇದನ್ನು ತಿಳಿಸುತ್ತ ಬರೆಯುತ್ತಾರೆ: "...ಇದೊಂದು ಶೋಚನೀಯ ಅಂಶ. ಭಾರತೀಯರು ಪಾಶ್ಚಾತ್ಯರ ಪ್ರಭಾವಕ್ಕೊಳಗಾಗುವುದನ್ನು ನಾನು ತೀವ್ರವಾಗಿ ಖಂಡಿಸುತ್ತೇನೆ. ಅದೃಷ್ಟಕ್ಕೆ ನನ್ನ ಸ್ನೇಹಿತ ಸತೀಶಚಂದ್ರ ಆ ಕಡೆಗೆ ಅಷ್ಟಾಗಿ ವಾಲಿಕೊಂಡಿಲ್ಲ. ಈ ಪಾಶ್ಚಾತ್ಯರು ನಿರ್ಮಾಣ ಮಾಡಿರುವ ನಾಗರಿಕತೆ ಎಷ್ಟು ತುಚ್ಛ-ಹೀನ! ಇವರು ಎಂತಹ ವಿಲಾಸ ಜೀವನದ ಭ್ರಮೆಯನ್ನು ತಮ್ಮೊಂದಿಗೆ ತಂದಿದ್ದಾರೆ! ನಮ್ಮ ದುರ್ಬಲ ಜನತೆಯನ್ನು ವಿಶ್ವನಾಥನೇ ರಕ್ಷಿಸಬೇಕು...!" ಪತ್ರದ ಕೊನೆಯಲ್ಲಿ ಮತ್ತೊಂದು ಸಾಲನ್ನು ಸೇರಿಸುತ್ತಾರೆ: "ಅಯ್ಯೋ ವಿಧಿವೈಚಿತ್ರ್ಯವೆ! ಯಾವ ರಾಷ್ಟ್ರದಲ್ಲಿ ಭಗವಾನ್ ಶುಕಮಹರ್ಷಿಗಳು ಜನ್ಮತಾಳಿದರೋ, ಆ ರಾಷ್ಟ್ರದ ಜನರೇ ಇಂದು ತ್ಯಾಗಜೀವನವನ್ನು ಹುಚ್ಚುತನ, ಪಾಪ ಎಂಬಂತೆ ನೋಡುತ್ತಿದ್ದಾರೆ!"

ಇದೇ ಊರಿನಲ್ಲಿ, ಪಾಶ್ಚಾತ್ಯ ಸಂಸ್ಕೃತಿಯ ಆಕ್ರಮಣವನ್ನು ತಡೆಗಟ್ಟುವ ಪ್ರಯತ್ನದಲ್ಲಿ ತೊಡಗಿದ್ದ ಕೆಲವು ಸಮಾಜ ಸುಧಾರಕರೂ ಇದ್ದರು. ಇವರನ್ನು ಉದ್ದೇಶಿಸಿ ಸ್ವಾಮೀಜಿ ಹೇಳುತ್ತಾರೆ: "ಪಾಶ್ಚಾತ್ಯ ಸಂಸ್ಕೃತಿಯನ್ನು ಉಗ್ರವಾಗಿ ಖಂಡಿಸಲು ಹೋಗಬೇಡಿ. ಸಹನೆಯಿಂದ, ಪ್ರೀತಿಯಿಂದ ಮುಂದುವರಿಯಿರಿ. ಎಲ್ಲರಿಗೂ ಹಿಂದೂ ಸಂಸ್ಕೃತಿಯ ಕುರಿತು ಸರಿಯಾದ ಶಿಕ್ಷಣ ಕೊಡಿ; ಸರಿಯಾದ ತಿಳಿವಳಿಕೆಯನ್ನು ಉಂಟುಮಾಡಿ. ಇದರಿಂದಾಗಿ ಜನರ ಅಂತರಂಗದಲ್ಲೇ ಒಂದು ಪರಿವರ್ತನೆಯಾಗುತ್ತದೆ. ಇದೇ ಸಹಜವಾದ ಪರಿವರ್ತನೆ. ಏನು ಮಾಡುವುದು! ನಮ್ಮ ಜನ, ಹಿಂದೂ ನಾಗರಿಕತೆಯ ಹಿನ್ನೆಲೆಯಲ್ಲಿರುವ ಆಧ್ಯಾತ್ಮಿಕ ಮೌಲ್ಯಗಳ ಮಹಿಮೆಯನ್ನು ಅರಿಯಲು ಬೇಕಾದ ಅಂತರ್ದೃಷ್ಟಿಯನ್ನೇ ಕಳೆದುಕೊಂಡುಬಿಟ್ಟಿದ್ದಾರೆ." ಇಲ್ಲಿ ಸ್ವಾಮೀಜಿ, ಸಮಾಜ ಸುಧಾರಣೆಯ ಉತ್ಸಾಹದಲ್ಲಿ ಅವಿವೇಕಕ್ಕೆ ಅವಕಾಶವಾಗದಂತೆ ಸುಧಾರಕರಿಗೆ ನೀಡಿದ ಸೂಚನೆಗಳು ವಿಚಾರಯೋಗ್ಯವಾಗಿವೆ. ಆಗಿನ್ನೂ ನಮ್ಮ ರಾಷ್ಟ್ರ ಪಾಶ್ಚಾತ್ಯರ ಅಧೀನದಲ್ಲಿತ್ತು, ಭಾರತೀಯರೆಲ್ಲ ಪಾಶ್ಚಾತ್ಯರ ಮೆರುಗಿಗೆ ಮಾರುಹೋಗಿಯಾಗಿತ್ತು. ಈ ಸಂದರ್ಭದಲ್ಲಿ ಸುಧಾರಕರೆನ್ನಿಸಿಕೊಂಡವರು ಪಾಶ್ಚಾತ್ಯ ಸಂಸ್ಕೃತಿಯನ್ನು ಕಟುವಾಗಿ ಟೀಕಿಸುತ್ತಿದ್ದರೆ ಜನತೆಯ ಅವಗ್ರಹಕ್ಕೂ ಪಾತ್ರರಾಗಬೇಕಾಗುತ್ತದೆ; ಕಾರ್ಯಸಿದ್ಧಿಯೂ ಆಗುವುದಿಲ್ಲ. ಆದ್ದರಿಂದಲೇ ಸ್ವಾಮೀಜಿ ಅವರಿಗೆ ಸಹನೆಯಿಂದ ಮುಂದುವರಿದು, ಜನಮನದಲ್ಲಿ ಸಹಜವಾದ ಪರಿವರ್ತನೆಯನ್ನು ಉಂಟುಮಾಡುವಂತೆ ತಿಳಿಯ ಹೇಳುತ್ತಾರೆ.

ನಾವಾಗಲೇ ನೋಡಿದಂತೆ, ಸ್ವಾಮೀಜಿ ಘಾಜೀಪುರಕ್ಕೆ ಬಂದದ್ದರ ಮುಖ್ಯ ಉದ್ದೇಶ ಪ್ರಖ್ಯಾತ ಸಂತ ಪವಾಹಾರಿ ಬಾಬಾರನ್ನು ಸಂದರ್ಶಿಸುವುದಾಗಿತ್ತು. ಈ ಪವಾಹಾರಿ ಬಾಬಾರ ಬಗ್ಗೆ ಇಲ್ಲಿ ಸಂಕ್ಷಿಪ್ತವಾಗಿ ಹೇಳಬಹುದು. ಇವರು ಒಬ್ಬ ಬಡ ಬ್ರಾಹ್ಮಣ ದಂಪತಿಗಳ ಪುತ್ರ. ಜನ್ಮಸ್ಥಳ ವಾರಾಣಸಿಯ ಬಳಿಯಿರುವ ಪ್ರೇಮಪುರ ಎಂಬ ಗ್ರಾಮ. ಇವರು ತಮ್ಮ ಬಾಲ್ಯದಲ್ಲೇ ಘಾಜೀಪುರಕ್ಕೆ ಹೋಗಿ, ಆಜನ್ಮ ಬ್ರಹ್ಮಚಾರಿಯಾಗಿದ್ದ ತಮ್ಮ ಚಿಕ್ಕಪ್ಪನ ಮಾರ್ಗದರ್ಶನದಲ್ಲಿ ವ್ಯಾಕರಣ, ನ್ಯಾಯ ಹಾಗೂ ವಿಶಿಷ್ಟಾದ್ವೈತ ವೇದಾಂತಗಳನ್ನು ಕಲಿತು, ಅವುಗಳಲ್ಲಿ ನಿಷ್ಣಾತರಾದರು. ಕಾಲಕ್ರಮದಲ್ಲಿ ಅವರ ಚಿಕ್ಕಪ್ಪ ಕಾಲವಶನಾದ. ಚಿಕ್ಕಪ್ಪನ ಮರಣದಿಂದ ಅವರ ಹೃದಯದಲ್ಲಿ ದೊಡ್ಡದೊಂದು ಶೂನ್ಯತೆಯೇ ಉಂಟಾಗಿಬಿಟ್ಟಿತು. ಬಳಿಕ, ಮನಸ್ಸನ್ನು ಗಟ್ಟಿಮಾಡಿಕೊಂಡು,

ಆ ಶೂನ್ಯತೆಯನ್ನು ತುಂಬಿಕೊಳ್ಳಲು ಅವರು ನಿರ್ಧರಿಸಿದರು. ಪವಾಹಾರಿ ಬಾಬಾ ಬಾಲ್ಯದಿಂದಲೂ ಆಧ್ಯಾತ್ಮಿಕ ಪ್ರವೃತ್ತಿಯುಳ್ಳವರು; ವೈರಾಗ್ಯಶಾಲಿ. ಆದ್ದರಿಂದ, ಯಾವುದರ ಅನುಭವವಾದರೆ ಇನ್ನಾವ ಕೊರತೆಯೂ ಉಳಿಯುವುದಿಲ್ಲವೋ, ಯಾವುದು ಎಂದೆಂದಿಗೂ ಇರುವಂಥದೋ, ಯಾವುದು ಸಕಲ ಶೂನ್ಯವನ್ನೂ ನಿಜವಾಗಿಯೂ 'ತುಂಬ'ಬಲ್ಲ ಪೂರ್ಣವೋ, ಅಂಥದನ್ನು ಸಾಕ್ಷಾತ್ಕರಿಸಿಕೊಳ್ಳುವುದರ ಮೂಲಕ ತಮ್ಮ ಹೃದಯದ ಶೂನ್ಯತೆಯನ್ನು ತುಂಬಿಕೊಳ್ಳಲು ಬಯಸಿದರು. ಈ ನಿರ್ಧಾರವನ್ನು ಮನದಲ್ಲಿ ಧಾರಣೆ ಮಾಡಿಕೊಂಡು ತಮ್ಮ ಆದರ್ಶಸಿದ್ಧಿಗಾಗಿ ನಾಡಿನ ತುಂಬೆಲ್ಲ ತಿರುಗಾಡಿದರು. ಕೊನೆಗೆ ಕಾಥೇವಾಡದ ಪ್ರಸಿದ್ಧ ತೀರ್ಥಕ್ಷೇತ್ರವಾದ ಗಿರಿನಾರ್ ಬೆಟ್ಟದ ಮೇಲೆ ವಾಸವಾಗಿದ್ದ ಒಬ್ಬ ಯೋಗಿಯಿಂದ ಯೋಗದೀಕ್ಷೆಯನ್ನು ಪಡೆದರು. ಬಳಿಕ ಅಲ್ಲಿಂದ ವಾರಾಣಸಿಗೆ ಬಂದರು. ಇಲ್ಲಿ ಅವರಿಗೆ ಗಂಗಾತೀರದ ಗವಿಯೊಂದರಲ್ಲಿ ವಾಸವಾಗಿದ್ದ ಸಂನ್ಯಾಸಿಯೊಬ್ಬನ ಭೇಟಿಯಾಯಿತು. ಆತನಿಂದ ಅವರು ಅದ್ವೈತ ವೇದಾಂತದಲ್ಲಿ ಪಾರಂಗತರಾದರು. ಅನಂತರ ಅವರು ಶಾಸ್ತ್ರಾಧ್ಯಯನ ಮಾಡುತ್ತ ಹಾಗೂ ತೀವ್ರತರವಾದ ತಪೋಜೀವನವನ್ನು ನಡೆಸುತ್ತ ದೇಶಸಂಚಾರವನ್ನು ಮುಗಿಸಿ, ತಮ್ಮ ಹಳೆಯ ಊರಾದ ಘಾಜೀಪುರಕ್ಕೆ ಹಿಂದಿರುಗಿ ಬಂದು ಅಲ್ಲಿಯೇ ನೆಲೆ ನಿಂತರು. ಕಾಶಿಯಲ್ಲಿನ ತಮ್ಮ ಗುರುವಿನ ಮೇಲ್ಪಂಕ್ತಿಯನ್ನು ಅನುಸರಿಸಿ, ತಾವೂ ನದೀತೀರದಲ್ಲಿ ಭೂಮಿಯನ್ನು ಅಗೆದು ಒಂದು ಗುಹೆಯನ್ನು ಮಾಡಿಕೊಂಡು ವಾಸಿಸಲಾರಂಭಿಸಿದರು. ದಿನದ ಹೆಚ್ಚಿನ ವೇಳೆಯೆಲ್ಲ ಅವರ ಪ್ರಿಯದೇವನಾದ ಶ್ರೀರಾಮಚಂದ್ರನ ಪೂಜೆಯಲ್ಲಿ ಕಳೆಯುತ್ತಿತ್ತು. ಇನ್ನು ರಾತ್ರಿಯೆಲ್ಲ ಕಠಿಣ ತಪಸ್ಸಾಧನೆಗಳಲ್ಲಿ ನಿರತರಾಗಿರುತ್ತಿದ್ದರು. ಕ್ರಮೇಣ ಅವರು ತಮ್ಮ ಆಹಾರದ ಪ್ರಮಾಣವನ್ನು ತಗ್ಗಿಸಿಕೊಂಡು ಬಂದರು. ಕಡೆಗೆ ಅದು ಎಲ್ಲಿಯವರೆಗೆ ಬಂದಿತೆಂದರೆ ಒಂದಿಷ್ಟು ಬೇವಿನಸೊಪ್ಪು ಅಥವಾ ಒಂದು ಹಿಡಿಮೆಣಸನ್ನು ತಿಂದುಕೊಂಡು ದಿನವೆಲ್ಲ ಇರುತ್ತಿದ್ದರು! ಇದನ್ನು ಕಂಡೇ ಜನ ಅವರನ್ನು 'ಪವಾಹಾರಿ ಬಾಬಾ' (ಎಂದರೆ ಗಾಳಿ ತಿಂದು ಬದುಕುವ ಸಂನ್ಯಾಸಿ) ಎಂದು ಕರೆಯಲಾರಂಭಿಸಿದರು. ದಿನ ಕಳೆದಂತೆಲ್ಲ ಅವರು ಹೆಚ್ಚುಹೆಚ್ಚು ಸಮಯ, ಕೆಲವೊಮ್ಮೆ ತಿಂಗಳುಗಟ್ಟಲೆ ಕಾಲ, ತಮ್ಮ ಗುಹೆಯಲ್ಲೇ ಧ್ಯಾನನಿರತರಾಗಿರಲಾರಂಭಿಸಿದರು. ಆ ಗುಹೆ ಕಪ್ಪೆ-ಹಾವುಗಳಿಗೂ ಆವಾಸಸ್ಥಾನವಾಗಿಬಿಟ್ಟಿತ್ತು. ಇವರು ಹೇಗೆ ಬದುಕಿದ್ದಾರೆ ಎಂಬುದೇ ಜನರಿಗೆ ಒಂದು ದೊಡ್ಡ ಆಶ್ಚರ್ಯವಾಗಿತ್ತು. ಎಷ್ಟೋ ಸಲ ಜನರು ಬಾಬಾ ಸತ್ತುಹೋಗಿರಬೇಕು ಎಂದೇ ಭಾವಿಸಿದ್ದುಂಟು. ಆದರೆ ಕೆಲವು ದಿನಗಳ ಬಳಿಕ ಬಾಬಾ ಹೊರಕ್ಕೆ ಬಂದು ಕಾಣಸಿಕೊಳ್ಳುತ್ತಿದ್ದರು. ಧ್ಯಾನದಿಂದೆದ್ದು ಬಂದ ಸಮಯಗಳಲ್ಲಿ ಅವರು ತಮ್ಮನ್ನು ಕಾಣಬಂದ ಸಂದರ್ಶಕರನ್ನು ತಮ್ಮ ಗುಹೆಯ ಪ್ರವೇಶದ್ವಾರದ ಬಳಿಯಿದ್ದ ಕೋಣೆಯೊಂದರಲ್ಲಿ ಭೇಟಿ ಮಾಡುತ್ತಿದ್ದರು. ಆದರೆ ಈ ಸಂದರ್ಶನಕಾಲದ ಬಳಿಕ ಅವರು ಯಾರನ್ನೂ ಭೇಟಿಮಾಡುತ್ತಿರಲಿಲ್ಲ. (ಈ ದಿನಗಳಲ್ಲೇ ಸ್ವಾಮೀಜಿ ಅವರನ್ನು ಭೇಟಿ ಮಾಡಿದ್ದು.) ಬಾಬಾಜಿ ಜ್ಞಾನಮಾರ್ಗಿಯಾದರೂ ಹವನ-ಹೋಮಗಳನ್ನೂ ಮಾಡುತ್ತಿದ್ದರು. ಮೇಲ್ಗಡೆಯ ಕೋಣೆಯಿಂದ ಹೊಗೆ ಬರುತ್ತಿದ್ದರೆ, ಅವರು ಸಮಾಧಿಯಿಂದೆದ್ದು ಹೋಮದಲ್ಲಿ ನಿರತರಾಗಿದ್ದಾರೆ ಎಂದು ಜನರು ತಿಳಿಯುತ್ತಿದ್ದರು. ಕೊನೆಗೊಂದು ದಿನ (೧೮೯೮ರಲ್ಲಿ) ಆ ಕೋಣೆಯಿಂದ ಮಾಂಸ ಸುಟ್ಟ ವಾಸನೆ ಬರುತ್ತಿರುವುದನ್ನು ಕಂಡ ಜನ ಒಳಗೆ ಹೋಗಿ

ನೋಡುತ್ತಾರೆ—ಪವಾಹಾರಿ ಬಾಬಾ ಕೊನೆಯ ಆಹುತಿಯಾಗಿ ಬೆಂಕಿಯಲ್ಲಿ ತಮ್ಮ ದೇಹವನ್ನೇ ಭಗವಂತನಿಗೆ ಅರ್ಪಿಸಿಕೊಂಡುಬಿಟ್ಟಿದ್ದರು! ಅವರ ಆತ್ಮ ಚಿರಸಮಾಧಿಯಲ್ಲಿ ಲೀನವಾಗಿಬಿಟ್ಟಿತ್ತು. ಆದರೆ ಇದು ಒಂಬತ್ತು ವರ್ಷಗಳ ಅನಂತರದ ಮಾತು.

ಸ್ವಾಮೀಜಿ ಘಾಜೀಪುರದಲ್ಲಿದ್ದಾಗ ಮಹಾಪುರುಷರೆಂದು, ಹಠಯೋಗಿಯೆಂದು ಪ್ರಸಿದ್ಧರಾಗಿದ್ದ ಬಾಬಾಜಿಯವರ ಹೆಸರು ಮನೆಮಾತಾಗಿತ್ತು. ಅವರನ್ನು ಕಾಣಲು ಜನ ಧಾವಿಸಿ ಬರುತ್ತಿದ್ದರು. ಆದ್ದರಿಂದ ಸ್ವಾಮೀಜಿಗೂ ಅವರನ್ನು ಕಾಣಬೇಕೆಂಬ ಆಸಕ್ತಿ ಹುಟ್ಟಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಈಗೇನೋ ಸ್ವಾಮಿ ವಿವೇಕಾನಂದರು ವಿಶ್ವ ವಿಖ್ಯಾತರು. ಅವರನ್ನು ಆಚಾರ್ಯನೆಂದು, ಶಿವಸ್ವರೂಪಿಯೆಂದು ಜನ ಪೂಜಿಸುತ್ತಾರೆ. ಆದರೆ ಆ ಸಮಯದಲ್ಲಿ ಅವರಿನ್ನೂ ೨೭ ವರ್ಷದ ಯುವಕ. ತಮ್ಮ ಮಹಿಮೆಯನ್ನು ತಾವೇ ಅರಿಯದಿರುವಷ್ಟು ಚಿಕ್ಕವರು. ಅಲ್ಲದೆ, ಮಹಾಪುರುಷರನ್ನು ಹುಡುಕಿಕೊಂಡು ಹೋಗುವ ಕುತೂಹಲ ಅವರಲ್ಲಿ ಸಹಜವಾಗಿಯೇ ಇತ್ತು. ಸ್ವಾಮೀಜಿ ಅನಂತರದ ದಿನಗಳಲ್ಲಿ ಹೇಳುತ್ತಿದ್ದರು—ತಾವು ಪವಾಹಾರಿ ಬಾಬಾರಿಗೆ ಬಹಳಷ್ಟು ಋಣಿ ಎಂದು. ಅಲ್ಲದೆ ತಾವು ತಮ್ಮ ಜೀವನದಲ್ಲಿ ಸಂದರ್ಶಿಸಿದ ಮಹಾಪುರುಷರಲ್ಲಿ ಇವರೊಬ್ಬರು ಎನ್ನುತ್ತಿದ್ದರು.

ಆದರೆ ಈ ಬಾಬಾರನ್ನು ಭೇಟಿ ಮಾಡುವುದೆಂದರೆ ಬಹಳ ಕಷ್ಟದ ಕೆಲಸವಾಗಿತ್ತು. ಅವರು ಯಾರೊಂದಿಗಾದರೂ ಮಾತನಾಡಿದರೂ ಕೇವಲ ಬಾಗಿಲವರೆಗೆ ಮಾತ್ರ ಬಂದು ಒಳಗಡೆಯಿಂದಲೇ ಮಾತನಾಡಿಸಿ, ಬಂದವರನ್ನು ಹೊರಗಿಂದ ಹೊರಗೇ ಕಳಿಸಿಬಿಡುತ್ತಿದ್ದರು. ಆದ್ದರಿಂದ ಬಹಳ ದಿನ ಕಳೆದರೂ ಸ್ವಾಮೀಜಿಗೆ ಅವರ ಭೇಟಿ ಆಗಲೇ ಇಲ್ಲ. ಇದರಿಂದ ಬೇಸತ್ತು, ಅವರನ್ನು ಭೇಟಿ ಮಾಡದೆಯೇ ಹೊರಟು ಬಿಡುವ ಆಲೋಚನೆಯನ್ನೂ ಸ್ವಾಮೀಜಿ ಮಾಡಿದರು. ಆದರೆ ಕೊನೆಗೊಂದು ದಿನ ಸಂದರ್ಶನ ದೊರಕಿದಾಗ, ಅವರ ವ್ಯಕ್ತಿತ್ವ ಸ್ವಾಮೀಜಿಯ ಮೇಲೆ ಗಾಢ ಪ್ರಭಾವ ಬೀರಿಬಿಟ್ಟಿತು. ಬಾಬಾಜಿ ಕೂಡ ಸ್ವಾಮೀಜಿಯ ತೇಜೋಮಯ ವ್ಯಕ್ತಿತ್ವದಿಂದ ಆಕರ್ಷಿತರಾದರು. ಮತ್ತು ಅವರು ಶ್ರೀರಾಮಕೃಷ್ಣರ ಶಿಷ್ಯರೆಂಬುದನ್ನು ತಿಳಿದು ಬಹಳ ಸಂತಸಪಟ್ಟರು. ಈ ಸಂದರ್ಭದಲ್ಲಿ ಪ್ರಮದದಾಸ ಮಿತ್ರರಿಗೆ ಬರೆದ ಪತ್ರದಲ್ಲಿ ಸ್ವಾಮೀಜಿ ಹೇಳುತ್ತಾರೆ: "ನನ್ನ ಪರಮಾದೃಷ್ಟದ ಫಲವಾಗಿ ಬಾಬಾಜಿಯವರನ್ನು ಭೇಟಿ ಮಾಡಲು ಸಾಧ್ಯವಾಯಿತು. ನಿಜಕ್ಕೂ ಅವರೊಬ್ಬ ಮಹಾಮುನಿ. ಈ ನಾಸ್ತಿಕ ಯುಗದಲ್ಲಂತೂ ಇದೊಂದು ದೊಡ್ಡ ಅದ್ಭುತವೇ ಸರಿ. ಅವರನ್ನು ಭಕ್ತಿ-ಯೋಗಗಳಿಂದ ಒಡಮೂಡಿದ ಒಂದು ಮಹಾಶಕ್ತಿಯ ಶಿಖರ ಎನ್ನಬಹುದು. ಅವರ ಕೃಪೆಯಲ್ಲಿ ನಾನು ಶರಣಾಗಿದ್ದೇನೆ. ಅವರು ನನ್ನಲ್ಲಿ ಭರವಸೆ ಮೂಡಿಸಿದ್ದಾರೆ. ಕೆಲವೇ ಮಂದಿ ಅದೃಷ್ಟಶಾಲಿಗಳಿಗೆ ಮಾತ್ರ ದೊರಕಬಹುದಾದಂತಹ ಭರವಸೆ ಅದು. ನಾನು ಇನ್ನೂ ಕೆಲದಿನ ಇಲ್ಲೇ ಇರಬೇಕೆಂದು ಬಾಬಾಜಿಯವರ ಇಚ್ಛೆ. ಅವರು ನನ್ನ ಮೇಲೆ ಕೃಪೆ ಮಾಡಬಹುದು. ಆದ್ದರಿಂದ, ಅವರ ಆದೇಶದಂತೆ ನಾನು ಇನ್ನೂ ಕೆಲವು ಕಾಲ ಇಲ್ಲೇ ಉಳಿಯುತ್ತೇನೆ."

ಗಗನ್ ಬಾಬುವಿನ ತೋಟದ ಮನೆಯಿದ್ದುದು ಪವಾಹಾರಿ ಬಾಬಾರ ಗುಹೆಯ ಹತ್ತಿರದಲ್ಲೇ. ಅಲ್ಲಿಗೆ ಹೋಗಿಬರಲು ಅನುಕೂಲವಾದ್ದರಿಂದ ಸ್ವಾಮೀಜಿ ಆ ಮನೆಯಲ್ಲೇ ಉಳಿದುಕೊಂಡು ಧ್ಯಾನಮಗ್ನರಾಗಿರತೊಡಗಿದರು. ಸ್ವಾಮೀಜಿ ಆಗ ಸುಮಾರು

ಎರಡು ತಿಂಗಳಿಂದ ಸೊಂಟದ ವಾತರೋಗದಿಂದ ನರಳುತ್ತಿದ್ದರು. ಆದ್ದರಿಂದ ಬಾಬಾಜಿ ಅಷ್ಟು ಹತ್ತಿರದಲ್ಲಿದ್ದರೂ ಅವರನ್ನು ಭೇಟಿ ಮಾಡಲು ಕೆಲವೊಮ್ಮೆ ಸಾಧ್ಯವಾಗುತ್ತಿರಲಿಲ್ಲ. ಆದರೆ ಬಾಬಾಜಿ ಯಾರಾದರೊಬ್ಬರನ್ನು ಕಳಿಸಿ ಸ್ವಾಮೀಜಿಯ ದೇಹಸ್ಥಿತಿಯನ್ನು ವಿಚಾರಿಸಿ ತಿಳಿದುಕೊಳ್ಳುತ್ತಿದ್ದರು. ಈ ಸಮಯದಲ್ಲಿ ಸ್ವಾಮೀಜಿಗೆ ಅತಿಸಾರ ಬೇರೆ ಅಂಟಿಕೊಂಡು ಅವರ ಜೀರ್ಣಶಕ್ತಿಯೂ ಕ್ಷೀಣಗೊಂಡಿತು. ಆದರೂ ಬಾಬಾಜಿ ಮೂಡಿಸಿದ್ದ ಭರವಸೆಯಿಂದಾಗಿ ಅವರು ಅಲ್ಲೇ ಉಳಿದುಕೊಂಡರು.

ಪವಾಹಾರಿ ಬಾಬಾ ಒಬ್ಬ ಅದ್ಭುತ ವಿನಯಮೂರ್ತಿ. ಅವರು ಮಹಾಜ್ಞಾನಿಯೂ ಹೌದು. ಆದರೆ ಅವರೆಂದೂ ಧರ್ಮಬೋಧನೆ ಮಾಡುತ್ತಿರಲಿಲ್ಲ. ಸಂದರ್ಶಕರೇನಾದರೂ ಪ್ರಶ್ನೆಗಳನ್ನು ಕೇಳಿದರೆ, "ಈ ದಾಸನಿಗೇನು ಗೊತ್ತಿದೆ ?" ಎನ್ನುತ್ತಿದ್ದರು. ಆದರೆ ಅವರು ಮಾತನಾಡಲಾರಂಭಿಸಿದರೆ ಮಾತಿನಲ್ಲಿ ಮಿಂಚು ಮಿನುಗುತ್ತಿತ್ತು. ಸ್ವಾಮೀಜಿ ಅವರನ್ನು ತಮಗೇನಾದರೂ ಹೇಳುವಂತೆ ಒತ್ತಾಯ ಮಾಡಿದಾಗಲೆಲ್ಲ, "ಇಲ್ಲಿ ಇನ್ನೂ ಕೆಲವು ದಿನ ಇರುವ ಕೃಪೆ ಮಾಡಿ" ಎನ್ನುತ್ತಿದ್ದರು. ಅವರ ಮಾತಿಗೆ ಮನ್ನಣೆಯಿತ್ತು ಸ್ವಾಮೀಜಿ ಅಲ್ಲಿನ ತಮ್ಮ ವಾಸ್ತವ್ಯವನ್ನು ಮುಂದುವರಿಸುತ್ತ ಬಂದರು.

ಈ ಸಂದರ್ಭದಲ್ಲಿ ಸ್ವಾಮೀಜಿ ಹಲವಾರು ದೈಹಿಕ ಹಾಗೂ ಮಾನಸಿಕ ಯಾತನೆಗಳಿಂದ ತೊಳಲುತ್ತಿದ್ದರು. ವಾತರೋಗದಿಂದ ಉಂಟಾದ ಸೊಂಟದ ನೋವು ಸಾಕಷ್ಟು ತೊಂದರೆ ಕೊಡುತ್ತಿತ್ತು. ಕೆಲವೊಮ್ಮೆ ಅದು ತೀರ ಅಸಹನೀಯವಾಗಿ ಚೀರುವಂತಾಗುತ್ತಿತ್ತು. ಇದೇ ಸಮಯದಲ್ಲಿ ಅವರಿಗೊಂದು ವರ್ತಮಾನ ತಲುಪಿತು–ಹೃಷೀಕೇಶದಲ್ಲಿ ಅಭೇದಾನಂದರು ಮತ್ತೆಮತ್ತೆ ಮಲೇರಿಯಾಗೆ ಗುರಿಯಾಗಿ ನರಳುತ್ತಿದ್ದಾರೆ, ಎಂದು. ಈ ಸುದ್ದಿಯನ್ನು ಕೇಳಿ ಆಘಾತಗೊಂಡ ಸ್ವಾಮೀಜಿ ತಾವು ಅಲ್ಲಿಗೆ ಬರಬೇಕಾದ ಅಗತ್ಯವಿದೆಯೆ ಎಂದು ಕೇಳಿ ತಮ್ಮ ಸೋದರ ಸಂನ್ಯಾಸಿಗಳಿಗೆ ತಂತಿ ಕಳಿಸಿದರು. ಆದರೆ ಏಕೋ ಇದಕ್ಕೆ ಬಹಳ ದಿನಗಳವರೆಗೂ ಉತ್ತರ ಬರಲಿಲ್ಲ. ಈ ನಡುವೆ ಅವರು ಪ್ರಮದ ಬಾಬುವಿಗೆ ಬರೆಯುತ್ತಾರೆ: "ನಾನು ಈ ಮಾಯೆಯ ಬಲೆಯನ್ನು ನೇಯ್ದುಕೊಳ್ಳುತ್ತಿರುವುದನ್ನು ಕಂಡು ನಿಮಗೆ ನಗು ಬರಬಹುದು. ನಿಜಕ್ಕೂ ನನ್ನ ವರ್ತನೆ ಹಾಗೆಯೇ ಇದೆ. ಆದರೆ ಒಂದು ವಿಷಯವೇನೆಂದರೆ, ಸರಪಳಿಗಳಲ್ಲಿ ಕಬ್ಬಿಣದ ಸರಪಣಿ, ಚಿನ್ನದ ಸರಪಣಿ ಎಂದು ಎರಡು ವಿಧ. ಈ ಚಿನ್ನದ ಸರಪಣಿಯಿಂದ ಅನೇಕ ಸತ್ಕಾರ್ಯಗಳು ಸಾಧ್ಯವಾಗುತ್ತವೆ. ಅಲ್ಲದೆ ಸತ್ಫಲವನ್ನು ತಂದುಕೊಟ್ಟಮೇಲೆ ಅದು ತನ್ನಷ್ಟಕ್ಕೇ ಬಿದ್ದುಹೋಗುತ್ತದೆ. ನಿಜಕ್ಕೂ ನನ್ನ ಗುರುಪುತ್ರರು ನನಗೆ ಸೇವಾಪಾತ್ರರು. ಅವರ ವಿಷಯದಲ್ಲಿ ಮಾತ್ರವೇ ನನಗೆ ನನ್ನ ಕರ್ತವ್ಯ ಇನ್ನೂ ಸ್ವಲ್ಪ ಉಳಿದಿದೆ ಎಂದು ಅನ್ನಿಸುವುದು." ಕೆಲವು ದಿನಗಳ ಬಳಿಕ ಸ್ವಾಮೀಜಿ ಅವರಿಗೆ ಮತ್ತೆ ಬರೆಯುತ್ತಾರೆ: "ನನ್ನದು ತೀಕ್ಷ್ಣ ವೇದಾಂತ ದೃಷ್ಟಿಕೋನವಾದರೂ ನನ್ನ ಹೃದಯ ಮಾತ್ರ ತೀರ ಮೃದು ಎಂಬುದು ನಿಮಗೆ ಗೊತ್ತಿರಲಾರದು; ಮತ್ತು ಇದೇ ನನ್ನಲ್ಲೊಂದು ದುರ್ಬಲ ಅಂಶ. ನನ್ನ ಹೃದಯವನ್ನು ಸ್ವಲ್ಪ ಮುಟ್ಟಿದರೂ ಸಾಕು, ಕರಗಿಹೋಗುತ್ತೇನೆ. ನನ್ನ ವೈಯಕ್ತಿಕ ಒಳಿತನ್ನು ಸಾಧಿಸಿಕೊಳ್ಳಬೇಕೆಂದು ನಾನೆಷ್ಟೇ ಆಲೋಚಿಸಿದರೂ, ನನ್ನ ಇಚ್ಛೆಯನ್ನೂ ಮೀರಿ ನಾನು ಇತರರ ಒಳಿತಿನ ಬಗೆಗೆ ಚಿಂತಿಸಲಾರಂಭಿಸುತ್ತೇನೆ." ಸಿಂಹ

ಗರ್ಜನೆ ಮಾಡುವ ಸ್ವಾಮಿ ವಿವೇಕಾನಂದರ ಹೃದಯ ವಾಸ್ತವವಾಗಿ ಎಷ್ಟು ಮೃದು ಎಂಬುದು ಇಲ್ಲಿ ಅವರ ಮಾತಿನಿಂದಲೇ ವ್ಯಕ್ತವಾಗುತ್ತದೆ. ಈ ಸಲ ಅವರು ಬಾರಾ ನಾಗೋರ್ ಮಠದಿಂದ ಹೊರಟಾಗ ತಮ್ಮ ಯೋಜನೆಗಳನ್ನು ಸಾಧಿಸಿಯೇ ತೀರುವುದು ಎಂದು ನಿಶ್ಚಯ ಮಾಡಿಕೊಂಡಿದ್ದರು. ಆದರೆ ಕಾಶಿಗೆ ಹೊರಟಿದ್ದ ಅವರು ಸ್ವಾಮಿ ಯೋಗಾನಂದರ ಅಸ್ವಸ್ಥತೆಯ ಸುದ್ದಿ ಕೇಳಿ ಅಲಹಾಬಾದಿಗೆ ಹೋಗಬೇಕಾಯಿತು. ಈಗ ಹೃಷೀಕೇಶದಿಂದ ಸ್ವಾಮಿ ಅಭೇದಾನಂದರಿಗೆ ಮಲೇರಿಯಾ ಆಗಿರುವ ಸುದ್ದಿ ಬಂದಿದೆ. ಸ್ವಾಮೀಜಿ ಈಗೊಂದು ಬಗೆಯ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿಕೊಂಡುಬಿಟ್ಟಿದ್ದಾರೆ—ಸಂನ್ಯಾಸಿಯ ವೈರಾಗ್ಯವೊಂದು ಕಡೆ, ಸೋದರ ಸಂನ್ಯಾಸಿಗಳ ಮೇಲಿನ ಪ್ರೀತಿಪೂರ್ವಕ ಹೊಣೆಗಾರಿಕೆಯೊಂದು ಕಡೆ. ಜೊತೆಗೆ ಅವರಿಗೇ ವಾತ, ಅತಿಸಾರ ಮುಂತಾದ ಕಾಯಿಲೆಗಳು ! ಈ ಎಲ್ಲ ಜಂಜಡಗಳ ನಡುವೆ ಮನಸ್ಸಿನ ಸ್ಥಿರತೆಯನ್ನು ಕಾಪಾಡಿಕೊಂಡು ಪರಮಾತ್ಮನಲ್ಲಿ ಮನಸ್ಸನ್ನು ಏಕಾಗ್ರಗೊಳಿಸಲು ಯಾವ ಬಗೆಯ ಯೋಗಾಭ್ಯಾಸ ತಮಗೆ ನೆರವಾಗಬಲ್ಲುದು ಎಂದು ಅವರು ಚಿಂತಿಸುತ್ತಿದ್ದಾರೆ. ಇಂತಹ ಯೋಗವನ್ನು ಕಲಿಯಬೇಕು ಎಂದೇ ಅವರು ಪವಾಹಾರಿ ಬಾಬಾರ ಬಳಿಗೆ ಬಂದದ್ದು.

ಆದರೆ ಈ ಪವಾಹಾರಿ ಬಾಬಾ ಮಾತ್ರ ಯಾವುದನ್ನೂ ಅಷ್ಟು ಸುಲಭವಾಗಿ ಬಿಟ್ಟುಕೊಡುವವರಲ್ಲ. ಸ್ವಾಮೀಜಿ ಬಯಸಿದಂತಹ ಯೋಗವನ್ನು ಅವರಿಗೆ ಒಮ್ಮೆಗೇ ತಿಳಿಸಿಕೊಡಲು ಬಾಬಾಜಿ ಉತ್ಸುಕರಾಗಿದ್ದಂತೆ ತೋರಲಿಲ್ಲ. ಈ ಸಂದರ್ಭದಲ್ಲಿ ತಮ್ಮ ಮನಸ್ಸಿನಲ್ಲಿ ನಡೆಯುತ್ತಿದ್ದ ತುಮುಲವನ್ನು ಮತ್ತು ತಮಗಾದ ಒಂದು ಅಲೌಕಿಕ ಅನುಭವವನ್ನು ಮುಂದೊಮ್ಮೆ ಸ್ವಾಮೀಜಿ ಒಬ್ಬ ಶಿಷ್ಯನೆದುರು ಹೊರಗೆಡಹುತ್ತಾರೆ:

"ಪವಾಹಾರಿ ಬಾಬಾರ ಸಂಪರ್ಕಕ್ಕೆ ಬಂದಮೇಲೆ ನಾನು ಅವರನ್ನು ಬಹಳವಾಗಿ ಇಷ್ಟಪಡತೊಡಗಿದೆ. ಅವರಿಗೂ ನನ್ನ ಮೇಲೆ ಗಾಢ ವಾತ್ಸಲ್ಯ ಬೆಳೆಯಿತು. ಒಂದು ದಿನ ನನ್ನ ಮನಸ್ಸಿನಲ್ಲೊಂದು ಆಲೋಚನೆ ಎದ್ದಿತು—'ಅಲ್ಲ, ನಾನು ಅಷ್ಟೊಂದು ವರ್ಷ ಶ್ರೀರಾಮಕೃಷ್ಣರ ಜೊತೆಯಲ್ಲಿದ್ದರೂ, ನನ್ನ ಈ ದುರ್ಬಲ ಶರೀರವನ್ನು ಬಲಪಡಿಸಿಕೊಳ್ಳುವ ಉಪಾಯವನ್ನು ಮಾತ್ರ ಕಲಿಯಲಿಲ್ಲವಲ್ಲ' ಎಂದು. ಬಾಬಾಜಿಯವರಿಗೆ ಹಠಯೋಗ ತಿಳಿದಿದೆ ಎಂದು ಕೇಳಿದ್ದೆ. ಆದ್ದರಿಂದ ನಾನು ಅದನ್ನು ಅವರಿಂದ ಕಲಿತು, ಈ ದೇಹವನ್ನು ಬಲಪಡಿಸಿಕೊಳ್ಳಬೇಕು ಎಂದು ಆಲೋಚಿಸಿದೆ. . . ದೀಕ್ಷೆ ಸ್ವೀಕರಿಸುವುದೆಂದು ನಿಶ್ಚಯವಾಗಿದ್ದ ಹಿಂದಿನ ದಿನ ಸಂಜೆ ನಾನು ಮಂಚದ ಮೇಲೆ ಒರಗಿಕೊಂಡು ಏನೋ ಆಲೋಚಿಸುತ್ತಿದ್ದೆ. ಆಗ ಇದ್ದಕ್ಕಿದ್ದಂತೆ ಅಲ್ಲಿ ಶ್ರೀರಾಮಕೃಷ್ಣರು ಕಾಣಿಸಿಕೊಂಡರು ! ಅವರು ನನ್ನ ಬಲಭಾಗದಲ್ಲಿ ನಿಂತುಕೊಂಡು ನನ್ನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು. ಅವರ ಆ ನೋಟದಲ್ಲಿ ನೋವಿನ ಛಾಯೆ ಕಾಣುತ್ತಿತ್ತು. . . ನನ್ನನ್ನು ನಾನು ಅವರಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಂಡವನು; ಆದರೆ ಈಗ ನಾನು ಮತ್ತೊಬ್ಬ ಗುರುವನ್ನು ಸ್ವೀಕರಿಸುವುದರಲ್ಲಿದ್ದೇನೆ !—ಈ ಯೋಚನೆ ಮನಸ್ಸಿಗೆ ಬಂದಾಗ, ನನಗೆ ಬಹಳ ನಾಚಿಕೆಯಾಯಿತು. ಶ್ರೀರಾಮಕೃಷ್ಣರನ್ನೇ ನೋಡುತ್ತ ಇದ್ದುಬಿಟ್ಟೆ. ಹೀಗೇ ಸುಮಾರು ಎರಡು-ಮೂರು ಗಂಟೆಗಳು ಕಳೆದಿರಬಹುದು; ಆದರೂ ನನ್ನ ಬಾಯಿಂದ ಒಂದು ಮಾತೂ ಹೊರಡಲಿಲ್ಲ. ಬಳಿಕ

ಶ್ರೀರಾಮಕೃಷ್ಣರು ಇದ್ದಕ್ಕಿದ್ದಂತೆ ಅದೃಶ್ಯರಾದರು. ಈ ದರ್ಶನದ ಪರಿಣಾಮವಾಗಿ ನನ್ನ ಮನಸ್ಸು ಬಹಳ ತಳಮಳಗೊಂಡಿತು. ಆದ್ದರಿಂದ ನಾನು ಬಾಬಾರಿಂದ ಯೋಗದೀಕ್ಷೆ ಪಡೆಯುವ ವಿಚಾರವನ್ನು ಮುಂದೂಡಿದೆ. ಹೀಗೆ ಒಂದೆರಡು ದಿನಗಳು ಕಳೆದಿರ ಬಹುದು; ದೀಕ್ಷೆಯ ವಿಚಾರ ಮತ್ತೆ ಮನಸ್ಸಿಗೆ ಬಂತು. ಪುನಃ ಆ ರಾತ್ರಿ ಶ್ರೀರಾಮ ಕೃಷ್ಣರು ಹಿಂದಿನಂತೆಯೇ ಕಾಣಿಸಿಕೊಂಡರು! ಹೀಗೆ ಅನೇಕ ರಾತ್ರಿಗಳು ಅವರು ನಿರಂತರವಾಗಿ ಕಾಣಿಸಿಕೊಂಡರು. ಕಡೆಗೆ ಪವಾಹಾರಿ ಬಾಬಾರಿಂದ ದೀಕ್ಷೆ ಪಡೆಯುವ ಆಲೋಚನೆಯನ್ನು ನನ್ನ ಮನಸ್ಸಿನಿಂದ ತಳ್ಳಿಹಾಕಿಬಿಟ್ಟೆ. ಒಂದು ವೇಳೆ ದೀಕ್ಷೆಯನ್ನು ಪಡೆದದ್ದೇ ಆದರೂ ಅದರಿಂದ ನನಗೆ ಒಳ್ಳೆಯದೇನೂ ಆಗುವುದಿಲ್ಲ; ಏನಾದರೂ ಆಗುವುದಿದ್ದರೆ ಅದು ಕೆಡುಕು ಮಾತ್ರ ಎಂದು ನನಗೆ ಮನವರಿಕೆಯಾಯಿತು."

ಸ್ವಾಮೀಜಿಯ ಈ ಮಾತುಗಳು, ಅನುಭವಗಳು ನಿಜಕ್ಕೂ ಪರಮಾದ್ಭುತ. ಶ್ರೀರಾಮಕೃಷ್ಣ ಪರಮಹಂಸರ ಅಪಾರ ಕೃಪೆಗೆ ಪಾತ್ರರಾದಂತಹ ಸ್ವಾಮೀಜಿ, ಶ್ರೀರಾಮ ಕೃಷ್ಣರಿಂದ ಆಧ್ಯಾತ್ಮಿಕ ಸಿದ್ಧಿಸರ್ವಸ್ವವನ್ನೇ ಧಾರೆಯಾಗಿ ಪಡೆದಂತಹ ಸ್ವಾಮೀಜಿ, ಮತ್ತೊಬ್ಬ ಸಂತನಿಂದ ಪಡೆಯುವಂಥದೇನಿದೆ! ಸ್ವತಃ ಸ್ವಾಮೀಜಿಗೆ ಈ ವಿಷಯ ತಿಳಿದಿಲ್ಲವೆ...? ತಿಳಿದಿದೆ, ಎಲ್ಲವೂ ತಿಳಿದಿದೆ. ಆದರೆ ಶ್ರೀರಾಮಕೃಷ್ಣರು ಅವರನ್ನು ಪರೀಕ್ಷೆ ಮಾಡುತ್ತಿದ್ದಾರೆ. ವಾತರೋಗ ಅತಿಸಾರವೇ ಮೊದಲಾದ ಕಾಯಿಲೆಗಳೆಲ್ಲ ಅವರ ಶರೀರವನ್ನು ಜರ್ಝರಿತಗೊಳಿಸಿಬಿಟ್ಟಿವೆ. ಇಂತಹ ಶರೀರದಿಂದ ಮಹಾಕಾರ್ಯ ಗಳನ್ನು ಹೇಗೆ ಸಾಧಿಸಿಯೇನು ?—ಆದ್ದರಿಂದ ಈ ಹಠಯೋಗಿಯ ಸಹಾಯ ಪಡೆದು ದೇಹವನ್ನು ಬಲಪಡಿಸಿಕೊಳ್ಳೋಣ, ಎಂಬ ಆಲೋಚನೆ ಅವರದು. ಆದರೆ ಶ್ರೀರಾಮ ಕೃಷ್ಣರೇ ತಮಗೆ ಬೇಕಾದ ಎಲ್ಲ ಅನುಕೂಲತೆಗಳನ್ನು ಮಾಡಿಕೊಡಬಲ್ಲರು ಎನ್ನುವ ಯೋಚನೆ ಬರಲಿಲ್ಲ ಅವರಿಗೆ. ಇದೂ ಕೂಡ ಶ್ರೀರಾಮಕೃಷ್ಣರ ಇಚ್ಛೆಯೇ. ಏಕೆಂದರೆ ಪರಮ ಶಕ್ತಿಶಾಲಿಯಾದ ತಮ್ಮ ನರೇಂದ್ರ ಅತ್ಯಂತ ಅಸಹಾಯಕ ಪರಿಸ್ಥಿತಿಗೆ ಗುರಿ ಯಾದ ಸಮಯಕ್ಕೆ ಸರಿಯಾಗಿ ತಮ್ಮ ಸಹಾಯಹಸ್ತವನ್ನು ನೀಡುವಂತಾಗಬೇಕು; ತನ್ಮೂಲಕ ಆತನ ಶ್ರದ್ಧೆಯನ್ನು ಸ್ಥಿರಗೊಳಿಸಬೇಕು ಎಂಬುದೇ ಶ್ರೀರಾಮಕೃಷ್ಣರ ಅಪೇಕ್ಷೆ. ತಮ್ಮ ಭಕ್ತರ ಹಿಂದೆ ತಾವು ಸದಾ ಬೆಂಗಾವಲಾಗಿ ಇದ್ದೇವೆ ಎನ್ನುವುದನ್ನು ಈ ಮೂಲಕ ಅವರು ದೃಢಪಡಿಸುತ್ತಿದ್ದಾರೆ. ಸ್ವಾಮೀಜಿಗೆ ಮತ್ತೆಮತ್ತೆ ದರ್ಶನ ಕೊಟ್ಟಿದ್ದೇ ಇದಕ್ಕೆ ಸಾಕ್ಷಿ. ಅಂತೂ ಈ ಘಟನೆಯ ಮೂಲಕ ಶ್ರೀರಾಮಕೃಷ್ಣರು ಜಗತ್ತಿನ ಜನರಿಗೆ ಒಂದು ಘನ ಸತ್ಯವನ್ನು ಪ್ರಕಟಪಡಿಸುತ್ತಾರೆ. ಏನದು? ತಾವು ಶರೀರ ಬಿಟ್ಟರೂ ತಮ್ಮ ಅವತಾರ ಕಾರ್ಯವನ್ನು ನಿಲ್ಲಿಸಿಲ್ಲ; ಅದೃಶ್ಯರಾಗಿ ಇಲ್ಲೇ ಇದ್ದು ಕೊಂಡು ತಮ್ಮ ಭಕ್ತರ ಮೂಲಕ ಅವತಾರಕಾರ್ಯವನ್ನು ಸಾಧಿಸುತ್ತಿದ್ದೇವೆ ಎಂದು. ಈ ಅದ್ಭುತ ದರ್ಶನ ಸ್ವಾಮೀಜಿಯ ಮನಸ್ಸಿನ ಮೇಲೆ ಗಾಢ ಪರಿಣಾಮವನ್ನು ಬೀರಿತು. ತಾವು ಈ ಭೂಮಿಯ ಮೇಲೆ ಎಲ್ಲೇ ಸಂಚರಿಸುತ್ತಿದ್ದರೂ ಶ್ರೀರಾಮಕೃಷ್ಣರು ಅಲ್ಲಿಯೇ ಇದ್ದುಕೊಂಡು ತಮ್ಮನ್ನು ರಕ್ಷಿಸುತ್ತಾರೆ ಎನ್ನುವ ಭರವಸೆ ಸಿಕ್ಕಿತು. ಮುಂದೆ ಬಹುಕಾಲದ ಮೇಲೆ ಸ್ವಾಮೀಜಿ ಬಂಗಾಳಿಯಲ್ಲಿ, 'ಗಾಯೆ ಗೀತ್ ಶುನಾತೆ ತೋಮಾಯ್'—'ಹಾಡೊಂದ ಹಾಡುವೆ ನಾ ನಿನಗೆ' ಎಂಬ ಕವನವೊಂದನ್ನು ರಚಿಸುತ್ತಾರೆ. ಈ ಕವನದಲ್ಲಿ, ಅವರಿಗೆ ಘಾಜೀಪುರದಲ್ಲಾದ ಶ್ರೀರಾಮಕೃಷ್ಣದರ್ಶನದ ದಿವ್ಯಾನುಭವ ಮೈದಾಳಿರುವುದನ್ನು ಗಮನಿಸಬಹುದು—

ಅನವರತ ನೀನೆನ್ನ ಹಿಂದೆಯೇ ಇರುತಿರುವೆ
ಮೃದುಮಧುರ ಮಂದಹಾಸವನು ಬೀರಿ;
ಅಂಜಿಕೆಯದೆನಗೆಲ್ಲಿ, ಜನನ ಮರಣವು ಕೂಡ
ಕಾಲಿನಡಿ ಬಿದ್ದಿಹುದು ಮೈಯ ಮುದುರಿ!

ಜನುಮಜನುಮಂಗಳಲು ನಾ ನಿನ್ನ ಸೇವಕನು,
ಹೇ ದಯಾನಿಧೆ, ನಿನ್ನ ಬಗೆಯನರಿಯೆ;
ಇನಿತೆ ನನ್ನಿಚ್ಛೆ, ನಾನಿನಿತನ್ನೆ ಬೇಡುವೆನು,
ದಡಕೆ ದಾಟಿಸು ಎನ್ನ, ನನ್ನ ಪ್ರಭುವೆ!

ನಿನಗೆ ನಾ ಆಟದೊಳು ಮುಳುಗಿರುವ ಶಿಶುವಿನೊಲು—
ನಿನ್ನೆದುರು ಆಟವಾಡುತ್ತಲಿರುವೆ;
ಕೆಲವೊಮ್ಮೆ ನಿನ್ನಿಂದ ದೂರಾಗಿ ಅಲೆದು ಬಹೆ,
ಕೆಲವೊಮ್ಮೆ ನಿನ್ನೊಡನೆ ಮುನಿಸು ತಾಳ್ವೆ!

ಇರುಳಿನಾ ಕತ್ತಲಲಿ ಮೌನಾಶ್ರುಧಾರೆಯಲಿ
ತುಂಬಿ ಬಹ ಕಂಗಳಿಂ ನೀ ನೋಡುವೆ;
ಆ ನಿನ್ನ ಮುದ್ದುಮುಖ ಮಣಿಸುವುದು ನನ್ನನ್ನು,
ನಿನ್ನ ಪದದಡಿ ನಾನು ಶರಣು ಬರುವೆ!

ನಿನ್ನ ಕ್ಷಮೆಯನ್ನೇಕೆ ನಾನು ಕೋರಲಿ ಪ್ರಭುವೆ,
ಕೋಪ ನಿನಗಿಲ್ಲ ಈ ಸುತನ ಮೇಲೆ;
ನೀನೆನ್ನ ತಾಯ್ತಂದೆ, ನಿನ್ನ ಚಿರಪುತ್ರ ನಾ,
ನನ್ನ ನೀನೆಂದೆಂದು ಸಹಿಸುತಿರುವೆ!

ಹೀಗೆ ಸ್ವಾಮೀಜಿ ತಮ್ಮ ಗುರುದೇವನನ್ನು ಇನ್ನೂ ಚೆನ್ನಾಗಿ ಅರಿತುಕೊಳ್ಳುವಂತಾಯಿತು; ಎಲ್ಲ ಆಧ್ಯಾತ್ಮಿಕತೆಯ ಅಂತಿಮ ಸಮಾವೇಶ ಹಾಗೂ ಅತ್ಯುನ್ನತ ಆಧ್ಯಾತ್ಮಿಕ ಶಿಖರವೇ ಶ್ರೀರಾಮಕೃಷ್ಣರು ಎಂಬುದನ್ನು ಸ್ಪಷ್ಟವಾಗಿ ಮನಗಾಣುವಂತಾಯಿತು. ಇಂತಹ ಶ್ರೀರಾಮಕೃಷ್ಣರ ಪದತಲದಲ್ಲಿ ಕುಳಿತು ಧನ್ಯನಾದವನಿಗೆ ಬೇರಾವ ಆಧ್ಯಾತ್ಮಿಕ ಗುರುವಿನ ಆವಶ್ಯಕತೆಯೂ ಇಲ್ಲವೆಂಬುದನ್ನು ಅರಿತರು. ಈ ಸಂದರ್ಭದಲ್ಲಿ ಅವರು ಪ್ರಮದ ಬಾಬುವಿಗೆ ಒಂದು ಪತ್ರ ಬರೆಯುತ್ತಾರೆ—

"...ಈಗ ನೋಡಿದರೆ ಎಲ್ಲವೂ ನನ್ನ ನಿರೀಕ್ಷೆಗೆ ತದ್ವಿರುದ್ಧವಾಗಿಯೇ ಆಗಿಬಿಟ್ಟಿದೆ! ನಾನೇ ಒಬ್ಬ ಭಿಕ್ಷುಕನಂತೆ ಈ ಪವಾಹಾರಿ ಬಾಬಾರ ಬಾಗಿಲಿಗೆ ಬಂದಿದ್ದರೆ, ಇವರು ನನ್ನಿಂದಲೇ ಕಲಿಯಲು ಇಚ್ಛಿಸುತ್ತಾರೆ! ಬಹುಶಃ ಈ ಸಾಧುಗಳಿನ್ನೂ ಪರಿಪೂರ್ಣರಾಗಿಲ್ಲವೆಂದು ತೋರುತ್ತದೆ. ವಿಪರೀತ ವಿಧಿ, ಆಚಾರಗಳು ಮತ್ತು ತುಂಬ ಮುಚ್ಚುಮರೆ ಇವರಲ್ಲಿ. ಸಾಗರ ಪೂರ್ಣವಾಯಿತೆಂದರೆ ಅದರ ದಡಗಳು ಅದನ್ನು ಹಿಡಿದಿಡಲಾರವು. ಆದ್ದರಿಂದ ನಾನು ನಿರ್ಧಾರ ಮಾಡಿಬಿಟ್ಟಿದ್ದೇನೆ—ಇವರಿಗೆ ಸುಮ್ಮನೆ ತೊಂದರೆ ಕೊಡುವುದು ಒಳ್ಳೆಯದಲ್ಲ, ಅದರಿಂದೇನೂ ಪ್ರಯೋಜನವಿಲ್ಲ ಎಂದು. ನಾನು ಇಷ್ಟರಲ್ಲೇ ಅವರಿಂದ ಬೀಳ್ಕೊಳ್ಳಲಿದ್ದೇನೆ. . .

"ಇನ್ನುಮೇಲೆ ನಾನು ಯಾವ ದೊಡ್ಡ ವ್ಯಕ್ತಿಯ ಬಳಿಗೂ ಹೋಗುವವನಲ್ಲ."

ಹೀಗೆ ಹೇಳಿ, ಬಂಗಾಳೀ ಹಾಡೊಂದನ್ನು ಉದ್ಧರಿಸುತ್ತಾರೆ—

ನಿನ್ನಲ್ಲಿಯೆ ನೀನಿರು ಮನವೆ
ಹೊರಗೆಲ್ಲಿಯು ನೀನರಸದಿರು
ಆವುದನೀತೆರ ಹುಡುಕುತಲಿಹೆಯೋ
ಅದೆ ನಿನ್ನೆದೆಯೊಳಗಿರುತಿರಲು ॥

ಹೃದಯದ ಕರೆಗೋಗೊಡುವನು ಅವನು
ಸರ್ವಸಿದ್ಧಿಗಳ ಸ್ಪರುಷಮಣಿ
ನಿನ್ನ ಎದೆಯೊಳೇ ಹುದುಗಿದೆ ಕಾಣೋ
ಸಕಲೈಶ್ವರ್ಯದ ರನ್ನಗಣಿ ॥

ಮುತ್ತುರತುನಗಳೊ ಪಚ್ಚೆ ಹರಳುಗಳೊ
ಹೃದಯಮಂದಿರದ ಅಂಗಳದಿ
ಚದುರಿ ಬಿದ್ದಿರಲು ಎಲ್ಲಿ ಹುಡುಕುತಿಹೆ
ಮರುಳನಂತೆ ಅನ್ಯಾಶ್ರಯದಿ ॥

"ಆದ್ದರಿಂದ ಈಗ ನನ್ನ ಅಂತಿಮ ಮಹಾನಿರ್ಣಯವೇನೆಂದರೆ ಶ್ರೀರಾಮಕೃಷ್ಣರಿಗೆ ಯಾರೂ ಸರಿಸಾಟಿಯಿಲ್ಲ ಎಂದು. ಶ್ರೀರಾಮಕೃಷ್ಣರಂತಹ ಅಭೂತಪೂರ್ವ ಪರಿಪೂರ್ಣತೆ ಈ ಜಗತ್ತಿನಲ್ಲೆಲ್ಲೂ ಇಲ್ಲ. ಸಕಲರನ್ನೂ ತನ್ನೆಡೆಗೆ ಸೆಳೆಯುವ ಅವರ ಅದ್ಭುತ ಅಹೈತುಕ ಕರುಣೆ, ಬದ್ಧಮಾನವನ ಮೇಲೆ ಅವರಿಗಿರುವ ತೀವ್ರ ಅನುಕಂಪೆ—ಇವನ್ನು ಇನ್ನೆಲ್ಲಿ ಕಾಣಲು ಸಾಧ್ಯ ? ಅವರು, ತಾವೇ ಹೇಳುತ್ತಿದ್ದಂತೆ ಅವತಾರವೇ ಆಗಿರಬೇಕು, ಅಥವಾ ಮಾನವಕೋಟಿಯ ಉದ್ಧಾರಕ್ಕಾಗಿ ಮನುಷ್ಯದೇಹ ಧರಿಸಿ ಬರುವವರೆಂದು ವೇದಾಂತದಲ್ಲಿ ಹೇಳಲ್ಪಟ್ಟಿರುವ ದೇವಮಾನವರೇ ಆಗಿರಬೇಕು. ಇದು ನನ್ನ ಖಂಡಿತವಾದ ಹಾಗೂ ಸುನಿಶ್ಚಿತವಾದ ಅಭಿಮತ. ಇಂತಹ ದೇವಮಾನವರ ಆರಾಧನೆಯನ್ನೇ ಪತಂಜಲಿ ಮಹರ್ಷಿಗಳು ತಮ್ಮ ಯೋಗಸೂತ್ರದಲ್ಲಿ 'ಸಂತನೊಬ್ಬನ ಶುದ್ಧ ಹೃದಯದ ಮೇಲೆ ಧ್ಯಾನ ಮಾಡುವುದರ ಮೂಲಕ ನಮ್ಮ ಉದ್ದೇಶವನ್ನು ಸಿದ್ಧಿಸಿಕೊಳ್ಳಬಹುದು' ಎಂದು ಉಲ್ಲೇಖಿಸಿದ್ದಾರೆ."

ಹೀಗೆಂದ ಸ್ವಾಮೀಜಿ, ಈಗ ತಮ್ಮ ಅಂತರಾಳವನ್ನೇ ಪ್ರಮದಬಾಬುಗಳ ಮುಂದೆ ತೆರೆದಿಡುತ್ತಾರೆ.

"ಶ್ರೀರಾಮಕೃಷ್ಣರು ತಮ್ಮ ಜೀವಿತಾವಧಿಯಲ್ಲಿ ನನ್ನ ಒಂದೇ ಒಂದು ಪ್ರಾರ್ಥನೆಯನ್ನೂ ನಿರಾಕರಿಸಲಿಲ್ಲ. ನನ್ನ ಅನಂತಾನಂತ ಅಪರಾಧಗಳನ್ನು ಕ್ಷಮಿಸಿದ್ದಾರೆ ಅವರು. ಅಂತಹ ಅದ್ಭುತ ಪ್ರೀತಿ ನನಗೆ ನನ್ನ ತಂದೆತಾಯಿಯರಿಂದಲೂ ಸಿಗಲಿಲ್ಲ. ಇದರಲ್ಲಿ ಅತಿಶಯೋಕ್ತಿಯಾಗಲಿ ಕವಿತ್ವವಾಗಲಿ ಇಲ್ಲ. ಅವರ ಪ್ರತಿಯೊಬ್ಬ ಶಿಷ್ಯನಿಗೂ ತಿಳಿದಿರುವ ಸರಳ ಸತ್ಯ ಇದು. ಮಹಾ ಅಪಾಯಗಳ ಸಂದರ್ಭಗಳಲ್ಲಿ, ಘೋರ ಪ್ರಲೋಭನೆಗಳ ಸಮಯಗಳಲ್ಲಿ ನಾನು ತೀವ್ರ ತಳಮಳದಿಂದ ಅತ್ತು ಪ್ರಾರ್ಥಿಸಿದೆ— 'ಓ ದೇವರೆ, ಕಾಪಾಡು' ಎಂದು. ಆದರೆ ಆಗ ನನಗೆ ಯಾವ ಉತ್ತರವೂ ಬರಲಿಲ್ಲ. ಆದರೆ ಈ ಅದ್ಭುತ ವ್ಯಕ್ತಿ—ನೀವು ಅವರನ್ನು ಅವತಾರ ಎಂದಾದರೂ ಕರೆಯಿರಿ, ಏನು ಬೇಕಾದರೂ ಕರೆಯಿರಿ—ಅವರು ತಮ್ಮ ಅಂತರ್ದೃಷ್ಟಿಯಿಂದ ನನ್ನ ಬೇಗೆ

ಗಳೆಲ್ಲವನ್ನೂ ಅರಿತು ಪರಿಹರಿಸಿದ್ದಾರೆ. ನಾನೇ ಹಿಂಜರಿಯುತ್ತಿದ್ದರೂ ಕೂಡ ಅವರು ತಾವಾಗಿಯೇ ನನ್ನನ್ನು ತಮ್ಮೆಡೆಗೆ ಸೆಳೆದುಕೊಂಡು ರಕ್ಷಿಸಿದ್ದಾರೆ.''

ಆದರೆ ಸ್ವಾಮೀಜಿ ಪವಾಹಾರಿ ಬಾಬಾರನ್ನು ಮೆಚ್ಚಿಕೊಂಡಿದ್ದಾಗಲಿ, ಅವರಿಂದ ಯೋಗದೀಕ್ಷೆಯನ್ನು ಪಡೆಯಲು ಉತ್ಸುಕರಾದದ್ದಾಗಲಿ, ಅಥವಾ ಶ್ರೀರಾಮಕೃಷ್ಣರ ದಿವ್ಯದರ್ಶನವಾದ ಬಳಿಕ ತಮ್ಮ ನಿರ್ಧಾರವನ್ನು ಬದಲಿಸಿದ್ದಾಗಲಿ, ಅವರು ಶ್ರೀರಾಮ ಕೃಷ್ಣರಲ್ಲಿ ಶ್ರದ್ಧೆಯನ್ನು ಕಳೆದುಕೊಂಡಿದ್ದರೆಂಬುದರ ಕುರುಹುಗಳೆಂದು ತಿಳಿಯಬೇಕಾ ಗಿಲ್ಲ. ಅವು ಬಹುಮುಖ ಜ್ಞಾನಾರ್ಜನೆಯಲ್ಲಿ ಅವರಿಗಿದ್ದ ಉತ್ಸಾಹವನ್ನು ತೋರಿಸು ತ್ತವೆ. ಆದರೆ ಇದನ್ನು ಸ್ವತಃ ಅವರ ಗುರುಭಾಯಿಗಳೂ ಅಪಾರ್ಥ ಮಾಡಿಕೊಂಡಿ ದ್ದರು. ಆದ್ದರಿಂದ ಅದನ್ನು ಅಲ್ಲಗಳೆದು ಸ್ವಾಮೀಜಿ ಸ್ವಲ್ಪ ಖಾರವಾಗಿಯೇ ಅಖಂಡಾ ನಂದರಿಗೊಂದು ಪತ್ರ ಬರೆದಿದ್ದರು—"...ಒಳ್ಳೆಯದು ಎಲ್ಲೇ ಇದ್ದರೂ ಅದನ್ನು ಗುರುತಿಸಬೇಕೆಂಬುದೇ ನನ್ನ ಧ್ಯೇಯಮಂತ್ರ. ಇದರಿಂದ ಶ್ರೀರಾಮಕೃಷ್ಣರ ಮೇಲೆ ನನಗಿರುವ ಭಕ್ತಿ ಕಡಿಮೆಯಾಗಬಹುದೆಂದು ನನ್ನ ಗುರುಭಾಯಿಗಳು ಭಾವಿಸಿರು ವಂತಿದೆ. ಇದು ಕೇವಲ ಮತಾಂಧರ ಮತ್ತು ಹಠಮಾರಿಗಳ ಅಭಿಪ್ರಾಯ. ಏಕೆಂದರೆ ಎಲ್ಲ ಗುರುಗಳೂ ಸಚ್ಚಿದಾನಂದಗುರುವಾದ ಒಬ್ಬನೇ ಭಗವಂತನ ಬೇರೆಬೇರೆ ಅಂಶ ಗಳು, ಬೇರೆಬೇರೆ ಮುಖಗಳು.'' ಪವಾಹಾರಿ ಬಾಬಾರಿಂದ ರಾಜಯೋಗವನ್ನು ಕಲಿಯುವುದಷ್ಟೇ ಅವರ ಉದ್ದೇಶವಾಗಿತ್ತೆಂಬುದು ಇದೇ ಪತ್ರದ ಮೊದಲ ಕೆಲವು ಸಾಲುಗಳಿಂದ ಸ್ಪಷ್ಟವಾಗುತ್ತದೆ. ಅವರು ಬರೆಯುತ್ತಾರೆ: "ನಮ್ಮ ಬಂಗಾಳವು ಭಕ್ತಿ-ಜ್ಞಾನಗಳ ನಾಡು. ಅಲ್ಲಿ ಯೋಗದ ಹೆಸರೇ ಇಲ್ಲ. ಇರುವ ಸ್ವಲ್ಪ 'ಯೋಗ' ಎಂಬುದಾದರೂ ಕೇವಲ ಹಠಯೋಗದ ಹೆಸರಿನ ಕಸರತ್ತುಗಳು, ಅಷ್ಟೆ. ಆದ್ದರಿಂದಲೇ ಈಗ ನಾನು ಈ ಅದ್ಭುತ ರಾಜಯೋಗಿಯ ಬಳಿಗೆ ಬಂದಿದ್ದೇನೆ..." ಆದರೆ ಶ್ರೀರಾಮ ಕೃಷ್ಣರ ಇಚ್ಛೆ ಬೇರೆಯಾಗಿತ್ತು. ಸ್ವಾಮೀಜಿಯ ಪಾಲಿಗಂತೂ ಒಂದು ಅಮೂಲ್ಯ ಅನುಭವ ಸಿಕ್ಕಿದಂತಾಯಿತು.

ಘಾಜೀಪುರದಲ್ಲಿದ್ದ ಈ ದಿನಗಳಲ್ಲಿ ಸ್ವಾಮೀಜಿ ಕೆಲವು ಐರೋಪ್ಯ ಅಧಿಕಾರಿಗಳೂ ಸೇರಿದಂತೆ ಹಲವಾರು ವ್ಯಕ್ತಿಗಳನ್ನು ಸಂಧಿಸಿದರು. ಗಗನ್‌ಬಾಬುವಿನ ಮೂಲಕ ಅವರಿಗೆ ರಾಸ್ ಎಂಬೊಬ್ಬ ಆಂಗ್ಲ ಸರ್ಕಾರೀ ಅಧಿಕಾರಿಯ ಪರಿಚಯವಾಯಿತು. ಈ ರಾಸ್ ಎಂಬವನು ಸಾಕಷ್ಟು ಪಾಂಡಿತ್ಯವನ್ನು ಗಳಿಸಿದ್ದವನು. ಈತ ಸ್ವಾಮೀಜಿಯನ್ನು ಹಿಂದೂ ಹಬ್ಬ-ಉತ್ಸವಗಳ ಕುರಿತಾಗಿ, ಅದರಲ್ಲೂ ಮುಖ್ಯವಾಗಿ ಹೋಳಿ ಹಾಗೂ ರಾಮಲೀಲಾ ಉತ್ಸವಗಳ ಸಂಬಂಧವಾಗಿ, ಹಲವಾರು ಪ್ರಶ್ನೆಗಳನ್ನು ಕೇಳಿದ. ಅಲ್ಲದೆ ಹಿಂದೂಗಳ ಹಲವಾರು ಸಾಮಾಜಿಕ ಸಂಪ್ರದಾಯಗಳ ಬಗೆಗೂ ಪ್ರಶ್ನಿಸಿದ. ಈ ಪ್ರಶ್ನೆಗಳಿಂದಾಗಿ ಸ್ವಾಮೀಜಿಯಲ್ಲಿ ಸುಪ್ತವಾಗಿದ್ದ ಅನಂತ ಅಂತಸ್ಸತ್ವವೂ, ಅಪಾರ ವಿದ್ವತ್ತೂ ಜಾಗೃತಗೊಂಡು ಪ್ರಖರ ವಾಗ್ವಾಹಿನಿಯ ಮೂಲಕ ಹರಿಯಲಾರಂಭಿ ಸಿತು. ಧಾರ್ಮಿಕ ಬೆಳವಣಿಗೆಗೂ ಪ್ರಕೃತಿಪೂಜೆ ಹಾಗೂ ವ್ಯಕ್ತಿಪೂಜೆಗಳಿಗೂ ಇರುವ ಸಂಬಂಧವನ್ನು ಅವರು ಸೂಕ್ಷ್ಮವಾಗಿ ವಿಶ್ಲೇಷಿಸಿ ವಿವರಿಸಿದರು. ಹಿಂದೂ ಸಾಮಾಜಿಕ ಹಿನ್ನೆಲೆಯಲ್ಲಿರುವ ಶ್ರೇಷ್ಠ ಆಧ್ಯಾತ್ಮಿಕ ಭಾವನೆಗಳನ್ನು ತಮ್ಮ ವಿಶಿಷ್ಟ, ವೈಜ್ಞಾನಿಕ ದೃಷ್ಟಿಕೋನದ ಮೂಲಕ ವರ್ಣಿಸಿದರು. ಈ ಉತ್ತರಗಳನ್ನು ಕೇಳಿ ಆ ಪಾಶ್ಚಾತ್ಯ ವಿದ್ವಾಂಸನಿಗೆ ಆಶ್ಚರ್ಯವಾಯಿತು. ಸನಾತನ ಧರ್ಮದ ಅದ್ಭುತತೆ ಅವನಿಗೆ

ಮನದಟ್ಟಾಯಿತು. ಹಿಂದೂಧರ್ಮದ ಆಧ್ಯಾತ್ಮಿಕ ತತ್ತ್ವಗಳು ಇಷ್ಟೊಂದು ಘನವಾಗಿದ್ದಾವೆಂದು ತಾನು ಕನಸಿನಲ್ಲೂ ಊಹಿಸಿರಲಿಲ್ಲ ಎಂದು ಆತ ಒಪ್ಪಿ ನುಡಿದ. ಸ್ವಾಮೀಜಿ ಆವನ ಕೋರಿಕೆಯಂತೆ ಹೋಳಿ ಹಬ್ಬದ ಕುರಿತಾಗಿ ಒಂದು ಲೇಖನವನ್ನು ಬರೆದುಕೊಟ್ಟರು. ಈ ರಾಸ್ ಮಹಾಶಯ ಅವರನ್ನು ಅಲ್ಲಿನ ಜಿಲ್ಲಾ ನ್ಯಾಯಾಧೀಶನಾದ ಪೆನ್ನಿಂಗ್‌ಟನ್ ಎಂಬವನಿಗೆ ಪರಿಚಯಿಸಿಕೊಟ್ಟ. ಈ ನ್ಯಾಯಾಧೀಶನು ಸ್ವಾಮೀಜಿಯೊಂದಿಗೆ ಸಂಭಾಷಣೆಯಲ್ಲಿ ತೊಡಗಿ ಹಿಂದೂಧರ್ಮದ ಹಲವಾರು ಅಂಶಗಳ ಬಗ್ಗೆ ಪ್ರಶ್ನಿಸಿದ. ಅವುಗಳಿಗೆಲ್ಲ ಸ್ವಾಮೀಜಿ ಅತ್ಯಂತ ಸಮರ್ಥವಾಗಿ ಉತ್ತರಿಸಿ, ಹಿಂದೂಧರ್ಮದ ಪುನರುತ್ಥಾನ ಹಾಗೂ ಭಾರತದ ನವಸಂಕ್ರಮಣ ಕಾಲ—ಇವುಗಳ ಕುರಿತಾದ ತಮ್ಮ ಭವ್ಯ ಕಲ್ಪನೆಗಳನ್ನು, ಯೋಜನೆಗಳನ್ನು ಸುದೀರ್ಘವಾಗಿ ವರ್ಣಿಸಿದರು. ಯೋಗದ ಶಾಸ್ತ್ರೀಯ ಹಾಗೂ ವೈಜ್ಞಾನಿಕ ತಳಹದಿ, ಹಿಂದೂ ಸಂನ್ಯಾಸಿಗಳ ಕ್ರಮ-ನಿಯಮಗಳು ಮತ್ತು ಇನ್ನೂ ಹಲವಾರು ವೈವಿಧ್ಯಮಯ ವಿಷಯಗಳ ಕುರಿತಾಗಿ ತಿಳಿಸಿಕೊಟ್ಟರು. ಯೋಗದ ಸೂಕ್ಷ್ಮ ವಿಚಾರಗಳನ್ನೆಲ್ಲ ಆಧುನಿಕ ಮನಶ್ಶಾಸ್ತ್ರದ ಬೆಳಕಿನಲ್ಲಿ ವಿವರಿಸಿದರು. ಸ್ವಾಮೀಜಿಯ ಈ ಅಸಾಮಾನ್ಯ ವಿಚಾರಧಾರೆಯಿಂದ ತೀವ್ರವಾಗಿ ಪ್ರಭಾವಿತನಾದ ಪೆನ್ನಿಂಗ್‌ಟನ್, ಇಂಗ್ಲೆಂಡಿಗೆ ಹೋಗಿ ಸ್ವಾಮೀಜಿ ಈ ಸಂದೇಶಗಳನ್ನು ಪ್ರಚಾರ ಮಾಡಬೇಕು; ಅಲ್ಲಿ ಅವುಗಳಿಗೆ ಖಂಡಿತವಾಗಿ ಯೋಗ್ಯ ಮನ್ನಣೆ ದೊರಕುತ್ತದೆ ಎಂದು ಸಲಹೆ ಮಾಡಿದ. ಸ್ವಾಮೀಜಿಯವರು ಧರ್ಮಪ್ರಚಾರಕ್ಕಾಗಿ ಪಾಶ್ಚಾತ್ಯ ರಾಷ್ಟ್ರಗಳಿಗೆ ಹೋಗಬೇಕು ಎಂದು ಸೂಚಿಸಿದವರಲ್ಲಿ ಈತನೇ ಮೊದಲಿಗನೆಂಬಂತೆ ತೋರುತ್ತದೆ.

ಘಾಜೀಪುರದಲ್ಲಿ ಕರ್ನಲ್ ರಿವೆಟ್ ಕಾರ್ನಾಕ್ ಎಂಬ ಮತ್ತೊಬ್ಬ ಆಂಗ್ಲವ್ಯಕ್ತಿಗೆ ಸ್ವಾಮೀಜಿಯನ್ನು ಸಂಧಿಸುವ ಅವಕಾಶ ಲಭಿಸಿತು. ಆತ ಅವರೊಂದಿಗೆ ವೇದಾಂತದ ಬೋಧನೆಗಳ ಬಗ್ಗೆ ಹಾಗೂ ಅವುಗಳನ್ನು ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳುವುದು ಹೇಗೆಂಬುದರ ಬಗ್ಗೆ ದೀರ್ಘ ಸಂಭಾಷಣೆಯನ್ನು ನಡೆಸಿದ. ಅವರ ಅದ್ಭುತ ಅಂತರ್ದೃಷ್ಟಿ, ಶಕ್ತಿಪೂರ್ಣ ವ್ಯಕ್ತಿತ್ವ, ಅವರ ಪರಿಪೂರ್ಣ ವೈರಾಗ್ಯಬುದ್ಧಿ—ಇವು ಅವರ ಮಾತುಗಳ ಮೂಲಕ ಹೊರಚಿಮ್ಮುತ್ತಿರುವುದನ್ನು ಕಂಡು ಆತ ಗಾಢವಾಗಿ ಪ್ರಭಾವಿತನಾದ. ಅವರನ್ನು ಸಂದರ್ಶಿಸಿದ ಆ ಪಾಶ್ಚಾತ್ಯರಿಗೆಲ್ಲ ಸ್ವಾಮೀಜಿ ವೇದಾಂತವೇ ಮೈದಾಳಿ ಬಂದಂತೆ ಕಂಡರು.

ಈ ಅವಧಿಯಲ್ಲಿ ಸ್ವಾಮೀಜಿ ಟಿಬೆಟಿನಲ್ಲಿದ್ದ ಸ್ವಾಮಿ ಅಖಂಡಾನಂದರೊಂದಿಗೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದರು. ತಾವೂ ಟಿಬೆಟಿಗೆ ಹೋಗಿ ಅಲ್ಲಿ ಲಭ್ಯವಿರುವ ಅಪೂರ್ವ ಬೌದ್ಧ ಶಾಸ್ತ್ರಗ್ರಂಥಗಳನ್ನು ಅಧ್ಯಯನ ಮಾಡುವ ಇಚ್ಛೆ ಸ್ವಾಮೀಜಿಯವರಿಗಿತ್ತು. ಆದರೆ ಟಿಬೆಟನ್ನು ಪ್ರವೇಶಿಸುವಲ್ಲಿ ತೀವ್ರ ಪ್ರತಿಬಂಧಗಳಿದ್ದುದರಿಂದ, ನೇಪಾಳಕ್ಕೆ ಹೋಗಿ ಅಲ್ಲಿನ ಸ್ನೇಹಿತನೊಬ್ಬನ ಪ್ರಭಾವದ ಮೂಲಕ ಟಿಬೆಟಿಗೆ ಹೋಗಬಹುದು; ಹಾಗೇ ಚೀನಾಕ್ಕೂ ಹೋಗಿ, ಅಲ್ಲಿನ ಕೆಲವು ತೀರ್ಥಕ್ಷೇತ್ರಗಳನ್ನು ತಾವು ಸಂದರ್ಶಿಸಬಹುದು ಎಂದೆಲ್ಲ ಆಶಿಸಿ ಅವರು ಅಖಂಡಾನಂದರಿಗೆ ಪತ್ರ ಬರೆದರು. ಆದರೆ ಈ ಯಾವ ಸ್ಥಳಕ್ಕೂ ಭೇಟಿಕೊಡಲು ಅವರಿಗೆ ಸಾಧ್ಯವಾಗಲೇ ಇಲ್ಲ.

ಈ ನಡುವೆ, ಹೃಷೀಕೇಶದಲ್ಲಿ ಮಲೇರಿಯಾದಿಂದ ನರಳುತ್ತಿದ್ದ ತಮ್ಮ ಗುರುಭಾಯಿ ಅಭೇದಾನಂದರ ವಿಷಯದಲ್ಲಿ ಸ್ವಾಮೀಜಿ ವ್ಯಾಕುಲಿತರಾಗಿದ್ದರು. ಅವರು

ಇನ್ನಷ್ಟು ಉತ್ತಮ ಚಿಕಿತ್ಸೆ ಪಡೆದು ಸುಧಾರಿಸಿಕೊಳ್ಳಲಾಗುವಂತೆ ಸ್ವಾಮೀಜಿ ಅವರಿಗೆ ಕಾಶಿಗೆ ಬರಲು ಸೂಚಿಸಿ ದಾರಿಖರ್ಚನ್ನೂ ಕಳಿಸಿಕೊಟ್ಟರು. ಮತ್ತು ಅವರನ್ನು ಚೆನ್ನಾಗಿ ನೋಡಿಕೊಳ್ಳಬೇಕು ಎಂದು ವಿನಂತಿಸಿಕೊಂಡು ಸ್ವಾಮೀಜಿ ತಮ್ಮ ಸ್ನೇಹಿತ ಪ್ರಮದ ಬಾಬುವಿಗೆ ಪತ್ರ ಬರೆದರು. ಅಲ್ಲದೆ ತಮ್ಮನ್ನು ನೋಡಲೆಂದು ಘಾಜೀಪುರಕ್ಕೆ ಬಂದ ಪ್ರೇಮಾನಂದರನ್ನೂ ವಾರಾಣಸಿಗೆ ಕಳಿಸಿಕೊಟ್ಟರು.

ಆದರೆ ವಾರಾಣಸಿಯಲ್ಲಿ ಅಭೇದಾನಂದರ ದೇಹಸ್ಥಿತಿ ಸುಧಾರಿಸಲಿಲ್ಲವೆಂಬ ಸುದ್ದಿ ತಿಳಿದುಬಂದಿತು. ಆದ್ದರಿಂದ ತಾವೇ ಅಲ್ಲಿಗೆ ಹೋಗಲು ನಿರ್ಧರಿಸಿ, ೧೮೯೦ರ ಏಪ್ರಿಲ್ ಮೊದಲ ವಾರದಲ್ಲಿ ಘಾಜೀಪುರದಿಂದ ಸ್ವಾಮೀಜಿ ಹೊರಟುಬಿಟ್ಟರು. ಅಲ್ಲದೆ, ಆ ಪವಿತ್ರ ನಗರದಲ್ಲಿ ತಪಶ್ಚರ್ಯೆಯಲ್ಲಿ ತೊಡಗಬೇಕು ಹಾಗೂ ಪ್ರಮದ ಬಾಬುಗಳ ಸಹವಾಸದಲ್ಲಿ ಶಾಸ್ತ್ರಾಧ್ಯಯನವನ್ನು ಮುಂದುವರಿಸಬೇಕು ಎಂಬುದು ಅವರ ಮತ್ತೊಂದು ಉದ್ದೇಶ. ವಾರಾಣಸಿಯನ್ನು ತಲುಪಿದ ಸ್ವಾಮೀಜಿ, ಅಭೇದಾನಂದರ ಶುಶ್ರೂಷೆಗೆ ಎಲ್ಲ ವ್ಯವಸ್ಥೆಯನ್ನು ಮಾಡಿ, ಅನಂತರ ತಾವು ಪ್ರಮದ ಬಾಬುಗಳ ಅತಿಥಿಯಾಗಿ ಅವರ ತೋಟದ ಮನೆಯಲ್ಲಿ ಉಳಿದುಕೊಂಡರು. ಆದರೆ ಕೆಲದಿನಗಳಲ್ಲೇ ಸ್ವಾಮೀಜಿಗೆ ಫ್ಲೂ ಜ್ವರ ತಗಲಿಕೊಂಡಿತು. ಪ್ರಮದ ಬಾಬುಗಳ ಹಾಗೂ ಅಭೇದಾನಂದರ ಆರೈಕೆಯ ಫಲವಾಗಿ ಸ್ವಾಮೀಜಿ ಕೆಲವೇ ದಿನಗಳಲ್ಲಿ ಚೇತರಿಸಿಕೊಂಡರು. ಆದರೆ ಅಭೇದಾನಂದರಿಗೆ ಮಲೇರಿಯಾ ಹಿಂದಿಗಿಂತಲೂ ತೀವ್ರವಾಗಿಯೇ ಮರುಕಳಿಸಿಬಿಟ್ಟಿತು. ಈಗ ಗುರುಭಾಯಿಯನ್ನು ಉಪಚರಿಸುವ ಸರದಿ ಮತ್ತೆ ಸ್ವಾಮೀಜಿಯದಾಯಿತು.

ಹೀಗೆ ಸ್ವಾಮೀಜಿ ವಾರಾಣಸಿಯಲ್ಲಿ ಸ್ವಲ್ಪ ನೆಲೆನಿಂತು, ಮುಂದಿನ ಕಾರ್ಯದ ಬಗ್ಗೆ ಆಲೋಚಿಸುವಷ್ಟರಲ್ಲೇ ಶ್ರೀರಾಮಕೃಷ್ಣರ ಮಹಾಭಕ್ತನಾದ ಬಲರಾಮ್ ಬಾಬು ಇನ್‌ಫ್ಲೂಯೆಂಜಾ ಜ್ವರಕ್ಕೀಡಾಗಿ ನಿಧನನಾದನೆಂಬ ಅತಿ ದುಃಖದ ಸುದ್ದಿ ಬಂದಿತು. ಇದನ್ನು ಕೇಳಿ ಸ್ವಾಮೀಜಿ ತೀವ್ರ ಶೋಕಗ್ರಸ್ತರಾದರು. ಬಲರಾಮನ ಔದಾರ್ಯದ ಹಾಗೂ ಅವನ ಮಧುರ, ಸ್ನೇಹಪೂರ್ಣ ಸಂಬಂಧದಲ್ಲಿ ತಾವು ಕಳೆದಿದ್ದ ಆನಂದದ ದಿನಗಳ ನೆನಪುಗಳು ಒತ್ತರಿಸಿಬಂದು ಅವರು ಕಣ್ಣೀರ್ಗರೆದರು. ಸ್ವಾಮೀಜಿ ಹೀಗೆ ದುಃಖಿಸುವುದನ್ನು ಕಂಡ ಪ್ರಮದದಾಸ ಮಿತ್ರರಿಗೆ ಅಚ್ಚರಿ—'ಒಬ್ಬ ಸಂನ್ಯಾಸಿ, ಕಟ್ಟಾ ವೇದಾಂತಿ, ಗೃಹಸ್ಥನೊಬ್ಬನ ನಿಧನಕ್ಕಾಗಿ ಇಷ್ಟೊಂದು ದುಃಖಿಸುತ್ತಿದ್ದಾರಲ್ಲ!' ಎಂದು. ತಮ್ಮ ಈ ಅಭಿಪ್ರಾಯವನ್ನು ಸ್ವಾಮೀಜಿಯ ಮುಂದೆ ವ್ಯಕ್ತಪಡಿಸಿಯೂಬಿಟ್ಟರು. ಆಗ ಅವರಿಗೆ ಸ್ವಾಮೀಜಿ ಗಂಭೀರವಾಗಿ ಹೇಳುತ್ತಾರೆ: "ಏನು ! ಒಬ್ಬ ವ್ಯಕ್ತಿ ಸಂನ್ಯಾಸಿಯಾದ ಮಾತ್ರಕ್ಕೆ ಅವನಿಗೆ ಹೃದಯವೇ ಇಲ್ಲ ಎಂದುಕೊಂಡಿರೇನು ? ದಯವಿಟ್ಟು ಹಾಗೆ ಮಾತನಾಡಬೇಡಿ. ನಾವು ಭಾವಹೀನರಾದ ಶುಷ್ಕ ಸಂನ್ಯಾಸಿಗಳಲ್ಲ."

ಬಲರಾಮ ಬಾಬುವಿನ ಕುಟುಂಬದವರೆಲ್ಲರೂ ಶ್ರೀರಾಮಕೃಷ್ಣರ ಭಕ್ತವರ್ಗಕ್ಕೆ ಸೇರಿದ್ದವರೇ. ಅಲ್ಲದೆ ಅವರು ಸಂನ್ಯಾಸೀಬಂಧುಗಳಿಗೆಲ್ಲ ಆತ್ಮೀಯರು. ಆದ್ದರಿಂದ ಈ ದುಃಖದ ಅವಧಿಯಲ್ಲಿ ಅವರೊಂದಿಗಿದ್ದು ಅವರಿಗೆ ಸಮಾಧಾನ ತರುವ ಹಾಗೂ ಮಠದ ಆಗುಹೋಗುಗಳನ್ನು ವಿಚಾರಿಸಿಕೊಳ್ಳುವ ಉದ್ದೇಶದಿಂದ ಸ್ವಾಮೀಜಿ ೧೮೯೦ರ ಏಪ್ರಿಲ್‌ನಲ್ಲಿ ಕಲ್ಕತ್ತದೆಡೆಗೆ ಹೊರಟರು.

## ಮನದೊಳಿದ್ದ ಮಹೋದ್ದೇಶ ೨೦

ಸ್ವಾಮೀಜಿ ಬಾರಾನಾಗೋರ್ ಮಠಕ್ಕೆ ಹಿಂದಿರುಗಿ ಬಂದಿದ್ದಾರೆ. ಹಿಂದಿನಂತೆಯೇ ತಮ್ಮ ಸೋದರಸಂನ್ಯಾಸಿಗಳ ನೆಚ್ಚಿನ ನಾಯಕನಾಗಿ, ಗೆಳೆಯನಾಗಿ, ಮಾರ್ಗದರ್ಶಕನಾಗಿ ವಾಸವಾಗಿದ್ದಾರೆ. ಅವರ ಆಗಮನದಿಂದಾಗಿ ಮಠದಲ್ಲಿ ಹೊಸ ಉತ್ಸಾಹವುಂಟಾಗಿದೆ. ಶ್ರೀರಾಮಕೃಷ್ಣರ ದಿವ್ಯವಚನಗಳ ನೆನಪುಗಳನ್ನು ಜಾಗೃತಗೊಳಿಸುವುದರ ಮೂಲಕ, ಹಾಗೂ ತಮ್ಮ ಪರಿವ್ರಾಜಕ ಜೀವನದ ವೈವಿಧ್ಯಮಯ ಅನುಭವಗಳನ್ನು ಸ್ವಾರಸ್ಯಕರವಾಗಿ ನಿರೂಪಿಸುವುದರ ಮೂಲಕ ಅವರು ತಮ್ಮ ಸೋದರಸಂನ್ಯಾಸಿಗಳ ಬುದ್ಧಿ-ಹೃದಯಗಳನ್ನು ಪ್ರಜ್ವಲಗೊಳಿಸಿದರು. ಅವರ ಅಪಾರ ಜ್ಞಾನ ಹಾಗೂ ಅನುಭವಗಳು ಆ ಯುವಸಂನ್ಯಾಸಿಗಳ ಬೌದ್ಧಿಕ ಬೆಳವಣಿಗೆಗೆ ಪ್ರಚೋದಕವಾಗಿದ್ದುವು. ಒಂದು ದೃಷ್ಟಿಯಿಂದ, ಆ ಯುವಕರು ತಮ್ಮ ಕಾಲೇಜು ವಿದ್ಯಾಭ್ಯಾಸವನ್ನು ಅರ್ಧಕ್ಕೇ ಬಿಟ್ಟುಬಂದಿದ್ದರಾದರೂ ಅದರಿಂದ ಅವರಿಗಾದ ನಷ್ಟ ಅಗಣ್ಯ ಎಂದೇ ಹೇಳಬೇಕು. ಏಕೆಂದರೆ, ವಿಶ್ವವಿದ್ಯಾಲಯದ ಜ್ಞಾನಕ್ಕಿಂತ ಮಿಗಿಲಾದ ಜ್ಞಾನಭಂಡಾರವೊಂದರ ಸಾನ್ನಿಧ್ಯವೇ ಅವರಿಗೆ ದೊರಕಿತ್ತು. ಯಾವುದೇ ವಿಷಯದ ಬಗ್ಗೆ ಸಂಪೂರ್ಣ ಪ್ರಭುತ್ವದಿಂದ ಮಾತನಾಡಬಲ್ಲ ಸ್ವಾಮೀಜಿಯ ಮಾರ್ಗದರ್ಶನ ಅವರಿಗೆ ದೊರಕಿತ್ತು. ಎಂದರೆ ಸ್ವಾಮೀಜಿ ತಮ್ಮ ಸೋದರಸಂನ್ಯಾಸಿಗಳ ಮಾಸ್ತರರಾದರೆಂದಲ್ಲ. ಅವರು ಯಾವುದಾದರೊಂದು ವಿಷಯದ ಬಗ್ಗೆ ಮಾತನಾಡಲಾರಂಭಿಸಿದರೆ ಇತರರೆಲ್ಲ ಸುತ್ತಲೂ ಕುಳಿತು ತನ್ಮಯರಾಗಿ ಕೇಳುತ್ತಿದ್ದರು. ಕೆಲವೊಂದು ಸಲವಂತೂ ಒಂದೇ ವಿಷಯವೇ ಎಷ್ಟೋ ದಿನಗಳವರೆಗೆ ಮುಂದುವರಿಯುತ್ತಿತ್ತು. ತಮ್ಮ ಹಲವಾರು ಅನುಭವಗಳನ್ನು ಹಾಗೂ ತಮ್ಮ ಮನದಲ್ಲಿ ರೂಪತಳೆಯುತ್ತಿದ್ದ ವಿನೂತನ ಭಾವನೆಗಳನ್ನು ಸ್ವಾಮೀಜಿ ವರ್ಣಿಸುತ್ತಿದ್ದರು.

ಮಠದಲ್ಲಿ ಸ್ವಾಮೀಜಿಯ ಸಾನ್ನಿಧ್ಯದ ಆವಶ್ಯಕತೆ ಬಹಳವಾಗಿಯೇ ಇತ್ತು. ಏಕೆಂದರೆ, ಶ್ರೀರಾಮಕೃಷ್ಣರ ಅವತಾರೋದ್ದೇಶವನ್ನು ಕಾರ್ಯಗತಗೊಳಿಸುವ ಹೊಣೆಗಾರಿಕೆ ಮುಖ್ಯವಾಗಿ ಅವರದ್ದೇ ಅಲ್ಲವೆ ? ಆದರೆ ಪರಿಸ್ಥಿತಿ ಮಾತ್ರ ಈ ಸಂನ್ಯಾಸಿಗಳಿಗೆ ಯಾವ ರೀತಿಯಲ್ಲೂ ಅನುಕೂಲಕರವಾಗಿರಲಿಲ್ಲ. ಮೊದಲನೆಯದಾಗಿ, ಈ ಸಂನ್ಯಾಸ ಸಂಪ್ರದಾಯವೇ ಬಂಗಾಳಕ್ಕೆ ತೀರ ಹೊಸದು. ಆದ್ದರಿಂದ ಅವರಿಗೆ ಸಮಾಜದಿಂದ ಯಾವುದೇ ಬಗೆಯ ಸಹಕಾರ ಸಿಗುವುದಿರಲಿ, ಎಲ್ಲ ರೀತಿಯಿಂದಲೂ ವಿರೋಧವೇ ಎದುರಾಗುತ್ತಿತ್ತು. ಇದರ ಜೊತೆಗೆ ಮಠದ ಆರ್ಥಿಕ ಪರಿಸ್ಥಿತಿ ತೀರಾ ಚಿಂತಾಜನಕವಾಗಿತ್ತು. ನಾವು ನೋಡಿದಂತೆ, ಮೊದಲಿನಿಂದಲೂ ಮಠದ ಸ್ಥಿತಿಗತಿಗಳು ಮಠದ ಕಟ್ಟಡದ ಅವಸ್ಥೆಯಂತೆಯೇ ಇದ್ದುವು. ಅಲ್ಲದೆ, ಮಠದ ಆಧಾರಸ್ತಂಭಗಳಂತಿದ್ದ ಬಲರಾಮ ಬಾಬುವೂ ಸುರೇಂದ್ರನಾಥ ಮಿತ್ರನೂ ಕ್ರಮವಾಗಿ ೧೮೯೦ರ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ತೀರಿಕೊಂಡರು. ಇದರಿಂದಾಗಿ ಹಿಂದೆಂದಿಗಿಂತ ಹೆಚ್ಚು ದುಸ್ಥಿತಿ ಏರ್ಪಟ್ಟಿತ್ತು. ಜೊತೆಗೆ ಶ್ರೀರಾಮಕೃಷ್ಣರ ಪವಿತ್ರ ಅವಶೇಷಗಳನ್ನು ಕಾಪಾಡಿಕೊಳ್ಳುವ ಹಾಗೂ ಸಂಸ್ಥಾಪಿಸುವ ಹೊಣೆ ಈ ಸಂನ್ಯಾಸಿಗಳ ಮೇಲಿದೆ. ಈಗ ಮಠದ

ಖರ್ಚನ್ನು ವಹಿಸಿಕೊಳ್ಳುವವರು ಯಾರಿದ್ದಾರೆ? ಈ ಸಂನ್ಯಾಸಿಗಳೆಲ್ಲ ಬೇರೆಲ್ಲಿಗೆ ಹೋಗುವುದು? ಶ್ರೀರಾಮಕೃಷ್ಣರನ್ನು ಎಲ್ಲಿ ಪ್ರತಿಷ್ಠಾಪಿಸುವುದು? ಅವರಿಗೀಗ ದಿಕ್ಕು ತೋಚದಂತಾಯಿತು. ಗಿರೀಶ, ಮಹೇಂದ್ರನಾಥ ಮತ್ತಿತರ ಭಕ್ತರೇನೋ ತಮ್ಮಿಂದಾದಷ್ಟು ನೆರವು ನೀಡಿದರು. ಆದರೆ ಅವರಾದರೂ ಹೆಚ್ಚು ಶ್ರೀಮಂತರೇನಲ್ಲ; ಅವರಿಂದ ಹೆಚ್ಚು ಹಣವನ್ನು ನಿರೀಕ್ಷಿಸುವಂತೆಯೇ ಇರಲಿಲ್ಲ.

ಈ ಎಲ್ಲ ಕಷ್ಟಗಳ ನಡುವೆ ಸ್ವಾಮೀಜಿಯ ಮನಸ್ಸಿನಲ್ಲಿ ಬೇರೊಂದು ಚಿಂತೆ ಕೊರೆಯುತ್ತಿದೆ. ಬಂಗಾಳದಲ್ಲಿ ಶ್ರೀರಾಮಕೃಷ್ಣರ ಹೆಸರನ್ನು ಶಾಶ್ವತಗೊಳಿಸುವಂತಹ ಒಂದು ಸ್ಮಾರಕವನ್ನು, ಕಡೆಗೆ ಗಂಗಾತೀರದಲ್ಲೊಂದು ದೇವಾಲಯವನ್ನಾದರೂ ನಿರ್ಮಿಸಬೇಕು ಎಂಬ ಆಕಾಂಕ್ಷೆ ಅವರಲ್ಲಿ ತೀವ್ರವಾಗಿದೆ. ಆದರೆ ಅದಕ್ಕೆ ಬೇಕಾಗುವಷ್ಟು ಧನಸಂಗ್ರಹ ಮಾಡುವ ಪರಿಯೆಂತು? ಆ ಪಾಳುಬಿದ್ದ ಕಟ್ಟಡದಲ್ಲಿ, ಒಂದು ಹೊತ್ತಿನ ತುತ್ತಿಗೇ ಗತಿಯಿಲ್ಲದೆ ವಾಸಿಸುತ್ತಿರುವ ಈ ಭಿಕಾರಿ ಸಂನ್ಯಾಸಿಗಳನ್ನು ಕಂಡು ಯಾರು ತಾನೆ ಸಾವಿರಗಟ್ಟಲೆ ರೂಪಾಯಿ ಕೊಡಲು ಮುಂದಾದಾರು? ಅನಂತ ಶಕ್ತಿಯಡಗಿರುವ ಪವಿತ್ರ ಚೇತನರು ಇವರು ಎಂದಾಗಲಿ, ಇವರಿಂದ ಮಹಾಸಂಸ್ಥೆಯೊಂದು ರೂಪುಗೊಳ್ಳಲಿದೆ ಎಂದಾಗಲಿ ಜನರು ಹೇಗೆ ಅರಿಯಬಲ್ಲರು? ಅಂತೂ ಸ್ವಾಮೀಜಿ ಬಂಗಾಳದಲ್ಲಿ ಯಾವ ಭರವಸೆಯನ್ನೂ ಕಾಣದೆ, ತಮ್ಮ ಮಿತ್ರರಾದ ಪ್ರಮದಬಾಬುಗಳಿಂದ ನೆರವನ್ನೂ ಸಲಹೆಯನ್ನೂ ಕೋರಿ, (ಸುರೇಂದ್ರ ತೀರಿಕೊಂಡ ಮರುದಿನದಂದು) ದೀರ್ಘ ಪತ್ರವೊಂದನ್ನು ಬರೆಯುತ್ತಾರೆ:

"...ಮಹಾಶಯರೆ, ಈ ಮೊದಲೇ ನಿಮಗೆ ಹೇಳಿರುವಂತೆ ನಾನು ಶ್ರೀರಾಮಕೃಷ್ಣರ ದಾಸಾನುದಾಸ. ತನುಮನಗಳನ್ನು ಅವರ ಪಾದಗಳಲ್ಲಿ ಸಮರ್ಪಿಸಿಕೊಂಡಿರುವ ನಾನು, ಅವರ ಆಜ್ಞೆಯನ್ನು ಕಡೆಗಣಿಸಲಾರೆ. ಅವರಿಂದಲೇ ಸಂಘಟಿಸಲ್ಪಟ್ಟ ಈ ಸಂನ್ಯಾಸಿಗಳ ಸಂಘಕ್ಕೆ, ಏನಾದರಾಗಲಿ, ನನ್ನನ್ನು ನಾನು ಅರ್ಪಿಸಿಕೊಳ್ಳಬೇಕು. ನನ್ನ ಪಾಲಿಗೆ ಸ್ವರ್ಗವೇ ಬರಲಿ, ನರಕವೇ ಎದುರಾಗಲಿ, ಮೋಕ್ಷವೇ ದೊರಕಲಿ ಅಥವಾ ಇನ್ನೇನೇ ಬಂದೊದಗಲಿ, ನಾನು ಈ ಸಂಘವನ್ನು ಸಂರಕ್ಷಿಸಬೇಕು ಎಂಬುದೇ ಶ್ರೀರಾಮಕೃಷ್ಣರ ಆದೇಶವಾಗಿತ್ತು.

"ಸರ್ವಸಂಗ ಪರಿತ್ಯಾಗ ಮಾಡಿದ ಅವರ ಈ ಎಲ್ಲ ಶಿಷ್ಯರೂ ಒಟ್ಟಾಗಿರಬೇಕು ಎಂಬುದು ಶ್ರೀರಾಮಕೃಷ್ಣರ ಆಜ್ಞೆಯಾಗಿತ್ತು. ಮತ್ತು, ಇವರನ್ನೆಲ್ಲ ಒಟ್ಟಾಗಿರಿಸಬೇಕು ಎಂದು ಅವರೇ ನನ್ನನ್ನು ನಿಯಮಿಸಿದ್ದಾರೆ. ನಾವುಗಳು ತೀರ್ಥಾಟನೆಗೆಂದು ಅಲ್ಲಿ-ಇಲ್ಲಿ ಹೋಗಬಹುದು. ಆದರದು ತಾತ್ಕಾಲಿಕ ಮಾತ್ರ; ಮತ್ತೆ ಮಠಕ್ಕೆ ಹಿಂದಿರುಗಲೇಬೇಕು. ಸ್ವತಃ ಶ್ರೀರಾಮಕೃಷ್ಣರ ಅಭಿಪ್ರಾಯವೇನಾಗಿತ್ತೆಂದರೆ, ಯಾರು ಆಧ್ಯಾತ್ಮಿಕ ಜೀವನದಲ್ಲಿ ಅತ್ಯುನ್ನತ ಮಟ್ಟದ ಪರಿಪೂರ್ಣತೆಯನ್ನು ಸಿದ್ಧಿಸಿಕೊಂಡಿದ್ದಾರೆಯೋ ಅವರು ಮಾತ್ರ ಸದಾ ಪರಿವ್ರಾಜಕರಾಗಿ ಓಡಾಡಿಕೊಂಡಿರಬಹುದು; ಅಲ್ಲಿಯವರೆಗೆ ಒಂದು ಜಾಗದಲ್ಲಿ ನೆಲೆನಿಂತು ಆಧ್ಯಾತ್ಮಿಕ ಸಾಧನೆಯಲ್ಲಿ ನಿರತರಾಗಿರುವುದೇ ಸೂಕ್ತ—ಎಂದು. ಆದ್ದರಿಂದ ಅವರ ಈ ಆದೇಶವನ್ನು ಪರಿಪಾಲಿಸುವುದಕ್ಕಾಗಿಯೇ ಅವರ ಸಂನ್ಯಾಸೀಶಿಷ್ಯರೆಲ್ಲ ಬಾರಾನಾಗೋರಿನ ಪಾಳುಬಿದ್ದ ಮನೆಯಲ್ಲಿ ಕಲೆತು ನೆಲೆಸಿದ್ದಾರೆ. ಮತ್ತು, ಶ್ರೀರಾಮಕೃಷ್ಣರ ಇಬ್ಬರು ಗೃಹಸ್ಥಭಕ್ತರಾದ ಬಲರಾಮ ಬೋಸ್ ಹಾಗೂ ಸುರೇಂದ್ರನಾಥ ಮಿತ್ರ ಇವರು ಇಲ್ಲಿಯವರೆಗೆ ಈ ಸಂನ್ಯಾಸಿಗಳ ಆಹಾರದ ಹಾಗೂ ಮನೆ ಬಾಡಿಗೆಯ

ಖರ್ಚನ್ನು ವಹಿಸಿಕೊಂಡುಬಂದರು.

"ಹಲವಾರು ಕಾರಣಗಳಿಂದಾಗಿ, ಶ್ರೀರಾಮಕೃಷ್ಣರ ಶರೀರವನ್ನು ದಹನ ಮಾಡ ಬೇಕಾಯಿತು. ಇದೊಂದು ಆಕ್ಷೇಪಣೀಯ ಕೃತ್ಯ ಎಂಬುದರಲ್ಲಿ ಸಂದೇಹವಿಲ್ಲ.* ಅಂತೂ, ಅವರ ಅವಶೇಷಗಳನ್ನು ರಕ್ಷಿಸಿಡಲಾಗಿದೆ. ಈಗ ಇವುಗಳನ್ನು ಗಂಗೆಯ ದಡದ ಮೇಲೆ ಒಂದು ಸರಿಯಾದ ಜಾಗದಲ್ಲಿ ವಿಧಿಯುಕ್ತವಾಗಿ ಪ್ರತಿಷ್ಠಾಪಿಸಿ ಒಂದು ದೇವಸ್ಥಾನವನ್ನು ಕಟ್ಟಿದರೆ, ನಾವು ನಮ್ಮ ತಲೆಗಳ ಮೇಲಿರುವ ಪಾಪದ ಹೊರೆಯನ್ನು ಕೆಲಮಟ್ಟಿಗಾದರೂ ಪರಿಹರಿಸಿಕೊಳ್ಳಬಹುದು ಎಂಬುದು ನನ್ನ ಭಾವನೆ. ಅವರ ಅವ ಶೇಷಗಳು, ಅವರ ಪೀಠ ಹಾಗೂ ಅವರ ಭಾವಚಿತ್ರ—ಇವುಗಳಿಗೆ ದಿನವೂ ವಿಧಿಯುಕ್ತ ವಾಗಿ ಪೂಜೆ ನಡೆಯುತ್ತಿದೆ. ಬಹುಶಃ ನಿಮಗೆ ತಿಳಿದಿರುವಂತೆ, ನನ್ನೊಬ್ಬ ಸೋದರ ಸಂನ್ಯಾಸಿಯೇ ಈ ಪೂಜಾಕಾರ್ಯದಲ್ಲಿ ಹಗಲಿರುಳೂ ನಿರತರಾಗಿದ್ದಾರೆ. ಈ ಪೂಜಾದಿ ಗಳ ಖರ್ಚನ್ನೂ ಮೇಲೆ ಹೇಳಿದ ಇಬ್ಬರು ಮಹಾನುಭಾವರೇ ವಹಿಸಿಕೊಳ್ಳುತ್ತಿದ್ದರು. ಈಗ, ಯಾರ ದಿವ್ಯಜನನದಿಂದಾಗಿ ಬಂಗಾಳಿಗಳ ಜನಾಂಗವೇ ಕೃತಾರ್ಥವಾಯಿತೋ, ಸಮಸ್ತ ಬಂಗಾಳವೇ ಪಾವನವಾಯಿತೋ, ಅಂತಹ ಶ್ರೀರಾಮಕೃಷ್ಣರ ಜನ್ಮಸ್ಥಳದ ಸಮೀಪದಲ್ಲಿ ಎಲ್ಲಾದರೊಂದು ಕಡೆ, ಒಂದು ಸ್ಮಾರಕವನ್ನು ನಿರ್ಮಾಣ ಮಾಡಲು ನಮ್ಮಿಂದ ಇನ್ನೂ ಸಾಧ್ಯವಾಗಲಿಲ್ಲವೆಂದರೆ ಇದಕ್ಕಿಂತ ಶೋಚನೀಯವಾದದ್ದು ಇನ್ನೇ ನಿದೆ ? ಅಲ್ಲದೆ, ಭಾರತೀಯರನ್ನು ಪಾಶ್ಚಾತ್ಯ ನಾಗರಿಕತೆಯ ಥಳಕಿನ ವಿಲಾಸಗಳಿಂದ ಪಾರು ಮಾಡುವುದಕ್ಕಾಗಿಯೇ ಜನ್ಮವೆತ್ತಿದ, ಮತ್ತು ಆ ಕಾರಣಕ್ಕಾಗಿಯೇ ತಮ್ಮ ಹೆಚ್ಚಿನ ಸಂನ್ಯಾಸೀ ಶಿಷ್ಯರನ್ನು ಕಾಲೇಜು ಯುವಕರಲ್ಲಿಯೇ ಆರಿಸಿಕೊಂಡಂತಹ ಶ್ರೀರಾಮಕೃಷ್ಣರಿಗಾಗಿ ಒಂದು ಸ್ಮಾರಕವನ್ನು ನಿರ್ಮಾಣ ಮಾಡಲು ನಮಗಿನ್ನೂ ಸಾಧ್ಯ ವಾಗಲಿಲ್ಲವೆಂದರೆ, ಇದಕ್ಕಿಂತ ವಿಷಾದನೀಯವಾದದ್ದೇನಿದೆ ?

"ಬಲರಾಮ್ ಬಾಬು ಹಾಗೂ ಸುರೇಂದ್ರ ಬಾಬು ಇವರಿಬ್ಬರಿಗೂ, ಗಂಗೆಯ ದಡದ ಮೇಲೊಂದು ಜಾಗವನ್ನು ಕೊಂಡುಕೊಳ್ಳಲೇಬೇಕು, ಅಲ್ಲಿ ಶ್ರೀರಾಮಕೃಷ್ಣರ ಅವಶೇಷಗಳನ್ನು ಪ್ರತಿಷ್ಠಾಪಿಸಿ ಒಂದು ಸ್ಮಾರಕವನ್ನು ಕಟ್ಟಿಸಬೇಕು, ಹಾಗೂ, ಈ ಸಂನ್ಯಾಸೀಶಿಷ್ಯರೆಲ್ಲ ಅಲ್ಲೇ ವಾಸವಾಗಿರುವಂತಾಗಬೇಕು ಎಂಬ ತೀವ್ರವಾದ ಇಚ್ಛೆ ಯಿತ್ತು. ಈ ಕಾರ್ಯಕ್ಕಾಗಿ ಒಂದು ಸಾವಿರ ರೂಪಾಯಿಗಳನ್ನು ಕೊಡಲು ಸುರೇಂದ್ರ ಬಾಬು ಮುಂದೆ ಬಂದಿದ್ದರು; ಅಲ್ಲದೆ ಇನ್ನೂ ಹೆಚ್ಚಿನ ಹಣವನ್ನು ನೀಡುವುದಾಗಿ ವಾಗ್ದಾನ ಮಾಡಿದ್ದರು. ಆದರೆ ಅಚಿಂತ್ಯನಾದ ಭಗವಂತನ ಇಚ್ಛೆಯಂತೆ ಅವರು ನಿನ್ನೆ ರಾತ್ರಿ (ಮೇ ೨೫ರಂದು) ಈ ಲೋಕವನ್ನೇ ತ್ಯಜಿಸಿ ಹೊರಟುಹೋದರು.

"ಈಗ ಈ ಸಂನ್ಯಾಸಿಗಳೆಲ್ಲ ಶ್ರೀರಾಮಕೃಷ್ಣರ ಅಸ್ಥಿಯನ್ನು ತೆಗೆದುಕೊಂಡು ಎಲ್ಲಿಗೆ ಹೋಗುವುದೋ ತಿಳಿಯದಾಗಿದೆ. ನಮ್ಮ ಬಂಗಾಳೀ ಜನ ಮಣಗಟ್ಟಲೆ ಮಾತನಾಡುವುದರಲ್ಲಿ ಗಟ್ಟಿಗರೇ ಹೊರತು ಕಿಂಚಿತ್ತೂ ಕಾರ್ಯರೂಪಕ್ಕೆ ತರುವವರಲ್ಲ ಎಂಬುದು ನಿಮಗೇ ಗೊತ್ತಲ್ಲ! ಈ ಯುವಕರೆಲ್ಲ ಸಂನ್ಯಾಸಿಗಳು; ಈ ಕ್ಷಣದಲ್ಲಿ ಎಲ್ಲರಿಂದಲೂ ಬಿಡಿಸಿಕೊಂಡು ತಮ್ಮತಮ್ಮ ದಾರಿ ಹಿಡಿದು ಹೊರಟುಬಿಡಬಲ್ಲರು. ಆದರೆ ಇವರನ್ನೆಲ್ಲ ಒಟ್ಟಾಗಿರುವಂತೆ ನೋಡಿಕೊಳ್ಳಬೇಕಾದವನು ನಾನು; ಇವರ

* ನೋಡಿ: ಅನುಬಂಧ ೭.

ಸೇವಕ ನಾನು. ನನಗೆ ತುಂಬ ದುಃಖವಾಗುತ್ತಿದೆ—ಶ್ರೀರಾಮಕೃಷ್ಣರ ಅವಶೇಷಗಳನ್ನು ಪ್ರತಿಷ್ಠಾಪಿಸಲು ಒಂದು ತುಂಡು ಜಾಗ ಸಿಗದೆ ಹೋಯಿತಲ್ಲ! ಇದನ್ನು ಭಾವಿಸಿದರೇ ನನಗೆ ಎದೆ ಹಿಂಡಿದಂತಾಗುತ್ತದೆ.

"ಕಲ್ಕತ್ತದಂತಹ ಸ್ಥಳದಲ್ಲಿ ಸಾವಿರ ರೂಪಾಯಿಗೆಲ್ಲ ಜಾಗ ಕೊಂಡುಕೊಂಡು ದೇವಸ್ಥಾನವನ್ನು ಕಟ್ಟಿಸಲು ಸಾಧ್ಯವೇ ಇಲ್ಲ. ನಮಗೆ ಬೇಕಾಗಬಹುದಾದ ಜಾಗಕ್ಕೆ ಕನಿಷ್ಠಪಕ್ಷ ಐದರಿಂದ ಏಳುಸಾವಿರ ರೂಪಾಯಿಗಳಾದರೂ ಬೇಕಾಗುತ್ತದೆ."

"ಶ್ರೀರಾಮಕೃಷ್ಣರ ಶಿಷ್ಯರ ಪಾಲಿಗೆ ಈಗ ಉಳಿದಿರುವ ಏಕಮಾತ್ರ ಸ್ನೇಹಿತ ಹಾಗೂ ಪೋಷಕರೆಂದರೆ ನೀವೊಬ್ಬರೇ. ವಾಯುವ್ಯ ಪ್ರಾಂತದಲ್ಲಿ ನಿಮ್ಮ ಕೀರ್ತಿಯೂ ಸ್ಥಾನಮಾನಗಳೂ ನಿಜಕ್ಕೂ ಜನಜನಿತವಾಗಿವೆ. ನಿಮ್ಮ ಪರಿಚಯಸ್ಥರ ಸಂಖ್ಯೆಯೂ ಅಲ್ಲಿ ಹೇರಳವಾಗಿದೆ. ಆದ್ದರಿಂದ, ನಿಮಗೆ ಪರಿಚಯವಿರುವ ಅನುಕೂಲಸ್ಥ ದೈವಭಕ್ತ ಜನರಿಂದ ಈ ಕಾರ್ಯಕ್ಕಾಗಿ ವಂತಿಗೆ ಕೇಳುವ ಬಗ್ಗೆ ಆಲೋಚಿಸಬೇಕೆಂದು ನಿಮ್ಮನ್ನು ನಾನು ಬೇಡಿಕೊಳ್ಳುತ್ತೇನೆ. ನಮ್ಮ ಈ ಆಲೋಚನೆಯು ಯುಕ್ತವಾದದ್ದೆಂದು ನೀವು ಭಾವಿಸುವುದಾದರೆ, ನಿಮ್ಮ ಅನುಮತಿಯ ಮೇರೆಗೆ ನಾನು ತಕ್ಷಣ ನಿಮ್ಮಲ್ಲಿಗೆ ಹೊರಟುಬರುತ್ತೇನೆ. ಈ ಒಂದು ಉದಾತ್ತ ಕಾರ್ಯಕ್ಕಾಗಿ, ನನ್ನ ಪಾಲಿನ ಭಗವಂತನ ಹಾಗೂ ಅವನ ಮಕ್ಕಳ ಸಲುವಾಗಿ ಮನೆಯಿಂದ ಮನೆಗೆ ಹೋಗಿ ಭಿಕ್ಷೆ ಬೇಡುವುದಕ್ಕೂ ನನಗೆ ಸಂಕೋಚವಿಲ್ಲ.

"ನೀವು ನನ್ನನ್ನು ಕೇಳಬಹುದು—'ನೀವು ಸಂನ್ಯಾಸಿಗಳಲ್ಲವೆ, ಇಂಥ ವಿಚಾರಗಳನ್ನೆಲ್ಲ ಹಚ್ಚಿಕೊಂಡು ಏಕೆ ತೊಂದರೆಪಡುತ್ತೀರಿ?' ಅಂತ. ಅದಕ್ಕೆ ನಾನು ಹೇಳುತ್ತೇನೆ—'ನಾನು ಶ್ರೀರಾಮಕೃಷ್ಣರ ದಾಸ; ಆದ್ದರಿಂದ ಅವರು ಜನ್ಮ ತಳೆದು ಅಭೂತಪೂರ್ವ ಆಧ್ಯಾತ್ಮಿಕ ಸಾಧನೆ ಮಾಡಿದಂತಹ ಈ ನಾಡಿನಲ್ಲಿ ಅವರ ಹೆಸರನ್ನು ಅಮರಗೊಳಿಸುವುದಕ್ಕೋಸ್ಕರ ಹಾಗೂ ಅವರ ಶಿಷ್ಯರಿಗೆ ಅವರ ಮಹಾದರ್ಶಗಳನ್ನು ಆಚರಣೆಗೆ ತರುವಲ್ಲಿ ಕಿಂಚಿತ್ತಾದರೂ ಸಹಾಯ ಮಾಡುವುದಕ್ಕೋಸ್ಕರ, ಕಡೆಗೆ ಕಳ್ಳತನ-ದರೋಡೆ ಮಾಡಬೇಕಾಗಿಬಂದರೆ ಅದಕ್ಕೂ ನಾನು ಸಿದ್ಧ. ಅವರ ಈ ನಾಡಿನಲ್ಲಿ ಸ್ಮಾರಕರೂಪವಾದ ದೇಗುಲವನ್ನು ಕಟ್ಟಲು ನಮ್ಮಿಂದ ಸಾಧ್ಯವಾಗದಿದ್ದಲ್ಲಿ ಅದು ಅತ್ಯಂತ ಶೋಚನೀಯ ವಿಷಯ. ಬಂಗಾಳದ ಪರಿಸ್ಥಿತಿ ನಿಜಕ್ಕೂ ಅವಮಾನಕರವಾಗಿದೆ. ಇಲ್ಲಿನ ಜನ ತ್ಯಾಗವೆಂಬುದರ ಅರ್ಥವನ್ನು ಕನಸಿನಲ್ಲೂ ಕಂಡರಿಯರು. ವಿಲಾಸ ಹಾಗೂ ಇಂದ್ರಿಯ ಭೋಗವೆಂಬುದು ಈ ಜನತೆಯ ಸತ್ತ್ವವನ್ನೇ ಹಿಂಡಿ ಹೀರಿಬಿಟ್ಟಿದೆ. ಭಗವಂತ ಈ ಜನತೆಗೆ ಒಂದಿಷ್ಟು ತ್ಯಾಗಬುದ್ಧಿಯನ್ನು, ಒಂದಿಷ್ಟು ಪಾರಮಾರ್ಥಿಕ ಬುದ್ಧಿಯನ್ನು ಕರುಣಿಸಲಿ!..."

ಸ್ವಾಮೀಜಿಯ ಈ ದೀರ್ಘ, ವಿನಂತಿಪೂರ್ವಕವಾದ ಪತ್ರಕ್ಕೆ ಪ್ರಮದಬಾಬುಗಳಿಂದ ಬಂದ ಪ್ರತಿಕ್ರಿಯೆ ಅದೆಷ್ಟು ತಣ್ಣಗಿತ್ತು ಎಂಬುದನ್ನು ನಾವು ಸ್ವಾಮೀಜಿ ಅವರಿಗೆ ಬರೆಯುವ ಮರುಪತ್ರದ ಧಾಟಿಯಿಂದಲೇ ತಿಳಿದುಕೊಳ್ಳಬಹುದು. ಅದರಲ್ಲಿ ಸ್ವಾಮೀಜಿ ಬರೆಯುತ್ತಾರೆ: "ನಿಮ್ಮ ಸಲಹೆಗಳು ನಿಜಕ್ಕೂ ಯುಕ್ತಿಯುಕ್ತವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ. ಎಲ್ಲವೂ ಭಗವಂತನ ಇಚ್ಛೆಯಂತೆಯೇ ಆಗುವುದೆಂಬ ಮಾತು ತುಂಬ ಸತ್ಯ. ನಾವೂ ಕೂಡ ಈಗ ಚಿಕ್ಕಚಿಕ್ಕ ಗುಂಪುಗಳಾಗಿ ಬೇರೆಬೇರೆ ಕಡೆಗೆ ಹೊರಟುಬಿಡಲಿದ್ದೇವೆ. . ." ಪ್ರಮದಬಾಬುಗಳು ಸಹಾಯಕ್ಕೆ ಬದಲಾಗಿ ಸಲಹೆ

ನೀಡಿದ್ದಾರೆಂಬುದು ಈ ಪತ್ರದಿಂದ ಸ್ಪಷ್ಟವಾಗುತ್ತದೆ. ಬಹುಶಃ ಅವರ ಸಲಹೆ ಈ ರೀತಿ ಇದ್ದಿರಬೇಕು: "ನಿಮ್ಮ ಉದ್ದೇಶವೇನೋ ಒಳ್ಳೆಯದೇ. ಆದರೆ ಭಗವಂತನ ಇಚ್ಛೆಯೊಂದಿದೆಯೆಲ್ಲ? ಅವನ ಕೃಪೆಯಾಗುವವರೆಗೆ ಕಾದಿರುವುದು ಒಳ್ಳೆಯದು..." ಎಂದು. ಪ್ರಮದಬಾಬುಗಳಿಂದ ಇಂತಹ ನಿರಾಶಾದಾಯಕ ಉತ್ತರ ಬಂದರೂ ಸ್ವಾಮೀಜಿ ಧೃತಿಗೆಡಲಿಲ್ಲ. ಇಂದಲ್ಲ ನಾಳೆ ತಮ್ಮ ಕನಸು ನನಸಾಗುವುದರಲ್ಲಿ ಅವರಿಗೆ ಸಂದೇಹವೇ ಇರಲಿಲ್ಲ. ಆದರೆ ತತ್‌ಕ್ಷಣದ ಪರಿಸ್ಥಿತಿ ಮಾತ್ರ ಪರೀಕ್ಷಾಕಾಲವಾಗಿ ಪರಿಣಮಿಸಿದೆ. ಆದ್ದರಿಂದ, ಸರಿಯಾದ ಕಾಲ ಕೂಡಿಬರುವವರೆಗೆ ತಾವೆಲ್ಲ ಬೇರೆಬೇರೆಯಾಗಿ ಹೊರಟು ಪರಿವ್ರಾಜಕ ಜೀವನ ನಡೆಸುವ ಆಲೋಚನೆಯನ್ನು ಸೋದರ ಸಂನ್ಯಾಸಿಗಳ ಮುಂದಿಟ್ಟರು. ಮಠದ ಆವಶ್ಯಕತೆಗಳನ್ನು ಭರಿಸಿಕೊಡುತ್ತಿದ್ದ ಇಬ್ಬರು ಪ್ರಮುಖ ಭಕ್ತರು ಕಣ್ಮುಚ್ಚಿದಾಗ, ಅವರಿಗೆ ಇದಲ್ಲದೆ ಬೇರೆ ಯಾವ ದಾರಿಯೂ ಕಾಣಲಿಲ್ಲ.

ಇಷ್ಟಾದರೂ ಸ್ವಾಮೀಜಿಯ ಉತ್ಸಾಹ ಮಾತ್ರ ಅದಮ್ಯವೆನ್ನಬೇಕು. ಇದೇ ಸಮಯದಲ್ಲಿ ಆಲ್ಮೋರಾದಲ್ಲಿದ್ದ ಸ್ವಾಮಿ ಶಾರದಾನಂದರಿಗೆ ಅವರು ಬರೆಯುವ ಎರಡು ಪತ್ರಗಳಲ್ಲಿ ಅದು ವ್ಯಕ್ತವಾಗುತ್ತದೆ: "ಗಿರೀಶ್‌ಚಂದ್ರ ಘೋಷ್ ಮಠದ ಖರ್ಚನ್ನು ವಹಿಸಿಕೊಂಡಿದ್ದಾನೆ. ತತ್ಕಾಲಕ್ಕೆ ಮಠದ ದಿನನಿತ್ಯದ ವ್ಯವಹಾರವನ್ನು ಚೆನ್ನಾಗಿ ನಿರ್ವಹಿಸಿಕೊಂಡು ಹೋಗಲಾಗುತ್ತಿದೆ. . ." "ನೀನು ಇಲ್ಲಿಗೇ ಬಂದಿರುವುದು ಒಳ್ಳೆಯದು. ದಿವಂಗತ ಮಹೀಂದ್ರ ಮುಖರ್ಜಿಯವರ ಪತ್ನಿ ಒಂದು ಮಠವನ್ನು ಕಟ್ಟಿಸಿಕೊಡಲು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾಳೆ. ಅಲ್ಲದೆ ಸುರೇಂದ್ರನಾಥ ಮಿತ್ರ ಕೂಡ ಮಠಕ್ಕಾಗಿ ಒಂದು ಸಾವಿರ ರೂಪಾಯಿ ಬಿಟ್ಟುಹೋಗಿದ್ದಾನೆ. ಆದ್ದರಿಂದ ಸದ್ಯದಲ್ಲೇ ಗಂಗಾತೀರದಲ್ಲಿ ಒಂದು ಕಟ್ಟಡ ನಿರ್ಮಾಣವಾಗುವ ಸಂಭವವಿದೆ." ಆದರೆ ಈ ಮಾತುಗಳೆಲ್ಲ ಅವರ ಆಶಾಪೂರ್ಣ ಮನೋಭಾವವನ್ನು ತೋರಿಸುತ್ತವೆಯೇ ಹೊರತು ಇನ್ನೇನೂ ಅಲ್ಲ. ಏಕೆಂದರೆ, ಅವರ ಈ ಮಾತುಗಳಾವುವೂ ತತ್ಕಾಲಕ್ಕೆ ಕಾರ್ಯರೂಪಕ್ಕೆ ಬರಲಿಲ್ಲ.

ಶ್ರೀರಾಮಕೃಷ್ಣರಿಗಾಗಿ ಸ್ಮಾರಕವನ್ನು ನಿರ್ಮಿಸುವ ಹಾಗೂ ಸೋದರಸಂನ್ಯಾಸಿಗಳಿಗೆ ತರಬೇತಿ ನೀಡುವ ಪ್ರಯತ್ನಗಳ ನಡುವೆಯೂ, ತಾವು ಪರಿವ್ರಾಜಕರಾಗಿ ಹೊರಟುಬಿಡಬೇಕೆಂಬ ಆಸೆ ಸ್ವಾಮೀಜಿಯ ಮನಸ್ಸಿನಲ್ಲಿ ಮತ್ತೆ ಭುಗಿಲೆದ್ದಿತು. ಹಿಮಾಲಯದತ್ತ ಹಾರಿಹೋಗಿಬಿಡಬೇಕು ಎಂದು ಅವರ ಹೃದಯ ಕಾತರಿಸಿತು. ಆದರೆ ದಿನೇದಿನೇ ಮಠದಲ್ಲಿ ಸೋದರಸಂನ್ಯಾಸಿಗಳೊಂದಿಗಿನ ಹಾಗೂ ಭಕ್ತರೊಂದಿಗಿನ ಸಂಬಂಧ ಹೆಚ್ಚು ಆತ್ಮೀಯವಾಗುತ್ತಿತ್ತು; ಮಠದ ಹೊಣೆಗಾರಿಕೆ ಇನ್ನಷ್ಟು ಹೆಚ್ಚಾಗಿ ಬೆಳೆಯುತ್ತಿತ್ತು. ಇವೆಲ್ಲ ಅವರು ಪರಿವ್ರಾಜಕ ಜೀವನವನ್ನು ಪ್ರಾರಂಭಿಸಲು ಅಡಚಣೆಗಳಾಗಿದ್ದುವು. ಹೀಗಿರುವಾಗ ತಾವು ತಮ್ಮ ಪರಿವ್ರಾಜಕ ಜೀವನವನ್ನು ಕೈಗೊಳ್ಳುವುದರ ಮೂಲಕ ಮಾತ್ರವೇ ತಮ್ಮ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳಲೂ ಶ್ರೀರಾಮಕೃಷ್ಣರ ಸಂದೇಶಗಳನ್ನು ಯಶಸ್ವಿಯಾಗಿ ಬಿತ್ತರಿಸಲೂ ಸಾಧ್ಯ ಎಂಬುದು ಅವರಿಗೆ ದೃಢವಾಗುತ್ತಬಂದಿತು. ಆದ್ದರಿಂದ ಅವರು ಶಾರದಾನಂದರಿಗೆ ಬರೆಯುತ್ತಾರೆ: "ಹಿಮಾಲಯಕ್ಕೆ ಹಾರಿಹೋಗಲು ನಾನು ಕಾತರನಾಗಿದ್ದೇನೆ. . . ಈ ಪತ್ರ ನಿನ್ನ ಕೈಸೇರುವ ಮೊದಲೇ ನಾನು ಇಲ್ಲಿಂದ ಹೊರಟುಬಿಟ್ಟಿರುತ್ತೇನೆ. ಮುಂದೇನು ಮಾಡಬೇಕೆಂಬುದರ

ಬಗ್ಗೆ ನನ್ನದೇ ಆದ ಯೋಜನೆಗಳಿವೆ. ಆದರೆ ಅವೆಲ್ಲ ಗುಟ್ಟಿನ ವಿಚಾರ; ನಿನಗೀಗ ತಿಳಿಸುವಂತಿಲ್ಲ."

ಅಂತೂ ಸ್ವಾಮೀಜಿ ಮತ್ತೆ ಪರಿವ್ರಾಜಕರಾಗಿ ಹೊರಟುಬಿಡಲು ಸಿದ್ಧರಾಗಿದ್ದಾರೆ. ಈ ಸಲ ತಮ್ಮ ನೆಚ್ಚಿನ ಸಂನ್ಯಾಸೀ ಬಂಧು ಸ್ವಾಮಿ ಅಖಂಡಾನಂದರನ್ನೂ ತಮ್ಮೊಡನೆ ಕರೆದೊಯ್ಯಲಿದ್ದರು. ಅವರ ಕೋರಿಕೆಯಂತೆ ಅಖಂಡಾನಂದರು ಕಾಶ್ಮೀರದಿಂದ ಹಿಂದಿರುಗಿಬಂದರು. ಇವರಿಗೆ ಹಿಮಾಲಯದ ದಾರಿಗಳು, ಸ್ಥಳಗಳು, ಪದ್ಧತಿಗಳು— ಎಲ್ಲ ಸುಪರಿಚಿತ. ಆದ್ದರಿಂದ ತಮ್ಮ ಪ್ರಯಾಣ ಹೆಚ್ಚು ಸುಗಮವಾಗುವುದೆಂಬ ಭರವಸೆ ಸ್ವಾಮೀಜಿಯದಾಗಿತ್ತು.

ಈ ಸಲ ಸ್ವಾಮೀಜಿ ಯಾವ ಬಗೆಯ ದೃಢನಿರ್ಧಾರದಿಂದ ಹೊರಟಿದ್ದಾರೆ ಎಂಬುದಕ್ಕೆ, ಅವರು ತಮ್ಮ ಸೋದರಸಂನ್ಯಾಸಿಗಳ ಮುಂದೆ ಆಡುವ ಮಾತೇ ನಿದರ್ಶನ. ಅವರೆನ್ನುತ್ತಾರೆ: "ನಾನು ನನ್ನ ಸ್ಪರ್ಶಮಾತ್ರದಿಂದಲೇ ಮನುಷ್ಯನನ್ನು ಪರಿವರ್ತನೆ ಮಾಡುವಂತಾಗಬೇಕು. ಅಂತಹ ಉನ್ನತ ಸಾಕ್ಷಾತ್ಕಾರವಾಗುವವರೆಗೂ ನಾನು ಹಿಂದಿರುಗುವುದಿಲ್ಲ." ಮಾತಿನಿಂದಾಗಲಿ ತರ್ಕದಿಂದಾಗಲಿ ಸುದೀರ್ಘ ವಿವರಣೆ ಯಿಂದಾಗಲಿ, ಯಾವ ಪರಿವರ್ತನೆಯನ್ನು ಉಂಟುಮಾಡಲು, ಯಾವ ಭಾವನೆಯನ್ನು ಅರ್ಥಪಡಿಸಲು ಕೆಲವೊಮ್ಮೆ ಸಾಧ್ಯವಾಗದೋ, ಅಂಥದನ್ನು ಸಮರ್ಥ ವ್ಯಕ್ತಿಯೊಬ್ಬ ತನ್ನ ಸ್ಪರ್ಶಮಾತ್ರದಿಂದ ಸಾಧಿಸಬಲ್ಲ; ತನ್ನ ವಿಚಾರಲಹರಿಯು ಇನ್ನೊಬ್ಬರಲ್ಲಿ ಹರಿಯುವಂತೆ ಮಾಡಬಲ್ಲ. ಹಿಂದೆ ಸ್ವತಃ ಶ್ರೀರಾಮಕೃಷ್ಣರು ತಮ್ಮ ಅಲೌಕಿಕ ಸ್ಪರ್ಶದಿಂದ ನರೇಂದ್ರನ ಅಂತರಾಳವನ್ನೇ ಕಲಕಾಡಿ, ಅವನೊಳಗೆ ಅಪೂರ್ವ ಆಧ್ಯಾತ್ಮಿಕ ಜ್ಞಾನವನ್ನು ಪ್ರಚೋದಿಸಿರಲಿಲ್ಲವೆ? ಅಂತಹ ಅತ್ಯುನ್ನತ ಆಧ್ಯಾತ್ಮಿಕ ಶಕ್ತಿಯನ್ನು ಪಡೆದುಕೊಳ್ಳಲು ಸ್ವಾಮೀಜಿ ಈಗ ಹೊರಟುನಿಂತಿದ್ದಾರೆ.

ಈ ಸಲ ಹೊರಡುವ ಮೊದಲು ಅವರು, ಶ್ರೀಮಾತೆ ಶಾರದಾದೇವಿಯವರ ಆಶೀರ್ವಾದವನ್ನು ಪಡೆದುಕೊಂಡು ಬರಲು ಇಚ್ಛಿಸಿದರು. ಈ ಸಮಯದಲ್ಲಿ ಶ್ರೀಮಾತೆಯವರು ಗಂಗೆಯ ಇನ್ನೊಂದು ಬದಿಯಲ್ಲಿರುವ ಘುಸೂರಿ ಎಂಬ ಹಳ್ಳಿ ಯಲ್ಲಿದ್ದರು. ಅಖಂಡಾನಂದರೊಂದಿಗೆ ಸ್ವಾಮೀಜಿ ಅಲ್ಲಿಗೆ ಹೋದರು; ಶ್ರೀಮಾತೆ ಯವರಿಗೆ ನಮಸ್ಕರಿಸಿ, "ಅಮ್ಮಾ, ನಾನು ಹಿಮಾಲಯದ ಕಡೆಗೆ ಹೊರಟಿದ್ದೇನೆ. ಅತ್ಯುನ್ನತ ಜ್ಞಾನ ಪ್ರಾಪ್ತವಾಗುವವರೆಗೆ ನಾನು ಹಿಂದಿರುಗುವುದಿಲ್ಲ. ದಯವಿಟ್ಟು ನಾನು ಯಶಸ್ವಿಯಾಗುವಂತೆ ಹರಸಿ" ಎಂದು ಕೇಳಿಕೊಂಡರು. ಶಾರದಾದೇವಿಯವರು ಶ್ರೀರಾಮಕೃಷ್ಣರ ಹೆಸರಿನಲ್ಲಿ ಹೃತ್ಪೂರ್ವಕವಾಗಿ ಹರಸಿದರು. ಬಳಿಕ ಕೇಳಿದರು: "ಮಗು, ನಿನ್ನ ತಾಯಿಯನ್ನೊಮ್ಮೆ ನೋಡಿಕೊಂಡು ಬರುವುದಿಲ್ಲವೆ?" ಅದಕ್ಕೆ ಸ್ವಾಮೀಜಿ, "ಅಮ್ಮಾ, ನೀವೇ ನನ್ನ ತಾಯಿ!" ಎಂದುತ್ತರಿಸಿದರು. ಅವರ ಈ ಭಾವವನ್ನು ಕಂಡ ಶ್ರೀಮಾತೆಯವರು ಹೃದಯದುಂಬಿ ಮತ್ತೊಮ್ಮೆ ಹರಸಿದರು. ಈ ಹೃದಯಸ್ಪರ್ಶಿ ದೃಶ್ಯವನ್ನು ನಾವು ನಮ್ಮ ಕಣ್ಮುಂದೆ ತಂದುಕೊಂಡು ಭಾವಿಸಿ ನೋಡ ಬೇಕು. ಈ ಇಬ್ಬರು ಸಿಂಹಸದೃಶ ಸಂನ್ಯಾಸಿಗಳು ಮಹಾಮಾತೆಯ ಸಮ್ಮುಖದಲ್ಲಿ ವಿನಯದಿಂದ ನಿಂತು ಆಶೀರ್ವಾದವನ್ನು ಬೇಡುತ್ತಿದ್ದಾರೆ; ಅವರನ್ನು ತಮ್ಮ ಹೆತ್ತ ತಾಯಿಗಿಂತ ಮಿಗಿಲಾಗಿ ಭಾವಿಸುತ್ತಿದ್ದಾರೆ; ಸುಪ್ರೀತರಾದ ಶ್ರೀಮಾತೆಯವರು ಅವರ ಮೇಲೆ ತಮ್ಮ ಕೃಪಾಶೀರ್ವಾದವನ್ನು ವರ್ಷಿಸುತ್ತಿದ್ದಾರೆ. . .

ಬಳಿಕ ಶಾರದಾದೇವಿಯವರು ಅಖಂಡಾನಂದರಿಗೆ, "ಮಗು, ನನ್ನ ಸರ್ವಸ್ವವನ್ನೂ ನಿನ್ನ ಕೈಯಲ್ಲಿಟ್ಟಿದ್ದೇನೆ. ನೀನು ಪರ್ವತಪ್ರದೇಶದ ಜೀವನಕ್ಕೆ ಒಗ್ಗಿಕೊಂಡವನು. ಅವನಿಗೆ ಯಾವ ರೀತಿಯಲ್ಲೂ ತೊಂದರೆಯಾಗದಂತೆ ನೋಡಿಕೋ" ಎಂದು ಪ್ರೀತಿಯಿಂದ ಎಚ್ಚರಿಸಿದರು. 'ನನ್ನ ಸರ್ವಸ್ವ' ಎಂದರೆ ಯಾವುದದು ? ಸ್ವಾಮೀಜಿ ! ಶ್ರೀಮಾತೆಯವರ ನೆಚ್ಚಿನ ನರೇನ್ ! ಇಲ್ಲಿ ಶ್ರೀಮಾತೆಯವರು ಅವರನ್ನು ತಮ್ಮ ಸರ್ವಸ್ವ ಎಂದು ಕರೆದುದು ತುಂಬ ಮಾರ್ಮಿಕವಾಗಿದೆ.

ಮಠದಲ್ಲಿ ಸುಮಾರು ಮೂರು ತಿಂಗಳ ಕಾಲ ಉಳಿದುಕೊಂಡಿದ್ದ ಸ್ವಾಮೀಜಿ, ೧೮೯೦ರ ಜುಲೈ ತಿಂಗಳ ಮಧ್ಯದ ವೇಳೆಗೆ ಬಾರಾನಾಗೋರನ್ನು ಬಿಟ್ಟು ಹೊರಟರು. ಹಿಂದೆ ಎರಡು-ಮೂರು ಸಲ ಪರಿವ್ರಾಜಕರಾಗಿ ಹೊರಟಾಗಲೂ, ತಮ್ಮ ಗುರಿಯನ್ನು ಸಾಧಿಸದೆ ಹಿಂದಿರುಗಲಾರೆವೆಂದು ತೀರ್ಮಾನ ಮಾಡಿಯೇ ಹೊರಟಿದ್ದರು. ಆದರೆ ಪ್ರತಿಸಲವೂ ಯಾವುದಾದರೊಂದು ಕಾರಣದಿಂದ ಹಿಂದಿರುಗಬೇಕಾಯಿತು. ಈ ಸಲ ಮಾತ್ರ ಸ್ವಾಮೀಜಿ ಮತ್ತೆ ಮಠಕ್ಕೆ ಹಿಂದಿರುಗಿದ್ದು ಸುದೀರ್ಘ ಸಪ್ತ ಸಂವತ್ಸರಗಳ ಅನಂತರವೇ; ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವೇದಾಂತದ ಡಿಂಡಿಮವನ್ನು ಬಾರಿಸಿ, ವಿಶ್ವವಿಜೇತರಾದ ಮೇಲೆಯೇ !

ಸ್ವಾಮೀಜಿ ತಮ್ಮ ಮನಸ್ಸಿನಿಂದ ಮಠದ ಹಾಗೂ ಸಂನ್ಯಾಸೀಬಂಧುಗಳ ಮೇಲಿನ ಬಂಧನಗಳನ್ನೆಲ್ಲ ಬಿಡಿಸಿಕೊಂಡು, ಹಗುರಗೊಂಡ ಹೃದಯದಿಂದ, ತಮ್ಮ ಉದ್ದೇಶ ಸಿದ್ಧಿಯೊಂದನ್ನೇ ಮನದಲ್ಲಿಟ್ಟುಕೊಂಡು, ನೇರವಾಗಿ ಹಿಮಾಲಯದತ್ತ ಆನಂದದಿಂದ ಸಾಗಿದ್ದಾರೆ. ಅವರ ಸಂಗಡಿಗರಾಗಿ ಸ್ವಾಮಿ ಅಖಂಡಾನಂದರಿದ್ದಾರೆ. ಹಿಮಾಲಯದಲ್ಲೇ ಜನ್ಮತಳೆದು ಹರಿದು ಬರುವ ಪವಿತ್ರ ಗಂಗೆಯ ದಡದ ಮೇಲೆ ಕಾಲ್ನಡಿಗೆಯಲ್ಲೇ ಪ್ರಯಾಣಮಾಡುವ ಯೋಜನೆ ಹೂಡಿದರು ಸ್ವಾಮೀಜಿ. ಇದರಿಂದ ಒಂದು ಆಧ್ಯಾತ್ಮಿಕ ಸಾಧನೆಯೂ ಆಗುತ್ತದೆ, ಒಂದು ಸಾಹಸವೂ ಆಗುತ್ತದೆ. ಕಲ್ಕತ್ತವನ್ನು ಬಿಟ್ಟುಹೊರಟ ಕ್ಷಣದಿಂದಲೂ ಸ್ವಾಮೀಜಿ ಸ್ವತಂತ್ರ ಹಕ್ಕಿಯಂತೆ ಆನಂದಭರಿತರಾಗಿದ್ದಾರೆ. ಅವರು ಬಹಳವಾಗಿ ಹಂಬಲಿಸಿದ್ದ ಏಕಾಂತತೆ, ಹಳ್ಳಿಗಳ ಪರಿಶುದ್ಧ-ಪ್ರಶಾಂತ ವಾತಾವರಣ, ದಾರಿಯುದ್ದಕ್ಕೂ ಸಿಗುವ ಹೊಸಹೊಸ ಸ್ಥಳಗಳು, ಅಲ್ಲಲ್ಲಿ ಭೇಟಿಯಾಗುವ ಹೊಸ ಹೊಸ ಜನರು—ಇವೆಲ್ಲ ಅವರ ಮನಸ್ಸಿಗೆ ನವೋಲ್ಲಾಸವನ್ನು ತಂದಿವೆ. ಜೊತೆಗೆ, ಕಲ್ಕತ್ತದಲ್ಲಿನ ಹಳೆಯ ನೆನಪುಗಳು, ಚಿಂತೆಗಳು ಮರೆಯಾಗಿವೆ. ಆದ್ದರಿಂದ ಅವರೀಗ ಗಂಗಾನದಿಯ ದಾರಿಯಾಗಿ ಒಬ್ಬ ಸಾಧಾರಣ ಸಾಧುವಿನಂತೆ ಪಯಣಿಸುತ್ತಿದ್ದಾರೆ.

ಕಲ್ಕತ್ತವನ್ನು ಬಿಟ್ಟಮೇಲೆ ಸುಮಾರು ಹದಿನೈದು-ಇಪ್ಪತ್ತು ದಿನಗಳ ದೀರ್ಘ ಪ್ರಯಾಣದ ಬಳಿಕ ಅವರು ಉಳಿದುಕೊಂಡ ಮೊದಲ ಸ್ಥಳ ಭಾಗಲ್ಪುರ. ಸ್ವಾಮಿಗಳಿಬ್ಬರೂ ಗಂಗಾತೀರದಲ್ಲಿ ನಡೆದು ಹೋಗುತ್ತಿದ್ದಾರೆ; ದೀರ್ಘ ಪ್ರಯಾಣದಿಂದಾಗಿ ಆಯಾಸಗೊಂಡಿದ್ದಾರೆ. ಆದರೆ ಮುಖದಲ್ಲಿ ತ್ಯಾಗ ವೈರಾಗ್ಯಗಳ ದೀಪ್ತಿ ಬೆಳಗುತ್ತಿದೆ. ಆ ಊರಿನ ಒಬ್ಬ ಪ್ರಮುಖ ನಾಗರಿಕನಾದ ಕುಮಾರ್ ನಿತ್ಯಾನಂದ ಸಿಂಗ್ ಎಂಬಾತ ಅವರನ್ನು ಕಂಡು ಒಡನೆಯೇ ಆಕರ್ಷಿತನಾದ. ಅವರು ಸಾಧಾರಣ ಬೈರಾಗಿಗಳಂತಲ್ಲ ಎನ್ನುವುದನ್ನು ಆತ ಸ್ಪಷ್ಟವಾಗಿ ಕಂಡ. ಸ್ವಾಮಿಗಳ ಬಳಿಗೆ ಬಂದು ನಮಸ್ಕರಿಸಿ, ಸ್ವಲ್ಪ ಸಂಭಾಷಣೆ ನಡೆಸಿದ. ಸ್ವಾಮೀಜಿಯ ವಾಗ್ವೈಖರಿಯನ್ನು ಕಂಡಮೇಲಂತೂ ಅವರು ಅಸಾಮಾನ್ಯ ವ್ಯಕ್ತಿಗಳೆನ್ನುವುದು ಇನ್ನಷ್ಟು ಖಚಿತವಾಯಿತು. ಬಳಿಕ ಇಬ್ಬರನ್ನೂ ತನ್ನ ಪರಿಚಿತನಾದ ಮನ್ಮಥನಾಥ ಚೌಧರಿ ಎಂಬವನ ಮನೆಗೆ ಕರೆದುಕೊಂಡು ಬಂದ. ಇದೇ ಸಮಯದಲ್ಲಿ ಅವನ ಮನೆಯಲ್ಲಿ ಮಥುರಾನಾಥ ಸಿನ್ಹ ಎಂಬವನು ಅತಿಥಿಯಾಗಿ ಉಳಿದುಕೊಂಡಿದ್ದ. ವೃತ್ತಿಯಿಂದ ಈತ ವಕೀಲ; ಧಾರ್ಮಿಕ ವಿಚಾರಗಳಲ್ಲಿ ಸಾಕಷ್ಟು ತಿಳಿವಳಿಕೆಯಿದ್ದವನು. ಈ ಇಬ್ಬರು ಸ್ವಾಮಿಗಳನ್ನು ಕಂಡಕೂಡಲೇ ಅವನು ಅವರತ್ತ ಸೆಳೆಯಲ್ಪಟ್ಟ. ಮಥುರಾನಾಥ ಈ ಹಿಂದೆಯೇ ಬ್ರಾಹ್ಮಸಮಾಜದಲ್ಲಿ ಸ್ವಾಮೀಜಿಯನ್ನು ನೋಡಿದ್ದ—ಅವರು ಯುವಕ ನರೇಂದ್ರನಾಗಿದ್ದಾಗ. ಈತ ಅವರೊಡನೆ ಸಾಹಿತ್ಯ, ತತ್ತ್ವಶಾಸ್ತ್ರ ಹಾಗೂ ಧರ್ಮದ ಕುರಿತಾಗಿ ಕೆಲಕಾಲ ಸಂಭಾಷಿಸಿದ. ಜ್ಞಾನ ಹಾಗೂ ಆಧ್ಯಾತ್ಮಿಕತೆ ಅವರ ಉಸಿರಿನಲ್ಲೇ ತುಂಬಿಹೋಗಿರುವಂತೆ ಆತನಿಗೆ ಭಾಸವಾಯಿತು. ಅವರ ಪ್ರತಿಯೊಂದು ಭಾವನೆಯ ಹಿಂದೆಯೂ ತೀವ್ರ, ನಿಸ್ವಾರ್ಥ ದೇಶಪ್ರೇಮ ತುಂಬಿರುವುದನ್ನು ಆತ ಕಂಡುಕೊಂಡ.

ಈ ಇಬ್ಬರು ಸ್ವಾಮಿಗಳನ್ನು ಕುಮಾರ್ ನಿತ್ಯಾನಂದ ಸಿಂಗ್ ತನ್ನ ಮನೆಗೆ ಕರೆತಂದಾಗ, ಅವರನ್ನು ಕಂಡ ಮನ್ಮಥನಾಥ ಚೌಧರಿ ಅವರನ್ನು ಯಾರೋ ಭಿಕ್ಷುಕ ಸಂನ್ಯಾಸಿಗಳು ಎಂದು ಭಾವಿಸಿ ಅವರ ಕಡೆಗೆ ಹೆಚ್ಚು ಗಮನ ಕೊಟ್ಟಿರಲಿಲ್ಲ. ಆ ದಿನ ಮಧ್ಯಾಹ್ನದ ಊಟವಾದ ಮೇಲೆ ಎಲ್ಲರೂ ಕುಳಿತುಕೊಂಡಿದ್ದರು. ಆಗ ಈ ಮನ್ಮಥಬಾಬು ಸ್ವಾಮಿಗಳನ್ನು ಅವರಷ್ಟಕ್ಕೆ ಬಿಟ್ಟು ತಾನು ಬೌದ್ಧಧರ್ಮದ ಕುರಿತಾದ ಒಂದು ಇಂಗ್ಲಿಷ್ ಪುಸ್ತಕವನ್ನು ಓದುತ್ತ ಕುಳಿತುಬಿಟ್ಟ. ಓದು ಬರಹವಿಲ್ಲದ ಈ ಸಂನ್ಯಾಸಿಗಳೊಂದಿಗೆ ಏನು ಮಾತು ಎಂಬುದು ಅವನ ಭಾವನೆ. ಸ್ವಲ್ಪ ಹೊತ್ತಾದ ಮೇಲೆ ಸ್ವಾಮೀಜಿ ಅವನನ್ನು, "ನೀವು ಓದುತ್ತಿರುವ ಪುಸ್ತಕ ಯಾವುದದು?" ಎಂದು ಕೇಳಿದರು. ಆಗ ಅವನು ಆ ಪುಸ್ತಕದ ಶಿರೋನಾಮೆಯನ್ನು ಹೇಳಿ, ಬಳಿಕ ಕೇಳಿದ: "ನಿಮಗೆ ಇಂಗ್ಲಿಷ್ ಬರುತ್ತದೆಯೆ?" ಎಂದು. "ಏನೋ ಸ್ವಲ್ಪ ಮಟ್ಟಿಗೆ" ಎಂದರು ಸ್ವಾಮೀಜಿ. ಈಗ ಆತ ಅವರೊಂದಿಗೆ ಬೌದ್ಧ ತತ್ತ್ವಗಳ ಮೇಲೆ ಸಂಭಾಷಣೆ ಪ್ರಾರಂಭಿಸಿದ. ಸ್ವಲ್ಪ ಹೊತ್ತಿನಲ್ಲೇ ಅವನಿಗೆ ಅರಿವಾಯಿತು—ಸ್ವಾಮೀಜಿ ತನಗಿಂತ ಸಾವಿರ ಪಾಲು ಹೆಚ್ಚು ತಿಳಿದವರು ಎಂದು. ಅವರು ಹಲವಾರು ಇಂಗ್ಲಿಷ್ ಪುಸ್ತಕಗಳಿಂದ ಉದಾಹರಿಸಿ ನಿರರ್ಗಳವಾಗಿ ಮಾತನಾಡುತ್ತಿದ್ದಂತೆ ಮನ್ಮಥಬಾಬು ಹಾಗೂ ಮಥುರಾನಾಥರಿಬ್ಬರೂ ಬೆಕ್ಕಸಬೆರಗಾಗಿ ಕಿವಿಗೊಟ್ಟು ಆಲಿಸಿದರು. ಇಂತಹವರು ಅತಿಥಿಗಳಾಗಿ ಬಂದಿರುವುದು ತಮ್ಮ ಅದೃಷ್ಟವಿಶೇಷ ಎಂದರಿತ ಮನ್ಮಥನಾಥ, ಅವರನ್ನು ಕೆಲದಿನ ತಮ್ಮ ಮನೆಯಲ್ಲಿ ವಿಶ್ರಮಿಸಿ ಮುಂದುವರಿಯಬೇಕೆಂದು ಒತ್ತಾಯಿಸಿ ಒಪ್ಪಿಸಿದ.

ಮನ್ಮಥನಾಥ ಬ್ರಾಹ್ಮಸಮಾಜದ ಕಟ್ಟಾ ಅನುಯಾಯಿಯಾಗಿದ್ದ. ಹಿಂದೂ ಧರ್ಮದ ತತ್ತ್ವಗಳನ್ನು ಅರಿತುಕೊಳ್ಳಲಾಗದೆ, ಅವುಗಳಿಂದ ವಿಮುಖನಾಗಿದ್ದ. ಸ್ವಾಮೀಜಿ ಅವನಿಗೆ ಹಿಂದೂಧರ್ಮದ ಹಲವಾರು ಅಂಶಗಳನ್ನು ತಿಳಿಸಿಕೊಟ್ಟು ಅವನ ಕಣ್ಣುತೆರೆಸಿದರು. ಆತ ಈಗ ನಿಜವಾದ ಅರ್ಥದಲ್ಲಿ ಒಬ್ಬ ಹಿಂದುವಾದ.

ಮತ್ತೊಂದು ದಿನ, ಯೋಗ–ಆಧ್ಯಾತ್ಮಿಕ ಸಾಧನೆ ಇವುಗಳ ಪ್ರಸ್ತಾಪ ಬಂದಿತು. ಮನ್ಮಥನಾಥ, ಪ್ರಸಿದ್ಧ ತತ್ತ್ವಜ್ಞಾನಿಯೂ ಸಮಾಜ ಸುಧಾರಕರೂ ಆದ ಸ್ವಾಮಿ ದಯಾನಂದ ಸರಸ್ವತಿಯವರಿಂದ ಆದಾಗಲೇ ಈ ವಿಷಯವಾಗಿ ಶಿಕ್ಷಣ ಪಡೆದಿದ್ದ. ಅಂದು ಸ್ವಾಮೀಜಿ ಹೇಳಿದ ವಿಷಯುಗಳು ಅವನು ಈಗಾಗಲೇ ಕೇಳಿ ತಿಳಿದಿದ್ದ ವಿಷಯಗಳಿಗೆ ಅನುಗುಣವಾಗಿದ್ದುವು. ಅಲ್ಲದೆ ಅದಕ್ಕಿಂತಲೂ ಹೆಚ್ಚಿನ ಹಲವಾರು ವಿಚಾರಗಳನ್ನು ಅವರಿಂದ ಕೇಳಿದ. ಇವರೊಬ್ಬರು ಅಸಾಧಾರಣ ವ್ಯಕ್ತಿಯೇ ನಿಜ ಎಂಬುದು ಅವನಿಗೆ ದೃಢವಾಯಿತು.

ಬಳಿಕ ಸ್ವಾಮೀಜಿಯ ಸಂಸ್ಕೃತಜ್ಞಾನವನ್ನು ಪರೀಕ್ಷೆ ಮಾಡಲು ಅವನು ತನ್ನ ಬಳಿಯಿದ್ದ ಉಪನಿಷತ್ತುಗಳನ್ನೆಲ್ಲ ಹೊರತೆಗೆದು, ಅವುಗಳಲ್ಲಿನ ಕೆಲವು ಅತ್ಯಂತ ಕ್ಲಿಷ್ಟವಾದ ಶ್ಲೋಕಗಳ ಬಗ್ಗೆ ಕೆದಕಿ ಪ್ರಶ್ನಿಸಿದ. ಸ್ವಾಮೀಜಿ ಆ ಅಂಶಗಳ ಮೇಲೆ ಹೊಸ ಬೆಳಕನ್ನು ಬೀರುವಂತಹ ಉತ್ತರಗಳನ್ನು ನೀಡಿದಾಗ ಅವರ ಅಸಾಮಾನ್ಯ ಪಾಂಡಿತ್ಯವನ್ನೂ ಸಂಸ್ಕೃತ ಪರಿಜ್ಞಾನವನ್ನೂ ಕಂಡು ನಿಬ್ಬೆರಗಾದ. ಅಲ್ಲದೆ, ಅವರು ಉಪನಿಷತ್ತುಗಳ ಶ್ಲೋಕಗಳನ್ನು ಸುಮಧುರವಾಗಿ, ನಿರರ್ಗಳವಾಗಿ ಉಚ್ಚರಿಸುವ ಕ್ರಮವನ್ನು ಕಂಡು ಅವನಿಗೆ ಆನಂದ, ಆಶ್ಚರ್ಯ. ಹೀಗೆ ಸ್ವಾಮೀಜಿಗೆ ಇಂಗ್ಲಿಷ್, ಸಂಸ್ಕೃತ ಹಾಗೂ

ಯೋಗದ ಮೇಲಿರುವ ಪ್ರಭುತ್ವವನ್ನು ಕಂಡು ಅವರೆಡೆಗೆ ತೀವ್ರವಾಗಿ ಆಕರ್ಷಿತನಾಗಿ ಬಿಟ್ಟ. ಮತ್ತು, ತನ್ನ ಮನೆಯನ್ನು ಬಿಟ್ಟು ಬೇರೆಲ್ಲಿಗೂ ಹೋಗಲು ಅವರನ್ನು ಬಿಡಲೇ ಬಾರದು ಎಂದು ನಿರ್ಧರಿಸಿ, ಬಹಳವಾಗಿ ಒತ್ತಾಯಿಸಲಾರಂಭಿಸಿದ!

ಒಂದು ದಿನ ಸ್ವಾಮೀಜಿ ತಮ್ಮಷ್ಟಕ್ಕೆ ತಾವೇ ಹಾಡೊಂದನ್ನು ಗುನುಗಿಕೊಳ್ಳು ತ್ತಿದ್ದರು. ಇದನ್ನು ಗಮನಿಸಿದ ಮನ್ಮಥನಾಥ, "ನಿಮಗೆ ಹಾಡಲು ಗೊತ್ತಿದೆಯೆ?" ಎಂದು ಕೇಳಿದ. "ಏನೋ ಅಲ್ಪ ಸ್ವಲ್ಪ" ಎಂದರು ಸ್ವಾಮೀಜಿ. ಮನೆಯಲ್ಲಿದ್ದವರೆಲ್ಲರ ಬಲವಂತಕ್ಕೆ ಸ್ವಾಮೀಜಿ ಹಾಡಿದರು. ಅದನ್ನು ಕೇಳಿದವರೆಲ್ಲ ಮೋಡಿಗೊಳಗಾದವರಂತೆ ಕುಳಿತರು. ಇವರು ಇಂಗ್ಲಿಷ್-ಸಂಸ್ಕೃತ ಭಾಷೆಗಳಲ್ಲಿ, ಯೋಗ-ಶಾಸ್ತ್ರ ವಿಚಾರಗಳಲ್ಲಿ ಎಂತಹ ಪಂಡಿತರೋ ಸಂಗೀತದಲ್ಲೂ ಅಷ್ಟೇ ಪ್ರತಿಭಾವಂತರು ಎಂಬುದನ್ನು ಕಂಡು ಕೊಂಡ ಮನ್ಮಥನಾಥ ಪರಮಾಶ್ಚರ್ಯಗೊಂಡ. ಈ ಸವಿಯನ್ನು ಇತರರಿಗೂ ಉಣ ಬಡಿಸಬೇಕೆಂಬ ಆಶಯದಿಂದ, "ಸ್ವಾಮೀಜಿ, ನೀವು ಒಪ್ಪಿಗೆ ಕೊಡುವುದಾದರೆ, ಈ ಊರಿನ ಕೆಲವು ಸಂಗೀತಗಾರರನ್ನು ಇಲ್ಲಿಗೆ ಕರೆಸುತ್ತೇನೆ. ನೀವು ದಯವಿಟ್ಟು ಹಾಡಬೇಕು" ಎಂದು ವಿನಂತಿಸಿಕೊಂಡ. ಸ್ವಾಮೀಜಿ ಅದಕ್ಕೆ ಸಮ್ಮತಿಸಿದರು. ಮನ್ಮಥ ನಾಥ ಬಹಳ ಸಂತೋಷಪಟ್ಟ. ಹಲವಾರು ಸಂಗೀತಗಾರರನ್ನು ಆಹ್ವಾನಿಸಿದ. ಅವರಲ್ಲಿ ಕೆಲವರಂತೂ ಉಸ್ತಾದರು, ಅಲ್ಲಿನ ಅತ್ಯಂತ ನಿಪುಣ ಸಂಗೀತಗಾರರು. ಸಂಜೆಯ ವೇಳೆಗೆ ಕಾರ್ಯಕ್ರಮ ಪ್ರಾರಂಭವಾಯಿತು. ಸ್ವಾಮೀಜಿ ತಮ್ಮ ದಿವ್ಯ ಮಧುರ ಕಂಠ ದಿಂದ ಹಾಡಲಾರಂಭಿಸಿದರು. ಮನ್ಮಥನಾಥ ಭಾವಿಸಿದ್ದ—ರಾತ್ರಿ ಸುಮಾರು ಒಂಬತ್ತು-ಹತ್ತು ಗಂಟೆಯವರೆಗೂ ಸ್ವಾಮೀಜಿ ಹಾಡಬಹುದು ಎಂದು. ಆದ್ದರಿಂದ ಆಹ್ವಾನಿತರಿಗೆ ಊಟದ ವ್ಯವಸ್ಥೆಯನ್ನೇನೂ ಮಾಡಿರಲಿಲ್ಲ. ಆದರೆ ಗಂಟೆ ಹತ್ತಾಯಿತು, ಹನ್ನೊಂದಾಯಿತು; ಸ್ವಾಮೀಜಿ ಹಾಡುವುದನ್ನು ನಿಲ್ಲಿಸಲೇ ಇಲ್ಲ. ಬದಲಾಗಿ ಇನ್ನಷ್ಟು ಹೆಚ್ಚಿನ ಭಕ್ತಿಭಾವಾವೇಶದಿಂದ ಹಾಡುತ್ತಲೇ ಇದ್ದಾರೆ! ಸಂಗೀತವನ್ನು ಕೇಳುತ್ತಿದ್ದವ ರೆಲ್ಲ ಹಸಿವು-ಬಾಯಾರಿಕೆಯ ನೆನಪೇ ಇಲ್ಲದೆ ಕುಳಿತು ಕೇಳುತ್ತಿದ್ದಾರೆ! ಒಬ್ಬರಾದರೂ ಕುಳಿತಲ್ಲಿಂದ ಜರುಗಲಿಲ್ಲ. ಕೊನೆಗೆ ಬೆಳಗಿನ ಜಾವ ಮೂರು ಗಂಟೆಯ ಹೊತ್ತಿಗೆ ಸ್ವಾಮೀಜಿ ಹಾಡುವುದನ್ನು ನಿಲ್ಲಿಸಿದರು. ಆದರೆ ಅವರು ಹಾಡನ್ನು ನಿಲ್ಲಿಸಿದ್ದು ತಮಗೆ ಆಯಾಸವಾಯಿತೆಂದಲ್ಲ, ತಬಲಾ ಪಕ್ಕವಾದ್ಯ ನುಡಿಸುತ್ತಿದ್ದ ಕೈಲಾಸಬಾಬು ಎಂಬ ವನು, ಕೈಸೋತು ಮರಗಟ್ಟಿಹೋದಂತಾಗಿ ತಬಲಾ ನುಡಿಸುವುದನ್ನು ನಿಲ್ಲಿಸಿದ್ದರಿಂದ! ವಿಸ್ಮಯಗೊಂಡ ಮನ್ಮಥಬಾಬು ಉದ್ಗರಿಸುತ್ತಾನೆ: "ಇಂತಹ ಅತಿಮಾನುಷ ಶಕ್ತಿ ಯನ್ನು ನಾನು ಈ ಹಿಂದೆ ಕಂಡಿರಲಿಲ್ಲ; ಮುಂದೆ ಕಾಣಬಲ್ಲೆನೆಂಬ ನಿರೀಕ್ಷೆಯೂ ಇಲ್ಲ!" ಸ್ವಾಮೀಜಿಯ ಕೀರ್ತಿ ಊರಲ್ಲೆಲ್ಲ ಹರಡಿತು. ಮರುದಿನ ಸಂಜೆ, ಹಿಂದಿನ ದಿನ ಬಂದಿದ್ದವರಲ್ಲದೆ ಇನ್ನೂ ಹಲವಾರು ಜನ ಯಾವ ಆಮಂತ್ರಣವೂ ಇಲ್ಲದೆ ತಾವಾಗಿಯೇ ಬಂದುಬಿಟ್ಟರು. ತಬಲಾ ನುಡಿಸುವವನೂ ಬಂದಿದ್ದ. ಆದರೆ ಅಂದು ಸ್ವಾಮೀಜಿ ಹಾಡಲಿಲ್ಲ. ಎಲ್ಲರಿಗೂ ಬಹಳ ನಿರಾಶೆಯಾಯಿತು. ಸ್ವಾಮೀಜಿ ಭಾವ ದುಂಬಿಬಂದಾಗ, ಸ್ವಸಂತೋಷಕ್ಕಾಗಿ ಹಾಡುವವರೇ ಹೊರತು ಪ್ರತಿಭಾಪ್ರದರ್ಶನಕ್ಕಾಗಿ ಹಾಡುವವರಲ್ಲ.

ಒಮ್ಮೆ ಮನ್ಮಥನಾಥ, "ಸ್ವಾಮೀಜಿ, ಈ ಊರಿನ ಶ್ರೀಮಂತ ವ್ಯಕ್ತಿಗಳನ್ನು ನಿಮಗೆ ಪರಿಚಯಿಸಿಕೊಡುತ್ತೇನೆ. ನೀವು ಒಪ್ಪುವುದಾದರೆ ನನ್ನ ಸಾರೋಟಿನಲ್ಲೇ ಹೋಗಿ

ಅವರನ್ನು ಭೇಟಿ ಮಾಡೋಣ" ಎಂದು ಸಲಹೆ ಮಾಡಿದ. ಆಗ ಸ್ವಾಮೀಜಿ ಆ ಸಲಹೆಯನ್ನು ತಿರಸ್ಕರಿಸಿ, ಕಡ್ಡಿ ತುಂಡುಮಾಡಿದಂತೆ ಹೇಳುತ್ತಾರೆ: "ಶ್ರೀಮಂತರನ್ನು ಹುಡುಕಿಕೊಂಡು ಹೋಗಿ ಭೇಟಿ ಮಾಡುವುದು ಸಂನ್ಯಾಸಿಯ ಧರ್ಮವಲ್ಲ!" ಇಂತಹ ಉತ್ತರವನ್ನು ಆತ ನಿರೀಕ್ಷಿಸಿರಲಿಲ್ಲ. ಅವರ ಪ್ರಖರ ವೈರಾಗ್ಯಬುದ್ಧಿ ಅವನ ಮೇಲೆ ಆಳವಾದ ಪರಿಣಾಮವನ್ನುಂಟುಮಾಡಿತು. ಕೆಲವೇ ದಿನಗಳ ಸ್ವಾಮೀಜಿಯ ಸತ್ಸಂಗದಲ್ಲಿ ಮನ್ಮಥನಾಥ ಕಲಿತ ಪಾಠಗಳು ಹಲವಾರು; ಪಡೆದ ಆಧ್ಯಾತ್ಮಿಕ ಮಾರ್ಗದರ್ಶನ ಅಮೂಲ್ಯ.

ಆತ ಸ್ವಭಾವತಃ ಆಧ್ಯಾತ್ಮಿಕ ಜೀವನದತ್ತ ಒಲವಿದ್ದವನು. ಬಾಲ್ಯದಿಂದಲೂ ಅವನಿಗೆ ಏಕಾಂತವಾಸದಲ್ಲಿದ್ದುಕೊಂಡು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗುವ ಇಚ್ಛೆಯಿತ್ತು. ಈಗ ಸ್ವಾಮೀಜಿಯ ಸಂಪರ್ಕಕ್ಕೆ ಬಂದಮೇಲೆ ಅವನ ಈ ಆಕಾಂಕ್ಷೆ ಪ್ರಬಲವಾಯಿತು. ಆದ್ದರಿಂದ ತನ್ನದೊಂದು ಸಲಹೆಯನ್ನು ಅವರ ಮುಂದಿಟ್ಟ: "ಸ್ವಾಮೀಜಿ, ನಾವಿಬ್ಬರೂ ಬೃಂದಾವನಕ್ಕೆ ಹೋಗಿದ್ದುಬಿಡೋಣ. ನಮ್ಮಿಬ್ಬರ ಹೆಸರಿನಲ್ಲೂ ಮುನ್ನೂರು-ಮುನ್ನೂರು ರೂಪಾಯಿಗಳನ್ನು ಅಲ್ಲಿ ಗೋವಿಂದನ ದೇವಸ್ಥಾನದಲ್ಲಿ ಮೂಲಧನವಾಗಿಟ್ಟರೆ, ಜೀವಮಾನಪರ್ಯಂತ ಗೋವಿಂದನ ಪ್ರಸಾದವನ್ನು ಪಡೆಯಬಹುದು. ಹೀಗೆ ನಾವು ಯಾರಿಗೂ ಹೊರೆಯಾಗದ ರೀತಿಯಲ್ಲಿ, ಪವಿತ್ರ ಯಮುನಾ ನದಿಯ ತೀರದ ನಿರ್ಜನ ಪ್ರದೇಶದಲ್ಲಿ ಹಗಲಿರುಳೂ ಜಪ-ಧ್ಯಾನಗಳಲ್ಲಿ ನಿರತರಾಗಿದ್ದುಬಿಡೋಣ." ಅದಕ್ಕೆ ಸ್ವಾಮೀಜಿ ಹೇಳುತ್ತಾರೆ: "ನಿಜ ನಿಜ; ಆ ತರಹದ ಮನೋಭಾವದವರಿಗೆ ಈ ಯೋಜನೆ ಬಹಳ ಒಳ್ಳೆಯದೆ. ಆದರೆ ಎಲ್ಲರಿಗೂ ಅಲ್ಲ" ಎಂದು. 'ಎಲ್ಲರಿಗೂ ಅಲ್ಲ' ಎಂದರೆ, 'ತಮ್ಮಂಥವರಿಗಂತೂ ಅಲ್ಲ' ಎಂಬುದು ಸ್ವಾಮೀಜಿಯ ಇಂಗಿತ. ಪ್ರತಿಯೊಬ್ಬ ಸಾಧಕನ ಮನೋಭಾವ, ಹಾಗೂ ಆ ಮನೋಭಾವಕ್ಕೆ ಅನುಗುಣವಾಗಿ ಆತ ಆರಿಸಿಕೊಳ್ಳುವ ಸಾಧನಾ ವಿಧಾನಗಳು ಬೇರೆಬೇರೆ. ಅದರಲ್ಲೂ ಮುಂದೆ ವಿಶ್ವದಲ್ಲೊಂದು ಕ್ರಾಂತಿಯನ್ನೇ ಉಂಟುಮಾಡಬೇಕಾಗಿರುವ ಸ್ವಾಮೀಜಿ, ಸಾಧನೆಯ ಹೆಸರಿನಲ್ಲಿ ಯಾವುದೋ ನಿರ್ಜನ ಪ್ರದೇಶದಲ್ಲಿ ಜೀವಮಾನ ಪರ್ಯಂತ ಕುಳಿತಿರಲು ಸಾಧ್ಯವೆ?

ಭಾಗಲ್ಪುರದಲ್ಲಿದ್ದ ಅವಧಿಯಲ್ಲಿ ಸ್ವಾಮೀಜಿ ಸಮೀಪದ ಬರಾರಿ ಮತ್ತು ನಾಥ ನಗರ ಎಂಬ ಎರಡು ಸ್ಥಳಗಳಿಗೆ ಭೇಟಿ ನೀಡಿದರು. ಬರಾರಿಯಲ್ಲಿ ಅವರು ಪಾರ್ವತೀ ಚರಣ ಮುಖ್ಯೋಪಾಧ್ಯಾಯ ಎಂಬ ಸತ್ಪುರುಷನನ್ನು ಸಂದರ್ಶಿಸಿದರು. ನಾಥ ನಗರದಲ್ಲಿ ಒಂದು ಪ್ರಸಿದ್ಧ ಜೈನ ದೇವಾಲಯವಿದೆ. ಸ್ವಾಮೀಜಿ ಅಲ್ಲಿಗೆ ಭೇಟಿನೀಡಿ, ಅಲ್ಲಿನ ಆಚಾರ್ಯರೊಂದಿಗೆ ಜೈನಧರ್ಮದ ಕುರಿತಾಗಿ ಸಂಭಾಷಣೆ ನಡೆಸಿದರು.

ಭಾಗಲ್ಪುರದಲ್ಲಿ ಸ್ವಾಮೀಜಿಯ ಹೆಸರು ಹರಡಿದಾಗ, ಅಲ್ಲಿನ ಬ್ರಾಹ್ಮಣವರ್ಗದ ಒಂದು ಗುಂಪಿನವರು ತಿಳಿದುಕೊಳ್ಳಲು ಇಚ್ಛಿಸಿದ ಒಂದು 'ಮುಖ್ಯ' ವಿಷಯವೆಂದರೆ, 'ಅವರು ಯಾವ ಜಾತಿಗೆ ಸೇರಿದವರು?' ಎಂಬುದು. ಸ್ವಾಮೀಜಿ ಹುಟ್ಟಿನಿಂದ ಬ್ರಾಹ್ಮಣರಲ್ಲ, ಕ್ಷತ್ರಿಯರು ಎಂದು ಕಂಡುಕೊಂಡ ಕೆಲವರು ತಕ್ಷಣ ಟೀಕೆಮಾಡಿದರು—ಬ್ರಾಹ್ಮಣರಲ್ಲದವರು ಸಂನ್ಯಾಸ ತೆಗೆದುಕೊಂಡದ್ದು ಸರಿಯಲ್ಲ, ಎಂದು. ಈ ಟೀಕೆ ಮನ್ಮಥನಾಥನ ಕಿವಿಗೆ ಬಿತ್ತು. ಜುಗುಪ್ಸೆಗೊಂಡ ಆತ ಹೇಳುತ್ತಾನೆ: "ಒಬ್ಬ ಮನುಷ್ಯ ಸಂತನಾಗಲು, ಭಕ್ತನಾಗಲು ಅವನ ಜಾತಿ ಅಡ್ಡಿಯಾಗುವುದಿಲ್ಲ ಎಂಬುದು

ಅವರಿಗೇನು ಗೊತ್ತು? ಅಥವಾ, ಸ್ವಾಮೀಜಿಯ ಯೋಗ್ಯತೆ ಏನೆಂಬುದಾದರೂ ಅವರಿಗೆ ಗೊತ್ತೆ? ಆದರೆ, ಒಬ್ಬ ಸಂನ್ಯಾಸಿಗೆ ಅವನು ಧರಿಸಿರುವ ಕಾಷಾಯವಸ್ತ್ರವೊಂದೇ ಯೋಗ್ಯತೆ ಎನ್ನುವುದಾದರೆ, ಅವನ ಜಾತಿ ಯಾವುದು ಎಂದು ನೋಡುವುದು ಸರಿಯೇ! ಇಲ್ಲದೆಹೋದರೆ ಈ ಬ್ರಾಹ್ಮಣರು ಒಬ್ಬ ಸಂನ್ಯಾಸಿಯನ್ನು ಆತ ಜಾತಿಯಿಂದ ಬ್ರಾಹ್ಮಣ ಎಂಬ ಕಾರಣಕ್ಕಲ್ಲದೆ ಇನ್ನಾವ ದೃಷ್ಟಿಯಿಂದ ಅವನನ್ನು ಪೂಜಿಸಿ ಸಮಾಧಾನಪಟ್ಟುಕೊಳ್ಳಲು ಸಾಧ್ಯ! ಸ್ವಾಮೀಜಿ ಬ್ರಾಹ್ಮಣರಲ್ಲದಿರಬಹುದು; ಆದರೆ ಅವರು ಬ್ರಹ್ಮಜ್ಞಾನಿಗಳು. ಆದ್ದರಿಂದ ಅವರ ಬ್ರಾಹ್ಮಣ್ಯವು ಜಾತಿಬ್ರಾಹ್ಮಣರ ಬ್ರಾಹ್ಮಣ್ಯಕ್ಕಿಂತ ಹತ್ತುಪಾಲು ಹೆಚ್ಚು ಶ್ರೇಷ್ಠವಾದದ್ದು! ಇಷ್ಟರಮೇಲೆ, ಸ್ವಾಮೀಜಿಯಲ್ಲಿ ನಿಜವಾದ ಸಾಧುತ್ವ ಹಾಗೂ ದೈವತ್ವ ಕಂಡುಬರುತ್ತಿರುವಾಗ ಯಾರು ತಾನೆ ಅವರನ್ನು ಪೂಜಿಸದಿರಲು ಸಾಧ್ಯ?''

ಸ್ವಾಮೀಜಿ ಭಾಗಲ್ಪುರಕ್ಕೆ ಬಂದು ಆದಾಗಲೇ ಐದಾರು ದಿನಗಳಾಗಿವೆ. ಇನ್ನು ಅಲ್ಲಿ ನಿಲ್ಲಲಾರರು. ಏಕೆಂದರೆ, ಅವರು ನೇರವಾಗಿ ಹಿಮಾಲಯಕ್ಕೆ ಹೊರಟವರು. ಆದರೆ ಮನ್ಮಥನಾಥ ಅವರನ್ನು ಸುಲಭವಾಗಿ ಬಿಟ್ಟುಕೊಡುವವನಲ್ಲ. ಅವರಿಂದ ದೂರವಾಗುವ ಆಲೋಚನೆಯೇ ಅವನಿಗೆ ಸಹ್ಯವಾಗುತ್ತಿಲ್ಲ! ಆದ್ದರಿಂದ ಒಂದು ದಿನ ಆತ ಯಾವುದೋ ಕಾರ್ಯನಿಮಿತ್ತವಾಗಿ ಹೊರಗೆ ಹೋಗಿದ್ದ ಸಮಯ ನೋಡಿಕೊಂಡು ಸ್ವಾಮೀಜಿ ಮನೆಯಲ್ಲಿದ್ದವರಿಂದ ಬೀಳ್ಕೊಂಡು ಹೊರಟೇಬಿಟ್ಟರು. ಮನೆಗೆ ಹಿಂದಿರುಗಿದಮೇಲಷ್ಟೇ ಅವನಿಗೆ ಇಬ್ಬರು ಸ್ವಾಮಿಗಳೂ ಹೊರಟುಹೋದರು ಎಂಬುದು ತಿಳಿಯಿತು; ತುಂಬ ದುಃಖವಾಯಿತು. ತಕ್ಷಣ ಊರಲ್ಲೆಲ್ಲ ಹುಡುಕಿಸಿ ನೋಡಿದ; ಎಲ್ಲೂ ಅವರ ಸುಳಿವೇ ಸಿಗಲಿಲ್ಲ. ಆದರೂ ಸ್ವಾಮೀಜಿಯನ್ನು ಕಾಣಲೇಬೇಕೆಂಬ ಅವನ ಇಚ್ಛೆ ಕಡಿಮೆಯಾಗಲಿಲ್ಲ. ಒಮ್ಮೆ ಮಾತಿನ ಸಂದರ್ಭದಲ್ಲಿ, ತಾವು ಬದರಿಕಾಶ್ರಮದ ಕಡೆಗೆ ಹೋಗುತ್ತಿರುವುದಾಗಿ ಸ್ವಾಮೀಜಿ ಅವನಿಗೆ ಹೇಳಿದ್ದರು. ಆದ್ದರಿಂದ ಆತ ಅವರನ್ನು ಅರಸುತ್ತ ಆಲ್ಮೋರದವರೆಗೂ ಹೋದ. ಆದರೆ ಅಷ್ಟೊತ್ತಿಗಾಗಲೇ ಅವರು ಅಲ್ಲಿಂದಲೂ ಹೊರಟುಬಿಟ್ಟಿದ್ದರು. ಅವರು ಈಗಾಗಲೇ ಹಿಮಾಲಯದಲ್ಲಿ ಬಹಳ ದೂರ ಹೋಗಿದ್ದಿರಬೇಕು ಎಂದು ಊಹಿಸಿ ಮನ್ಮಥನಾಥ ನಿರಾಶನಾದ. 'ನಿಜ, ಎಲ್ಲ ನನ್ನಿಚ್ಛೆಯಂತೆಯೇ ನಡೆಯಬೇಕು ಎಂದು ನಾನಾದರೂ ಏಕೆ ಯೋಚಿಸಬೇಕು? ಅಲ್ಲದೆ ಇಡೀ ವಿಶ್ವವೇ ಸ್ವಾಮೀಜಿಯ ಕಾರ್ಯಕ್ಷೇತ್ರವಾಗಿರುವಾಗ ಅವರು ನನ್ನ ಮನೆಯಲ್ಲೇ ಕೂಪಮಂಡೂಕದಂತೆ ಏಕೆ ಕುಳಿತಿರಬೇಕು?' ಎಂದು ಆಲೋಚಿಸಿ ಸಮಾಧಾನ ತಂದುಕೊಂಡು ಹಿಂದಿರುಗಿದ.

ಭಾಗಲ್ಪುರದಿಂದ ಹೊರಟ ಸ್ವಾಮಿಗಳಿಬ್ಬರೂ ವೈದ್ಯನಾಥ ಕ್ಷೇತ್ರಕ್ಕೆ ಬಂದು ತಲುಪಿದರು. ಇಲ್ಲಿನ ಪ್ರಸಿದ್ಧ ಶಿವ ದೇವಸ್ಥಾನವನ್ನು ಸಂದರ್ಶಿಸಲು ಸ್ವಾಮಿ ಅಖಂಡಾನಂದರು ಇಚ್ಛಿಸಿದ್ದರು. ಇಲ್ಲಿ ಸ್ವಾಮೀಜಿಗೆ ರಾಜನಾರಾಯಣ ಬೋಸನೆಂಬ ಹೆಸರಾಂತ ಬ್ರಾಹ್ಮಸದಸ್ಯನ ಭೇಟಿಯಾಯಿತು. ಈತ ಸಮಾಜ ಸುಧಾರಕ, ರಾಷ್ಟ್ರಪ್ರೇಮಿ. ಇವನಿಗೆ 'ಭಾರತದ ರಾಷ್ಟ್ರೀಯತಾಭಾವದ ಪಿತಾಮಹ'ನೆಂಬ ಗೌರವ ಸಂದಿತ್ತು. ಆದರೆ ಇವನಲ್ಲೊಂದು ವೈಚಿತ್ರ್ಯವಿತ್ತು. ಇವನ ಭಾರತಪ್ರೇಮವೆಂಬುದು ಪಾಶ್ಚಾತ್ಯ ಸಂಸ್ಕೃತಿಯ ಹಾಗೂ ಇಂಗ್ಲಿಷ್ ಭಾಷೆಯ ವಿರುದ್ಧವಾಗಿ ತಿರುಗಿಕೊಂಡಿತ್ತು. ಇಂಗ್ಲಿಷಿನಲ್ಲಿ ಮಾತನಾಡುವುದನ್ನಾಗಲಿ, ಇಂಗ್ಲಿಷ್ ಪದಗಳನ್ನು ಬಳಸುವುದನ್ನಾಗಲಿ ಆತ

ತೀವ್ರವಾಗಿ ಆಕ್ಷೇಪಿಸುತ್ತಿದ್ದ. ಇದು ಹಾಸ್ಯಾಸ್ಪದವಾಗುವಷ್ಟರವರೆಗೆ ಬೆಳೆದಿತ್ತು.

ಸ್ವಾಮೀಜಿಗೆ ರಾಜನಾರಾಯಣನ ಈ ವಿಚಿತ್ರ ನಡವಳಿಕೆಯ ಬಗ್ಗೆ ತಿಳಿದಿತ್ತು. ಆದ್ದರಿಂದ ತಮಗೆ ಇಂಗ್ಲಿಷ್ ಗೊತ್ತಿದೆಯೆಂಬುದು ಅವನಿಗೆ ಸ್ವಲ್ಪವೂ ಅರಿವಾಗದಂತೆ ನೋಡಿಕೊಳ್ಳಬೇಕೆಂದು ಅಖಂಡಾನಂದರಿಗೆ ಮೊದಲೇ ತಿಳಿಸಿದ್ದರು. ಸಂಭಾಷಣೆ ಆರಂಭವಾಯಿತು. ನಿಜಕ್ಕೂ ಆತನೊಂದಿಗಿನ ಸಂಭಾಷಣೆ ಸ್ವಾಮೀಜಿಯ ಪಾಲಿಗೆ ಉಪಯುಕ್ತವಾಗಿತ್ತು. ಭಾರತೀಯತೆಯ ಕುರಿತಾದ ಆತನ ಅನೇಕ ಅಭಿಪ್ರಾಯಗಳು ಅವರಿಗೆ ಸಂಪೂರ್ಣ ಸಮ್ಮತವಾದುವು. ಆದರೆ ಈ ನಡುವೆ ಅಲ್ಲೊಂದು ತಮಾಷೆಯ ಪ್ರಸಂಗವೇರ್ಪಟ್ಟಿತು. ಸ್ವಾಮೀಜಿ ಅಪ್ಪಟ ಬಂಗಾಳಿಯಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದು, ಮಧ್ಯೆ ಒಂದೇ ಒಂದು ಇಂಗ್ಲಿಷ್ ಪದವನ್ನೂ ಪ್ರಯೋಗಿಸದಂತೆ ಎಚ್ಚರ ವಹಿಸಿದರು. ಅದನ್ನು ಕಂಡು ರಾಜನಾರಾಯಣನಿಗೆ, ಈ ಸಂನ್ಯಾಸಿಗಳಿಗೆ ಇಂಗ್ಲಿಷಿನ ಗಂಧವೇ ಇಲ್ಲ ಎಂಬ ಅಭಿಪ್ರಾಯವುಂಟಾಯಿತು. ಆದರೆ ಅವರ ವಾಗ್ವೈಖರಿ ಹಾಗೂ ಬುದ್ಧಿಯ ತೀಕ್ಷ್ಣತೆಯನ್ನು ನೋಡಿ ಆತ ಬಹಳ ಸಂತೋಷಪಟ್ಟ. ಮಾತಿನ ಮಧ್ಯದಲ್ಲಿ ಅವನೇ ಆಕಸ್ಮಿಕವಾಗಿ 'ಪ್ಲಸ್' (Plus) ಎಂಬ ಇಂಗ್ಲಿಷ್ ಪದವನ್ನು ಪ್ರಯೋಗಿಸಿಬಿಟ್ಟ. ತಕ್ಷಣ, ಸ್ವಾಮಿಗಳಿಗೆ ಅದು ಅರ್ಥವಾಗಿರಲಾರದು ಎಂದು ಭಾವಿಸಿ, ತನ್ನ ಬೆರಳುಗಳಲ್ಲಿ 'ಪ್ಲಸ್' ಗುರುತನ್ನು ತೋರಿಸಿ ಹೇಳಿದ. ಏಕೆಂದರೆ 'ಪ್ಲಸ್' ಎಂಬುದರ ಸಮಾನಾರ್ಥದ ಪದ ಬಂಗಾಳಿಯಲ್ಲಿಲ್ಲ. ಆತನ ಒದ್ದಾಟವನ್ನು ಕಂಡು ಸ್ವಾಮಿಗಳಿಬ್ಬರಿಗೂ ತಡೆಯಲಾರದ ನಗು. ಆದರೂ ಈಚೆಗೆ ಬರುವವರೆಗೆ ನಗುವನ್ನು ಹೇಗೋ ಹತ್ತಿಕ್ಕಿಕೊಂಡರು. ಅಖಂಡಾನಂದರಿಗಂತೂ ಗುಟ್ಟನ್ನು ಕಾಪಾಡಿಕೊಳ್ಳಬೇಕಾದರೆ ವಿಪರೀತ ಕಷ್ಟವಾಯಿತು. ಏಕೆಂದರೆ ತಮ್ಮ ಅಚ್ಚುಮೆಚ್ಚಿನ ವಿವೇಕಾನಂದರ ಗುಣಗಾನ ಮಾಡುವುದೆಂದರೆ ಅವರಿಗೆ ಎಲ್ಲಿಲ್ಲದ ಸಂತೋಷ. ಸ್ವಾಮೀಜಿಯವರು ಸ್ವತಃ ಆಂಗ್ಲರಿಗಿಂತ ಸೊಗಸಾದ ಇಂಗ್ಲಿಷ್ ಮಾತನಾಡಬಲ್ಲರು ಎಂಬುದು, ಪಾಪ, ಆ ಮುದುಕನಿಗೆ ಗೊತ್ತಾಗಲೇ ಇಲ್ಲ!

ಆದರೆ ಹಲವಾರು ವರ್ಷಗಳ ಬಳಿಕ ಸ್ವಾಮೀಜಿ ವಿಶ್ವವಿಖ್ಯಾತರಾದ ಮೇಲೆ ರಾಜನಾರಾಯಣ ಬಾಬುವಿಗೆ ತಿಳಿದುಬಂತು—ಇವರೇ ಅಂದು ತಾನು ಭೇಟಿಯಾದ ಸಂನ್ಯಾಸಿ ಎಂದು. ಆಗ ಆತ ಆಶ್ಚರ್ಯಾಘಾತಗೊಂಡು, "ಎಲ ಎಲಾ! ಅಂದು ಅವರು ನನ್ನೊಡನೆ ಅಷ್ಟು ಹೊತ್ತು ಮಾತನಾಡಿದರೂ ಅವರಿಗೆ ಇಂಗ್ಲಿಷ್ ಭಾಷೆ ತಿಳಿದಿರಬಹುದು ಎಂದು ನನಗೆ ಸ್ವಲ್ಪವೂ ಗೊತ್ತಾಗಲೇ ಇಲ್ಲವಲ್ಲ! ಅವರು ನಿಜಕ್ಕೂ ಒಬ್ಬ ಅದ್ಭುತ ವ್ಯಕ್ತಿ" ಎಂದುದ್ಗರಿಸುತ್ತಾನೆ.

ವೈದ್ಯನಾಥದಿಂದ ವಾರಾಣಸಿಗೆ ಬಂದು ತಲುಪಿದ ಸ್ವಾಮಿಗಳು ಪ್ರಮದದಾಸ ಮಿತ್ರರ ಮನೆಯಲ್ಲಿ ಕೆಲವು ದಿನಗಳ ಮಟ್ಟಿಗೆ ಉಳಿದುಕೊಂಡರು. ಈ ಸಮಯದಲ್ಲಿ ಸ್ವಾಮೀಜಿ, ಅವರ ಜೊತೆಯಲ್ಲಿ ಹಲವಾರು ಆಧ್ಯಾತ್ಮಿಕ ವಿಚಾರಗಳ ಕುರಿತಾಗಿ ಗಂಟೆಗಟ್ಟಲೆ ಸಂಭಾಷಿಸಿದರು. ಆದರೆ ಅವರಿಗೆ ತುಷಾರಧವಲಕಾಂತಿಯಿಂದ ಕೂಡಿದ ಹಿಮಾಲಯವನ್ನು ನೋಡುವ ತವಕ. ಆದ್ದರಿಂದ ಕೆಲದಿನಗಳಲ್ಲೇ ವಾರಾಣಸಿಯಿಂದ ಹೊರಟುನಿಂತರು. ಹೊರಡುವ ಸಮಯದಲ್ಲಿ ಪ್ರಮದಬಾಬು ಹಾಗೂ ಇನ್ನಿತರರ ಸಮ್ಮುಖದಲ್ಲಿ ಸ್ವಾಮೀಜಿ ಹೇಳುತ್ತಾರೆ: "ಈಗ ನಾನು ಕಾಶಿಯನ್ನು ಬಿಟ್ಟು ಹೊರಡುತ್ತಿದ್ದೇನೆ. ನಾನು ಈ ಸಮಾಜದ ಮೇಲೆ ಬಾಂಬಿನಂತೆ ಸಿಡಿದೆರಗುವವರೆಗೂ ಇಲ್ಲಿಗೆ

ಮತ್ತೆ ಬರುವುದಿಲ್ಲ. ಆಗ ಈ ಸಮಾಜವು ನನ್ನನ್ನು ನಾಯಿಯಂತೆ ಹಿಂಬಾಲಿಸುತ್ತದೆ." ಇದು ಸುಮಾರು ಇಪ್ಪತ್ತೆಂಟು ವರ್ಷದ ಯುವಕಸಂನ್ಯಾಸಿ ವಿವೇಕಾನಂದರು ಅಂದು ನುಡಿದ ನುಡಿ. ಅವರ ನುಡಿ ಅಕ್ಷರಶಃ ಸತ್ಯವಾಯಿತು. ಮುಂದೆ ಅವರು ಪಾಶ್ಚಾತ್ಯ ದೇಶಗಳನ್ನು ತಮ್ಮ ನವನೂತನ ಭಾವನೆಗಳಿಂದ ಅಲುಗಾಡಿಸಿ, ಜಗತ್ಪ್ರಸಿದ್ಧಿಯನ್ನು ಹೊಂದಿ ಹಿಂದಿರುಗಿಬಂದಾಗ, ಇಡೀ ಭಾರತದ ಮೇಲೆ ಬಾಂಬಿನಂತೆ ಎರಗುತ್ತಾರೆ. ಸಾಮಾನ್ಯ ಜನರಿರಲಿ, ರಾಜ-ಮಹಾರಾಜರು ಕೂಡ ವಿವೇಕಾನಂದರನ್ನು ಹೊತ್ತ ಸಾರೋಟನ್ನು ತಮ್ಮ ಕೈಗಳಿಂದಲೇ ಎಳೆಯುತ್ತಾರೆ. ಆದರೆ ಇಲ್ಲಿ ಸ್ವಾಮೀಜಿ ನಾಯಿಯ ಉಪಮಾನವನ್ನು ಕೊಟ್ಟದ್ದು ತಿರಸ್ಕಾರದಿಂದ ಎಂದು ಭಾವಿಸಬೇಕಾಗಿಲ್ಲ. ವಿಶ್ವಾಸ-ಶ್ರದ್ಧೆ-ಪ್ರೀತಿ-ಪ್ರಾಮಾಣಿಕತೆಗಳಿಗೆ ಹೆಸರಾದ ಪ್ರಾಣಿ ನಾಯಿ. ಆದ್ದರಿಂದ, ಮುಂದೆ ತಾವು ಎಂತಹ ಚೈತನ್ಯಪೂರ್ಣವಾದ ಸಂದೇಶಗಳನ್ನು, ಆದರ್ಶಗಳನ್ನು ಈ ಸಮಾಜಕ್ಕೆ ನೀಡಲಿಕ್ಕಿದೆಯೆಂದರೆ, ಆದರಿಂದ ಈ ಸಮಾಜ ಸಂಪೂರ್ಣ ಪ್ರಭಾವಿತವಾಗಿ ತಮ್ಮನ್ನು ಪ್ರಾಮಾಣಿಕವಾಗಿ ಅನುಸರಿಸುವಂತಾಗುತ್ತದೆ ಎಂಬುದು ಸ್ವಾಮೀಜಿಯ ಮಾತಿನ ತಾತ್ಪರ್ಯ. ಈ ಮಾತನ್ನು ಹೇಳುವಾಗ ಅವರು ಕೇವಲ ಒಬ್ಬ ಸಾಧಾರಣ, ನಿರ್ಗತಿಕ ಸಂನ್ಯಾಸಿ. ಹೀಗಿರುವಾಗ, ಅವರಿಗೆ ತಮ್ಮ ಆತ್ಮಶಕ್ತಿಯ ಮೇಲೆ ಎಂತಹ ದೃಢವಿಶ್ವಾಸ ವಿತ್ತು ಎಂಬುದರ ಅರಿವು ನಮಗಾಗುತ್ತದೆ.

ಆದರೆ ಸ್ವಾಮೀಜಿಯ ಈ ಮಾತಿನಲ್ಲಿ ಆಕ್ರೋಶವೂ ತುಂಬಿರುವುದನ್ನು ಗಮನಿಸಬಹುದು. ಇದಕ್ಕೆ ಅವರ ಹಾಗೂ ಪ್ರಮದದಾಸ ಮಿತ್ರರ ನಡುವೆ ಅನೇಕ ವಿಚಾರಗಳಲ್ಲಿ ಉಂಟಾಗಿದ್ದ ಅಭಿಪ್ರಾಯಭೇದವೇ ಮುಖ್ಯ ಕಾರಣ. ಶ್ರೀರಾಮಕೃಷ್ಣರಿಗಾಗಿ ಸ್ಮಾರಕವೊಂದನ್ನು ನಿರ್ಮಿಸುವ ವಿಚಾರದಲ್ಲಿ ಪ್ರಮದಬಾಬುಗಳು ಹೇಗೆ ಸ್ವಾಮೀಜಿಯ ಉತ್ಸಾಹಕ್ಕೆ ತಣ್ಣೀರೆರಚುವಂತೆ ಉತ್ತರಿಸಿದರು ಎಂಬುದನ್ನು ನೋಡಿದ್ದೇವೆ. ಇದಲ್ಲದೆ, ಅವರು ಶ್ರೀರಾಮಕೃಷ್ಣರ ಜೀವನ-ಬೋಧನೆಗಳನ್ನು ಅರಿತುಕೊಳ್ಳುವ ವಿಚಾರದಲ್ಲಿ ಆಸಕ್ತಿ ತೋರದೆ, ವೇದಾಂತಿಯಾದ ವಿವೇಕಾನಂದರು ಶ್ರೀರಾಮಕೃಷ್ಣರನ್ನು ಅಷ್ಟೊಂದಾಗಿ ಕೊಂಡಾಡುವ ಅಗತ್ಯವೇ ಇಲ್ಲ ಎಂಬಂತೆ ಮಾತನಾಡಿದ್ದರು. ಮತ್ತು ಸ್ವಾಮೀಜಿ ತಮಗೆ ಸಹಜವಾದ ಸಂನ್ಯಾಸಧರ್ಮಕ್ಕನುಸಾರವಾಗಿ 'ವಿರಾಗಿ'ಯಂತೆ ಜೀವಿಸದೆ, "ಮಠ-ಗುರುಭಾಯಿಗಳು ಇವರನ್ನೆಲ್ಲ ಕಟ್ಟಿಕೊಂಡು ಒದ್ದಾಡುತ್ತಿರುವುದಕ್ಕಾಗಿ" ಆಕ್ಷೇಪಿಸಿದ್ದರು. ಅಲ್ಲದೆ, ಪ್ರಮದದಾಸ ಮಿತ್ರರು ಮಹಾ ಸಂಪ್ರದಾಯಸ್ಥರು, ಮಡಿವಂತರು. ಆಹಾರಾದಿಗಳ ವಿಷಯದಲ್ಲಿ ಸ್ವಾಮೀಜಿಯ ಹಗುರ ಧೋರಣೆ ಅವರಿಗೆ ಸ್ವಲ್ಪವೂ ಹಿಡಿಸಿರಲಿಲ್ಲ. ಇದೆಲ್ಲದರಿಂದಾಗಿ ಅವರ ನಡುವೆ ಭಿನ್ನಾಭಿಪ್ರಾಯದ ಕಂದಕವುಂಟಾಗತೊಡಗಿತ್ತು. ಆದ್ದರಿಂದಲೇ ಕಡೆಗೆ ಸ್ವಾಮೀಜಿ ರೋಸಿಹೋಗಿ ಹಾಗೆ ಉದ್ಗರಿಸಿದುದು.

ಕಾಶಿಯಿಂದ ನೇರವಾಗಿ ಹಿಮಾಲಯದ ಕಡೆಗೆ ನಡೆದುಬಿಡಬೇಕು ಎಂದು ಸ್ವಾಮೀಜಿ ಕಾತರರಾಗಿದ್ದರು. ಆದರೆ ಅಖಂಡಾನಂದರು ಅವರಿಗೆ ಜಾನಕೀವರ ಶರಣರೆಂಬ ಸತ್ಪುರುಷರ ಸಂದರ್ಶನ ಮಾಡಿಸಲು ಅವರನ್ನು ಒತ್ತಾಯದಿಂದ ಅಯೋಧ್ಯೆಗೆ ಕರೆದೊಯ್ದರು. ಜಾನಕೀವರ ಶರಣರು ಅಯೋಧ್ಯೆಯ ಶ್ರೀರಾಮಮಂದಿರದ ಮಹಂತರು. ಅವರು ಒಬ್ಬ ಮಹಾತ್ಯಾಗಿ ಹಾಗೂ ಮಹಾಭಕ್ತರೆಂದು ಹೆಸರಾಗಿದ್ದವರು; ಅಲ್ಲದೆ ಸಂಸ್ಕೃತ ಹಾಗೂ ಪಾರಸೀ ಭಾಷೆಗಳಲ್ಲಿ ಪಂಡಿತರು. ಇಬ್ಬರು ಸಂನ್ಯಾಸಿ

ಗಳನ್ನೂ ಅವರು ತಮ್ಮ ಆಶ್ರಮಕ್ಕೆ ಆದರದಿಂದ ಬರಮಾಡಿಕೊಂಡರು. ಭಕ್ತಿಯ ವಿಚಾರವಾಗಿ ದೀರ್ಘಕಾಲ ಸಂಭಾಷಣೆ ನಡೆಯಿತು. ಸ್ವಾಮೀಜಿಗೆ ಇವರ ಅಪೂರ್ವ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕಂಡು ಬಹಳ ಸಂತೋಷವಾಯಿತು. ತಾವು ಅಯೋಧ್ಯೆಗೆ ಬಂದದ್ದು ಸಾರ್ಥಕವಾಯಿತು ಎಂದು ಅವರು ಅಖಂಡಾನಂದರ ಮುಂದೆ ಹೇಳಿದರು.

ಕೆಲವು ದಿನ ಜಾನಕೀವರ ಶರಣರ ಆತಿಥ್ಯವನ್ನು ಸವಿದ ಸಂನ್ಯಾಸಿಗಳಿಬ್ಬರೂ ಅಯೋಧ್ಯೆಯಿಂದ ಹೊರಟು, ಬೆಟ್ಟಗುಡ್ಡಗಳ ದಾರಿಯಾಗಿ ನಡೆಯುತ್ತ ನೈನಿತಾಲಿಗೆ ಬಂದು ಸೇರಿದರು. ಅಲ್ಲಿ ರಾಮಪ್ರಸನ್ನ ಭಟ್ಟಾಚಾರ್ಯ ಎಂಬವರ ಅತಿಥಿಗಳಾಗಿ ಆರು ದಿನಗಳನ್ನು ಕಳೆದು, ಬದರಿಕಾಶ್ರಮದ ದಾರಿಯಲ್ಲಿರುವ ಆಲ್ಮೋರಕ್ಕೆ ಹೊರಟರು. ಇಬ್ಬರೂ ಕೈಯಲ್ಲಿ ಒಂದು ಕಾಸನ್ನೂ ಇಟ್ಟುಕೊಂಡಿಲ್ಲ; ಕಾಲ್ನಡಿಗೆಯಲ್ಲೇ ಪ್ರಯಾಣ. ದಾರಿಯಲ್ಲಿ ಭಗವಂತ ಏನನ್ನು ದೊರಕಿಸಿಕೊಡುತ್ತಾನೋ ಅದನ್ನೇ ಮಹಾಪ್ರಸಾದ ವೆಂದು ಸ್ವೀಕರಿಸುವುದು ಎಂದು ತೀರ್ಮಾನಿಸಿದ್ದರು. ಹೀಗೆ ದಟ್ಟವಾದ ಕಾಡಿನಲ್ಲಿ ಕಾಲುದಾರಿಯಾಗಿ ಸಾಗಿ, ಮೂರು ದಿನಗಳ ಮೇಲೆ ಕಾಕ್ರಿ ಘಾಟ್ ಎಂಬ ಸ್ಥಳವನ್ನು ತಲುಪಿದರು. ಇಲ್ಲಿಂದ ಆಲ್ಮೋರಕ್ಕೆ ಸುಮಾರು ಹದಿನೈದು ಮೈಲಿ. ಇಲ್ಲಿ ಕೋಶಿ ಹಾಗೂ ಸುಯಲ್ ಎಂಬ ಎರಡು ನದಿಗಳು ಸಂಧಿಸುತ್ತವೆ. ಅತ್ಯಂತ ರಮಣೀಯ ವಾದ ಸ್ಥಳ. ರಾತ್ರಿಯನ್ನು ಇಲ್ಲೇ ಕಳೆಯಲು ನಿರ್ಧರಿಸಿದರು. ಇಲ್ಲಿನ ಪ್ರಶಾಂತ ವಾತಾವರಣವನ್ನು ಕಂಡು ಮುದಗೊಂಡ ಸ್ವಾಮೀಜಿ ಅಖಂಡಾನಂದರಿಗೆ ಹೇಳುತ್ತಾರೆ: "ಈ ಸ್ಥಳ ನಿಜಕ್ಕೂ ತುಂಬ ಮನೋಹರವಾಗಿದೆ. ಧ್ಯಾನಕ್ಕೆ ಇದು ಎಷ್ಟು ಪ್ರಶಸ್ತ ವಾಗಿದೆ, ನೋಡು!" ಹೀಗೆಂದ ಅವರು ಸಂಗಮದಲ್ಲಿ ಮಿಂದು ಬಂದು, ಒಂದು ಅಶ್ವತ್ಥ ವೃಕ್ಷದ ಕೆಳಗೆ ಧ್ಯಾನಕ್ಕೆ ಕುಳಿತರು. ಶರೀರಪ್ರಜ್ಞೆಯೇ ಇಲ್ಲದಂತಹ ಗಾಢಧ್ಯಾನ ದಲ್ಲಿ ಮುಳುಗಿಬಿಟ್ಟರು. ಬಹಳ ಹೊತ್ತಿನ ನಂತರ ವ್ಯುತ್ಥಿತರಾದ ಸ್ವಾಮೀಜಿ ಅಖಂಡಾ ನಂದರೆದುರು ತಮಗಾದ ದಿವ್ಯಾನುಭವವೊಂದನ್ನು ಹೊರಗೆಡಹಿದರು: "ಗಂಗಾಧರ! ನಾನಿಂದು ಇಲ್ಲಿ ಕಳೆದ ಈ ಮುಹೂರ್ತವು ನನ್ನ ಜೀವನದಲ್ಲೇ ಅತ್ಯಂತ ಮಹತ್ವ ಪೂರ್ಣವಾದ ಮುಹೂರ್ತಗಳಲ್ಲೊಂದು. ಇವತ್ತು ಈ ಅಶ್ವತ್ಥ ವೃಕ್ಷದ ಕೆಳಗೆ ನನ್ನ ಜೀವನದ ದೊಡ್ಡ ಸಮಸ್ಯೆಯೊಂದು ಬಗೆಹರಿಯಿತು. ಬ್ರಹ್ಮಾಂಡ ಹಾಗೂ ಪಿಂಡಾಂಡ ಗಳ ಏಕತೆಯನ್ನು ನಾನಿಂದು ಕಂಡುಕೊಂಡೆ. ಸಮಸ್ತ ಬ್ರಹ್ಮಾಂಡದಲ್ಲಿ ಏನೇನಿದೆಯೋ, ಅದೆಲ್ಲವೂ ಪಿಂಡಾಂಡವಾದ ಈ ಶರೀರದಲ್ಲಿದೆ. ನಾನು ಒಂದು ಪರಮಾಣುವಿನಲ್ಲಿ ಸಕಲ ಬ್ರಹ್ಮಾಂಡವೇ ಅಡಗಿರುವುದನ್ನು ಕಂಡೆ." ಅದ್ಭುತ! ಭಾರತದ ಪರಮಋಷಿ ಗಳು ಹಿಂದೆ ಉಪನಿಷತ್ತುಗಳಲ್ಲಿ ಯಾವ ಘನಸತ್ಯವನ್ನು ಘೋಷಿಸಿದ್ದರೋ, ಅದನ್ನು ಇಂದು ಸ್ವಾಮೀಜಿ ತಮ್ಮ ಧ್ಯಾನಾವಸ್ಥೆಯಲ್ಲಿ ಸಾಕ್ಷಾತ್ತಾಗಿ ಕಾಣುತ್ತಿದ್ದಾರೆ! ವೇದವಾಕ್ಯ ಗಳ ಸತ್ಯತೆಯನ್ನು ಸ್ಪಷ್ಟವಾಗಿ ಕಂಡುಕೊಳ್ಳುತ್ತಿದ್ದಾರೆ! ಆ ದಿನವಿಡೀ ಸ್ವಾಮೀಜಿ ಅದೇ ಉನ್ನತ ಮನಸ್ಥಿತಿಯಲ್ಲೇ ಇದ್ದರು. ತಮಗಾದ ಆ ದಿವ್ಯ ಸಾಕ್ಷಾತ್ಕಾರದ ವಿಷಯ ವಾಗಿಯೇ ತಮ್ಮ ಸಹಚರನೊಂದಿಗೆ ಮಾತನಾಡುತ್ತಿದ್ದರು. ಈ ಅನುಭವದ ಕುರಿತಾದ ಕೆಲವು ತುಣುಕುಗಳನ್ನು ಅವರ ಟಿಪ್ಪಣಿ ಪುಸ್ತಕದಲ್ಲಿ ಕಾಣಬಹುದಾಗಿತ್ತು.

ಅವರಿಗಾದ ಆ ಅನುಭವದ ಒಂದು ಕಲ್ಪನೆಯನ್ನು, ಮುಂದೆ ಅವರು ಅಮೆರಿಕದಲ್ಲಿ ನೀಡಿದ "ಸಮಗ್ರ ವಿಶ್ವ—ಬ್ರಹ್ಮಾಂಡ ಹಾಗೂ ಪಿಂಡಾಂಡ" ಎಂಬ ಉಪನ್ಯಾಸದಲ್ಲಿ ಕಾಣಬಹುದಾಗಿದೆ.

ಮರುದಿನ ಇಬ್ಬರೂ ಕಾಕ್ರಿ ಘಾಟ್‌ನಿಂದ ಮುಂದಕ್ಕೆ ಹೊರಟರು. ಮತ್ತೆ ಕಾಲ್ನಡಿಗೆಯಲ್ಲೇ ಪ್ರಯಾಣ. ಸುಮಾರು ೧೨ ಮೈಲಿ ನಡೆದಿರಬಹುದು. ಅಲ್ಲಿಂದ ಆಲ್ಮೋರಕ್ಕೆ ಎರಡೇ ಮೈಲಿ. ಆದರೆ ಇಬ್ಬರೂ ವಿಪರೀತ ದಣಿದಿದ್ದಾರೆ. ಹೊಟ್ಟೆಯಂತೂ ಹಸಿವಿನಿಂದ ಚುರುಗುಟ್ಟುತ್ತಿದೆ. ಇನ್ನು ಒಂದು ಹೆಜ್ಜೆಯನ್ನೂ ಇಡಲು ಸಾಧ್ಯವಾಗುವಂತಿರಲಿಲ್ಲ. ಆದ್ದರಿಂದ ಇಬ್ಬರೂ ಅಲ್ಲೇ ರಸ್ತೆ ಬದಿಯಲ್ಲಿ ಒಂದು ಕಡೆ ಕುಳಿತುಬಿಟ್ಟರು. ಸ್ವಾಮೀಜಿ ಬಳಲಿಕೆಯನ್ನು ತಾಳಲಾರದೆ ಕುಸಿದು ನೆಲದ ಮೇಲೆ ಒರಗಿಕೊಂಡರು. ಅಖಂಡಾನಂದರು ಕುಡಿಯಲು ನೀರನ್ನಾದರೂ ತರೋಣವೆಂದು ಹೊರಟರು.

ಅಲ್ಲೇ ರಸ್ತೆಯ ಬದಿಯಲ್ಲೊಂದು ಮುಸಲ್ಮಾನರ ಸ್ಮಶಾನವಿತ್ತು. ಜುಲ್ಫಿಕರ್ ಅಲಿ ಎಂಬ ಒಬ್ಬ ಮುಸಲ್ಮಾನ ಫಕೀರ ಇದರ ಕಾವಲುಗಾರನಾಗಿದ್ದ. ಈತ ಸ್ವಾಮೀಜಿಯ ಅವಸ್ಥೆಯನ್ನು ಕಂಡು ತಕ್ಷಣ ತನ್ನ ಗುಡಿಸಲಿಗೆ ಹೋಗಿ ಒಂದು ಸೌತೆಕಾಯನ್ನು ತಂದುಕೊಟ್ಟ. ಪಾಪ, ಆ ಬಡ ಫಕೀರನ ಬಳಿ ಕೊಡಲು ಇದ್ದದ್ದು ಅದೊಂದೇ. ಆದರೆ ಸ್ವಾಮೀಜಿ ಎಷ್ಟು ನಿತ್ರಾಣರಾಗಿದ್ದರೆಂದರೆ ಅದನ್ನು ಕೊಯ್ದು ಬಾಯಿಗೆ ಹಾಕಿಕೊಳ್ಳಲೂ ಅವರಿಗೆ ಸಾಧ್ಯವಿರಲಿಲ್ಲ. ಆದ್ದರಿಂದ, "ನನಗೆ ಎದ್ದು ತಿನ್ನಲೂ ಶಕ್ತಿಯಿಲ್ಲ. ನೀನೇ ಅದನ್ನು ಸ್ವಲ್ಪ ನನ್ನ ಬಾಯಿಗೆ ಹಾಕು" ಎಂದರು. ಆಗ ಆ ಫಕೀರ "ಸ್ವಾಮಿ, ಅದು ಹೇಗಾದೀತು! ನಾನೊಬ್ಬ ಮುಸಲ್ಮಾನ!" ಎಂದು ಪ್ರತಿಭಟಿಸಿದ. ಸ್ವಾಮೀಜಿ ಮುಗುಳ್ನಗುವೊಂದನ್ನು ತಂದುಕೊಂಡು ನುಡಿದರು, "ಅದೇನು ಪರವಾಗಿಲ್ಲ. ನಾವೆಲ್ಲ ಅಣ್ಣತಮ್ಮಂದಿರೇ ಅಲ್ಲವೆ?" ಅವರ ಒತ್ತಾಯದ ಮೇರೆಗೆ ಫಕೀರ ಸೌತೆಕಾಯನ್ನು ತಾನೇ ತಿನ್ನಿಸಿದ. ಬಳಿಕ ಸ್ವಾಮೀಜಿ ಸ್ವಲ್ಪ ಚೇತರಿಸಿಕೊಂಡರು. ಈ ಘಟನೆಯನ್ನು ನೆನಪಿಸಿಕೊಂಡು ಅವರು ಮುಂದೆ ಆಗಾಗ ಹೇಳುತ್ತಿದ್ದರು, "ನನಗೆ ಅಷ್ಟೊಂದು ಆಯಾಸ ಹಿಂದೆಂದೂ ಆಗಿರಲಿಲ್ಲ. ಆತ ನಿಜಕ್ಕೂ ನನಗೆ ಜೀವದಾನ ಮಾಡಿದ" ಎಂದು.

ಇದಾದ ಏಳು ವರ್ಷಗಳ ಬಳಿಕ, ಜಗದ್ವಿಖ್ಯಾತ ವಿವೇಕಾನಂದರಾಗಿ ಭಾರತಕ್ಕೆ ಮರಳಿದ ಮೇಲೆ ಸ್ವಾಮೀಜಿ, ಒಮ್ಮೆ ಆಲ್ಮೋರಕ್ಕೆ ಭೇಟಿ ನೀಡಿದರು. ಆಗ ಅವರಿಗೆ ಅಲ್ಲಿನ ನಾಗರಿಕರು ಭವ್ಯ ಸ್ವಾಗತ ನೀಡಿ, ಅವರನ್ನು ಊರ ಸುತ್ತ ಮೆರವಣಿಗೆಯಲ್ಲಿ ಕರೆದೊಯ್ದರು. ಸಮಾರಂಭ ಭವನದ ಮೂಲೆಯಲ್ಲಿ ಜನರೊಂದಿಗೆ ನಿಂತು ಆ ಫಕೀರ ಕುತೂಹಲದಿಂದ ನೋಡುತ್ತಿರುವುದು ಸ್ವಾಮೀಜಿಯ ಕಣ್ಣಿಗೆ ಬಿತ್ತು. ಆ ಫಕೀರ ಅವರನ್ನು ಮರೆತುಬಿಟ್ಟಿದ್ದಾನೆ. ಆದರೆ ಸ್ವಾಮೀಜಿ ಮರೆತಿಲ್ಲ; ಅಷ್ಟೇ ಅಲ್ಲ, ಅವನನ್ನು ಆ ಗುಂಪಿನಲ್ಲೂ ಗುರುತುಹಿಡಿದಿದ್ದಾರೆ! ಒಡನೆಯೇ ಅವರು ತಮ್ಮ ಸುತ್ತ ಇದ್ದವರಿಗೆಲ್ಲ ಆ ಫಕೀರನನ್ನು ತೋರಿಸಿ, ತಮ್ಮ ಜೀವವನ್ನೇ ಉಳಿಸಿದವನು ಅವನು ಎಂದು ಅಂದಿನ ಆ ಘಟನೆಯನ್ನು ವಿವರಿಸಿದರು. ಅಲ್ಲದೆ ಅವನ ಉಪಕಾರವನ್ನು ಸ್ಮರಿಸಿ, ಕೃತಜ್ಞತೆಯ ಕುರುಹಾಗಿ ಅವನಿಗೆ ಒಂದಿಷ್ಟು ಹಣವನ್ನು ಕೊಡಿಸಿದರು. ಆ ಫಕೀರ ಸ್ವಾಮೀಜಿಗೆ ಸೌತೆಕಾಯನ್ನು ತಿನ್ನಿಸಿದ ಸ್ಥಳದಲ್ಲೇ ಈಚೆಗೆ (೧೯೭೧ರಲ್ಲಿ) ಭಕ್ತರೊಬ್ಬರು ಸ್ವಾಮಿ ವಿವೇಕಾನಂದರ ಹೆಸರಿನಲ್ಲಿ ಸತ್ರವೊಂದನ್ನು ಕಟ್ಟಿಸಿದ್ದಾರೆ.

ಬಯಲು ಪ್ರದೇಶದಿಂದ ಆಲ್ಮೋರದ ಪರ್ವತ ಪ್ರದೇಶದತ್ತ ಕೈಗೊಂಡ ದೀರ್ಘ ಪ್ರಯಾಣ ಸ್ವಾಮಿಗಳ ಪಾಲಿಗೆ ಅತ್ಯಂತ ಉಲ್ಲಾಸಕರವಾಗಿತ್ತು. ಆ ಪರ್ವತ ಪ್ರದೇಶಗಳ

ಪ್ರಶಾಂತ-ಮನೋಹರ ವಾತಾವರಣದಲ್ಲಿ ಸ್ವಾಮೀಜಿಯ ಹೃನ್ಮನಗಳು ಅಪೂರ್ವ ಶಾಂತಿಯನ್ನು ಅನುಭವಿಸಿದುವು. ಅಲ್ಲಿನ ಗಾಳಿ ಅವರಲ್ಲಿ ನವಚೇತನವನ್ನುಂಟು ಮಾಡಿತು. ಈ ಸುದೀರ್ಘ ಕಾಲ್ನಡಿಗೆಯ ಪ್ರಯಾಣದಿಂದ ಹಾಗೂ ಕಾಲಕಾಲಕ್ಕೆ ಅನ್ನಾಹಾರಗಳಿಲ್ಲದ್ದರಿಂದ ದೇಹಕ್ಕೆ ಸಾಕಷ್ಟು ಬಳಲಿಕೆಯಾಗಿದ್ದರೂ, ಅವರ ಪಾಲಿಗೆ ಈ ಪರ್ವತಪ್ರಯಾಣವು ಆನಂದದ ಪರಾಕಾಷ್ಠೆಯೇ ಆಗಿದ್ದಿತು.

ಹೀಗೆ ಸುದೀರ್ಘ ಪ್ರಯಾಣ ಮಾಡಿ, ೧೮೯೦ರ ಆಗಸ್ಟ್ ತಿಂಗಳ ಕೊನೆಯಲ್ಲಿ ಇಬ್ಬರೂ ಆಲ್ಮೋರಕ್ಕೆ ಬಂದು ತಲುಪಿದರು. ಅಖಂಡಾನಂದರಿಗೆ ಇದೆಲ್ಲ ಸುಪರಿಚಿತ ಸ್ಥಳ. ಅವರು ಸ್ವಾಮೀಜಿಯನ್ನು ಅಂಬಾ ದತ್ತ ಎಂಬವನ ಮನೆಗೆ ಕರೆದುಕೊಂಡು ಹೋದರು. ಆ ಸಮಯದಲ್ಲಿ ಸ್ವಾಮಿ ಶಾರದಾನಂದರೂ ಸ್ವಾಮಿ ಕೃಪಾನಂದರೂ (ಶ್ರೀರಾಮಕೃಷ್ಣರ ಯುವಶಿಷ್ಯರಲ್ಲೊಬ್ಬನಾದ ವೈಕುಂಠನಾಥ ಸನ್ಯಾಲ) ಆಲ್ಮೋರದಲ್ಲೇ ಲಾಲಾ ಬದರೀ ಸಾಹ ಎಂಬವರ ಅತಿಥಿಗಳಾಗಿದ್ದು, ಸ್ವಾಮೀಜಿಯ ಬರವನ್ನೇ ಕಾಯು ತ್ತಿದ್ದರು. ಸ್ವಾಮೀಜಿ ಬಂದಿದ್ದಾರೆಂಬ ಸಂತಸದ ಸುದ್ದಿ ಕೇಳಿದೊಡನೆಯೇ ಇಬ್ಬರೂ ತಮ್ಮ ಆತಿಥೇಯರಾದ ಬದರಿ ಸಾಹರನ್ನೂ ಕರೆದುಕೊಂಡು ಅವರನ್ನು ನೋಡಲು ಧಾವಿಸಿದರು. ಆದರೆ ಇಷ್ಟು ಹೊತ್ತಿಗಾಗಲೇ ಸ್ವಾಮೀಜಿ ಇವರನ್ನು ನೋಡಲು ಅರ್ಧ ದಾರಿ ಬಂದುಬಿಟ್ಟಿದ್ದರು. ನಡುದಾರಿಯಲ್ಲಿ ಪರಸ್ಪರ ಸಂಧಿಸಿದರು—ಆನಂದ ಸಮ್ಮಿಲನ ! ಬದರೀ ಸಾಹರು ಸ್ವಾಮೀಜಿಯನ್ನು ಸ್ವಾಗತಿಸಿ ತಮ್ಮ ಮನೆಗೆ ಕರೆತಂದರು.

ಇಲ್ಲಿ ಸ್ವಾಮೀಜಿ ಆ ಊರಿನ ಶಿರಸ್ತೇದಾರನಾದ ಶ್ರೀಕೃಷ್ಣ ಜೋಶಿ ಎಂಬವನನ್ನು ಭೇಟಿಮಾಡಿದರು. ಮಾತಿನ ಮಧ್ಯೆ ಈತ, "ಸ್ವಾಮೀಜಿ, ಗೃಹಸ್ಥರಾಗಿದ್ದುಕೊಂಡೇ ಧರ್ಮಪರಿಪಾಲನೆ ಮಾಡಲು ಸಾಧ್ಯವಿರುವಾಗ ಸಂನ್ಯಾಸವನ್ನು ತೆಗೆದುಕೊಳ್ಳಬೇಕಾದ ಆವಶ್ಯಕತೆಯಾದರೂ ಏನು ?" ಎಂದು ಕೇಳಿದ. ಆಗ ಅವರು ಸಂನ್ಯಾಸದ ಮಹಿಮೆ ಯನ್ನು, ತ್ಯಾಗಜೀವನದ ಘನತೆಯನ್ನು ಎತ್ತಿಹಿಡಿಯುತ್ತ, ತುಂಬ ಪ್ರಭಾವಶಾಲಿ ಯಾದ ವಾಕ್ಯಗಳಿಂದ ವರ್ಣಿಸಿದರು. ಸರ್ವಧರ್ಮಗಳ ಪರಮಾದರ್ಶವೇ ತ್ಯಾಗ ಎಂಬುದನ್ನು ಮನಮುಟ್ಟುವಂತೆ ತಿಳಿಸಿದರು. ಸ್ವಾನುಭವದ ಆಧಾರದ ಮೇಲೆ ಸ್ವಾಮೀಜಿ ಈ ವಿಷಯುವನ್ನು ವಿವರಿಸಿದಾಗ ಅವರ ಅಸಾಮಾನ್ಯ ಜ್ಞಾನವನ್ನು ಮನ ಗಂಡ ಶ್ರೀಕೃಷ್ಣ ಜೋಶಿ, ಅವರಿಗೆ ಸಾಷ್ಟಾಂಗ ಪ್ರಣಾಮಮಾಡಿ ಬೀಳ್ಕೊಂಡ.

ಸ್ವಾಮೀಜಿ ಹಿಮಾಲಯಕ್ಕೆ ಬಂದದ್ದರ ಉದ್ದೇಶ ತೀವ್ರ ಆಧ್ಯಾತ್ಮಿಕ ಸಾಧನೆಯಲ್ಲಿ ಮುಳುಗಿಬಿಡಬೇಕು ಎನ್ನುವುದು. ಇದು ಅವರ ಬಹುವರ್ಷಗಳ ಹಂಬಲ. ಆದ್ದರಿಂದ ಬದರೀ ಸಾಹರ ಮನೆಯಲ್ಲಿ ಗುರುಭಾಯಿಗಳೊಂದಿಗೆ ಕೆಲವು ದಿನಗಳನ್ನು ಕಳೆದ ಬಳಿಕ, ಅವರು ಏಕಾಂಗಿಯಾಗಿ ಹೊರಟುಬಿಟ್ಟರು. ಸಮೀಪದ ಪರ್ವತಶಿಖರವೊಂದ ರಲ್ಲಿ ಒಂದು ಗುಹೆಯನ್ನು ಕಂಡುಕೊಂಡು, ಅಲ್ಲಿ ಧ್ಯಾನಮಗ್ನರಾಗಿರತೊಡಗಿದರು. ಹಗಲಿರುಳುಗಳು ಗಾಢ ಧ್ಯಾನದಲ್ಲಿ ಕಳೆದುವು. ಗುಹೆಯ ಒಳಗೂ ಪರಮಶಾಂತಿ, ಹೊರಗೂ ನೀರವ ಮೌನ. ಆತ್ಯುನ್ನತ ಸಾಕ್ಷಾತ್ಕಾರವನ್ನು ಸಾಧಿಸಿಕೊಳ್ಳಲೇಬೇಕು ಎಂದು ದೃಢನಿರ್ಧಾರ ಮಾಡಿಬಿಟ್ಟಿದ್ದಾರೆ ಸ್ವಾಮೀಜಿ. ಅವರ ಧ್ಯಾನ ಬರಬರುತ್ತ ಹೆಚ್ಚು ತೀವ್ರವಾಗುತ್ತಿದೆ, ಹೆಚ್ಚು ಉಗ್ರವಾಗುತ್ತಿದೆ. ಜೊತೆಜೊತೆಗೇ ಅನೇಕ ಉನ್ನತ ಆಧ್ಯಾ ತ್ಮಾನುಭವಗಳಾಗುತ್ತಿವೆ. ಹೃದಯಾಂತರಾಳವೆಲ್ಲ ಆಧ್ಯಾತ್ಮಜ್ಯೋತಿಯಿಂದ ಬೆಳಗು ತ್ತಿದೆ. ತತ್ಫಲವಾಗಿ ಅವರ ಮುಖಮಂಡಲವೂ ದೈವೀತೇಜಸ್ಸಿನಿಂದ ಕಂಗೊಳಿಸಲಾರಂಭಿ

ಸಿದೆ. ಇಂತಹ ಸ್ಥಿತಿಯಲ್ಲಿ, ತಾವು ಹಿಂದೊಮ್ಮೆ ಶ್ರೀರಾಮಕೃಷ್ಣರ ಕೃಪೆಯಿಂದ ಸವಿದಿದ್ದ ನಿರ್ವಿಕಲ್ಪ ಸಮಾಧಿಯನ್ನು ಮತ್ತೆ ಹೊಂದುವ ಪ್ರಯತ್ನದಲ್ಲಿ ತೊಡಗಿದರು ಸ್ವಾಮೀಜಿ. ಆದರೆ ಏನು ಮಾಡಿದರೂ ಅವರ ಮನಸ್ಸು ಆ ಸ್ತರಕ್ಕೇರುತ್ತಿಲ್ಲ; ಅದರ ಬದಲಾಗಿ ಕರ್ಮಕ್ಷೇತ್ರಕ್ಕಿಳಿಯುವಂತೆ ಪ್ರೇರಣೆಯಾಗುತ್ತಿದೆ! ಯಾವುದೋ ಪ್ರಚಂಡ ಶಕ್ತಿ ಅವರನ್ನು ಅಧ್ಯಾತ್ಮ ಸಾಧನಾಪಥದಿಂದ ಹೊರಕ್ಕೆಳೆಯುತ್ತಿದೆ! ಸ್ವಾಮೀಜಿ ಮತ್ತೆ ಮತ್ತೆ ಪ್ರಯತ್ನಮಾಡಿದರು; ಆದರೆ ಅದೇ ಅವ್ಯಕ್ತ ಶಕ್ತಿ ಅವರನ್ನು ಕರ್ಮಕ್ಷೇತ್ರದೆಡೆಗೆ ದೂಡುತ್ತಿತ್ತು. ಇದೆಂಥ ವಿಚಿತ್ರ ಸ್ಥಿತಿ! ಹಾಗಾದರೆ, ಅವರಿಗೆ ಆ ಅತ್ಯುನ್ನತ ಸ್ಥಿತಿಗೇರುವ ಸಾಮರ್ಥ್ಯ ಇನ್ನೂ ಬಂದಿರಲಿಲ್ಲವೆಂದೆ? ಅಲ್ಲ! ಅವರ ಈ ಸ್ಥಿತಿಯ ಕುರಿತಾಗಿ ಸ್ವಾಮಿ ಅಖಂಡಾನಂದರು ಮುಂದೊಮ್ಮೆ ಹೇಳುತ್ತಾರೆ: "ಶುದ್ಧಸಂನ್ಯಾಸದ ಆದರ್ಶಕ್ಕನುಗುಣ ವಾಗಿ ತಾವು ಪರಿಪೂರ್ಣ ಶಾಂತಿಯಲ್ಲಿ ಮುಳುಗಿ ತಲ್ಲೀನರಾಗಲು ಅವರು ಎಷ್ಟೇ ಪ್ರಯತ್ನಪಟ್ಟರೂ, ಪ್ರತಿ ಬಾರಿಯೂ ಯಾವುದೋ ಒಂದು ಪರಿಸ್ಥಿತಿಯ ಒತ್ತಡ ದಿಂದಾಗಿ ಅವರು ಆ ಪ್ರಯತ್ನವನ್ನೇ ಬಿಡಬೇಕಾಗಿಬರುತ್ತಿತ್ತು. ಏಕೆಂದರೆ, ಅವರು ಈ ಜಗತ್ತಿನಲ್ಲಿ ಸಾಧಿಸಬೇಕಾದ ಮಹಾಕಾರ್ಯವೊಂದಿತ್ತು. ಆ ಕಾರ್ಯವನ್ನು ಈಡೇರಿಸು ವಂತೆ ಅವರ ಸ್ವಭಾವವೇ ಅವರನ್ನು ಬಲವಾಗಿ ಪ್ರೇರೇಪಿಸುತ್ತಿತ್ತು."

ಈ ಸಂಬಂಧವಾಗಿ ಹಿಂದಿನ ಘಟನೆಗಳನ್ನೂ ಇಲ್ಲಿ ನೆನಪಿಸಿಕೊಳ್ಳಬಹುದು. ಹಿಂದೆ ಶ್ರೀರಾಮಕೃಷ್ಣರು ನರೇಂದ್ರನಿಗೆ ನಿರ್ವಿಕಲ್ಪ ಸಮಾಧಿಯ ಅನುಭವ ಮಾಡಿಸಿ ಕೊಟ್ಟ ಮೇಲೆ ಹೇಳಿದ್ದರು, "... ನಿನ್ನ ಈ ಅನುಭವವನ್ನು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಲಾಗುತ್ತದೆ; ಮತ್ತು ಅದರ ಕೀಲಿಕೈ ನನ್ನ ಬಳಿಯಿರುತ್ತದೆ. ನೀನು ನಿನ್ನ ಪಾಲಿನ ಕಾರ್ಯವನ್ನು ಮಾಡಿ ಮುಗಿಸಿದ ಮೇಲಷ್ಟೇ ಆ ಬೀಗಮುದ್ರೆಯನ್ನು ತೆರೆಯಲಾಗು ತ್ತದೆ" ಎಂದು. ಅಲ್ಲದೆ ತಮ್ಮ ಕಡೇ ದಿನಗಳಲ್ಲೊಮ್ಮೆ, 'ನೀನು ಧರ್ಮಪ್ರಸಾರ ಮಾಡ ಬೇಕಾಗುತ್ತದೆ' ಎಂದು ಒಂದು ಚೀಟಿಯಲ್ಲಿ ಬರೆದು ತೋರಿಸಿದ್ದರು. 'ನಾನದನ್ನು ಮಾಡಲಾರೆ' ಎಂದು ಅವನು ಪ್ರತಿಭಟಿಸಿದಾಗ ಶ್ರೀರಾಮಕೃಷ್ಣರು, 'ನೀನು ಮಾಡಲೇ ಬೇಕಾಗುತ್ತದೆ' ಎಂದಿದ್ದರು. ಆದ್ದರಿಂದ, ಈಗ ಸ್ವಾಮೀಜಿ ತಾವಾಗಿಯೇ ಪ್ರಯತ್ನಪಟ್ಟು ನಿರ್ವಿಕಲ್ಪ ಸಮಾಧಿಗೇರಿ ದಿವ್ಯಾನಂದವನ್ನು ಅನುಭವಿಸುತ್ತ ಕುಳಿತುಕೊಳ್ಳುವಂತಿರ ಲಿಲ್ಲ. ಶ್ರೀರಾಮಕೃಷ್ಣರು ತಮಗೊಪ್ಪಿಸಿದ ಕಾರ್ಯವನ್ನು ಅವರು ಸಾಧಿಸಬೇಕಾಗಿತ್ತು. ಆದ್ದರಿಂದಲೇ ಅವರು ಧ್ಯಾನದಲ್ಲಿ ಸಮಾಧಿಗೇರುವ ಪ್ರಯತ್ನ ಮಾಡಿದಾಗಲೆಲ್ಲ ಅಗೋಚರ ಶಕ್ತಿಯೊಂದು ಅವರನ್ನು ಕರ್ಮಕ್ಷೇತ್ರಕ್ಕೆ ದೂಡುತ್ತಿದ್ದುದು. ಶ್ರೀರಾಮ ಕೃಷ್ಣರು ಇನ್ನೂ ಆ ಪೆಟ್ಟಿಗೆಯ ಬೀಗಮುದ್ರೆಯನ್ನು ತೆಗೆಯಲೊಪ್ಪುತ್ತಿಲ್ಲ!

ಹೀಗೆ ಸ್ವಾಮೀಜಿ ಏಕಾಂತದಲ್ಲಿ ತೀವ್ರ ಸಾಧನೆಗಳನ್ನು ನಡೆಸಿ, ಕೆಲವು ದಿನಗಳ ಬಳಿಕ ಲಾಲಾ ಬದರೀ ಸಾಹರ ಮನೆಗೆ ಹಿಂದಿರುಗಿದರು. ಆಗ ಅವರಿಗೊಂದು ದಾರುಣ ಸುದ್ದಿ ಕಾದಿತ್ತು—ಅವರ ಒಬ್ಬಳು ಸೋದರಿ ಆತ್ಮಹತ್ಯೆ ಮಾಡಿಕೊಂಡಳು ಎಂಬ ತಂತಿ ವರ್ತಮಾನ ತಲುಪಿತ್ತು. ಈ ತಂತಿಯನ್ನು ಹಿಂಬಾಲಿಸಿ ಒಂದು ವಿವರಪೂರ್ಣವಾದ ಪತ್ರ ಬಂದಿತು. ಬಾಲ್ಯದಲ್ಲೇ ವಿವಾಹವಾಗಿ ಪತಿಗೃಹಕ್ಕೆ ಹೋಗಿದ್ದ ಆ ಸೋದರಿ, ಅಲ್ಲಿನ ಸಂಪ್ರದಾಯಸ್ಥ ಪರಿಸರಕ್ಕೆ ಹೊಂದಿಕೊಳ್ಳಲಾರದೆ ತೀವ್ರ ಕಷ್ಟಗಳನ್ನು ಎದುರಿಸ ಬೇಕಾಗಿತ್ತು. ಕಡೆಗೆ ಕಷ್ಟಗಳು ಅಸಹನೀಯವಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ಸೋದರಿಯ ದುರದೃಷ್ಟಕರ ಸಾವು ಸ್ವಾಮೀಜಿಗೆ ಒಂದು ದೊಡ್ಡ ಆಘಾತವನ್ನುಂಟು

ಮಾಡಿತು. ಅಲ್ಲದೆ ಆಕೆ ಅವರಿಗೆ ವಿಶೇಷ ಪ್ರೀತಿಪಾತ್ರಳಾಗಿದ್ದವಳು. ಆದ್ದರಿಂದ ಈ ಘಟನೆ ಅವರ ಅಂತರಾಳವನ್ನೇ ಕಲಕಿಬಿಟ್ಟಿತು. ಅವರು ಸರ್ವಸಂಗ ಪರಿತ್ಯಾಗಿಯಾದ ಮಹಾನ್ ಸಂನ್ಯಾಸಿಯಿರಬಹುದು. ಆದರೆ ಒಡಹುಟ್ಟಿದ ಸೋದರಿಯೊಬ್ಬಳು ಸಮಾಜದ ದೌರ್ಜನ್ಯದಿಂದ ನೊಂದು, ಹೀಗೆ ಘೋರ ಮರಣಕ್ಕೀಡಾಗುವ ಪ್ರಸಂಗ ಒದಗಿದ್ದನ್ನು ಕಂಡಾಗ ಅವರ ಹೃದಯದಲ್ಲಿ ಭಾರತದ ಸಮಸ್ತ ಸ್ತ್ರೀಕುಲದ ಸಮಸ್ಯೆಯ ಕುರಿತಾದ ಪ್ರಜ್ಞೆಯೊಂದು ಜಾಗೃತವಾಯಿತು. ಮಹಿಳೆಯರ ವಿದ್ಯಾಭ್ಯಾಸ ಹಾಗೂ ಸರ್ವತೋಮುಖ ಉನ್ನತಿಯ ಬಗ್ಗೆ ಅವರಲ್ಲಿ ತೀವ್ರ ಕಾಳಜಿಯುಂಟಾಗಲು ಈ ಸಾವು ಕೆಲಮಟ್ಟಿಗಾದರೂ ಕಾರಣವಾಗಿರಬೇಕು. ಆದರೆ ತತ್ಕಾಲಕ್ಕೆ ಅವರು ಈ ಬಗ್ಗೆ ಏನೂ ಮಾಡುವಂತಿರಲಿಲ್ಲ.

ಬದರೀ ಸಾಹರು ಸ್ವಾಮೀಜಿಯನ್ನು ತುಂಬ ಆದರದಿಂದ ನೋಡಿಕೊಂಡರು. ಅವರ ದೈವಭಕ್ತಿಯನ್ನೂ ಆದರಪೂರ್ವಕ ಆತಿಥ್ಯವನ್ನೂ ಕಂಡು ಅತೀವ ಆನಂದಿತ ರಾದ ಸ್ವಾಮೀಜಿ, "ಇಂತಹ ಒಬ್ಬ ಭಕ್ತರನ್ನು ಕಾಣುವುದು ತೀರ ಅಪರೂಪ" ಎಂದು ಉದ್ಗರಿಸಿದರು. ಇವರು ಸ್ವಾಮೀಜಿಯ ಒಬ್ಬ ಆಪ್ತ ಭಕ್ತರಾಗಿ ಉಳಿದುಕೊಂಡರು. ಹೀಗೆ ಆಲ್ಮೋರದಲ್ಲಿ ಕೆಲವು ದಿನಗಳನ್ನು ಕಳೆದ ಸ್ವಾಮೀಜಿ, ಇನ್ನಷ್ಟು ಉತ್ತರಕ್ಕೆ ಸಾಗಲು ಬಯಸಿದರು. ಧ್ಯಾನಮಗ್ನರಾಗಿ ಸಮಾಧಿಸ್ಥಿತಿಗೇರಬೇಕೆಂಬ ಉತ್ಕಟೇಚ್ಛೆ ಅವರನ್ನಿನ್ನೂ ಬಿಟ್ಟಿರಲಿಲ್ಲ. ಸೋದರಿಯ ಸಾವು ಅವರ ಮನಸ್ಸನ್ನು ಪ್ರಕ್ಷುಬ್ಧ ವಾಗಿಸಿತ್ತು; ಆದರೆ ಆಧ್ಯಾತ್ಮಿಕ ಸಾಧನೆಯ ಹಂಬಲವು ಈ ಪ್ರಕ್ಷುಬ್ಧತೆಯನ್ನೂ ಮೀರಿ ನಿಂತು, ಅವರನ್ನು ಹಿಮಾಲಯದ ಶಿಖರಗಳತ್ತ ಸಾಗುವಂತೆ ಪ್ರೇರೇಪಿಸುತ್ತಿತ್ತು. ಕಡೆಗೆ, ಸೆಪ್ಟೆಂಬರ್ ಇರಂದು ಸ್ವಾಮೀಜಿ ತಮ್ಮ ಮೂವರು ಗುರುಭಾಯಿಗಳು ಹಾಗೂ ಒಬ್ಬ ಸಾಮಾನು ಹೊರುವ ಕೂಲಿಯೊಂದಿಗೆ ಘರವಾಲಿನ ಮಾರ್ಗವಾಗಿ ಕರ್ಣಪ್ರಯಾಗಕ್ಕೆ ಬಂದರು. ಇಲ್ಲೊಬ್ಬ ಸರಕಾರೀ ವೈದ್ಯರು ಅವರನ್ನೆಲ್ಲ ಆದರದಿಂದ ಸತ್ಕರಿಸಿದರು.

ಅಲ್ಲಿಂದ ಮುಂದೆ ಅವರು ಬದರಿಕಾಶ್ರಮದ ದಾರಿಯಾಗಿ ಹೊರಟರು. ಆದರೆ ಬದರಿ-ಕೇದಾರಗಳಲ್ಲಿ ಕ್ಷಾಮ ತಲೆದೋರಿರುವುದರಿಂದ ಸರಕಾರ ಆ ಕಡೆಗೆ ಹೋಗುವ ದಾರಿಯನ್ನು ಮುಚ್ಚಿದೆ ಎಂದು ತಿಳಿದುಬಂತು. ಇದರಿಂದಾಗಿ ಬದರಿಕಾಶ್ರಮಕ್ಕೆ ಹೋಗುವ ತಮ್ಮ ಯೋಜನೆಯನ್ನು ಸ್ವಾಮೀಜಿ ಕೈಬಿಡಬೇಕಾಯಿತು. ಈಗ ಅವರು ಶ್ರೀನಗರದ ಕಡೆಗೆ ಪ್ರಯಾಣ ಹೊರಟರು. ದಾರಿಯುದ್ದಕ್ಕೂ ಕಂಡುಬರುತ್ತಿದ್ದ ತಿಳಿ ನೀರಿನ ತೊರೆಗಳು, ಮನೋಹರ ಜಲಪಾತಗಳು, ಹಚ್ಚ ಹಸಿರಾದ ವನಸಿರಿ, ಪರಮ ಪ್ರಶಾಂತತೆಯಿಂದ ಕೂಡಿದ ನಿರ್ಜನ ತಾಣಗಳು, ಅಲ್ಲಲ್ಲಿ ದೃಗ್ಗೋಚರವಾಗುತ್ತಿದ್ದ ಶುಭ್ರ ಹಿಮರಾಶಿ—ಇವುಗಳೆಲ್ಲ ಅವರ ಮನಸ್ಸಿಗೆ ಅತ್ಯಂತ ಆನಂದವನ್ನುಂಟು ಮಾಡಿದುವು.

ಸ್ವಾಮೀಜಿ ಮತ್ತು ಅವರ ಗುರುಭಾಯಿಗಳು ಶ್ರೀನಗರಕ್ಕೆ ಹೋಗುವ ದಾರಿ ಯಲ್ಲಿ ರುದ್ರಪ್ರಯಾಗವನ್ನು ತಲುಪಿದರು. ಇದು ಮಂದಾಕಿನೀ ಹಾಗೂ ಅಲಕನಂದಾ ನದಿಗಳ ಸಂಗಮಸ್ಥಳ. ಇಲ್ಲಿ ರುದ್ರನಾಥನ ದೇವಾಲಯವಿದೆ. ಆದರೆ ಇಲ್ಲಿಗೆ ಬಂದು ತಲುಪುತ್ತಿದ್ದಂತೆ ಸ್ವಾಮೀಜಿಗೂ ಅಖಂಡಾನಂದರಿಗೂ ಅನಾರೋಗ್ಯವುಂಟಾಯಿತು. ಅಖಂಡಾನಂದರಿಗೆ ಕರ್ಣಪ್ರಯಾಗದಲ್ಲೇ ಶ್ವಾಸನಾಳದ ಉರಿಯೂತ (ಬ್ರಾಂಕೈಟಿಸ್) ಪ್ರಾರಂಭವಾಗಿದ್ದು, ಈಗ ಅದು ಉಲ್ಬಣಿಸಿತು. ಆದರೆ ಅದೃಷ್ಟವಶಾತ್ ಆ ಪ್ರದೇಶಕ್ಕೆ

ಕಾರ್ಯಾರ್ಥವಾಗಿ ಬಂದು ಬಿಡಾರ ಹೂಡಿದ್ದ ಬದರೀದತ್ತ ಜೋಷಿ ಎಂಬ ಸರ್ಕಾರೀ ಅಧಿಕಾರಿಯೊಂದಿಗೆ ಭೇಟಿಯಾಯಿತು. ಈತ ಸ್ವಾಮಿಗಳಿಬ್ಬರಿಗೂ ಆಯುರ್ವೇದ ಔಷಧಿಯನ್ನು ಕೊಟ್ಟ. ಇದರಿಂದ ಅವರ ಕಾಯಿಲೆ ಹತೋಟಿಗೆ ಬಂದಿತು. ಹೀಗೆ ಇಬ್ಬರೂ ಸುಧಾರಿಸಿಕೊಂಡ ಮೇಲೆ ಬದರೀದತ್ತ ಜೋಷಿ ಸ್ವಾಮಿಗಳೆಲ್ಲರನ್ನೂ ಮೇನೆಗಳ ಮೂಲಕ ಅವರ ಮುಂದಿನ ಗುರಿಯಾದ ಶ್ರೀನಗರಕ್ಕೆ ಕಳಿಸಿಕೊಟ್ಟ.

ಶ್ರೀನಗರದಲ್ಲಿ ಅವರೆಲ್ಲರೂ ಅಲಕನಂದಾ ನದೀತೀರದ ಒಂದು ಏಕಾಂತ ಸ್ಥಳದಲ್ಲಿ ಕುಟೀರವೊಂದನ್ನು ಆಶ್ರಯಿಸಿದರು. ಇಲ್ಲಿ ಅವರು ಮಧುಕರಿ ಭಿಕ್ಷೆಯನ್ನು ಅವಲಂಬಿಸಿ ಸುಮಾರು ಒಂದೂವರೆ ತಿಂಗಳ ಕಾಲ ವಾಸವಾಗಿದ್ದರು. ಸ್ವಾಮಿಗಳಿಬ್ಬರ ಆರೋಗ್ಯವೂ ಸುಧಾರಿಸಿತು. ದಿನಗಳನ್ನು ಧ್ಯಾನ-ಪ್ರಾರ್ಥನೆ-ಶಾಸ್ತ್ರಾಧ್ಯಯನಗಳಲ್ಲಿ ಆನಂದದಿಂದ ಕಳೆದರು. ಈ ದಿನಗಳಲ್ಲಿ ಸ್ವಾಮೀಜಿ ತಮ್ಮ ಗುರುಭಾಯಿಗಳಿಗೆ ಉಪನಿಷತ್ತುಗಳನ್ನು ಬೋಧಿಸಿದರು. ಇಲ್ಲಿ ಒಬ್ಬ ಶಾಲಾ ಉಪಾಧ್ಯಾಯ ಇವರ ಸಂಪರ್ಕಕ್ಕೆ ಬಂದ. ಈತ ಹುಟ್ಟಿನಿಂದ ವೈಶ್ಯನಾದರೂ ಈಚೆಗೆ ಕ್ರೈಸ್ತ ಮತಕ್ಕೆ ಪರಿವರ್ತಿತನಾಗಿದ್ದ. ಸ್ವಾಮೀಜಿ ಇವನಿಗೆ ಹಿಂದೂಧರ್ಮದ ವೈಭವ-ವೈಶಿಷ್ಟ್ಯಗಳನ್ನು ಮನಮುಟ್ಟುವಂತೆ ವಿವರಿಸಿ ಹೇಳಿದರು. ಇದರಿಂದ ತುಂಬ ಪ್ರಭಾವಿತನಾದ ಆ ಉಪಾಧ್ಯಾಯ ಸಂಪೂರ್ಣ ಪರಿವರ್ತನೆ ಹೊಂದಿ, ಹಿಂದೂಧರ್ಮದ ತೆಕ್ಕೆಗೆ ಹಿಂದಿರುಗಿದ. ಸ್ವಾಮೀಜಿ ಹಾಗೂ ಅವರ ಗುರುಭಾಯಿಗಳ ಮೇಲೆ ಇವನಿಗೆ ವಿಶೇಷ ವಿಶ್ವಾಸವುಂಟಾಗಿ ಹಲವಾರು ಸಲ ಅವರನ್ನು ತನ್ನ ಮನೆಗೆ ಆಹ್ವಾನಿಸಿ ಸತ್ಕರಿಸಿದ.

ಶ್ರೀನಗರದಿಂದ ಸ್ವಾಮೀಜಿ ಮತ್ತು ಅವರ ಗುರುಭಾಯಿಗಳು ಟೆಹರಿಯ ದಾರಿಯಲ್ಲಿ ಸಾಗಿದರು. ಗಂಗಾ ಮತ್ತು ಯಮುನಾ ನದಿಗಳ ಉಗಮಸ್ಥಾನಗಳಾದ ಗಂಗೋತ್ರಿ ಯಮುನೋತ್ರಿಗಳೆರಡೂ ಇರುವುದು ಟೆಹರಿಯಲ್ಲೇ. ಪ್ರಯಾಣ ಮಾಡುತ್ತ, ಕತ್ತಲಾಗುವ ವೇಳೆಗೆ ಘರವಾಲ್ ಎಂಬ ಒಂದು ಹಳ್ಳಿಗೆ ಬಂದರು. ದಾರಿಯಲ್ಲೆಲ್ಲೂ ಭಿಕ್ಷೆ ಸಿಗದಿದ್ದುದರಿಂದ ಹಸಿವು ಕಿತ್ತು ತಿನ್ನಲಾರಂಭಿಸಿತ್ತು. ದಾರಿಪಕ್ಕದ ಒಂದು ಮುರುಕಲು ಛತ್ರದಲ್ಲಿ ಇಳಿದುಕೊಂಡು, ಬಳಿಕ ಹಳ್ಳಿಯೊಳಗೆ ಪ್ರವೇಶಿಸಿ ಭಿಕ್ಷೆ ಕೇಳಿದರು. ಆದರೆ ಎಷ್ಟು ಬೇಡಿದರೂ ಒಬ್ಬ ಮನುಷ್ಯನೂ ಓಗೊಡಲಿಲ್ಲ, ಒಂದು ತುತ್ತು ಭಿಕ್ಷೆಯೂ ಸಿಗಲಿಲ್ಲ. 'ಇದೆಂಥ ದುರ್ಭಿಕ್ಷದ ಜಾಗಕ್ಕೆ ಬಂದೆವಪ್ಪ!' ಎನ್ನಿಸತೊಡಗಿತು ಅವರಿಗೆ. ಆದರೆ ಈ ಜನರು ಭಿಕ್ಷೆ ಹಾಕದಿದ್ದುದಕ್ಕೆ ಕಾರಣವೆಂದರೆ ಅಲ್ಲಿನ ಒಂದು ವಿಚಿತ್ರ ಸಂಪ್ರದಾಯ. ಈ ಘರವಾಲಿನ ಜನಗಳ ಬಗ್ಗೆ ಒಂದು ಮಾತೇ ಪ್ರಚಲಿತವಿತ್ತು:

*ಘರವಾಲಿನವರಲ್ಲ ಕೊಡುಗೈಯ ದಾನಿಗಳು–*
*ಅವರಂಥ ದಾನಿಗಳೆ ಧರೆಯೊಳಿಲ್ಲ;*
*ಆದರೊಂದೇ ನಿಯಮ–ದೊಣ್ಣೆಯಿಂ ಬೆದರಿಸದೆ*
*ಅವರಿಂದ ದಾನವನು ಪಡೆವರಿಲ್ಲ!*

ಭಿಕ್ಷೆ ಹಾಕಲೇನೂ ಅಭ್ಯಂತರವಿಲ್ಲವಂತೆ; ಆದರೆ ಅವರು ಕೈಯೆತ್ತಿ ಕೊಡಬೇಕಾದರೆ, 'ಕೊಡದಿದ್ದರೆ ದೊಣ್ಣೆಯಿಂದ ಬಡಿದುಹಾಕುತ್ತೇವೆ' ಎಂದು ಹೆದರಿಸಬೇಕಂತೆ! ಅದೃಷ್ಟಕ್ಕೆ, ಅಖಂಡಾನಂದರಿಗೆ ಈ ವಿಷಯ ತಿಳಿದಿತ್ತು; ಈಗ ಇದ್ದಕ್ಕಿದ್ದಂತೆ

ನೆನಪಾಯಿತು. ಕೂಡಲೇ ಈ ಸಂನ್ಯಾಸಿಗಳು ಮನೆಗಳ ಮುಂದೆ ನಿಂತು, ತಮ್ಮ ದಂಡಗಳನ್ನು ಮೇಲೆತ್ತಿ, "ಭಿಕ್ಷೆ ಹಾಕುತ್ತೀರೋ, ದೊಣ್ಣೆ ಬೀಸಬೇಕೋ!" ಎಂದು ಗಂಟಲು ಬಿರಿಯುವಂತೆ ಅಬ್ಬರಿಸಿದರು. ಆಗ ಹಳ್ಳಿಯ ಜನರೆಲ್ಲ ಬಹಳ ವಿನಯದಿಂದ ಆಹಾರವನ್ನು ತಂದಿಟ್ಟು ಕೈಮುಗಿದರು! ಬಿಸಿಯಾಗದೆ ಬೆಣ್ಣೆ ಕರಗದು ಎಂಬ ಮಾತು ಸುಮ್ಮನೆ ಹುಟ್ಟಿಕೊಂಡಿತೆ? ಕೊನೆಗೂ 'ದಂಡೋಪಾಯ'ವೇ ಸಿದ್ಧಿಸಿತು.

ಮರುದಿನ ಅವರು ಅಲ್ಲಿಂದ ಹೊರಟು ಟೆಹರಿಗೆ ಬಂದು ತಲುಪಿದರು. ಗಂಗೆಯ ದಡದಲ್ಲಿ ಸಾಧುಗಳ ವಾಸಕ್ಕಾಗಿಯೇ ಕಟ್ಟಿದ್ದ ಎರಡು ಕುಟೀರಗಳಲ್ಲಿ ಉಳಿದುಕೊಂಡು, ಭಿಕ್ಷೆಯ ಮೇಲೆ ಜೀವಿಸುತ್ತ, ಆಧ್ಯಾತ್ಮಿಕ ಸಾಧನೆಗಳಲ್ಲಿ ತೊಡಗಿದರು. ಇಲ್ಲಿ ಅವರಿಗೆ ಟೆಹರಿ ರಾಜ್ಯದ ದಿವಾನರಾದ ರಘುನಾಥ ಭಟ್ಟಾಚಾರ್ಯರ ಪರಿಚಯವಾಯಿತು. ಅವರ ಅಪೇಕ್ಷೆಯ ಮೇರೆಗೆ ಸ್ವಾಮೀಜಿ ಅವರ ಮನೆಯಲ್ಲಿ ಕೆಲದಿನ ಇಳಿದುಕೊಂಡರು. ಆದರೆ ಸ್ವಾಮೀಜಿ ಗಂಗಾತೀರದ ಒಂದು ಸೂಕ್ತ ಸ್ಥಳದಲ್ಲಿದ್ದು ಧ್ಯಾನದಲ್ಲಿ ಮುಳುಗಿಬಿಡಲು ಕಾತರರಾಗಿದ್ದರು. ಇದನ್ನು ತಿಳಿದು ಅವರ ಆತಿಥೇಯರಾದ ರಘುನಾಥ ಭಟ್ಟಾಚಾರ್ಯರು ಅವರ ನೆರವಿಗೆ ಒದಗಿದರು. ಗಂಗಾ ಹಾಗೂ ವಿಲಂಗನಾ ನದಿಗಳ ಸಂಗಮಸ್ಥಳವಾದ ಗಣೇಶಪ್ರಯಾಗ ಎಂಬಲ್ಲಿ ಒಂದು ಸೊಗಸಾದ ಕುಟೀರವನ್ನು ಕಟ್ಟಿಸಿಕೊಟ್ಟರು. ಆದರೆ ಸ್ವಾಮೀಜಿಯ ದುರದೃಷ್ಟ! ಈ ವೇಳೆಗೆ ಸ್ವಾಮಿ ಅಖಂಡಾನಂದರು ಮತ್ತೆ ಬ್ರಾಂಕೈಟಿಸಿಗೆ ಗುರಿಯಾದರು. ಅವರನ್ನು ಪರೀಕ್ಷಿಸಿದ ವೈದ್ಯರು, ಅವರಿಗೆ ಪರ್ವತ ಪ್ರದೇಶ ಒಗ್ಗುವುದಿಲ್ಲವೆಂದು ತಿಳಿಸಿ, ಚಳಿಗಾಲ ಬೇರೆ ಸಮೀಪಿಸುತ್ತಿರುವುದರಿಂದ ಕೂಡಲೇ ಬಯಲು ಪ್ರದೇಶಕ್ಕೆ ಹೋಗಿರುವುದೊಂದೇ ಉಪಾಯ ಎಂದು ಹೇಳಿದರು. ಗಣೇಶಪ್ರಯಾಗಕ್ಕೆ ಹೊರಡಲು ಎಲ್ಲ ಸಿದ್ಧವಾಗಿರುವಾಗ ಹೀಗಾಗಿಬಿಟ್ಟಿದೆ. ಆದರೆ ಸ್ವಾಮೀಜಿ ಸ್ವಲ್ಪವೂ ಬೇಸರಿಸಲಿಲ್ಲ. ಶ್ರೀರಾಮಕೃಷ್ಣರು ಈ ಸೋದರಸಂನ್ಯಾಸಿಗಳನ್ನೆಲ್ಲ ಅವರ ಕೈಗಲ್ಲವೆ ಒಪ್ಪಿಸಿರುವುದು? ಕೂಡಲೇ ಅವರು ತಮ್ಮ ಯೋಜನೆಯನ್ನು ಬದಲಾಯಿಸಿ, ಡೆಹರಾಡೂನಿಗೆ ಹೋಗಲು ನಿರ್ಧರಿಸಿದರು. ಮತ್ತು ದಿವಾನರ ಬಳಿಗೆ ಹೋಗಿ ವಿಷಯವನ್ನು ವಿವರಿಸಿ, ಮುಂದೆ ಯಾವಾಗಲಾದರೂ ಅವರ ಸೇವೆಯನ್ನು ಪಡೆದುಕೊಳ್ಳುವುದಾಗಿ ಹೇಳಿದರು. ದಿವಾನರು ಸ್ವಾಮೀಜಿ ಹಾಗೂ ಅವರ ಗುರುಭಾಯಿಗಳ ಪ್ರಯಾಣಕ್ಕೆ ವ್ಯವಸ್ಥೆ ಮಾಡಿದರಲ್ಲದೆ, ಡೆಹರಾಡೂನಿನ ಸರಕಾರೀ ವೈದ್ಯರಿಗೆ ಅವರ ಬಗ್ಗೆ ಒಂದು ಪರಿಚಯ ಪತ್ರವನ್ನು ಕೊಟ್ಟು ಬೀಳ್ಕೊಂಡರು.

ಟೆಹರಿಯಿಂದ ಹೊರಟ ಈ ಸಂನ್ಯಾಸಿಗಳು ಪಯಣಿಸುತ್ತ ರಾಜಪುರದ ಹತ್ತಿರ ಬರುತ್ತಿರುವಾಗ, ಆ ಕಡೆಯಿಂದ ಕಾಷಾಯಧಾರಿಯೊಬ್ಬರು ಅವರ ಕಡೆಗೇ ಬರುತ್ತಿರುವುದು ಕಂಡಿತು. ನೋಡಿದರೆ... ತುರೀಯಾನಂದರಂತೆ ಕಾಣುತ್ತಿದ್ದಾರೆ. ಹತ್ತಿರ ಬಂದಂತೆ ನೋಡುತ್ತಾರೆ—ಹೌದು, ಅವರೇ! "ಓ ನಮ್ಮ ಹರಿ!" ಎಂದು ಎಲ್ಲರೂ ಉತ್ಸಾಹದಿಂದ ಗಟ್ಟಿಯಾಗಿ ಕೂಗಿಕೊಂಡರು. ತಮ್ಮ ಪ್ರೀತಿಯ ಗುರುಭಾಯಿಯನ್ನು ಹೀಗೆ ಅನಿರೀಕ್ಷಿತವಾಗಿ ಕಂಡು ಎಲ್ಲರಿಗೂ ಅತ್ಯಾನಂದವಾಯಿತು. ಈಗ ಸ್ವಾಮೀಜಿ ತಮ್ಮ ಸಂನ್ಯಾಸೀಬಂಧುಗಳಾದ ಅಖಂಡಾನಂದರು, ಶಾರದಾನಂದರು, ತುರೀಯಾನಂದರು ಹಾಗೂ ಕೃಪಾನಂದರು—ಇವರುಗಳೊಡನೆ ಡೆಹರಾಡೂನಿಗೆ ನಡೆದರು. ಅಲ್ಲಿನ ಸರಕಾರೀ ವೈದ್ಯರನ್ನು ಭೇಟಿಯಾದಾಗ ಅವರು ಅಖಂಡಾನಂದರನ್ನು ಚೆನ್ನಾಗಿ

ಪರೀಕ್ಷಿಸಿ, ಸೂಕ್ತ ಔಷಧವನ್ನು ಕೊಟ್ಟರು. ಮತ್ತು ಬಯಲುಸೀಮೆಯಲ್ಲೇ ವಾಸವಾಗಿದ್ದುಕೊಂಡು ಔಷಧಿ-ಪಥ್ಯಗಳನ್ನು ಮುಂದುವರಿಸಬೇಕು ಎಂದು ಸೂಚಿಸಿದರು.

ಈಗ ಡೆಹರಾಡೂನಿನಲ್ಲಿ ಇವರೆಲ್ಲ ಅರ್ಧಂಬರ್ಧ ಕಟ್ಟಿದ್ದ ಥಂಡಿ ಮನೆಯೊಂದರಲ್ಲಿ ಬೀಡುಬಿಟ್ಟರು. ಆದರೆ ಅಖಂಡಾನಂದರು ಮಾತ್ರ ಅಲ್ಲಿರಲು ಸಾಧ್ಯವೇ ಇರಲಿಲ್ಲ. ಆದ್ದರಿಂದ ಅವರಿಗಾಗಿ ಬೇರೊಂದು ವಸತಿಯನ್ನು ಹುಡುಕಬೇಕಾಯಿತು. ಸ್ವಾಮೀಜಿ ತಮ್ಮ ಸೋದರನಿಗಾಗಿ ಆಶ್ರಯವನ್ನರಸುತ್ತ ಮನೆಯಿಂದ ಮನೆಗೆ ಅಲೆದರು. ಆದರೆ ಅವರಿಗೆ ವಸತಿ ನೀಡಲು ಯಾರೂ ಮುಂದಾಗಲಿಲ್ಲ. ಎಷ್ಟಾದರೂ ಹರಕಲು ಕಾವಿ ಶಾಟಿಯ ಬಡಸಂನ್ಯಾಸಿಗಳಲ್ಲವೆ ? ಸಾಕಷ್ಟು ಅಲೆದಾಡಿದ ಮೇಲೆ, ಹಿಂದೆ ಕಾಲೇಜಿನಲ್ಲಿ ಸ್ವಾಮೀಜಿಯ ಸಹಪಾಠಿಯೇ ಆಗಿದ್ದ ಹೃದಯಬಾಬು ಎಂಬೊಬ್ಬ ಶಾಲಾ ಅಧ್ಯಾಪಕನ ಭೇಟಿಯಾಯಿತು. ಈಗ ಆತ ಮತಾಂತರ ಹೊಂದಿ ಕ್ರೈಸ್ತನಾಗಿದ್ದ. ಅವನು ಅಖಂಡಾನಂದರನ್ನು ತನ್ನ ಮನೆಯಲ್ಲಿಟ್ಟುಕೊಳ್ಳಲು ಸಂತೋಷದಿಂದ ಮುಂದಾದ. ಅಖಂಡಾನಂದರು ಅವನ ಮನೆಗೆ ಹೋಗಿ ಉಳಿದುಕೊಂಡರು. ಆದರೆ ಮಡಿವಂತ ಹಿಂದೂ ಸಂಪ್ರದಾಯಗಳಲ್ಲೇ ಹುಟ್ಟಿಬೆಳೆದ ಅಖಂಡಾನಂದರಿಗೆ ಆತನ ಮನೆಯ ರೀತಿನೀತಿಗಳು ಸ್ವಲ್ಪವೂ ಸರಿಬರಲಿಲ್ಲ. ಆದ್ದರಿಂದ ತಮ್ಮ ಗುರುಭಾಯಿಗಳು ವಾಸವಾಗಿದ್ದ ಮನೆಗೇ ವಾಪಸು ಬಂದುಬಿಟ್ಟರು. ಈಗ ಸ್ವಾಮೀಜಿ ಅವರಿಗಾಗಿ ಸೂಕ್ತ ವಸತಿ ಹುಡುಕಿಕೊಂಡು ಮತ್ತೆ ಹೊರಟರು. ಎಷ್ಟೆಷ್ಟೋ ಸುತ್ತಾಡಿದ ಮೇಲೆ ಕಡೆಗೆ ಪಂಡಿತ ಆನಂದನಾರಾಯಣ ಎಂಬೊಬ್ಬ ವಕೀಲರು ಅವರೆಲ್ಲರನ್ನೂ ನೋಡಿಕೊಳ್ಳಲು ಮುಂದಾದರು. ಅವರಿಗಾಗಿಯೇ ಒಂದು ಪುಟ್ಟ ಮನೆಯನ್ನು ಬಾಡಿಗೆಗೆ ಗೊತ್ತು ಮಾಡಿ, ಅದರಲ್ಲಿ ಅಖಂಡಾನಂದರಿಗೆ ಪಥ್ಯಪಾನದ ವ್ಯವಸ್ಥೆ ಮಾಡಿದರು.

ಹೃದಯಬಾಬುವಿನ ಮನೆಯಲ್ಲಿ ಸ್ವಾಮೀಜಿಗೆ ಕೆಲವು ಕ್ರೈಸ್ತ ಧರ್ಮಪ್ರಚಾರಕರೊಂದಿಗೆ ಭೇಟಿಯಾಯಿತು. ಆ ಕಾಲದಲ್ಲಿ ಈ ಪ್ರಚಾರಕರ ಮುಖ್ಯ ಕೆಲಸವೆಂದರೆ ಹಿಂದೂ ಧರ್ಮವನ್ನು ತುಚ್ಛೀಕರಿಸಿ, ಕ್ರೈಸ್ತಧರ್ಮದ ಮಹಿಮೆಯನ್ನು ಸಾರುವುದು; ಹಾಗೂ ಹಿಂದೂಗಳನ್ನು ಕ್ರೈಸ್ತಧರ್ಮಕ್ಕೆ ಮತಾಂತರಿಸುವುದು. ಈಗ ಕ್ರೈಸ್ತಮತೀಯನಾದ ಹೃದಯಬಾಬುವಿನ ಮನೆಯಲ್ಲಿ ಹಿಂದೂ ಸಂನ್ಯಾಸಿಗಳನ್ನು ಕಂಡು ಕಸಿವಿಸಿಗೊಂಡ ಆ ಪ್ರಚಾರಕರು ಸ್ವಾಮೀಜಿಯೊಂದಿಗೆ ವಾಗ್ವಾದಕ್ಕಿಳಿದರು. ಹಿಂದೂಧರ್ಮವನ್ನು ಮೂಢನಂಬಿಕೆಗಳ ಕಂತೆ ಎಂದು ಅಪಹಾಸ್ಯ ಮಾಡಲು ನೋಡಿದರು. ಸ್ವತಃ ಕ್ರಿಸ್ತನ ಆರಾಧಕರೂ ಕ್ರೈಸ್ತಧರ್ಮವನ್ನು ಆಳವಾಗಿ ಅಧ್ಯಯಿಸಿದವರೂ ಆದ ಸ್ವಾಮೀಜಿ, ಅವರ ವಾದಗಳನ್ನು ನುಚ್ಚುನೂರು ಮಾಡಿದ್ದಲ್ಲದೆ, ಅವರ ಪವಿತ್ರ ಗ್ರಂಥವಾದ ಬೈಬಲ್ಲಿನಲ್ಲಿರುವ ಹಲವಾರು ಲೋಪದೋಷಗಳನ್ನು, ಅಸಂಬದ್ಧತೆಗಳನ್ನು ಎತ್ತಿ ತೋರಿಸಿದರು. ಆ ಧರ್ಮಪ್ರಚಾರಕರು ಇದನ್ನೆಲ್ಲ ಕೇಳಿದವರೇ ಅಲ್ಲ. ಕೊನೆಗೆ ಅವರು ಸ್ವಾಮೀಜಿಯ ಮಾತಿನ ರಭಸವನ್ನು ತಾಳಲಾರದೆ ಕಾಲಿಗೆ ಬುದ್ಧಿ ಹೇಳಿದರು. ಆದರೆ ತಮ್ಮ ಆತಿಥೇಯನಾದ ಹೃದಯಬಾಬುವಿನ ಮನೆಯಲ್ಲೇ ಕ್ರೈಸ್ತಧರ್ಮೀಯರ ವಿರುದ್ಧವಾಗಿ ವಾದ ಮಾಡಿದ್ದಕ್ಕಾಗಿ ಸ್ವಾಮೀಜಿ ಆಮೇಲೆ ಅವನ ಕ್ಷಮೆ ಕೇಳಿದರು.

ಸ್ವಾಮೀಜಿ ತಮ್ಮ ಗುರುಭಾಯಿಗಳೊಂದಿಗೆ ಸುಮಾರು ಮೂರು ವಾರ ಇದ್ದರು. ಬಳಿಕ ಅಲಹಾಬಾದಿಗೆ ಹೋಗಿ ತಮ್ಮ ಒಬ್ಬ ಸ್ನೇಹಿತನ ಮನೆಯಲ್ಲಿದ್ದು ವಿಶ್ರಮಿಸುವಂತೆ ಅಖಂಡಾನಂದರಿಗೆ ಹೇಳಿ, ತಾವು ಮತ್ತೆ ಸಮಾಧಿಸುಖದ ಬಯಕೆ ಹೊತ್ತು

ಹೃಷೀಕೇಶದತ್ತ ಹೊರಟರು. ತುರೀಯಾನಂದರು, ಶಾರದಾನಂದರು ಮತ್ತು ಕೃಪಾನಂದರು ಕೂಡ ಅವರೊಂದಿಗೆ ನಡೆದರು. ಇತ್ತ ಅಲಹಾಬಾದಿಗೆ ಹೊರಟ ಅಖಂಡಾನಂದರು ದಾರಿಯಲ್ಲಿ ಶಹರಾನ್ ಪುರಕ್ಕೆ ಬಂದು, ಬಾಂಕುಬಿಹಾರಿ ಎಂಬ ವಕೀಲನ ಮನೆಯಲ್ಲಿ ಉಳಿದುಕೊಂಡರು. ಬಳಿಕ ಆತನ ಸಲಹೆಯಂತೆ ಅಲಹಾಬಾದಿಗೆ ಬದಲಾಗಿ ಮೀರತ್ತಿಗೆ ಹೋಗಿ, ತ್ರೈಲೋಕ್ಯನಾಥ ಘೋಷ್ ಎಂಬ ಸರ್ಕಾರೀ ವೈದ್ಯನ ಆಶ್ರಯದಲ್ಲಿ ಉಳಿದುಕೊಂಡರು.

ಇತ್ತ ಸ್ವಾಮೀಜಿ ಮತ್ತೊಮ್ಮೆ ಪುರಾಣಪ್ರಸಿದ್ಧ ಪುಣ್ಯಕ್ಷೇತ್ರವಾದ ಹೃಷೀಕೇಶಕ್ಕೆ ಬಂದಿದ್ದಾರೆ. ಇದು ನಯನಮನೋಹರ, ಪರಮಪ್ರಶಾಂತ ಸ್ಥಳ. ಸುತ್ತಲೂ ಬೆಟ್ಟಗಳು, ಕಣಿವೆಗಳು ಹರಡಿಕೊಂಡಿವೆ; ಗಂಗೆ ಅರ್ಧವೃತ್ತಾಕಾರದಲ್ಲಿ ಹರಿಯುತ್ತಿದ್ದಾಳೆ. ಆ ದಿನಗಳಲ್ಲಿ ಆ ಪ್ರದೇಶ ಸಂಪೂರ್ಣ ಅರಣ್ಯಮಯವಾಗಿತ್ತು. ಸುತ್ತಮುತ್ತೆಲ್ಲ ಸಂನ್ಯಾಸಿಗಳ ಆಶ್ರಮಗಳು, ಕುಟೀರಗಳು. ಅಲ್ಲಿನ ವಾತಾವರಣವೆಲ್ಲ ಪರಮ ಪರಿಶುದ್ಧ, ಪಾವನಕರ. ಈ ದಿನಗಳನ್ನು ನೆನಪಿಸಿಕೊಂಡು ಮುಂದೊಮ್ಮೆ ಸ್ವಾಮೀಜಿ ಹೇಳುತ್ತಾರೆ: "...ನಾನು ಹೃಷೀಕೇಶದಲ್ಲಿ ಹಲವಾರು ಮಹಾತ್ಮರನ್ನು ಕಂಡೆ. ಅವರಲ್ಲೊಬ್ಬ ಹುಚ್ಚನಂತೆ ಕಾಣಿಸಿಕೊಳ್ಳುತ್ತಿದ್ದ. ರಸ್ತೆಯಲ್ಲಿ ಆತ ಬತ್ತಲೆಯಾಗಿ ನಡೆದಾಡುತ್ತಿದ್ದ. ಹುಡುಗರೆಲ್ಲ ಅವನ ಮೇಲೆ ಕಲ್ಲುಗಳನ್ನು ತೂರುತ್ತ, ಅವನನ್ನು ಹಿಂಬಾಲಿಸುತ್ತಿದ್ದರು. ಅವನ ತಲೆ-ಕುತ್ತಿಗೆಗಳಿಂದ ರಕ್ತ ಸೋರುತ್ತಿತ್ತು. ಆದರೆ ಆ ಮಹಾತ್ಮ ಆನಂದದಿಂದ ನಗುನಗುತ್ತಲೇ ಇದ್ದ! ನಾನವನನ್ನು ಕರೆದೊಯ್ದು, ಅವನ ಗಾಯಗಳನ್ನೆಲ್ಲ ತೊಳೆದು, ಬಟ್ಟೆಸುಟ್ಟ ಬೂದಿಯನ್ನು ಹಚ್ಚಿ, ಪಟ್ಟಿ ಕಟ್ಟಿದೆ. ಅವನಿಗೆ ಔಷಧೋಪಚಾರ ಮಾಡುವಾಗಲೂ ಆತ ನಿರಂತರವಾಗಿ ನಗುತ್ತಲೇ ಹೇಳಿದ— 'ನಾನೂ ಆ ಹುಡುಗರೂ ಕಲ್ಲುಗಳನ್ನು ಎಸೆದುಕೊಂಡು ತುಂಬ ತಮಾಷೆಯಾಗಿ ಆಡಿಕೊಂಡಿದ್ದೆವು!.. ಭಗವಂತ ಹೀಗೆಲ್ಲ ಆಟವಾಡುತ್ತಾನೆ' ಎಂದು. ಇಂತಹ ಅನೇಕ ಮಹಾತ್ಮರು, ಸಾಮಾನ್ಯ ಜನ ತಮಗೆ ಸುಮ್ಮನೆ ತೊಂದರೆ ಕೊಡದಿರಲಿ ಎಂದು ವಿಚಿತ್ರ ರೀತಿಯಲ್ಲಿ ಅಡಗಿಕೊಂಡಿರುತ್ತಾರೆ. ಜನಜಂಗುಳಿ ಅವರಿಗೊಂದು ಬಾಧಕ. ಒಬ್ಬ ಮಹಾಪುರುಷ ತನ್ನ ಗುಹೆಯ ಎದುರಿಗೆ ಮನುಷ್ಯರ ಮೂಳೆಗಳನ್ನು ಹರಡಿರುತ್ತಿದ್ದ. ಇವನಾರೋ ನರಭಕ್ಷಕನಿರಬೇಕು ಎಂದು ಜನ ಭ್ರಮಿಸಿ ದೂರವೇ ಉಳಿಯುವಂತೆ ಮಾಡಲು ಈ ಉಪಾಯ! ಮತ್ತೊಬ್ಬ ಸಾಧು ಜನರ ಮೇಲೆ ಅಕಾರಣವಾಗಿ ಕಲ್ಲುತೂರುತ್ತಿದ್ದ..."

ಸ್ವಾಮೀಜಿ ಹಾಗೂ ಅವರ ಸೋದರಸಂನ್ಯಾಸಿಗಳು ಅಲ್ಲಿನ ಚಂದ್ರೇಶ್ವರ ಮಹಾದೇವನ ದೇವಸ್ಥಾನದ ಬಳಿಯಲ್ಲಿ, ತಾವೇ ಕುಟೀರವೊಂದನ್ನು ಕಟ್ಟಿಕೊಂಡು ವಾಸಿಸಲಾರಂಭಿಸಿದರು. ಊಟಕ್ಕೆ ಭಿಕ್ಷೆ ಇದ್ದೇ ಇದೆ. ಇಲ್ಲಿ ಮತ್ತೊಮ್ಮೆ ಸ್ವಾಮೀಜಿ ಅತ್ಯಂತ ತೀವ್ರವಾದ ತಪಸ್ಸಾಧನೆಯಲ್ಲಿ ಮುಳುಗಿಬಿಡಲು ತೀರ್ಮಾನಿಸಿದರು. ಆದರೆ ವಿಧಿಯಿಚ್ಛೆ ಬೇರೆಯಾಗಿತ್ತು. ಸಾಧನೆಯಲ್ಲಿ ನಿರತರಾಗುವ ಮೊದಲೇ ಅವರು ತೀವ್ರ ಜ್ವರ ಹಾಗೂ ಗಂಟಲ ನೋವಿಗೆ ಗುರಿಯಾಗಿ ಹಾಸಿಗೆ ಹಿಡಿದರು. ಒಂದು ದಿನ ಸೋದರಸಂನ್ಯಾಸಿಗಳೆಲ್ಲ ತಮ್ಮ ಕುಟೀರವನ್ನು ವಿಸ್ತರಿಸುವುದಕ್ಕಾಗಿ ಬಿದಿರನ್ನು ಕತ್ತರಿಸಿ ತರಲು ಕಾಡಿಗೆ ಹೋಗಿದ್ದರು. ಹಿಂದಿರುಗಿ ಬಂದಾಗ ನೋಡುತ್ತಾರೆ, ಸ್ವಾಮೀಜಿ ಸಂಪೂರ್ಣ ನಿಶ್ಶಕ್ತರಾಗಿ ಮಲಗಿಬಿಟ್ಟಿದ್ದಾರೆ. ನೋಡನೋಡುತ್ತಿದ್ದಂತೆ ಪರಿಸ್ಥಿತಿ ಹದ

ಗೆಡುತ್ತ ಬಂತು. ಮೂವರು ಗುರುಭಾಯಿಗಳೂ ಅಸಹಾಯಕರಾಗಿ ಸುಮ್ಮನೆ ನೋಡು ತ್ತಿದ್ದಾರೆ. ಸುತ್ತಲೂ ೩೦ ಮೈಲಿಗಳ ದೂರದಲ್ಲಿ ಯಾವುದೇ ವೈದ್ಯಕೀಯ ಸೌಲಭ್ಯ ದೊರಕುವಂತಿಲ್ಲ. ಸ್ವಾಮೀಜಿ ದೇಹಪ್ರಜ್ಞೆ ಕಳೆದುಕೊಂಡು, ಒರಟು ಕಂಬಳಿಗಳ ಮೇಲೆ ಮಲಗಿದ್ದಾರೆ. ಕ್ರಮೇಣ ಅವರ ನಾಡಿಬಡಿತ ನಿಧಾನವಾಯಿತು; ದೇಹ ತಣ್ಣಗಾಗತೊಡ ಗಿತು. ಗುರುಭಾಯಿಗಳು ದುಃಖೋದ್ವೇಗದಿಂದ ಚಡಪಡಿಸುತ್ತಿದ್ದಂತೆ, ತಲೆಯ ಭಾಗ ವನ್ನು ಬಿಟ್ಟು ಮೈಯೆಲ್ಲ ಮಂಜಿನಂತಾಗಿಬಿಟ್ಟಿತು; ನಾಡಿ ಮತ್ತಷ್ಟು ಕ್ಷೀಣಗೊಂಡು ಕಡೆಗೆ ನಿಂತೇಹೋದಂತಾಯಿತು ! ಇನ್ನವರು ಬದುಕಿಯಾರೆಂಬ ಆಸೆ ಉಳಿಯಲಿಲ್ಲ. ಗುರುಭಾಯಿಗಳು ಕಿಂಕರ್ತವ್ಯವಿಮೂಢರಾಗಿ ರೋದಿಸಲಾರಂಭಿಸಿದರು. ತಮ್ಮ ಪ್ರೀತಿಯ ನರೇನನ ಪ್ರಾಣಕ್ಕೆ ಬದಲಾಗಿ ತಮ್ಮ ಪ್ರಾಣಗಳನ್ನು ಒಯ್ಯುವಂತೆ ಭಗವಂತನಲ್ಲಿ ಮೊರೆಯಿಟ್ಟರು. ಪರಿಸ್ಥಿತಿ ಹೀಗಿರುವಾಗ ಯಾರೋ ಅಪರಿಚಿತ ಸಾಧುವೊಬ್ಬ ಅಲ್ಲಿಗೆ ಬಂದ. ಅವನು ಮೈಮೇಲೊಂದು ಕಂಬಳಿ ಹೊದ್ದಿದ್ದ. ಈ ಸಂನ್ಯಾಸಿಗಳು ಹೀಗೆ ಅಳುತ್ತ ಕುಳಿತಿರುವುದನ್ನು ಕಂಡು ಕಾರಣವೇನೆಂದು ಕೇಳಿದ. ಏಕೆಂದು ಹೇಳಬೇಕಾಗಿಯೇ ಇಲ್ಲ; ಇದಿರಲ್ಲೇ ಸ್ವಾಮೀಜಿ ಮೃತಪ್ರಾಯರಾಗಿ ಮಲಗಿ ದ್ದಾರೆ. ಆ ಸಾಧು ತನ್ನ ಜೋಳಿಗೆಯಿಂದ ಅಶ್ವತ್ಥದ ಬೇರಿನ ಪುಡಿಯಂತೆ ಹಾಗೂ ಜೇನುತುಪ್ಪದಂತೆ ಕಾಣುತ್ತಿದ್ದ ಎರಡು ವಸ್ತುಗಳನ್ನು ತೆಗೆದು, ಎರಡನ್ನೂ ಬೆರೆಸಿ, ಸ್ವಾಮೀಜಿಯ ಬಾಯೊಳಗೆ ಬಲವಂತವಾಗಿ ತಳ್ಳಿದ. ಔಷಧ ಪವಾಡದಂತೆ ಕೆಲಸ ಮಾಡಿತು. ಕೆಲ ನಿಮಿಷಗಳಲ್ಲೇ ಅವರ ದೇಹ ಬೆಚ್ಚಗಾಯಿತು, ನಾಡಿಬಡಿತ ಹೆಚ್ಚಾಯಿತು. ಪ್ರಾಣಾಪಾಯ ತಪ್ಪಿತೆಂಬುದು ಖಚಿತವಾಯಿತು. ಆ ಸಾಧುವನ್ನು ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬರುವಂತೆ ಮಾಡಿದ್ದು ದೇವರೇ ಅಲ್ಲದೆ ಮತ್ತಾರು ? ಶ್ರೀರಾಮಕೃಷ್ಣರ ಇಚ್ಛೆಗೆ ಸಂಪೂರ್ಣ ಶರಣಾಗಿ, ಜಗನ್ಮಾತೆಯ ಕಾರ್ಯವನ್ನು ನಡೆಸಲು ನಿಯೋಜಿತರಾಗಿರುವ ವಿವೇಕಾನಂದರಿಗೆ ಇಂಥ ಸಾವು ಉಂಟಾದೀತೆ ?

ಸ್ವಲ್ಪ ಹೊತ್ತಿನಲ್ಲಿ ಸ್ವಾಮೀಜಿ ಕಣ್ದೆರೆದು ಮಾತನಾಡುವ ಪ್ರಯತ್ನ ಮಾಡಿದರು. ಆದರೆ ಸ್ವರವಿನ್ನೂ ಗಟ್ಟಿಯಾಗಿ ಹೊರಡುತ್ತಿಲ್ಲ. ಆಗ ಗುರುಭಾಯಿಗಳಲ್ಲೊಬ್ಬರು ಅವರ ತುಟಿಯ ಹತ್ತಿರ ತಮ್ಮ ಕಿವಿಯಿಟ್ಟು ಕೇಳಿದರು. "ಏನೂ ಹೆದರಬೇಡಿ, ಧೈರ್ಯ ವಾಗಿರಿ. ನಾನು ಸಾಯಲಾರೆ!" ಎಂದರು ಸ್ವಾಮೀಜಿ. ಮತ್ತೆ ಕ್ರಮೇಣ ಚೇತರಿಸಿ ಕೊಳ್ಳಲಾರಂಭಿಸಿದರು. ಆಮೇಲೆ ಒಮ್ಮೆ ಅವರು ಗುರುಭಾಯಿಗಳಿಗೆ ಹೇಳುತ್ತಾರೆ: "ಆ ಅರೆಪ್ರಜ್ಞಾವಸ್ಥೆಯಲ್ಲಿದ್ದಾಗ, ನಾನು ಈ ಜಗತ್ತಿನಲ್ಲಿ ಈಡೇರಿಸಬೇಕಾದ ಒಂದು ಮಹತ್ವದ ಕಾರ್ಯವಿದೆ; ಮತ್ತು ಅದನ್ನು ಮಾಡಿ ಮುಗಿಸುವವರೆಗೆ ನನಗೆ ವಿಶ್ರಾಂತಿಯಿಲ್ಲ ಎಂದು ಕಂಡುಕೊಂಡೆ." ನಿಜಕ್ಕೂ ಅವರಲ್ಲಿ ಅಪರಿಮಿತ ಆಧ್ಯಾತ್ಮಿಕ ಶಕ್ತಿ ತುಂಬಿಕೊಳ್ಳುತ್ತಿದ್ದುದನ್ನು ಅವರ ಗುರುಭಾಯಿಗಳು ಸ್ಪಷ್ಟವಾಗಿ ಕಾಣುತ್ತಿದ್ದರು. ಅದು ಅವರೊಳಗೆ ಪ್ರಚಂಡ ಒತ್ತಡದಿಂದ ಹುದುಗಿದ್ದು, ಸೂಕ್ತ ರೀತಿಯಲ್ಲಿ ಹೊರಚಿಮ್ಮಲು ಚಡಪಡಿಸುತ್ತಿರುವಂತಿತ್ತು.

ಈ ಒಂದು ಅನುಭವದಿಂದಾಗಿ ಸೋದರಸಂನ್ಯಾಸಿಗಳಿಗೆ, ತಮ್ಮ ಜೀವನದಲ್ಲಿ ಸ್ವಾಮೀಜಿಯ ಪಾತ್ರ ಎಷ್ಟು ಮಹತ್ತರವಾದದ್ದು ಎಂಬ ಅರಿವುಂಟಾಯಿತು. ಶ್ರೀರಾಮ ಕೃಷ್ಣರಂತೂ ದೇಹತ್ಯಾಗ ಮಾಡಿ ಹೊರಟುಹೋಗಿದ್ದಾರೆ. ಈಗ ಸ್ವಾಮೀಜಿಯೂ ಹೊರಟುಬಿಟ್ಟರೆ ತಮ್ಮೆಲ್ಲರ ಗತಿಯೇನು ! ಸಂಘದ ಗತಿಯೇನು ! ಸ್ವಾಮೀಜಿ

ಇಲ್ಲದೆಹೋದರೆ ತಾವು ಅನಾಥರೇ ಸರಿ. ಸ್ವಾಮೀಜಿಯೊಬ್ಬರಿಲ್ಲದಿದ್ದರೆ ಈ ಜಗತ್ತು ತಮ್ಮ ಪಾಲಿಗೆ ಕೇವಲ ಒಂದು ಮರಳುಗಾಡಾಗುತ್ತದೆ ಎಂಬುದು ಈ ಸೋದರ ಸಂನ್ಯಾಸಿಗಳ ಅರಿವಿಗೆ ಬಂತು.

ಈ ಮಧ್ಯೆ, ಟೆಹರಿಯ ಮಹಾರಾಜನೂ ಆತನ ದಿವಾನರಾದ ರಘುನಾಥ ಭಟ್ಟಾಚಾರ್ಯರೂ ಹೃಷೀಕೇಶದ ಮೂಲಕ ಅಜ್ಮೀರಕ್ಕೆ ಪ್ರಯಾಣ ಮಾಡುತ್ತಿದ್ದರು. ಸ್ವಾಮೀಜಿ ತೀವ್ರ ಅನಾರೋಗ್ಯದಿಂದ ಮಲಗಿದ್ದಾರೆಂದು ಕೇಳಿದ ದಿವಾನರು ಒಡನೆಯೇ ಬಂದು ನೋಡಿದರು. ಅವರು ಸ್ವಾಮೀಜಿಗೆ ದೆಹಲಿಯ ಒಬ್ಬ ಹಕೀಮರನ್ನು ಕಂಡು ಚಿಕಿತ್ಸೆಯನ್ನು ಪಡೆಯುವಂತೆ ಸೂಚಿಸಿದರು. ಮತ್ತು ಆ ಹಕೀಮರಿಗೆ ಒಂದು ಪರಿಚಯಪತ್ರವನ್ನೂ ಇವರ ಕುಟೀರದ ದುರಸ್ತಿಗಾಗಿ ಹಣವನ್ನೂ ಕೊಟ್ಟು ಬೀಳ್ಕೊಂಡರು.

ಆದರೆ ಸ್ವಾಮೀಜಿ ಹೃಷೀಕೇಶದಿಂದ ಏಕಾಂಗಿಯಾಗಿ ಹರಿದ್ವಾರಕ್ಕೆ ಬಂದರು— ತೀವ್ರ ಸಾಧನೆಯಲ್ಲಿ ತೊಡಗಿ, ಮನಸ್ಸನ್ನು ಸಮಾಧಿಯಲ್ಲಿ ಲೀನಗೊಳಿಸಿಬಿಡಬೇಕೆಂಬ ಅದೇ ಬಯಕೆಯಿಂದ. ಸ್ವಲ್ಪ ಆರೋಗ್ಯ ಸುಧಾರಿಸಿ ಶಕ್ತಿ ಬಂದರೆ ಸಾಕು, ಮತ್ತೆ ಸಾಧನೆಗೆ ಮನಸ್ಸು ಮಾಡುತ್ತಾರೆ! ಅವರ ಉತ್ಸಾಹ ಅಷ್ಟು ಅದಮ್ಯ. ಆ ಸಮಯದಲ್ಲಿ, ಹರಿದ್ವಾರಕ್ಕೆ ಹದಿಮೂರು ಮೈಲಿ ದೂರದಲ್ಲಿರುವ ಕಂಖಲ್ ಎಂಬಲ್ಲಿ ತಪೋನಿರತರಾಗಿದ್ದ ಸ್ವಾಮಿ ಬ್ರಹ್ಮಾನಂದರು, ಸ್ವಾಮೀಜಿ ಬಂದಿರುವ ಸುದ್ದಿ ತಿಳಿದು ಹರಿದ್ವಾರಕ್ಕೆ ಬಂದರು. ಬಳಿಕ ಶಾರದಾನಂದರು, ಕೃಪಾನಂದರು ಹಾಗೂ ತುರೀಯಾನಂದರು—ಈ ಮೂವರು ಕೂಡ ಹರಿದ್ವಾರಕ್ಕೆ ಬಂದರು. ಇಲ್ಲಿಂದ ಎಲ್ಲರೂ ಒಟ್ಟಾಗಿ ದೆಹಲಿಗೆ ಹೊರಟರು. ಇಲ್ಲಿಗೆ, ಹಿಮಾಲಯದಲ್ಲಿ ವಾಸವಾಗಿದ್ದು ಧ್ಯಾನಾನಂದದಲ್ಲಿ ಲೀನರಾಗಿರಬೇಕೆಂಬ ಸ್ವಾಮೀಜಿಯ ಬಹುಕಾಲದ ಹಂಬಲ ಕೊನೆಗೊಂಡಂತಾಯಿತು.

ದಾರಿಯಲ್ಲಿ ಶಹರಾನ್‌ಪುರಕ್ಕೆ ಹೋದಾಗ, ಅವರಿಗೆ ಅಖಂಡಾನಂದರು ಮೀರತ್ತಿನಲ್ಲಿರುವ ವಿಷಯ ತಿಳಿಯಿತು. ಸರಿ; ಎಲ್ಲರೂ ಅವರನ್ನು ಅನುಸರಿಸಿಕೊಂಡು ಮೀರತ್ತಿಗೆ ಹೋದರು (೧೮೯೦ರ ಡಿಸೆಂಬರ್).

ತಮ್ಮ ಗುರುಭಾಯಿಗಳನ್ನೆಲ್ಲ ಕಂಡು ಅಖಂಡಾನಂದರಿಗೆ ಬಹಳ ಸಂತೋಷವಾಯಿತು. ಆದರೆ ತಮ್ಮ ನಾಯಕನಾದ ಸ್ವಾಮೀಜಿಯ ದೇಹದ ಮೇಲೆ ಕಾಯಿಲೆಯಿಂದಾಗಿದ್ದ ದುಷ್ಪರಿಣಾಮವನ್ನು ಕಂಡು ಅವರಿಗೆ ಆಘಾತವಾಯಿತು. ಸ್ವಾಮೀಜಿ ಅಷ್ಟು ಇಳಿದುಹೋದದ್ದನ್ನು ಅವರೆಂದೂ ಕಂಡಿರಲಿಲ್ಲ. ಸ್ವಾಮೀಜಿಯನ್ನು ನೋಡಿಕೊಳ್ಳಬೇಕಾಗಿದ್ದ ತಾವೇ ಹೀಗೆ ಕಾಯಿಲೆ ಬಿದ್ದದ್ದನ್ನು ನೆನೆಸಿಕೊಂಡು ಅಖಂಡಾನಂದರು ಅದೆಷ್ಟು ಪರಿತಪಿಸಿದರೊ!

ಈಗ ಅವರು ತಮ್ಮನ್ನು ಇರಿಸಿಕೊಂಡು ಶುಶ್ರೂಷೆ ಮಾಡುತ್ತಿದ್ದ ಡಾ. ತ್ರೈಲೋಕ್ಯನಾಥ ಘೋಷನ ಮನೆಯಲ್ಲೇ ಸ್ವಾಮೀಜಿಯ ವಾಸ್ತವ್ಯಕ್ಕೂ ಚಿಕಿತ್ಸೆಗೂ ಏರ್ಪಾಡು ಮಾಡಿದರು. ಉಳಿದವರು ಯಜ್ಞೇಶ್ವರ ಬಾಬು ಎಂಬವರ ಮನೆಯಲ್ಲಿ ಇಳಿದುಕೊಂಡರು. ಕೆಲದಿನಗಳ ಬಳಿಕ ಸ್ವಾಮೀಜಿಯೂ ಸೇರಿದಂತೆ ಎಲ್ಲ ಸೋದರ ಸಂನ್ಯಾಸಿಗಳೂ ಸೇಠ್‌ಜಿಯೊಬ್ಬನ ಆಹ್ವಾನಕ್ಕೊಪ್ಪಿ ಆತನ ಉದ್ಯಾನಗೃಹದಲ್ಲಿ ಇಳಿದುಕೊಂಡರು. ಅವರ ಆತಿಥೇಯನಾದ ಸೇಠ್‌ಜಿ ಅವರಿಗೆ ಬೇಕಾದ ಅನುಕೂಲತೆಗಳನ್ನೆಲ್ಲ ಮಾಡಿಕೊಟ್ಟ. ಸ್ವಾಮೀಜಿ ತಮ್ಮ ಅನಾರೋಗ್ಯದಿಂದ ಇನ್ನೂ ಪೂರ್ಣ ಗುಣಮುಖ

ರಾಗಿರಲಿಲ್ಲ. ಪರಿವ್ರಾಜಕ ದಿನಗಳಲ್ಲಿ ಕೈಗೊಂಡಿದ್ದ ತೀವ್ರ ಸಾಧನೆಗಳು, ನಿರಂತರ ಕಾಲ್ನಡಿಗೆ, ಸಕಾಲಕ್ಕೆ ಆಹಾರ-ವಿಶ್ರಾಂತಿಗಳಿಲ್ಲದಿದ್ದುದು; ಇವೆಲ್ಲದರ ಜೊತೆಗೆ ಆಗಾಗ ತಗಲಿಕೊಳ್ಳುತ್ತಿದ್ದ ಕಾಯಿಲೆಗಳು—ಇವುಗಳಿಂದ ಅವರ ಶರೀರ ಜರ್ಝರಿತವಾಗಿತ್ತು. ಮತ್ತೆ ಕಾಯಿಲೆ ಮರುಕಳಿಸದಂತೆ ಎಚ್ಚರವಹಿಸಿ ನಿಯಮಿತವಾಗಿ ಔಷಧ-ಆಹಾರ ಗಳನ್ನು ತೆಗೆದುಕೊಂಡದ್ದರಿಂದ ಅವರ ಆರೋಗ್ಯ ಸುಧಾರಿಸಿ, ಶರೀರ ದೃಢವಾಗುತ್ತ ಬಂದಿತು.

ಇದೇ ಸಮಯಕ್ಕೆ, ಪರಿವ್ರಾಜಕರಾಗಿ ಸುತ್ತಾಡುತ್ತಿದ್ದ ಸ್ವಾಮಿ ಅದ್ವೈತಾನಂದರು ಮೀರತ್ತಿಗೆ ಬಂದು ಗುರುಭಾಯಿಗಳನ್ನು ಕೂಡಿಕೊಂಡರು. ಈಗ ಸೇಠ್‌ಜಿಯ ಮನೆ ಮತ್ತೊಂದು ಬಾರಾನಾಗೋರ್ ಮಠವೇ ಆದಂತಾಯಿತು. ಏಕೆಂದರೆ, ಇಲ್ಲೀಗ ವಿವೇಕಾನಂದರು, ಬ್ರಹ್ಮಾನಂದರು, ಶಾರದಾನಂದರು, ತುರೀಯಾನಂದರು, ಅಖಂಡಾ ನಂದರು ಮತ್ತು ಅದ್ವೈತಾನಂದರು—ಹೀಗೆ ರಾಮಕೃಷ್ಣಸಂಘದ ಆರು ಜನ ಸೋದರ ಸಂನ್ಯಾಸಿಗಳು, ಮತ್ತವರ ಗುರುಭಾಯಿಯಾದ ಸ್ವಾಮಿ ಕೃಪಾನಂದರು—ಇಷ್ಟು ಜನ ಒಟ್ಟಾಗಿ ಸೇರಿದ್ದಾರೆ. ಸಹಜವಾಗಿಯೇ ಇಲ್ಲೊಂದು ಅದ್ಭುತ ಆಧ್ಯಾತ್ಮಿಕ ವಾತಾವರಣ ವೇರ್ಪಟ್ಟಿತು. ಧ್ಯಾನ-ಜಪ-ಪ್ರಾರ್ಥನೆ-ಭಜನೆಗಳಲ್ಲಿ ದಿನಗಳನ್ನು ಕಳೆದರು. ಅಲ್ಲದೆ, ಸ್ವಾಮೀಜಿಯ ನೇತೃತ್ವದಲ್ಲಿ ಶಾಸ್ತ್ರಗ್ರಂಥಗಳನ್ನೂ ಸಂಸ್ಕೃತ-ಇಂಗ್ಲಿಷ್ ಸಾಹಿತ್ಯದ ಹಲವಾರು ಶ್ರೇಷ್ಠ ಗ್ರಂಥಗಳನ್ನೂ ಅಧ್ಯಯಿಸಿದರು.

ತಮ್ಮ ಜ್ಞಾನಕೋಶವನ್ನು ವರ್ಧಿಸಿಕೊಳ್ಳಲು ಸ್ವಾಮೀಜಿ ಸದಾ ಕಾತರರಾಗಿರು ತ್ತಿದ್ದರು. ಇದು ಅವರ ಹುಟ್ಟುಗುಣ. ಮೀರತ್ತಿನಲ್ಲಿದ್ದಾಗ ಅವರು, ಅಖಂಡಾನಂದರ ಮೂಲಕ ಸಮೀಪದ ಗ್ರಂಥಾಲಯವೊಂದರಿಂದ ಸರ್ ಜಾನ್ ಲುಬ್ಬಾಕ್ ಎಂಬವನ ಕೃತಿಗಳನ್ನು ತರಿಸಿಕೊಳ್ಳುತ್ತಿದ್ದರು. ಈ ಗ್ರಂಥಗಳು ಗಾತ್ರದಲ್ಲೂ ವಿಷಯದಲ್ಲೂ ಬಹಳ ಹಿರಿದಾದವು. ಸ್ವಾಮೀಜಿ ಈ ಕೃತಿಗಳ ಸಂಪುಟಗಳನ್ನು ಪ್ರತಿದಿನ ಒಂದೊಂದಾಗಿ ತರಿಸಿಕೊಂಡು ಮರುದಿನ ಹಿಂದಿರುಗಿಸುತ್ತಿದ್ದರು. ಇದನ್ನು ಗಮನಿಸುತ್ತಿದ್ದ ಗ್ರಂಥಾ ಲಯದ ಅಧಿಕಾರಿ ಭಾವಿಸಿದ—ಇವರ ಸ್ನೇಹಿತರು ಸುಮ್ಮನೆ ಓದುವ ನಟನೆ ಮಾಡು ತ್ತಿರಬೇಕು ಎಂದು. ಒಂದು ದಿನ ಆತ ಅಸಹನೆಗೊಂಡು, ಅಖಂಡಾನಂದರನ್ನು ವ್ಯಂಗ್ಯ ವಾಗಿ ಕೇಳಿದ: "ಏನು, ನಿಮ್ಮ ಆ ಸ್ನೇಹಿತರು ಪುಸ್ತಕದ ಹೊಳೆಯುವ ಹೊರಕವಚ ವನ್ನಷ್ಟೇ ನೋಡಿ ಹಿಂದಿರುಗಿಸುವಂತೆ ಕಾಣುತ್ತದೆ?" ಆತ ಹೀಗೆಂದದ್ದನ್ನು ಕೇಳಿತಿಳಿದ ಸ್ವಾಮೀಜಿ ತಾವೇ ಬಂದು ಆ ಅಧಿಕಾರಿಯನ್ನು ಕಂಡು, "ಸ್ವಾಮಿ, ನೀವು ಕಳಿಸಿದ ಪುಸ್ತಕಗಳನ್ನೆಲ್ಲ ನಾನು ಓದಿದ್ದೇನೆ. ಇದರ ಬಗ್ಗೆ ನಿಮಗೇನಾದರೂ ಸಂದೇಹವಿದ್ದರೆ ನೀವು ಯಾವ ಪ್ರಶ್ನೆಯನ್ನಾದರೂ ಕೇಳಬಹುದು" ಎಂದರು. ನೋಡಿಯೇಬಿಡೋಣ ಎಂದು ಆತ ಹಲವಾರು ಪ್ರಶ್ನೆಗಳನ್ನು ಕೇಳಿದ; ಪ್ರತಿಯೊಂದಕ್ಕೂ ಅತ್ಯಂತ ಸಮರ್ಪಕ ವಾದ ಉತ್ತರ ಬಂದಿತು! ಆಗ ಆಶ್ಚರ್ಯದಿಂದ ಅವನ ಬಾಯಿ ಕಟ್ಟಿಹೋಯಿತು. ತನ್ನ ದುಡುಕುಮಾತಿಗಾಗಿ ಕ್ಷಮೆ ಯಾಚಿಸಿದ. ಅಖಂಡಾನಂದರಿಗೂ ಅವನಷ್ಟೇ ಆಶ್ಚರ್ಯವಾಗಿತ್ತು. ಆಮೇಲೆ ಅವರು, ಇದು ಹೇಗೆ ಸಾಧ್ಯವಾಯಿತು ಎಂದು ಕೇಳಿ ದಾಗ ಸ್ವಾಮೀಜಿ ಹೇಳುತ್ತಾರೆ: "ನಾನು ಒಂದು ಪುಸ್ತಕವನ್ನು ಓದುವಾಗ ಒಂದೊಂದೇ ಪದವನ್ನು ಓದುವುದಿಲ್ಲ; ವಾಕ್ಯವಾಕ್ಯಗಳನ್ನೇ ಓದುತ್ತೇನೆ. ಕೆಲವೊಮ್ಮೆ ಪ್ಯಾರಾ

ಪ್ಯಾರಾಗಳನ್ನೇ ಓದಿಕೊಂಡು ಹೋಗುತ್ತೇನೆ. ಎಂದರೆ, ಕಲೈಡೋಸ್ಕೋಪಿನ* ರೂಪದಲ್ಲಿ ಓದಿಕೊಂಡು ಹೋಗುತ್ತೇನೆ.''

ಇದೊಂದು ಅತ್ಯಂತ ಅಚ್ಚರಿಯ ಸಂಗತಿಯೆಂಬುದರಲ್ಲಿ ಸಂದೇಹವೇ ಇಲ್ಲ. ಸಾಮಾನ್ಯವಾದ ಒಂದು 'ಚಂದಮಾಮ' ಓದಿಯೇ ಎಲ್ಲವನ್ನೂ ನೆನಪಿಟ್ಟುಕೊಳ್ಳುವುದು ಎಷ್ಟು ಕಷ್ಟ! ಹಾಗಿರುವಾಗ ಅಂತಹ ಕ್ಲಿಷ್ಟ ವಿಚಾರಗಳನ್ನೊಳಗೊಂಡ ಬೃಹತ್ ಗ್ರಂಥಗಳನ್ನು ಓದಿ ನೆನಪಿಟ್ಟುಕೊಳ್ಳುವುದು ಸಾಧ್ಯವೆಂದರೆ! ಅದೂ ಒಂದೇ ಸಲ ಓದಿದ್ದು, ಒಂದೇ ದಿನದಲ್ಲಿ ಓದಿ ಮುಗಿಸಿದ್ದು! ಆದರೆ ಇತರರ ದೃಷ್ಟಿಗೆ ಇದೊಂದು ಪರಮಾಶ್ಚರ್ಯದ ವಿಷಯವಾದರೂ ವಿವೇಕಾನಂದರಿಗೆ ಈ ಅದ್ಭುತ ಗ್ರಹಣ ಶಕ್ತಿಯೂ ಧಾರಣಶಕ್ತಿಯೂ ಸ್ವಭಾವಸಹಜವಾಗಿದ್ದ ಗುಣಗಳು. ಇವುಗಳನ್ನು ಅವರು ಬಾಲ್ಯದಿಂದಲೂ ಬೆಳೆಸಿಕೊಂಡು ಬಂದಿದ್ದನ್ನು ನೋಡಿದ್ದೇವೆ. ಅವರ ಜೀವನದ ಕೊನೆಯವರೆಗೂ ಈ ಶಕ್ತಿ ಕಿಂಚಿತ್ತೂ ಮಾಸಲಿಲ್ಲ. ಇದನ್ನು ತೋರಿಸುವ ಕೆಲವು ಘಟನೆಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಶ್ರೀರಾಮಕೃಷ್ಣರು ತೀವ್ರ ಕಾಯಿಲೆಯಿಂದ ಹಾಸಿಗೆ ಹಿಡಿದಿದ್ದ ಸಂದರ್ಭ. ಅವರನ್ನು ನೋಡಿಕೊಳ್ಳುತ್ತಿದ್ದ ಡಾ. ಮಹೇಂದ್ರಲಾಲ ಸರ್ಕಾರ್ ಆ ಕಾಲದ ಪ್ರಸಿದ್ಧ ಹೋಮಿಯೋ ವೈದ್ಯರಲ್ಲೊಬ್ಬ. ಅಲ್ಲದೆ ಅಸಾಧಾರಣ ಬುದ್ಧಿಶಾಲಿ ಹಾಗೂ ಜ್ಞಾನಿ. ಒಮ್ಮೆ ಶ್ರೀರಾಮಕೃಷ್ಣರು ಆತನಿಗೆ ನರೇಂದ್ರನೊಡನೆ ಮಾತುಕತೆ ನಡೆಸುವಂತೆ ಹೇಳಿದರು. ಯಾವುದೋ ವಿಷಯವಾಗಿ ಇಬ್ಬರೂ ವಾದ-ವಿವಾದ ನಡೆಸಿದರು. ಮಾತಿನ ಸಂದರ್ಭದಲ್ಲಿ ಸರ್ಕಾರ ತನ್ನ ವಾದವನ್ನು ಸಮರ್ಥಿಸುವ ಒಂದು ಪುಸ್ತಕವನ್ನು ಹೆಸರಿಸಿದ. ತಕ್ಷಣ ನರೇಂದ್ರ ಕೇಳಿದ, "ಮಹಾಶಯರೆ, ನೀವು ಆ ಪುಸ್ತಕವನ್ನು ಆಮೂಲಾಗ್ರವಾಗಿ ಓದಿದ್ದೀರೋ ಅಥವಾ ಸುಮ್ಮನೆ ಮೇಲುಮೇಲೆ ನೋಡಿ ತಿರುವಿ ಹಾಕಿದ್ದೀರೋ ಎಂದು ಕೇಳಬಹುದೇ?'' ಸರ್ಕಾರ ಅವಾಕ್ಕಾಗಿಬಿಟ್ಟ. ಆದರೆ ಮರುಕ್ಷಣವೇ, "ಇಲ್ಲ, ಆ ಪುಸ್ತಕವನ್ನು ನಾನು ಸಂಪೂರ್ಣವಾಗಿ ಓದಿಲ್ಲ'' ಎಂದು ಒಪ್ಪಿಕೊಂಡ. ಆಗ ನರೇಂದ್ರ, ಆ ಪುಸ್ತಕದಲ್ಲಿ ಪ್ರತಿಪಾದಿಸಲಾಗಿರುವ ಅಭಿಪ್ರಾಯ ಅದಲ್ಲ ಎಂದು ಹೇಳಿ, ನಿಜಾಂಶವನ್ನು ಎತ್ತಿತೋರಿಸಿದ. ಮಹೇಂದ್ರಲಾಲ ವಿಸ್ಮಯಾನಂದಗೊಂಡು, ನರೇಂದ್ರನನ್ನು ಹೃತ್ಪೂರ್ವಕವಾಗಿ ಹರಸಿದ.

ಮುಂದೆ ಬೇಲೂರು ಮಠದ ಸ್ಥಾಪನೆಯಾದ ಮೇಲಿನ ಮಾತಿದು. ಮಠದ ಗ್ರಂಥಾಲಯಕ್ಕೆ ಸುಪ್ರಸಿದ್ಧ ವಿಶ್ವಕೋಶ 'ಎನ್‌ಸೈಕ್ಲೋಪೀಡಿಯ ಬ್ರಿಟಾನಿಕ'ದ ಹೊಸ ಆವೃತ್ತಿಯ ಸಂಪುಟಗಳನ್ನು ತರಿಸಲಾಗಿತ್ತು. ಒಂದು ದಿನ ಸ್ವಾಮೀಜಿ ತಮ್ಮ ಶಿಷ್ಯ ಶರಚ್ಚಂದ್ರ ಚಕ್ರವರ್ತಿಯೊಂದಿಗೆ ಗ್ರಂಥಾಲಯದಲ್ಲಿ ಅಡ್ಡಾಡುವಾಗ, ಈ ಸಂಪುಟಗಳನ್ನು ನೋಡಿದ ಶಿಷ್ಯ ಅಚ್ಚರಿಯಿಂದ, "ಇವುಗಳನ್ನು ಓದಿ ಮುಗಿಸಲು ಒಂದು ಜೀವಮಾನ ಸಾಲದು!'' ಎಂದುದ್ಗರಿಸಿದ. ಸ್ವಾಮೀಜಿ ಅವನತ್ತ ತಿರುಗಿ, "ಏಕೆ

---

* ಕಲೈಡೋಸ್ಕೋಪು ಎನ್ನುವುದೊಂದು ಮಕ್ಕಳ ಮನರಂಜನೆಯ ವಸ್ತು. ಅದರಲ್ಲಿ ಮೂರು ಕನ್ನಡಿಗಳನ್ನು ತ್ರಿಕೋನಾಕಾರವಾಗಿ ಇಟ್ಟು ಕೊಳವೆಯಲ್ಲಿ ಕೂಡಿಸಿರುತ್ತಾರೆ. ಕೊಳವೆಯ ಒಂದು ತುದಿಯಲ್ಲಿ ಬಳೆಯ ಚೂರಿನಂತಹ ಹೊಳೆಯುವ ಪದಾರ್ಥಗಳನ್ನು ಬಿದ್ದುಹೋಗದಂತೆ ಇಟ್ಟು, ಕೊಳವೆಯ ಇನ್ನೊಂದು ತುದಿಯಿಂದ ನೋಡಲು ಅವಕಾಶ ಮಾಡಿರುತ್ತಾರೆ. ಅಲ್ಲಿಂದ ನೋಡುತ್ತ ಕೊಳವೆಯನ್ನು ಮೆಲ್ಲನೆ ತಿರುಗಿಸಿದರೆ ಕನ್ನಡಿಗಳ ಪ್ರತಿಫಲನದಿಂದ ನೂರಾರು ವರ್ಣಪ್ರಭೇದಗಳುಂಟಾಗುವುದನ್ನು ಕಾಣಬಹುದು.

ಸಾಧ್ಯವಿಲ್ಲ? ಮೊದಲ ಹತ್ತು ಸಂಪುಟಗಳಲ್ಲಿ ಯಾವ ವಿಷಯದ ಬಗ್ಗೆಯಾದರೂ ನನ್ನನ್ನು ಪ್ರಶ್ನಿಸು?" ಎಂದರು. ದಂಗಾದ ಶಿಷ್ಯ ಕೇಳಿದ: "ಏನು! ಆಗಲೇ ಹತ್ತು ಸಂಪುಟಗಳನ್ನು ಓದಿಬಿಟ್ಟಿರಾ!" ಹೌದೆಂದ ಸ್ವಾಮೀಜಿ ಅವನಿಗೆ ಮತ್ತೆ ಸವಾಲೊಡ್ಡಿದರು. ಆಗ ಶರಚ್ಚಂದ್ರ ಆ ಹತ್ತು ಸಂಪುಟಗಳಲ್ಲಿನ ಹಲವಾರು ಕ್ಲಿಷ್ಟ ವಿಚಾರಗಳನ್ನು ಮಧ್ಯಮಧ್ಯದಲ್ಲಿ ಆಯ್ದು ಪ್ರಶ್ನೆಗಳನ್ನು ಕೇಳಿದ. ಸ್ವಾಮೀಜಿ ಅವುಗಳಿಗೆಲ್ಲ ಕರಾರುವಾಕ್ಕಾಗಿ ಉತ್ತರಿಸಿದರಲ್ಲದೆ, ಕೆಲವೊಮ್ಮೆ ಪಂಕ್ತಿಪಂಕ್ತಿಗಳನ್ನೇ ಪುಟಪುಟಗಳನ್ನೇ ಬಾಯಿಪಾಠ ಮಾಡಿದಂತೆ ಒಪ್ಪಿಸಿಬಿಟ್ಟರು! ಶರಚ್ಚಂದ್ರನಿಗೆ ಕಣ್ಣಾರೆ ಕಂಡರೂ ನಂಬಲಾಗದಂತಹ ಅವಸ್ಥೆ! ಅವರ ಈ ಅತಿಮಾನುಷ ಸ್ಮರಣಶಕ್ತಿಯ ಗುಟ್ಟೇನು ಎಂದು ಪ್ರಶ್ನಿಸಿದಾಗ, ಸ್ವಾಮೀಜಿ "ಕಟ್ಟುನಿಟ್ಟಿನ ಬ್ರಹ್ಮಚರ್ಯ ಹಾಗೂ ಅಭ್ಯಾಸದಿಂದ ಅದನ್ನು ಸಾಧಿಸಬಹುದು" ಎಂದುತ್ತರಿಸಿದರು. ಆದರೆ ಶರಚ್ಚಂದ್ರನೆಂದ, "ಕೇವಲ ಬ್ರಹ್ಮಚರ್ಯದಿಂದ ಇದು ಸಾಧ್ಯವೆಂದು ಒಪ್ಪಿಕೊಳ್ಳಲಾಗುವುದಿಲ್ಲ. ಮತ್ತೂ ಇನ್ನೇನೋ ವಿಶೇಷ ಇರಲೇಬೇಕು..." ಸ್ವಾಮೀಜಿ ಪ್ರತಿನುಡಿಯಲಿಲ್ಲ.

ಸ್ವಾಮೀಜಿಯವರ ಜೀವನದಲ್ಲಿ ಇಂತಹ ಘಟನೆಗಳು ಹಲವಾರು. ಇವುಗಳಲ್ಲಿ ಒಂದನ್ನು ಮುಂದೆ ಅವರು ಬೆಳಗಾವಿಗೆ ಬಂದಾಗ ಹಾಗೂ ಮತ್ತೆ ಕೆಲವನ್ನು ಅವರ ಜೀವನದ ಇತರ ಸಂದರ್ಭಗಳಲ್ಲಿ ನೋಡಲಿದ್ದೇವೆ.

ಅವರು ತಮ್ಮ ಗುರುಭಾಯಿಗಳೊಂದಿಗೆ ಈ ವೇಳೆಗಾಗಲೇ ಸಾಕಷ್ಟು ಸಮಯವನ್ನು ಕಳೆದಿದ್ದರು. ಅಖಂಡಾನಂದರಂತೂ ಬಾರಾನಾಗೋರನ್ನು ಬಿಟ್ಟಾಗಿನಿಂದಲೂ ಅವರ ಜೊತೆಗಾರರಾಗಿಯೇ ಇದ್ದರು. ಈಗ ಹಲವಾರು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ತೀವ್ರ ಆಧ್ಯಾತ್ಮಿಕ ಸಾಧನೆಗಳನ್ನು ನಡೆಸಿದ ಮೇಲೆ ಸ್ವಾಮೀಜಿಯ ಮನಸ್ಸು ಬೇರೊಂದು ರೀತಿಯಲ್ಲಿ ಚಿಂತಿಸಲಾರಂಭಿಸಿತು. ಮಠದ ಹಾಗೂ ಸೋದರಸಂನ್ಯಾಸಿಗಳೊಂದಿಗಿನ ಬಂಧನಗಳನ್ನು ತಾತ್ಕಾಲಿಕವಾಗಿ ಕಡಿದುಕೊಳ್ಳಬೇಕೆಂದೇ ಅವರು ಬಾರಾನಾಗೋರಿನಿಂದ ಹೊರಟದ್ದು. ಆದರೆ ಈಗ ಗುರುಭಾಯಿಗಳು ಅವರೊಡನೆ ಮತ್ತೆ ಸೇರಿದ್ದಾರೆ. ಆದ್ದರಿಂದ ಇವರೆಲ್ಲರಿಂದಲೂ ಬಿಡಿಸಿಕೊಂಡು ತಾವು ಏಕಾಂಗಿಯಾಗಿ ಮುನ್ನಡೆಯಬೇಕೆಂದು ಸ್ವಾಮೀಜಿ ದೃಢನಿಶ್ಚಯ ಮಾಡಿಬಿಟ್ಟರು. ಹಿಮಾಲಯದ ಗುಹೆಯಲ್ಲಿ ಕುಳಿತು ಸಮಾಧಿಸುಖ ಅನುಭವಿಸುವ ಯೋಗವು ತಮಗಿಲ್ಲವೆಂಬುದು ಅವರಿಗೆ ಈ ವೇಳೆಗೆ ಮನದಟ್ಟಾಗಿತ್ತೆಂದು ತೋರುತ್ತದೆ. ಕಡೆಗೊಂದು ದಿನ ಅವರು ತಮ್ಮ ಗುರುಭಾಯಿಗಳಿಗೆ, "ನಾನೀಗ ಇಲ್ಲಿಂದ ಏಕಾಂಗಿಯಾಗಿ ಹೊರಡಲಿದ್ದೇನೆ. ನನಗೆ ನನ್ನ ಮುಂದಿನ ಕಾರ್ಯಯೋಜನೆ ಏನೆಂಬುದು ತಿಳಿದುಬಂದಿದೆ... ನನ್ನನ್ನು ನೀವಾರೂ ಹಿಂಬಾಲಿಸಕೂಡದು" ಎಂದು ಹೇಳಿಬಿಟ್ಟರು.

ಆದರೆ ಅವರು ಹೀಗೆ ತಮ್ಮನ್ನೆಲ್ಲ ಬಿಟ್ಟು ಹೊರಟುಹೋಗುವುದು ಅವರ ಗುರುಭಾಯಿಗಳಾರಿಗೂ ಸ್ವಲ್ಪವೂ ಇಷ್ಟವಿಲ್ಲ. ಅವರ ಸ್ನೇಹಿತ, ಮಾರ್ಗದರ್ಶಕ, ಗುರು—ಎಲ್ಲವೂ ಸ್ವಾಮೀಜಿಯೇ. ಅಖಂಡಾನಂದರಂತೂ, ಸ್ವಾಮೀಜಿ ಹೀಗೆ ಹೇಳಬಹುದು ಎಂದು ಹೆದರಿಕೊಂಡೇ ಇದ್ದರು. ತಮ್ಮ ಪ್ರಾಣಸಮಾನರಾದ ಸ್ವಾಮೀಜಿಯನ್ನು ಬಿಟ್ಟುಕೊಡಲು ಅವರು ಹೇಗೆತಾನೆ ಒಪ್ಪಿಯಾರು? ಅಲ್ಲದೆ 'ನರೇಂದ್ರನ ಯೋಗಕ್ಷೇಮದ ಹೊಣೆ ನಿನ್ನದು' ಎಂದು ಶ್ರೀಶಾರದಾದೇವಿಯವರು ಬೇರೆ ವಿಶೇಷವಾಗಿ ಹೇಳಿದ್ದಾರೆ. ಆದ್ದರಿಂದ ಅಖಂಡಾನಂದರು ಈಗ ಅವರನ್ನು ಏನಾದರೂ ಮಾಡಿ

ತಡೆಯಲು ಒಂದು ನೆಪ ತೆಗೆದು, "ನರೇನ್, ನೀನು ಕರೆದೆಯಲ್ಲ ಅಂತ ನಾನು ಮಧ್ಯ ಏಷ್ಯಾಗೆ ಹೋಗುವ ಕಾರ್ಯಕ್ರಮವನ್ನು ಬಿಟ್ಟು ಬಾರಾನಾಗೋರಿಗೆ ಬಂದೆ. ಈಗ ನೋಡಿದರೆ ನೀನು ನನ್ನನ್ನು ಇಲ್ಲಿ ಬಿಟ್ಟು ಹೊರಟುಹೋಗುತ್ತಿದ್ದೀಯಲ್ಲ!" ಎಂದರು. ಆದರೆ ಸ್ವಾಮೀಜಿ ಆ ವಾದವನ್ನು ಒಮ್ಮೆಗೇ ತಳ್ಳಿಹಾಕಿಬಿಟ್ಟರು: "ನೋಡು, ಸೋದರಸಂನ್ಯಾಸಿಗಳ ಸಂಗ ಎನ್ನುವುದು ಆಧ್ಯಾತ್ಮಿಕ ಸಾಧನೆಗೆ ಒಂದು ಪ್ರತಿಬಂಧಕ. ಈಗ ನೀನೇ ನೋಡು, ನೀನು ಟೆಹರಿಯಲ್ಲಿ ಕಾಯಿಲೆ ಬಿದ್ದದ್ದರಿಂದ ತಾನೆ ನನಗೆ ಸಾಧನೆಯಲ್ಲಿ ತೊಡಗಲು ಸಾಧ್ಯವಾಗಲಿಲ್ಲ! ಈ ಸೋದರಸಂನ್ಯಾಸಿಗಳು ಎನ್ನುವ ಮಾಯಾಪಾಶವನ್ನು ಕತ್ತರಿಸಿ ಹಾಕದಿದ್ದರೆ ಆಧ್ಯಾತ್ಮಿಕ ಸಾಧನೆ ಅಸಾಧ್ಯ. ನಾನು ಸಾಧನೆ ಮಾಡಬೇಕು ಎಂದು ಹೊರಟಾಗಲೆಲ್ಲ ಶ್ರೀರಾಮಕೃಷ್ಣರು ಏನಾದರೊಂದು ಅಡ್ಡಿಯನ್ನು ತಂದೊಡ್ಡುತ್ತಾರೆ! ಇನ್ನು ನಾನು ಹೊರಟುಬಿಟ್ಟೆ. ನಾನು ಒಬ್ಬನೇ ಹೋಗುತ್ತೇನೆ. ಎಲ್ಲಿಗೆ ಹೋಗುತ್ತೇನೆ, ಎಲ್ಲಿರುತ್ತೇನೆ ಎನ್ನುವುದನ್ನು ಯಾರಿಗೂ ಹೇಳುವುದಿಲ್ಲ." ಅಖಂಡಾನಂದರು ಅದನ್ನೊಂದು ಸವಾಲಿನಂತೆ ಪರಿಗಣಿಸಿ, ಅರ್ಧಹಾಸ್ಯವಾಗಿ ನುಡಿದರು: "ಇರಲಿ, ನೀನು ಪಾತಾಳಲೋಕಕ್ಕೆ ಹೋದರೂ ಸರಿಯೆ, ನಾನು ನಿನ್ನನ್ನು ಪತ್ತೆಹಚ್ಚದೆ ಬಿಡುವುದಿಲ್ಲ, ನೋಡುತ್ತಿರು." ಕಡೆಗೆ ೧೮೯೧ರ ಜನವರಿಯ ಕೊನೆಯ ವಾರದಲ್ಲೊಂದು ದಿನ, ಸ್ವಾಮೀಜಿ ತಮ್ಮ ಗುರುಭಾಯಿಗಳಿಗೆ ವಿದಾಯಹೇಳಿ, ಎಲ್ಲಿಗೆ ಎಂದು ತಿಳಿಸದೆ ಮೀರತ್ತಿನಿಂದ ಏಕಾಂಗಿಯಾಗಿ ಹೊರಟರು.

ಸೋದರಸಂನ್ಯಾಸಿಗಳ ಸ್ನೇಹಪಾಶವನ್ನು ಕಡಿದುಕೊಂಡು ಹೊರಟ ಸ್ವಾಮೀಜಿ ದೆಹಲಿಗೆ ಬಂದು ತಲುಪಿದರು. ಶತಮಾನಗಳಿಂದಲೂ ಹಿಂದೂ ಹಾಗೂ ಮೊಘಲ್ ರಾಜರ ರಾಜಧಾನಿಯಾಗಿದ್ದ ನಗರ ದೆಹಲಿ. ಅನೇಕಾನೇಕ ಚಾರಿತ್ರಿಕ ಘಟನೆಗಳ ತಾಣ. ರಾಜ ಮಹಾರಾಜರ ಗೋರಿಗಳು, ಅರಮನೆಗಳು, ರಾಜವೈಭವದ ಅವಶೇಷಗಳು—ಇವು ದೆಹಲಿಯನ್ನು 'ಭಾರತದ ಪುರಾತನ ರೋಮ್' ಎಂಬಂತೆ ಮಾಡಿವೆ. ಇಲ್ಲಿ ಬೀಸುತ್ತಿರುವುದೇ ರಾಜತ್ವದ-ಚಕ್ರಾಧಿಪತ್ಯದ ಗಾಳಿ ಎನ್ನಬಹುದು. ಈಗ ಇಲ್ಲಿಗೆ ಬಂದಿರುವ ಸ್ವಾಮೀಜಿಯದೂ ರಾಜಠೀವಿಯೇ—ಆದರೆ ಅವರ ಬಳಿಯಿರುವ ಸರ್ವಸ್ವ ವೆಂದರೆ ದಂಡ-ಕಮಂಡಲುಗಳು ಹಾಗೂ ಒಂದು ಪುಟ್ಟ ಗಂಟು ಮಾತ್ರ !

ಇಲ್ಲಿ ಅವರು ಸೇಠ್ ಶ್ಯಾಮಲ್‌ದಾಸ್ ಎಂಬಾತನ ಅತಿಥಿಯಾಗಿ ಉಳಿದು ಕೊಂಡರು. ಅವರು ದೆಹಲಿಯಲ್ಲೆಲ್ಲ ಸುತ್ತಾಡಿ, ನೋಡಬೇಕಾದ ಸ್ಥಳಗಳೆಲ್ಲವನ್ನೂ ನೋಡಿದರು. ದೆಹಲಿಯ ಮಹಾ ಚಕ್ರಾಧಿಪತ್ಯಗಳ ಅವಶೇಷಗಳು ಈ ಯುವ ಸಂನ್ಯಾಸಿಯ ಮನಃಪಟಲದ ಮೇಲೆ ಸಮಸ್ತ ಮಾನುಷವೈಭವಗಳ ಕ್ಷಣಭಂಗುರತೆ ಯನ್ನು ಮುದ್ರೆಯೊತ್ತಿದುವು ! ಅಲ್ಲದೆ ಅನಾದಿಯಾದ, ಅನಂತವಾದ ಆತ್ಮನ ಚಿರ ಸಾಮ್ರಾಜ್ಯದ ಬಗೆಗಿನ ಅವರ ಶ್ರದ್ಧೆ ಮತ್ತಷ್ಟು ಬಲಗೊಂಡಿತು.

ಸ್ವಾಮೀಜಿ ಸರ್ವಸಂಗಪರಿತ್ಯಾಗಿಯಾದ ಸಂನ್ಯಾಸಿಯೂ ಹೌದು; ಜೊತೆಗೆ ಉಜ್ವಲ ರಾಷ್ಟ್ರಪ್ರೇಮಿಯೂ ಇತಿಹಾಸಕಾರರೂ ಹೌದು. ಅವರ ದೃಷ್ಟಿಗೆ ಈ ನಗರವು ಭವ್ಯ ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಕಾಣುತ್ತಿದೆ ! ಒಂದೊಂದು ಗೋರಿಯೂ ಒಂದೊಂದು ಅರಮನೆಯೂ ಅವರ ಮನದಲ್ಲಿ ಹಲವಾರು ನೆನಪುಗಳನ್ನು, ಭಾವನೆ ಗಳನ್ನು ಹೊಮ್ಮಿಸುತ್ತಿವೆ ! ಒಂದೊಂದು ದೃಶ್ಯವೂ ಅವರಿಗೆ ಒಂದೊಂದು ಪಾಠವನ್ನು ಕಲಿಸುತ್ತಿದೆ !

ಹೀಗೆ ಸ್ವಾಮೀಜಿ ದೆಹಲಿಯಲ್ಲಿ ಏಕಾಂಗಿಯಾಗಿ ಸುತ್ತಾಡುತ್ತ ತಮ್ಮ ಭಾವನೆ ಗಳಲ್ಲಿ, ಕಲ್ಪನೆಗಳಲ್ಲಿ, ಯೋಜನೆಗಳಲ್ಲಿ ಮುಳುಗಿದ್ದಾಗ ಅನಿರೀಕ್ಷಿತವಾಗಿ ಅವರಿಗೆ ತಾವು ಮೀರತ್ತಿನಲ್ಲಿ ಬೀಳ್ಕೊಂಡಿದ್ದ ಗುರುಭಾಯಿಗಳ ಭೇಟಿಯಾಯಿತು ! ಆ ಗುರು ಭಾಯಿಗಳಿಗೂ ಇದು ಅಷ್ಟೇ ಅನಿರೀಕ್ಷಿತ. ಅವರಿಗೇನೋ ಸ್ವಾಮೀಜಿಯನ್ನು ಕಂಡು ತುಂಬ ಸಂತೋಷವಾಯಿತು. ಆದರೆ, ಅವರು ತಮ್ಮನ್ನು ಬೇಕೆಂದೇ ಹಿಂಬಾಲಿಸಿ ಬರುತ್ತಿದ್ದಾರೆ ಎಂದು ಭಾವಿಸಿದ ಸ್ವಾಮೀಜಿ ನುಡಿದರು: "ನೋಡಿ, ನಾನಾಗಲೇ ನಿಮಗೆ ಸ್ಪಷ್ಟವಾಗಿ ಹೇಳಿದ್ದೇನೆ—ನಾನು ಮಾಡಬೇಕಾದ ಕೆಲಸವಿದೆ; ಆದ್ದರಿಂದ ಯಾರೂ ನನ್ನನ್ನು ಹಿಂಬಾಲಿಸಿ ಬರಬೇಡಿ; ನನ್ನಷ್ಟಕ್ಕೆ ನನ್ನನ್ನು ಬಿಟ್ಟುಬಿಡಿ ಎಂದು. ಈಗ ಮತ್ತೆ ಒತ್ತಿಹೇಳುತ್ತಿದ್ದೇನೆ—ನನ್ನ ಮಾತಿನಂತೆ ನೀವು ನಡೆಯಬೇಕು. ಈಗ ನಾನು ದೆಹಲಿ ಯಿಂದ ಹೊರಡುತ್ತಿದ್ದೇನೆ. ನನ್ನನ್ನು ನೀವು ಯಾರೂ ಹಿಂಬಾಲಿಸಿ ಬರಕೂಡದು. ಇನ್ನು ಇಷ್ಟರಮೇಲೂ ಯಾರಾದರೂ ಹಿಂಬಾಲಿಸಿ ಬಂದದ್ದೇ ಆದರೆ ಅವರು ಅಪಾಯಕ್ಕೆ ಸಿದ್ಧರಾಗಿ ಬರಬೇಕಾಗುತ್ತದೆ, ಅಷ್ಟೆ. ಏಕೆಂದರೆ ನಾನು ನನ್ನ ಎಲ್ಲ ಹಳೆಯ

ಸಂಬಂಧಗಳನ್ನು ಕಡಿದುಕೊಂಡುಬಿಡುವವನಿದ್ದೇನೆ. ನನ್ನ ಆತ್ಮ ನನ್ನನ್ನು ಎಲ್ಲಿಗೆ ಕರೆದೊಯ್ದರೆ ಅಲ್ಲಿಗೆ ಹೋಗುತ್ತಿದ್ದೇನೆ. ಅದು ಅರಣ್ಯವಾಗಲಿ, ಮರುಭೂಮಿಯಾಗಲಿ, ಅಥವಾ ಜನದಟ್ಟಣೆಯಿಂದ ಕೂಡಿದ ನಗರವಾಗಲಿ—ಎಲ್ಲೆಂದರಲ್ಲಿಗೆ ಹೋಗುತ್ತಿರುತ್ತೇನೆ. . . ನಾನು ಹೊರಟೆ.''

ಅವರ ಮಾತಿನಲ್ಲಿ ವ್ಯಕ್ತವಾದ ದೃಢನಿರ್ಧಾರವನ್ನು ಕಂಡು ಸೋದರಸಂನ್ಯಾಸಿಗಳೆಲ್ಲ ಚಕಿತರಾಗಿ ನುಡಿದರು: "ನರೇನ್, ನಿಜಕ್ಕೂ ನೀನು ಇಲ್ಲಿರುವುದೇ ನಮಗೆ ಗೊತ್ತಿರಲಿಲ್ಲ. ನಾವು ದೆಹಲಿಯನ್ನು ನೋಡಲು ಇಲ್ಲಿಗೆ ಬಂದೆವು ಅಷ್ಟೇ. ಆದರೆ ಇಲ್ಲಿಗೆ ಬಂದಾಗ ನಮಗೆ ತಿಳಿದುಬಂತು—ಇಲ್ಲೊಬ್ಬರು 'ಸ್ವಾಮಿ ವಿವಿದಿಶಾನಂದ' ಎಂಬ ಹೆಸರಿನ ಇಂಗ್ಲಿಷ್ ಮಾತನಾಡುವ ಸ್ವಾಮಿಗಳಿದ್ದಾರೆ ಎಂದು. ಅವರು ಯಾರೋ ನೋಡಬೇಕು ಎಂಬ ಕುತೂಹಲದಿಂದ ನಾವು ಬಂದರೆ, ಇಲ್ಲಿ ನೀನು ಭೇಟಿಯಾದೆ !''

ಈಗ ಸ್ವಾಮೀಜಿ ಸಮಾಧಾನಗೊಂಡು ಸುಮ್ಮನಾದರು.

ಆ ಗುರುಭಾಯಿಗಳ ಮಾತಿನಿಂದ, ಸ್ವಾಮೀಜಿ ತಮ್ಮ ಹೆಸರನ್ನು 'ಸ್ವಾಮಿ ವಿವಿದಿಶಾನಂದ' ಎಂದು ಹೇಳಿಕೊಂಡಿದ್ದರೆಂಬುದು ತಿಳಿದುಬರುತ್ತದೆ. ಸಂನ್ಯಾಸ ಸ್ವೀಕಾರ ಮಾಡಿದಾಗ ಅವರು ತಮ್ಮ ಹೆಸರನ್ನು 'ಸ್ವಾಮಿ ವಿವೇಕಾನಂದ' ಎಂದಿಟ್ಟುಕೊಂಡಿದ್ದರೂ ಈ ಹೆಸರು ಅವರ ಆಪ್ತರಾರಿಗೂ ರೂಢಿಯಾಗಿರಲಿಲ್ಲ. ಏಕೆಂದರೆ ಈ ಸಂನ್ಯಾಸಿಗಳೆಲ್ಲ ಇನ್ನೂ ತಮ್ಮನ್ನು ಪೂರ್ವಾಶ್ರಮದ ಹೆಸರುಗಳಿಂದಲೇ ಕರೆದುಕೊಳ್ಳುತ್ತಿದ್ದರು. ಅವರ ಪಾಲಿಗೆ ಸ್ವಾಮೀಜಿ 'ನರೇನ್ ಭಾಯ್' ಅಷ್ಟೆ. ಇನ್ನು 'ವಿವಿದಿಶಾನಂದ' ಎಂಬ ಹೆಸರನ್ನಂತೂ ಅವರು ಕೇಳಿಯೇ ಇರಲಾರರು. ಆದ್ದರಿಂದ, ಈ 'ಇಂಗ್ಲಿಷ್ ಮಾತನಾಡುವ ಸಂನ್ಯಾಸಿ' ಯಾರಿರಬಹುದು ಎಂದು ನೋಡಬಂದರೆ, ಅದು 'ನರೇಂದ್ರ'ನೇ ಆಗಿರಬೇಕೆ !

ಸ್ವಾಮೀಜಿ 'ನಾನಿನ್ನು ಹೊರಟೆ' ಎಂದು ಹೇಳಿದರಾದರೂ ದೆಹಲಿಯಲ್ಲೇ ಇನ್ನೂ ಕೆಲವು ದಿನ ಉಳಿದುಕೊಂಡರು. ಊಟದ ವೇಳೆಯಲ್ಲಿ ಮಾತ್ರ ಸ್ವಾಮೀಜಿ ಹಾಗೂ ಅವರ ಸೋದರಸಂನ್ಯಾಸಿಗಳು ಸೇಠ್ ಶ್ಯಾಮಲ್‌ದಾಸನ ಮನೆಯಲ್ಲಿ ಒಟ್ಟಾಗಿ ಸೇರುತ್ತಿದ್ದರು.

ದೆಹಲಿಯಲ್ಲಿ ಸ್ವಾಮೀಜಿ, ತಮ್ಮ ಗಂಟಲ ತೊಂದರೆಯೊಂದರ ಸಂಬಂಧವಾಗಿ, ಅಲ್ಲಿನ ಪ್ರಸಿದ್ಧ ಬಂಗಾಳೀ ವೈದ್ಯನಾದ ಡಾ. ಹೇಮಚಂದ್ರ ಸೇನ್ ಎಂಬವನನ್ನು ಕಂಡಿದ್ದರು. ಅದೇಕೋ ಈತ ಸ್ವಾಮೀಜಿಯ ವಿಷಯದಲ್ಲಿ ಸಂಪೂರ್ಣ ವಿರುದ್ಧವಾಗಿದ್ದ. ಅಲ್ಲದೆ, ಅಖಂಡಾನಂದರ ಬಳಿ, ಸ್ವಾಮೀಜಿಯ ಬಗ್ಗೆ ಹಗುರವಾಗಿ ಮಾತನಾಡಿದ್ದ. ಇದಾದ ಕೆಲವು ದಿನಗಳ ಬಳಿಕ ಆತ ಅಖಂಡಾನಂದರನ್ನು ಕಂಡು, ಮತ್ತೊಮ್ಮೆ ಸ್ವಾಮೀಜಿಯನ್ನು ಭೇಟಿ ಮಾಡುವ ಇಚ್ಛೆಯನ್ನು ವ್ಯಕ್ತಪಡಿಸಿ, ಒಂದು ಸಂಜೆ ಸ್ವಾಮೀಜಿ ಹಾಗೂ ಅವರ ಸೋದರಸಂನ್ಯಾಸಿಗಳನ್ನು ತನ್ನ ಮನೆಗೆ ಆಹ್ವಾನಿಸಿದ. ಜೊತೆಗೆ ಹಲವಾರು ಕಾಲೇಜು ಪ್ರಾಧ್ಯಾಪಕರನ್ನೂ ಆಹ್ವಾನಿಸಿದ್ದ. ಎಲ್ಲರೂ ಸೇರಿದ್ದ ಈ ಸಂದರ್ಭದಲ್ಲಿ ದೊಡ್ಡದೊಂದು ಚರ್ಚೆ ಪ್ರಾರಂಭವಾಯಿತು. ಸುಶಿಕ್ಷಿತರಾದ ಇವರು ಸ್ವಾಮೀಜಿಯನ್ನು ಹಲವಾರು ವಿಷಯಗಳ ಬಗ್ಗೆ ಆಳವಾಗಿ ಪ್ರಶ್ನಿಸಿದರು. ಸ್ವಾಮೀಜಿ ತಮ್ಮ ಸಹಜ ವಾಗ್ವೈಖರಿಯಿಂದ, ವಿದ್ವತ್ಪೂರ್ಣ ಉತ್ತರಗಳಿಂದ ಎಲ್ಲರ ಮೇಲೂ ಪ್ರಭಾವ ಬೀರಿದರು. ಸ್ವಾಮೀಜಿ ಹಾಗೂ ಅವರ ಗುರುಭಾಯಿಗಳಿಂದ

ವಿಶೇಷವಾಗಿ ಆಕರ್ಷಿತನಾದ ಡಾ. ಸೇನ್ ಅವರನ್ನು ಮರುದಿನ ತನ್ನ ಮನೆಗೆ ಔತಣಕ್ಕೆ ಆಹ್ವಾನಿಸಿ ಸತ್ಕರಿಸಿದ.

ಬಳಿಕ ಕೆಲವೇ ದಿನಗಳಲ್ಲಿ ಸೋದರಸಂನ್ಯಾಸಿಗಳೆಲ್ಲ ಒಬ್ಬೊಬ್ಬರಾಗಿ ದೆಹಲಿಯಿಂದ ಹೊರಟರು. ಬ್ರಹ್ಮಾನಂದರು ಹಾಗೂ ತುರೀಯಾನಂದರು ಪಂಜಾಬಿನತ್ತ ಹೊರಟರು. ಶಾರದಾನಂದರು ಎಟಾವಾ ಎಂಬಲ್ಲಿಗೆ ಹೋದರು. ಶಾರದಾನಂದರು ಅನಾರೋಗ್ಯಪೀಡಿತರಾಗಿದ್ದರಿಂದ ಕೃಪಾನಂದರೂ ಅವರೊಂದಿಗೆ ಹೋದರು. ಅಖಂಡಾನಂದರು ಬೃಂದಾವನದ ಕಡೆಗೆ ನಡೆದರು. ಆದರೆ ತಾವು ಮಾತ್ರ ಸ್ವಾಮೀಜಿಯು ಬೆನ್ನು ಬಿಡಲಾರೆವು ಎಂದು ಮನದಲ್ಲೇ ನಿರ್ಧರಿಸಿರಬೇಕು. ಸ್ವಾಮೀಜಿ ರಜಪುತಾನಕ್ಕೆ (ಈಗಿನ ರಾಜಸ್ಥಾನ) ಹೊರಟರು. ಅವರು ಯಾವ ಕಡೆಗೆ ಹೊರಟಿದ್ದಾರೆ ಎಂಬುದು ಅವರ ಗುರುಭಾಯಿಗಳಿಗೆ ತಿಳಿದುಬಂದಿತು. ಅವರನ್ನು ಹಿಂಬಾಲಿಸುವ ಇಚ್ಛೆಯೂ ಇದ್ದೇ ಇದ್ದಿತಾದರೂ, ಹಾಗೆ ಮಾಡಲು ಧೈರ್ಯ ಸಾಲಲಿಲ್ಲ. ತಮ್ಮ ನಾಯಕನಾದ ನರೇಂದ್ರನ ಹೃದಯವು, ತಾನು ಪೂರೈಸಬಂದ ದಿವ್ಯೋದ್ದೇಶದ ಸಾಧನೆಗಾಗಿ ತೀವ್ರ ವ್ಯಾಕುಲಗೊಂಡಿದೆ; ಮತ್ತು, ಅವನನ್ನು ಶ್ರೀರಾಮಕೃಷ್ಣರೇ ಮಾರ್ಗದರ್ಶನ ಮಾಡುತ್ತ ಮುನ್ನಡೆಸುತ್ತಿದ್ದಾರೆ; ಆದ್ದರಿಂದ ಜಗನ್ಮಾತೆಯ ಇಚ್ಛೆಯಂತೆ ಅವನನ್ನೀಗ ಅವನಷ್ಟಕ್ಕೆ ಬಿಟ್ಟುಬಿಡಬೇಕು ಎಂಬುದು ಅವರಿಗೆ ಮನವರಿಕೆಯಾಗಿತ್ತು. ಹನಿಗೂಡಿದ ಕಂಗಳಿಂದ, ಭಾರವಾದ ಹೃದಯದಿಂದ ಅವರು ತಮ್ಮ ನರೇನನನ್ನು ಬೀಳ್ಕೊಟ್ಟರು. ಆದರೆ ಸ್ವಾಮೀಜಿ ಮಾತ್ರ ಸಂತೋಷಚಿತ್ತರಾಗಿ ತಮ್ಮ ಹೃದಯದ ಕೊನೆಯ ಬಂಧನವಾದ ಸೋದರಸಂನ್ಯಾಸಿಗಳ ಪ್ರೀತಿಯಿಂದ ಬಿಡಿಸಿಕೊಂಡು ಪರಿವ್ರಾಜಕರಾಗಿ ಮುನ್ನಡೆದರು. ಅವರಿಗೀಗ 'ಧಮ್ಮಪದ'ದ ಸಾಲುಗಳು ನೆನಪಾಗುತ್ತಿವೆ:

*ದಾರಿಯಲ್ಲದ ದಾರಿಯಲ್ಲೂ ಸಾಗು ಧೀರನೆ ಮುಂದಕೆ!*
*ಅಂಜದಳುಕದೆ ನಿಖಿಲ ಭುವನಂಗಳನೆ ಗಣನೆಗೆ ತಾರದೆ,*
*ಖಡ್ಗಮೃಗದೊಲು ನುಗ್ಗಿ ನಡೆ ನೀ ಒಂಟಿಯಾಗಿಯೆ ಪಥದಲಿ!*
*ಪ್ರಳಯಗರ್ಜನೆ ಸಿಡಿಲೆ ಬಡಿದರು ನಡುಗದಿಹ ಕೇಸರಿಯೊಲು,*
*ಗಗನಬಲೆಯನೆ ಬೀಸಿ ಎಸೆದರು ಸಿಲುಕದಿಹ ಮಾರುತನೊಲು,*
*ನೀರಿನೊಳಗೇ ನೀರ ಮೀರಿದ ಪದ್ಮಪತ್ರದ ತೆರದಲಿ,*
*ವೀರಕೇಸರಿ, ನುಗ್ಗಿ ನಡೆ ಏಕಾಂಗಿಯಾಗಿಯೆ ಪಥದಲಿ!*

ಬುದ್ಧಭಗವಂತನ ಈ ನುಡಿಗಳು ಅವರಿಗೊಂದು ನವಸ್ಫೂರ್ತಿಯನ್ನು ನೀಡಿದುವು. ಎಲ್ಲ ಬಂಧನಗಳನ್ನೂ ಕಳಚಿಕೊಂಡು, ಎಲ್ಲ 'ಗಂಟು'ಗಳನ್ನೂ ಬಿಡಿಸಿಕೊಂಡು, ಎಲ್ಲ ಮಿತಿಗಳನ್ನೂ ಅತಿಕ್ರಮಿಸಿ ಮುನ್ನಡೆದರು ಸ್ವಾಮೀಜಿ, ಧೀರಗಂಭೀರ ಕೇಸರಿಯಂತೆ ! ಶ್ರೀರಾಮನ ಕಾರ್ಯವನ್ನು ಸಾಧಿಸಹೊರಟ ಮಹಾವೀರನಂತೆ !!

*ನಿಜವನರಿತವರಲ್ಲೊ ಕೆಲವರು, ನಗುವರುಳಿದವರೆಲ್ಲರೂ*
*ನಿನ್ನ ಕಂಡರೆ, ಹೇ ಮಹಾತ್ಮನೆ! ಕುರುಡರೇನನು ಬಲ್ಲರು?*
*ಗಣಿಸದವರನು ಹೋಗು, ಮುಕ್ತನೆ, ನೀನು ಊರಿಂದೂರಿಗೆ*
*ಸೊಗವ ಬಯಸದೆ, ಅಳಲಿಗಳುಕದೆ! ಕತ್ತಲಲಿ ಸಂಚಾರಿಗೆ*

ನಿನ್ನ ಬೆಳಕನು ನೀಡೆಲೈ, ಸಂ-
ಸಾರ ಮಾಯೆಯ ದೂಡೆಲೈ

ಇಂತು ದಿನದಿನ ಕರ್ಮಶಕ್ತಿಯು ಮುಗಿವವರೆಗೂ ಸಾಗೆಲೈ
ನಾನು ನೀನುಗಳಳಿದು, ಆತ್ಮದೊಳಿಳಿದು, ಕಡೆಯೊಳು ಹೋಗೆಲೈ
ಏಳು, ಮೇಲೇಳೇಳು ಸಾಧುವೆ ಹಾಡು ಚಾಗಿಯ ಹಾಡನು
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು
ತತ್ತ್ವಮಸಿ ಎಂದರಿತು ಹಾಡೈ, ವೀರಸಂನ್ಯಾಸಿ–

ಓಂ ತತ್ ಸತ್ ಓಂ!

# ಅನುಬಂಧಗಳು

## ೧. ಅಷ್ಟಸಿದ್ಧಿಗಳು (ಪುಟ ೧೯೯)

ಅಷ್ಟಸಿದ್ಧಿಗಳು ಎಂದರೆ ಎಂಟು ಬಗೆಯ ಸಿದ್ಧಿಗಳು. ಅವು—ಅಣಿಮಾ (ಸೂಕ್ಷ್ಮ ರೂಪವನ್ನು ಧರಿಸುವ ಶಕ್ತಿ), ಮಹಿಮಾ (ಬೃಹತ್ ರೂಪವನ್ನು ಧರಿಸುವ ಶಕ್ತಿ), ಗರಿಮಾ (ಭಾರವಾಗುವಿಕೆ), ಲಘಿಮಾ (ಹಗುರವಾಗುವಿಕೆ), ಪ್ರಾಪ್ತಿ (ಪಡೆಯಲು ಸಾಧ್ಯವಿಲ್ಲದ್ದನ್ನು ಪಡೆಯುವಿಕೆ), ಪ್ರಾಕಾಮ್ಯ (ಸ್ವಲ್ಪವನ್ನು ವಿಪುಲವಾಗಿಸುವಿಕೆ), ಈಶಿತ್ವ (ಎಲ್ಲೆಲ್ಲೂ ಪ್ರಭಾವವನ್ನು ಬೀರುವಿಕೆ) ಮತ್ತು ವಶಿತ್ವ (ಇಂದ್ರಿಯನಿಗ್ರಹ). ಒಬ್ಬನು ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿ ಮುಂದುವರಿದಾಗ ವ್ಯಕ್ತವಾಗುವ ಶಕ್ತಿಗಳು ಇವು. ಆದರೆ ಸಾಕಷ್ಟು ಮನಶ್ಶುದ್ಧಿಯಿಲ್ಲದ ವ್ಯಕ್ತಿಗೆ ಈ ಸಿದ್ಧಿಗಳು ಪ್ರಾಪ್ತವಾದರೆ ಆದರಿಂದ ಅಪಾಯವೇ ಹೆಚ್ಚು. ಇದಕ್ಕೆ ಒಂದು ಉದಾಹರಣೆಯನ್ನು ಕೊಟ್ಟು ಹೇಳುವುದಾದರೆ, ಇದ್ದಕ್ಕಿದ್ದಂತೆ ಬಡವನೊಬ್ಬನಿಗೆ ಹತ್ತು ಕೋಟಿ ರೂಪಾಯಿಯಷ್ಟು ಹಣ ಸಿಕ್ಕಿಬಿಟ್ಟರೆ ಹೇಗಿರುತ್ತದೆಯೋ ಹಾಗಿರುತ್ತದೆ ಒಬ್ಬ ಸಾಧಕನ ಸ್ಥಿತಿ—ಇಂತಹ ಒಂದು ಸಿದ್ಧಿಯನ್ನು ಪಡೆದುಕೊಂಡಾಗ. ಆ ಹತ್ತು ಕೋಟಿ ರೂಪಾಯಿ ಹಣವೂ ಉಪಯೋಗಿಸುತ್ತ ಹೋದಂತೆ ಹೇಗೆ ವ್ಯಯವಾಗಿಹೋಗುತ್ತದೆಯೋ ಹಾಗೆಯೇ ಈ ಸಿದ್ಧಿಯೂ ಕೂಡ ಬಳಸುತ್ತ ಹೋದಂತೆಲ್ಲ ನಶಿಸಿಹೋಗುತ್ತದೆ. ಈಗ, ಈ ಹತ್ತು ಕೋಟಿ ರೂಪಾಯಿ ಸಿಕ್ಕಿದವನು ಅಶಿಕ್ಷಿತ-ಅನೀತಿವಂತನಾಗಿದ್ದರೆ ಆ ಹಣವನ್ನು ಕುಡಿತ, ಜೂಜು, ವ್ಯಭಿಚಾರ ಮುಂತಾದ ಅಕ್ರಮ ರೀತಿಗಳಲ್ಲಿ ಬಳಸಿ ದುರ್ವ್ಯಯ ಮಾಡಿ ಬಿಡುತ್ತಾನೆ. ಆದರೆ ಅದೇ ಮನುಷ್ಯ ಸುಶಿಕ್ಷಿತ ಹಾಗೂ ನೀತಿವಂತನಾಗಿದ್ದಲ್ಲಿ ಅವನು ಆ ಹಣವನ್ನು ಸಾಹಿತ್ಯ, ಕಲೆ, ದಾನ-ಧರ್ಮಾದಿ ಸತ್ಕಾರ್ಯಗಳಿಗಾಗಿ ಬಳಸುತ್ತಾನೆ. ಅದೇ ರೀತಿಯಲ್ಲಿ ಮನುಷ್ಯನಿಗೆ ಭಗವಂತನ ಸಾಕ್ಷಾತ್ಕಾರವಾಗಿ, ಯುಕ್ತಾಯುಕ್ತತೆಯ ಪ್ರಜ್ಞೆ ಮೂಡುವ ಮೊದಲೇ ಈ ಸಿದ್ಧಿಗಳು ಲಭಿಸಿಬಿಟ್ಟರೆ, ಆತ ಅವುಗಳನ್ನು ದುರ್ವಿನಿಯೋಗ ಮಾಡಿ ದಾರಿ ತಪ್ಪುತ್ತಾನೆ, ದುಃಖಕ್ಕೀಡಾಗುತ್ತಾನೆ. ಆದರೆ ಭಗವಂತನ ಸಾಕ್ಷಾತ್ಕಾರದಿಂದಾಗಿ ವಿವೇಕೋದಯವಾದ ಮೇಲೆ ಆತ ಅದೇ ಸಿದ್ಧಿಗಳನ್ನು ಇಚ್ಛಾನುಸಾರ ಲೋಕಕಲ್ಯಾಣಕ್ಕಾಗಿ ಬಳಸಿ ವಿಶ್ವಶಾಂತಿಗೆ ಕಾರಣನಾಗುತ್ತಾನೆ. ಆದ್ದರಿಂದಲೇ ನಾವು ನರೇಂದ್ರನ ಆ ಉತ್ತರ ಎಷ್ಟು ವಿವೇಕಪೂರ್ಣವಾಗಿದೆ, ಅವನ ವಿಚಾರಶಕ್ತಿ ಎಷ್ಟು ಪ್ರೌಢವಾಗಿದೆ ಎಂಬುದನ್ನು ಕಾಣಬಹುದಾಗಿದೆ.

## ೨. ಗುಡುಗುಡಿ (ಪುಟ ೧೫೧)

ದಕ್ಷಿಣಭಾರತೀಯರಾದ ನಮಗೆ ಸಾಧುಗಳು ಧೂಮಪಾನ ಮಾಡುತ್ತಾರೆಂದು ಕೇಳಿದರೆ ಆಶ್ಚರ್ಯವಾಗುವುದು ಸಹಜವೇ. ಆದರೆ ಉತ್ತರ ಭಾರತದಲ್ಲಿ ಸಾಧುಗಳು ಹುಕ್ಕಾ ಅಥವಾ ಗುಡುಗುಡಿಯನ್ನು ಸೇದುವುದು ಸರ್ವೇಸಾಮಾನ್ಯ. ಬಂಗಾಳದಲ್ಲಂತೂ ಮನೆಮನೆಗಳಲ್ಲೂ ಹುಕ್ಕಾ ಇರುತ್ತದೆ. ಅತಿಥಿಗಳಿಗೆ ಹುಕ್ಕಾ ತಯಾರಿಸಿ ಕೊಡುವುದು ಅಲ್ಲಿ ಅತಿಥಿ ಸತ್ಕಾರದ ಅವಿಭಾಜ್ಯ ಅಂಗ. ನಮ್ಮಲ್ಲಿ ಕಾಫಿ ಕುಡಿಯುವಷ್ಟೇ ಸಹಜ—ಅವರಲ್ಲಿ ಹುಕ್ಕಾ ಸೇದುವುದು. ಆದರೆ ಸಾಧುಗಳು ಹುಕ್ಕಾ ಮೊದ

ಲಾದ ಭೋಗಗಳನ್ನೆಲ್ಲ ಅನುಭವಿಸಬಹುದೇ ಎಂಬ ಪ್ರಶ್ನೆಯೇಳುತ್ತದೆ. ಅದಕ್ಕೆ ಶ್ರೀರಾಮಕೃಷ್ಣರೇ ಹೇಳಿದ್ದುಂಟು—"ತ್ಯಾಗ ಮಾಡಬೇಕಾದದ್ದು ಈರುಳ್ಳಿಯನ್ನೂ ಅಲ್ಲ, ಎಲೆ ಅಡಿಕೆಯನ್ನೂ ಅಲ್ಲ; ತ್ಯಾಗಮಾಡಬೇಕಾದದ್ದು ಕಾಮಿನೀಕಾಂಚನವನ್ನು. ಕಾಮ ಕಾಂಚನತ್ಯಾಗವೇ ನಿಜವಾದ ತ್ಯಾಗ."

## ೩. ಧುನಿ (ಪುಟ ೧೯೧)

ಸಂನ್ಯಾಸಿಗಳು ಧ್ಯಾನಕ್ಕೆ ಕುಳಿತುಕೊಳ್ಳುವಾಗ ತಮ್ಮ ಮುಂದೆ ಹಚ್ಚಿಕೊಳ್ಳುವ ಬೆಂಕಿಗೆ 'ಧುನಿ' ಎಂದು ಹೆಸರು. ಈ ಧುನಿಯನ್ನು ಹಚ್ಚಿಕೊಳ್ಳುವುದರಲ್ಲಿ ಎರಡು ಉದ್ದೇಶಗಳಿವೆ. ಮೊದಲನೆಯದಾಗಿ, ಉತ್ತರಭಾರತದಲ್ಲಿ, ಮುಖ್ಯವಾಗಿ ಹಿಮಾಲಯ ದಲ್ಲಿ ವಾಸಮಾಡುವ ಸಾಧು-ಸಂನ್ಯಾಸಿಗಳು ಕೊರೆಯುವ ಚಳಿಯಿಂದ ದೇಹವನ್ನು ರಕ್ಷಿಸಿಕೊಂಡು ಧ್ಯಾನ ಮಾಡಲು ಈ ಧುನಿಯನ್ನು ಹಚ್ಚಿಕೊಳ್ಳುತ್ತಾರೆ. ಆದರೆ ದಕ್ಷಿಣ ಭಾರತದಲ್ಲಿ ಅಂತಹ ಚಳಿ ಇಲ್ಲವಾದ್ದರಿಂದ, ಆ ಪದ್ಧತಿ ಕಂಡುಬರುವುದಿಲ್ಲ.

ಸಾಧಕನು ತನ್ನ ಮನಸ್ಸಿನ ಎಲ್ಲ ಕಾಮನೆಗಳನ್ನು, ಆಸೆ-ಆಕಾಂಕ್ಷೆಗಳನ್ನು, ಸಂಸ್ಕಾರರಾಶಿಯನ್ನು ಆ ಉರಿಯುವ ಅಗ್ನಿಯಲ್ಲಿ ಹಾಕಿ ಭಸ್ಮ ಮಾಡಿಬಿಟ್ಟೆ ಎಂಬ ಭಾವನೆಯನ್ನು ತಂದುಕೊಳ್ಳಲು ಈ ಧುನಿಯು ಸಹಾಯಮಾಡುತ್ತದೆ. ಇದೇ ಅದರ ಎರಡನೇ ಉದ್ದೇಶ. ಆ ಉರಿಯುವ ಧುನಿ ಒಂದು ಸಂಕೇತ. ಹೀಗೆ ತನ್ನೆಲ್ಲ ಆಸೆ-ಆಕಾಂಕ್ಷೆಗಳನ್ನು ಸುಟ್ಟುಬಿಟ್ಟೆನೆಂದು ಭಾವಿಸಿದಾಗ ಮನಸ್ಸು ನಿರ್ಮಲವಾಗಿ ಶಾಂತ ಗೊಳ್ಳುತ್ತದೆ. ಶಾಂತಗೊಂಡ ಮನಸ್ಸಿನಿಂದ ಧ್ಯಾನ ಮಾಡುವುದು ಸುಲಭವಾಗುತ್ತದೆ. ಚಳಿಯಿಂದ ದೇಹ ನಡುಗುತ್ತಿರುವಾಗಲೂ ಧ್ಯಾನ ಸಾಧ್ಯವಾಗುವುದಿಲ್ಲ; ಆಸೆ ಗಳಿಂದ ಮನಸ್ಸು ನಡುಗುತ್ತಿರುವಾಗಲೂ ಧ್ಯಾನ ಸಾಧ್ಯವಾಗುವುದಿಲ್ಲ. ಆದ್ದರಿಂದ ಸಂನ್ಯಾಸಿ ಗಳು ಧುನಿ ಉರಿಸಿಕೊಂಡು ಚಳಿಯನ್ನು ಓಡಿಸಿ, ಆಸೆಗಳನ್ನು ಸುಟ್ಟು, ಶಾಂತ ಮನಸ್ಸಿನಿಂದ ಧ್ಯಾನಮಗ್ನರಾಗಿಬಿಡಲು ಪ್ರಯತ್ನಿಸುತ್ತಾರೆ.

## ೪. ಮಧುಕರೀ ಭಿಕ್ಷೆ (ಪುಟ ೧೯೪)

'ಮಧುಕರೀ' ಎಂದರೆ ಜೇನ್ನೊಣ. ಜೇನ್ನೊಣ ಸಂಗ್ರಹಿಸಿದಂತಹ ಜೇನುತುಪ್ಪ ಎಷ್ಟು ಶುದ್ಧವಾಗಿರುತ್ತದೆಯೋ, ಸಂನ್ಯಾಸಿಗಳು ಮತ್ತು ವಟುಗಳು ನಾಲ್ಕಾರು ಮನೆ ಗಳಿಂದ ಸಂಗ್ರಹಿಸಿದ ಭಿಕ್ಷಾನ್ನವೂ ಅಷ್ಟೇ ಶುದ್ಧ ಎಂಬುದು 'ಮಧುಕರೀ ಭಿಕ್ಷೆ' ಅಥವಾ 'ಮಧುಕರವೃತ್ತಿ' ಎಂಬುದರ ಒಂದು ಅರ್ಥ. ಜೇನ್ನೊಣ ಹೇಗೆ ಹೂಗಳನ್ನು ಸ್ವಲ್ಪವೂ ನಲುಗಿಸದೆ, ನೋವು ಮಾಡದೆ ಮಧುವನ್ನು ಮಾತ್ರ ಹೀರುತ್ತದೆಯೋ ಹಾಗೆಯೇ ಸಂನ್ಯಾಸಿಗಳು ಮನೆಯವರ ಮನಸ್ಸನ್ನು ನೋಯಿಸದೆ ಭಿಕ್ಷೆಯನ್ನು ಸ್ವೀಕರಿಸುತ್ತಾರೆ. ಭಿಕ್ಷೆಗಾಗಿ ಬಂದ ಸಂನ್ಯಾಸಿಗಳು 'ಇಷ್ಟೇ ಕೊಡಿ, ಅಷ್ಟೇ ಕೊಡಿ' ಎಂದು ಕೇಳುವುದಿಲ್ಲ. ಅಥವಾ 'ಇಂಥದೇ ಕೊಡಿ, ಅಂಥದೇ ಕೊಡಿ' ಎಂದು ಕೇಳುವುದಿಲ್ಲ, ಕೇಳುವಂತಿಲ್ಲ. ಗೃಹಸ್ಥರು ಸಂತೋಷದಿಂದ ಎಷ್ಟು ಕೊಟ್ಟರೆ ಅಷ್ಟನ್ನು, ಏನು ಕೊಟ್ಟರೆ ಅದನ್ನು ಸ್ವೀಕರಿಸುತ್ತಾರೆ. ಸಂನ್ಯಾಸಿಗಳು ಭಿಕ್ಷೆ ಕೇಳುವಾಗ ನಾಲ್ಕು ಪ್ರಧಾನ ನಿಯಮಗಳನ್ನು ಅನುಸರಿಸಬೇಕು. (೧) 'ನಾರಾಯಣ ಹರಿ !' ಎಂದು ಭಗವನ್ನಾಮಸ್ಮರಣೆ ಮಾಡುತ್ತ ಕೇಳಬೇಕು. (೨) ಒಂದು ದಿನದ ಭಿಕ್ಷೆಗಾಗಿ ಏಳು ಮನೆಗಳವರೆಗೆ ಮಾತ್ರ ಹೋಗ

ಬಹುದು. ಮೊದಲ ಮನೆಯಲ್ಲೇ ಅಂದಿಗಾಗುವಷ್ಟು ಭಿಕ್ಷೆ ಸಿಕ್ಕಿಬಿಟ್ಟರೆ, ಎರಡನೆಯ ಮನೆಗೆ ಹೋಗಬಾರದು. ಏಕೆಂದರೆ ಭಿಕ್ಷೆಯ ಹೆಸರಿನಲ್ಲಿ, ಅಗತ್ಯಕ್ಕಿಂತ ಹೆಚ್ಚನ್ನು ಬೇಡಬಾರದು. ಹಾಗೆ ಬೇಡಿದರೆ ಅದು 'ಅಪರಿಗ್ರಹ' ನಿಯಮದ ಉಲ್ಲಂಘನೆಯಾಗುತ್ತದೆ; ಪರಿಗ್ರಹದ ದೋಷ ಬರುತ್ತದೆ. ಅಲ್ಲದೆ, ಬೇಕಾದುದಕ್ಕಿಂತ ಹೆಚ್ಚನ್ನು ಪಡೆದುಕೊಳ್ಳುವುದು ಲೋಭವಾಗುತ್ತದೆ. ಆದರೆ ಮೊದಲನೆಯ ಮನೆಯವರು ಭಿಕ್ಷೆ ಹಾಕದೆ ಹೋದರೆ, ಅಥವಾ ಹಾಕಿದ ಭಿಕ್ಷೆ ಸಾಲದೆ ಹೋದರೆ ಆಗ ಎರಡನೆಯ ಮನೆಗೆ ಹೋಗಬಹುದು. ಹೀಗೆ ಅವರು ಅಂದಿಗೆ ಸಾಕಾಗುವಷ್ಟು ಭಿಕ್ಷೆಯನ್ನು ಸಂಪಾದಿಸಲು ಏಳು ಮನೆಗಳವರೆಗೆ ಹೋಗಬಹುದು. ಆದರೆ ಈ ಏಳು ಮನೆಗಳಿಂದ ಸಂಗ್ರಹಿಸಿಯೂ ಸಾಕಷ್ಟು ಸಿಗದೆ ಹೋದರೆ ಎಂಟನೆಯ ಮನೆಗೆ ಹೋಗಬಾರದು. ಅಥವಾ ಒಂದು ವೇಳೆ ಈ ಏಳು ಮನೆಗಳವರೂ ಭಿಕ್ಷೆಯನ್ನೇ ಹಾಕದಿದ್ದರೂ ಎಂಟನೆಯ ಮನೆಗೆ ಹೋಗುವಂತಿಲ್ಲ. ಅಂದು ಭಗವಂತ ತಮಗೆ ಭಿಕ್ಷೆಯ ವ್ಯವಸ್ಥೆ ಮಾಡಿಲ್ಲವೆಂದು ತಿಳಿದುಕೊಂಡು ಉಪವಾಸವಿರಬೇಕು; ಉಪವಾಸವಿದ್ದುಕೊಂಡೇ ಭಗವದ್ಧ್ಯಾನಪರರಾಗಬೇಕು. (೩) ಭಿಕ್ಷೆ ಹಾಕದಿರುವವರ ಮೇಲೆ ಬೇಸರಿಸಿಕೊಳ್ಳಬಾರದು, ಅಥವಾ ಅವರನ್ನು ಬೈಯಲೂಬಾರದು. ಬದಲಾಗಿ, ಅವರಿಗೂ ಒಳ್ಳೆಯದಾಗಲಿ ಎಂದು ಮನಸ್ಸಿನಲ್ಲೇ ಪ್ರಾರ್ಥಿಸಿಕೊಳ್ಳಬೇಕು. (೪) ಸಂನ್ಯಾಸಿಗಳು ಭಿಕ್ಷೆಗಾಗಿ ಶ್ರೀಮಂತರ ಮನೆಗಳನ್ನೇ ಹುಡುಕಿಕೊಂಡು ಹೋಗಬಾರದು. ಭಗವಂತ ಯಾರ ಮನೆಯ ಮುಂದೆ ನಿಲ್ಲಿಸುತ್ತಾನೋ ಅಲ್ಲಿಗೆ ಹೋಗಬೇಕು. ಆದರೆ ಅದು ಮಾಂಸಾಹಾರ ಮೊದಲಾದ ವರ್ಜಿತ ಪದಾರ್ಥಗಳನ್ನು ತಿನ್ನುವವರ ಮನೆಯಾಗಿದ್ದು, ಅವರು ಅದನ್ನೇ ಕೊಡಲು ಬಂದರೆ ಬೇಡ ಎನ್ನಬಹುದು. ಸಂನ್ಯಾಸಿಗಳಿಗೆ 'ಬೇಡ' ಎನ್ನುವ ಅಧಿಕಾರವಿದೆ; ಆದರೆ 'ಬೇಕು', 'ಇಂಥದೇ ಬೇಕು' ಎನ್ನುವ ಅಧಿಕಾರವಿಲ್ಲ.

ಶ್ರೀರಾಮಕೃಷ್ಣ ಮಹಾಸಂಘದ ಸದಸ್ಯರು ಬೇಲೂರು ಮಠದಲ್ಲಿ ಸಂನ್ಯಾಸದೀಕ್ಷೆ ಪಡೆದುಕೊಂಡಮೇಲೆ ಮೂರುದಿನಗಳ ಮಟ್ಟಿಗೆ—ಶಾಸ್ತ್ರಕ್ಕೆ !—ಭಿಕ್ಷೆಗೆ ಹೋಗುತ್ತಾರೆ. (ಈ ಲೇಖಕ ಭಿಕ್ಷೆಗೆ ಹೋದಾಗ ಅವನನ್ನು ಯಾರೂ ಬೈಯಲೂ ಇಲ್ಲ, ಭಿಕ್ಷೆ ಹಾಕದೆ ಕಳಿಸಲೂ ಇಲ್ಲ!) ಪಡೆದ ಭಿಕ್ಷೆಯನ್ನು ಮಠಕ್ಕೆ ತಂದು ರಾಮಕೃಷ್ಣ ಮಠ ಮತ್ತು ಮಿಷನ್ನಿನ ಮಹಾಧ್ಯಕ್ಷರಿಗೆ ಅದರ ಅಗ್ರಭಾಗವನ್ನು ಸಮರ್ಪಿಸಿ, ಬಳಿಕ ಗಂಗೆಯ ದಡದ ಮರದ ಬುಡದಲ್ಲಿ ಕುಳಿತು ಅದನ್ನು ಊಟ ಮಾಡುತ್ತಾರೆ. ಸಂನ್ಯಾಸಿಗಳು ಅನಿಕೇತನರು—ಎಂದರೆ ಮನೆಯಿಲ್ಲದವರು. ಅದರ ಸಂಕೇತವಾಗಿ ಮರದ ಬುಡದಲ್ಲಿ ಊಟಮಾಡುವುದು. ಸಂನ್ಯಾಸಿಗಳ ಜೀವನಕ್ರಮ ಹೇಗೆಂದರೆ, 'ಕರತಲ ಭಿಕ್ಷಾ, ತರುತಲ ವಾಸ'. ಆದರೆ ಈಗ ಸಂಘದ ಸದಸ್ಯರೆಲ್ಲ ಮಠಗಳಲ್ಲಿ ವಾಸವಾಗಿರುವಂತಹ ವ್ಯವಸ್ಥೆಯನ್ನು ಸ್ವಾಮಿ ವಿವೇಕಾನಂದರು ಮಾಡಿಹೋಗಿದ್ದಾರೆ. ಅಲ್ಲದೆ ಶ್ರೀಮಾತೆಯವರಿಗೂ ತಮ್ಮ ಸಂನ್ಯಾಸೀಪುತ್ರರು ಗೊತ್ತುಗುರಿಯಿಲ್ಲದೆ ತಿರುಗಿಕೊಂಡಿರುವುದು ಇಷ್ಟವಿರಲಿಲ್ಲ. ಭಿಕ್ಷೆಯ ಹೆಸರಿನಲ್ಲಿ ಸುತ್ತಾಡಿ ಸಮಯನಷ್ಟ–ಶಕ್ತಿನಷ್ಟ ಮಾಡಿಕೊಳ್ಳುವುದಕ್ಕಿಂತ ಮಠದಲ್ಲಿ ವಾಸವಾಗಿದ್ದುಕೊಂಡು, ಸಾಧನೆಯನ್ನು ತೀವ್ರಗೊಳಿಸಿ ಆಧ್ಯಾತ್ಮಿಕ ಶಕ್ತಿಯನ್ನು ಬೆಳೆಸಿಕೊಂಡರೆ, ಅದರಿಂದ ಸಾಧಕರಿಗೂ ಶ್ರೇಯಸ್ಸು, ಸಮಾಜಕ್ಕೂ ಶ್ರೇಯಸ್ಸು.

### ೫. ಶ್ರೀರಾಮಕೃಷ್ಣಾವತಾರ (ಪುಟ ೨೨೧)

ತಾವು ಅವತಾರಪುರುಷರೆಂದು ಶ್ರೀರಾಮಕೃಷ್ಣರೇ ಅಷ್ಟು ಸ್ಪಷ್ಟವಾಗಿ ಹೇಳಿದ್ದರೂ, ಜನ ಇಂದಿಗೂ ಕೇಳುತ್ತಾರೆ—ಅವರು ಅವತಾರಪುರುಷರಾಗಿರಲು ಹೇಗೆ ಸಾಧ್ಯ? ಎಂದು. ಜನಸಾಮಾನ್ಯರು ಅವರನ್ನು ಕೇವಲ ಸಂತ ಅಥವಾ ಭಕ್ತನೇ ಹೊರತು ಅವತಾರಪುರುಷನಲ್ಲ ಎಂದು ಭಾವಿಸಿದರೆ ಆದರಲ್ಲೇನೂ ಆಶ್ಚರ್ಯವಿಲ್ಲ. ಕೆಲವರ ಸಮಸ್ಯೆಯೇನೆಂದರೆ—'ಅವತಾರಗಳು ಕೇವಲ ಹತ್ತಲ್ಲವೆ? ಎಂದಮೇಲೆ ಶ್ರೀರಾಮಕೃಷ್ಣರು ಈ ಹತ್ತರೊಳಗೆ ಬರುವುದಿಲ್ಲವಲ್ಲ? ಅಲ್ಲದೆ, ದುಷ್ಟಶಿಕ್ಷಣ-ಶಿಷ್ಟ ರಕ್ಷಣೆಗಳನ್ನು ಮಾಡುವುದಕ್ಕಾಗಿ ಭಗವಂತ ಅವತರಿಸಿ ಬರುವುದು ಯುಗದ ಅಂತ್ಯದಲ್ಲಿ ಮಾತ್ರವೇ ಅಲ್ಲವೆ?' ಎಂದು. ಆದರೆ ಈ ವಾದದ ಪ್ರಕಾರ, ಕೇವಲ ಯುಗಾಂತ್ಯದಲ್ಲಿ ಮಾತ್ರವೇ ಭಗವಂತ ಅವತಾರ ತಾಳುವನೆಂದಾದರೆ, ನಾಲ್ಕು ಯುಗ ಗಳಿಗೆ ನಾಲ್ಕು ಅವತಾರಗಳೇ ಹೊರತು ಹತ್ತಲ್ಲ. ಆದರೆ ಪ್ರಧಾನವಾಗಿ ಅವತಾರಗಳು ಹತ್ತು ಎಂದು ತೀರ್ಮಾನಿಸಿರುವುದರಿಂದ ಯುಗಾಂತ್ಯದಲ್ಲಿ ಮಾತ್ರವಲ್ಲದೆ ಯುಗಗಳ ಮಧ್ಯದಲ್ಲೂ ಭಗವಂತ ತನ್ನಿಚ್ಛೆಯಂತೆ ಅವತರಿಸಿ ಬರಬಲ್ಲ ಎಂದಂತಾಯಿತು.

ಭಗವದ್ಗೀತೆಯಲ್ಲಿ ಶ್ರೀಕೃಷ್ಣ, 'ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ' ಎಂದು ಹೇಳಿದುದನ್ನು ಕೆಲವರು 'ಒಂದೊಂದು ಯುಗಕ್ಕೆ ಒಂದೊಂದು ಅವತಾರ' ಎಂದು ಅರ್ಥೈಸಬಹುದು. ಆದರೆ ಅದು ಹಾಗಲ್ಲ. ಅವನೇ ಹೇಳುವಂತೆ—

*ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ*
*ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥*

ಯಾವಯಾವಾಗ ಧರ್ಮ ಅವನತಿ ಹೊಂದುತ್ತದೆಯೋ, ಅಧರ್ಮ ತಲೆಯೆತ್ತಿ ನಿಲ್ಲುತ್ತದೆಯೋ ಆಗ ಅಧರ್ಮವನ್ನು ಮರ್ದಿಸಲು ಭಗವಂತ ಅವತರಿಸುತ್ತಾನೆ. ಒಂದು ಯುಗವೆಂದರೆ ಅಸಂಖ್ಯಾತ ವರ್ಷಗಳ ಒಂದು ಅವಧಿ. ಇಷ್ಟೊಂದು ದೀರ್ಘಾವಧಿಯ ಒಂದೊಂದು ಯುಗದಲ್ಲೂ ಎಷ್ಟೆಷ್ಟು ಸಲ ಧರ್ಮದ ಅವನತಿಯಾಗಿ ಅಧರ್ಮವು ಉಚ್ಛ್ರಾಯಕ್ಕೆ ಬರುತ್ತದೆಯೋ ಹೇಳಬಲ್ಲವರಾರು? ಆದ್ದರಿಂದ, ಆಗಾಗ ಅವನತಿಗಿಳಿಯುವ ಧರ್ಮವನ್ನು ಮೇಲೆತ್ತಲು ಭಗವಂತ ಆಗಾಗ ಬರುತ್ತಲೇ ಇರಬೇಕಾಗುತ್ತದೆ. ಎಂದಮೇಲೆ ಈ ಹತ್ತು ಅವತಾರಗಳೂ ಸಾಕಾಗದೆ ಹಲವಾರು ಅವತಾರಗಳೇ ಬೇಕಾಗುತ್ತವೆ. ಅಲ್ಲದೆ, ಶ್ರೀಮದ್ಭಾಗವತದಲ್ಲಿ ಹೇಳುವಂತೆ, 'ಅವತಾರಾ ಹಿ ಅಸಂಖ್ಯೇಯಾಃ'—ಭಗವಂತನ ಅವತಾರಗಳು ಅಸಂಖ್ಯಾತ.

### ೬. ಸಂನ್ಯಾಸವೋ ಸಂಸಾರವೋ? (ಪುಟ ೨೨೯)

ಲೋಕಕ್ಕೆ ಶ್ರೀರಾಮಕೃಷ್ಣರು ನಿಜಕ್ಕೂ ಬೋಧಿಸಿದ್ದೇನು? ಅವರು ತೋರಿಸಿಕೊಟ್ಟ ಮಾರ್ಗ ಯಾವುದು—ಸಂನ್ಯಾಸಜೀವನವೆ ಅಥವಾ ಸಂಸಾರಜೀವನವೆ? ಸ್ವಯಂ ಶ್ರೀರಾಮಕೃಷ್ಣರ ಯುವಕ ಶಿಷ್ಯವರ್ಗ ಹಾಗೂ ಗೃಹಸ್ಥ ಶಿಷ್ಯವರ್ಗದಲ್ಲಿ ಇದೊಂದು ವಿವಾದದ ವಿಷಯವಾಗಿ ಪರಿಣಮಿಸಿತ್ತು. ನಿಜಕ್ಕೂ ಶ್ರೀರಾಮಕೃಷ್ಣರ ಜೀವನ-ಸಂದೇಶಗಳೆರಡೂ ಸ್ಫಟಿಕದಷ್ಟು ಸ್ಪಷ್ಟ. ಅವನ್ನು ಯಾರು ಬೇಕಾದರೂ

ಅರ್ಥಮಾಡಿಕೊಳ್ಳಬಹುದು. ಅಲ್ಲಿ ಬಳಸುವಮಾತುಗಳಾಗಲಿ ಪಾಂಡಿತ್ಯದ ವಾಕ್ಯಗಳಾಗಲಿ ಇಲ್ಲ. ಒಬ್ಬರು ಅವುಗಳನ್ನು ಓದಿದರೆ ಹೇಗೆ ಅರ್ಥವಾಗುತ್ತದೆಯೋ ಇನ್ನೊಬ್ಬರು ಓದಿದಾಗಲೂ ಹಾಗೇ ಅರ್ಥವಾಗಬೇಕು—ಹಾಗಿದೆ ಅವುಗಳ ನಿಖರತೆ. ಹೀಗಿದ್ದರೂ ಕೂಡ, ಅವರ ಸನ್ನಿಧಾನದಲ್ಲೇ ಕುಳಿತು ಹಲವಾರು ವರ್ಷಗಳ ಕಾಲ ಅವುಗಳನ್ನೆಲ್ಲ ಆಲಿಸಿದ, ಮತ್ತು ಅವರ ಜೀವನವನ್ನೇ ಕಣ್ಣಾರೆ ಕಂಡ ಭಕ್ತರು ಹಾಗೂ ಶಿಷ್ಯರಲ್ಲಿ ಅವರು ಏನು ಬೋಧಿಸಿದರೆಂಬುದರ ಬಗ್ಗೆ ಭಿನ್ನಾಭಿಪ್ರಾಯ ಹುಟ್ಟಿಕೊಂಡಿದೆ! ಯುವ ಶಿಷ್ಯರು ಸಂನ್ಯಾಸ ಸ್ವೀಕರಿಸಿ ಮಠಸ್ಥಾಪನೆ ಮಾಡುವುದೆಂದು ನಿಶ್ಚಯಿಸಿದರೆ, ಗೃಹಸ್ಥ ಭಕ್ತರು 'ಶ್ರೀರಾಮಕೃಷ್ಣರು ಸಂನ್ಯಾಸದ ಆದರ್ಶವನ್ನು ಬೋಧಿಸಲೇ ಇಲ್ಲ' ಎನ್ನುತ್ತಿದ್ದಾರೆ. ಗೃಹಸ್ಥರು ಆ ರೀತಿ ಹೇಳಿದ್ದು ಸಹಜವೇ ಎನ್ನಬೇಕು. ಏಕೆಂದರೆ, ಶ್ರೀರಾ ಮ ಕೃಷ್ಣರು ಅವರಿಗೆ ಬೋಧಿಸಿದ್ದು ಸಂಸಾರದಲ್ಲಿದ್ದುಕೊಂಡೇ ಭವಸಾಗರವನ್ನು ದಾಟುವ ಮಾರ್ಗವನ್ನು. ಅಲ್ಲದೆ ಸ್ವಯಂ ಶ್ರೀರಾಮಕೃಷ್ಣರು—ಲೋಕದೃಷ್ಟಿಗೆ—ಸಂಸಾರಸ್ಥರೇ ಅಲ್ಲವೆ? ಸ್ವತಃ ಸಂಸಾರಿಯಾದ ಅವರು ಸಂನ್ಯಾಸಜೀವನವನ್ನು ಬೋಧಿಸಲಿಲ್ಲವೆಂದು ಗೃಹಸ್ಥರು ತಿಳಿದರು. ಆದರೆ ಶ್ರೀರಾಮಕೃಷ್ಣರ ಇಂಗಿತ-ಇಚ್ಛೆ ಸುಸ್ಪಷ್ಟವಾಗಿಯೇ ಇದೆ. ಅವರು ಯಾವಾಗಲೂ ಬೋಧಿಸಿದ್ದು ತ್ಯಾಗವನ್ನೇ. ಅದ ರಲ್ಲೂ ತಮ್ಮ ಯುವಶಿಷ್ಯರಿಗಂತೂ ತ್ಯಾಗದ ಮಹತ್ವವನ್ನು ಮತ್ತೆಮತ್ತೆ ಒತ್ತಿಹೇಳಿದ್ದಾರೆ. ಅವರಿಗೆ ತಮ್ಮ ಕೈಯಾರೆ ಕಾಷಾಯವಸ್ತ್ರವನ್ನು ನೀಡಿದ್ದಾರೆ. ಅಲ್ಲದೆ ಒಮ್ಮೆ, ಸಂನ್ಯಾಸಧರ್ಮಕ್ಕನುಸಾರವಾಗಿ ಮನೆಮನೆಗೆ ಹೋಗಿ ಮಧುಕರೀ ಭಿಕ್ಷೆಯನ್ನು ಪಡೆದುತರುವಂತೆಯೂ ಮಾಡಿದ್ದಾರೆ. ನರೇಂದ್ರನಿಗಂತೂ ಈ ವಿಚಾರವಾಗಿ ವಿಶೇಷ ಸೂಚನೆಗಳನ್ನು ನೀಡಿದ್ದಾರೆ. ಆದ್ದರಿಂದ ಈ ಯುವಕರೆಲ್ಲ ಸಂನ್ಯಾಸಿಗಳಾಗಿ ಸಂಘಜೀವನ ನಡೆಸಬೇಕು ಎಂಬುದೇ ಅವರ ಇಚ್ಛೆಯಾಗಿತ್ತೆಂಬುದರಲ್ಲಿ ಸಂಶಯವಿಲ್ಲ. ಆದರೆ ಅವರು ತಮ್ಮ ಬಳಿಗೆ ಬಂದಬಂದವರೆಲ್ಲರನ್ನೂ ಸಂನ್ಯಾಸಜೀವನವನ್ನು ಕೈಗೊಳ್ಳುವಂತೆ ಪ್ರೇರೇಪಿಸಲಿಲ್ಲ ಎಂಬುದು ಗಮನಾರ್ಹ. ಯಾವ ಯುವಕರಲ್ಲಿ ಅಂತಸ್ಸತ್ತ್ವದಿಂದೊಡಗೂಡಿದ ತ್ಯಾಗಬುದ್ಧಿಯಿತ್ತೋ ಅಂಥವರನ್ನು ಮಾತ್ರ ಸಂನ್ಯಾಸಜೀವನಕ್ಕೆ ಅಣಿಗೊಳಿಸಿದರು. ಧರ್ಮದ ಪರಮೋಚ್ಚ ತತ್ತ್ವಗಳನ್ನು ಅವುಗಳ ಶುದ್ಧ ರೂಪದಿಂದ ಬೋಧಿಸಲು ಇಂತಹ ಮಹಾತ್ಯಾಗದಿಂದ ಪ್ರಜ್ವಲಿಸುತ್ತಿರುವ ಸಂನ್ಯಾಸಿಗಳೇ ಬೇಕು. ಆದರೆ ಇನ್ನೊಂದು ವಿಷಯವೂ ಅಷ್ಟೇ ಮುಖ್ಯ. ಏನೆಂದರೆ, ಈ ಸಂನ್ಯಾಸಿಗಳಿಗೆ ಕಾಲಕಾಲಕ್ಕೆ ನಿರಾತಂಕವಾಗಿ ಒಂದಿಷ್ಟು ಭಿಕ್ಷೆ ಸಿಗುವಂತಾಗಬೇಕಾದರೆ ಸದ್ಗೃಹಸ್ಥರ ನೆರವು ಬೇಕು!

ಇದು ಗೃಹಸ್ಥರಿಗೂ ಯುವಶಿಷ್ಯರಿಗೂ ನಡುವೆ ಉಂಟಾದ ಭಿನ್ನಾಭಿಪ್ರಾಯವಾದರೆ, ಈ ಯುವಶಿಷ್ಯರಲ್ಲೇ ಮತ್ತೊಂದು ವಿವಾದ ಹುಟ್ಟಿಕೊಂಡಿದೆ. ಒಂದು ಗುಂಪಿನವರು ಹೇಳುತ್ತಾರೆ: 'ಶ್ರೀರಾಮಕೃಷ್ಣರು ಬೋಧಿಸಿದ್ದು, ಮೊದಲು ಭಗವಂತನ ಸಾಕ್ಷಾತ್ಕಾರವನ್ನು ಸಿದ್ಧಿಸಿಕೊಂಡು ಬಳಿಕ ಜನಸೇವೆಯನ್ನು ಕೈಗೊಳ್ಳಬೇಕು ಅಂತ.' ಮತ್ತೆ ಕೆಲವರು, ಮುಖ್ಯವಾಗಿ ನರೇಂದ್ರ, ಹೇಳುತ್ತಾರೆ—'ಮೊದಲು ಜನಸೇವೆ; ಈ ಜನಸೇವೆಯ ಮೂಲಕವೇ ಸಾಕ್ಷಾತ್ಕಾರ' ಎಂದು. ಇವೆರಡೂ ಪ್ರಬಲ ವಾದಗಳೇ. ಇವೆರಡು ವಾದಗಳಿಗೂ ಶ್ರೀರಾಮಕೃಷ್ಣರ ಜೀವನ ಹಾಗೂ ಬೋಧನೆಗಳಲ್ಲಿ ಆಧಾರ ಸಿಗುತ್ತದೆ. ಹಾಗಾದರೆ ಈ ಎರಡು ವಾದಗಳಲ್ಲಿ ಯಾವುದು ಸರಿ ಎಂದರೆ, ಎರಡೂ ಸರಿ! ಅದು ಹೇಗೆ ಸಾಧ್ಯ? ಶ್ರೀರಾಮಕೃಷ್ಣರು, ಮೊದಲು ಸಾಕ್ಷಾತ್ಕಾರ ಮಾಡಿಕೊಂಡು

ಸೇವೆಗಿಳಿಯುವ ಮಾತನ್ನೂ ಹೇಳಿದ್ದಾರೆ; ಅಂತೆಯೇ, ಮೊದಲು ಲೋಕಸೇವೆ ಮಾಡಿ ತನ್ಮೂಲಕ ಸಾಕ್ಷಾತ್ಕಾರ ಮಾಡಿಕೊಳ್ಳುವ ಮಾತನ್ನೂ ಹೇಳಿದ್ದಾರೆ. ಆದರೆ ಇಲ್ಲಿ ನಾವು ಅರಿತುಕೊಳ್ಳಬೇಕಾದ ವಿಷಯ ಇದು—ಶ್ರೀರಾಮಕೃಷ್ಣರು ಯಾವ ಮಾತನ್ನು ಯಾರಿಗೆ ಹೇಳಿದರು ಎಂಬುದು. ಎಲ್ಲ ಮಾತುಗಳೂ ಎಲ್ಲರಿಗೂ ಅನ್ವಯವಾಗುವು ದಿಲ್ಲ. ಮನುಷ್ಯರೆಲ್ಲರೂ ಮೇಲ್ನೋಟಕ್ಕೆ ಒಂದೇ ರೀತಿಯಾಗಿ ಕಂಡುಬಂದರೂ, ಸಾಮರ್ಥ್ಯಗಳಲ್ಲಿ ಅಂತರವಿದ್ದೇ ಇದೆ. ಸತ್ತ್ವರಜಸ್ತಮೋಗುಣಗಳಿಗನುಸಾರವಾಗಿ ಜನರ ಸಾಮರ್ಥ್ಯಗಳು, ಸ್ವಭಾವಗಳು ಭಿನ್ನ ಭಿನ್ನ. ಭಗವಂತನ ಸಾಕ್ಷಾತ್ಕಾರ ಮಾಡಿ ಕೊಳ್ಳುವ ಹಂಬಲವಿರುವ ಪಾರಮಾರ್ಥಿಕರನ್ನು ಮುಖ್ಯವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು—ಸಮರ್ಥರು, ಸಾಮಾನ್ಯರು ಎಂದು. ಸಾತ್ತ್ವಿಕ, ರಾಜಸಿಕ ಹಾಗೂ ತಾಮಸಿಕ ಸ್ವಭಾವಗಳ ಜನರ ಗುಣಲಕ್ಷಣಗಳನ್ನು ಗೀತೆಯ 'ಗುಣತ್ರಯವಿಭಾಗ ಯೋಗ'ದಲ್ಲಿ ಶ್ರೀಕೃಷ್ಣನು ಸ್ಪಷ್ಟವಾಗಿ ವಿವರಿಸಿದ್ದಾನೆ. ಯಾರಲ್ಲಿ ತಮೋಗುಣ ಲೇಶವೂ ಇಲ್ಲವೋ ಮತ್ತು ಸತ್ತ್ವಗುಣ ಜಾಗೃತವಾಗಿದೆಯೋ ಅವರನ್ನು ಸಮರ್ಥರೆನ್ನ ಬಹುದು. ಅವರು ನೇರವಾಗಿ ಭಗವಂತನ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸಬಹುದು. ಅವರು ಜಪ, ಧ್ಯಾನಗಳೇ ಮೊದಲಾದ ಆಧ್ಯಾತ್ಮಿಕ ಸಾಧನೆಗಳನ್ನು ನಿರಾತಂಕವಾಗಿ ಮಾಡಬಲ್ಲರು; ಅಲ್ಲದೆ, ಅವರ ಸಾಧನೆಯೂ ಬಹು ಬೇಗ ಫಲಿಸುತ್ತದೆ. ರಜೋಗುಣ -ತಮೋಗುಣಗಳು ಅಧಿಕವಾಗಿರುವವರನ್ನು ಸಾಮಾನ್ಯರೆಂದು ವರ್ಗೀಕರಿಸಬಹುದು. ತಮೋಗುಣದವರಲ್ಲಿ ಆಲಸ್ಯ ಅಧಿಕ, ರಜೋಗುಣದವರಲ್ಲಿ ಚಟುವಟಿಕೆ ಅಧಿಕ. ಈ ಆಲಸ್ಯವನ್ನು ಕರಗಿಸಿ, ಮೈತುಂಬ ಕೆಲಸಕಾರ್ಯಗಳನ್ನು ಹಚ್ಚಿಕೊಳ್ಳುವ ಚಪಲ ಮನೋಭಾವವನ್ನು ಉದಾತ್ತೀಕರಿಸಿ, ಸಮಾಧಾನಚಿತ್ತದ ಸಾತ್ತ್ವಿಕ ಗುಣಕ್ಕೆ ಏರಿಸಿ ಕೊಳ್ಳುವಲ್ಲಿ ನಿಷ್ಕಾಮಕರ್ಮ ಅತ್ಯಂತ ಸಹಾಯಕಾರಿ. ಅಲ್ಲದೆ, ಯಾರೂ ಒಂದು ಕ್ಷಣವಾದರೂ ಯಾವ ಕರ್ಮವನ್ನೂ ಮಾಡದೆ 'ಸುಮ್ಮನೆ' ಇರಲಾರರು. ಹೆಚ್ಚಿನವ ರಿಗೆ, ದಿನಗಳಲ್ಲಿ ಎಷ್ಟು ಗಂಟೆಗಳ—ಅಥವಾ ನಿಮಿಷಗಳ—ಕಾಲವನ್ನು ಆಧ್ಯಾತ್ಮಿಕ ಸಾಧನೆಯಲ್ಲೇ ಕಳೆಯಲು ಸಾಧ್ಯ? ಆದ್ದರಿಂದ ಸಾಧಕರೆನ್ನಿಸಿಕೊಂಡವರು ಆಧ್ಯಾತ್ಮಿಕ ಸಾಧನೆಯ ಹೆಸರಿನಲ್ಲಿ ಸುಮ್ಮನೆ ಚಡಪಡಿಸುತ್ತಿರುವುದು ತೀರಾ ಸಾಮಾನ್ಯ. ಇಂತಹ ವರಿಗೆ, ತಮ್ಮ ರಜೋಗುಣ-ತಮೋಗುಣಗಳನ್ನು ಜಯಿಸಲು ಸುಲಭೋಪಾಯ ವೆಂದರೆ ನಿಷ್ಕಾಮಕರ್ಮ. ಇದನ್ನು ಶ್ರೀರಾಮಕೃಷ್ಣರು ಸ್ಪಷ್ಟವಾಗಿ ತಿಳಿಸಿದ ಸಂದರ್ಭ ಗಳಿವೆ. ಆದರೆ ಕೆಲವು ಯುವಶಿಷ್ಯರು ಶ್ರೀರಾಮಕೃಷ್ಣರ ಭಗವದಾನಂದವನ್ನು ಕಂಡು, ಹಾಗೂ ಅವರು 'ಭಗವತ್ಸಾಕ್ಷಾತ್ಕಾರವೇ ಮನುಷ್ಯನ ಪ್ರಧಾನ ಕರ್ತವ್ಯ' ಎಂದು ಹೇಳಿದ್ದನ್ನು ಕೇಳಿ, ಈಗ ತಾವೂ ಹೇಳುತ್ತಿದ್ದಾರೆ—'ಮೊದಲು ಸಾಕ್ಷಾತ್ಕಾರ, ಬಳಿಕ ಸೇವೆಯ ಮಾತು' ಎಂದು. ಆದರೆ ಬಹುತೇಕ ಜನರ ಅಸಾಮರ್ಥ್ಯವನ್ನು ಕಂಡು, ಹಾಗೂ ಶ್ರೀರಾಮಕೃಷ್ಣರು ಬೋಧಿಸಿದ ಜನಸೇವೆಯ ಪ್ರಾಶಸ್ತ್ಯವನ್ನು ಮನಗಂಡು ನರೇಂದ್ರ ಹೇಳುತ್ತಿದ್ದಾನೆ—'ಜನಸೇವೆಯೇ ಮೊದಲು, ಬಳಿಕ ಭಗವತ್ಸಾಕ್ಷಾತ್ಕಾರದ ಮಾತು' ಎಂದು. ನರೇಂದ್ರನ ಮಾತೇ ಗೆದ್ದಿತು ಎಂಬುದನ್ನು ಹೇಳಬೇಕಾಗಿಯೇ ಇಲ್ಲ. ಆದರೆ ಅದು ಅವನ ಇಚ್ಛೆಯಿಂದಲ್ಲ, ಅದು ಶ್ರೀರಾಮಕೃಷ್ಣರ ಇಚ್ಛೆಯಾದ್ದರಿಂದ; ಜಗನ್ಮಾತೆಯ ಇಚ್ಛೆಯಾದ್ದರಿಂದ.

## ೭. ಒಂದು ಧರ್ಮಸೂಕ್ಷ್ಮ (ಪುಟ ೨೮೫)

'ಶ್ರೀರಾಮಕೃಷ್ಣರ ಶರೀರವನ್ನು ದಹನ ಮಾಡಿದ್ದು ಒಂದು ಆಕ್ಷೇಪಣೀಯ ಕಾರ್ಯವೇ ಸರಿ' ಎಂದು ಬರೆಯುತ್ತಿದ್ದಾರೆ ಸ್ವಾಮೀಜಿ. ಇದಕ್ಕೆ ಕಾರಣವೇನೆಂದರೆ ಶ್ರೀರಾಮಕೃಷ್ಣರು ಸಂನ್ಯಾಸಿಗಳು ಎಂಬುದು. ಸಂನ್ಯಾಸಿಗಳು ನಿರಗ್ನಿಗಳಾದ್ದರಿಂದ—ಎಂದರೆ ಅಗ್ನಿಕಾರ್ಯಾದಿ ಕರ್ಮಗಳನ್ನು ತ್ಯಾಜ್ಯ ಮಾಡಿದವರಾದ್ದರಿಂದ—ಅವರ ಶರೀರಗಳನ್ನು ದಹನ ಮಾಡಬಾರದೆಂದು ಶಾಸ್ತ್ರವಿಧಿ. ಆದ್ದರಿಂದ, ಹಿಂದೂ ಸಂಪ್ರದಾಯಗಳ ಪ್ರಕಾರ, ಸಂನ್ಯಾಸಿಗಳ ಶರೀರವನ್ನು ಒಂದೋ ಭೂಗತ ಮಾಡಬೇಕು, ಇಲ್ಲವೆ ಭಾರವಾದ ಕಲ್ಲುಕಟ್ಟಿ ನದಿಯಲ್ಲಿ ವಿಸರ್ಜನೆ ಮಾಡಬೇಕು. 'ಆದರೆ ಶ್ರೀರಾಮಕೃಷ್ಣರು ಸಂನ್ಯಾಸಿಯಲ್ಲವಲ್ಲ? ಅವರು ಪತ್ನಿಯೊಡಗೂಡಿದ ಗೃಹಸ್ಥರಲ್ಲವೆ? ಆದ್ದರಿಂದ ಅವರ ಶರೀರವನ್ನು ದಹನ ಮಾಡಿದ್ದೇ ಸರಿಯಲ್ಲವೆ?' ಎಂದೂ ಕೇಳಬಹುದು. ಆದರೆ ಶ್ರೀರಾಮಕೃಷ್ಣರು ಸಂನ್ಯಾಸಿಗಳೆಂಬುದೇ ಸತ್ಯ. ಅವರು (ವಿವಾಹವಾದ ಮೇಲೆ) ತೋತಾಪುರಿಯಿಂದ ವಿಧಿವತ್ತಾಗಿ ಸಂನ್ಯಾಸದೀಕ್ಷೆಯನ್ನು ಪಡೆದವರು. ಸಂನ್ಯಾಸವನ್ನು ಸ್ವೀಕರಿಸಿ, ಅದ್ವೈತ ಸಾಧನೆ ಮಾಡಿ, ಅದರಲ್ಲಿ ಪರಿಪೂರ್ಣ ಸಿದ್ಧಿಯನ್ನು ಪಡೆದುಕೊಂಡವರು. ಅವರು ಸಪತ್ನೀಕರಾಗಿದ್ದರೂ, ಅವರ ಹಾಗೂ ಶ್ರೀಶಾರದಾದೇವಿಯವರ ನಡುವಣ ಸಂಬಂಧವು ಗೃಹಸ್ಥಧರ್ಮಕ್ಕನುಸಾರವಾದದ್ದಲ್ಲ, ಅದೊಂದು ಅಭೂತಪೂರ್ವ ಅಲೌಕಿಕ ಸಂಬಂಧ; ಅವರದು ಲೀಲಾನಾಟಕ—ಇದು ಅವರ ಜೀವನವನ್ನು ಅಧ್ಯಯಿಸಿದವರೆಲ್ಲ ಕಂಡುಕೊಳ್ಳುವ ಅಂಶ. ಆದ್ದರಿಂದ ಅವರು ಸಂನ್ಯಾಸಧರ್ಮಕ್ಕೆ ವ್ಯತಿರಿಕ್ತವಾಗಿ ಜೀವಿಸಿದವರಲ್ಲ. ಹೀಗಿದ್ದರೂ ಅವರು ಸಂನ್ಯಾಸಿಗಳ ಉಡುಗೆಯಾದ, ತ್ಯಾಗದ ಪ್ರತೀಕವಾದ ಕಾಷಾಯವಸ್ತ್ರವನ್ನು ಧರಿಸಲಿಲ್ಲವಲ್ಲ? ಇದಕ್ಕೆ ಎರಡು ಕಾರಣಗಳನ್ನು ಊಹಿಸಬಹುದು. ಮೊದಲನೆಯದಾಗಿ, ಅವರು ಸಂನ್ಯಾಸದೀಕ್ಷೆಯನ್ನು ಸ್ವೀಕರಿಸಿದ್ದವರೇ ಆದರೂ, ಅವರು ಕೇವಲ ಸಂನ್ಯಾಸಿಯಲ್ಲ—ಸಂನ್ಯಾಸವನ್ನೂ ಮೀರಿದ ಪರಮಹಂಸಾವಸ್ಥೆಯನ್ನು ತಲುಪಿದವರು, ಪರಮಹಂಸರು. ಈ ಅತ್ಯುನ್ನತ ಸ್ಥಿತಿಯಲ್ಲಿ ಒಬ್ಬನ ಆಹಾರ-ಬಟ್ಟೆಗಳೇ ಮೊದಲಾದ ಬಾಹ್ಯ ನಿಯಮಗಳಿಗೆ ಸಂಬಂಧಿಸಿದ ವಿಧಿನಿಷೇಧಗಳೆಲ್ಲ ಕಳಚಿಹೋಗಿರುತ್ತವೆ. ಆದ್ದರಿಂದ ಅವರು ಕಾಷಾಯವಸ್ತ್ರವನ್ನಾದರೂ ಧರಿಸಬಹುದು, ಬಿಳಿಯ ವಸ್ತ್ರವನ್ನಾದರೂ ಧರಿಸಬಹುದು ಅಥವಾ ಇನ್ನೆಂತಹ ಬಟ್ಟೆಯನ್ನಾದರೂ ಧರಿಸಬಹುದು—ಅದರಲ್ಲಿ ತಾರತಮ್ಯವಿಲ್ಲ. ಆದ್ದರಿಂದಲೇ ಅವರಲ್ಲಿ ಇಂತಹ ಬಾಹ್ಯಾಚರಣೆಗಳಿಗೆ ಸಂಬಂಧಿಸಿದುದೇನನ್ನೂ ನಾವು ಕಾಣುವಂತಿಲ್ಲ. ಎರಡನೆಯದಾಗಿ, ಶ್ರೀರಾಮಕೃಷ್ಣರು ಅವತಾರಪುರುಷರು. ಅವರು ಈ ಬಾರಿ ಜಗತ್ತಿನ ಎಲ್ಲ ಬಗೆಯ ಆಧ್ಯಾತ್ಮಿಕ ಸಾಧಕರಿಗೆ ಮಾರ್ಗದರ್ಶನ ನೀಡುವುದಕ್ಕಾಗಿ ಬಂದಿದ್ದಾರೆ. ಅವರ ಜೀವನ-ಸಂದೇಶಗಳಲ್ಲಿ ಹಿಂದೂ-ಮುಸಲ್ಮಾನ-ಕ್ರೈಸ್ತರಿಗೂ ಮಾರ್ಗದರ್ಶನವಿದೆ; ಜ್ಞಾನ-ಭಕ್ತಿ-ಕರ್ಮ-ರಾಜಯೋಗಿಗಳಿಗೂ ಮಾರ್ಗದರ್ಶನವಿದೆ; ದ್ವೈತ-ಅದ್ವೈತ-ವಿಶಿಷ್ಟಾದ್ವೈತ ಮಾರ್ಗಾವಲಂಬಿಗಳಿಗೂ ಮಾರ್ಗದರ್ಶನವಿದೆ; ಅಂತೆಯೇ, ಬ್ರಹ್ಮಚರ್ಯ-ಗೃಹಸ್ಥ-ಸಂನ್ಯಾಸಾಶ್ರಮಗಳವರಿಗೂ ಮಾರ್ಗದರ್ಶನವಿದೆ. ಗೃಹಸ್ಥರಾದರೂ ಕೂಡ ಪವಿತ್ರ ಜೀವನವನ್ನು ನಡೆಸಲು ಸಾಧ್ಯವಿದೆ ಎಂಬುದನ್ನು ತೋರಿಸುವುದಕ್ಕಾಗಿ, ಸಂಸಾರದಲ್ಲಿ ಇದ್ದೂ ಇಲ್ಲದವರಂತೆ ಹೇಗಿರಬಹುದು ಎಂಬುದನ್ನು ತೋರಿಸುವುದ

ಕ್ಕಾಗಿ, ಶ್ರೀರಾಮಕೃಷ್ಣರು ಸಂನ್ಯಾಸಿಗಳಾದರೂ ಬಳಿಕ ಕಾಷಾಯವಸ್ತ್ರವನ್ನು ತ್ಯಜಿಸಿ ಬಿಳಿಯ ಬಟ್ಟೆಯಲ್ಲಿದ್ದರು. ಆದರೆ ಅವರು ತೋರಿಸಿಕೊಟ್ಟ ಈ ಆದರ್ಶವನ್ನು ತದ್ವತ್ತಾಗಿ ಪಾಲಿಸಲು ಎಷ್ಟು ಜನರಿಂದ ಸಾಧ್ಯ ಎಂಬ ವಿಚಾರ ಬೇರೆ. ಆದರೆ ಅವರು ಹೀಗೆ ಬಿಳಿಯಬಟ್ಟೆಯಲ್ಲಿದ್ದರೂ ವಿರಜಾಹೋಮದ ಮೂಲಕ ಪ್ರೈಷಮಂತ್ರವನ್ನು ಸ್ವೀಕಾರ ಮಾಡಿದವರು; ಅವರು ಹೀಗೆ ಬಿಳಿಯ ಬಟ್ಟೆಯಲ್ಲಿದ್ದರೂ ಅಪ್ಪಟ ಸಂನ್ಯಾಸಿಗಳಿಗಿಂತಲೂ ಕಟುತರ ಸಂನ್ಯಾಸಿಗಳು.

ಆದರೆ, "ಶ್ರೀರಾಮಕೃಷ್ಣರ ಶರೀರವನ್ನು ದಹನಮಾಡಿದ್ದು ಆಕ್ಷೇಪಣೀಯ ಕಾರ್ಯ ಎಂಬುದರಲ್ಲಿ ಸಂದೇಹವೇ ಇಲ್ಲ" ಎಂಬ ಈ ಮಾತನ್ನು ಸ್ವಾಮೀಜಿ ಪ್ರಮದದಾಸ ಮಿತ್ರರಿಗೆ ಈಗೇಕೆ ಬರೆಯಬೇಕಾಗಿತ್ತು? ಇದಕ್ಕೆ ಕಾರಣವಿಷ್ಟೆ: ಪ್ರಮದದಾಸ ಮಿತ್ರರು ಪ್ರತಿಭಾನ್ವಿತ ಪಂಡಿತರು, ಶಾಸ್ತ್ರಗಳನ್ನು ಚೆನ್ನಾಗಿ ಅರಿತವರು, ಮತ್ತು ವಾರಾಣಸಿಯಲ್ಲೇ ನೆಲಸಿರುವವರು. ಆದ್ದರಿಂದ ಅವರಿಗೆ ಹಿಂದೂ ಸಂಪ್ರದಾಯಗಳ ಎಲ್ಲ ವಿವರಗಳೂ ಚಿರಪರಿಚಿತ. ಅವರಿಗೆ ಶ್ರೀರಾಮಕೃಷ್ಣರು ಸಂನ್ಯಾಸ ಸ್ವೀಕರಿಸಿದವರು ಎಂಬ ವಿಚಾರ ತಿಳಿದಿತ್ತು. ಈಗ ಶ್ರೀರಾಮಕೃಷ್ಣರ ಸ್ಮಾರಕ ದೇವಾಲಯದ ಪ್ರಸ್ತಾಪವೆತ್ತಿದಾಗ ಅವರು ಆಕ್ಷೇಪಣೆಯೆತ್ತಬಹುದು—'ಸಂನ್ಯಾಸಿಯ ಶರೀರವನ್ನು ಏಕೆ ದಹನ ಮಾಡಿದಿರಿ?' ಎಂದು. ಅಥವಾ ಆದಾಗಲೇ ಅವರಿಬ್ಬರ ನಡುವೆ ಈ ವಿಷಯದ ಪ್ರಸ್ತಾಪ ಬಂದಿದ್ದಿರಲೂಬಹುದು. ಆದ್ದರಿಂದಲೇ ಸ್ವಾಮೀಜಿ, 'ಇದೊಂದು ಆಕ್ಷೇಪಣೀಯ ಕಾರ್ಯ' ಎಂದು ಒಪ್ಪಿಕೊಳ್ಳುತ್ತಿದ್ದಾರೆ.

ಈಗ ಇನ್ನೊಂದು ಪ್ರಶ್ನೆ ಏಳಬಹುದು—ಸ್ವಾಮೀಜಿಗೇ ಈ ವಿಷಯ ತಿಳಿದಿದ್ದರೆ ಶ್ರೀರಾಮಕೃಷ್ಣರ ಶರೀರವನ್ನು ದಹನಮಾಡಿದ್ದೇಕೆ? ಪವಿತ್ರ ಗಂಗೆಯಲ್ಲಿ ವಿಸರ್ಜನೆ ಮಾಡಬಹುದಾಗಿತ್ತಲ್ಲ? ಎಂದು. ಆದರೆ ನರೇಂದ್ರನಿಗಾಗಲಿ, ಶ್ರೀರಾಮಕೃಷ್ಣರ ಭಕ್ತಾದಿಗಳಿಗಾಗಲಿ ಸಂನ್ಯಾಸಿಯ ಶರೀರವನ್ನು ದಹನಮಾಡಬಾರದೆಂಬ ವಿಷಯ ತಿಳಿದಿರಲಿಲ್ಲ, ಅಥವಾ ಆಗ ಹೊಳೆಯಲಿಲ್ಲ ಎನ್ನಬೇಕು. ಏಕೆಂದರೆ ತಂತ್ರಸಾಧನಾ ಪ್ರಧಾನವಾದ ಆ ಬಂಗಾಳದಲ್ಲಿ ಸಂನ್ಯಾಸದ ಸಂಪ್ರದಾಯವೇ ಇರಲಿಲ್ಲ. ಆದ್ದರಿಂದಲೇ ಶ್ರೀರಾಮಕೃಷ್ಣರ ಸಂನ್ಯಾಸೀಶರೀರಕ್ಕೆ ದಹನಕಾರ್ಯ ನಡೆದುಹೋಗಿಬಿಟ್ಟಿತು. ಈಗ ನರೇಂದ್ರನು ಸ್ವಾಮಿ ವಿವೇಕಾನಂದರಾಗಿ ಪರಿವ್ರಜನ ಕೈಗೊಂಡು, ಬಂಗಾಳದಿಂದ ಹೊರಗೆ ಬಂದಾಗ ತಿಳಿದುಬಂದಿದೆ—ತಾವು ಅಂದು ಮಾಡಿದ ಕಾರ್ಯ ಆಕ್ಷೇಪಣೀಯ ಎಂದು.

ಈಗ ಮತ್ತೊಂದು ಪ್ರಶ್ನೆ. ಸಂನ್ಯಾಸಿಯ ಶರೀರವನ್ನು ದಹನ ಮಾಡುವುದು ಸರಿಯಲ್ಲ ಎನ್ನುವುದಾದರೆ ಶ್ರೀರಾಮಕೃಷ್ಣ ಮಠಗಳಲ್ಲಿ ಇಂದಿಗೂ ಸಂನ್ಯಾಸಿಗಳ ಪಾರ್ಥಿವ ಶರೀರಗಳನ್ನು ದಹನ ಮಾಡುತ್ತಿದ್ದಾರಲ್ಲ, ಏಕೆ? ಶಾಸ್ತ್ರಪ್ರಕಾರ ನೆಲಸಮಾಧಿ ಮಾಡಬೇಕಲ್ಲವೆ? ಇದಕ್ಕೆ ಉತ್ತರವಿಷ್ಟೆ: ಸಂನ್ಯಾಸಿಯ ಶರೀರವನ್ನು ನೆಲಸಮಾಧಿ ಮಾಡಿದರೆ ಅದರ ಮೇಲೊಂದು ಬೃಂದಾವನವನ್ನು ಕಟ್ಟಬೇಕಾಗುತ್ತದೆ. ಹೀಗೆ ಬೃಂದಾವನಗಳ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತದೆ. ಕೊನೆಗೆ ಅದಕ್ಕೇ ಎಕರೆಗಟ್ಟಲೆ ಜಾಗ ಬೇಕಾಗುತ್ತದೆ. ಕ್ರೈಸ್ತ-ಮುಸಲ್ಮಾನರ ದೊಡ್ಡ ದೊಡ್ಡ ಸ್ಮಶಾನಗಳನ್ನು ಕಾಣುವುದಿಲ್ಲವೆ? ಈಗ ಹೇಗಿದ್ದರೂ ಸಂನ್ಯಾಸಿಗಳ ಶರೀರಗಳನ್ನು ದಹನಮಾಡುವ ಸಂಪ್ರದಾಯವನ್ನು ಸ್ವಾಮೀಜಿಯವರೇ ಪ್ರಾರಂಭಿಸಿಯಾಗಿದೆಯಲ್ಲ! ಅಲ್ಲದೆ ಇದ

ರಿಂದ ಅನುಕೂಲವೂ ಇದೆಯಲ್ಲ ? ಆದ್ದರಿಂದ ರಾಮಕೃಷ್ಣ ಮಠಗಳಲ್ಲಿ ಸಂನ್ಯಾಸಿಗಳ ಶರೀರಗಳನ್ನು ದಹನ ಮಾಡುವ ಸಂಪ್ರದಾಯವೇ ಬೆಳೆದುಕೊಂಡು ಬಂದಿದೆ.

## ೮. ಸಂನ್ಯಾಸಿಗೀತೆ

ಇದು ತ್ಯಾಗದ ಮತ್ತು ಸಂನ್ಯಾಸಜೀವನದ ಆದರ್ಶಗಳನ್ನು ಉಜ್ವಲವಾಗಿ ಬಣ್ಣಿಸುವ ಸುಂದರ ಕವನ. ಸ್ವಾಮಿ ವಿವೇಕಾನಂದರು ಅಮೆರಿಕೆಯಲ್ಲಿದ್ದಾಗ ಸ್ಫೂರ್ತಿಯ ಘಳಿಗೆಯೊಂದರಲ್ಲಿ (ಒಬ್ಬಾತನ ಟೀಕೆಯ ನುಡಿಗಳಿಗೆ ಉತ್ತರವಾಗಿ) ಇದನ್ನು ರಚಿಸಿದರು. ಆ ಸಂದರ್ಭವನ್ನು 'ವಿಶ್ವವಿಜೇತ ವಿವೇಕಾನಂದ' ಗ್ರಂಥದಲ್ಲಿ (ಪುಟ ೪೩೬) ಕಾಣಬಹುದು.

'ಸಂನ್ಯಾಸಿಗೀತೆ'ಯ ತಾತ್ಪರ್ಯವನ್ನು ಕೆಲವು ವಿವರಣೆಗಳೊಂದಿಗೆ ಇಲ್ಲಿ ಕೊಡಲಾಗಿದೆ:

೧) ಓ ಸಂನ್ಯಾಸಿಯೆ ! ಜಾಗ್ರತನಾಗು. ತ್ಯಾಗಿ(*ಚಾಗಿ*)ಗಳ ಹಾಡಾದ ಓಂಕಾರವನ್ನು ಉದ್ಘೋಷಿಸು. ನಿದ್ರಾವಸ್ಥೆಯಲ್ಲಿರುವ ನಮ್ಮೀ ಭಾರತರಾಷ್ಟ್ರವನ್ನು ಆ ಹಾಡಿನಿಂದ ಎಚ್ಚರಗೊಳಿಸು. ತ್ಯಾಗಿಗಳ ಆ ಹಾಡೆಂಬುದು—ಓಂಕಾರವೆಂಬುದು—ಭೋಗದ ನಡುವೆ ಉದ್ಭವಿಸುವಂಥದಲ್ಲ; ಎಲ್ಲಿ ಕಾಮ-ಮೋಹಗಳು ಸುಳಿಯವೋ ಮತ್ತು (ಮೇಣ್) ಎಲ್ಲಿ ಜೀವಾತ್ಮನು ಹಣ-ಹಸರು-ಕೀರ್ತಿಗಳೆಂಬ ಭ್ರಾಂತಿಯಿಂದ ಪಾರಾಗಿ ('*ಎಲ್ಲಿ ಜೀವವು ಕೀರ್ತಿಕಾಂಚನವೆಂಬುವಾಸೆಗಳಿಂದ ಜನಿಸುವ ಭ್ರಾಂತಿಯ ತಿಳಿಯದೋ*') ನಿತ್ಯ(ನಿಚ್ಚ)ವಾದ ಶಾಂತಿಯನ್ನು, ಎಂದರೆ ಆತ್ಮಾನಂದವನ್ನು ಹೊಂದುವನೋ, ಎಲ್ಲಿ ಸತ್ಯದ (ನನ್ನಿಯ) ಅರಿವಿನ ಆನಂದವೆಂಬ ಚಿಲುಮೆ ಚಿಮ್ಮುತ್ತಿರುವುದೋ, ತೃಪ್ತಿಯೆಂಬ ಝರಿ (ತೊರೆ) ನಿರಂತರ ಹರಿಯುತ್ತಿರುವುದೋ ಅಂಥಲ್ಲಿ ಹುಟ್ಟಿಬರುವುದು ಈ ಓಂ ತತ್-ಸತ್ ಎಂಬ ಗಾನ. (*ತತ್* = ಅದು, ಎಂದರೆ ಆತ್ಮ, ಪರಮಾತ್ಮ; *ಸತ್* = ಎಂದೆಂದಿಗೂ ಇರುವಂಥದು) ಅದನ್ನು ನೀನು ಮೊಳಗು.

೨) ನಿನ್ನನ್ನು ಬಂಧಿಸಿರುವ (ಈ ನಶ್ವರ ಜಗತ್ತಿನ ಸಂಬಂಧಗಳೆಂಬ) ಮಾಯಾಪಾಶವನ್ನು ಕತ್ತರಿಸಿಕೊ. ಹೆಣ್ಣು-ಹೊನ್ನು-ಮಣ್ಣುಗಳ ತೊಡಕನ್ನು ನಿವಾರಿಸಿಕೊ. (*ಕಗ್ಗ* = ಕೆಲಸಕ್ಕೆ ಬಾರದ್ದು. ಕಗ್ಗ ಎಂಬುದಕ್ಕೆ ಹರಟೆ ಎಂಬರ್ಥವೂ ಇದೆ) ಗುಲಾಮನಾದವನು ಇನ್ನೊಬ್ಬನಿಂದ ಮುದ್ದಿಸಿಕೊಳ್ಳಲಿ ಅಥವಾ ಗುದ್ದಿಸಿಕೊಳ್ಳಲಿ, ಅವನ ಗುಲಾಮಗಿರಿಯೇನೂ ತಪ್ಪುವುದಿಲ್ಲ. ಹಾಗೆಯೇ, ಕಬ್ಬಿಣದ್ದಾದರೇನು, ಚಿನ್ನದ್ದಾದರೇನು—ಸರಪಳಿ ಸರಪಳಿಯೇ, ಬಂಧನಕಾರಿಯೇ (*ಕಣ್ಣಿ* = ಹಗ್ಗದ ಕುಣಿಕೆ). ಇಲ್ಲಿ ಸ್ವಾಮೀಜಿಯವರು ಎರಡು ಬಗೆಯ ಸರಪಳಿಗಳ ಬಗ್ಗೆ ಹೇಳುತ್ತಿದ್ದಾರೆ. (ಕಬ್ಬಿಣದ ಸರಪಳಿಯೆಂದರೆ ಹೆಂಡತಿ-ಮಕ್ಕಳು, ಆಸ್ತಿ-ಪಾಸ್ತಿ ಮೊದಲಾದುವುಗಳ ಬಂಧನ; ಚಿನ್ನದ ಸರಪಳಿಯೆಂದರೆ ಲೋಕಹಿತ ಕಾರ್ಯಗಳೇ ಮೊದಲಾದುವನ್ನು ಸಾಧಿಸಬೇಕೆಂಬ ಹೆಚ್ಚು ಉದಾತ್ತವಾದ ಆಕಾಂಕ್ಷೆಗಳು.) ಈ ಎರಡರಿಂದಲೂ ಬಿಡಿಸಿಕೊಳ್ಳಬೇಕಾದ್ದೇ ಯುಕ್ತ. ರಾಗ-ದ್ವೇಷ, ಪಾಪ-ಪುಣ್ಯ, ಸುಖ-ದುಃಖ ಇವೆಲ್ಲ 'ದ್ವಂದ್ವ'ಗಳು. ಒಂದಿದ್ದಲ್ಲಿ ಇನ್ನೊಂದೂ ಇದ್ದೇ ಇರುತ್ತದೆ. ಇವುಗಳ ಕೈಗೆ ಸಿಲುಕಿಕೊಂಡು ತೊಂದರೆಗೀಡಾಗದಿರು.

೩) ಕತ್ತಲು ತೊಲಗಲಿ; ಬುದ್ಧಿಗೆ ಭ್ರಮೆ ಕವಿಸುವಂತಹ, ಈ ಇಹಜೀವನದ

ಮೇಲಿನ ಆಸೆ ಬತ್ತಿಹೋಗಲಿ. ಇದು ಮಾಯೆಯ ಸೃಷ್ಟಿ (ಪುತ್ತಳಿ = ಸುಂದರವಾದ ಬೊಂಬೆ), ಕೇವಲ ಮರೀಚಿಕೆ. ಈ ದೇಹದ ಮೇಲಿನ ಮೋಹವೇ ನಮ್ಮನ್ನು ಮತ್ತೆಮತ್ತೆ ಹುಟ್ಟುಸಾವುಗಳ ಚಕ್ರಕ್ಕೆ ಸಿಲುಕಿ ನರಳುವಂತೆ ಮಾಡುವುದು. ಯಾವನು ತನ್ನನ್ನು ತಾನು ಗೆಲ್ಲಬಲ್ಲನೋ ಆತ ಇಡೀ ಜಗತ್ತನ್ನೇ ಗೆಲ್ಲಲು ಸಮರ್ಥ. ಇದನ್ನರಿತು, ಓ ಸಿದ್ಧ-ಪ್ರಬುದ್ಧನಾದ ಸಂನ್ಯಾಸಿಯೇ, ಆ ವಿಷಜಾಲದಿಂದ ಪಾರಾಗು.

ಳ) ತತ್ತ್ವಜ್ಞಾನಿಗಳು ಹೇಳುತ್ತಾರೆ: "ಬಿತ್ತಿದಂತೆ ಬೆಳೆ, ಬೀಜದಂತೆ ಮರ; ಹಾಗೆಯೇ ಕರ್ಮಕ್ಕೆ ತಕ್ಕಂತೆ ಪ್ರತಿಫಲ—ಕೆಟ್ಟ ಕರ್ಮಕ್ಕೆ ಪಾಪಫಲ, ಒಳ್ಳೆಯದಕ್ಕೆ ಪುಣ್ಯಫಲ; ಇದೊಂದು ಅನಿವಾರ್ಯ ನಿಯಮ; ಜೀವಾತ್ಮನು ದೇಹಧರಿಸಿ ಬಂದ ನೆಂದರೆ ಅವನು ಈ ಬಾಳೆಂಬ ಬಂಧನಕ್ಕೆ ಒಳಗಾಗಲೇಬೇಕು. ಒಂದು ಆಕಾರ ಇರುವ ವರೆಗೂ ಬಂಧನವು ತಪ್ಪಿದಲ್ಲ" ಎಂದು. ('ಕಟ್ಟು, ಕಟ್ಟನೆ ಹೆರುವುದು' ಎಂದರೆ ಈ ಬಂಧನವೆಂಬುದೊಂದು ವಿಷವರ್ತುಲ; ಇದರಿಂದ ಬಿಡುಗಡೆ ಸಾಧ್ಯವಿಲ್ಲ ಎಂದು.) ಈ ಮಾತನ್ನು ಜನರೆಲ್ಲರೂ ಒಪ್ಪುತ್ತಾರೆ. ಅದೇನೋ ನಿಜವೆ. ಆದರೆ ನೀನೇನೂ ಈ ದೇಹವಲ್ಲ; ನೀನು ಸೂಕ್ಷ್ಮಾತಿಸೂಕ್ಷ್ಮವಾದ ಆತ್ಮ! ಆತ್ಮಕ್ಕೆ ಆಕಾರ ಗಾತ್ರಗಳೆಲ್ಲಿವೆ? ಅದು ಅನಂತ. 'ನಾನು ಇಂತಹ ಆತ್ಮಸ್ವರೂಪಿ. ಆದ್ದರಿಂದ ಈ ನಿಯಮ-ನಿರ್ಬಂಧ ಗಳಾವುವೂ ನನಗಿಲ್ಲ. ನನಗೆ ಬಂಧನ-ಬಿಡುಗಡೆಗಳೆಂಬುದೇ ಇಲ್ಲ. ನಾನು ಚಿರಮುಕ್ತ' ಎಂಬುದನ್ನು ಅರಿತುಕೊ. (ತತ್ತ್ವಮಸಿ = ಅವನು, ಎಂದರೆ ಆತ್ಮನು, ನೀನೇ ಆಗಿ ದ್ದೀಯೆ.) ಮತ್ತು ಓಂ ತತ್ ಸತ್ ಓಂ ಎಂಬ ಘೋಷಣೆಯಿಂದ ಈ ಸತ್ಯವನ್ನು ಜಗತ್ತಿಗೆಲ್ಲ ಸಾರಿ ಹೇಳು.

ಱ) 'ತಂದೆ-ತಾಯಿ, ಹೆಂಡತಿ-ಮಕ್ಕಳು' ಎಂದು ಯಾರು ಪರದಾಡುತ್ತಾರೋ ಅವರು, ತಾವು ಆತ್ಮ ಎಂಬ ಸತ್ಯವನ್ನು ತಿಳಿಯರು. ಅವರು ಕನಸನ್ನೇ ನಿಜವೆಂದು ಭ್ರಮಿಸಿದ್ದಾರೆ. ಅನಿತ್ಯವಾದ ಈ ಸಂಬಂಧಗಳನ್ನೇ ಶಾಶ್ವತವೆಂದು ನಂಬಿದ್ದಾರೆ. ಆದರೆ ಆತ್ಮಕ್ಕೆ ಲಿಂಗಭೇದಗಳುಂಟೆ ? ಜನನ-ವೃದ್ಧಾಪ್ಯ-ಮರಣಗಳುಂಟೆ ? ಎಲ್ಲೆಲ್ಲೂ ವ್ಯಾಪಿ ಸಿರುವ, ಏಕಮೇವಾದ್ವಿತೀಯವಾದ (ಅದನ್ನು ಬಿಟ್ಟರೆ ಬೇರೊಂದಿಲ್ಲದ) ಆತ್ಮನು ಯಾರ ಮಗ, ಯಾರ ತಂದೆ! (ತಾತ = ತಂದೆ) ಆದರೆ ಹೀಗೆ ಮೇಲ್ನೋಟಕ್ಕೆ ವ್ಯಕ್ತಿ ವ್ಯಕ್ತಿಗಳಲ್ಲಿ ತೋರುವ ಭೇದವನ್ನು ಕಂಡು, ಬರಿಗಣ್ಣಿಗೆ ತೋರದ, ಎಲ್ಲರೊಳಗೂ ಇರುವ ಆತ್ಮನನ್ನು ಗುರುತಿಸದಿರಬೇಡ. ಈ ತೋರಿಕೆಯ ಭೇದಗಳೇ ನಾವು ಅಜ್ಞಾನ ದಲ್ಲಿರಲು ಕಾರಣ ('ಹೇತು'). ಭೇದವನ್ನು ತೊರೆದು, ಇರುವವನೊಬ್ಬನೇ ಆತ್ಮ ಎಂದು ಅರಿತೆಯಾದರೆ, ಆ ಅರಿವೇ ಮುಕ್ತಿಗೆ ಸೇತುವೆಯಾಗುತ್ತದೆ. ('ಜೀವನ್ಮುಕ್ತ' = ದೇಹದಲ್ಲಿದ್ದರೂ ದೇಹಬಂಧನವನ್ನು ಕಡಿದುಕೊಂಡು ಮುಕ್ತನಾಗಿ ವಿಹರಿಸು ತ್ತಿರುವವನು.) ಓ ಧೀರಸಂನ್ಯಾಸಿಯೇ, ಈ ತತ್ತ್ವವನ್ನು ಎಲ್ಲರಿಗೂ ಧೈರ್ಯದಿಂದ ಬೋಧಿಸು.

ೞ) ನಿಜವಾಗಿಯೂ ಇರುವುದು ನಿತ್ಯಮುಕ್ತನೂ ಎಲ್ಲವನ್ನೂ ಅರಿತವನೂ ನಾಮರೂಪಗಳಿಗೆ ಅತೀತನೂ ಪಾಪಪುಣ್ಯಗಳನ್ನು ಮೀರಿದವನೂ ಆದ ಆತ್ಮ ನೊಬ್ಬನೇ. ಅವನು ತನ್ನದೇ ಮಾಯಾಶಕ್ತಿಯಿಂದ ಈ ಜಗತ್ತನ್ನು ಸೃಜಿಸಿದ್ದಾನೆ; ಈ ಎಲ್ಲ 'ಕನಸು'ಗಳನ್ನೂ ನಿರ್ಮಿಸಿದ್ದಾನೆ. ತಾನೇ ಸಾಕ್ಷಿರೂಪದಿಂದ ನೋಡುತ್ತಿದ್ದಾನೆ. (ಸಾಕ್ಷಿ—ಅಕ್ಷಿ ಎಂದರೆ ಕಣ್ಣು; ಸಾಕ್ಷಿ ಎಂದರೆ ಕಣ್ಣುಳ್ಳವನು, ಅರ್ಥಾತ್ ಸಕಲವನ್ನೂ

ನೋಡುತ್ತಿರುವವನು—ಇದು ಪರಮಾತ್ಮನ ಒಂದು ಹೆಸರು.) ಪ್ರಕೃತಿ-ಪುರುಷರ ರೂಪದಲ್ಲಿ ತೋರಿಬರುವವನು ಆ ಆತ್ಮನೇ.

ಮುಕ್ತಿಗಾಗಿ ಎಲ್ಲಿ ತಡಕಾಡುವೆ ? ಅದಕ್ಕಾಗಿ ಏಕೆ ಸುಮ್ಮನೆ ವ್ಯರ್ಥ ಪ್ರಯತ್ನ ಗಳಲ್ಲಿ ತೊಡಗುವೆ ? ಅದು ನಿನ್ನ ಸುತ್ತಲಿನ ಈ ಜಗತ್ತಿನಲ್ಲಾಗಲಿ, ಮೇಲೆ ಸ್ವರ್ಗ ದಲ್ಲಾಗಲಿ ಎಲ್ಲೋ ಸಿಗುವಂಥದಲ್ಲ; ಶಾಸ್ತ್ರಗ್ರಂಥಗಳಲ್ಲಾಗಲಿ, ಗುಡಿ-ಮಸೀದಿಗಳ ಲ್ಲಾಗಲಿ ಈ ಮುಕ್ತಿಯೆಂಬುದು ಅಡಗಿಲ್ಲ. ಅದಿರುವುದು ನಿನ್ನೊಳಗೇ. ನಿನ್ನನ್ನು ಬಂಧಿ ಸಿರುವ ಪಾಶದ ತುದಿ ನಿನ್ನ ಕೈಯಲ್ಲೇ ಇದೆ ! ಇವನ್ನರಿಯದೆ, "ಅಯ್ಯೋ, ನಾನು ಬಂಧಿ" ಎಂದು ರೋದಿಸುತ್ತ ನಿನ್ನನ್ನು ನೀನೇ ವಂಚಿಸಿಕೊಳ್ಳಬೇಡ. ದೃಢಸಂಕಲ್ಪ ಮಾಡಿ, ಆ ಪಾಶವನ್ನು ಕತ್ತರಿಸಿಕೊ.

೭) ಓ ಸಂನ್ಯಾಸಿಯೇ, ಹೀಗೆ ಹೇಳಿಕೊ (ಉಲಿ = ಹೇಳು): "ಸಕಲರೂ ಶಾಂತಿಯಿಂದಿರಲಿ; ನನ್ನಿಂದಾಗಿ ಯಾವ ಜೀವಿಗೂ ಕಿಂಚಿತ್ತೂ ತೊಂದರೆಯಾಗದಿರಲಿ. ಏಕೆಂದರೆ ಆಗಸದಲ್ಲಿ ಹಾರಾಡುವ ಪಕ್ಷಿಗಳಾಗಲಿ, ನೆಲದ ಮೇಲೆ ಸಂಚರಿಸುವ ಪ್ರಾಣಿ ಗಳಾಗಲಿ, ಅವರೆಲ್ಲರೊಳಗೂ ಇರುವುದು ನಾನೇ—ನನ್ನ. ಆತ್ಮವೇ ! (ಈ ಪರಮ ಸತ್ಯವನ್ನು ಅರಿತುಕೊಂಡು,) ಸ್ವರ್ಗ-ನರಕ ಲೋಕಗಳ ಮೇಲಿನ ಆಸೆ-ಭಯಗಳನ್ನು ಮನದಿಂದಾಚೆಗೆ ದೂಡುತ್ತೇನೆ" ಎಂದು.

ಇನ್ನು ಈ ದೇಹವೆಂಬ ಹಂದರದ ಕೆಲಸವಾಯಿತು; ಅದು, ಬೇಕಾದರೆ ಬದುಕಿರಲಿ, ಇಲ್ಲವಾದರೆ ಸಾಯಲಿ ! ಅದು ಕರ್ಮನದಿಯಲ್ಲಿ ಹೇಗೆ ಬೇಕಾದರೂ ತೇಲಿಕೊಂಡು ಹೋಗಲಿ (ಕರ್ಮನದಿ = ವ್ಯಕ್ತಿಯ ಕರ್ಮ-ಕರ್ಮಫಲಗಳ ಪರಂಪರೆ. ಇಲ್ಲಿ, ತ್ಯಾಗಿಯ ಶರೀರವನ್ನು ನೀರಿನಲ್ಲಿ ತೇಲಿಕೊಂಡು ಹೋಗುತ್ತಿರುವ ಒಂದು ಶವಕ್ಕೆ ಹೋಲಿಸಲಾಗಿದೆ). ಬೇಕಾದರೆ ಯಾರಾದರೂ ಅದನ್ನು ಹೊಗಳಿ, ಹಾರಗಳಿಂದ ಅಲಂಕರಿಸಿ ಪೂಜಿಸಲಿ; ಅಥವಾ ಇನ್ನು ಯಾರಾದರೂ ಅದನ್ನು ತಿರಸ್ಕರಿಸಿ ಒದೆಯಲಿ, ಅದರಿಂದೇನಂತೆ ? ಮಣ್ಣಿನಿಂದ ಬಂದ ಈ ಶರೀರವು (ಹುಡಿ = ಮಣ್ಣು) ಮರಳಿ ಮಣ್ಣಿಗೇ ಹೋಗಲಿ, ಬಿಡು ! ಹೊಗಳುವವರು-ಹೊಗಳಿಸಿಕೊಳ್ಳುವವರು, ನಿಂದಿಸು ವವರು-ನಿಂದಿಸಲ್ಪಡುವವರು ಎಲ್ಲರೂ ಒಂದೇ ಆತ್ಮವೆಂದ ಮೇಲೆ, ಆ ಹೊಗಳಿಕೆ ಯನ್ನಾಗಲಿ ನಿಂದೆಯನ್ನಾಗಲಿ ಅನುಭವಿಸುವವರುತಾನೆ ಯಾರು ! ಓ ಸಂನ್ಯಾಸಿಯೆ, (ಕಿತ್ತಡಿ = ಪಾದಗಳನ್ನು ಕದಲಿಸದೆ ಒಂದೆಡೆಯಲ್ಲೇ ನೆಟ್ಟವನು; ತಪಸ್ವಿ) ಈ ತತ್ತ್ವ ವನ್ನು ಅರಿತು ನೀನು ಪಾಶಮುಕ್ತನಾಗು.

೮) ಯಾರಲ್ಲಿ ಕಾಮುಕಾಂಚನಾಸಕ್ತಿಯು ಕಿಂಚಿತ್ತಾದರೂ ಇದೆಯೋ ಅಂಥವನು ಸತ್ಯವನ್ನು, ಎಂದರೆ ಪರಮ ಸತ್ಯಸ್ವರೂಪನಾದ ಭಗವಂತನನ್ನು ಕಾಣಲಾರನು; ಕಾಮಬುದ್ಧಿಯಿರುವವನಿಗೆ ಮುಕ್ತಿ ದೊರಕಲಾರದು; ಎಲ್ಲಿ ತ್ಯಾಗವೆಂಬುದು ನೆಲ ಸಿಲ್ಲವೋ ಅಲ್ಲಿ ಖಂಡಿತವಾಗಿ ಯೋಗವು ಕಾಣಸಿಗದು.

ಓ ಸಂನ್ಯಾಸಿಯೇ, ವಿಶ್ವಾತ್ಮನಾದ ನಿನಗೆ ಮನೆಯು ಸಾಕಾಗುವುದೆ ? ಇಡೀ ಭೂಮಿಯೇ ನಿನ್ನ ಮನೆ; ಆಗಸವೇ ಛಾವಣಿ; ಬಯಲಿನ ಹುಲ್ಲುಹಾಸೇ ನಿನ್ನ ಹಾಸಿಗೆ ! ಬೇಯಿಸಿದ್ದೋ ಬೆಂದಿಲ್ಲದ್ದೋ, ಎಂಥದೋ ಒಂದು, ಭಿಕ್ಷೆಯಿಂದ ತಾನಾಗಿಯೇ ಏನು ದೊರಕುತ್ತದೊ ಅದೇ ಅಂದಿನ ಆಹಾರ ಎಂದು ತಿಳಿದುಕೊ. ಏನು ತಿಂದರೇನು, ಏನು ಕುಡಿದರೇನು ? ಆತ್ಮಕ್ಕೆ ಅದೇನು ಮಾಡೀತು ? ಹೇಗೆ ಗಂಗಾನದಿಗೆ ಮಲಿನತೆ

ಯೆಂಬುದಾಗಲಿ ನ್ಯೂನತೆಯೆಂಬುದಾಗಲಿ ಇಲ್ಲವೋ, ಹಾಗೆಯೇ ನೀನೂ ಆ ನದಿಯಂತೆ ಮುನ್ನಡೆ. ನೀನು ಮಿಂಚು-ಸಿಡಿಲುಗಳಂತೆ ತೇಜಸ್ವಿ, ಶಕ್ತಿಶಾಲಿ. ಇದನ್ನು ಮನಗಾಣುತ್ತ ಓಂಕಾರವನ್ನು ಮೊಳಗು.

೯) ಹೇ ಮಹಾತ್ಮನೇ, (ನಿನ್ನ ವಿಷಯದಲ್ಲಿ) ವಸ್ತುಸ್ಥಿತಿಯೇನೆಂಬುದನ್ನು ಕೆಲವರು ಮಾತ್ರ ತಿಳಿಯಬಲ್ಲರು. ಉಳಿದವರೆಲ್ಲ ನಿನ್ನನ್ನು ಉಡಾಫೆಯಿಂದ ಕಂಡು ನಗಬಹುದು. (ಇಲ್ಲವೆ ಅಸಹನೆ ತಾಳಲೂಬಹುದು.) ಆಗಲಿ, ಆದರಿಂದೇನಂತೆ! ಅವರನ್ನೆಲ್ಲ ನಿರ್ಲಕ್ಷಿಸಿ ನೀನು ಸ್ವತಂತ್ರವಾಗಿ ಸಾಗು; ಊರಿಂದೂರಿಗೆ ಹೋಗು. ಯಾವ ಅಂಜಿಕೆಯನ್ನೂ ಪ್ರತಿಫಲಾಪೇಕ್ಷೆಯನ್ನೂ ಇಟ್ಟುಕೊಳ್ಳದೆ, ಅಗತ್ಯವಿರುವವರಿಗೆಲ್ಲ ಆತ್ಮದ ಬೆಳಕನ್ನು ನೀಡು; ಮಾಯೆಯ ಕತ್ತಲಿನಿಂದ ಪಾರುಮಾಡು (*ಸಂಚಾರಿಗೆ* = ಜಿಜ್ಞಾಸು-ಮುಮುಕ್ಷುಗಳಿಗೆ). ಹೀಗೆ, ನಿನ್ನೊಳಗಿನ ಶಕ್ತಿಯೆಲ್ಲ ಮುಗಿಯುವವರೆಗೂ ಮಾಡುತ್ತಹೋಗು. ಕೊನೆಗೆ 'ನಾನು-ನೀನು' ಎಂಬ ಭೇದಗಳೆಲ್ಲವನ್ನೂ ಮೀರಿ, ಸಚ್ಚಿದಾನಂದಆತ್ಮದಲ್ಲಿ ಲೀನನಾಗು. 'ನಾನು ಪರಬ್ರಹ್ಮಸ್ವರೂಪಿ' ಎಂದು ತಿಳಿದುಕೊಂಡು ಹಾಡು: ಓಂ ತತ್ ಸತ್ ಓಂ!


## ಗ್ರಂಥಋಣ

### ಇಂಗ್ಲಿಷ್

1. *The Life of Swami Vivekananda (vol-1) (1979)* — By His Eastern & Western Disciples
2. *A Comprehensive Biography of Swami Vivekananda (vol-1)* — Sailendra Nath Dhar
3. *Sri Ramakrishna, the Great Master* — Swami Jagadananda

### ಕನ್ನಡ

1. *ಶ್ರೀರಾಮಕೃಷ್ಣ ವಚನವೇದ (ಭಾಗ 1 ಮತ್ತು 2)* — ಶ್ರೀರಾಮಕೃಷ್ಣಾಶ್ರಮ, ಮೈಸೂರು
2. *ಗುರುವಿನೊಡನೆ ದೇವರಡಿಗೆ (ಭಾಗ 2)* — ಕುವೆಂಪು
3. *ಅಗ್ನಿಹಂಸ (ಕವನ ಸಂಕಲನ)* — ಕುವೆಂಪು

### ನಿಯತಕಾಲಿಕಗಳು

1. *Prabuddha Bharata (ಮಾರ್ಚ್ 1981; ಜುಲೈ 1985)* — Advaita Ashrama

## ಇದೇ ಲೇಖಕರ ಇತರ ಕೆಲವು ಕೃತಿಗಳು

1. **ಯುಗಾವತಾರ ಶ್ರೀರಾಮಕೃಷ್ಣ**
   ಶ್ರೀರಾಮಕೃಷ್ಣ ಪರಮಹಂಸರ ವಿಸ್ತೃತ ಜೀವನ ಚರಿತ್ರೆ —
   ಸುಲಭ ಬೆಲೆಯ ನಾಲ್ಕು ಸಂಪುಟಗಳಲ್ಲಿ
2. **ಶ್ರೀಶಾರದಾದೇವೀ ಜೀವನಗಂಗಾ**
   ಶ್ರೀಮಾತೆ ಶಾರದಾದೇವಿಯವರ ವಿವರಪೂರ್ಣ ಜೀವನಕಥೆ
3. **ಬ್ರಹ್ಮಾನುಭವಿ**
   ಸ್ವಾಮಿ ಬ್ರಹ್ಮಾನಂದರ ಜೀವನ ಚರಿತ್ರೆ
4. ಶ್ರೀಶಾರದಾದೇವೀ ಸಂದೇಶ ಮಂದಾರ

### ಕಿರು ಹೊತ್ತಗೆಗಳು

1. ಶಾಂತಿಯ ಹರಕೆ
2. ಮಿಂಚಿನ ಗೊಂಚಲು
3. ವಿಶ್ವಮಾನವನಾಗಿ ವಿವೇಕಾನಂದ
4. ಕಲ್ಪತರು ಶ್ರೀರಾಮಕೃಷ್ಣ
5. ಚಿಂತನ-ಮಂಥನ

### ವಿಶೇಷವಾಗಿ ವಿದ್ಯಾರ್ಥಿಗಳ ಹಾಗೂ ಯುವಕರ ಉಪಯೋಗಕ್ಕಾಗಿ ಬರೆದ ಪುಸ್ತಕಗಳು

1. ವೀರ ನರೇಂದ್ರ
   (ವೀರಸಂನ್ಯಾಸಿ ವಿವೇಕಾನಂದ ಗ್ರಂಥದ ಮೊದಲ ಆರು ಅಧ್ಯಾಯಗಳು)
2. ವಿದ್ಯಾರ್ಥಿಗೊಂದು ಪತ್ರ
3. ಅಧ್ಯಯನದಲ್ಲಿ ಏಕಾಗ್ರತೆ
4. ಶಕ್ತಿಶಾಲೀ ವ್ಯಕ್ತಿತ್ವ ನಿರ್ಮಾಣ
5. ವಿದ್ಯೆಯ ವೈಭವ
6. ಧೀರತೆಯ ದುಂದುಭಿ
7. ಬಾಲಕ ಸಂಘ—ಒಂದು ವಿನೂತನ ಪ್ರಯೋಗ
8. ಸಮಯಪ್ರಜ್ಞೆ
9. Letter to a Student
10. Secret of Concentration

"ನೋಡಿ, ನಾನು ನಿಮ್ಮಂತಹ ಯುವಕರಿಗಾಗಿ ಇಡೀ ಜೀವನವನ್ನೇ ತ್ಯಾಗ ಮಾಡಲು ಸಿದ್ಧ. ಏಕೆಂದರೆ ನಿಮಗೆ ನನ್ನ ಆದೇಶಗಳನ್ನು ಕಾರ್ಯಗತಗೊಳಿಸುವ ಮನಸ್ಸೂ ಇದೆ, ಸಾಮರ್ಥ್ಯವೂ ಇದೆ. ಆದರೆ ಈ ಮುದುಕನಾದರೋ ತನ್ನ ಜೀವನದ [illegible]ಲು ಸಮಯವನ್ನೆಲ್ಲ ಪ್ರಾಪಂಚಿಕ ವಸ್ತುಗಳನ್ನು ಬೆನ್ನಟ್ಟುವುದರಲ್ಲಿ ಕಳೆದಿದ್ದಾನೆ. ಈಗ ಇವನಿಗೆ ಪ್ರಾಪಂಚಿಕ ಜೀವನಕ್ಕೂ ಯೋಗ್ಯತೆಯಿಲ್ಲ, ಆಧ್ಯಾತ್ಮಿಕ ಜೀವನಕ್ಕೂ ಯೋಗ್ಯತೆಯಿಲ್ಲ. ಆದರೆ ಈಗ ಇವನು ಕೇವಲ ಬಾಯಿಮಾತಿನಲ್ಲಿ ಕೇಳುವುದರಲ್ಲಿಯೇ ತಾನು ಭಗವಂತನ ಕೃಪೆಯನ್ನು ಪಡೆದುಕೊಂಡುಬಿಡಬಹುದೆಂದು ಭಾವಿಸಿದ್ದಾನೆ. ಸತ್ಯ ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಮುಖ್ಯವಾಗಿ ಬೇಕಾದದ್ದು ಸ್ವಪ್ರಯತ್ನ. ಯಾರು ಯಾವ ಪ್ರಯತ್ನವನ್ನೂ ಮಾಡದೆ ಸುಮ್ಮನೆ ಕುಳಿತಿರುತ್ತಾನೋ ಅವನ ಮೇಲೆ ಭಗವಂತ ಹೇಗೆ ಕೃಪೆ ಮಾಡಿಯಾನು? ಯಾರಲ್ಲಿ ಪೌರುಷವಿರುವುದಿಲ್ಲವೋ ಅಂಥವರಲ್ಲಿರುವುದು ಬರಿಯ ತಮಸ್ಸು ಮಾತ್ರ. ವೀರಾಧಿವೀರನಾದ ಅರ್ಜುನ ಈ ಪೌರುಷವನ್ನು ಕಳೆದುಕೊಂಡವನಂತೆ ಕಂಡುಬಂದದ್ದರಿಂದಲೇ ಶ್ರೀಕೃಷ್ಣ ಅವನ ಸ್ವಭಾವಕ್ಕೆ ಅನುಗುಣವಾದ ಜೀವನ-ಕರ್ತವ್ಯಗಳನ್ನು ಅನುಸರಿಸುವಂತೆ ಅವನಿಗೆ ಆಜ್ಞಾಪಿಸಿದ್ದು. ಹೀಗೆ ಪ್ರತಿಫಲಾಪೇಕ್ಷೆಯಿಲ್ಲದೆ ಕರ್ಮ ಮಾಡುವುದರ ಮೂಲಕ ಅವನು ಚಿತ್ತಶುದ್ಧಿ, ಕರ್ಮ ತ್ಯಾಗ, ಶರಣಾಗತಿಯೇ ಮೊದಲಾದ ಸಾತ್ವಿಕ ಗುಣಗಳನ್ನು ಬೆಳೆಸಿಕೊಳ್ಳಲಿ ಎನ್ನುವುದೇ ಶ್ರೀಕೃಷ್ಣನ ಉದ್ದೇಶವಾಗಿತ್ತು. ಆದ್ದರಿಂದ *ನೀವೆಲ್ಲ ಶಕ್ತಿಶಾಲಿಗಳಾಗಿ! ಪೌರುಷವಂತರಾಗಿ! ಶಕ್ತಿಶಾಲಿಯಾಗಿರುವ ಹಾಗೂ ಪೌರುಷವಂತನಾಗಿರುವ ಒಬ್ಬ ನೀಚನನ್ನು ಕೂಡ ನಾನು ಗೌರವಿಸುತ್ತೇನೆ.* ಏಕೆಂದರೆ ಅವನ ಪೌರುಷವೇ ಒಂದು ದಿನ ತನ್ನೆಲ್ಲ ನೀಚಕೃತ್ಯಗಳನ್ನು ಬಿಡುವಂತೆ ಮಾಡುತ್ತದೆ; ಅಷ್ಟೇ ಅಲ್ಲ, ಅವನು ಎಲ್ಲ ಸ್ವಾರ್ಥಪ್ರೇರಿತ ಕರ್ಮಗಳನ್ನು ತ್ಯಜಿಸಿಬಿಡುವಂತೆಯೂ ಮಾಡುತ್ತದೆ. ಹೀಗೆ ಅವನಿಗೆ ಕಾಲಕ್ರಮದಲ್ಲಿ ಸತ್ಯಸಾಕ್ಷಾತ್ಕಾರವಾಗುತ್ತದೆ."

—ಸ್ವಾಮಿ ವಿವೇಕಾನಂದ

ಶ್ರೀರಾಮಕೃಷ್ಣಾಶ್ರಮ, ಬೆಂಗಳೂರು-19